# ವೇದರಹಸ್ಯ

[ಶ್ರೀ ಅರವಿಂದರ "The Secret of the Veda"
ಆಂಗ್ಲಕೃತಿಯ ಕನ್ನಡಾನುವಾದ]

ಅನುವಾದಕರು :
ಪ್ರೊ. ಬಿ. ಎಚ್. ಶ್ರೀಧರ

**Veda Rahasya :** A Kannada Version of Sri Aurobindo's The Secret of the Veda translated by Prof. B. H. Shridhara

First Edition : 2017

Price : Rs. 500/-

Pages : X + 586



ISBN : 978-81-921866-5-8

Published & Printed at : **Shiva Offset Printers & Publishers**
Plot No. 530, KIDAB, New RTO Road,
Auto Nagar, Belagavi-590015
Ph.: 0831-2458842
Cell : 9448304550

# ಬಿ. ಎಚ್. ಶ್ರೀಧರ

ಜನನ : ಎಪ್ರಿಲ್ ೨೪, ೧೯೧೮ ರಂದು ದಕ್ಷಿಣ ಕನ್ನಡದ ಬಿಜೂರಿನ ಬವಲಾಡಿಯಲ್ಲಿ

ಶಿಕ್ಷಣ : ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ಬಿಜೂರು, ಸೊರಬ, ಸಾಗರದಲ್ಲಿ ಬಿ. ಎ. ಆನರ್ಸ್ ೧೯೪೧ರಲ್ಲಿ ಮೈಸೂರಿನ ಮಹಾರಾಜಾ ಕಾಲೇಜಿನಿಂದ, ರಾಜ್ಯಕ್ಕೆ ಪ್ರಥಮ. ಎಂ. ಎ. ಮೈಸೂರು ವಿಶ್ವವಿದ್ಯಾಲಯದಿಂದ.

ವೃತ್ತಿ : ಪುಣೆಯ ಎಕೌಂಟ್ಸ್ ಆಫೀಸಿನಲ್ಲಿ ಗುಮಾಸ್ತನಾಗಿ, ಭಟ್ಕಳದ ಉರ್ದು ಹೈಸ್ಕೂಲಿನಲ್ಲಿ ಹೆಡ್ ಮಾಸ್ಟರ್ ಆಗಿ, ಕರ್ಮವೀರ ವಾರಪತ್ರಿಕೆಯ ಉಪಸಂಪಾದಕನಾಗಿ ಕೆಲಸಮಾಡಿ ೧೯೫೧ರಲ್ಲಿ ಕುಮಟಾದ ಕೆನರಾ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿ ಸೇರಿಕೊಂಡರು. ಸಿದ್ಧಾಪುರದ ಎಂ.ಜಿ.ಸಿ. ಕಾಲೇಜಿನಲ್ಲಿ ಪ್ರೊಫೆಸರ್ ಹಾಗೂ ಪ್ರಾಚಾರ್ಯರಾಗಿ ನಿವೃತ್ತರಾದರು.

ಕೃತಿಗಳು : ಮೇಘನಾದ, ರಸಯಜ್ಞ, ಜಾತವೇದ ಸೇರಿದಂತೆ ಹತ್ತು ಕವನ ಸಂಕಲನಗಳು; ಯಕ್ಷಗಾನ ಪ್ರಸಂಗ, ನಾಟಕ, ಆತ್ಮಕತೆ, ವಿನೋದ, ವಿಮರ್ಶೆ ಹಾಗೂ ಜ್ಞಾನಸೂತ್ರ, ರಾಷ್ಟ್ರಸೂತ್ರ, ಕಾವ್ಯಸೂತ್ರದಂತಹ ವೈಚಾರಿಕ ಕೃತಿಗಳು ಒಟ್ಟೂ ಮೂವತ್ತು. ಅರವಿಂದರ Foundations of Indian Culture ಹಾಗೂ ಮನುಸ್ಮೃತಿ ಸೇರಿದಂತೆ ಹತ್ತು ಅನುವಾದಿತ ಕೃತಿಗಳು.

ಕುಟುಂಬ : ೧೯೪೬ರಲ್ಲಿ ರಮಾದೇವಿಯವರೊಂದಿಗೆ ವಿವಾಹ. ಸುಮಾ, ಪ್ರತಿಭಾ, ವಿಜಯ, ರಾಜಶೇಖರ, ರಾಜೇಶ್ವರಿ – ಮಕ್ಕಳು.

ಪ್ರಶಸ್ತಿಗಳು : ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ, ತೀ. ನಂ. ಶ್ರೀ. ಸ್ಮಾರಕ ಬಹುಮಾನ, ಮೈಸೂರು ವಿ. ವಿ. ಸುವರ್ಣ ಮಹೋತ್ಸವ ಬಹುಮಾನ, ಕೇಂದ್ರ ಸರಕಾರದ ಸಂರಕ್ಷಣಾ ಇಲಾಖೆಯ ಬಹುಮಾನ, ಲೋಕ ಶಿಕ್ಷಣ ಟ್ರಸ್ಟ ಬಹುಮಾನ, ದೇವರಾಜ ಬಹಾದೂರ ಬಹುಮಾನ, ಮುಂತಾದವು.

ನಿಧನ : ಎಪ್ರಿಲ್ ೨೪. ೧೯೯೦.

ಸ್ಮರಣೆ : ಶಿರಸಿಯ ಬಿ. ಎಚ್. ಶ್ರೀಧರ ಸಾಹಿತ್ಯ ಸಮಿತಿಯು ಪ್ರತಿವರ್ಷ ಎಪ್ರಿಲ್ ೨೪ ರಂದು ಕನ್ನಡದ ಅತ್ಯುತ್ತಮ ಸಾಹಿತ್ಯ ಕೃತಿಯೊಂದಕ್ಕೆ ಶ್ರೀಧರರ ಹೆಸರಿನ ಬಹುಮಾನವನ್ನು ನೀಡುತ್ತಿದೆ. ಸಮಿತಿಗೀಗ ಬೆಳ್ಳಿ ಹಬ್ಬದ ಸಂಭ್ರಮ.



# ವೇದ ರಹಸ್ಯದ ಬಗ್ಗೆ....

ಅರವಿಂದಾಶ್ರಮದ ಅಂದಿನ ಮುಖ್ಯಸ್ಥರಾಗಿದ್ದ ಶ್ರೀ ಎಂ.ಪಿ.ಪಂಡಿತರ ಆದೇಶದ ಮೇರೆಗೆ ಅಕ್ಟೋಬರ್ ೧೮. ೧೯೮೮ರಲ್ಲಿ ಅರವಿಂದಾಶ್ರಮದ ಕೇಶವ ಮೂರ್ತಿಯವರು ಬರೆದ ಪತ್ರದ ನಂತರ ಬಿ.ಎಚ್.ಶ್ರೀಧರರಿಂದ 'The Secret of the Veda' ಅನುವಾದದ ಬೃಹತ್ ಕೆಲಸ ಆರಂಭವಾಯ್ತು. ಅಂದಿನ ದಿನಗಳಲ್ಲಿ ಶ್ರೀಧರರು ತಮ್ಮನ್ನು ಸಂಪೂರ್ಣ ಈ ಕೆಲಸದಲ್ಲಿ ತೊಡಗಿಸಿಕೊಂಡರು. ಮೊದಲೇ ಶ್ರೀಧರರಿಗೆ ತತ್ವಜ್ಞಾನ, ವೇದಾಂತಗಳೆಂದರೆ ಅತ್ಯಂತ ಪ್ರಿಯ ವಿಷಯಗಳಾಗಿದ್ದವು, ಮೇಲಿನಿಂದ ಶ್ರೀ ಅರವಿಂದರ ಹೊಸ ಆವಿಷ್ಕಾರವಾದ ವೇದದ ಮಾನಸಶಾಸ್ತ್ರೀಯ ಅರ್ಥವನ್ನು ವಿವರಿಸುವ 'ವೇದ ರಹಸ್ಯ' ಗ್ರಂಥವನ್ನು ಅನುವಾದಿಸುವುದೆಂದರೆ ಅದೊಂದು ಜ್ಞಾನ ಯಾತ್ರೆಯೆನ್ನಿಸಿತ್ತು!

ವೇದದ ಬಗ್ಗೆ ಅವಹೇಳನಕಾರಿ ಸಿದ್ಧಾಂತಗಳನ್ನು ಯುರೋಪಿಯನ್ ವಿದ್ವಾಂಸರು ತಯಾರಿಸಿದ್ದರು. "ವೇದ ಸೂಕ್ತಗಳು ಅಸಂಸ್ಕೃತವೂ ಅನಾಗರಿಕವೂ ಆದ ಒಂದು ಕುಲದ ಯಾಜ್ಞಿಕ ಬರಹಗಳು. ಅವುಗಳಲ್ಲಿ ಅರೆವೊರಕ ಪುರಾಣ ಕಥೆಗಳನ್ನೂ ಒರಟೊರಟಾದ ಖಗೋಲ ಶಾಸ್ತ್ರೀಯ ರೂಪಕ ಕಥೆಗಳನ್ನು ನಾವು ಕಾಣುತ್ತೇವೆ" ಎಂಬಂಥ ಅಭಿಪ್ರಾಯ ಪಾಶ್ಚಾತ್ಯ ವಿದ್ವಾಂಸರಿಂದ ವ್ಯಕ್ತವಾಗಿತ್ತು. ವೇದಭಾಷೆಯ ಆಧಾರದ ಮೇಲೆ ಮೇಲ್ನೋಟಕ್ಕೆ ತೋರುವ ಅರ್ಥಗಳು ಸತ್ಯವಲ್ಲವೆಂದೂ, ಪುರುಷ ಸೂಕ್ತದಲ್ಲಿ ಬರುವ ಪುರುಷ ಬಲಿ ನರಬಲಿಯಾಗಿರದೇ ಅಹಂಕಾರದ ತ್ಯಾಗವೆಂದೂ (ಪುರುಷನೆಂದರೆ ವಿಶ್ವವ್ಯಾಪಿ- ಎಂಬ ಅರ್ಥ ವ್ಯಕ್ತವಾಗಿದೆ), ಹಾಗೇ ಯಜ್ಞವನ್ನೂ ಭಾಷಾಶಾಸ್ತ್ರೀಯ ಹಾಗೂ ಮಾನಸಶಾಸ್ತ್ರೀಯ ಆಧಾರದ ದೃಷ್ಟಿಯಿಂದ ವಿಶ್ಲೇಷಿಸಿದಾಗ ಯಜಮಾನನು- ಮನುಷ್ಯೇತರ ಶಕ್ತಿಯಾಗುತ್ತಾನೆ. ಅರ್ಚಕ-ಶರೀರದ ಒಳಚಟುವಟಿಕೆಗಳ ಪ್ರತಿನಿಧಿ, ಅಗ್ನಿಯು - ಇಚ್ಛಾಶಕ್ತಿಯಾಗುತ್ತದೆ, ಘೃತವೆಂದರೆ ಮನಸ್ಸಾಗುತ್ತದೆ. ಇಂದ್ರ ಎಂದರೆ ದೀಪ್ತಮನಃಸ್ಥಿತಿ, ಆಹುತಿಗೆ ಅರ್ಪಿಸುವ ವಸ್ತುಗಳು ದನಗಳು, ಕುದುರೆಗಳು, ಚಿನ್ನ, ಅಪತ್ಯ, ಮನುಷ್ಯರು, ಯುದ್ಧದಲ್ಲಿ ದೊರಕಿದ ಗೆಲುವು ಇವೆಲ್ಲ ಅಲಂಕಾರಿಕ ಅಥವಾ ಸಾಂಕೇತಿಕ ಅರ್ಥಗಳನ್ನು ಹೊಂದಿವೆ-ಎಂಬುದು ಶ್ರೀ ಅರವಿಂದರಿಗೆ ನಿರಂತರ ಅಭ್ಯಾಸದಿಂದ ಹೊಳೆಯಿತು. 'ಗೋ' ಎಂದರೆ ಬೆಳಕು, ಅಶ್ವ ಎಂದರೆ

ಕ್ರಿಯಾಶಕ್ತಿ, ವೇದಾಂತ–ಪುರಾಣಗಳ ಏಳು ಲೋಕಗಳೆಂದರೆ ಮನಸ್ಸಿನ ಪ್ರಜ್ಞೆಯ ಏಳು ಸ್ತರಗಳು, ಸಪ್ತ ತತ್ವಗಳನ್ನಾಧರಿಸಿದವು. ಮರಣವೆಂದರೆ ಮನಃಪ್ರಾಣಗಳು ಭಾಗವಹಿಸಿದ ಜಡ ಪದಾರ್ಥದ ಮರ್ತ್ಯಸ್ಥಿತಿ. ಅಮರತ್ವವು ಧ್ಯಾನ ಸಮಾಧಿಯಿಂದ ದೊರೆಯುವ ಆನಂದ (ಸಚ್ಚಿದಾನಂದ) ಸ್ಥಿತಿ. ಮನುಷ್ಯ, ಭೂಮಿ, ದೇಹ, ಮನಸ್ಸು, ಇವುಗಳನ್ನು ದಾಟಿ ಮಹಸ್ಸತ್ಯದ ಸ್ಥಿತಿಗೆ ಏರುತ್ತಾನೆ. ಇದು ನಮ್ಮ ಪೂರ್ವಜರು ಕಂಡುಹಿಡಿದ ಮಹಾಯಾನ. ಹೀಗೆ ವೇದ ಅಲಂಕಾರಿಕ, ಸಾಂಕೇತಿಕ ಅರ್ಥದ ಮೂಲಕ ಅತ್ಯುನ್ನತ ಜ್ಞಾನದ ಕುರಿತು ಬಣ್ಣಿಸುತ್ತದೆ. ಸಾಯಣಾಚಾರ್ಯ ಅಥವಾ ಪಾಶ್ಚಾತ್ಯ ವಿದ್ವಾಂಸರಿಗೆ ಮೇಲ್ನೋಟಕ್ಕೆ ಕಂಡ ಬಾಲಿಶ ಅರ್ಥ ವೇದದಿಂದ ಹೊರ ಹೊಮ್ಮುವುದೆಂಬ ಅಭಿಪ್ರಾಯ ತಪ್ಪೆಂದು ಶ್ರೀ ಅರವಿಂದರು ಸಾಧಿಸಿ ತೋರಿಸಿದ್ದಾರೆ. ಇದೇ ದಿಕ್ಕಿನಲ್ಲಿ ವಿಚಾರ ಮಾಡುತ್ತಾ ಹೋದಂತೆ ಅವರಿಗೆ ವೇದ ಸೂಕ್ತಗಳಿಗೆ ಹೊಸ ಅರ್ಥಗಳು ಹೊಳೆಯುತ್ತಾ ಹೋಯ್ತು. ಅನೇಕ ಪ್ರಕರಣಗಳಲ್ಲಿ ಯಜ್ಞಾಧ್ಯಕ್ಷನು ಮನುಷ್ಯೇತರ ಶಕ್ತಿ ಎಂದು ಹೇಳಿದ್ದನ್ನು ಅವರು ಕಂಡರು. ಇವುಗಳಿಗೆಲ್ಲ ಮಾನಸಶಾಸ್ತ್ರೀಯ ಹೊಸ ಅರ್ಥ ಹೇಳುವ ಆತ್ಮವಿಶ್ವಾಸ, ತರ್ಕಬದ್ಧವಾದ ಭಾಷಾಶಾಸ್ತ್ರ ಆಧಾರಿತ ಮಾರ್ಗದಿಂದ ಅರವಿಂದರಿಗೆ ಉಂಟಾಯ್ತು. ಮುಂದೆ ವೇದಸೂಕ್ತಗಳ ಸಾಂಕೇತಿಕ ಹಾಗೂ ಅಲಂಕಾರಿಕ ಉಕ್ತಿಯ ಅರ್ಥವನ್ನು ಸೂಕ್ತಗಳ ಆಂತರಿಕ ಪ್ರಮಾಣದಿಂದಲೇ ದೊರಕಿಸಿಕೊಳ್ಳುತ್ತ ಪ್ರತಿಯೊಂದು ಪದದ ನೆಲೆನಿಂತ ಅರ್ಥಕ್ಕೆ ಭಾಷಾಶಾಸ್ತ್ರದ ಸಮರ್ಥನೆಯನ್ನು ಕೊಡುತ್ತ ಘನವೆತ್ತ ವಾಸ್ತವಿಕತೆಯನ್ನು ಅವರು ನಿರೂಪಿಸುತ್ತ ಹೊಸ ಮಾನಸ ಶಾಸ್ತ್ರೀಯ ಅರ್ಥವನ್ನು ಕೊಡುವಲ್ಲಿ ಯಶಸ್ವಿಯಾದರು.

ಶ್ರೀ ಅರವಿಂದರ ಬರಹಗಳು, ವೇದ ಮಂತ್ರಗಳ ಅನುವಾದ 'ಆರ್ಯ'ದಲ್ಲಿ ೧೯೧೪ ರಿಂದ ೧೯೨೦ರವರೆಗೆ ಪ್ರಕಟವಾಗಿತ್ತು. ೧೯೫೬ರಲ್ಲಿ ಇವು 'ಆನ್ ದಿ ವೇದ' ಎಂಬ ಹೆಸರಿನಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಯ್ತು. ೧೯೬೪ರಲ್ಲಿ ಇದೇ ಪುಸ್ತಕ 'ದಿ ಸಿಕ್ರೆಟ್ ಆಫ್ ದಿ ವೇದ' ಎಂಬ ಹೆಸರಿನಲ್ಲಿ ೧೯೭೧ರಲ್ಲಿ ಪ್ರಕಟವಾಯ್ತು. ೧೯೮೨ರಲ್ಲಿ ಮರುಮುದ್ರಣವಾಗಿ ಇಂದ್ರನ ಬಗೆಗಿನ ಶ್ಲೋಕಗಳ ಅನುವಾದವನ್ನು ಸೇರಿಸಲಾಗಿದೆ. ಅಗಸ್ಟ್ ೨೭, ೧೯೧೪ರಂದು ಅರವಿಂದರ ವೇದ ಅರ್ಥಗಳ ವಿವರಣೆಗೆ 'ದಿ ಹಿಂದು' ಪತ್ರಿಕಾ ಸಂಪಾದಕರಿಗೆ ಬರೆದ ಓದುಗರ ಟೀಕಾಪತ್ರಕ್ಕೆ ನೀಡಿದ ಉತ್ತರವೂ ಪ್ರಕಟವಾಗಿದೆ.

ವೇದ ವ್ಯಾಖ್ಯಾನ ಪರಂಪರೆಯಲ್ಲಿ ಅರವಿಂದರ 'ವೇದರಹಸ್ಯ'ಕ್ಕೆ ವಿಶಿಷ್ಟವಾದ ಸ್ಥಾನವಿದೆ. ವೇದವನ್ನು ಕೇವಲ ಕರ್ಮಕಾಂಡವಾಗಿ ನೋಡುವ ಕ್ರಮವನ್ನು ಶ್ರೀ ಅರವಿಂದರು ತಿರಸ್ಕರಿಸುತ್ತಾರೆ. ಸಾಯಣ ಭಾಷ್ಯದಂಥ ಸಾಂಪ್ರದಾಯಿಕ ವ್ಯಾಖ್ಯಾನಗಳು ಹಾಗೂ ೧೮ನೇ ಶತಮಾನದಿಂದೀಚೆ ವ್ಯಾಪಕವಾಗಿ ಬೆಳೆದ ಪಾಶ್ಚಾತ್ಯ ಬರ್ಬರ ವ್ಯಾಖ್ಯಾನ ಕ್ರಮಗಳಿಗಿಂತ ಭಿನ್ನವಾದ ಮಾನಸಶಾಸ್ತ್ರೀಯ ಆಧಾರಿತ ಮಾರ್ಗವೊಂದನ್ನು ತೆರೆದದ್ದು ಅವರ ಸಾಧನೆ. ವೇದರಹಸ್ಯವೆಂದರೆ

ಅದು ಭಾಷಾರಹಸ್ಯ ಹಾಗೂ ಭಾವರಹಸ್ಯ ಎಂದು ವಿಶ್ಲೇಷಿಸುವ ಮೂಲಕ ಶ್ರೀ ಅರವಿಂದರು ವೇದದ ಸಾಂಕೇತಿಕ ಹಾಗೂ ಮನೋವೈಜ್ಞಾನಿಕ ಸ್ವರೂಪದ ಮೇಲೆ ಬೆಳಕು ಚೆಲ್ಲಿದರು. ವೇದವನ್ನು ಮನುಷ್ಯಚೇತನದ ಊರ್ಧ್ವಮುಖೀ ಪಯಣದ ರೋಚಕ ಕಥನವಾಗಿ ವ್ಯಾಖ್ಯಾನಿಸಿದರು.

ಶ್ರೀ ಅರವಿಂದರು ಕಂಡುಕೊಂಡ ವೇದದ ಭಾಷಾರಹಸ್ಯ ಹಾಗೂ ಭಾವರಹಸ್ಯ ಪಂಡಿತಕವಿ ಶ್ರೀಧರರಿಂದ ಕನ್ನಡದಲ್ಲಿ ಪ್ರಥಮಬಾರಿಗೆ ದೊರಕಿದ್ದು ಸಂತೋಷದ ಸಂಗತಿ. ಧೀಮಂತ ಚೇತನಗಳ ಒಡನಾಟದ ಒಂದು ದಾಖಲೆಯಾಗಿಯೂ ಇದು ಮಹತ್ವದ ಕೃತಿಯಾಗಿದೆ.

ಪಾಂಡಿಚೇರಿಗೆ ಪ್ರಕಟಣೆಗೆಂದು ಈ ಹಸ್ತಪ್ರತಿಯನ್ನು ಕಳುಹಿಸಬೇಕಿತ್ತು. ಆ ಸಂದರ್ಭದಲ್ಲಿ ಬಿ.ಎಚ್.ಶ್ರೀಧರರ ಜೊತೆಗೆ 'ವೇದರಹಸ್ಯ'ದ ಅನುವಾದದ ನಕಲು ತೆಗೆದದ್ದು ನಾನು ಮತ್ತು ನನ್ನಮ್ಮ ರಮಾದೇವಿ ಶ್ರೀಧರ. ಇದಕ್ಕೆ ಕಾರಣ, ಮೂಲಪ್ರತಿಯನ್ನು ನಮ್ಮಲ್ಲೇ ಉಳಿಸಿಕೊಳ್ಳುವದಾಗಿತ್ತು. ಸುಮಾರು ೬೫೦ ಪುಟಗಳ ಬರಹವನ್ನು ಒಂದೆರಡು ತಿಂಗಳಲ್ಲಿ ನಕಲು ಮಾಡಿದೆವು. ಆಗ ಟೈಪಿಂಗ್ ಕೊಟ್ಟರೂ ಸರಿಯಾಗಿ ಟಂಕಿಸುವ ಖಾತ್ರಿಯಿರಲಿಲ್ಲ. ಅದು ಝೆರಾಕ್ಸ್ ಕಾಲವೂ ಅಲ್ಲ. ಸಂಜೆ ಪ್ರತಿದಿನ ಅಂದಿನ ಅನುವಾದದ ಚರ್ಚೆ ನಡೆಯುತ್ತಿತ್ತು. ಅದೊಂದು ರೋಚಕ ಅನುಭವ. ಶ್ರೀಧರರು ಜ್ಞಾನದ ನಿಃಸ್ವಾರ್ಥ ಮೂರ್ತಿಯಾಗಿ ತನ್ಮಯರಾಗಿ ಪರಮಾತ್ಮನೆಡೆಗಿನ ಆತ್ಮದ ಪಯಣವನ್ನು ಅರವಿಂದರ ಭಾಷ್ಯದ ಹಿನ್ನೆಲೆಯಲ್ಲಿ ಬಣ್ಣಿಸಿದ್ದನ್ನು, ನಾನು ಮತ್ತು ಅಮ್ಮ ಶಿಷ್ಯರಾಗಿ ಕುಳಿತು ಕೇಳಿದ್ದೊಂದು ದಿವ್ಯ ಅನುಭವ. ಮೂರು ಮನಸ್ಸುಗಳು ಒಂದೇ ಚಿಂತನದಲ್ಲಿ ಒಂದಾಗಿದ್ದವು !

ಅರವಿಂದರ ಈ ಮಹತ್ವದ ಕೃತಿಯನ್ನು ಕನ್ನಡಕ್ಕೆ ಅನುವಾದಿಸಲು ಅನುಮತಿ ನೀಡಿದ ದಿ.ಎಂ.ಪಿ.ಪಂಡಿತ, ಶ್ರೀ ಅರವಿಂದಾಶ್ರಮ, ಪಾಂಡಿಚೇರಿ ಇವರಿಗೆ ನನ್ನ ಹಾರ್ದಿಕ ಕೃತಜ್ಞತೆಗಳು. ಇದರ ಕರಡನ್ನು ತಿದ್ದಿದ ರಾಜೇಶ್ವರಿ ಲೋಕರೆ ಹಾಗೂ ವಿಜಯಾ ಕಾರಂತ ಇವರಿಗೆ ಕೃತಜ್ಞತೆಗಳು. ಈ ಅನುವಾದದ ಮಹತ್ವವನ್ನೂ ಅನನ್ಯತೆಯನ್ನೂ ಗುರುತಿಸಿ ಪ್ರಕಟಣೆಯ ಜವಾಬ್ದಾರಿಯನ್ನು ಪ್ರೀತಿಯಿಂದ ಹೊತ್ತ ಆತ್ಮೀಯ ಸ್ನೇಹಿತ ಡಾ. ಎಮ್. ಜಿ. ಹೆಗಡೆಯವರಿಗೆ ತುಂಬು ಹೃದಯದ ಕೃತಜ್ಞತೆಗಳು. ಕಳೆದ ಇಪ್ಪತ್ತೈದಕ್ಕೂ ಹೆಚ್ಚು ವರ್ಷದಿಂದ ಪ್ರಕಟಣೆಯ ಭಾಗ್ಯವನ್ನು ನಿರೀಕ್ಷಿಸಿಕೊಂಡಿದ್ದ ಅನುವಾದ ಇದೀಗ ಬೆಂಗಳೂರಿನ "ಸಾನ್ವಿ ಪಬ್ಲಿಷರ್ಸ್" ಕೃಪೆಯಿಂದ ಬೆಳಕಿಗೆ ಬರುತ್ತಿದೆ. ಅವರಿಗೆ ನಾನು ಋಣಿ.

– ರಾಜಶೇಖರ ಹೆಬ್ಬಾರ

# ಪರಿವಿಡಿ

## ಒಂದನೆಯ ಭಾಗ : ವೇದರಹಸ್ಯ

## ಎರಡನೆಯ ಭಾಗ : ಆಯ್ದ ಸೂಕ್ತಗಳು



## ಮೂರನೆಯ ಭಾಗ : ಅತ್ರಿಗಳ ಸೂಕ್ತಗಳು

*ಬೆಳಕಿನ ರಕ್ಷಕರು (ಪಾಲಕರು)*

### ತೇಜೋಧಿಪತಿಗಳನ್ನು ಕುರಿತ ಸೂಕ್ತಗಳು : ೫



### ನಾಲ್ಕನೆಯ ಭಾಗ : ಇತರ ಸೂಕ್ತಗಳು



### ಅನುಬಂಧ : ವೇದಾರ್ಥ ವಿವರಣೆ



## ಅಧ್ಯಾಯ-೧

# ಸಮಸ್ಯೆ ಮತ್ತು ಅದರ ಪರಿಹಾರ

ಎಲ್ಲಾದರೂ ಅಥವಾ ಈಗಲೂ ವೇದರಹಸ್ಯವೆಂಬುದೊಂದಿದೆಯೇ? ಇಂದಿನ ವಿಚಾರದ ಪ್ರಕಾರ, ಆ ಪ್ರಾಚೀನ ರಹಸ್ಯದ ಹೃದಯವನ್ನು ಕಿತ್ತು ಎಲ್ಲರ ದೃಷ್ಟಿಗೂ ಎದ್ದು ಕಾಣುವಂತೆ ಮಾಡಲಾಗಿದೆ ; ಅಥವಾ ಅದಕ್ಕೂ ಮುಂದೆ ಹೋಗಿ ನಿಜವಾದ ರಹಸ್ಯವೆಂಬುದು ಎಂದೂ ಇರಲೇ ಇಲ್ಲ ಎಂದು ಕೂಡಾ ಹೇಳಲಾಗಿದೆ. ವೇದ ಸೂಕ್ತಗಳು ಅಸಂಸ್ಕೃತವೂ ಅನಾಗರಿಕವೂ ಆದ ಒಂದು ಕುಲದ ಯಾಜ್ಞಿಕ ಬರಹಗಳು. ಅವುಗಳಲ್ಲಿ ಸಮಾರಂಭಗಳು ಮತ್ತು ದೇವತಾಕ್ರೋಧ ಶಾಮಕ ವ್ರತಾಚಾರಗಳು ತುಂಬಿವೆ. ನಿಸರ್ಗದ ಮೂರ್ತರೂಪದ ಶಕ್ತಿಗಳಿಗೆ ಅವುಗಳನ್ನು ನಿವೇದಿಸಲಾಗಿದೆ. ಅರೆಪೌರಕ ಪುರಾಣ ಕಥೆಗಳೂ ಒರಟೊರಟಾದ ಖಗೋಲ ಶಾಸ್ತ್ರೀಯ ರೂಪಕ ಕಥೆಗಳೂ ರೂಪ ತಾಳುತ್ತಿರುವುದನ್ನು ನಾವು ಅವುಗಳಲ್ಲಿ ಕಾಣುತ್ತೇವೆ. ಅಲ್ಲದೆ ಇನ್ನೂ ಕೆಲವರ ಪ್ರಕಾರ ಆರ್ಯಶತ್ರುಗಳಾದ ದ್ರಾವಿಡರನ್ನು ದರೋಡೆಗಾರರೆಂದು ವೇದದ್ವೇಷಿಗಳೆಂದೂ ವೇದ ಸೂಕ್ತಗಳು ಬೇಕಾಬಿಟ್ಟಿಯಾಗಿ ಬೈದೂ ಅವರಿಂದಲೇ ಮುಂದಿನ ಕಾಲದ ವೇದಾಂತ ವಿಚಾರಗಳ ಬೀಜವನ್ನು ಆರ್ಯರು ಪಡೆದ ಸಂಗತಿಯೂ ಆಳವಾದ ಮಾನಸಶಾಸ್ತ್ರೀಯ ಹಾಗೂ ನೈತಿಕ ಕಲ್ಪನೆಗಳು ಆರ್ಯನಿಗೆ ಸ್ಫುರಿಸಿದ ಸಂಗತಿಯೂ ಋಗ್ವೇದದ ಇತ್ತೀಚಿನ ಸೂಕ್ತಗಳಲ್ಲಿ ಮಾತ್ರ ವ್ಯಕ್ತವಾಗಿವೆ. ಇದು ಆಧುನಿಕ ವಿದ್ವಾಂಸರು (ಅದರಲ್ಲೂ ಯುರೋಪಿಯನ್ನರು) ತಯಾರಿಸಿದ ಸಿದ್ಧಾಂತ. 'ಮೊನ್ನೆ ಮೊನ್ನಿನವರೆಗೆ ಕಾಡಾಡಿಗಳಾಗಿದ್ದ ಜನರು ಅತಿ ತ್ವರಿತಗತಿಯಿಂದ ವಿಕಾಸ ಹೊಂದಿದರು' ಎಂಬ ಕಡತಂದ ವಿಚಾರಕ್ಕೆ ಉಕ್ತ ಸಿದ್ಧಾಂತವು ಚೆನ್ನಾಗಿ ಹೊಂದುತ್ತದೆ. ತುಲನಾತ್ಮಕ ಭಾಷಾಶಾಸ್ತ್ರ, ತುಲನಾತ್ಮಕ ಪುರಾಣಶಾಸ್ತ್ರ ಮತ್ತು ತುಲನಾತ್ಮಕ ಮತಧರ್ಮಶಾಸ್ತ್ರಗಳು ದುರ್ದೈವ ವಶಾತ್ ಇನ್ನೂ ಬಾಲ್ಯದಿಶೆಯಲ್ಲಿದ್ದರೂ ಪದ್ಧತಿಯಲ್ಲಿ ಇನ್ನೂ ಊಹಾಪೋಹಾವಲಂಬಿಗಳಾಗಿದ್ದರೂ ಫಲಿತಾಂಶಗಳಲ್ಲಿ ಹೊತ್ತು ಹೊತ್ತಿಗೆ ಒಂದೊಂದು ರೂಪ ತಾಳುವ ಸ್ಥಿತಿಯಲ್ಲಿದ್ದರೂ ಅವು ಮೇಲೆ ಹೇಳಿದ ಸಿದ್ಧಾಂತವನ್ನು ಸಮರ್ಥಿಸಿವೆ.

ಈ ಅಧ್ಯಾಯಗಳಲ್ಲಿ ಉಕ್ತ ಪ್ರಾಚೀನ ಸಮಸ್ಯೆಯನ್ನು ಒಂದು ಹೊಸ ದೃಷ್ಟಿಕೋನದಿಂದ ನೋಡಬೇಕೆಂಬ ಸೂಚನೆಯನ್ನು ಮುಂದಿಡುವುದು ನನ್ನ ಉದ್ದೇಶ. ತೀರ್ಥಪ್ರಸಾದವೆಂದು ಸ್ವೀಕರಿಸಲಾದ ಸಮಸ್ಯಾ ಪರಿಹಾರ ಯೋಜನೆಗಳನ್ನು ಖಂಡಿಸಲು ನಿಷೇಧಾತ್ಮಕವೂ ವಿನಾಶಕಾರಕವೂ ಆದ ಪದ್ಧತಿಯನ್ನು ಬಳಸುವ ಇಚ್ಛೆ ನನಗಿಲ್ಲ. ಆದರೆ ನನ್ನ ಕೆಲಸವೆಂದರಿಲ್ಲಿ ಅನುಷೇಧಿಕವೂ ರಚನಾತ್ಮಕವೂ ಆದ ಮತ್ತು ಒಂದು ನಿಲುವಿನಿಂದ, ವಿಶಾಲತರವೂ ಪರಿಪೂರಕವೂ ವ್ಯಾಪಕವಾದ ಆಧಾರಗಳನ್ನು ಆಧರಿಸಿದ್ದೂ ಆದ ತಾತ್ಕಾಲಿಕ ಹಾಗೂ

ಸಂಭವನೀಯ ಸಿದ್ಧಾಂತವೊಂದನ್ನು ಮಂಡಿಸುವುದು ಮಾತ್ರ. ಈ ಸೂಚ್ಯಮಾನ ಸಿದ್ಧಾಂತವು ಈ ಹಿಂದಿನ ಸಾಮಾನ್ಯ ಸಿದ್ಧಾಂತಗಳು ಪ್ರಾಚೀನ ಸಂಸ್ಕೃತಿಯ ಇತಿಹಾಸದ ಸಮಸ್ಯೆಗಳ ಪರಿಹಾರ ಪ್ರಯತ್ನದಲ್ಲಿ ಯಶಸ್ವಿಗಳಾಗದಿರುವ ಒಂದೆರಡು ಮುಖ್ಯ ಸಮಸ್ಯೆಗಳ ಪರಿಹಾರ ಪ್ರಯತ್ನದ ಮೇಲೆ ಬೆಳಕು ಬೀರಲಾದೀತು ಎಂಬುದೂ ನನ್ನ ಉದ್ದೇಶ.

ಯುರೋಪಿನ ವಿದ್ವಾಂಸರ ಪ್ರಕಾರ ನಿಜವಾದ ವೇದಗ್ರಂಥವೆಂದರೆ ಋಗ್ವೇದವೊಂದೇ. ಅದರಲ್ಲಿ ಯಾಜ್ಞಿಕ ಸೂಕ್ತಗಳ ರಾಶಿಯಿದೆ. ಆ ಸೂಕ್ತಗಳು ಅತಿ ಪ್ರಾಚೀನ ಭಾಷಾ ಶೈಲಿಯಲ್ಲಿರುವುದರಿಂದ ಅರ್ಥ ಮಾಡಿಕೊಳ್ಳಲು ಯತ್ನಿಸುವವರೆದುರು "ಅಪರಿಹಾರವೇಸರಿ" ಎಂದು ತೀರ್ಮಾನಿಸುವವರೆಗೆ ನಾವು ಹೋಗಬಹುದಾದಷ್ಟು ಕಷ್ಟಕರ ಸಮಸ್ಯೆಗಳನ್ನು ಒಡ್ಡುತ್ತವೆ. ಅವುಗಳಲ್ಲಿ ಪ್ರಾಚೀನ ಪದರೂಪಗಳೂ ಶಬ್ದಗಳೂ ತುಂಬಿ ಹೋಗಿವೆ. ಅವು ಅನಂತರದ "ಭಾಷಾ ಸಂಸ್ಕೃತದ" ಗ್ರಂಥಗಳಲ್ಲಿ ಕಂಡುಬರುವುದಿಲ್ಲ. ಅಂಥ ಪದಗಳ ರೂಪವನ್ನೂ ಅರ್ಥವನ್ನೂ ಬುದ್ಧಿವಂತರು ಊಹಿಸಿ (ಆ ಊಹೆ ಸಂದೇಹಾಸ್ಪದವಾಗಿರುವುದೇ ಹೆಚ್ಚು) ಇದೇ ನಿರ್ಧಾರ ಎಂದು ಹೇಳಬೇಕಾಗಿ ಬಂದಿತು. ಪಾಣಿನಿಯು "ಭಾಷೆ"ಯೆಂದು ಕರೆದ ಮುಂದಿನ ಕಾಲದ ಅಭಿಜಾತ ಸಂಸ್ಕೃತದಲ್ಲಿ ಋಗ್ವೇದೀಯ ಪದಗಳೆಷ್ಟೋ ಬಂದಿದ್ದರೂ ಅವುಗಳನ್ನು ಬೇರೆಯ ಅರ್ಥಗಳಲ್ಲೇ ಬಳಸಿದ್ದಾಗಿ ತೋರುತ್ತದೆ. ತಾತ್ಪರ್ಯಕ್ಕೆ ಅತ್ಯನಿವಾರ್ಯವಾಗಿ ಮತ್ತು ಸರ್ವಸಾಧಾರಣವಾಗಿ ಋಗ್ವೇದವು ಬಳಸಿದ ಅನೇಕ ಪದಗಳು ಆಶ್ಚರ್ಯಕರವಾಗಿ, ಅಸಂಬದ್ಧವಾದ ನಾನಾರ್ಥಕ-ಗಳೆನ್ನಿಸಿರುವುದರಿಂದ, ವಿದ್ವಾಂಸರು ತಮ ತಮಗೆ ಬೇಕಾದ ಅರ್ಥಗಳನ್ನು ಆಯ್ದುಕೊಂಡು, ಇಡಿ ಇಡಿ ಅನುಚ್ಛೇದಗಳ, ಇಡಿ ಇಡಿ ಸೂಕ್ತಗಳ ಅಥವಾ ಇಡೀ ವೇದದ ತಾತ್ಪರ್ಯವನ್ನೇ ಬದಲಾಯಿಸಲು ಬರುವ ಸಂದರ್ಭಗಳುಂಟಾದವು. ಸಾವಿರಾರು ವರ್ಷಗಳ ಸುದೀರ್ಘ ಕಾಲಮಾನದಲ್ಲಿ ಈ ಪ್ರಾಚೀನ ಸ್ತೋತ್ರಪಾಠಗಳ ಅರ್ಥನಿರ್ಧಾರದ ಮೂರು ಮುಖ್ಯ ಪ್ರಯತ್ನಗಳನ್ನು ಮಾಡಲಾಗಿದೆ. ಅವು ತಮ್ಮ ಪದ್ಧತಿಯಲ್ಲೂ ಫಲಿತಾಂಶದಲ್ಲೂ ಸಂಪೂರ್ಣ ಭಿನ್ನವಾಗಿವೆ. ಇವುಗಳಲ್ಲೊಂದು ಪ್ರಯತ್ನವು ಪ್ರಾಗೈತಿಹಾಸಿಕ ; ಬ್ರಾಹ್ಮಣ - ಉಪನಿಷತ್ತುಗಳಲ್ಲಿ ಆ ಪ್ರಯತ್ನದ ಹರಕು ಮುರುಕುಗಳು ದೊರಕುತ್ತವೆ. ಆದರೆ ಸಾಯಣಭಾಷ್ಯದ ಸ್ವರೂಪದಲ್ಲಿರುವ ಎರಡನೆಯ ಪ್ರಯತ್ನದಲ್ಲಿ ಸಂಪೂರ್ಣವಾದ ಸಾಂಪ್ರದಾಯಿಕ ಅರ್ಥವಿವರಣೆ ಇದೆ. ಸಾಯಣನು ಭಾರತೀಯ. ಇಂದಿನ ನಮ್ಮ ಕಾಲದಲ್ಲಿ ಆಧುನಿಕ ಯುರೋಪೀಯ ವಿದ್ವದ್ಗಣ ಬಹಳ ತುಲನಾತ್ಮಕ ಹಾಗೂ ಊಹಾತ್ಮಕ ಆಳುಗೆಲಸದ ಮೂಲಕ ರಚಿಸಿದ ಅರ್ಥವಿವರಣೆಯು ಮೂರನೆಯ ಪ್ರಯತ್ನ. ಈ ಎರಡು ಮೂರನೆಯ ಪ್ರಯತ್ನಗಳಲ್ಲಿ ಅತ್ಯಸಾಧಾರಣವಾದ ಅಪಾನ್ವಯ ಮತ್ತು ತಾತ್ಪರ್ಯಾರ್ಥದಾರಿದ್ರ್ಯ ಎಂಬೀ ಎರಡು ಸಾಮಾನ್ಯ ಲಕ್ಷಣಗಳಾಗಿವೆ. ಈ ಲಕ್ಷಣಗಳನ್ನು ಆ ಪ್ರಾಚೀನ ಸೂಕ್ತಗಳ ಮೇಲೆ ಹೇರಲಾಗಿದೆ. ಇದೇ ಆ ಪ್ರಯತ್ನಗಳ ಫಲಿತಾಂಶ. ಇದರಿಂದ ಋಕ್ಕುಗಳ ಪ್ರತ್ಯೇಕ ಸಾಲುಗಳನ್ನು ಎತ್ತಿಕೊಂಡು (ಆ ಆಯ್ಕೆ ಸ್ವಾಭಾವಿಕವೂ ಆಗಿರಬಹುದು ಅಥವಾ ಊಹಾಬಲ-ಪ್ರೇರಿತವಾದುದಾಗಿಯೂ ಇರಬಹುದು.) ಒಂದು ಸದರ್ಥವನ್ನಾದರೂ ನಿಗಮಿಸಬಹುದು ಅಥವಾ ಶಿಥಿಲಾರ್ಥವನ್ನಾದರೂ ತರ್ಕಿಸಬಹುದು. ಈ ವಾಗಾಡಂಬರ ಶೈಲಿಯ ನಿರುಪಯೋಗಿ ಬಂಧದಲ್ಲಿ ಸಿಂಗರಿಸಲು ಬಳಸಿದ ವಿಶೇಷಣಗಳಿಂದ ಬಂದದ್ದೇನು? ಅತ್ಯಸಾಧಾರಣವಾಗಿ ಅಲ್ಪಾರ್ಥ ಕೊಡುವ ಮತ್ತು ಅದ್ಭುತವಾಗಿ ಎದ್ದು ಕಾಣುವ ಅಲಂಕಾರಗಳನ್ನು ಬಳಸಿದ ಶಬ್ದರಾಶಿಯನ್ನು ಅರ್ಥವಾಗುವಂಥ

ವಾಕ್ಯಗಳನ್ನಾಗಿ ಮಾಡಬಹುದು. ಆದರೆ ನಾವು ಸೂಕ್ತಗಳನ್ನೋದಲಾರಂಭಿಸಿದರೆ, ಅವುಗಳ ತಾತ್ಪರ್ಯವನ್ನು ಗ್ರಹಿಸಲು ಯತ್ನಿಸಿದರೆ, ಒಟ್ಟರ್ಥವೇನೆಂಬುದನ್ನು ತಿಳಿಯಬಯಸಿದರೆ, ಈ ದ್ವಿತೀಯ-ತೃತೀಯ ಪ್ರಯತ್ನಗಳನ್ನು ನಂಬಿ ಬರಬಹುದಾದ ತೀರ್ಮಾನವೆಂಥದು? ಈ ಋಗ್ವೇದದ ಋಷಿಗಳು ಉಳಿದ ಕಾಲದ ಹಳೆಯ ಬರಹಗಾರರಂತಿಲ್ಲ. ಇವರಿಗೆ ಸಮನ್ವಿತವೂ ಸ್ವಾಭಾವಿಕವೂ ಆಗಿ ಮಾತಾಡಲು ಬರುತ್ತಿರಲಿಲ್ಲ. ಅಥವಾ ಸುಸಂಬಂಧವುಳ್ಳ ಆಲೋಚನೆಗಳನ್ನು ಇತರರೆದುರಿಡಲು ಇವರು ಅಸಮರ್ಥರಾಗಿದ್ದರು. ಎಂಬ ತೀರ್ಮಾನಕ್ಕೆ ನಾವು ಬರಬೇಕಾಗುತ್ತದೆ. ಏಕೆಂದರೆ ಈ ಪಂಡಿತಂಮನ್ಯರಿಗೆ ಸಂಕ್ಷಿಪ್ತವೂ ಸರಳವೂ ಆದ ಕೆಲಸೂಕ್ತಗಳನ್ನುಳಿದರೆ, ಮಿಕ್ಕವುಗಳಲ್ಲಿ ವೇದದ (ಛಂದೋವಾಣಿಯ) ಭಾಷೆಯು ಅತ್ಯಸ್ಪಷ್ಟಾರ್ಥಕವೋ ಅತಿಕೃತಕವೋ ಆಗಿ ತೋರುತ್ತದೆ. ಆರ್ಯೆಸುಪ್ವಾತನಿಗೆ ಅದು ಅಸಂಪೃಕ್ತವಾಗಿಯೋ ಅಥವಾ ಬಡಿಬಡಿದು (ಎಳೆದೆಳೆದು) ಹೇಗಾದರೂ ಮಾಡಿ ಸಮನ್ವಯಗೊಳಿಸಬೇಕಾಗಿ ಬರುವಂತಿದೆ-ಎಂದೆನ್ನಿಸುತ್ತದೆ. ಇವರು ತಾವೇ ಕೃತಕವಾಗಿ ತಯಾರಿಸಿದ ಪ್ರಕ್ರಿಯಾ ಕವಚವನ್ನು ಸೂಕ್ತದ ಋಕ್ಕುಗಳಿಗೆ ತೊಡಿಸಿ ಅವುಗಳ ಮೂಲಾರ್ಥಕ್ಕೆ ಪ್ರತಿಯಾದ ಇನ್ನೊಂದು ಅರ್ಥವನ್ನು ಹೇಳ ಹೊರಟದ್ದು ಸುವಿದಿತ. ಇವರ ಯತ್ನದಿಂದ ಮೂಲಾರ್ಥದ ಆವಿರ್ಭಾವ ಆಗದು. ಜಗಳಕ್ಕೆದುರಾದ ಪದ-ಪದಾರ್ಥಗಳನ್ನು ಗುದ್ದಿ ತಿದ್ದಿ ಏನಾದರೂ ಒಂದು ರೂಪಕ್ಕೆ ಬರುವಂತೆ ಮಾಡಿದ್ದಾರೆ ಎಂಬುದು ಗೊತ್ತಾಗುತ್ತದೆ.

ಆದರೂ ಈ ಅಸ್ಪಷ್ಟವೂ ಅನಾಗರಿಕವೂ ಆದ ಬರಹಗಳು ಜಗತ್ತಿನ ವಾಙ್ಮಯೇತಿಹಾಸದಲ್ಲೇ ಅತಿ ಸುದೈವಿ ಪದಾರ್ಥಗಳೆಂದು ಹೇಳಬೇಕು. ಏಕೆ ಗೊತ್ತೇ? ಜಗತ್ತಿನ ಅತ್ಯಂತ ಸುಸಮೃದ್ಧವೂ ಅಗಾಧಾರ್ಥ ಸಂಪನ್ನವೂ ಆದ ಕೆಲವು ಮತಧರ್ಮಗಳಿಗೆ ಇವು ಸುಪ್ರಖ್ಯಾತ ಆಕರಗಳೆನ್ನಿಸಿವೆ ; ಅಷ್ಟೇ ಅಲ್ಲ ಕೆಲವು ಸೂಕ್ಷ್ಮತಮ ಅತಿ ಭೌತಶಾಸ್ತ್ರೀಯ ತತ್ವಜ್ಞಾನ ಗ್ರಂಥಗಳಿಗೂ ಮೂಲಾಧಾರಗಳಾಗಿವೆ. ಸಾವಿರಾರು ವರ್ಷಗಳ ಸುದೃಢ ಪರಂಪರೆಯ ದೆಸೆಯಿಂದ ಉಕ್ತ ವೇದವಾಙ್ಮಯವು ಅಧಿಕೃತ, ಸತ್ಯ ಎಂದು ಹೇಳಬಹುದಾದ ಎಲ್ಲ ಗ್ರಂಥಗಳಿಗೂ ಮಾತೃಸ್ಥಾನದಲ್ಲಿದೆ ; ಬ್ರಾಹ್ಮಣಗಳು, ಉಪನಿಷತ್ತುಗಳು, ತಂತ್ರಶಾಸ್ತ್ರಗಳು, ಪುರಾಣಗಳು ಮತ್ತು ಅತ್ಯುನ್ನತವಾದ ಷಟ್‌ಶಾಸ್ತ್ರಗಳು ಹಾಗೂ ಮಹಾತ್ಮರಾದ ಋಷಿಮುನಿಗಳ ಉಪದೇಶಗಳು ಇವುಗಳಿಗೆ ಅದೇ ಮೂಲ, ಅದೇ ಉನ್ನತಾದರ್ಶ-ಎನ್ನಿಸಿಕೊಂಡು, (ಪಂಡಿತ ಪಾಮರರೆಲ್ಲರ) ಗೌರವಾದರಗಳಿಗಿಲ್ಲಿ ಪಾತ್ರವಾಗಿದೆ. ಈ ವಾಙ್ಮಯರಾಶಿಯ ಹೆಸರು ವೇದ ಎಂದರೆ ಜ್ಞಾನ- ಈ ಹೆಸರು ಅತ್ಯುನ್ನತ ಆಧ್ಯಾತ್ಮಿಕ ಸತ್ಯದ್ದು. ಇಂಥ ಸತ್ಯಕ್ಕಿಂತ ಉನ್ನತ ತರವಾದದ್ದನ್ನು ಮಾನವ ಕುಲ ಕಂಡಿಲ್ಲ. ಆದರೆ ನಾವು ಈ ವೇದದ ವರ್ತಮಾನ ವ್ಯಾಖ್ಯೆಗಳನ್ನು ಸ್ವೀಕರಿಸಿದರೆ-ಸಾಯಣ ವ್ಯಾಖ್ಯೆಯನ್ನಾದರೂ ಸರಿಯೆ, ಆಧುನಿಕ ಯುರೋಪೀಯ ವ್ಯಾಖ್ಯೆಯನ್ನು ಸ್ವೀಕರಿಸಿದರೂ ಸರಿಯೆ ಆಗ ಪೂರ್ವೋಕ್ತವಾದ ಅದರ ಮಹೋದಾತ್ತವೂ ಮಹಾ ಪವಿತ್ರವೂ ಆದ ಕೀರ್ತಿ ಸಂಕೀರ್ತನವೆಲ್ಲಾ ಬಲೀ ಜಿಸಿಲುಗುದುರೆ, ಟೊಳ್ಳು, ದೈತ್ಯಾಕಾರದ ಕಲ್ಪನಾ ವಿಲಾಸ ಎಂದು ತಳ್ಳಿ ಹಾಕಿ ಬಿಡಬೇಕಾಗುತ್ತದೆ : ಅಂದರೆ, ಈ ವೇದ ಸೂಕ್ತಗಳಲ್ಲಿ ತೀರಾ ಎಳೆಯರಿಗೊಪ್ಪುವ ಕೆಲವು ನೀತಿ ನಡತೆಗಳ ಅಥವಾ ಮತಧಾರ್ಮಿಕ ಧ್ಯೇಯಗಳ ಉಲ್ಲೇಖ ಮಾತ್ರ ಕಂಡುಬರುವುದಲ್ಲದೆ ಅವುಗಳ ತುಂಬಾ ತುಂಬಿಕೊಂಡಿರುವುದು ದಡ್ಡರ ಕುರುಡು ನಂಬಿಗೆಯ ಫಲವಾದ ನಿರಾಧಾರ ಊಹೆಗಳು- ಅವುಗಳ ಕರ್ತರು ಅಶಿಕ್ಷಿತ ಚಾರ್ವಾಕ ಅನಾಗರಿಕರು ಮತ್ತು ಮಹಾ ಮೂಢರು-ಎಂದು ಪರಿಗಣಿಸಬೇಕಾಗಿ ಬರುತ್ತದೆ. ವಿರಳವಾಗಿ ಬರುವ ಏತದ್ವಿರುದ್ಧವಾದ ಅಭಿಪ್ರಾಯವನ್ನು ಪ್ರೇರಿಸುವ

ಸೂಕ್ತಗಳೂ ಋಕ್ಕುಗಳೂ ತಮ್ಮ ವೈರಲ್ಯದ ದೆಸೆಯಿಂದ ಈ ಆಧುನಿಕ ಭಾವನೆಯನ್ನು ಅಳಿಸಲು ಸಮರ್ಥವಾಗಲಾರವು. ಉಪನಿಷತ್ತುಗಳೇ ಮುಂದಿನ ಕಾಲದ ತತ್ವಪ್ರಸ್ಥಾನಗಳಿಗೂ ಮತ ಧರ್ಮಗಳಿಗೂ ನಿಜವಾದ ಮೂಲ-ಅವು ವೇದದ ಕರ್ಮಠ ಚಾರ್ವಾಕತೆಯ (ಭೌತ ವಿಷಯಭೋಗದ ಆರಾಧನೆಯ) ವಿರುದ್ಧವಾಗಿ ಎದ್ದ ತತ್ವಶಾಸ್ತ್ರೀಯವೂ ವಿಚಾರಪ್ರಚೋದಕವೂ ಆದ ಬುದ್ಧಿವಂತರ ದಂಗೆ, ಬಂಡಾಯ ಎಂದು ತಿಳಿಯಬೇಕಾಗುತ್ತದೆ.

ಆದರೆ ಯುರೋಪೀಯ ದುರ್ಮಾರ್ಗದರ್ಶಕ ಸಮಾನ ಉದಾಹರಣೆಗಳಿಂದ ಸಮರ್ಥನೆ ಪಡೆದು ಮಾಡಲಾದ ಆಧುನಿಕ ತೀರ್ಮಾನವು ವೇದದ ನಿಜವಾದ ಯಾವ ವಿವರಣೆಯನ್ನೂ ನೀಡದು. ಉಪನಿಷತ್ತುಗಳ ಸಾರದಲ್ಲಿ ಕಂಡುಬರುವ ಅತಿಗಂಭೀರವೂ ಆತ್ಯಂತಿಕವೂ ಆದ ಆಲೋಚನೆಗಳೂ, ಸೂಕ್ಷ್ಮವೂ, ವಿಸ್ತೃತವೂ ಆದ ಮಾನಸಶಾಸ್ತ್ರೀಯ ಪ್ರಸ್ಥಾನಗಳೂ, ತತ್ಪೂರ್ವದಲ್ಲಿದ್ದಿತೆಂದು ಹೇಳಲಾಗುವ ಶೂನ್ಯದಿಂದ ಒಮ್ಮಿಂದೊಮ್ಮೆಗೇ ಜಿಗಿತು, ಚಿಮ್ಮಿ, ಎದ್ದು ನಿಲ್ಲಲಾರವು. ತನ್ನ ಪ್ರಗತಿಪಥದಲ್ಲಿ ಮಾನವನ ಮನಸ್ಸು ಜ್ಞಾನದಿಂದ ಜ್ಞಾನಕ್ಕೆ ಜಿಗಿಯುತ್ತದೆ ; ಅಥವಾ ಅದು ಹಿಂದಿನ ಜ್ಞಾನವನ್ನು ವಿಸ್ತಾರಗೊಳಿಸುತ್ತದೆ ; ಅಳಿಸಿ ಹೋಗಿದ್ದ ಮತ್ತು ಹೂತು ಹೋಗಿದ್ದ ಅಂಥ ಜ್ಞಾನನಿಧಿಯನ್ನು ಅಗೆದು ತೆಗೆದು ಅಗಲವಾಗಿಸುತ್ತದೆ ; ಅಥವಾ ಅಪೂರ್ಣವಾಗಿದ್ದ ಹಳೆಯ ಜ್ಞಾನಸೂಚಿಗಳನ್ನು ಆಧರಿಸಿ ಹೊಸ ಜ್ಞಾನಾಂಶಗಳನ್ನು ಸಂಶೋಧಿಸುತ್ತದೆ. ಉಪನಿಷತ್ತುಗಳ ಜ್ಞಾನಭಂಡಾರವು ತನಗಿಂತ ಪ್ರಾಚೀನತರವಾದ ಮೂಲ ಆಕರಗಳಿದ್ದುದನ್ನು ಗೃಹಿತವೆಂದಿಟ್ಟುಕೊಳ್ಳುತ್ತದೆ ಮತ್ತು ಇವು ಸಾಮಾನ್ಯ ಸಿದ್ಧಾಂತಗಳಲ್ಲಿ ಗಮನಿಸಲ್ಪಟ್ಟಿಲ್ಲ. ಸುನಾಗರಿಕರಾಗಿದ್ದ ದ್ರಾವಿಡರಿಂದ ಅನಾಗರಿಕರಾದ ಆರ್ಯರು ಈ ಉಪನಿಷದ್ಗತ ಪ್ರಬುದ್ಧ ವಿಚಾರಗಳನ್ನು ಕಡ ತೆಗೆದುಕೊಂಡರೆಂದು (ಉಪನಿಷದ್ಗತ) ಕಾಲಲೋಪವನ್ನು ತುಂಬಿಕೊಳ್ಳುವ ತಾತ್ಕಾಲಿಕ ಸಿದ್ಧಾಂತವು "ಊಹೆ ಕೂಡ ಊಹಿಸಿಯೂ ತನ್ನ ತಾನೆ ನಂಬದು" ಎಂಬಂಥ ನಿರಾಧಾರ ತರ್ಕಮಾಲೆಯಾಗಿದೆ. ಪಂಜಾಬಿನ ಮೂಲಕ ಆರ್ಯರು ಭಾರತವನ್ನು ಹೊಕ್ಕು ದಾಳಿ ಮಾಡಿದರೆಂಬ ಕಥೆಯು ಭಾಷಾಶಾಸ್ತ್ರಜ್ಞರು ಹೆಣೆದ ಒಂದು ಕಟ್ಟು ಕಥೆಯಾಗಿದೆ ಎಂಬಲ್ಲಿಯವರೆಗೆ (ವಿದ್ವಾಂಸರ) ಶಂಕೆಯು ಹೋಗಿದೆ.

ಈಗ, ಪ್ರಾಚೀನ ಯುರೋಪಿನಲ್ಲಿ, ಬೌದ್ಧಿಕ ತತ್ವಶಾಸ್ತ್ರದ ಪ್ರಸ್ಥಾನಗಳಿಗೆ ಯೋಗಿಗಳ ರಹಸ್ಯ ತತ್ವಗಳು ಹಿನ್ನೆಲೆಯಾಗಿದ್ದುದು ಗೊತ್ತಾಗಿದೆ ; ಆರ್ಫಿಕ್ ಮತ್ತು ಎಲ್ಯೂಸೀನಿಯನ್ ರಹಸ್ಯ ತತ್ವಗಳು ತಯಾರಿಸಿಕೊಟ್ಟ ಫಲವತ್ತಾದ ಮನಃಸ್ಥಿತಿಯ ಮಣ್ಣಿನಲ್ಲಿ ಪೈಥಾಗೊರಾಸ್ ಮತ್ತು ಪ್ಲೇಟೋ ಚಿಗುರಿ ನಿಂತರು. ವೇದೋತ್ತರ ಕಾಲೀನ ಭಾರತದ ವಿಚಾರಧಾರೆಗಳಿಗೂ ಅಂಥದೇ ಹಿನ್ನೆಲೆ ಇದ್ದಿತೆಂಬುದು ಖಂಡಿತವಾಗಿಯೂ ಸಂಭಾವ್ಯವೆನ್ನಬಹುದು. ಗ್ರೀಕ್ ರಹಸ್ಯ ತತ್ವಗಳಂತಹ ತತ್ವಗಳ ಉಪದೇಶಗಳು ತಮ್ಮ ಹಿಂದೆ ಇದ್ದ ಕಾಲವೊಂದಿತ್ತೆಂಬುದನ್ನು ಭಾರತದ ಬ್ರಾಹ್ಮಣ ಗ್ರಂಥಗಳ ಹೆಚ್ಚಿನ ಸಾರಾಂಶಗಳೂ ಉಪನಿಷತ್ತುಗಳ ಪದರೂಪಗಳೂ ಸಂಕೇತಗಳೂ ಸೂಚಿಸುತ್ತವೆ.

ಇನ್ನೊಂದು ಕಾಲಾವಧಿಲೋಪ ಅಥವಾ ಕಾಲ ವಿಸಂಧಿ ಇಲ್ಲಿದೆ : ವೇದದಲ್ಲಿ ಬಾಹ್ಯ ನಿಸರ್ಗ ಶಕ್ತಿಗಳ ಪೂಜೆ ಇದೆ ಎಂಬ ವಾದಕ್ಕೂ ಗ್ರೀಕರ ಪ್ರವೃದ್ಧ ಮತ ಧರ್ಮಕ್ಕೂ ಹಾಗೇ ಉಪನಿಷತ್ತು ಮತ್ತು ಪುರಾಣಗಳಲ್ಲಿ ದೇವತೆಗಳಿಗೆ ವಹಿಸಿದ ಕರ್ತವ್ಯಗಳಿಗೆ ಸಂಬಂಧಿಸಿದ

ಮಾನಸಶಾಸ್ತ್ರೀಯ ಹಾಗೂ ಆಧ್ಯಾತ್ಮಿಕ ಕಲ್ಪನೆಗಳಿಗೂ ನಡುವೆ ಕಳೆದು ಹೋಗಿರಬಹುದಾದ ಕಾಲಾವಧಿಯು ಅನಿರ್ದಿಷ್ಟ. ಭೂ ನಿವಾಸಿಯಾದ ಮಾನವನು ಬಾಹ್ಯ ವಸ್ತುಗಳ ಚಿಂತನದಿಂದ ಹೊರಟು ಮುಂದೆ ಅಂತರ್ ವಸ್ತುಗಳ ಚಿಂತನಕ್ಕಿಳಿಯುವುದು ಸಹಜವಾದುದರಿಂದ, ಅತಿ ಪ್ರಾಚೀನ ಪೂರ್ಣ ಬೌದ್ಧಿಕ ಮಾನವ ಮತಧರ್ಮವು ರೂಪಿತವಾಗಲು ಮಾನವನು ತನ್ನಲ್ಲಿ ಹುದುಗಿರುವ ಪ್ರಜ್ಞೆಯನ್ನೂ ವ್ಯಕ್ತಿತ್ವವನ್ನು ತಾನು ಪೂಜಿಸುವ ನಿಸರ್ಗ ಶಕ್ತಿಗಳ ಮೇಲೆ ಅಧ್ಯಾರೋಪಿಸುವುದು ಅಗತ್ಯ ಎಂಬ ಅಂಶವನ್ನು ಸದ್ಯಃ ನಾವು ಒಪ್ಪಬಹುದು.

ವೇದೋಕ್ತ ಅಗ್ನಿಯು ಖಂಡಿತವಾಗಿಯೂ ಬೆಂಕಿ ; ಸೂರ್ಯ ದೇವತೆಯು (ನಮ್ಮ ಕಣ್ಣಿಗೆ ಕಾಣುವ) ಸೂರ್ಯ ; ಪರ್ಜನ್ಯನು ಮಳೆ ಮೋಡ; ಉಷೆಯು ಪ್ರಭಾತದ ಹಿಂದಿನ ಉಷಃ ಕಾಲ ; ಮತ್ತು ಇತರ ದೇವತೆಗಳ ಭೌತಿಕ ಮೂಲವು ಅಥವಾ ಕರ್ತವ್ಯವು ಬಹಳ ಸ್ಪಷ್ಟವಾಗಿ ತೋರದಿದ್ದಲ್ಲಿ ಭಾಷಾ ಶಾಸ್ತ್ರೀಯ ನಿಗಮನಗಳಿಂದಲೋ ಚಾತುರ್ಯ ಕಲ್ಪಿತ ಊಹಾಪೋಹ-ಗಳಿಂದಲೋ ನಿಖರಪಡಿಸುವುದು ಸುಲಭ. ಆದರೆ ವೇದಕ್ಕಿಂತ ಬಹಳ ಮುಂದಿನ ಕಾಲದ್ದಲ್ಲದ ಗ್ರೀಕ್ ಪೂಜಾ ಪದ್ಧತಿಯತ್ತ ನಾವು ಹೊರಳಿದರೆ (ಈ ಕಾಲಾವಧಿಯ ಅಂದಾಜು ಆಧುನಿಕ ಕಾಲಾನುಕ್ರಮವನ್ನು ಆಧರಿಸಿ ಹೇಳಿದ್ದು), (ಸಾಕಷ್ಟು) ಅರ್ಥಪೂರ್ಣ ವ್ಯತ್ಯಾಸವನ್ನು ನಾವು ಕಾಣುತ್ತೇವೆ. ಅಲ್ಲಿ ದೇವತೆಗಳ ಭೌತಿಕ ವಿಶೇಷಣಗಳನ್ನು ಅಳಿಸಲಾಗಿದೆ ಅಥವಾ ಆ ವಿಶೇಷಣಗಳು ಮಾನಸ ಶಾಸ್ತ್ರೀಯ ಕಲ್ಪನೆಗಳಿಗೆ ಅಧೀನವಾಗುವಂತೆ ಮಾಡಲಾಗಿದೆ ಎಂಬುದು ಗೊತ್ತಾಗುತ್ತದೆ : ಭಾವೋದ್ರೇಕ ನಿರ್ಭರ ದೇವತೆಯಾದ ಅಗ್ನಿಯನ್ನು ಕೇವಲ ಕುಂಟ ಕಾಯಕ ದೇವತೆಯನ್ನಾಗಿ ಪರಿವರ್ತಿಸಲಾಗಿದೆ ; ಅಪೋಲೋ ಎಂಬ ಸೂರ್ಯ ದೇವತೆಯನ್ನು ಕವಿ ಮತ್ತು ಪ್ರವಾದಿಗಳ ಪ್ರತಿಭಾ ಸ್ಫೂರ್ತಿಗೆ ಅಧ್ಯಕ್ಷನನ್ನಾಗಿ ಮಾಡಲಾಗಿದೆ ; ಉಷಾ ದೇವಿಯೆಂದು ಆದಿಯಲ್ಲಿ ಪ್ರಸಿದ್ಧಳಾಗಿದ್ದಿರಬಹುದಾದ ಅಥೀನಾ ದೇವತೆಯನ್ನು ತನ್ನ ಭೌತಿಕ ಕರ್ತವ್ಯಗಳನ್ನು ಮರೆಯುವಂತೆ ಮಾಡಿದ್ದಲ್ಲದೆ ಅವಳನ್ನು ವಿವೇಕ ಸಂಪನ್ನ, ಬಲಿಷ್ಠ ಹಾಗೂ ಜ್ಞಾನದ ಶುದ್ಧ ದೇವತೆಯನ್ನಾಗಿ ಬದಲು ಮಾಡಲಾಗಿದೆ. ಇತರ ದೇವತೆಗಳಾದ ಯುದ್ಧದೇವ, ಪ್ರೇಮದೇವ, ಮತ್ತು ಸೌಂದರ್ಯ ದೇವರುಗಳ (ಅವರಿಗೆ ಇದ್ದಿರಬಹುದಾದ) ಭೌತಿಕ ಕರ್ತವ್ಯಗಳನ್ನೂ ಅಳಿಸಿ ಹಾಕಲಾಗಿದೆ. ಮಾನವನ ನಾಗರಿಕತೆಯ ಪ್ರಗತಿಪಥದಲ್ಲಿವು ಅನಿವಾರ್ಯ ಎಂದಿಷ್ಟೇ ಹೇಳಿಬಿಟ್ಟರೆ ಸಾಲದು : ಈ ಬದಲಾವಣೆಯ ಪ್ರಕ್ರಿಯೆಯನ್ನು ಸಂಶೋಧನೆಗೆ ಒಳಪಡಿಸಬೇಕಾಗುವುದಲ್ಲದೆ, ವಿವರಣೆಗಳನ್ನು ಕೊಡಬೇಕಾಗುತ್ತದೆ. ಪಾಕ್ಷಿಕವಾಗಿ, ಇತರ ದೇವತೆಗಳ ಹೆಸರುಗಳನ್ನೂ ಆಕಾರಗಳನ್ನೂ ಬದಲಿಯಾಗಿ ಕೊಡುವುದನ್ನು ಹಾಗೇ ಪಾಕ್ಷಿಕವಾಗಿ, ಗ್ರೀಕ್ ಪುರಾಣಗಳ ವಿಕಾಸ ಕ್ರಮದಲ್ಲಿ ಕಂಡುಬರುವ ಇದೇ ತರಹದ ಅಸ್ಪಷ್ಟ ಪ್ರಕ್ರಿಯಾ ಪ್ರಯೋಗ ಮಾಡುವುದನ್ನು ನಮ್ಮ ಪುರಾಣಗಳಲ್ಲಿ ಕಾಣಬಹುದಾಗಿದೆ. ಇದೊಂದು ಕ್ರಾಂತಿಕಾರಕ ಬೆಳವಣಿಗೆ. ಸರಸ್ವತೀ ನದಿಯು ವಿದ್ಯಾಧಿದೇವತೆಯಾಗುತ್ತಾಳೆ ; ವೇದದ ವಿಷ್ಣು ಮತ್ತು ರುದ್ರರು ಈಗ ಅತ್ಯುಚ್ಚ ದೇವತೆಗಳಾದರು ; ಪ್ರತ್ಯೇಕ ಅಧಿದೇವತೆಗಳಾದರು. ಈಶೋಪನಿಷತ್ತಿನಲ್ಲಿ ನಾವು ಅತ್ಯುನ್ನತ ಸತ್ಯದೆಡೆಗೆ ಹೋಗಲು ಬೇಕಾದ ಆವಿರ್ಭೂತ ಜ್ಞಾನವನ್ನು ತೆರೆದಿಡೆಂದು ಸೂರ್ಯ ದೇವತೆಯನ್ನು ಪ್ರಾರ್ಥಿಸಿದ್ದನ್ನು ಕಾಣುತ್ತೇವೆ. ಗಾಯತ್ರಿಯೆಂಬ ಋಗ್ವೇದ ಮಂತ್ರದಲ್ಲಿ ನಾವಿದನ್ನು ನೋಡಬಹುದು. ಈ ಗಾಯತ್ರೀ ಮಂತ್ರ ಪಠನವನ್ನು ಸಾವಿರಾರು ವರ್ಷಗಳಿಂದಲೂ ಪ್ರತಿಯೊಬ್ಬ ದ್ವಿಜನೂ ತನ್ನ ಪ್ರತಿನಿತ್ಯದ ಧ್ಯಾನ

ಯೋಗದಲ್ಲಿ (ಸಂಧ್ಯಾವಂದನೆಯಲ್ಲಿ) ತಪ್ಪದೆ ಮಾಡುತ್ತಾ ಬಂದಿದ್ದಾನೆ ; ಈ ಗಾಯತ್ರಿಯು ವಿಶ್ವಾಮಿತ್ರ ಋಷಿಯು ಕಂಡ ಒಂದು ಸೂಕ್ತದಿಂದ ಆಯ್ದುಕೊಂಡದ್ದಾಗಿದೆ. ಅದೇ ಉಪನಿಷತ್ತಿನಲ್ಲಿ ಕೇವಲ ನೈತಿಕ ಕರ್ತವ್ಯಗಳಿಗಾಗಿ ಅಗ್ನಿಯನ್ನು ಪ್ರಾರ್ಥಿಸಿಕೊಳ್ಳಲಾಗಿದೆ - ಅವನು ಮಾಡಬೇಕಾದ್ದೆಂದರೆ ಪಾಪದಿಂದ ಉಪಾಸಕನನ್ನು ಪರಿಹರಿಸಿ ಪವಿತ್ರಗೊಳಿಸುವುದು ; ಒಳ್ಳೆಯ ಮಾರ್ಗದಿಂದ ದಿವ್ಯಾನಂದದೆಡೆಗೆ ಅವನನ್ನು (ಆ ಜೀವಾತ್ಮನನ್ನು) ಒಯ್ಯುವುದು ; ಮತ್ತು ಅವನೇ ಸ್ವತಃ ದಿವ್ಯ ಸಂಕಲ್ಪ ಶಕ್ತಿಯ ಸಾಕಾರ ಸ್ವರೂಪನೆಂದು ಗಣಿಸಿದ್ದಲ್ಲದೆ ಮಾನವರ ಕರ್ಮಗಳೆಲ್ಲವುಗಳಿಗೂ ಜವಾಬುದಾರನೆಂದು ಪರಿಗಣಿಸಲಾಗಿದೆ. ಇತರ ಉಪನಿಷತ್ತುಗಳಲ್ಲಿ ದೇವತೆಗಳೆಲ್ಲರೂ ಮಾನವನ ಇಂದ್ರಿಯ ಕಾರ್ಯಗಳ ಸಂಕೇತಗಳೆಂದು ಸ್ಪಷ್ಟವಾಗಿ ಹೇಳಲಾಗಿದೆ. ವೈದಿಕ ಯಜ್ಞಕ್ಕೆ ಬೇಕಾದ ಯೌಗಿಕ ಮದ್ಯವನ್ನು ಒದಗಿಸುವ ಸೋಮಲತೆಯೆಂಬುದು ಉಪನಿಷದಾಧಿಗಳಲ್ಲಿ ಚಂದ್ರದೇವನಾಗಿ ಪರಿವರ್ತಿತನಾಗಿರುವುದಲ್ಲದೆ, ಮಾನವನ ಮನಸ್ಸಾಗಿಯೂ ಅವತರಿಸಿದ್ದಾನೆ. ಈ ವಿಕಾಸವಾಗಲು ಕೆಲಕಾಲ ಹಿಡಿದಿರಲೇಬೇಕು. ಭೌತೋಪಾಸನೆ ಮೊದಲು ; ಆಮೇಲೆ ಅದಕ್ಕೂ ಹೆಚ್ಚಿನದು ಸಾರ್ವದೈವಿಕ ಸರ್ವಚೇತನವಾದ (ಈ ವಾದವನ್ನು ವೇದದ ಮೇಲೆ ಅಧ್ಯಾರೋಪಿಸಲಾಗಿದೆ) ; ಇವೆಲ್ಲಾ ಪೌರಾಣಿಕ ದೇವತೆಗಳು ಪ್ರವರ್ಧಮಾನರಾಗುವ ಕಾಲಕ್ಕಿಂತ ಹಿಂದೆಯೇ ಆದ ಬದಲಾವಣೆಗಳು - ಪುರಾಣಗಳಲ್ಲಿ ಈ ದೇವತೆಗಳಿಗೆ ಹೆಚ್ಚು ಆಳವಾದ ಮಾನಸಶಾಸ್ತ್ರೀಯ ಕರ್ತವ್ಯಗಳನ್ನು ಹೇಳಲಾಗಿದೆ- ಈ ಪುರಾಣ ಪೂರ್ವ ಯುಗವನ್ನು "ರಹಸ್ಯಗಳ ಯುಗ" ಎಂದು ಕರೆಯಬಹುದು. ಸದ್ಯದಲ್ಲಿ ನೆಲೆನಿಂತ ವಿಚಾರವಾಹಿನಿಯ ಪ್ರಕಾರ, ಕಾಲಾವಧಿಯ ಲೋಪವೊಂದು ಉಳಿಯುತ್ತದೆ ಅಥವಾ ವೈದಿಕ ಋಷಿಗಳ ಮತಧರ್ಮದಲ್ಲಿದೆಯೆಂದು ನಂಬಲಾದ ನೈಸರ್ಗಿಕ ಪಂಚಭೂತಗಳ ಆರಾಧನೆಯ ವಿಷಯದಲ್ಲೇ ಸಂಪೂರ್ಣವಾಗಿ ನಾವು ಮಗ್ನರಾಗಿರುವುದರ ಫಲವೇ ಈ ಕಾಲಲೋಪ ಸಂಧಿಯನ್ನು ಹುಟ್ಟಿಸಿದೆ ಎಂದೂ ಹೇಳಬಹುದು.

ಈ ಕಾಲಾವಧಿಯ ತೆರಪು (ಅಂತರ) ನಮ್ಮಿಂದಲೇ ನಿರ್ಮಿತವಾದದ್ದು ಎಂಬುದು ನನ್ನ ಸೂಚನೆ. ಹಳೆಯ ಪವಿತ್ರ ಬರಹಗಳಲ್ಲಿ ಈ ಖಾಲಿ ಕಾಲದ ಉಲ್ಲೇಖವಿಲ್ಲ - ಈ ಕಾಲಿಕ ಅಸಾಂಗತ್ಯ ಅಲ್ಲಿ ಕಾಣಿಸದು. ನನ್ನ ತಾತ್ಕಾಲಿಕ ಸಿದ್ಧಾಂತ ಹೀಗಿದೆ : ಋಗ್ವೇದವೊಂದೇ ಮಾನವ ಕುಲದ ಸಂಸ್ಕೃತಿಯ ಅತ್ಯಂತ ಆದಿಮ ದಾಖಲೆ ; ಅದೊಂದೇ ಅಂಥ ಗಣ್ಯ ದಾಖಲೆ. ಐತಿಹಾಸಿಕ ಕಾಲದ ಎಲ್ಯೂಸೀನಿಯನ್ ಮತ್ತು ಆರ್ಫಿಕ್ ರಹಸ್ಯವಾದಗಳು ಆ ದಾಖಲೆಯ ಪತಿತ ಉಳಿಕೆಗಳು (ಭಗ್ನಾವಶೇಷಗಳು) ಇಂಥ ಪಾತಕ್ಕೆ, ಸ್ಖಾಲಿತ್ಯಕ್ಕೆ ಅಥವಾ ಭಂಗಕ್ಕೆ ಆಧ್ಯಾತ್ಮಿಕ ಹಾಗೂ ಮಾನಸ ಶಾಸ್ತ್ರೀಯ ಜ್ಞಾನವನ್ನು ಮುಚ್ಚಿಟ್ಟದ್ದೇ ಕಾರಣ. ಹಾಗೆ ಅದನ್ನೇಕೆ ಮುಚ್ಚಿಡಲಾಯಿತೋ ಏನೊ! ಈಗ ಅದರ ಕಾರಣವನ್ನು ನಿರ್ಧಾರ ಸ್ವರೂಪದಲ್ಲಿ ಕಂಡು ಹಿಡಿಯುವುದು ಕಷ್ಟ. ಆ ಜ್ಞಾನವನ್ನು ಸ್ಥೂಲವೂ ಭೌತಿಕವೂ ಆದ ರೂಪಕೋಕ್ತಿಗಳಲ್ಲಿ ಹಾಗೂ ಸಾಂಕೇತಿಕ ಭಾಷೆಯಲ್ಲಿ ಅವಿತಿಟ್ಟದ್ದು ಅದು ದೀಕ್ಷಿತರಿಗಲ್ಲದೆ ಅದೀಕ್ಷಿತರಿಗೆ ತಿಳಿಯಬಾರದು ಎಂಬ ಉದ್ದೇಶದಿಂದಲೇ ಆಗಿರಬೇಕು. ಯೋಗಿಗಳ ಮುಖ್ಯ ಉದ್ದೇಶಗಳಲ್ಲಿ ಆತ್ಮಜ್ಞಾನವೂ ನಿಜವಾದ ದೇವಜ್ಞಾನವೂ ಪವಿತ್ರವಾದವುಗಳಾದುದರಿಂದ ಅವನ್ನು ಗುಪ್ತವಾಗಿಡಬೇಕು ಎಂಬುದು ಒಂದು. ಬಹುಶಃ ಅವರು, ಈ ದಿವ್ಯಜ್ಞಾನಕ್ಕೆ ಸಾಮಾನ್ಯರು ಅನರ್ಹರಷ್ಟೇ ಅಲ್ಲದೆ ಸಾಮಾನ್ಯರ ಮನಸ್ಸಿಗೆ ಮಾರಕವೆಂದೂ ಭಾವಿಸಿರಬೇಕು ; ಹಾಗಲ್ಲದಿದ್ದರೆ ಅಜ್ಞಾನಿಗಳಾದ ಅವರು ಅದನ್ನು ಅಪಾರ್ಥಕ್ಕೀಡು ಮಾಡಿಯಾರು ಮತ್ತು

ದುರುಪಯೋಗ ಮಾಡಿಕೊಂಡಾರು ಹಾಗೂ ಅಪವಿತ್ರ ಗ್ರಾಮ್ಯ ಜೀವಿಗಳಲ್ಲಿಯ ಸುಗುಣಗಳು ಅಳಿಸಿ ಹೋದಾವು - ಎಂದಾದರೂ ತರ್ಕಿಸಿರಬೇಕು. ಆದುದರಿಂದ ಬಾಹ್ಯಾರಾಧನೆಯು ಅಪೂರ್ಣವಾದರೂ ಪರಿಣಾಮಕರ ಎಂದು ತಿಳಿದು, ಅದೀಕ್ಷಿತರು ಅಥವಾ ಅನುಪನೀತರು ಅಂಥ ಆರಾಧನೆಯಲ್ಲಿ ನಿರತರಾಗುವುದನ್ನೂ ಆ ಮೂಲಕ ಉಪನೀತರು ಅಂತಃಶಿಸ್ತನ್ನು (ಶಮದಮಾದಿ ಸಾಧನ ಸಂಪತ್ತಿಯನ್ನು) ಗಳಿಸಬಹುದೆಂಬುದನ್ನೂ ಒಪ್ಪಿಕೊಂಡರು. ಆದುದರಿಂದಲೇ ಸಾಮಾನ್ಯರಿಗೆ ಬೇಕಾದ ಸ್ಥೂಲಾರ್ಥವನ್ನೂ ಅಸಾಮಾನ್ಯರಿಗೆ ಬೇಕಾದರ ಆಧ್ಯಾತ್ಮಿಕ ಸೂಕ್ಷ್ಮಾರ್ಥವನ್ನೂ ಒಳಗೊಂಡ ಪದಗಳಿಂದಲೂ ಪ್ರತಿಮೆಗಳಿಂದಲೂ (ಅಲಂಕಾರೋಕ್ತಿಗಳಿಂದಲೂ) ತಮ್ಮ ಭಾಷೆಯನ್ನು ಅಲಂಕರಿಸಿದರು. ಆ ಭಾಷೆಗೆ ಕವಚ ತೊಡಿಸಿದರು. ಈ ತತ್ತ್ವವನ್ನಾಧರಿಸಿಯೇ ವೇದ ಸೂಕ್ತಗಳನ್ನು ಹೃದಯದಲ್ಲಿ ಗರ್ಭೀಕರಿಸಿ-ಕೊಂಡು ಋಷಿಗಳು ರಚಿಸಿದರು. ಸರ್ವಚೇತನಾತ್ಮಕ ಪ್ರಕೃತಿ ಪೂಜೆಯು ಆ ಕಾಲದ ಮತಧರ್ಮವಾಗಿದ್ದುದರಿಂದ ಆ ಋಷಿಗಳು ಹಾಗೆ, ತದನುಗುಣವಾಗಿ, ಹೊರ ಹೊರಗೆ ಬಾಹ್ಯಾಚಾರ-ಬಾಹ್ಯಕರ್ಮ ನಿಯಮಗಳಿಗೂ ಹೊಂದಬೇಕು-ಒಳಗೊಳಗೆ ಅಂದಿನ ಕಾಲದ ಮಾನವ ಕುಲದ ಅತ್ಯುಚ್ಚ ಸಿದ್ಧಿ ಎನ್ನಿಸಿದ್ದ ಆಧ್ಯಾತ್ಮಿಕ ಅನುಭೂತಿ ಮತ್ತು ಜ್ಞಾನಗಳನ್ನು ಹಾಗೂ ಸ್ವಸಂಸ್ಕರಣದ ಮನೋವೈಜ್ಞಾನಿಕ ಶಿಸ್ತನ್ನು ಪಡೆದುಕೊಳ್ಳುವ ಸಾಧನೆಗೂ ಹೊಂದಬೇಕು-ಎಂಬ ರೀತಿಯಲ್ಲಿ ತಮ್ಮ ಪವಿತ್ರಪದಪುಂಜಗಳನ್ನು ರೂಪಿಸಿ ಬಳಸಿರಬೇಕು. ಹಾಗಾಗಿ ಸೂಕ್ತಗಳ ಬಹಿರರ್ಥ ಬೇರೆ, ಅಂತರರ್ಥವೇ ಬೇರೆ. ತನ್ನ ಹೊರ ರೂಪದಲ್ಲಿ ಸಾಯಣ ಮನ್ನಿಸಿದ ಕರ್ಮ ಪದ್ಧತಿಯು ನೆಲೆ ನಿಲ್ಲಬಹುದು ; ಯುರೋಪೀಯ ವಿದ್ವತ್ತಿಯು ಕಂಡುಹಿಡಿದ ನಿಸರ್ಗಾರಾಧನೆಯನ್ನೂ ಅದರ ಸಾಮಾನ್ಯ ಕಲ್ಪನೆಗೆ ಅನುಗುಣವಾಗಿ ಸ್ವೀಕರಿಸಬಹುದು; ಆದರೆ ಅವೆರಡರ ಹಿಂದೆ ಯಾವಾಗಲೂ "ನಿಣ್ಯಾವಚಾಂಸಿ" ಎಂದು ಋಷಿಗಳು ಹೇಳುವ ಗುಪ್ತಾರ್ಥವುಳ್ಳ ಪದಗಳು ಇನ್ನೂ ಗೂಢವಾಗಿರುವ ವೇದಾರ್ಥಗಳನ್ನು ಗರ್ಭೀಕರಿಸಿಕೊಂಡೇ ಇರುವುದನ್ನು ನಾವು ಮರೆಯುವಂತಿಲ್ಲ, ಆ ಗೂಢಾರ್ಥಗಳು ಶುದ್ಧಾತ್ಮರಿಗೆ, ಜ್ಞಾನ ಜಾಗರಿತರಿಗೆ, ಈಗಲೂ ಹೊಳೆಯುತ್ತವೆ. ಅಷ್ಟು ಸ್ಪಷ್ಟವಲ್ಲದ್ದಾದರೂ ಹೆಚ್ಚು ಮುಖ್ಯವಾದದ್ದೆನಿಸಿದ ಅರ್ಥವನ್ನು ಸ್ಪಷ್ಟಪಡಿಸುವ ಒಂದು ಕೆಲಸವಾಗಬೇಕಾಗಿದೆ. ವೈದಿಕ ಪದಗಳ ತಾತ್ಪರ್ಯವನ್ನೂ ವೈದಿಕ ಸಂಕೇತಗಳ ಸ್ವರೂಪವನ್ನೂ ದೇವತೆಗಳ ಮಾನಸಶಾಸ್ತ್ರೀಯ ಕರ್ತವ್ಯ ಕರ್ಮಗಳನ್ನೂ ನಿರ್ದಿಷ್ಟಗೊಳಿಸುವ ಕೆಲಸ ಕಷ್ಟವಾದರೂ ಅತ್ಯವಶ್ಯಕವೆನ್ನಿಸಿದ ಕೆಲಸ. ಅದಕ್ಕಾಗಿ ಬರೆಯಲಾದ ಈ ಅಧ್ಯಾಯಗಳೂ ಅವುಗಳ ಅನುಬಂಧಗಳಾದ ವೇದ ಸೂಕ್ತ ಭಾಷಾಂತರಗಳೂ ಕೇವಲ ಸಿದ್ಧತೆಯಾಗಿದೆ.

ನನ್ನ ಈ ತಾತ್ಕಾಲಿಕ ಸಿದ್ಧಾಂತವೇನಾದರೂ ಸರಿಯಾದದ್ದು ಎನ್ನಿಸಿದರೆ ಅದರಿಂದ ಮೂರು ಲಾಭಗಳು, ದೊರಕುವುವು. ಇನ್ನೂ ಅರ್ಥವಾಗದೆ ಉಳಿದ ಅಥವಾ ಅಪಾರ್ಥ ಮಾಡಿಕೊಂಡಿರುವ ಉಪನಿಷದ್ ಭಾಗಗಳನ್ನೂ ಪುರಾಣಗಳ ಅನೇಕಾನೇಕ ಮುಖಗಳನ್ನೂ ಇದು ಸರಳವಾಗಿಯೂ ಪರಿಣಾಮಕರವಾಗಿಯೂ ವಿವರಿಸುತ್ತದೆ ; ಭಾರತದ ಇಡೀ ಪ್ರಾಚೀನ ಪರಂಪರೆಯನ್ನು ವಿವರಿಸಿ ತರ್ಕಶುದ್ಧವಾಗಿ ಸಮರ್ಥಿಸುತ್ತದೆ; ಏಕೆಂದರೆ, ನ್ಯಾಯವಾದ ಸತ್ಯಶೋಧಕ ದೃಷ್ಟಿಯಿಂದ ನೋಡಿದರೆ ವೇದಾಂತ, ಪುರಾಣ, ತಂತ್ರ, ತತ್ತ್ವಶಾಸ್ತ್ರ, ಪ್ರಸ್ಥಾನಗಳು ಮತ್ತು ಭಾರತದ ಮಹಾಮತ ಧರ್ಮಗಳು- ಈ ಎಲ್ಲವುಗಳ ಬೇರೂ ವೇದದಲ್ಲಿದೆ ಎಂಬುದು ಗೊತ್ತಾಗುವುದು. ಮುಂದಿನ ಕಾಲದ ಭಾರತೀಯ ವಿಚಾರ ಧಾರೆಯ

ಮೂಲಭೂತ ಕಲ್ಪನೆಗಳು ತಮ್ಮ ಪ್ರಾಚೀನತಮ ಅಥವಾ ಪ್ರಾಥಮಿಕ ರೂಪದಲ್ಲಾದರೂ ಮೂಲ ಬೀಜ ಸ್ವರೂಪದಲ್ಲಾದರೂ ಇರುವುದು ವೇದದಲ್ಲಿ-ಎಂಬುದು ನಮಗೆ ಗೊತ್ತಾಗದೆ ಹೋಗದು. ಇದರಿಂದ ಭಾರತದಲ್ಲಿ ತುಲನಾತ್ಮಕ ಮತಧರ್ಮಾಭ್ಯಾಸಕ್ಕೆ ಹೆಚ್ಚು ಸಮರ್ಪಕವಾದ ಸ್ವಾಭಾವಿಕ ತಳಹದಿಯನ್ನು ಹಾಕಿಕೊಟ್ಟಂತಾಗುವುದು-ನ್ಯಾಯವಾಗಿ ಎಲ್ಲಿಂದ ಪ್ರಾರಂಭಿಸಬೇಕು ಎಂಬುದನ್ನು ನಿರ್ದೇಶಿಸಿದಂತಾಗುವುದು. ಅದೃಢವಾದ ಊಹಾಪೋಹಗಳ ನಡುವೆ ಸುತ್ತುತ್ತಾ ಹೋಗುವುದರ ಬದಲು ಅಥವಾ ಅಸಾಧ್ಯ ಅರ್ಥಾಂತರಗಳನ್ನೂ ಅವಿವೃತ ಮಧ್ಯಸ್ಥಿತಿಗಳನ್ನು ಸರಿಯೆಂದು ಸಮರ್ಥಿಸುವ ಜವಾಬ್ದಾರಿಯನ್ನು ಹೊರುವುದರ ಬದಲು ನಮ್ಮ ವಿಚಾರ ಶಕ್ತಿಗೆ ಸಮಂಜಸವೆಂದು ತೋರುವ ಸ್ವಾಭಾವಿಕವೂ ಪ್ರಗತಿಪರವೂ ಆದ ಸಾಂಸ್ಕೃತಿಕ ಪರಂಪರಾಭಿವೃದ್ಧಿಯ ವಿವರಣೆಗೆ ಬೇಕಾದ ಸೂಚನೆಯನ್ನಿಲ್ಲಿ ಕೊಡಲಾಗುತ್ತದೆ. ಇದರಿಂದ, ಆನುಷಂಗಿಕವಾಗಿ, ಇತರ ಹಳೆಯ ರಾಷ್ಟ್ರಗಳ ಮೊದ ಮೊದಲಿನ ಆರಾಧನಾ ಪದ್ಧತಿ ಹಾಗೂ ಪುರಾಣ ಕಥೆಗಳಲ್ಲಿಯ ಅಸ್ಪಷ್ಟಾಂಶಗಳ ಮೇಲೆ ಬೆಳಕು ಬಿದ್ದೀತು. ಕೊನೆಯದಾಗಿ, ವೇದ ಪಾಠಗಳ ಅಸಮನ್ವಿತಾಂಶಗಳ ವಿವರಣೆಯನ್ನಿಲ್ಲಿ ಕೊಡುವುದರಿಂದ ಅವೆಲ್ಲಾ ಅದೃಶ್ಯವಾಗಿ ಬಿಡುತ್ತವೆ ; ಅವು ತೋರಿಕೆಯಲ್ಲಷ್ಟೇ ಇರುತ್ತವೆ ; ಏಕೆಂದರೆ, ತಾತ್ಪರ್ಯದ ನಿಜವಾದ ಸೂತ್ರವು ಅಂತರರ್ಥದಲ್ಲಿ ಇದ್ದೇ ಇರುತ್ತದೆ. ಆ ಸೂತ್ರವೊಂದು ಸಿಕ್ಕಿ ಬಿಟ್ಟರೆ, ನಮ್ಮ ಮಾತು ಮನನಗಳ ಮಾದರಿಗಳಿಂದ ಅವು ಭಿನ್ನವಾದರೂ ಅವು ತನ್ನದೇ ಆದ ಶೈಲಿಯಲ್ಲಿ ನಡೆದಿದ್ದರೂ ಆ ವೇದದ ಸೂಕ್ತಗಳಲ್ಲಿ ತರ್ಕಶುದ್ಧತೆಯನ್ನೂ ಆವಯವಿಕ ಪೂರ್ಣತೆಯನ್ನೂ ನಾವು ಅವುಗಳಲ್ಲಿ ಕಾಣಬಲ್ಲೆವು. ಅಷ್ಟೇ ಅಲ್ಲ, ಆ ಸೂಕ್ತಗಳ ಶೈಲಿಯು ನ್ಯಾಯವಾದುದೂ ಅನ್ಯೂನ-ಅನತಿರಿಕ್ತವಾದುದೂ ಆಗಿರುವುದನ್ನಲ್ಲದೆ, ಒಂದು ವೇಳೆ ಪದ ಸಂಹತಿಗಳ ಮಿತವ್ಯಯದ ಪಾಪ ಮಾಡಿದೆ ಎಂದು ಕೆಲವರಿಗೆ ತೋರಿದರೂ ಅತಿವ್ಯಯದ ಮೂಲಕ ಹೊರಲಾರದ ಅರ್ಥಗರ್ಭಿತತೆಯನ್ನು ಆ ಮೇಳ ನುಡಿಗಳ ಮೇಲೆ ಹೇರದೆ, ಅರ್ಥದಾರಿದ್ರ್ಯಕ್ಕಿಳಿಯದೆ ಹೋದುದನ್ನೂ ನಾವು ಕಾಣಬಲ್ಲೆವು. ಆಗ ವೇದವೆಂದರೆ, ಒಂದು ಕೇವಲ ಆಕರ್ಷಕವಾದ ಬರ್ಬರ ಸಂಸ್ಕೃತ್ಯವಶೇಷ ಎಂಬ ಅಪವಾದದಿಂದ ಮುಕ್ತವಾಗಿ ಅದು ವಿಶ್ವದ ಮೊಟ್ಟಮೊದಲಿನ ಶ್ರುತಿಗ್ರಂಥಗಳಲ್ಲೆಲ್ಲಾ ಅತ್ಯಂತ ಮುಖ್ಯವಾದುದೆಂಬ ಸ್ಥಾನವನ್ನು ಪಡೆಯುತ್ತದೆ.



ಅಧ್ಯಾಯ-೨

# ವೈದಿಕ ಸಿದ್ಧಾಂತದ ಒಂದು ಹಿನ್ನೋಟ-೧

'ವೇದ' ಎಂಬುದು ಹಿಂದೆ ಹೇಳಿದ್ದನ್ನು ಗಮನದಲ್ಲಿಟ್ಟುಕೊಂಡರೆ, ನಮ್ಮ ಬೌದ್ಧಿಕ ತತ್ವಶಾಸ್ತ್ರಗಳಿಗಿಂತ ಕಾಲಮಾನದಲ್ಲಿ ಹಿಂದಿನದು ಎಂದಾಗುತ್ತದೆ. ಆ ಆದಿಯುಗದಲ್ಲಿ ಆಲೋಚನೆಯು ಅನ್ಯ ಪದ್ಧತಿಗಳನ್ನು ಹಿಡಿದು ಮುನ್ನಡೆಯಿತು. ನಮ್ಮ ತಾರ್ಕಿಕ ವಿಚಾರ ಸರಣಿಯನ್ನೂ ಭಾಷೆಯನ್ನೂ ನಾವು ಸ್ವೀಕರಿಸಿದ ಅಭಿವ್ಯಕ್ತಿಯ ರೀತಿಗಳನ್ನೂ ಅದು ಅನುಸರಿಸಲಿಲ್ಲ. ಆದ್ದರಿಂದ ಆ ವೇದವಿಚಾರ ಪದ್ಧತಿಯು ನಮಗೆ ಈಗ ಸ್ವೀಕಾರಾರ್ಹ-ವಾಗದು. ಅಂದಿನ ವಿದಗ್ಧ ಶ್ರೇಷ್ಠರು ಘನುಕುಲದ ಸಾಮಾನ್ಯ ಇಂದ್ರಿಯ ಪ್ರತ್ಯಕ್ಷಗಳನ್ನೂ ದಿನನಿತ್ಯದ ಚಟುವಟಿಕೆಗಳನ್ನೂ ಮೀರಿದ ಪ್ರಾತಿಭಪ್ರತ್ಯಕ್ಷ ಬಲವುಳ್ಳ ಮನಸ್ಸನ್ನೇ ಎಲ್ಲಾ ಜ್ಞಾನಾರ್ಜನೆಗೂ ಬಳಸುವುದರ ಮೂಲಕ ತಮ್ಮ ಆಂತರಿಕ ಅನುಭೂತಿಯನ್ನೇ ಅವಲಂಬಿಸಿದರು. ಅವರ ಗುರಿಯು ತಾರ್ಕಿಕ ಸಮಾಧಾನವನ್ನು ತರುವ ನಿರ್ಣಯಾತ್ಮಕ ಜ್ಞಾನವಾಗಿರದೆ, ಸ್ಫುರತ್‌ಪ್ರಭ ಜ್ಞಾನವಾಗಿತ್ತು ; ಅವರ ಆದರ್ಶವು ಅಸ್ಖಲಿತ ವಿಚಾರವಾದಿಯ-ದಾಗಿರದೆ ಸ್ಫೂರ್ತಿಸಂಪನ್ನನಾದ ದ್ರಷ್ಟಾರನದಾಗಿತ್ತು. ಭಾರತೀಯ ಪ್ರಂಪರೆಯು ಪ್ರಾಮಾಣಿಕವಾಗಿ ವೇದ ಮೂಲದ ಈ ಚರಿತ್ರೆಯನ್ನು ಉಳಿಸಿಕೊಂಡು ಬಂದಿದೆ. ಋಷಿ ಎಂಬವನು ವೇದಸೂಕ್ತದ ವೈಯಕ್ತಿಕ ರಚಯಿತನಲ್ಲ. ಅವನು ಒಂದು ನಿತ್ಯ ಸತ್ಯದ ದ್ರಷ್ಟಾರನು, ನೋಟಕನು ಮತ್ತು ಅವೈಯಕ್ತಿಕ ಜ್ಞಾನವನ್ನು ಕಂಡವನು. ವೇದದ ಭಾಷೆಯೇ ಶ್ರುತಿ - ಅರ್ಥಾತ್ - ಬುದ್ಧಿಯು ರಚಿಸಿದ ಛಂದೋಬದ್ಧ ಪದ್ಯವಲ್ಲ ; ಅದು ಅವನು ಕೇಳಿದ್ದು - ಅಂದರೆ ಅವೈಯಕ್ತಿಕ ಜ್ಞಾನಕ್ಕೆ ತನ್ನನ್ನು ಮೊದಲೇ ಅರ್ಹನನ್ನಾಗಿ ಮಾಡಿಕೊಂಡಿದ್ದವನೆಡೆಗೆ, ಅವನ ಒಳಗಿವಿಗೆ ಕೇಳಿಸಲೆಂದು ಅಪ್ರಮೇಯನು ನಾದ ತರಂಗಗಳ ಮೂಲಕ ಕಳುಹಿದ ದಿವ್ಯ ಶಬ್ದ. 'ದೃಷ್ಟಿ ಮತ್ತು ಶ್ರುತಿ' ಎಂಬ ಶಬ್ದಗಳೇ ಸ್ವತಃ ವೈದಿಕ ; ಇವುಗಳೂ ಇವುಗಳಿಗೆ ಬಂಧುಗಳಾದ ಇತರ ಶಬ್ದಗಳೂ ಸೂಕ್ತಗಳ ದೀಕ್ಷಿತಗಮ್ಯ ವಾಣಿಯಲ್ಲಿ ಆವಿರ್ಭೂತ ಜ್ಞಾನ ಮತ್ತು ಸ್ಫೂರ್ತಿಯ ಹೂರಣ.

ಆವಿರ್ಭಾವವೆಂಬ ವೈದಿಕ ಕಲ್ಪನೆಯಲ್ಲಿ ಆಶ್ಚರ್ಯಜನಕತೆಯ ಹಾಗೂ ಅಪ್ರಾಕೃತತೆಯ ಸೂಚನೆಯೇ ಇಲ್ಲ, ಅತಿ ನಿಸರ್ಗೀಯತೆಯ ಧ್ವನಿಯೇ ಇಲ್ಲ-ಅತಿ ಮಾನುಷವೆಂಬ ಯಾವುದೂ ಅಲ್ಲಿಲ್ಲ. ತನ್ನ ಈ ಮನೋವೈಜ್ಞಾನಿಕ ಶಕ್ತಿಗಳನ್ನು ವಿಶಿಷ್ಟ ಸಾಮರ್ಥ್ಯವನ್ನು, ಬಳಸಿದ ಋಷಿಯು ಒಂದು ಪ್ರಗತಿಪರ ಆತ್ಮ ಸಂಸ್ಕಾರದ ಬಲದಿಂದ ಮೊದಲೇ ಸಂಪಾದಿಸಿಕೊಂಡಿರುತ್ತಿದ್ದನು. ಜ್ಞಾನವೆಂಬುದೇ ಒಂದು ಪ್ರಯಾಣ ಮತ್ತು ಒಂದು ಗುರಿಯನ್ನು ತಲುಪುವ ಕೆಲಸ ; ಅಥವಾ ಒಂದು ಸಂಶೋಧನೆ ಮತ್ತು ಜಯ ಸಂಪಾದನೆ ;

ಆವಿರ್ಭೂತಿಯು ಕಟ್ಟ ಕಡೆಗೆ ಬಂದಿತು, ಬೆಳಕೆಂಬುದು ಅಂತ್ಯಜಯಕ್ಕೆ ದೊರೆತ ಒಂದು ಪಾರಿತೋಷಕ. ವೇದದಲ್ಲಿ ಈ ಪ್ರಯಾಣ ಚಿತ್ರವು ಸತತವಾಗಿ ತೋರುತ್ತದೆ. ಈ ಪ್ರಯಾಣವು ಸತ್ಯ ಮಾರ್ಗದಲ್ಲಿ ಜೀವಾತ್ಮನು ಸಾಗುತ್ತಿರುವುದೇ ಆಗಿದೆ. ಈ ಸತ್ಯವೇ ಪರಮ ಅಥವಾ ಆತ್ಯಂತಿಕ ಸತ್ಯ. ಆ ಮಾರ್ಗದಲ್ಲಿ ಹೋಗುವಾಗ ಜೀವಾತ್ಮನು ಮೇಲೆ ಮೇಲಕ್ಕೆ ಏರುತ್ತಾನೆ, ಅವನ ನಿರೀಕ್ಷೆಗೆ ತಕ್ಕಂತೆ ಕಸುವಿನ ಮತ್ತು ಬೆಳಕಿನ ಹೊಸ ಹೊಸ ತರಂಗಮಾಲೆಗಳು, ಅವನು ಆ ಪ್ರಕಾರ ಏರುತ್ತಾ ಹೋಗುವಾಗ, ಅವನ ದಿವ್ಯ ಚಕ್ಷುಸ್ಸಿಗೆ ಗೋಚರಿಸುತ್ತಾ ಹೋಗುತ್ತವೆ. ಅವನು ತನ್ನ ಧೀರ ಪ್ರಯತ್ನದಿಂದ ತನ್ನ ವಿಸ್ತೃತ ಆಧ್ಯಾತ್ಮಿಕ ಆಸ್ತಿಗಳನ್ನು ಗೆದ್ದುಕೊಳ್ಳುತ್ತಾ ಹೋಗುತ್ತಾನೆ.

ಐತಿಹಾಸಿಕ ದೃಷ್ಟಿಕೋನದಿಂದ ನೋಡಿದರೆ, ಋಗ್ವೇದವೆಂಬುದು ಮಾನವ ಕುಲವು ತನ್ನ ಸಾಮೂಹಿಕ ಪ್ರಗತಿಯ ಒಂದು ನಿಶ್ಚಿತ ಕಾಲಾವಧಿಯಲ್ಲಿ ವಿಶಿಷ್ಟ ಸಾಧನದ ಮೂಲಕ ಪಡೆದ ಒಂದು ಮಹಾ ಮುನ್ನಡೆಯ ದಾಖಲೆ ಎಂದು ಹೇಳಬಹುದಾಗಿದೆ. ತನ್ನ ದೀಕ್ಷಿತಾದೀಕ್ಷಿತಾರ್ಹ ಅರ್ಥವತ್ತೆಯಲ್ಲಿ ಅದೊಂದು ಕರ್ಮಗ್ರಂಥ, ಮಹತ್ಕಾರ್ಯಗಳನ್ನು ಉಲ್ಲೇಖಿಸಿರುವ ಹೆಬ್ಬೊತ್ತಗೆ ; ಒಳ-ಹೊರ ಯಜ್ಞ ಕರ್ಮವೇ ಅದರ ಹೂರಣ. ಅದು ಜೀವಾತ್ಮನ ಯುದ್ಧ ಮತ್ತು ಜಯದ ಸೂಕ್ತ ಸಂಹಿತೆ. ಏಕೆಂದರೆ, ಅದು ಹುಡುಕುತ್ತಾ ಹುಡುಕುತ್ತಾ ಪ್ರಾಕೃತನಿಗೆ ಅಥವಾ ಪ್ರಾಣಿ ಪ್ರಜ್ಞೆಯ ಮನುಷ್ಯನಿಗೆ ಎಟುಕದ ಆಲೋಚನೆ ಮತ್ತು ಅನುಭೂತಿಗಳ ಸ್ತರವನ್ನು ಹತ್ತುವುದು ಋಗ್ವೇದದಲ್ಲಿ ಕಾಣಿಸುತ್ತದೆ. ಮನುಷ್ಯ ಮಾಡಿದ ದಿವ್ಯಜ್ಯೋತಿಯ ಪ್ರಶಂಸೆ, ತನ್ನಲ್ಲಿ ಕೆಲಸ ಮಾಡುತ್ತಿರುವ ದಿವ್ಯಶಕ್ತಿಯ ಹಾಗೂ ದಿವ್ಯಾನುಗ್ರಹದ ಸ್ತೋತ್ರ. ಇವು ಅದರಲ್ಲಿ ಎದ್ದು ತೋರುತ್ತವೆ. ಆದ್ದರಿಂದ ಅದು ಬೌದ್ಧಿಕ ಅಥವಾ ಕಲ್ಪನಾಶಕ್ತಿ ಮಾಡಿದ ತರ್ಕದ ಫಲಗಳಿಂದ ಬಲು ದೂರದಲ್ಲಿದೆ ; ಹಾಗಲ್ಲದೆ ಅದರಲ್ಲಿ ಅರೆವೊರಕ ಮತಧರ್ಮದ ಕಟ್ಟುಕತೆಗಳೂ ತುಂಬಿಲ್ಲ. ಅನುಭೂತಿ ಸಾಧಾರಣತೆ ಮತ್ತು ಸ್ವೀಕೃತ ಜ್ಞಾನದ ಅವೈಯಕ್ತಿಕತೆಗಳೇ ವೇದದಲ್ಲಿ ಸತತವಾಗಿ ಪುನರುಕ್ತವಾದ ನೆಲೆನಿಂತ ವಿಚಾರಸಂತಾನವೂ ಹಾಗೇ ನೆಲೆನಿಂತ ಸಾಂಕೇತಿಕ ಭಾಷೆಯೂ ಉಳಿಯಲು ಕಾರಣವೆನ್ನಬಹುದು. ಅಂಥ ಸಾಂಕೇತಿಕ ಭಾಷೆಯು ಆರ್ಯರ ಸಾಮಾನ್ಯ ಜನರ ಮಾತಿನಲ್ಲಿ ಹೇಳಲು ಬಾರದ ಯೌಗಿಕ ಸೂಚನೆಗಳ ಮೂರ್ತತೆಯನ್ನೂ ಶಕ್ತಿಯನ್ನೂ ಸಂಘಟಿಸಿ ಬಳಸಿಕೊಂಡು ಆ ಸ್ಥಿರ ಕಲ್ಪನೆಗಳನ್ನು ಬಿಂಬಿಸಲು ಸಮರ್ಥವಾಯಿತು. ಇತರ ಭಾಷಾ ಶೈಲಿ ಹಾಗೆ ಬಿಂಬಿಸಲು ಅಸಮರ್ಥ ; ಆದುದರಿಂದ ಅದು ಅನಿವಾರ್ಯವಾಯಿತು ಎಂದು ಹೇಳಬಹುದು. ವೇದದಲ್ಲಿ ಎಲ್ಲಿ ನೋಡಿದರೂ ಸೂಕ್ತದಿಂದ ಸೂಕ್ತಕ್ಕೆ ಹೋಗಿ ಶೋಧಿಸಿದರೂ ಒಂದೇ ಬಗೆಯ ಕಲ್ಪನೆಗಳು ಒಂದೇ ಬಗೆಯ ಪದ ಹಾಗೂ ಅಲಂಕಾರೋಕ್ತಿಗಳ ಮೂಲಕ ವ್ಯಕ್ತಪಡಿಸಲಾಗಿರುವುದನ್ನೂ ಪುನರುಕ್ತವಾಗಿರುವುದನ್ನೂ ಕವಿ ಸಹಜ ಅನನ್ಯತೆ, ಆಲೋಚನಾ ನಾವೀನ್ಯ ಮತ್ತು ಭಾಷೆಯ ಹೊಸತನಗಳನ್ನು ಹುಡುಕುವ ಪ್ರಯತ್ನವನ್ನು ಸಂಪೂರ್ಣವಾಗಿ ಕಡೆಗಣಿಸಿರುವುದನ್ನೂ ಕಾಣುತ್ತೇವೆ. ಆ ವೇದರ್ಷಿಗಳಿಗೆ ರಸವತ್‌ಪ್ರಸಾದ, ಸೌಂದರ್ಯ, ಕಲಾಕೌಶಲದ ಶ್ರೀಮಂತಿಕೆ ಎಂಬಿಯಾವ ಅಂಶವೂ ಅವರ ಮಂತ್ರದ ಪವಿತ್ರೀಕೃತ ಸ್ವರೂಪವನ್ನು ಬದಲಾಯಿಸಲು ಪ್ರೇರಣೆ ಕೊಡಲಿಲ್ಲ. ಆ ಕಾವ್ಯ ಯೋಗಿಗಳು ಅಥವಾ ಯೋಗಿ ಕವಿಗಳು, ತಮ್ಮ ಸೂಕ್ತಗಳನ್ನು, ಒಂದು ವಿಧದ ದಿವ್ಯ ಬೀಜಗಣಿತ, ಅದು ಮತ್ರ ಪರಂಪರಾಗತವಾಗಿ ದೀಕ್ಷಿತ ವಟುಗಳಿಗೆ ಸತತವಾಗಿ ಕಲಿಸುತ್ತಾ ಹೋಗಬಲ್ಲ ನಿತ್ಯಜ್ಞಾನ ಸೂತ್ರ ಸಂಹಿತೆ ಎಂದು ತಿಳಿದಿದ್ದರು.

ಆ ಸೂಕ್ತಗಳೆಲ್ಲಾ ಪರಿಪೂರ್ಣತೆಯನ್ನು ಮುಟ್ಟಿದ ಛಂದೋಬಂಧಗಳು. ಅವುಗಳ ತಂತ್ರದಲ್ಲಿ ಸತತವಾದ ಸೂಕ್ಷ್ಮತೆ ಮತ್ತು ಕೌಶಲ, ಶೈಲಿಯ ಮಹಾ ವೈವಿಧ್ಯ, ಕಾವ್ಯಮಯ ವ್ಯಕ್ತಿತ್ವದ ನಾನಾತ್ಮ-ಎಂಬ ಗುಣಗಳು ಕಂಡುಬರುತ್ತವೆ. ಅವೆಂದೂ ಒರಟು, ಬರ್ಬರ ಮತ್ತು ನಾಗರಿಕತೆಯ ಪ್ರಾಥಮಿಕ ಅವಸ್ಥೆಯಲ್ಲಿರುವ ಜನರ ಕೃತಿಗಳಲ್ಲವೇ ಅಲ್ಲ. ಅವು ಅತ್ಯುಚ್ಚವೂ ಬುದ್ಧಿ ಪೂರ್ವಕವೂ ಆದ ಕಲೆಯ ಚೈತನ್ಯಮಯವಾದ ಉಸಿರು, ಪ್ರಾಣ. ಆ ಕಲೆಯು ತನ್ನ ನಿರ್ಮಿತಿಗಳನ್ನು ಆತ್ಮ ನಿರೀಕ್ಷಣ ಸ್ಫೂರ್ತಿಯ ಬಲಿಷ್ಠ-ಆದರೆ-ಸುನಿಯಂತ್ರಿತ ಸ್ವರೂಪವುಳ್ಳವು-ಗಳನ್ನಾಗಿ ಮಾಡಿದೆ. ಆದರೂ ಈಯೆಲ್ಲಾ ಉನ್ನತ ವರಕವಿತ್ವಶಕ್ತಿಗಳನ್ನು, ಬುದ್ಧಿಪೂರ್ವಕವಾಗಿ, ಒಂದೇ ಒಂದು ಅಪರಿವರ್ತಿತ ಚೌಕಟ್ಟಿನಲ್ಲಿ ಒಬ್ಬಗೆಯ ಸಾಧನ ಸಾಮಗ್ರಿಗಳ ಮೂಲಕ ಪ್ರಯೋಗಿಸಲಾಗಿದೆ. ಏಕೆಂದರೆ, ಋಷಿಗಳಿಗೆ ಅಭಿವ್ಯಂಜನದ ಕಲೆಯು ಒಂದು ಸಾಧನವಲ್ಲದೆ, ಸಿದ್ಧಿಯಾಗಿರಲಿಲ್ಲ. ಅವರ ಪ್ರಮುಖ ಮಗ್ನತೆಯು ಯತ್ನತಃ ವ್ಯಾವಹಾರಿಕವಾಗಿತ್ತು-ಉಪಯುಕ್ತತೆಯ ಅತ್ಯುನ್ನತಾರ್ಥದಲ್ಲಿ ಔಪಯೋಗಿಕವೇ ಆಗಿತ್ತು ಎಂದು ಹೇಳಬಹುದಾಗಿದೆ ; ಅಂದರೆ, ನೂರಕ್ಕೆ ತೊಂಬತ್ತೊಬಂತ್ತರಷ್ಟು ಪ್ರಯೋಜನೋನ್ಮುಖ-ವಾಗಿತ್ತು ಎಂದರ್ಥ. ಸೂಕ್ತಕಾರನಾದ ಋಷಿಗೆ ಅವನು ಕಂಡ ಸೂಕ್ತವು ತನಗೂ, ಇತರರಿಗೂ ಆಧ್ಯಾತ್ಮಿಕ ಮುನ್ನಡೆಯ ಒಂದು ಸಾಧನವೆನ್ನಿಸಿತ್ತು. ಆ ಸೂಕ್ತವು ಅವನ ಜೀವಾತ್ಮದಿಂದ ಹೊರ ಹೊಮ್ಮಿದ್ದು ; ಅದು ಅವನ ಮನಃ ಶಕ್ತಿಯಾಗಿ ಪರಿಣಮಿಸಿತು ; ಅದು ಅವನ ಬಾಳಿನ ಅಂತಶ್ಚರಿತ್ರೆಯ ಆಪತ್ಕಾಲೀನ ಕ್ಷಣದಲ್ಲಿ ಅಥವಾ ಒಂದು ಗಣ್ಯವಾದ ಅವಸ್ಥಾಂತರದಲ್ಲಿ ಅವನ ಸ್ವಾಭಿವ್ಯಂಜನದ ವಾಹಕವಾಯಿತು. ತನ್ನಲ್ಲಿರುವ ದೇವತ್ವವನ್ನು ವ್ಯಕ್ತಪಡಿಸಲು ಅದು ಸಾಧನವಾಯಿತು; ಪಾಪದ ಅಥವಾ ದೌರ್ಜನ್ಯದ ಅಭಿವ್ಯಂಜಕವಾದ ನರಭಕ್ಷಕತ್ವವನ್ನು ನಾಶಮಾಡಲು ಸಹಕಾರಿ-ಯಾಯಿತು, ಸಹಾಯಕವಾಯಿತು ; ಅದು ಪೂರ್ಣತ್ವವನ್ನು ಮುಟ್ಟುವ ಬಯಕೆಯುಳ್ಳ ಆರ್ಯ ಹೋರಾಟಗಾರನ ಆಯುಧವಾಯ್ತು ; ಹಾಗೇ ಅದು, ನದೀ ತೀರದ ಕಳ್ಳನನ್ನು ಕಡಿದೊಗೆಯಲೆದ್ದ ದಾರಿಯಲ್ಲಿ ಹೊಂಚುಹಾಕುತ್ತಿದ್ದ ತೋಳನನ್ನು ಸದೆಬಡಿಯಲು ಹೊರಟ ಹಾಗೂ ಪರ್ವತಸಾನು ಪ್ರದೇಶಗಳಲ್ಲಿ ಗೋವುಗಳನ್ನು ಕದ್ದು ಮುಚ್ಚಿಟ್ಟುಕೊಂಡಿದ್ದ ಪಣಿಗಳನ್ನು ಕುಟ್ಟಿ ಕೆಡಹಲುದ್ದೇಶಿಸಿದ ಇಂದ್ರನ ವಜ್ರಾಯುಧದಂತೆ ಆ ಋಷಿಯ ಕೈಯಲ್ಲಿ ಝಳಪಿಸಿತು, ಪಳಚ್ಚನೆ ಹೊಳೆಯಿತು.

ಅದರ ಗಭೀರತೆಯನ್ನು ಲೆಕ್ಕಕ್ಕೆ ತೆಗೆದುಕೊಂಡು ವೈದಿಕ ವಿಚಾರಧಾರೆಯ ಅಪರಿವರ್ತನೀಯ ದೃಢಮೂಲತೆಯನ್ನು ಪರಾಮರ್ಶಿಸಿದರೆ, ಅಲ್ಲಾಡದ ಅಚಲ ನಿಲುಮೆಯನ್ನು ಪರಿಶೀಲಿಸಿದರೆ, ಅದರ ಐಶ್ವರ್ಯ ಸಂಪನ್ನತೆಯನ್ನೂ ಸೂಕ್ಷ್ಮತೆಯನ್ನು ಪರಿಗಣಿಸಿದರೆ ಅದು ನಮ್ಮಲ್ಲಿ ಕೆಲವು ಆಸಕ್ತಿ ಪ್ರೇರಕ ಊಹಾನ್ಯಾಸಗಳಿಗೆ ಬೀಜವಾಗುತ್ತದೆ. ಏಕೆಂದರೆ, ಅಂಥ ಸುಸ್ಥಿರವಾದ ಆಕಾರ ಮತ್ತು ತಿರುಳು ಆ ಸೂಕ್ತಗಳಲ್ಲಿ ಕಂಡುಬರುವಂತೆ ಮಾಡುವುದು ಮಾನವನ ಆಲೋಚನಾಶಕ್ತಿಯ ಆರಂಭದಶೆಯಲ್ಲಿ ಎಂದೂ ಸುಲಭ ಸಾಧ್ಯವಲ್ಲ - ಮನಃಶಾಸ್ತ್ರೀಯ ಅನುಭವದ ಅಥವಾ ಅದರ ಅತಿ ಮೊದಲಿನ ಪ್ರಗತಿಯ ಮತ್ತು ಆವಿಷ್ಕಾರದ ಅವಸ್ಥೆಯಲ್ಲಿ ಅಂಥ ಸುಸ್ಥಿರತೆಯನ್ನು ಸಾಧಿಸುವುದು ಮನುಷ್ಯ ಜಾತಿಗೆ ಅಸಾಧ್ಯವೇ ಸರಿ. ಆದುದರಿಂದ, ಸಾಕ್ಷಾತ್ತಾಗಿ ನಮ್ಮೆದುರಿಗಿರುವ ಋಗ್ವೇದ ಸಂಹಿತೆಯು ವೇದದ ಆದಿಯನ್ನಲ್ಲ, ಅಂತ್ಯಾವಧಿಯನ್ನು ಸೂಚಿಸುತ್ತದೆ ಎಂದು ನಿಗಮಿಸಬಹುದು. ಅದರ ಆ ಈ ಮಧ್ಯದ ಅವಸ್ಥೆಯನ್ನು ಈ ಸಂಹಿತೆ ಪ್ರತಿನಿಧಿಸುತ್ತದೆ ಎಂದರೂ ತಪ್ಪು. ಅಷ್ಟೇ ಅಲ್ಲ ಈ ಸಂಹಿತೆಯ

ಅತ್ಯಂತ ಹಳೆಯ ಸೂಕ್ತಗಳು, ಅವುಗಳಿಗಿಂತ ಹಿಂದಿನ ಸೂಕ್ತಗಳಲ್ಲಿಯ, ತುಲನಾತ್ಮಕವಾಗಿ ಆಧುನಿಕವೆನ್ನಿಸುವ, ಸೂಕ್ತ ಸಂಹಿತೆ ಎಂದು ಕೂಡಾ ತೀರ್ಮಾನಿಸಬಹುದು.[೧] ಏಕೆಂದರೆ, ಅವು ಇವುಗಳಿಗಿಂತ ಹೆಚ್ಚು ಸುವಾರ್ತಾರೂಪದ ಭಾವಗೀತದ ಪ್ರಪ್ರಾಚೀನ ಮಾನವ ಪದರೂಪಗಳ ನಮ್ಯವೂ ಸ್ವತಂತ್ರತರವೂ ಆದ ಶೈಲಿಯಲ್ಲಿದ್ದಿರಬೇಕು-ಎಂಬುದನ್ನಿಲ್ಲಿಯ ಪ್ರಾಚೀನತಮ ಸೂಕ್ತಗಳು ಸೂಚಿಸುತ್ತವೆ. ಅಥವಾ ಉಕ್ತ ವೇದದ ಪ್ರಾರ್ಥನಮಾಲೆಯ ಸ್ವರೂಪದಲ್ಲಿರುವ ಎಲ್ಲಾ ಸೂಕ್ತಗಳ ಪರ್ವತೋಪಮ ಸಂಹಿತೆಯು ವೇದವ್ಯಾಸ ಮುನಿಯು ಇದಕ್ಕೂ ಹಿಂದೆ ಇದ್ದ ಆರ್ಯ ವಾಙ್ಮಯ ಸಾಗರದಿಂದ ಆಯ್ದು ತೆಗೆದಿಟ್ಟ ಒಂದು ಭಾಗವೆಂದರೂ ಸಲ್ಲುತ್ತದೆ. ವ್ಯಾಸನು ಕೃಷ್ಣದ್ವೈಪಾಯನ, ಪರಂಪರೆಯ ಮಹರ್ಷಿ ಮತ್ತು ಅದ್ಭುತ ಶಕ್ತಿಯುಳ್ಳ ಸಂಗ್ರಾಹಕ. ಅವನು ಕಲಿಯುಗದತ್ತ ನೋಡಿ, ದ್ವಾಪರದ ಸಂಧ್ಯಾಕಾಲದಲ್ಲಿ ಋಗ್ವೇದವನ್ನು ಸಂಹಿತಾರೂಪಕ್ಕಿಳಿಸಿದನು. ಕಲಿಯುಗವೋ ಕಜ್ಜಿಣದ ಕಾಲ ; ಶತಮಾನಗಟ್ಟಲೆಯ ಸಂಧ್ಯಾವಸ್ಥೆಯನ್ನು ಕಳೆದು ತಳವೂರಲಿದ್ದ ಯುಗ. ಮಾನವನನ್ನು ಕತ್ತಲಿಂದ ಕುರುಡುಗೊಳಿಸಲು ಬರಲಾರಂಭಿಸಿದ ಅವಧಿ. ಋಗ್ವೇದವು ಪ್ರಾತಿಭ ಯುಗಗಳ ಕೊನೆಯ ಪ್ರಮಾಣ ಗ್ರಂಥ. ಪಿತೃಪಿತಾಮಹರು ಕಂಡ ಸ್ಫುರತ್ ಪ್ರಭಾತಗಳ ದಾಖಲೆ. ಅವರದನ್ನು ತಮ್ಮ ವಂಶದವರಿಗೆ ಬಿಟ್ಟು ಹೋದರು. ಆ ಮನುವಂಶೀಯರಾದರೋ ಆಗಲೇ ಕೆಳಮಟ್ಟಕ್ಕಿಳಿಯಲಾರಂಭಿಸಿ, ಹೆಚ್ಚು ಸುಲಭವೂ ಕ್ಷೇಮಕರವೂ ಎನ್ನಿಸಿದ ಆಸ್ತಿಗಳ ಸಂಗ್ರಹಣದತ್ತ ಹೊರಳುತ್ತಿದ್ದರು. ಆ ಆಸ್ತಿಗಳ ಕ್ಷೇಮಕಾರಕತೆ, ಸುರಕ್ಷತತೆ ಎಂಬುದು ಬಹುಶಃ ಬರಿ ತೋರಿಕೆಯದಾಗಿತ್ತು. ಏಕೆಂದರೆ, ಆ ಆಸ್ತಿಗಳು ಕೇವಲ ಭೌತಿಕ ಜೀವನಕ್ಕೆ ಸಂಬಂಧಿಸಿದಂಥವು. ಬೌದ್ಧಿಕ ವಿಚಾರಕ್ಕೆ ವಿಷಯಗಳಾದಂಥವು ಮತ್ತು ತಾರ್ಕಿಕ ಚರ್ಚೆಗೆ ವಸ್ತುಗಳಾದಂಥವುಗಳು ಎನಿಸಿದ್ದವು.

ಆದರೆ ಈಯೆಲ್ಲವೂ ಊಹೆಗಳು ಮತ್ತು ಅನುಮಾನಗಳು. ಇವುಗಳ ನಿಶ್ಚಿತತೆ ಇರುವುದು ಒಂದರಲ್ಲಿ ಮಾತ್ರ. ಚಕ್ರಾರ ಪಂಕ್ತಿಯಂತೆ ಏರಿದ ಮಾನವ ಸಂಸ್ಕೃತಿಯು ಇಳಿಯುತ್ತಾ ಹೋಗುವುದೆಂದೂ ಆ ನಿಯಮಾನುಸಾರ ವೇದವು ನಷ್ಟವಾಗುವುದೆಂದೂ ನಂಬಿದ ಪರಂಪರಾ ಸತ್ಯವು ಕಾರ್ಯರೂಪಕ್ಕೆ ಬಂದಿರುವುದು ನಿಶ್ಚಿತ. ಪ್ರಾಪಂಚಿಕ ಘಟನೆಗಳು ಈ ಮಾತಿಗೆ ಉದಾಹರಣೆಗಳಾಗಿ ನಿಂತಿವೆ. ಬರಲಿದ್ದ ವೇದಾಂತ ಯುಗವೆಂಬ ಆಧ್ಯಾತ್ಮಿಕ ಕಾಲಮಾನವು ಕಣ್ದೆರೆಯುವ ಮೊದಲೇ ವೇದ ಪ್ರಜ್ಞೆಯು ಮಸುಕಾಗುತ್ತಾ ಹೋಯಿತು. ವೇದಾಂತವು ಪ್ರಾಚೀನವೆನ್ನಿಸಿದ ಜ್ಞಾನವನ್ನು ಉಳಿಸಿಕೊಳ್ಳಲು ಅಥವಾ ಮತ್ತೆ ಗಳಿಸಿಕೊಳ್ಳಲು ಹೋರಾಡಿತು. ಈ ಘಟನೆಯು ಇನ್ನಾವ ರೂಪವನ್ನು ತಾಳಲೂ ಸಾಧ್ಯವಿರಲಿಲ್ಲ. ಏಕೆಂದರೆ, ವೈದಿಕ ಯೋಗಿಗಳ ಪದ್ಧತಿಯು ಸಾಮಾನ್ಯರಿಗೆ ಎಟುಕದಷ್ಟು ಕಷ್ಟವಾದ ಅನುಭವಗಳ ಮೇಲೆ ನಿಂತಿತ್ತು; ನಮ್ಮಲ್ಲಿಯ ಅನೇಕರ ಬುದ್ಧಿಶಕ್ತಿಗೆ ಮೀರಿದ ಮಾರ್ಗವನ್ನು ಅದು ಅನುಸರಿಸಿತ್ತು ; ಅಂಥ ಶಕ್ತಿ ನಮ್ಮಲ್ಲಿ ಯಾರಿಗಾದರೂ ಇದೆಯೆಂದರೂ ಅದಿರುವುದು ತೀರಾ ಅಲ್ಪಸ್ವಲ್ಪ ಮತ್ತು ಅಪೂರ್ಣವಾಗಿ ಬೆಳೆದ ರೂಪದಲ್ಲಿ. ಅದು ಒಮ್ಮೆ ಕ್ರಿಯಾಶೀಲವಾದರೂ ಅದರ ಕಾರ್ಯವು ಸಂಮಿಶ್ರವೂ ವಕ್ರವೂ ಆಗಿ ಬಿಡುವುದು. ಸತ್ಯ ಶೋಧದ ಮೊದಲನೆಯ ಘನೀಭೂತರೂಪವು

---

೧. ವೇದವೇ ಪದೇ ಪದೇ ಪ್ರಾಚೀನ ಹಾಗೂ ನೂತನ ಋಷಿಗಳು ("ಪೂರ್ವೇಭಿ......ನೂತನೈಃ") ಎಂದು ಹೇಳುತ್ತದೆ. ಇದರಲ್ಲಿ ಮೊದಲಿನವರು ಅರೆದೇವತೆಗಳು, ಜ್ಞಾನದ ಮೊದಲ ಸಂಸ್ಥಾಪಕರು ಎಂದು ಪರಿಗಣಿತವಾಗುವಷ್ಟು ಪ್ರಾಚೀನರು.

ಅಳಿದೊಡನೆಯೇ ಆಯಾಸದ ಹಾಗೂ ವಿರಾಮಾಪೇಕ್ಷೆಯ ಅವಧಿಯು ಕಾಣಿಸಿಕೊಳ್ಳುತ್ತದೆ. ಆ ಕಾಲದಲ್ಲಿ ಹಳೆಯ ಸತ್ಯಗಳು ಅರ್ಧಕ್ಕರ್ಧ ಕಳೆದು ಹೋಗುತ್ತವೆ. ಅಷ್ಟೇ ಅಲ್ಲ-ಒಮ್ಮೆ ಹಾಗೆ ಕಳೆದು ಹೋದದ್ದೇ ಆದರೆ ಪ್ರಾಚೀನ ಸೂಕ್ತಗಳ ಪರಿಶೀಲನೆಯಿಂದ ಅವುಗಳನ್ನು ಮತ್ತೆ ಪಡೆದುಕೊಳ್ಳುವುದು ಅಷ್ಟೇನೂ ಸುಲಭವಾಗದು ; ಏಕೆಂದರೆ, ಆ ಸೂಕ್ತಗಳನ್ನು ಬುದ್ಧಿಪೂರ್ವಕವಾಗಿ ಸಂದಿಗ್ಧ ಭಾಷೆಯಲ್ಲಿ ಬಂಧಿಸಲಾಗಿದೆ.

ಒಮ್ಮೆ ಏನಾದರೊಂದು ಸೂಚನೆ ಸಿಕ್ಕಿ ಬಿಟ್ಟಿತೆಂದರೆ ನಮಗರಿಯದ ಭಾಷೆಯನ್ನು ಸರಿಯಾಗಿ ನಾವು ಅರ್ಥಮಾಡಿಕೊಳ್ಳಬಲ್ಲವರಾಗುವೆವು. ಬುದ್ಧಿಪೂರ್ವಕವಾಗಿ ಸಂದಿಗ್ಧಗೊಳಿಸಿ ಬರೆದ ಶೈಲಿಯು ನಮ್ಮನ್ನು ಹೊಲಬುಗೆಡಿಸುವ ತನ್ನ ಆಮಿಷಗಳಿಂದಲೂ ಸೂಚನೆಗಳಿಂದಲೂ ಹಠದಿಂದ ಹಾಗೂ ಜಯಪ್ರದವಾಗಿ ತನ್ನ ಗುಟ್ಟನ್ನು ಕಾದುಕೊಳ್ಳುತ್ತದೆ.

ಆದ್ದರಿಂದ ಭಾರತೀಯ ಬುದ್ಧಿಯು ವೇದಾರ್ಥವನ್ನು ಮತ್ತೆ ಅರಿಯಲು ತಿರುಗಿದಾಗ ಆ ಕಾರ್ಯವು ಕಷ್ಟಕರವಾಯಿತು ಮತ್ತು ಆ ಮೂಲಕ ಪಡೆದ ಗೆಲುವು ಪಾಕ್ಷಿಕವಾಯಿತು. ಬೆಳಕಿನ ಒಂದು ಆಕರ ಇನ್ನೂ ಉಳಿದಿತ್ತು. ಅದಾವುದೆಂದರೆ, ವೇದಾಧ್ಯಯನ ಮಾಡಿದ ಸಂಪ್ರದಾಯಜ್ಞ ಕುಲ ಸಂಪ್ರದಾಯದ ಗುರು ಮುಖದಿಂದ ವೇದವನ್ನು ಕಲಿತು ವೈದಿಕ ಕರ್ಮ ಮಾಡಿಸುವ ಹೊಣೆ ಹೊತ್ತವರು. ಈಯೆರಡು ಕೆಲಸಗಳೂ ಮೊದಲು ಒಂದೇ ಆಗಿದ್ದವು. ಅರ್ಚಕನೇ ದೃಷ್ಟಾರನೂ ಗುರುವೂ ಆಗಿರುತ್ತಿದ್ದನು. ಆದರೆ ಈ ಬೆಳಕಿನ ಸ್ಪಷ್ಟತೆಯು ಆಗಲೇ ಮಸುಕಾಗಿತ್ತು. ಹೆಸರಾಂತ ಪುರೋಹಿತರೇ ತಾವು ಪುನಃ ಪುನಃ ಉಚ್ಚರಿಸುತ್ತಿದ್ದ ಪವಿತ್ರ ಪದಗಳ ಅರ್ಥವನ್ನು ಅರಿಯದೆ ವೇದೋಕ್ತ ಕರ್ಮಗಳನ್ನು ಮಾಡುತ್ತಿದ್ದರು. ಏಕೆಂದರೆ ಪೂಜಾ ವಿಧಿಯ ಭೌತಿಕಾಂಶಗಳು ಒಳ ತಿಳಿವನ್ನು ಮುಚ್ಚುವ ಹೆಜ್ಜಿಪ್ಪುಗಳಾಗಿ ಬೆಳೆದು ಬಿಟ್ಟಿದ್ದವು ಮತ್ತು ತಾವು ಕಾಯ್ದುಕೊಂಡಿರಬೇಕಾದ ಅಂಶಗಳ ಕುತ್ತಿಗೆಯನ್ನೊತ್ತುತ್ತಿದ್ದವು. ಆಗಲೇ ವೇದವು ಪುರಾಣ ಕಥೆಗಳ ಹಾಗೂ ಕರ್ಮವಿಧಿಗಳ ಒಂದು ದೊಡ್ಡ ರಾಶಿಯಾಗಿ ಹೋಗಿತ್ತು. ಅದರ ಶಕ್ತಿಯು ಮಾಯವಾಗತೊಡಗಿತ್ತು. ಸಾಂಕೇತಿಕವಾದ ಅದರ ಸಮಾರಂಭಗಳು ಮಾತ್ರ ಉಳಿಯಲಾರಂಭಿಸಿದವು. ಯೌಗಿಕ ನೈದರ್ಶನಿಕ ಕಥೆಗಳಿಂದ ಅದರ ಬೆಳಕು ಹಾರಿ ಹೋಗತೊಡಗಿತ್ತು : ವೇದದ ಯೋಗದೃಷ್ಟಿ ಅಳಿಸಿ ಹೋಗಿತ್ತು. ಅದರ ಬದಲು ತೋರಿಕೆಯ ವಿಕಟವೂ ಮುಗ್ಧವೂ ಆದ ಚಿತ್ರ ಮಾತ್ರ ಉಳಿದುಕೊಂಡಿತ್ತು.

ಆಧ್ಯಾತ್ಮಿಕ ವಿಚಾರ ಮತ್ತು ಅನುಭೂತಿಗಳನ್ನು ಹೊಸದಾಗಿ ಹೇಳಲು ವೇದದ ಪವಿತ್ರ ಪಠ್ಯವನ್ನು ಆಧಾರವಾಗಿ ತೆಗೆದುಕೊಂಡ ಬ್ರಾಹ್ಮಣ ಮತ್ತು ಉಪನಿಷದ್ ಗ್ರಂಥಗಳು ವೇದದ ಪುನರುಜ್ಜೀವನಕ್ಕಾಗಿ ಮಾಡಿದ ಶಕ್ತಿಯುಕ್ತವಾದ ಪ್ರಯತ್ನದ ದಾಖಲೆಗಳು. ಈ ಪ್ರಯತ್ನಗಳಿಗೆ ಎರಡು ಪೂರಕ ಮುಖಗಳಿವೆ. ಒಂದು-ಪದರೂಪಗಳನ್ನು ಕಾದುಕೊಳ್ಳುವುದು, ಇನ್ನೊಂದು - ವೇದದ ಅಂತರರ್ಥವನ್ನು ಆವಿರ್ಭವಿಸುವಂತೆ ಮಾಡುವುದು : ಮೊದಲನೆಯದನ್ನು ಬ್ರಾಹ್ಮಣಗಳು ಮಾಡಿದರೆ, ಎರಡನೆಯದನ್ನು ಉಪನಿಷತ್ತುಗಳು ಮಾಡಿದವು - ಆಯಾ ಕೆಲಸಕ್ಕೆ ಅವವು ಪ್ರಾತಿನಿಧಿಕ ಗ್ರಂಥಗಳೆನ್ನಿಸಿದವು.

ವೇದ ಸಮಾರಂಭಗಳ (ಕರ್ಮವಿಧಿವಿಧಾನಗಳ) ಸೂಕ್ಷ್ಮವಿವರಗಳನ್ನು ನಿರ್ದಿಷ್ಟ-ಗೊಳಿಸುವುದು, ಅವುಗಳ ಭೌತಿಕ ಫಲದಾಯಕತೆಯನ್ನು ನಿರ್ಧರಿಸುವುದು ಮತ್ತು ಅವುಗಳ

ವಿವಿಧ ಭಾಗಗಳ ಸಾಂಕೇತಿಕ ಅರ್ಥವನ್ನೂ ಉದ್ದೇಶವನ್ನೂ ಕೈಕರಣಗಳನ್ನೂ, ಸಾಧನ ಸಾಮಗ್ರಿಗಳನ್ನೂ ಕರ್ಮಕ್ಕೆ ಅಗತ್ಯವಾದ ಹಾಗೂ ಮುಖ್ಯವಾದ ಪದ್ಯಗಳ ಅರ್ಥವನ್ನು ಮಸುಕಿಸಿ ಹೋದ ಪೂರ್ವ ಕಥಾ ಸೂಚನೆಗಳನ್ನು ಹಳೆಯ ಗಾಹೆಗಳ ಹಾಗೂ ಸಂಪ್ರದಾಯಗಳ ನೆನಹುಗಳನ್ನು ನಿಶ್ಚಯಿಸುವುದು ಬ್ರಾಹ್ಮಣಗಳ ಸತತೋದ್ಯಮವಾಯಿತು. ಅವುಗಳಲ್ಲಿ ಇರುವ ಅನೇಕ ಗಾಹೆಗಳು (ಐತಿಹ್ಯಗಳು ಅಥವಾ ಆಖ್ಯಾಯಿಕೆಗಳು) ಪ್ರತ್ಯಕ್ಷವಾಗಿ ಸೂಕ್ತ ವಾಙ್ಮಯದ ಉತ್ತರ ಕಾಲದವುಗಳಾಗಿವೆ. ಅವು ಅರ್ಥವಾಗದ ಪ್ರಕರಣಗಳನ್ನು ವಿವರಿಸಲೆಂದು ಸೃಷ್ಟವಾದಂಥವುಗಳು. ಅವುಗಳಲ್ಲಿ ಇತರ ಹಲವಾರು ಗಾಥೆಗಳು ಪ್ರಾಚೀನ ಸಂಕೇತಕಾರರು ಪ್ರಯೋಗಿಸಲು ನಿರ್ಮಿಸಿಕೊಂಡ ಆದಿಕಾಲೀನ ಕಥಾ ಪ್ರಯೋಗ ಧಾನಿಗಳ ಅಂಗಗಳಾಗಿರಬಹುದು. ಅಥವಾ ವೇದ ಸಂಹಿತಾಂತರ್ಗತವಾದ ಸೂಕ್ತೋದ್ಗಾರಗಳ ಸುತ್ತುಮುತ್ತಲಿನ ಆವರಣದ ನಿಜವಾದ ಚಾರಿತ್ರಿಕ ಪರಿಸ್ಥಿತಿಯ ಸ್ಮೃತಿಗಳಾಗಿರಬಹುದು. ಮೌಖಿಕ ಪರಂಪರೆಯು ಯಾವಾಗಲೂ ಅರ್ಥವನ್ನು ಮಸುಕುಗೊಳಿಸುವ ಒಂದು "ಬೆಳಕು"- ಅಂಥ ಹೊಸ ಸಾಂಕೇತಿಕತೆಯು ಅರ್ಥ ಕಳೆದು ಹೋದ ಹಳೆಯ ಸಾಂಕೇತಿಕತೆಯೊಂದರ ಮೇಲೆ ಬೆಳಕು ಬೀರಲು ಯತ್ನಿಸಿದಾಗ, ಎರಡನೆಯದನ್ನು ಚೆನ್ನಾಗಿ ಹೊಳೆಯಿಸುವುದರ ಬದಲು ಅದನ್ನು ಮುಚ್ಚಿ ಹಾಕಿ ಅದರ ತಲೆಯ ಮೇಲೆ (ಬದನಿಕೆಗಳಂತೆ) ಬೆಳೆದು ನಿಲ್ಲುವ ಸಂಭವವೇ ಹೆಚ್ಚು. ಆದುದರಿಂದ, ಎಷ್ಟೋ ಕುತೂಹಲಕರ ಸೂಚನೆಗಳಿಂದ ಕೂಡಿದ್ದರೂ ಬ್ರಾಹ್ಮಣಗಳು ನಮ್ಮ ಸಂಶೋಧನೆಗೆ ಸಹಾಯಕಗಳಾಗುವುದು ಅತ್ಯಲ್ಪ. ಅವು ಪ್ರತ್ಯೇಕ ವೇದ ಪದ್ಯಗಳ ಅನ್ಯೂನಾನತಿರಿಕ್ತವಾದ ವಾಚ್ಯಾರ್ಥಗಳನ್ನು ಹೇಳಲು ಯತ್ನಿಸಿದ ಸಂದರ್ಭಗಳಲ್ಲಿ ನಮಗೆ ಸುರಕ್ಷಿತವಾದ ಮಾರ್ಗದರ್ಶನಗಳಾಗಲಾರವು.

ಉಪನಿಷದೃಷಿಗಳು ಇನ್ನೊಂದು ಪದ್ಧತಿಯನ್ನು ಅನುಸರಿಸಿದರು. ಧ್ಯಾನಯೋಗ-ದಿಂದಲೂ ಆಧ್ಯಾತ್ಮಿಕ ಅನುಭೂತಿಗಳಿಂದಲೂ ಉಪನಿಷತ್ಕಾರರು ಕಳೆದುಹೋದ ಅಥವಾ ಕ್ಷಯಿಸುತ್ತಿರುವ ವೇದಜ್ಞಾನವನ್ನು ಪುನಃ ಪಡೆಯಲು ಪ್ರಯತ್ನಿಸಿದರು ; ಮತ್ತು ಅದಕ್ಕಾಗಿ ಅವರು ಆ ಪ್ರಾಚೀನ ಪದ್ಯಗಳನ್ನು ತಮ್ಮ ಪ್ರಾತಿಭ ಪ್ರತ್ಯಕ್ಷಕ್ಕೆ ಮತ್ತು ಅಪರೋಕ್ಷಾನುಭೂತಿಗೆ ಆಧಾರವನ್ನಾಗಿಯೋ ಊತುಗಂಬವನ್ನಾಗಿಯೋ ತೆಗೆದುಕೊಂಡರು. ಅಥವಾ ಅವರಿಗೆ ವೈದಿಕ ಶಬ್ದವು ಆಲೋಚನಾ ಬೀಜವಾಯಿತು. ದರ್ಶನ ಪ್ರೇರಕವಾಯಿತು. - ಆ ಮೂಲಕ ಅವರು ಹಳೆಯ ಸತ್ಯಗಳನ್ನು ಹೊಸರೂಪದಲ್ಲಿ ಮತ್ತೆ ಪಡೆದುಕೊಂಡರು. ಅವರು ತಾವು ಕಂಡದ್ದನ್ನು ತಮ್ಮ ಸಮಕಾಲೀನರಿಗೆ ಸರಿಯಾಗಿ ಅರ್ಥವಾಗುವ ಹಾಗೆ ಅಭಿವ್ಯಂಜಿಸಿದರು. ಒಂದು ದೃಷ್ಟಿಯಿಂದ ಅವರು ವೈದಿಕ ಮಂತ್ರಗಳನ್ನು ಬಳಸಿಕೊಂಡ ಪದ್ಧತಿಯು ವಸ್ತುನಿಷ್ಠವಾಗಿತ್ತೆಂದು ಹೇಳಲು ಸಾಧ್ಯವಿಲ್ಲ. ಅದು ಸೂಕ್ತಗತ ಪದ ಪ್ರಯೋಗಗಳ ಸಮರ್ಪಕ ಉದ್ದೇಶಗಳನ್ನು ಕಂಡುಹಿಡಿಯಲು ಪಂಡಿತರು ತೈಲಬುದ್ಧಿಯಿಂದ ಸೂಕ್ಷ್ಮ ವಿಶ್ಲೇಷಣೆ ಮಾಡುವ ರೀತಿಯದಾಗಿರಲಿಲ್ಲ-ವಾಕ್ಯಗಳ ಅನ್ಯೂನಾನತಿರಿಕ್ತ ವಿಚಾರ ಪ್ರಣಾಲಿಯನ್ನು ಅವುಗಳ ವಾಸ್ತವಿಕ ಚೌಕಟ್ಟಿನಲ್ಲಿಡುವ ವಿದ್ವತ್ ಪದ್ಧತಿಯಾಗಿರಲಿಲ್ಲ. ಸಂಶೋಧಕ ದೃಷ್ಟಿಯದಾಗಿರಲಿಲ್ಲ. ಉಪನಿಷತ್ಕಾರರು ಶಬ್ದಾರ್ಥವನ್ನು ಮೀರಿದ ಉನ್ನತತರ ಸತ್ಯವನ್ನು ಹುಡುಕ ಹೊರಟವರಾಗಿದ್ದುದರಿಂದ ತಾವು ಮುಟ್ಟಲು ಯತ್ನಿಸುತ್ತಿದ್ದ ಜ್ಯೋತಿರ್ಮಯ ದರ್ಶನಕ್ಕೆ ಸೂಚನೆ ನೀಡುವ ಸಾಧನಗಳೆಂದಷ್ಟೇ ವೇದಪದಗಳನ್ನು (ವೇದ ವಾಕ್ಯಗಳನ್ನು) ಬಳಸಿಕೊಂಡರು. ಅವರಿಗೆ ಗೊತ್ತಿಲ್ಲದೆ ಇದ್ದರೂ ಇರಬಹುದು ಅಥವಾ ಗೊತ್ತಿದ್ದೂ

ಅವುಗಳನ್ನಲಕ್ಷಿಸಿ-ನೈರುಕ್ತಕಾರ್ಥಗಳನ್ನು ಬದಿಗೆ ಸರಿಸಿ - ವೇದದ ಸಂಯುಕ್ತ ಪದಗಳ ಅಂಗೀಭೂತ ಧ್ವನಿಗಳನ್ನು ಸಾಂಕೇತಿಕ ಪದ್ಧತಿ ಹಿಡಿದು ವಿವರಿಸಿದ್ದು ದುರವಗಾಹ್ಯವಾಗಿದೆ. ಈ ಕಾರಣಕ್ಕಾಗಿ ಉಪನಿಷತ್ತುಗಳು ವೇದದ ಋಷಿಗಳ ಮುಖ್ಯ ವಿಚಾರಗಳ ಬಗೆಗೂ ಮಾನಸ ಶಾಸ್ತ್ರೀಯ ಪದ್ಧತಿಯ ಬಗೆಗೂ ಅಮೂಲ್ಯವಾದ ಬೆಳಕು ಚೀಲಿದರೂ ಅವು ಬ್ರಾಹ್ಮಣಗಳಂತೆಯೇ ವೇದ ಪದ್ಯಗಳನ್ನು ಉದ್ಧರಿಸಿದಲ್ಲೆಲ್ಲಾ ಆ ಪದ್ಯಗಳ ಸರಿಯಾದ ಅರ್ಥವನ್ನು ನಿರ್ಣಯಿಸುವುದರಲ್ಲಿ ನಮಗೆ ಅತ್ಯಲ್ಪ ಸಹಾಯಕಗಳಾಗಿವೆ. ಅವರ ನಿಜವಾದ ಉದ್ದೇಶವು ವೇದಾಂತ ಸ್ಥಾಪನೆಯಾಗಿತ್ತಲ್ಲದೆ ವೇದಾರ್ಥ ವಿವರಣೆಯಾಗಿರಲಿಲ್ಲ.

ಈ ಮಹಾಪ್ರಯತ್ನವು ಹೆಚ್ಚು ಚಿರಸ್ಥಾಯಿಯಾಗಿರುವ ಹಾಗೆ, ವೇದವಿಚಾರಧಾರೆಯನ್ನು ಆಧ್ಯಾತ್ಮಿಕತೆಯನ್ನೂ ವೇದಾಂತದಲ್ಲಿ ಘನಿತಾಯವಾಗುವಂತೆ ಮಾಡಿತು ಮತ್ತು ಹಳೆಯ ವೈದಿಕ ವಿಚಾರ ಹಾಗೂ ಸಂಸ್ಕೃತಿಗಳು ಅಸಮಗ್ರತೆಗೀಡಾಯುವಂತೆ ಮಾಡಿದ ಎರಡು ಬಲಿಷ್ಠವಾದ ಪ್ರವೃತ್ತಿಯನ್ನಿದು ಗರ್ಭೀಕರಿಸಿಕೊಂಡಿತ್ತು. ಒಂದನೆಯದು : ಹೆಚ್ಚು ಶುದ್ಧವಾದ ಆಧ್ಯಾತ್ಮಿಕ ಗುರಿಗೂ ಅಪೇಕ್ಷೆಗೂ ವೈದಿಕ ಬಾಹ್ಯಕರ್ಮಗಳನ್ನೂ ಮಂತ್ರಗಳ ಭೌತಿಕ ಪ್ರಯೋಜನವನ್ನೂ ಯಜ್ಞಗಳ ಉಪಯೋಗವನ್ನೂ ಹೆಚ್ಚಾಗಿ ಒಳಪಡಿಸಿದ್ದು ಹಳೆಯ ಯೋಗಿಗಳು ಒಳ-ಹೊರಗಣ, ಭೌತಿಕ-ಆಧ್ಯಾತ್ಮಿಕ ಜೀವನಗಳ ನಡುವಿನ ಸಮತೋಲನವನ್ನು ಇಟ್ಟುಕೊಂಡಿದ್ದರೆ ಅದನ್ನು ಈ ಪ್ರಯತ್ನವು ಕಿತ್ತು ಹಾಕಿತು, ವಿಸಂಘಟಿಸಿತು. ಒಂದು ಹೊಸ ಸಮತೋಲವನ್ನು ಒಂದು ಹೊಸ ಸಮನ್ವಯವನ್ನು, ಸ್ಥಾಪಿಸಿ, ಕೊನೆಯದಾಗಿ ಇದು ತಾಪಸಿಕತೆ ಮತ್ತು ವೈರಾಗ್ಯಗಳತ್ತ ಒಲೆದಿತು ; ಮತ್ತು ತನ್ನವೇ ಆದ ಈ ಪ್ರವೃತ್ತಿಗಳ ಅತಿಶಯ ಸ್ವರೂಪದ ಬೌದ್ಧಧರ್ಮದಲ್ಲಿ ಈ ಅಂಶಗಳನ್ನು ಒಡಮೂಡಿಸಿತು ಮತ್ತು ಅದರಿಂದಲೇ ಇದು ಸ್ಥಾನಚ್ಯುತಿ ಹೊಂದಿ ವಿಘಟಿತವಾಯಿತು. ಸಾಂಕೇತಿಕವಾದ ಯಜ್ಞಾಚಾರವು ಹೆಚ್ಚು ಹೆಚ್ಚಾಗಿ ನಿಷ್ಪ್ರಯೋಜಕ ಅವಶೇಷವಾಯಿತಲ್ಲದೆ, ತಲೆಭಾರದ ಒಂದು ದೊಡ್ಡ ಹೊರೆಯಾಗಿ ಪರಿಣಮಿಸಿತು. ಆದರೂ ಎಷ್ಟೋ ಸಲ ಆಗುವಂತೆ-ಉಕ್ತ ಯಜ್ಞಾಚರಣೆಯು ಯಾಂತ್ರಿಕ ನಿಷ್ಫಲಿಣಾಮಕರವೂ ಆಗುತ್ತಾ ಹೋದ ಹಾಗೆ-ಅತ್ಯಂತ ಬಾಹ್ಯಸ್ವರೂಪದವುಗಳಾಗಿ ಯಜ್ಞಾಚಾರದಲ್ಲಿದ್ದ ಅಂಶಗಳೆಲ್ಲಾ ಅತಿಶಯ ಪ್ರಾಮುಖ್ಯ ಉಳ್ಳವುಗಳೆನ್ನಿಸಲಾರಂಭಿಸದ್ದಲ್ಲದೆ, ಇನ್ನೂ ಅವುಗಳಿಗೆ ಅಂಟಿಕೊಂಡೇ ಇದ್ದು ರಾಷ್ಟ್ರೀಯ ಮನೋಭಾಗವು ಅವುಗಳ ಸೂಕ್ಷ್ಮ ಸೂಕ್ಷ್ಮತರ ವಿವರಗಳನ್ನು ಇನ್ನಷ್ಟು ಬಲವಾಗಿ ಜಾರಿಗೆ ತಂದಿತು. ಇದರಿಂದ ಒಂದು ಹರಿತವಾದ ವ್ಯಾವಹಾರಿಕ ವಿಭಜನೆಯುಂಟಾಯಿತು. ಈ ವಿಭಜನೆಯು ಸೈದ್ಧಾಂತಿಕವಾಗಿ ಸಂಪೂರ್ಣ ಮನ್ನಣೆಯನ್ನು ಪಡೆಯದಿದ್ದರೂ, ಪರಿಣಾಮಕಾರಿಯಾಯಿತು. ಇದಾವ ವಿಭಜನೆ? ವೇದ ಮತ್ತು ವೇದಾಂತ ಎಂಬ ವಿಭಜನೆ. "ಅರ್ಚಕರಿಗೆ (ಪುರೋಹಿತರಿಗೆ) ವೇದ, ಋಷಿಗಳಿಗೆ ವೇದಾಂತ" ಎಂಬ ಸೂತ್ರದಿಂದ ಉಕ್ತ ವಿಭಜನೆಯನ್ನು ಹೇಳಬಹುದು.

ವೇದಾಂತ ಪ್ರಯತ್ನದ (ಆಂದೋಲನದ) ಎರಡನೆಯ ಪ್ರವೃತ್ತಿಯು ಇದು. ಕ್ರಮಕ್ರಮವಾಗಿ, ವೈದಿಕ ದ್ರಷ್ಟಾರರು (ಯೋಗಿಗಳು) ತಮ್ಮ ವಿಚಾರವನ್ನು ಮುಚ್ಚಿಟ್ಟಿದ್ದ ಸಾಂಕೇತಿಕ ಭಾಷೆಯ ಸ್ಥೂಲ ಕಥೆಯನ್ನು ಹಾಗೂ ಕಾವ್ಯಮಯ ಅಲಂಕಾರಗಳನ್ನು ಕಿತ್ತೆಸೆಯ ಹೊರಟದ್ದು ; ಅವುಗಳ ಬದಲು ಸ್ಪಷ್ಟತರ ಹೇಳಿಕೆಗಳನ್ನು ಮತ್ತು ಹೆಚ್ಚಿನ ತತ್ವಶಾಸ್ತ್ರೀಯ ಭಾಷೆಯನ್ನು ಬಳಸಲರಂಭಿಸಿದ್ದು, ಈ ಪ್ರವೃತ್ತಿಯ ಸಂಪೂರ್ಣ ವಿಕಾಸವು

ವೈದಿಕ ಕರ್ಮಗಳ ಮತ್ತು ವೇದಪದ್ಯದ ಪ್ರಯೋಜನವೇ ಕಾಲೋಪಯೋಗಿಯಲ್ಲ, ಅಪ್ರಸ್ತುತ ಎನ್ನಿಸುವಂತೆ ಮಾಡಿತು. ತಮ್ಮ ಭಾಷೆಯಲ್ಲಿ ಹೆಚ್ಚು ಹೆಚ್ಚು ಸ್ಪಷ್ಟತೆಯನ್ನಳವಡಿಸಿಕೊಂಡು, ನೇರ ನುಡಿಯನ್ನು ಬಳಸಿಕೊಂಡು, ಉಪನಿಷತ್ತುಗಳು ಭಾರತೀಯ ವಿಚಾರ ಪ್ರಣಾಳಿಯ ಅತ್ಯುಚ್ಚ ಸ್ಫೂರ್ತ್ಯುತ್ಸಗಳೆನ್ನಿಸಿದವು, ಚಿಮ್ಮು-ಸೆಲೆಗಳೆನ್ನಿಸಿದವು, ಚಿಲುಮೆಗಳೆನ್ನಿಸಿದವು ; ಆ ಮೂಲಕ ಅವು ವಸಿಷ್ಠ ಮತ್ತು ವಿಶ್ವಾಮಿತ್ರರ[೧] ಸ್ಫೂರ್ತ ಪದ್ಯಗಳಿಗೆ ಆದೇಶಗಳು ಅಥವಾ ಪರ್ಯಾಯಗಳು ಎನ್ನಿಸಿದವು. ವಿದ್ಯಾಭ್ಯಾಸಕ್ಕೆ ವೇದಗಳು ಕಡಿಮೆ ಕಡಿಮೆ ಅವಶ್ಯಕಗಳೆನ್ನಿಸುತ್ತಾ ಹೋಗಿ, ಅವುಗಳನ್ನು ಉಪನಿಷದಭ್ಯಾಸದಲ್ಲಿ ತೋರಿದ ಉತ್ಸಾಹ ಮತ್ತು ಬುದ್ಧಿ ಕೌಶಲಗಳಿಂದ ಯಾರೂ ಅಭ್ಯಾಸ ಮಾಡದಂತಾಯಿತು ; ಬಳಕೆಯಿಂದ ದೂರವಾಗುತ್ತಾ ಹೋದ ವೈದಿಕ ಸಂಕೇತ ಭಾಷೆಯು ವೈದಿಕಪಿತೃಪಿತಾಮಹಾದಿಗಳ ವಿಚಾರ ಪದ್ಧತಿಯಿಂದ ಭಿನ್ನವಾಗಿ ಹೋದ ಹೊಸ ತಲೆಮಾರುಗಳಿಗೆ ತನ್ನಲ್ಲಿ ಅಳಿದುಳಿದಿದ್ದ ಅಂತರರ್ಥವೂ ಕಳೆದುಹೋಗುವಂತೆ ಮಾಡಿತು. ವೈದಿಕ ಪ್ರಾತಿಭಚಕ್ಷುಸ್ಸಿನ ಯುಗಗಳು ಅಳಿಯುತ್ತಾ ಹೋಗಿ, ಮೊಟ್ಟಮೊದಲಿನ ವಿಚಾರವಾದೀಯ ಯುಗದ ಉಷಃ ಕಾಲವು ಉದಯವಾಯಿತು.

ಬೌದ್ಧಧರ್ಮವು ಈ ಕ್ರಾಂತಿಯನ್ನು ಪೂರ್ಣಗೊಳಿಸಿತು ; ಪ್ರಾಚೀನ ಜಗತ್ತಿನ ಕೆಲ ಬಾಹ್ಯಾಚಾರಗಳನ್ನೂ ಗೌರವಾರ್ಹ ವೈಭವಗಳನ್ನೂ ಯಾಂತ್ರಿಕ ಸಮಯಾಚಾರಗಳನ್ನೂ ಮಾತ್ರ ಉಳಿಸಿತು. ವೈದಿಕ ಯಜ್ಞ ಸಂಸ್ಥೆಯನ್ನದು ಕಿತ್ತು ಹಾಕಲು ಯತ್ನಿಸಿತು ಮತ್ತು ಸಾಹಿತ್ಯಿಕ ಭಾಷೆಯನ್ನು ಬಿಟ್ಟು ಅದರ ಬದಲಿಗೆ ಜನಪ್ರಿಯ ಆಡುಮಾತನ್ನು ಬಳಕೆಗೆ ತರಲು ಪ್ರಾರಂಭಿಸಿತು. ಅದರ ಕಾರ್ಯಪೂರ್ಣತೆಯು ತಡವಾದರೂ ಶತಮಾನಗಳು ಕಳೆದು ಹೋದರೂ, ಪೌರಾಣಿಕ ಹಿಂದು ಧರ್ಮದ ಪುನರುತ್ಥಾನ ಅದಕ್ಕೆ ಅಡ್ಡಿಯಾದರೂ ಈ ವಿಶ್ರಾಮಾವಕಾಶದಿಂದ ವೇದಕ್ಕೆ ಯಾವ ಪ್ರಯೋಜನವೂ ಆಗದಾಯಿತು. ಹೊಸಮತ ಧರ್ಮದ ಜನಪ್ರಿಯತೆಯನ್ನು ಹೆಚ್ಚಿಸಲು ಗೌರವದ ಭಾರ ಹೊತ್ತ ಅವೇದ್ಯ ಪದ್ಯಗಳ ಬದಲು ಸುಲಭವಾದ ಆಧುನಿಕ ಸಂಸ್ಕೃತದಲ್ಲಿ ಬರೆದ ಪ್ರತಿಗಳನ್ನು ಜನರ ಮುಂದಿಡಬೇಕಾಯಿತು. ಪುರಾಣಗಳು ರಾಷ್ಟ್ರದ ಜನಸ್ತೋಮದಿಂದ ವೇದವನ್ನು ದೂರ ಸರಿಸಿದವು. ಹಳೆಯ ಧರ್ಮಾಚಾರಗಳಿಗೆ ಬದಲು ಹೊಸ ಮತಧಾರ್ಮಿಕ ರೂಪಗಳನ್ನು ಜಾರಿಗೆ ತಂದವು. ಋಷಿಯಿಂದ ವೇದವು ಅರ್ಚಕನ ಕೈಗೆ ಹೋದಂತೆ ಅದೀಗ ಅರ್ಚಕನ ಕೈಯನ್ನು ಬಿಟ್ಟು ವಿದ್ವಾಂಸರ ಕೈಗೆ ಹೋಯಿತು. ಈ ಸ್ಥಿತಿಯಲ್ಲಿ ಅದು ತನ್ನ ತಾತ್ಪರ್ಯದ ಕಟ್ಟ ಕಡೆಯ ಅಂಗವಿಕಲತೆಯನ್ನು ಅನುಭವಿಸಿತು ಮತ್ತು ತನ್ನ ನಿಜವಾದ ಗಾಂಭೀರ್ಯವನ್ನೂ ಪಾವಿತ್ರ್ಯವನ್ನೂ ಕಟ್ಟಕಡೆಯದಾಗಿ ಕಳೆದುಕೊಂಡಿತು.

ಕ್ರಿಸ್ತಪೂರ್ವಕಾಲದಿಂದ ಆರಂಭವಾದ ಭಾರತೀಯ ವಿದ್ವತ್ತೆಯು ವೇದದೊಡನೆ ನಡೆಸಿದ ವ್ಯವಹಾರವು ಸಂಪೂರ್ಣ ನಷ್ಟದ ದಾಖಲೆಯೆಂಬುದು ನಾನು ಹೇಳುವುದರ ತಾತ್ಪರ್ಯವಲ್ಲ. ವೇದದ ಗೂಡಾರ್ಥ ಮರೆಯಾದ ಮೇಲೆ, ಸೂಕ್ತಗಳೇ ಬಳಕೆಯಿಂದ ಹೊರಗಾದಾಗ, ಅವು ಜೀವಂತ ಶ್ರುತಿಗಳೆನ್ನಿಸುವುದು ನಿಂತುಹೋದ ಮೇಲೆ, ನಮ್ಮ ಪಂಡಿತರ

೧. ಮತ್ತೆ ಇದು ಮುಖ್ಯ ಪ್ರವೃತ್ತಿಯನ್ನು ಹೇಳುತ್ತದೆ ಮತ್ತು ಇದು ವಿಶೇಷಣಗಳ ಮಿತಿಗೆ ಒಳಪಟ್ಟಿದ್ದ ವೇದಗಳನ್ನೂ ಆಧಾರಗ್ರಂಥಗಳೆಂದು ಉದ್ಧರಿಸಲಾಗಿದೆ ; ಆದರೆ ಒಟ್ಟಿನ ಮೇಲೆ, ಉಪನಿಷತ್ತುಗಳೇ ಜ್ಞಾನಕಾಂಡವೆಂದೂ ವೇದವು ಕೇವಲ ಕರ್ಮಕಾಂಡವೆಂದೂ ಎಲ್ಲರೂ ತಿಳಿದುಕೊಳ್ಳುವಂತಾಯಿತು.

ಸೂಕ್ಷ್ಮಮತಿ ಮತ್ತು ಸಾಂಕೋಚಿಕ ಸಂಪ್ರದಾಯವು ಮಾತ್ರ ವೇದ ಮಂತ್ರಗಳನ್ನು ನಮಗಾಗಿ ಉಳಿಸಿಕೊಟ್ಟಿವೆ ಎಂಬುದನ್ನು ಮರೆಯುವಂತಿಲ್ಲ. ಕಳೆದು ಹೋದ ವೇದ ರಹಸ್ಯವನ್ನು ಪುನಃ ಪಡೆಯುವಲ್ಲಿ ಈ ಎರಡು ಸಾವಿರ ವರ್ಷಗಳ ವೈದುಷ್ಯದ ಶಾಸ್ತ್ರೀಯ ವರ್ತನೆಯು ನಮಗೆ ಕೆಲ ಅಮೂಲ್ಯ ಸಹಾಯಕಗಳನ್ನು ಬಿಟ್ಟು ಹೋಗಿದೆ : ಉದಾತ್ತಾದಿ ಸ್ವರಗಳ ನಿಶ್ಚಿತ ಸ್ವರೂಪಗಳನ್ನು ಉಳ್ಳ ಪಠ್ಯ (ವೇದಪಾಠ), ಯಾಸ್ಕನ ಗಣ್ಯವಾದ (ನಿರುಕ್ತ) ನಿಘಂಟು ಮತ್ತು ಸಾಯಣನ ಮಹಾ ವ್ಯಾಖ್ಯಾನಗಳೇ ಆ ನೆರವಿನ ಗ್ರಂಥಗಳು. ಎಷ್ಟೇ ನ್ಯೂನತೆಗಳಿರಲಿ ಎಷ್ಟು ಸಲ ಅವು ನಮ್ಮನ್ನು ಆಶ್ಚರ್ಯಕ್ಕೀಡುಮಾಡುವಂತಿರಲಿ, ಈಗಲೂ ಸಾಯಣ ಮಹಾಭಾಷ್ಯವು ವಿದ್ವಾಂಸನಿಗೆ ಸುಸಂಬದ್ಧವಾದ ವೈದಿಕವಿದ್ಯೆಯ ಕಲ್ಪನೆಯನ್ನು ಮಾಡಿಕೊಳ್ಳಲು ಅಗತ್ಯವಾದ ಅಥವಾ ಅನಿವಾರ್ಯವಾದ ಮೊದಲ ಹೆಜ್ಜೆಯನ್ನು ಒದಗಿಸಿಕೊಡುವಂಥದಾಗಿದೆ.

## ವಿದ್ವಾಂಸರು

ಸುಮಾರು ಎರಡು ಸಾವಿರ ವರ್ಷಗಳವರೆಗೆ ನಮ್ಮಲ್ಲಿರುವ ವೇದದ ಪಠ್ಯವು ಅಭ್ರಷ್ಟವಾಗಿ ಉಳಿದಿದೆ. ನಮಗೆ ಗೊತ್ತಿರುವಂತೆ, ಭಾರತೀಯ ಬೌದ್ಧಿಕ ಚಟುವಟಿಕೆಗಳಿಂದ ತಿಳಿದು ಬರುವಂತೆ, ಆ ಪಠ್ಯವು ಗ್ರೀಕ್ ನಾಗರಿಕತೆಯ ಪುಷ್ಪಿತ ಕಾಲಮಾನಕ್ಕೆ ಸರಿದೊರೆಯಾಗಿದೆ ; ಆದರೆ ಅದರ ಆರಂಭಕಾಲವು ಅದಕ್ಕೂ ಬಹಳ ಹಿಂದಿನದಾಗಿದೆ. ಅ ಪ್ರಪ್ರಾಚೀನ ವೇದ ಸಂಸ್ಕೃತಿಯೇ ನಮ್ಮ ಅಭಿಜಾತ ಸಂಸ್ಕೃತ ವಾಙ್ಮಯದಲ್ಲಿ ಉಲ್ಲಿಖಿತವಾದ ಸಂಸ್ಕೃತಿ-ನಾಗರಿಕತೆಗಳ ಪ್ರತಿಷ್ಠಾನ. ನಮ್ಮ ವೇದ ಪಠ್ಯವನ್ನು ಇನ್ನೆಷ್ಟು ಹಿಂದಿನ ಕಾಲಾವಧಿಗೆ ಒಯ್ಯಬಹುದೆಂಬುದನ್ನು ನಾವೀಗ ಹೇಳಲಾರೆವು. ಆದರೆ ಅದಕ್ಕೆ ಅಪಾರವಾದ ಪ್ರಾಚೀನತೆ ಇದೆಯೆಂಬುದನ್ನು ಸಮರ್ಥಿಸಲು ಬೇಕಾದ ಕೆಲವು ಸ್ಥಿರ ಪ್ರಮಾಣಾವಲೋಕನ ಪ್ರಕಾರಗಳಿವೆ. ವೈದಿಕ ಕರ್ಮಕಾಂಡಾನುಯಾಯಿಗಳಿಗೆ ತಪ್ಪಿಲ್ಲದ ವೇದಮಂತ್ರಪಾಠ, ತಪ್ಪಿಲ್ಲದ ಪ್ರತ್ಯಕ್ಷರ, ತಪ್ಪಿಲ್ಲದ ಉದಾತ್ತಾದಿ ಸ್ವರಭಾರಗಳು ಅತ್ಯಂತ ಪ್ರಮುಖ ಅಗತ್ಯಗಳಾಗಿದ್ದವು ; ಏಕೆಂದರೆ, ಅತ್ಯಂತ ಎಚ್ಚರಿಕೆಯ ಮೇಲೇ ಯಜ್ಞದ ಪರಿಣಾಮಕಾರಕತೆಯು ಅವಲಂಬಿಸಿತ್ತು. ಬ್ರಾಹ್ಮಣಗಳಲ್ಲಿ ಹೇಳಿರುವ ತ್ವಷ್ಟೃವಿನ ಉದಾಹರಣೆಯನ್ನು ನಾವು ತೆಗೆದುಕೊಳ್ಳಬಹುದು. ತ್ವಷ್ಟೃವು ಇಂದ್ರನಿಂದ ಹತನಾದ ತನ್ನ ಮಗನ ಬಗೆಗೆ ಸೇಡು ತೀರಿಸಿಕೊಳ್ಳಲು ಯಜ್ಞಮಾಡತೊಡಗಿದಾಗ ಸ್ವರಾಪರಾಧದಿಂದ ಇಂದ್ರ ಶತ್ರುವಿನ ಬದಲು ಶತ್ರುವಾದ ಇಂದ್ರನೇ ವರ್ಧಿಷ್ಣುವಾಗುವಂಥ ಅರ್ಥವು ಅವನ ಮಂತ್ರೋಚ್ಚಾರದಿಂದ ಹೊರಟಿತಂತೆ. ಪ್ರಾಚೀನ ಭಾರತೀಯ ಸ್ಮರಣ ಶಕ್ತಿಯ ಅದ್ಭುತ ಯಥಾವತ್ತೆಯು ಕುಪ್ರಸಿದ್ಧ. ವೇದ ಪಾಠದ ಪಾವಿತ್ರ್ಯವು ಅದರಲ್ಲಿ ಪ್ರಕ್ಷೇಪ, ಪರಿವರ್ತನೆ, ಆಧುನೀಕರಿಸುವ ಪುನಃ ಪರಿಶೀಲನೆ ಮುಂತಾದ ಯಾವುದೂ ಕುರುಕುಲದ ಪ್ರಾಚೀನ ಪ್ರಾಥಮಿಕ ಮಹಾಕಾವ್ಯವಾದ ಮಹಾಭಾರತ ಗ್ರಂಥದಲ್ಲಿ ಪ್ರವೇಶಿಸಿದಂತೆ ಪ್ರವೇಶಿಸಲಿಲ್ಲ. ಆದುದರಿಂದ ನಮ್ಮ ವೇದ ಸಂಹಿತೆಯು, ಸಾರತಃ, ಅದನ್ನು ಮಹಾಮುನೀಂದ್ರ ವ್ಯಾಸನು ಹೇಗೆ ಸಂಗ್ರಹಿಸಿ ವ್ಯವಸ್ಥೆಗೊಳಿಸಿದನೋ ಹಾಗೇ ಉಳಿದಿದೆ ಎಂದು ಹೇಳುವುದು ಎಂದಿಗೂ ಅಸಂಭಾವ್ಯವಲ್ಲ.

ಇಂದಿನ ಲಿಖಿತ ರೂಪದಲ್ಲಲ್ಲ-ತನ್ನ ಹಿಂದಿನ ಮುಖತಃ ಶ್ರವಣ ಮಾಡಿಸುವ ಸಂಪ್ರದಾಯದ ರೂಪದಲ್ಲಿ-ವೈದಿಕ ಛಂದಸ್ಸು, ಅಭಿಜಾತ ಸಂಸ್ಕೃತ ವಾಙ್ಮಯ ಬಳಸಿದ

ಛಂದಸ್ಸಿಗಿಂತ, ಸಾರತಃ ಭಿನ್ನವಾಗಿತ್ತು. ಅಂದರೆ ಪದಸಂಧಿ ಮಾಡುವುದರಲ್ಲಿ ಹೆಚ್ಚು ಸ್ವಾತಂತ್ರ್ಯವನ್ನು ವಹಿಸಿತು. ಛಂದೋಬಂಧದ ವಿಸಂಧಿ ವಿಮುಖತೆಯು ಸಾಹಿತ್ಯಿಕ ಭಾಷೆಗೆ ಸಾಮಾನ್ಯವಾಗಿ ವಿಶಿಷ್ಟ ಲಕ್ಷಣವಾಗಿದ್ದರೂ ವೇದ ಹೀಗೇಕೆ ಅಲ್ಲಲ್ಲಿ ವಿಸಂಧಿಗಳಿಗವಕಾಶವಿತ್ತಿತ್ತು? ವೇದದ ಋಷಿಗಳಿಗೆ ವೇದ ಭಾಷೆಯು ಸ್ವಾಭಾವಿಕ ಜೀವಂತ ಆಡುಮಾತಾಗಿತ್ತು. ಆದ್ದರಿಂದ ಅವರು ಸಂಧಿ ನಿಯಮಕ್ಕೇ ಯಾವಾಗಲೂ ಕಟ್ಟು ಬೀಳದೆ ಕಿವಿಗೆ ಸ್ವರಲಯಬದ್ಧವಾಗಿ ಕೇಳಿಸುವ ಹಾಗಿರಬೇಕೆಂಬ ನಿಯಮವನ್ನು ಪಾಲಿಸುತ್ತಾ ಹೋದರು. ಕೆಲ ಸಲ ಅವರು ಭಿನ್ನ ಪದಗಳನ್ನು ಸಂಧಿ ನಿಯಮಕ್ಕೊಳಪಡಿಸಿದರು ; ಇತರೆಡೆಗಳಲ್ಲಿ ಅವರು ಅವುಗಳನ್ನು ಸಂಧಿ ಸೂತ್ರಗಳಿಗೊಳಪಡಿಸದೇ ಹಾಗೇ ಬಿಟ್ಟರು. ಆದರೆ ವೇದವು ಅಜಿತರೂಪ ತಾಳುವಾಗ ಸಂಧಿ ನಿಯಮಗಳಿಗೆ ಭಾಷೆಯ ಮೇಲೆ ಹೆಚ್ಚಿನ ಸರ್ವಾಧಿಕಾರಿತ್ವ ಲಭಿಸಿತ್ತು. ಈ ವೇದ ಪಾಠವನ್ನು ವೈಯಾಕರಣರು ಸಾಧ್ಯವಾದ ಮಟ್ಟಿಗೆ ಸಂಧಿ ನಿಯಮಗಳಿಗೆ ಹೊಂದುವಂತೆ ಮಾಡಿ ಬರೆದರು. ಆದರೆ ಅವರು ವಹಿಸಿದ ಎಚ್ಚರಿಕೆ ಬಹಳ ಮಹತ್ವದ್ದು. ಸಂಹಿತಾ ಪಾಠದಲ್ಲಿ ಸಂಧಿಗಳನ್ನು ಮಾಡಿದರೆ, ಪದ ಪಾಠದಲ್ಲಿ ಎಲ್ಲ ಸಂಧಿಗಳನ್ನೂ ಬಿಡಿಸಿ, ಮೂಲತಃ ಇದ್ದ ಭಿನ್ನ ಪದಗಳನ್ನು ಭಿನ್ನಭಿನ್ನವಾಗಿಯೇ ಇಟ್ಟುದಲ್ಲದೆ, ಸಮಸ್ತ ಪದಗಳ ವ್ಯಸ್ತರೂಪಗಳನ್ನೂ ಬೊಟ್ಟಿಟ್ಟು ತೋರಿಸಿದರು.

ಪ್ರಾಚೀನ ಸ್ಮೃತಿಕಾರರು[೧] ಇಷ್ಟು ಎಚ್ಚರ ವಹಿಸದೆ ಹೋಗಿದ್ದರೆ, ಈ ಸಂಹಿತಾ ಪದ್ಧತಿಯು ನಮ್ಮನ್ನು ಅತಿ ಸುಲಭವಾಗಿ ಗೊಂದಲಕ್ಕೀಡು ಮಾಡುತ್ತಿತ್ತು. ಅವರ ಪದಪಾಠದಾನದ ಪ್ರಾಮಾಣಿಕತೆಗೆ ನಾವು ಕೃತಜ್ಞರಾಗಿರಬೇಕು, ಅದಕ್ಕವರಿಗೆ ಧನ್ಯವಾದ ಹೇಳಬೇಕು. ಅದರಿಂದ ಔಪಚಾರಿಕ ಸಂಹಿತೆಯನ್ನು ಸಂಪೂರ್ಣ ಸುಲಭವಾಗಿ ವೈದಿಕ ಛಂದಸ್ಸಿನ ಮೂಲ ಸಾಮಶ್ರುತ್ಯಕ್ಕೆ ತರಬಹುದಾಗಿದೆ. ಪದಪಾಠದ ಅನ್ಯೂನಾನ-ತಿರಿಕ್ತತೆಯನ್ನಾಗಲಿ ನಿರ್ಣಯದ ನ್ಯಾಯ್ಯತೆಯನ್ನಾಗಲಿ ನಾವು ಪ್ರಶ್ನಿಸಬಹುದಾದ ಸಂದರ್ಭಗಳು ಅತ್ಯಂತ ವಿರಳ. ಆದುದರಿಂದ ನಮ್ಮೆದುರಿಗೀಗ ನಾವು ದೃಢವಿಶ್ವಾಸದಿಂದ ಸ್ವೀಕರಿಸಬಹುದಾದ ಪಠ್ಯದ ಆಧಾರವಿದೆ. ಎಲ್ಲಾದರೂ ಅತಿವಿರಳವಾಗಿ ಸಂದೇಹ ತಲೆದೋರು-ವಂಥ ಅಥವಾ ಸ್ಖಾಲಿತ್ಯ ಉಳಿದಿರುವಂಥ ಉದಾಹರಣೆಗಳು ಒಮ್ಮೆ ಈ ಪದಪಾಠದಲ್ಲಿ ಸಿಕ್ಕಿ ದರೂ ಅದು ತೀರಾ ನಿರುಪದ್ರವಕರ. ಯುರೋಪೀಯ ಅಭಿಜಾತ ಕೃತಿಗಳಲ್ಲಿ, ಸ್ವೇಚ್ಛಾನುಸಾರವಾಗಿ, ಸಂಪಾದಕರು ತಿದ್ದುಪಡಿ ಮಾಡಬೇಕಾದರೆ ವಹಿಸಬೇಕಾದ ಶ್ರಮಭಾರವನ್ನು ನಾವಿಲ್ಲಿ ವಹಿಸಬೇಕಾಗಿಲ್ಲ. ಆರಂಭದಲ್ಲೇ ಇದು ನಮಗೆ ದೊರೆತ ಅಮೂಲ್ಯವಾದ ಲಾಭ. ಇದಕ್ಕಾಗಿ ನಾವು ಪ್ರಾಚೀನ ಭಾರತೀಯ ಪಾಂಡಿತ್ಯದ ಆತ್ಮಸಾಕ್ಷಿಗೆ ಎಷ್ಟು ಕೃತಜ್ಞತೆ ಸಲ್ಲಿಸಿದರೂ ಕಡಿಮೆಯೇ ಸರಿ.

ಇತರ ಕೆಲವು ದಿಶೆಗಳಲ್ಲಿ ಪಾಂಡಿತ್ಯ ಪರಂಪರೆಯನ್ನು ಕಣ್ಮುಚ್ಚಿನಂಬಿ ಪ್ರವರ್ತಿಸುವುದು ನಮಗೆ ಅಷ್ಟೇನೂ ಸುರಕ್ಷಿತತೆಯಾಗದು. ಆಯಾ ಋಷಿಗಳಿಗೆ ಆಯಾ ಸೂಕ್ತಗಳನ್ನು (ಪದ್ಯಗಳನ್ನು), ಪ್ರಾಚೀನ ಪರಂಪರೆಯು ಸುದೃಢವೂ ಸರಿಯಾದುದು ಆಗಿರದಾಗ, ದ್ರಷ್ಟತ್ವವನ್ನು ಆರೋಪಿಸುವುದು ಅಷ್ಟು ಸಮಂಜಸವೆನ್ನಿಸದು; ಆದರೆ ಇವೆಲ್ಲಾ ಅತಿ ಕ್ಷುಲ್ಲಕವಾದ ವಿವರಗಳು. ಹಾಗೇ, ನನ್ನ ದೃಷ್ಟಿಯಂತೆ, ಹೆಚ್ಚಾಗಿ ಸೂಕ್ತಗಳನ್ನು ಸಾಲು ಸಾಲಾಗಿ ಅನುಕ್ರಮಗೊಳಿಸಿಟ್ಟದ್ದನ್ನೂ ಅವುಗಳ ಋಕ್ಕುಗಳನ್ನು ಕ್ರಮಾನುಸಾರವಾಗಿ ಹಾಗೂ

೧. ಬಾಯಿಪಾಠ ಮಾಡಿ ವೇದವನ್ನು ಕಲಿತವರು "ಏಕಃ ಶಬ್ದಃ ಸುಪ್ರಯುಕ್ತಃ ಸಮ್ಯಗ್‌ಜ್ಞಾತಃ ಸ್ವರ್ಗೇಲೋಕೇ ಕಾಮದುಗ್‌ಭವತಿ" ಎಂದು ನಂಬಿದವರಾಗಿದ್ದರು - ಅನುವಾದಕ

ಸಂಪೂರ್ಣವಾಗಿ ಕೊಟ್ಟಿರುವುದನ್ನೂ ಪ್ರಶ್ನಿಸಲು (ಅಥವಾ ಸಂದೇಹಿಸಲು) ನಮಗೆ ಯಾವ ಸಮರ್ಥ ಕಾರಣವೂ ಇಲ್ಲ. ಇದಕ್ಕೆ ಅಪವಾದಗಳೆಲ್ಲಾದರೂ ದೊರಕಿದ್ದೇ ಆದರೆ ಅವು ಸಂಖ್ಯೆಯಿಂದಲೂ ಪ್ರಾಮುಖ್ಯದಿಂದಲೂ ತೀರಾ ಅವಗಣನೀಯ ಕ್ಷುಲ್ಲಕ. ಕೆಲವು ಸೂಕ್ತಗಳು ನಮಗೆ ಅಸಮನ್ವಿತವೆಂದು ತೋರಿದಾಗ ಅವುಗಳು ನಮಗೆ ದುರ್ಜ್ಞೇಯವಾಗಿವೆ ಎಂದಿಷ್ಟೇ ತಿಳಿಯಬೇಕು. ಒಮ್ಮೆ ಅವುಗಳ ತಾತ್ಪರ್ಯದ ಸೂಚನೆ ದೊರೆತು ಬಿಟ್ಟರೆ ಅವು ತಮ್ಮ ರಚನೆಯಲ್ಲೂ ವಿಚಾರದಲ್ಲೂ ಭಾಷೆಯಲ್ಲೂ ಮತ್ತು ಛಂದೋಲಯ ಬದ್ಧತೆಯಲ್ಲೂ[೧] ಪರಿಪೂರ್ಣವಾದ ಇಡಿಗಳು ಎಂಬುದು ಗೊತ್ತಾಗಿ ಬಿಡುತ್ತದೆ. ವೇದಾರ್ಥ ಮಾಡಲು ನಾವಿಳಿದಾಗ, ಅದಕ್ಕಾಗಿ ನಾವು ಪ್ರಾಚೀನ ಭಾರತೀಯ ವಿದ್ವತ್ತೆಯ ನೆರವಿಗೆಳೆಸಿದಾಗ, ಬಹಳ ಜಾಗ್ರತೆ ತಾಳಬೇಕೆಂದು ತಿಳಿದು ಬರುತ್ತದೆ. ಏಕೆಂದರೆ, ಅಭಿಜಾತ ಪಾಂಡಿತ್ಯದ ಆದಿದಶೆಯಲ್ಲಿಯೇ ವೇದದ ಕರ್ಮಪ್ರಧಾನತೆಯು ಜನಮನದಲ್ಲಿ ಪ್ರಭಾವಿಯಾಗಿ ಬಿಟ್ಟಿತ್ತು. ಆಗಲೇ ಶಬ್ದಗಳ, ಪಂಕ್ತಿಗಳ, ಪೂರ್ವಕಥಾ ಸೂಚನೆಗಳ ಮತ್ತು ವಿಚಾರ ರಚನೆಗಿದ್ದ ಸೂಚಕಗಳ ಮೂಲಾರ್ಥಗಳು ಮರೆತು (ಕಳೆದು) ಹೋಗಿದ್ದವು ಅಥವಾ ಮಸುಕಾಗಿ ಹೋಗಿದ್ದವು ; ಅಷ್ಟೇ ಅಲ್ಲ-ಆ ವಿದ್ವಾಂಸರಲ್ಲಿ ವೇದರ್ಷಿಗಳ ದಿವ್ಯ ಪ್ರತಿಭೆಯೂ ಇರಲಿಲ್ಲ, ಆಧ್ಯಾತ್ಮಿಕ ಅನುಭೂತಿಯೂ ಇರಲಿಲ್ಲ. ಅವುಗಳಿದ್ದಿದ್ದರೆ ಆ ಕಳೆದು ಹೋದ ರಹಸ್ಯದಲ್ಲಿ ಅರ್ಧದಷ್ಟನ್ನಾದರೂ ಮರಳಿ ಪಡೆಯಬಹುದಾಗಿತ್ತು. ಅಂಥ ಕ್ಷೇತ್ರದಲ್ಲಿ ಬರಿ ಪಾಂಡಿತ್ಯ ಎಂಬುದು-ಅದರಲ್ಲೂ ಅದು ವಿಲಕ್ಷಣವಾದ ಪಂಡಿತಂಮನ್ಯತೆಯಿಂದ ತುಂಬಿದ್ದಾಗ-ಮಾರ್ಗದರ್ಶಕವಾಗುವುದಕ್ಕಿಂತ ಹೆಚ್ಚಾಗಿ ಮರುಳ್ಗೊಳಿಸುವ ವಸ್ತುವಾಗುವುದು ಸಹಜ.

ಬಹಳ ನೆರವೀವ ಯಾಸ್ಕರ ನಿರುಕ್ತ (ನಿಘಂಟು)ದಲ್ಲಿ ಭಿನ್ನವಾದ ಮೌಲ್ಯವುಳ್ಳ ಎರಡು ಅಂಶಗಳನ್ನು ಬೇರ್ಪಡಿಸಿ ನೋಡಬೇಕು. ಯಾಸ್ಕನು ಕೋಶಕಾರನಾಗಿ ವೈದಿಕ ಶಬ್ದಗಳ ವಿವಿಧ ಅರ್ಥಗಳನ್ನು ಕೊಡುವಾಗ ಅವನ ಆಧಾರ ಬಲವು ಬಹಳ ಉನ್ನತಬಾದುದು ಮತ್ತು ಅವನು ಕೊಡುವ ನೆರವು ಪ್ರಥಮ ಪ್ರಾಮುಖ್ಯವುಳ್ಳದ್ದು. ಅವನ ಹತ್ತಿರ ಎಲ್ಲಾ ಹಳೆಯ ಪದಗಳ ಅರ್ಥಗಳ ಸಂಗ್ರಹವಿದ್ದಿತೆಂದು ತೋರುವುದಿಲ್ಲ. ಏಕೆಂದರೆ, ಕಾಲವಶದಿಂದಲೂ ಬದಲಾವಣೆಯಿಂದಲೂ ಬಹಳಷ್ಟು ಪದಗಳ ಅರ್ಥಗಳು ಅಳಿಸಿ ಹೋಗಿದ್ದವು ಮತ್ತು ವೈಜ್ಞಾನಿಕ ಭಾಷಾ ಶಾಸ್ತ್ರದ ಅಭಾವದಲ್ಲಿ ಅವುಗಳನ್ನು ಪುನಃ ಪಡೆಯಲು ಸಾಧ್ಯವಾಗಲಿಲ್ಲ. ಆದರೆ ಬಹಳಷ್ಟನ್ನು ಪರಂಪರೆಯು ಉಳಿಸಿಕೊಂಡು ಬಂದಿತ್ತು. ಈ ಪರಂಪರೆಯನ್ನಾಧರಿಸಿ ಯಾಸ್ಕನು ಉಳಿಸಿಕೊಳ್ಳುವಲ್ಲಿ ಅವನು ವೈಯಾಕರಣನ ವಿಲಕ್ಷಣ ಪ್ರತಿಭೆಯನ್ನು ಬಳಸದಿದ್ದಾಗ-ತಾನು ಹೇಳುವ ಪರ್ಯಗಳಿಗೆ ಯಾವಾಗಲೂ ಅನ್ವಯಿಸುತ್ತವೆ ಎಂದು ನಮಗೆನ್ನಿಸದಿದ್ದಾಗಲೂ ಅವನು ಪದಗಳಿಗೆ ಕೊಟ್ಟ ಅರ್ಥಗಳನ್ನು ಸರಿಯಾದ ಭಾಷಾ ಶಾಸ್ತ್ರಕ್ಕೆ ಸಾಧ್ಯವಾದ ಅರ್ಥಗಳೆಂದು ದೃಢಪಡಿಸಬಹುದಾಗಿದೆ. ಆದರೆ ಅವನ ನೈರುಕ್ತಕತೆಯು ಅವನ ಕೋಶಕಾರತ್ವಕ್ಕೆ ಸರಿಗಟ್ಟಲಾರದು. ವೈಜ್ಞಾನಿಕ ವ್ಯಾಕರಣವು ಮೊಟ್ಟ ಮೊದಲು ಭಾರತೀಯ ವಿದ್ಯಾಕ್ಷೇತ್ರದಲ್ಲಿ ವೃದ್ಧಿ ಹೊಂದಿತು ; ಆದರೆ ಸರಿಯಾದ ಭಾಷಾ ಶಾಸ್ತ್ರವು ಆಧುನಿಕ ಸಂಶೋಧನೆಯಿಂದಲೇ ರೂಪುಗೊಂಡದ್ದನ್ನು ನಾವು ಗ್ರಹಿಸಬೇಕು. ಯುರೋಪಿನಲ್ಲಾಗಲಿ, ಭಾರತದಲ್ಲಾಗಲಿ ೧೯ ನೆಯ ಶತಮಾನದವರೆಗೂ ನೈರುಕ್ತಕರು ಬಳಸುತ್ತಾ ಬಂದ ಪ್ರತಿಭೆಯ

---

೧. ವೇದ ಮಂತ್ರಗಳ ಛಂದಸ್ಸಿಗೆ ಉದಾತ್ತಾದಿ ಏರಿಳಿತದ ಸಾಂಗೀತಿಕ ಸ್ವರಭಾರವುಳ್ಳ ಪದ ಸಂಘಟನೆ ಇರುತ್ತದೆ. - ಅನುವಾದಕ

ವಿಕಟ ಪ್ರತಾಪವನ್ನಾಧರಿಸಿದ ಪದ್ಧತಿಗಳಿಗಿಂತ ಹೆಚ್ಚಿನ ಮನಸ್ವಿ ಊಹೆಗಳೂ ವಿಧಿಬಾಹಿರ ಕಲ್ಪನೆಗಳೂ ಮತ್ತೆಲ್ಲೂ ದೊರಕಲಾರವು. ಯಾಸ್ಕನೂ ಈ ಪದ್ಧತಿಯನ್ನು ಹಿಡಿದಾಗ ನಾವು "ನಿನ್ನ ದಾರಿ ಬೇರೆ, ನಮ್ಮ ದಾರಿ ಬೇರೆ" ಎಂದು ಹೇಳಿ ಅವನಿಂದ ಪೂರ್ತಿಯಾಗಿ ದೂರ ಸರಿಯಬೇಕಾಗುತ್ತದೆ. ವಿಶಿಷ್ಟ ಪದ್ಯಗಳ ಅರ್ಥವಿವರಣೆಯನ್ನು ಕೊಟ್ಟಾಗಲೂ ಅವನು ಮುಂದೆ ಬಂದ ಸಾಯಣಾಚಾರ್ಯನ ವಿದ್ವತ್ತೆಯು ಕೊಟ್ಟ ಅರ್ಥವಿವರಣೆಗಿಂತ ಹೆಚ್ಚಾಗಿ ನಮ್ಮನ್ನು ಸಮಾಧಾನಪಡಿಸಿದನು ಎಂದು ಕೂಡಾ ಹೇಳಲು ಸಾಧ್ಯವಿಲ್ಲ.

ವೇದಾರ್ಥ ಹೇಳಲು ಹೊರಟ ಇತರ ಮುಖ್ಯ ಆಧಾರ ಗ್ರಂಥಗಳೊಡನೆ ಪ್ರಾರಂಭಿಸಿದ ಯಾಸ್ಕನ ನಿರುಕ್ತವು ಅನನ್ಯ ಜೀವಂತ ವೈದುಷ್ಯದ ಕಾರ್ಯದ ಆರಂಭ ಕಾಲವೆನ್ನಬಹುದಾದರೆ, ಸಾಯಣನ ಭಾಷ್ಯವು ಆ ಕಾಲಾವಧಿಯ ಅಂತಿಮ ಗ್ರಂಥವೆಂದು ಹೇಳಬಹುದು. ನಿಘಂಟುವು ಭಾರತೀಯ ಮನೋಬುದ್ಧಿಯ ಪ್ರಾಚೀನ ಸತ್ವವು ಪ್ರಜ್ವಲಿಸುತ್ತಿದ್ದಾಗ ಸಂಗ್ರಹೀತವಾಯಿತು. ಆಗ ಅದು ತನ್ನ ಇತಿಹಾಸ ಕಾಲಪೂರ್ವದ ಲಾಭಗಳನ್ನು ಹೊಸ ಅನನ್ಯತೆಯ ಸ್ಫೋಟಕ್ಕೆ ವಿಷಯವನ್ನಾಗಿ ತೆಗೆದುಕೊಂಡಿತ್ತು. ಮಹಾಮದದ ವಿಜಯದ ಅನಿರೀಕ್ಷಿತ ಹೊಡೆತದಿಂದ ಅಭಿಜಾತ ಪರಂಪರೆಯು ತಾನು ಮೊರೆಹೊಕ್ಕು ನೆಲೆನಿಂತ ದಕ್ಷಿಣ ಭಾರತದ ಕೇಂದ್ರದಲ್ಲಿ ತನ್ನ ಸಂಸ್ಕೃತಿ ಒಡೆದು ಹೋಗಿ ಪ್ರಾದೇಶಿಕ ತುಣುಕುಗಳಾಗಿ ಸ್ಥಾನಚ್ಯುತಿ ಹೊಂದುವ ಮೊದಲು ನಮಗೆ ಬಿಟ್ಟು ಹೋದ ಕೊನೆಯ ವೈದಿಕ ಮಹಾಗ್ರಂಥವೆಂದರೆ ಸಾಯಣ ಭಾಷ್ಯವೊಂದೇ ಎನ್ನಬಹುದು. ಅಂದಿನಿಂದ ಈಚೆಗೆ ಹೊಸ ಹುಟ್ಟಿಗಾಗಿ, ಹೊಸ ಸಂಯೋಜನೆಗಾಗಿ ಬಲಿಷ್ಠವೂ, ಅನನ್ಯವೂ ಆದ ಪ್ರಯತ್ನಗಳು ಬುಗ್ಗೆಯಾಗಿ ಚಿಮ್ಮಿ ನಡೆದರೂ ಅವೆಲ್ಲವೂ ಜೆಲ್ಲಾಪಿಲ್ಲಿಯಾದವು-ಗಳಾಗಿವೆ. ಅವುಗಳಾವುವೂ ಸಾಯಣ ಭಾಷ್ಯದ ಮುಂದೆ ತಲೆಯೆತ್ತಿ ನಿಲ್ಲಲಾರವು ; ಸಾಯಣಭಾಷ್ಯದ ಸರ್ವಸಾಧಾರಣತೆ ಬೃಹದ್‌ಗಾತ್ರವತ್ತೆ ಮತ್ತು ಮಹಾಸ್ಮಾರಕ ಸೌಧದ ಸ್ವರೂಪಗಳು ಆಮೇಲೆ ಎಲ್ಲೂ ಹುಟ್ಟಲಾಗದಂತಾಯಿತು.

ಗತಕಾಲದ ನಮ್ಮ ಈ ಪಿತ್ರಾರ್ಜಿತ ಸ್ವತ್ತುಗಳ ಉನ್ನತ ಗುಣಗಳೆಲ್ಲವು ಸುಸ್ಪಷ್ಟ. ತನ್ನ ಕಾಲದ ಅತಿ ದೊಡ್ಡ ವಿದ್ವಾಂಸರ ನೆರವಿನಿಂದ ಸಾಯಣನು ರಚಿಸಿದ ಈ ವೇದಭಾಷ್ಯವು ವೈದುಷ್ಯದ ಅಪಾರ ಶ್ರಮವನ್ನು ಪ್ರತಿನಿಧಿಸುತ್ತದೆ. ಯಾವ ಒಂದೇ ಮಿದುಳೂ ಅಂದು ಅಂಥ ವಿದ್ವತ್ತೆಯ ಮೇಲೆ ಒಡೆಯತನವನ್ನು ನಡೆಸಲು ಸಾಧ್ಯವಾಗುತ್ತಿರಲಿಲ್ಲ. ಆದರೂ ಆ ಭಾಷ್ಯವು ತನ್ನ ಮೇಲೆ ಬಿತ್ತಲಾದ ಸಮೀಕರಣದ ಮುದ್ರೆಯ ಗುರುತನ್ನು ತೋರಿಸುತ್ತದೆ. ವಿವರಗಳಲ್ಲಿ ಹೊಂದಿಕೆಯ ಅಭಾವ ಬಹಳ ಕಾಣಿಸಿದರೂ ಸುಸ್ಪಷ್ಟ ಶೈಲಿಯಿಂದ ಬರೆಯಲಾದ-ಆದರೆ ಕ್ಲಿಷ್ಟವೂ ಸಾಹಿತ್ಯ ಪ್ರಸನ್ನತೆಯುಳ್ಳದ್ದೂ ಭಾರತೀಯ ಪರಂಪರೆಯಲ್ಲಿ ಅಸಾಧ್ಯವೂ ಎನ್ನಿಸುವ ಸಾಯಣ ಭಾಷ್ಯವು - ಸರ್ವ ಸಾಮಾನ್ಯವಾಗಿ ಒಟ್ಟಿನ ಸಾಮಂಜಸ್ಯವನ್ನು ಹೊಂದಿದೆ. ಎಲ್ಲೆಲ್ಲೂ ಅದರಲ್ಲಿ ಕ್ಲಿಷ್ಟ ಪಾಂಡಿತ್ಯದ ಪ್ರದರ್ಶನವಿಲ್ಲ. ಪದ್ಯದ ದುರ್ಗಮಾಂಶಗಳೊಡನೆ ಮಾಡಿದ ಹೋರಾಟವನ್ನು ಬುದ್ಧಿವಂತಿಕೆಯಿಂದ ಬಚ್ಚಿಡಲಾಗಿದೆ ; ಮತ್ತು ಭಿನ್ನಾಭಿಪ್ರಾಯವುಳ್ಳವರ ಮೇಲೂ ಅಕೃತ್ರಿಮ ಅಧಿಕಾರವಾಣಿಯಾಗಿ ಅದು ಪ್ರಭಾವ ಬೀರುತ್ತದೆ. ಅದರ ಸ್ಪಷ್ಟವೂ ಸೂಕ್ಷ್ಮವೂ ಖಚಿತವೂ ಆದ ಶೈಲಿಯೇ ಅಂಥ ಪ್ರಭಾವಕ್ಕೆ ಕಾರಣ. ಯುರೋಪಿನ ಮೊಟ್ಟಮೊದಲ ವೈದಿಕ ವಿದ್ವಾಂಸರು ಸಾಯಣನ ಅರ್ಥವಿವರಣೆಯ ವಿಚಾರಗರ್ಭಿತತೆಯನ್ನು ಮೆಚ್ಚಿದರು.

ಆದರೂ, ಸಾಯಣಕೃತ ವೇದದ ಬಾಹ್ಯಾರ್ಥ ಕೂಡಾ, ಅವನು ಹಿಡಿದ ಪದ್ಧತಿ ಮತ್ತು ಫಲಿತಾಂಶಗಳ ದೃಷ್ಟಿಯಿಂದ, ಸರ್ವಥಾ ಗ್ರಾಹ್ಯ ಎಂದು ಸ್ವೀಕರಿಸುವುದು ಕಷ್ಟ. ಅವನು ಭಾಷಾ ಸ್ವಾಚ್ಛಂದ್ಯವನ್ನು ವಹಿಸಿರುವುದಲ್ಲದೆ, ರಚನಾ ಸ್ವಾತಂತ್ರ್ಯವನ್ನೂ ವಹಿಸಿದ್ದಾನೆ. ಇದು ಅನವಶ್ಯಕ ಮತ್ತು ಕೆಲವು ಸಲ ಅಶ್ರದ್ಧೇಯ ಅಲ್ಲದೆ, ಕೆಲವು ಸಲ ಆಶ್ಚರ್ಯಕರವಾದ ವಿಸಾಂಗತ್ಯದಿಂದ ಸಾಮಾನ್ಯ ವೈದಿಕ ಪದಗಳನ್ನು ವ್ಯಾಖ್ಯಾನಿಸಿದ್ದೂ ವೈದಿಕ ಸೂತ್ರ ವಿನ್ಯಾಸಗಳನ್ನು ವಿಪರ್ಯಸ್ತಗೊಳಿಸಿದ್ದೂ ಅವನ ನಿಗಮನಗಳನ್ನು ಒಪ್ಪಲಾರದಂತೆ ಮಾಡಿವೆ. ಇವು ವಿವರಗಳಲ್ಲಿ ಕಂಡುಬರುವ ನ್ಯೂನತೆಗಳು. ಅವನಿಗೆ ದೊರೆತ ವಸ್ತುವಿನ ಸ್ವರೂಪದ ದೆಸೆಯಿಂದ ಬಹುಶಃ ಈ ನ್ಯೂನತೆಗಳನ್ನು ಅವನು ಪರಿಹರಿಸಿಕೊಳ್ಳಲಾರದಾದನೆಂದು ತೋರುತ್ತದೆ. ಆದರೆ ಅವನು ಕರ್ಮಕಾಂಡದ ಸೂತ್ರ ವಿನ್ಯಾಸಗಳ ಮೋಹದಿಂದ ಅದಕ್ಕೇ ಅನುಗುಣವಾಗುವಂತೆ ಅರ್ಥವನ್ನು ಸಂಕುಚಿತಗೊಳಿಸುತ್ತಾ ಹೋಗಿರುವುದು ಅವನು ಮಾಡಿದ ತಪ್ಪುಗಳ ಕೇಂದ್ರಬಿಂದುವೆನ್ನಿಸುತ್ತದೆ. ಆದ್ದರಿಂದ ನಮ್ಮ ಪ್ರಾಚೀನ ಶ್ರುತಿಗಳಿಗೆ ಹೊಂದುವ ಅತ್ಯುನ್ನತ ಧ್ವನಿಶಕ್ತಿಗೂ ಪ್ರಾಧಾನ್ಯಕ್ಕೂ ಬೇಕಾದ ಅನೇಕಾನೇಕ ಸೂಚನಾಂಶಗಳನ್ನು ಅವನು ಕಳೆದುಕೊಳ್ಳಬೇಕಾಯಿತು. ಈ ಸಮಸ್ಯೆಯು ವೇದದ ಅಂತರರ್ಥದಷ್ಟೇ ಕುತೂಹಲಕಾರಿ-ಯಾಗಿದೆ. ಇಂಥ ಪದ್ಧತಿಯ ವ್ಯಾಖ್ಯಾನದ ಫಲವಾದರೂ ಏನು? ಅದನ್ನು ಒಪ್ಪಿಕೊಂಡರೆ, ಅದರಲ್ಲಿ ಬರುವ ಋಷಿಗಳ ಪಾತ್ರ, ಅವರ ವಿಚಾರ, ಅವರ ಸಂಸ್ಕೃತಿ ಮತ್ತು ಅವರ ಗೊತ್ತುಗುರಿಗಳು ಎಷ್ಟು ಸಂಕುಚಿತವಾಗಿ ತೋರುತ್ತವೆ ಎಂದರೆ ಎಷ್ಟು ಬಡಪಾಯಿಗಳಾಗಿ ಕಾಣಿಸುತ್ತವೆ ಎಂದರೆ ವೇದಕ್ಕೆ ಪ್ರಾಚೀನರು ಕೊಟ್ಟ ಗೌರವಾದರಗಳು, ಅದರ ಪವಿತ್ರ ಆಧಾರವತ್ತೆ, ಅದರ ದಿವ್ಯಖ್ಯಾತಿ, ಇವೆಲ್ಲವೂ ಅರ್ಥಹೀನವೆನ್ನಬೇಕಾಗಿ ಬರುತ್ತದೆ ಅಥವಾ ಅವೆಲ್ಲಾ ಮೂಲದ ಸ್ಖಾಲಿತ್ಯವೊಂದರಿಂದ ಹೊರಟ ಅಪ್ರಶ್ನಾರ್ಹವಾದ ಪರಂಪರಾಗತ ಅಂಧಶ್ರದ್ಧೆ ಎಂಬ ವಿವರಣೆಯನ್ನು ಕೊಡಬೇಕಾಗಿ ಬರುತ್ತದೆ.

ಸಾಯಣ ಭಾಷ್ಯದಲ್ಲಿ ಇವುಗಳನ್ನು ಮೀರಿದ ಇತರ ಮುಖಗಳೂ ಇತರಾಂಶಗಳೂ ಇವೆ. ಆದರೆ ಅವೆಲ್ಲಾ ಮುಖ್ಯ ತಾತ್ಪರ್ಯಕ್ಕೆ ಒಳಪಟ್ಟವುಗಳಾಗಿವೆ. ಭೂತಕಾಲದಿಂದ ಅವರ ಕಾಲದವರೆಗೂ ಉಳಿದುಕೊಂಡು ಬಂದಿದ್ದ ಹಾಗೂ ಅನೇಕ ಬಾರಿ ಪರಸ್ಪರ ವಿರುದ್ಧವಾಗಿದ್ದ ರಾಶಿಗಟ್ಟಲೆ ಊಹೆಗಳನ್ನೂ ಸಂಪ್ರದಾಯವನ್ನೂ ಆಧರಿಸಿಯೇ ಸಾಯಣನೂ ಅವನ ಸಹಾಯಕರೂ ಕೆಲಸ ಮಾಡಬೇಕಾಗಿತ್ತು. ಅವುಗಳಲ್ಲಿ ಕೆಲವಕ್ಕೆ ಅವರು ಔಪಚಾರಿಕ ಅಂಟನ್ನು ಹಚ್ಚಬೇಕಾಯಿತು, ಮತ್ತೆ ಕೆಲವಕ್ಕೆ ಚಿಕ್ಕ ಪುಟ್ಟ ಕ್ಷಮಾನುಗ್ರಹವನ್ನು ತೋರಲೇಬೇಕೆಂಬ ಭಾವನೆ ಅವರಲ್ಲುಂಟಾಯಿತು. ಸಾಯಣನ ಕೃತಿಯ ಸುದೀರ್ಘಕಾಲದ ಅಖಂಡಿತ ಆಧಾರ ಸಂಪನ್ನತೆಗೆ ಅವನು ಹಿಂದಿನ ಅನಿಶ್ಚಿತತೆಯಿಂದ ಅಥವಾ ಗೊಂದಲದಿಂದ ಒಂದು ಸುದೃಢವೂ ಸುಸಂಬದ್ಧವೂ ಆದ ವೇದ ವ್ಯಾಖ್ಯಾನದ ಪ್ರಕಾರವನ್ನು ರೂಪಿಸಿದ ಕೌಶಲ್ಯವೇ ಕಾರಣವೆಂದು ಹೇಳಬಹುದಾಗಿದೆ.

ಶ್ರುತಿಯ ಪಾವಿತ್ರ್ಯದ ನಿಜವಾದ ಆಧಾರವೆನ್ನಿಸಿದ್ದ ಹಳೆಯ ಆಧ್ಯಾತ್ಮಿಕ, ತಾತ್ವಿಕ ಅಥವಾ ಮಾನಸ ಶಾಸ್ತ್ರೀಯ ವ್ಯಾಖ್ಯೆಗಳ ಅವಶೇಷಗಳು ನಮಗೆ ಹೆಚ್ಚಿನ ಆಸಕ್ತಿಯನ್ನು ಉಂಟು ಮಾಡುವಂಥವುಗಳು. ಅವುಗಳ ವ್ಯಾಖ್ಯೆಯನ್ನೇ ಸಾಯಣನು ಮೊದಲು ಮಾಡಲು ಕೈಗೆತ್ತಿಕೊಳ್ಳ-

ಬೇಕಾಯಿತು. ಅವು ಆ ಕಾಲದ ಪ್ರಚಲಿತ ಅಥವಾ ಸಾಂಪ್ರದಾಯಿಕ[೧] ಅಭಿಪ್ರಾಯದಲ್ಲಿ ಸೇರಿಹೋಗಿದ್ದಾಗ ಮಾತ್ರ ಸಾಯಣ ಅವುಗಳನ್ನು ಸ್ವೀಕರಿಸುತ್ತಾನೆ. ಆದರೆ ಅವು ಅವನ ಭಾಷ್ಯದಲ್ಲಿ ಅಪವಾದಾತ್ಮಕ ಅಂಶಗಳಾಗಿವೆ ; ಅವು ಪ್ರಾಮುಖ್ಯದಲ್ಲೂ ಗಾತ್ರದಲ್ಲೂ ತೀರಾ ಚಿಲ್ಲರೆಗಳಾಗಿ ತೋರುತ್ತವೆ. ವಿರಳವಾಗಿ ಅವನು ಹೆಚ್ಚು ರೂಢಿಯಲ್ಲಿಲ್ಲದ ಅರ್ಥವ್ಯಾಖ್ಯೆಗಳಿಗೆ ಆನುಷಂಗಿಕ ಅಥವಾ ಅನುಗ್ರಾಹಿಕ ಸ್ಥಾನವನ್ನು ಕೊಟ್ಟದ್ದುಂಟು. ಉದಾಹರಣೆ : ಮಾನವನ ಅಪೇಕ್ಷೆಗಳನ್ನೂ ಆಕಾಂಕ್ಷೆಗಳನ್ನು ವೃತ್ರನು ತಡೆಹಿಡಿಯುವ ಪ್ರಚ್ಛಾದಕ - ಎಂದು ಹೇಳಿದರೂ ಅದನ್ನವನು ಒಪ್ಪಲಾರ. ಏಕೆಂದರೆ, ಸಾಯಣನ ಪಾಲಿಗೆ ವೃತ್ರನು ಶುದ್ಧ ಶತ್ರು ಅಥವಾ ಭೌತಿಕ ಮೇಘರಾಕ್ಷಸ ಅವನು ಮಳೆ ಬಾರದಂತೆ ಮಾಡುವಾತನು ; ಅವನನ್ನು ಮಳೆಗಾರನು ಚುಚ್ಚಬೇಕು.

ಎರಡನೆಯದು ಐತಿಹ್ಯ ಅಥವಾ ಪೌರಾಣಿಕ ಅಂಶ - ಆಳವಾದ ಅಂತರರ್ಥವನ್ನು ಬಿಟ್ಟು ಸಾಂಕೇತಿಕ ಸಂಗತಿಯನ್ನುಳಿದು, ಅವುಗಳ ಹೊರರೂಪಗಳಲ್ಲಿ ಬಣ್ಣಿಸಲಾದ ದೇವತೆಗಳ ಬಗೆಗಿನ ಮಿಥ್ಯಾಕಥೆ ಹಾಗೂ ಸಾದಾ ಕಥೆಗಳು ಎಲ್ಲ ಪುರಾಣಗಳನ್ನೂ[೨] ಸಮರ್ಥಿಸುವ ಸತ್ಯವಾಗಿರುವುದು.

ಮೂರನೆಯದು ಬ್ರಾಹ್ಮಣಗಳಲ್ಲಿ ಅಥವಾ ಮುಂದಿನ ಪರಂಪರೆಯಲ್ಲಿ ಬಂದ ರಾಜರ ಹಾಗೂ ಋಷಿಗಳ ಬಗೆಗಿನ ಐತಿಹ್ಯ ಮತ್ತು ಇತಿಹಾಸಗಳು. ವೇದದಲ್ಲಿಯ ಅಸ್ಪಷ್ಟ ಪೂರ್ವಕಥೆಗಳ ವಿವರಣೆಯನ್ನವು ಕೊಡುತ್ತವೆ. ಈ ಅಂಶವನ್ನು ತೆಗೆದುಕೊಳ್ಳುವಲ್ಲಿ ಸಾಯಣನು ಸ್ವಲ್ಪ ಹಿಂದೆ ಮುಂದೆ ನೋಡುತ್ತಾನೆ. ಬಹಳ ಸಾರಿ ಅವನು ಅದನ್ನು ಸೂಕ್ತಗಳ ಸರಿಯಾದ ವ್ಯಾಖ್ಯಾನಗಳೆಂದು ಸ್ವೀಕರಿಸುತ್ತಾನೆ ; ಕೆಲವು ಸಲ ಮಾತ್ರ ತನ್ನ ಬೌದ್ಧಿಕ ಒಲವು ಹೆಚ್ಚಾಗಿರುವ ಪರ್ಯಾಯಾರ್ಥಗಳನ್ನು ಕೊಡುತ್ತಾನೆ ; ಆದರೆ ಉಭಯಾಧಾರಗಳ ನಡುವೆ ನೇತಾಡುತ್ತಾನೆ.

ಇನ್ನೂ ಹೆಚ್ಚಿನದೆಂದರೆ, ಪ್ರಕೃತಿಪೂಜಾವಾದದ ವ್ಯಾಖ್ಯಾನ ಪದ್ಧತಿ. ಸ್ಪಷ್ಟ ಅಥವಾ ಪಾರಂಪರಿಕ ದೇವತೈಕೀಕರಣ ಮಾಡುವುದನ್ನಿಲ್ಲಿ ಕಾಣಬಹುದು. ಇಂದ್ರ, ಮರುದ್ ಗಣ, ಅಗ್ನಿತ್ರಯ, ಸೂರ್ಯ, ಉಷೆಗಳು ಪ್ರಾಕೃತಿಗಳೆಂದು ಅವುಗಳನ್ನು ಇದ್ದ ಹಾಗೇ ಇಟ್ಟರೆ, ಮಿತ್ರ ಅಂದರೆ ಹಗಲು, ವರುಣ ಎಂದರೆ ರಾತ್ರಿ, ಅರ್ಯಮನ್ ಮತ್ತು ಭಗ ಎಂದರೆ ಸೂರ್ಯ ಹಾಗೂ ಋಭುಗಳೆಂದರೆ ಕಿರಣಗಳು ಎಂದು ಅರ್ಥೈಸಲಾಗಿದೆ. ಯುರೋಪಿಯನ್ ವಿದ್ವತ್ತೆಯು ಬಹುವಿಸ್ತಾರವಾಗಿ ಪ್ರಚುರಗೊಳಿಸಿದ ಪ್ರಕೃತಿ ಪೂಜಾ ವಾದದ ಬೀಜಗಳನ್ನು ನಾವಿಲ್ಲಿ ಕಾಣಬಹುದು. ಹಳೆಯ ಭಾರತೀಯ ವಿದ್ವಾಂಸರು ತಮ್ಮ ತಾರ್ಕಿಕ ಊಹೆಗಳಲ್ಲಿ ಈ ಸ್ವಾತಂತ್ರ್ಯವನ್ನು ತೋರಿಸಿಲ್ಲ, ಇಷ್ಟು ಪದ್ಧತಿ ಪ್ರಕಾರವಾಗಿ ಸೂಕ್ಷ್ಮ ವಿವರಗಳನ್ನು ಹೇಳಹೋಗಿಲ್ಲ. ಆದರೂ ಯುರೋಪಿಯನ್ನರ ತುಲನಾತ್ಮಕ ಪುರಾಣ ಮೀಮಾಂಸಾ ಶಾಸ್ತ್ರಕ್ಕೆ ಸಾಯಣ ಭಾಷ್ಯವೇ ನಿಜವಾದ ಮೂಲವಾಗಲು ಈ ಅಂಶವೇ ಕಾರಣ.

ಆದರೆ ಸಾಯಣ ಭಾಷ್ಯವನ್ನು ಉದ್ದಕ್ಕೂ ವ್ಯಾಪಿಸಿರುವುದು ಕರ್ಮಕಾಂಡದ ಕಲ್ಪನೆ ; ಅದು ಸತತವಾದ ರಾಗ - ಅದರಲ್ಲಿ ಮಿಕ್ಕ ಎಲ್ಲವೂ ಮುಳುಗಿ ಹೋಗುತ್ತವೆ. ತತ್ವಶಾಸ್ತ್ರೀಯ

೧. ಸಂಪ್ರದಾಯವೆಂಬ ಈ ಪದವನ್ನು ನಾನು ಶಿಥಿಲವಾಗಿ ಬಳಸಿದ್ದೇನೆ. ಅಭಿಪ್ರಾಯವು ಯಾವಾಗಲೂ ಸ್ವತಂತ್ರವಾಗಿದ್ದ ಭಾರತದಲ್ಲಿ ಯುರೋಪೀಯ ಉಪಮತೀಯರು ಗ್ರಹಿಸುವ ಸಂಪ್ರದಾಯ ಅಸಂಪ್ರದಾಯ ಎಂಬ ಪದಗಳಿಗೆ ನಿಜವಾದ ಅನ್ವಯವೇ ಇಲ್ಲ.

೨. ಇಂದಿನ ಪುರಾಣಗಳೂ ಐತಿಹಾಸಿಕ ಮಹಾಕಾವ್ಯಗಳೂ ಹುಟ್ಟುವುದಕ್ಕಿಂತ ಬಹಳ ಕಾಲದ ಹಿಂದೆಯೇ ಪುರಾಣೇತಿಹಾಸಗಳು ವೈದಿಕ ಸಂಸ್ಕೃತಿಯ ಅಂಗಗಳಾಗಿದ್ದವೆನ್ನಲು ಸಾಕಷ್ಟು ಕಾರಣವಿದೆ.

ಪ್ರಸ್ಥಾನಗಳ ನಿಯಮ ಸೂತ್ರದಲ್ಲಿ - ಜ್ಞಾನದ ಅತ್ಯುನ್ನತ ಆಧಾರವೆಂದು ಸೂಕ್ತಗಳನ್ನು ಗಣಿಸಲಾಗಿದ್ದರೂ-ಕರ್ಮಕಾಂಡಕ್ಕೇ ಮೂಲತಃ ಸೂಕ್ತವು ಸಂಬಂಧಿಸಿದೆ ಎಂಬ ನಂಬಿಗೆಯಿದೆ. ಕರ್ಮವೆಂದರೆ, ಮುಖ್ಯವಾಗಿ, ವೈದಿಕ ಯಜ್ಞಗಳ ಸಮಾರಂಭಿಕ ಆಚರಣೆಯೆಂದೇ ತಿಳಿಯಲಾಗುತ್ತಿತ್ತು. ಸಾಯಣನು ಈ ಅಭಿಪ್ರಾಯವನ್ನು ಹೊತ್ತುಕೊಂಡೇ ಯಾವಾಗಲೂ ಹೆಣಗುತ್ತಾನೆ ; ಈ ಅಚ್ಚಿನಲ್ಲಿಯೇ ವೇದದ ಭಾಷೆಯನ್ನು ಎರಕ ಹೊಯ್ಯುತ್ತಾನೆ. ಸೂಕ್ತಗಳ ಸಹಜ ಪದಗಳನ್ನು ಸಮಾರಂಭಿಕ (ಸಮಾರಾಧನೀಯ)ವಾದ ಅನ್ನ, ಅರ್ಚಕ, ದಾತ, ಐಶ್ವರ್ಯ, ಸ್ತುತಿ, ಪ್ರಾರ್ಥನೆ, ವ್ರತ, ಯಾಗ ಎಂಬಂಥ ಅರ್ಥಗಳನ್ನು ಕೊಟ್ಟು ವಿವರಿಸುತ್ತಾ ಹೋಗಿದ್ದಾನೆ.

ಐಶ್ವರ್ಯ ಮತ್ತು ಆಹಾರ : ಇವುಗಳೊಳಗೆ ಆಸ್ತಿಗಳು, ಬಲ, ಶಕ್ತಿ, ಮಕ್ಕಳು, ಸೇವಕರು, ಬಂಗಾರ, ಕುದುರೆಗಳು, ದನಗಳು, ಜಯ, ಶತ್ರುಗಳ ಸಂಹಾರ ಮತ್ತು ಅವರ ಆಸ್ತಿಗಳನ್ನು ಲೂಟಿ ಮಾಡುವುದು ಮತ್ತು ಪ್ರತಿಸ್ಪರ್ಧಿಯಾದ ಮತ್ಸರಗ್ರಸ್ತ ದೋಷೋದ್ಘಾಟಕನ ನಾಶ-ಎಂಬೀ ಎಲ್ಲವೂ ಅಡಕವಾಗುತ್ತವೆ. ಇವೆಲ್ಲಾ ಅತ್ಯಂತ ಭೌತಿಕ ಸ್ವಾರ್ಥಸಾಧನೆಯ ವಿಷಯಗಳು ; ಇವೇ ಯಜ್ಞ-ಯಾಗಗಳ ಗುರಿ ಎಂದು ಸೂಚಿಸಲಾಗಿದೆ. ಸೂಕ್ತಗಳಾದ ಮೇಲೆ ಸೂಕ್ತಗಳನ್ನು ಈ ಪ್ರಕಾರ ಅರ್ಥೈಸಿರುವುದನ್ನು ಓದುತ್ತಾ ಹೋದರೆ ಗೀತೆಯಲ್ಲಿರುವ ತೋರಿಕೆಯ ವ್ಯಾಹತಿಯ ಅರ್ಥವಾಗುತ್ತದೆ. ಅದು ಒಂದೆಡೆ ವೇದವು ದಿವ್ಯಜ್ಞಾನವೇ[+] ಆಗಿದೆಯೆಂದರೆ, ಇನ್ನೊಂದೆಡೆ ಭೌತಿಕ ಶ್ರೀಮಂತಿಕೆ, ಅಧಿಕಾರ, ಭೋಗಗಳನ್ನೇ ಬೋಧಿಸುವವರ ರಂಗುರಂಗಿನ ಭಾಷೆಯ ವೇದವಾದವನ್ನು ಕರ್ಕಶವಾಗಿ ದೂಷಿಸುತ್ತದೆ.

ಸಾಯಣಭಾಷ್ಯದ ಅತ್ಯಂತ ದುರ್ದೈವಿ ಪರಿಣಾಮವೆಂದರೆ ವೇದಕ್ಕೆ ಹೇಳಬಹುದಾದ ಎಲ್ಲಾ ಅರ್ಥಗಳಲ್ಲಿ ಈ ಅತ್ಯಂತ ಕೀಳುಮಟ್ಟದ ಅರ್ಥಕ್ಕೆ ಅದನ್ನು ಆತ್ಯಂತಿಕವಾಗಿ ಹಾಗೂ ಅಧಿಕೃತವಾಗಿ ಕಟ್ಟಿ ಹಾಕಿರುವುದು. ಕರ್ಮಕಾಂಡ ಪ್ರಧಾನವಾದ ವೇದಾರ್ಥದ ಪ್ರಭಾವಿತ್ವವು ಭಾರತಕ್ಕೆ ಅದರ ಅತ್ಯುನ್ನತ ಶ್ರುತಿಯ ಜೀವಂತ ಬಳಕೆ ಮತ್ತು ಉಪನಿಷತ್ತುಗಳ ಸಮಗ್ರಾರ್ಥ ಪ್ರಕಟನೆಗೆ ಅಗತ್ಯವಾಗಿ ಅದರಲ್ಲಿರುವ ನಿಜವಾದ ಸೂಚಕತೆ ಇಲ್ಲದಂತೆ ಮಾಡಿತು. ಸಾಯಣ ಭಾಷ್ಯವು ಹಳೆಯ ಅಪಾರ್ಥವೇ ಆತ್ಯಂತಿಕ ಅರ್ಥವೆಂಬ ಮುದ್ರೆಯನ್ನೊತ್ತಿತು ; ಅನೇಕ ಶತಮಾನಗಳವರೆಗೆ ಆ ಮುದ್ರೆಯನ್ನು ಒಡೆಯುವುದು ಅಸಾಧ್ಯವಾಯಿತು. ಅದರ ಸೂಚನೆಗಳು-ಮತ್ತೊಂದು ನಾಗರಿಕತೆ ಹುಡುಕಿ ತೆಗೆದು ಅಭ್ಯಾಸ ಮಾಡ ಹೊರಟಾಗ - ಯುರೋಪಿಯನ್ನರ ಮನಸ್ಸಿನಲ್ಲಿ ಹೊಸ ಪ್ರಮಾದಗಳ ತಾಯ್ತಂದೆಗಳಾದವು.

ಸಾಯಣಭಾಷ್ಯವು ವೇದದ ಅಂತರಾರ್ಥಕ್ಕೆ ಜಡಿದ ಭದ್ರ ಬೀಗವಾಗಿ ಪರಿಣಮಿಸಿದ್ದರೂ ವೇದಾರ್ಥದ ಮುಂಗೋಣೆಯನ್ನು ತೆರೆಯಲು ಅನಿವಾರ್ಯವಾದ ಅದನ್ನೇ ಬಳಸಬೇಕಾಗುತ್ತದೆ. ಯುರೋಪಿಯನ್ ವಿದ್ವತ್ತೆಯ ಅಗಾಧ ಪರಿಶ್ರಮವೂ ಅದರ ಉಪಯುಕ್ತತೆಯನ್ನು ತುಂಬಿಕೊಡಲಾರದು. ಪ್ರತಿ ಹೆಜ್ಜೆಯಲ್ಲೂ ನಾವು ಅದರಿಂದ ಭಿನ್ನರಾದೇವು, ಆದರೆ ಪ್ರತಿ ಹೆಜ್ಜೆಯಲ್ಲೂ ಅದನ್ನು ಉಪಯೋಗಿಸದಿರಲಾರೆವು! ವೇದಾರ್ಥವನ್ನು ಪ್ರವೇಶಿಸಲು ಅದೊಂದು ಅಗತ್ಯ ಜಿಮ್ಮುಹಲಗೆ ಅಥವಾ ಮೆಟ್ಟಿಲು ಆದರೆ, ಮುಂದುವರಿದು ವೇದಾರ್ಥದ ಗರ್ಭಗುಡಿಯೊಳ ಹೋಗುವ ಇಚ್ಛೆ ನಮಗಿದ್ದರೆ, ಅದನ್ನು ಹಿಂದೆಯೇ ಬಿಡದೇ ಗತ್ಯಂತರವಿಲ್ಲ.

❖❖

---

+ ಗೀತೆ XV. ೧೫ ೨ ಗೀತೆ II. ೪೨

## ಅಧ್ಯಾಯ-೩

# ಆಧುನಿಕ ಸಿದ್ಧಾಂತಗಳು

ಕರ್ಮಕಾಂಡ ಪ್ರಧಾನವಾದ ವೇದ ವ್ಯಾಖ್ಯಾನವನ್ನು ಆತ್ಯಂತಿಕ ಪ್ರಮಾಣ ಎಂದು ಸಾಯಣನು ಮುದ್ರೆಯೊತ್ತಿ ಹೋದ ಅನಂತರ ಬಹಳ ಶತಮಾನಗಳು ಉರುಳಿದವು. ಆಮೇಲೆ ವಿದೇಶೀಯ ಸಂಸ್ಕೃತಿಗೊಮ್ಮೆ ಕುತೂಹಲ ಹುಟ್ಟಿದಾಗ ಆ ಅಧಿಕಾರ ಮುದ್ರೆಯು ಒಡೆದು ಹೋಯಿತು. ಈ ಪ್ರಾಚೀನ ಶ್ರುತಿಯನ್ನು ಒಂದು ಬಗೆಯ ಅಗಾಧ ಶ್ರಮ ವಹಿಸಿದ ವಿದ್ವತ್ತೆಯ ವಶಕ್ಕೆ ಒಪ್ಪಿಸಲಾಯಿತು. ಈ ಹೊಸ ವಿದ್ವತ್ತೆಯಾದರೂ ಕಲ್ಪನಾ ಶಕ್ತಿಯಲ್ಲಿ ಬಹಳ ಧೈರ್ಯಶಾಲಿ ; ವಿಕಲ್ಪನೆಗಳನ್ನು ಮಾಡುವುದರಲ್ಲಿ ವಿಲಕ್ಷಣ, ಆಶ್ಚರ್ಯಕರ ; ತನ್ನ ದೃಷ್ಟಿಯ ಪ್ರಕಾರ ಪ್ರಾಮಾಣಿಕ ; ಆದರೆ ಹಳೆಯ ಯೋಗಿ ಕವಿಗಳ ಪದ್ಧತಿಯನ್ನು ತಿಳಿದುಕೊಳ್ಳುವುದರಲ್ಲಿ ಅಪಾತ್ರ ಆಗಿತ್ತು. ಏಕೆಂದರೆ, ಅದರಲ್ಲಿ ಸಹಾನುಭೂತಿಯ ಅಭಾವವಿತ್ತು ; ಆ ಪ್ರಾಚೀನ ಮನಃ ಪ್ರಣಾಲಿ ಅದಕ್ಕೆ ಒಗ್ಗದಾಗಿತ್ತು. ಅದಕ್ಕೆ ಸೂಚಕ ಸಹಾಯಕಗಳಾವುವೂ ಇರಲಿಲ್ಲ. ವೈದಿಕ ರೂಪಕಗಳೂ ನೈದರ್ಶನಿಕ ಕಥೆಗಳೂ ಒಳಗೊಂಡಿದ್ದ ಆಧ್ಯಾತ್ಮಿಕ ಪರಿಸರ ಅಥವಾ ಬೌದ್ಧಿಕ ಆವರಣ ಆ ವಿದ್ವಾಂಸರ ಪ್ರದೇಶಕ್ಕೆ ತೀರಾ ಹೊಸದಾಗಿತ್ತು. ಅದರ ಪರಿಣಾಮವು ದ್ವಿಮುಖ : ಒಂದು ಕಡೆ, ಹೆಚ್ಚು ಸೂಕ್ಷ್ಮವೂ, ಪರಿಪೂರ್ಣವೂ, ಜಾಗರಿತವೂ, ಸ್ವತಂತ್ರವೂ ಆಗಿ ವೇದ ಸಮಸ್ಯಾ ವ್ಯಾಖ್ಯಾನ ನಡೆಯಿತು ; ಇನ್ನೊಂದು ಕಡೆ, ವೇದ ಮಂತ್ರಗಳ ಆಭಾಸಿಕ ಭೌತಿಕಾರ್ಥದ ಅತಿಶಯೀಕರಣ ನಡೆದು, ಅವುಗಳ ನಿಜವಾದ ಅಂತರರ್ಥ ಸಂಪೂರ್ಣವಾಗಿ ಮಸುಳಿ ಹೋಗುವಂತಾಯಿತು.

ಯುರೋಪೀಯ ವಿದ್ವತ್ತೆಯು ಎಷ್ಟೇ ಗಟ್ಟಿ ಮುಟ್ಟಾಗಿದ್ದರೂ ಅದರ ತಾರ್ಕಿಕ ಊಹೆಗಳು ಎಷ್ಟೇ ಬಲಿಷ್ಠವಾಗಿದ್ದರೂ ಅದರ ಸಂಶೋಧಕ ಅಥವಾ ಸಂಸರ್ಜಕ ಶಕ್ತಿಯು ಎಷ್ಟೇ ಕಸುವುಳ್ಳದ್ದಾದರೂ ಅದು ತನ್ನನ್ನು ಪ್ರತಿಷ್ಠಾಪಿಸಿಕೊಂಡದ್ದು ಸಾಯಣ ಭಾಷ್ಯವು ಉಳಿಸಿದ್ದ ಪಾರಂಪರಿಕ ಅಂಶಗಳ ಮೇಲೆಯೇ - ವೇದಾರ್ಥ ಸಮಸ್ಯೆಯ ಪರಿಹಾರಕ್ಕೆ ಅದು ತನ್ನದೇ ಆದ ಯಾವ ಸ್ವತಂತ್ರ ಪದ್ಧತಿಯನ್ನೂ ಅನುಸರಿಸಲಿಲ್ಲ. ಸಾಯಣನಲ್ಲಿಯೂ ಬ್ರಾಹ್ಮಣಗಳಲ್ಲಿಯೂ ತನಗೆ ದೊರಕಿದ ಅಂಶಗಳನ್ನು ಆಧುನಿಕ ಸಿದ್ಧಾಂತ ಮತ್ತು ಜ್ಞಾನಗಳ ಬೆಳಕಿನಲ್ಲಿ ಬೆಳೆಸಿ ವಿಶದ ಪಡಿಸಿತು. ವಿಲಕ್ಷಣ ನಿಗಮನಗಳಿಂದ ಅದು (ತುಲನಾತ್ಮಕ ಭಾಷಾ ಶಾಸ್ತ್ರಗಳನ್ನಾಧರಿಸಿ, ಅದೇ ಕ್ರಮವನ್ನು ತುಲನಾತ್ಮಕ ಪುರಾಣಶಾಸ್ತ್ರ ಹಾಗೂ ಇತಿಹಾಸ ಶಾಸ್ತ್ರಗಳಿಗೂ ಅನ್ವಯಿಸಿ) ಸದ್ಯದಲ್ಲಿ ದೊರೆತ ದತ್ತವೃತ್ತಗಳನ್ನು ಬೇಕಾದ ಹಾಗೆಲ್ಲ ವಿಸ್ತರಿಸಲು ವಿಲಕ್ಷಣ, ವಿಪರೀತ, ಊಹಾಪೋಹಗಳನ್ನಾಧರಿಸಿ, ಲಭ್ಯವಾದ ಚೆದುರಿ ನಿಂತಿದ್ದ ಸೂಚನೆಗಳನ್ನು ಕೂಡಿಸಿ ಸಹಾಯಕ್ಕೆ ತೆಗೆದುಕೊಂಡು-ಒಂದು ಸಂಪೂರ್ಣವಾದ ವೈದಿಕ ಪುರಾಣ ಶಾಸ್ತ್ರವನ್ನು ನಿರ್ಮಿಸಿ ಬಿಟ್ಟಿತು, ವೈದಿಕ ಇತಿಹಾಸವನ್ನು

ಬರೆಯಿತು, ವೈದಿಕ ನಾಗರಿಕತೆಯ ಚಿತ್ರವನ್ನೇ ಕೊಟ್ಟಿತು ; ಅದರ ಈ ದತ್ತಿಗಳು ತಮ್ಮ ವಿವರಗಳಿಂದ ಹಾಗೂ ಸಮಗ್ರತೆಯಿಂದ ನಮ್ಮನ್ನು ಆಕರ್ಷಿಸುತ್ತವೆ ; ಅದು ತನ್ನ ತೋರಿಕೆಯ ಪದ್ಧತಿ ನಿಶ್ಚಿತತೆಯಿಂದ ಈ ಎದ್ದು ಕಾಣುವ ಸಿದ್ಧಾಂತ ಸೌಧಗಳನ್ನು ಸಂಸ್ಥಾಪಿಸಿದುದರ ನಿಜವಾದ ಸಂಗತಿಯನ್ನು ಮುಚ್ಚಿಟ್ಟಿದೆ ; ಈ ಸೌಧಗಳ ಬುನಾದಿಯು ನೂರಕ್ಕೆ ತ್ತೊಂಬತ್ತರಷ್ಟು ಮಟ್ಟಿಗೆ ಊಹಾಸಿಕತಾರಾಶಿಯಿಂದ ಕೂಡಿದ್ದಾಗಿದೆ.

ಆಧುನಿಕ ವೇದ ಸಿದ್ಧಾಂತವು ಸಾಯಣನು ಹೊಣೆಗಾರನಾದ ವೈದಿಕ ಕಲ್ಪನೆಗಳನ್ನು ಆಧರಿಸಿ ಹೊರಟಿತು. ಅದರ ಪ್ರಕಾರ ವೇದಗಳೆಂದರೆ ಪ್ರಾಚೀನ, ಬಾಲಿಶ, ಹೆಚ್ಚಾಗಿ ಅನಾಗರಿಕ ಎನ್ನಿಸಿದ್ದ ಸಮಾಜದ ಸೂಕ್ತ ರಾಶಿಗಳು ; ಆ ಸಮಾಜವು ತನ್ನ ನೈತಿಕ ಹಾಗೂ ಮತಧಾರ್ಮಿಕ ಆಲೋಚನೆಗಳಲ್ಲಿ ಬಹಳ ಒರಟಾಗಿತ್ತು ; ತನ್ನ ಸಮಾಜ ರಚನೆಯಲ್ಲಿ ಅದು ಅವಿನಯ ಸಂಪನ್ನವಾಗಿತ್ತು ; ತನ್ನ ಸುತ್ತಲಿನ ಜಗತ್ತಿನ ಬಗೆಗೆ ಅದರ ದೃಷ್ಟಿಕೋನವು ಸಂಪೂರ್ಣ ಮುಗ್ಧವಾದುದಾಗಿತ್ತು. ಸಾಯಣನು ಒಂದು ದಿವ್ಯಜ್ಞಾನದ ಅಂಗವೆಂದು, ನಿಗೂಢವಾದ ಕಾರ್ಯಕರತ್ವವಿದೆಯೆಂದು ನಂಬಿ ಸ್ವೀಕರಿಸಿದ ಕರ್ಮಕಾಂಡವನ್ನು ಯುರೋಪೀಯ ವಿದ್ವತ್ತೆಯು ತಮ್ಮನ್ನು ಪೂಜಿಸಿದವರಿಗೆ ಒಳಿತನ್ನು ಮಾಡುವ ಹಾಗೂ ಪೂಜಿಸದವರಿಗೆ ಕೇಡನ್ನು ಮಾಡುವ ಕಲ್ಪಿತರಾದ ಅತಿಮಾನುಷ ವ್ಯಕ್ತಿಗಳಿಗೆ ಪ್ರೀತಿಯನ್ನುಂಟು ಮಾಡಲೆಂದು ಗೈಯುವ ಬರ್ಬರ ಯಜ್ಞಗಳ ವಿಸ್ತರಣ ಎಂದು ಸ್ವೀಕರಿಸಿತು. ಸಾಯಣನು ಸ್ವೀಕರಿಸಿದ ಐತಿಹಾಸಿಕ ಅಂಶಗಳನ್ನು ಅದು ಬೇಗನೆ ಸ್ವೀಕರಿಸಿ, ಅವುಗಳನ್ನು ಹೊಸ ಅರ್ಥ ಕೊಟ್ಟು ವಿಸ್ತರಿಸಿ, ಭಾರತೀಯ ಆ ಬರ್ಬರ ಕುಲಗಳ ಅಪ್ರಬುದ್ಧ ಚರಿತ್ರೆಯನ್ನೂ ಅನಾಗರಿಕ ರೀತಿನೀತಿಗಳನ್ನು ಅಸಂಸ್ಕೃತ ಸಂಸ್ಥೆಗಳನ್ನೂ ಹೊರಗೆಳೆದು ಪ್ರಕಟಿಸುವ ಬೇಟೆಗಾರಿಕೆಯ ಕುತೂಹಲವನ್ನು ವ್ಯಕ್ತಪಡಿಸಿತು. ಪ್ರಕೃತಿ ಪೂಜಾವಾದದ ಅಂಶವು ಇನ್ನೂ ಹೆಚ್ಚಿನ ಪ್ರಾಮುಖ್ಯವನ್ನೆ ಪಡೆಯಿತು ; ಅದರ ಪಾತ್ರ ಹೆಚ್ಚಾಯಿತು. ಆರ್ಯ ಪುರಾಣಶಾಸ್ತ್ರಗಳ ತುಲನಾತ್ಮಕ ಅಭ್ಯಾಸಕ್ಕೆ ವೈದಿಕ ದೇವತೆಗಳನ್ನು ಕೆಲವು ನಿಸರ್ಗ ಶಕ್ತಿಗಳೊಡನೆ ಅವುಗಳ ಬಾಹ್ಯರೂಪ ರೇಷೆಗಳನ್ನಾಧರಿಸಿ ಏಕೀಕರಿಸುವುದು, ಆ ಕೆಲಸದ ಆರಂಭದಶೆಯಾಯಿತು. ಹೆಚ್ಚು ಪ್ರಮುಖವಲ್ಲದ ದೇವತೆಗಳನ್ನು ಅರೆಮನಸ್ಸಿನಿಂದ ಸಾಯಣನು ಸೂರ್ಯ ಶಕ್ತಿಗಳೊಡನೆ ಐಕ್ಯಗೊಳಿಸಿದ ಅಂಶವು ನಾಗರಿಕತೆಯ ಶೈಶವಾವಸ್ಥೆಯ ಪುರಾಣ ನಿರ್ಮಾಣಕ್ಕೂ ವಿಸ್ತಾರವಾದ ಸೂರ್ಯ ಪುರಾಣ ಕಥೆಗಳ ಹಾಗೂ ತಾರಾ ಪುರಾಣ ಕಥೆಗಳ ಪುರಾಣ ರಚನಾ ಸಿದ್ಧಾಂತಗಳಿಗೂ ತಕ್ಕ ಸೂಚನೆ ಮುಂಗುರುಹು ಎಂದು ಪರಿಗಣಿಸಲಾಯಿತು. ವೈದಿಕ ಸೂಕ್ತ ಶಾಸ್ತ್ರದ ಮೇಲೆ ಚೆಲ್ಲಿದ ಈ ಹೊಸ ಬೆಳಕಿನಲ್ಲಿ ವೇದದ ಸೂಕ್ತಗಳು ನಿಸರ್ಗದ ಬಗೆಗಿನ ಅರೆ ಅಂಧಶ್ರದ್ಧೆ, ಅರೆ ಅರಕೆಯಾದ ಕಾವ್ಯಮಯ ಕಟ್ಟುಕಥೆ ಮತ್ತು ಅವುಗಳಿಗೆ ಸಂಬಂಧಿಸಿದ ಮುಖ್ಯವಾದ ಖಗೋಲ ಶಾಸ್ತ್ರೀಯ ಅಂಶ-ಇವುಗಳಿಂದ ಕೂಡಿವೆ ಎಂದು ತೀರ್ಮಾನಿಸಲಾಯಿತು, ವ್ಯಾಖ್ಯಾನಿಸಲಾಯಿತು; ಮಿಕ್ಕದ್ದು ಅರ್ಧಾರ್ಧ ಸಮಕಾಲೀನ ಚರಿತ್ರೆ, ಅರ್ಧಾರ್ಧವಾಗಿ ಯಾಜ್ಞಿಕ ಕರ್ಮಕಾಂಡದ ನಿಯಮಗಳು ಹಾಗೂ ಆಚಾರಗಳು ಅದೆಂದೂ ಯೋಗಾನುಭೂತಿಗೆ ಸಂಬಂಧಿಸಿದವುಗಳಲ್ಲ-ಬರಿ ಬಾಲಿಶ ಕುರುಡು ನಂಬಿಗೆಗಳ ರಾಶಿ ಎಂಬುದಾಗಿ ಯುರೋಪಿಯನ್ ವಿದ್ವತ್ತೆಯು ಇದಮಿತ್ಥವೆಂದು ಸಾರಿತು.

ಮೇಲೆ ಹೇಳಿದ ವೇದಸೂಕ್ತ ವ್ಯಾಖ್ಯೆಯು ಈಗಲೂ ಗಣ್ಯವಾಗಿರುವ, ೧೯ ನೆಯ ಶತಮಾನದಲ್ಲಿಯೇ ಹೊರಬಿದ್ದ, ನಾಗರಿಕತೆಯ ವಿಕಾಸದ ವೈಜ್ಞಾನಿಕ ಸಿದ್ಧಾಂತಗಳಿಗೆ ಒಗ್ಗುವಂಥದಾಯಿತು. ಅವುಗಳ ಪ್ರಕಾರ, ನಮ್ಮ ಇಂದಿನ ನಾಗರಿಕತೆಯು ಬಹಳ ಹಿಂದಿನ

ಕಾಲದಿಂದ ನಡೆದುಬಂದಿದ್ದ ಬರ್ಬರ ಸಂಸ್ಕೃತಿಯಿಂದ ಹೊರಬಿದ್ದದ್ದು. ಆದರೆ ಈ ಮೊಟ್ಟಮೊದಲ ಹಾಗೂ ಬಹಳ ಗಡಿಬಿಡಿಯಿಂದ ಮಾಡಿದ ಉತ್ಸರ್ಗ ಸಿದ್ಧಾಂತದಿಂದ ನಮ್ಮ ಜ್ಞಾನಾಧಿಕ್ಯದ ಸತ್ಯತೆಯ ಬುಡವು ಸ್ವಲ್ಪ ಅಲ್ಲಾಡತೊಡಗಿತು. ಚೀನ, ಈಜಿಪ್ತ, ಚಾಲ್ಡಿಯ, ಅಸ್ಸಿರಿಯಗಳಲ್ಲಿ ಅನೇಕ ಸಾವಿರ ವರ್ಷಗಳ ಹಿಂದೆಯೇ ಉನ್ನತ ಮಟ್ಟದ ನಾಗರಿಕತೆ ಇತ್ತೆಂಬುದೂ ಗ್ರೀಸ್ ಮತ್ತು ಭಾರತಗಳಲ್ಲಿ ಈ ಮಾತಿಗೆ ಅಪವಾದಗಳಿರಲಿಲ್ಲವೆಂದೂ ಗ್ರೀಸ್ ಮತ್ತು ಭಾರತಗಳು ಏಶಿಯ ಮತ್ತು ಭೂಮಧ್ಯ ಸಮುದ್ರ ಪ್ರದೇಶಗಳ ಕುಲಗಳ ವಾಸಸ್ಥಳಗಳಾಗಿದ್ದವೆಂದೂ ಈಗ ಎಲ್ಲರೂ ಒಪ್ಪಿಕೊಳ್ಳುವ ಸ್ಥಿತಿಯುಂಟಾಯಿತು. ವೈದಿಕ ಭಾರತೀಯರಿಗೆ ಈ ಸ್ಥಾನಮಾನಗಳು ಸ್ಪಷ್ಟವಾಗಿ ದೊರಕದಂತಾಗಲು ಯುರೋಪಿಯನ್ ವಿದ್ವತ್ತೆಯು ಆರಂಭಿಸಿದ ಸಂಶೋಧನದ ಪ್ರಭಾವ ಇನ್ನೂ ಪೂರ್ಣವಾಗಿ ಅಳಿಯದೆ ಉಳಿದಿರುವುದೇ ಕಾರಣ. ಯುರೋಪಿಯನ್ ಪಾಂಡಿತ್ಯ ಹೇಳಿದ್ದೇನು? ವೈದಿಕ ಆರ್ಯರು ಎಂದು ಹೆಸರಿಸಲ್ಪಟ್ಟ ಭಾರತೀಯ ಜನರು ಸಂಸ್ಕೃತಿಯಲ್ಲಿ ಪ್ರಾಚೀನ ಆರ್ಯರೆನ್ನಿಸಿದ್ದ ಗ್ರೀಕ್, ಕೆಲ್ಟ್, ಜರ್ಮನ್ ಜನರಿಗೆ ಸರಿಸಮಾನರಾಗಿದ್ದರು ; ಈ ಯುರೋಪಿಯನ್ನ ನಾಗರಿಕತೆಯು ಹೋಮರನ ಕಾವ್ಯಗಳಲ್ಲೂ ನಾರ್ಸ್ ಪ್ರಗಾಥಗಳಲ್ಲೂ ಗಾಲ್ ಮತ್ತು ಟ್ಯೂಟನ್ನರ ಬಗೆಗೆ ರೋಮನ್ನರು ಬರೆದಿಟ್ಟ ದಾಖಲೆಗಳಿಂದಲೂ ಸ್ಪಷ್ಟವಾಗುತ್ತದೆ : ಆದುದರಿಂದ ಈ ಆರ್ಯರೆಲ್ಲರೂ - ಇವರ ಕುಲಗಳೆಲ್ಲವೂ - ತಮ್ಮ ಹಿಮಮಯ ಋತುಮಾನಗಳ ಉತ್ತರದ ಪ್ರದೇಶಗಳಿಂದ ಹೊರಟು ಹಳೆಯ ಶ್ರೀಮಂತ ನಾಗರಿಕತೆಗಳಾಗಿದ್ದ ಮಧ್ಯ ಸಮುದ್ರೀಯ ಹಾಗೂ ದ್ರಾವಿಡೀಯ ಭಾರತದಲ್ಲಿ ನುಗ್ಗಿದರು-ಎಂಬ ಭಾವನೆ ಎದ್ದಿತು.

ಆದರೆ ಈ ಇತ್ತೀಚಿನ ಆರ್ಯಾಕ್ರಮಣ ಸಿದ್ಧಾಂತವನ್ನು ಕಟ್ಟಲು ಸಿಕ್ಕಿದ ವೇದಗತ ಕುರುಹುಗಳು ಪರಿಮಾಣದಲ್ಲಿ ಬಹಳ ಕಡಿಮೆ ಮತ್ತು ತಮ್ಮ ಅರ್ಥ ಸೂಚಕತೆಯಲ್ಲಿ ಬಹಳ ಅನಿಶ್ಚಿತ ಎನ್ನಿಸಿವೆ. ವೇದ ವಾಙ್ಮಯದಲ್ಲಿ ಎಲ್ಲೂ ಇಂಥ ಆಕ್ರಮಣದ ಪ್ರತ್ಯಕ್ಷ ಉಲ್ಲೇಖವಿಲ್ಲ. ಬೇಕಾದಷ್ಟು ವಾಙ್ಮಯವನ್ನು ಆರ್ಯಾನಾರ್ಯ ವ್ಯತ್ಯಾಸವನ್ನಾಧರಿಸಿ ನಿರ್ಮಿಸಿದ್ದೆಲ್ಲಾ ಕುಲಭೇದವನ್ನವಲಂಬಿಸಿಲ್ಲ. ಸಂಸ್ಕೃತಿ ಭೇದವನ್ನವಲಂಬಿಸಿದೆ ಎಂಬುದಕ್ಕೆ ಪ್ರಮಾಣರಾಶಿಯೇ ದೊರಕಿದೆ ಎನ್ನಬಹುದು[೧]. ಸೂಕ್ತಗಳ ಭಾಷೆಯಲ್ಲಿ ಒಂದು ವಿಧದ ಆರಾಧನೆಯ ಅಥವಾ ಆಧ್ಯಾತ್ಮಿಕ ಸಂಸ್ಕೃತಿಯ ಅಂಶವು ಆರ್ಯರ ವಿಶಿಷ್ಟ ಕುರುಹು ಎಂಬುದನ್ನು ಸ್ಪಷ್ಟವಾಗಿ ಕಾಣಬಹುದು. ಅವರ ಆರಾಧನೆ ಬೆಳಕಿನದು, ಬೆಳಕಿನ ಶಕ್ತಿಗಳದ್ದು ಮತ್ತು ಅದರಲ್ಲಿ ಪರಮಸತ್ಯದ ಆಧಾರದ ಮೇಲೆ ನಿಂತ ಒಂದು ಸ್ವನಿಯಮನ ಹಾಗೂ ಅಮೃತತತ್ವವನ್ನು ಪಡೆಯುವ ಮಹಾಕಾಂಕ್ಷೆ (ಋತ ಅಮೃತಗಳೆಂದು ಆ ಸ್ವನಿಯಮನ ಮತ್ತು ಅಮರ್ತ್ಯತೆಗಳನ್ನು ಕರೆಯಲಾಗಿದೆ) ಸ್ಪಷ್ಟವಾಗಿ ಸೂಚಿಸಲ್ಪಟ್ಟಿವೆ. ಅವಲಂಬನೀಯವಾದ ಕುಲಭೇದದ ಕುರುಹು ವೇದ ಸೂಕ್ತವೊಂದರಲ್ಲೂ ಇಲ್ಲ. ಬಾಲಗಂಗಾಧರ ತಿಲಕರು ಹೇಳಿದಂತೆ ಭಾರತದಲ್ಲೀಗ ವಾಸಿಸುತ್ತಿರುವ ಹೆಚ್ಚಿನ ಜನಸ್ತೋಮವು ಆರ್ಕ್‌ಟಿಕ್ ಪ್ರದೇಶದಂಥ ಹೆಚ್ಚಿನ ಔತ್ತರೇಯ

---

೧. ದಸ್ಯುಗಳು ಕರಿಯರು, ಮೂಗಿಲ್ಲದವರು ; ತದ್ವಿರುದ್ಧವಾಗಿ ಆರ್ಯರು ಗೌರವವರ್ಣದವರು ಮತ್ತು ಉದ್ದ ಮೂಗನ್ನುಳ್ಳವರು -ಎಂದು ಒತ್ತಿ ಹೇಳಲಾಗಿದೆ. ಆದರೆ ಪೂರ್ವೋಕ್ತ ವ್ಯತ್ಯಾಸವು ಬೆಳಕು-ಕತ್ತಲುಗಳೆಂಬ ಆರ್ಯದೇವತೆಗಳಿಗೂ ದಾಸ ಶಕ್ತಿಗಳಿಗೂ ನಡುವೆ ಮಾಡಿದ ಅಂತರ ಎಂಬುದು ಖಂಡಿತ. "ಅನಾಸಃ" ಎಂಬುದಕ್ಕೆ ಮೂಗಿಲ್ಲದವರೆಂದರ್ಥವಲ್ಲ ಹಾಗೆ ಅರ್ಥವಾಗುತ್ತದೆ ಎಂದರೂ ಅದು ಇಡಿಯಾಗಿ ದ್ರಾವಿಡ ಕುಲದವರೆಲ್ಲರಿಗೂ ಅನ್ವಯಿಸುವುದಿಲ್ಲ. ಏಕೆಂದರೆ ದಾಕ್ಷಿಣಾತ್ಯ ಮೂಗು ಔತ್ತರೇಯವಾದ ಯಾವ ಸೊಂಡಿಲಿಗೂ ಎದುರಾಳಾಗಿ ನಿಲ್ಲಬಲ್ಲುದು.

ಅಕ್ಷಾಂಶ ಪ್ರದೇಶಗಳಿಂದ ಬಂದದ್ದಾಗಿರಬಹುದು ; ಆದರೆ ಈಗ ಭಾರತದಲ್ಲಿ ಕುಲಭೇದ ಲಕ್ಷಣಗಳೆಲ್ಲೂ[೧] ಕಾಣದಿರುವಂತೆಯೇ ವೇದದಲ್ಲಿ ಎಲ್ಲಿಯೂ ಉತ್ತರದಿಂದ ದಕ್ಷಿಣಕ್ಕೆ ಜನ ಇಳಿದು ಬಂದದ್ದು ವೈದಿಕ ಸೂಕ್ತ ದರ್ಶನಕ್ಕೆ ಹತ್ತಿರವಾದ ಹಿಂದಿನ ಕಾಲಾವಧಿಯಲ್ಲಿ ಎಂಬುದಕ್ಕೂ ಗೌರವರ್ಣದ ಬರ್ಬರರು ನಾಗರಿಕವಾಗಿದ್ದ ದ್ರಾವಿಡರ ಪರ್ಯಾಯದ್ವೀಪದ ಒಳಗೆ ಹೊಕ್ಕರೆಂಬುದಕ್ಕೂ ಯಾವ ನಿದರ್ಶನವೂ ದೊರಕುವುದಿಲ್ಲ.

ಅಷ್ಟೇ ಅಲ್ಲ ನಮ್ಮ ಹತ್ತಿರ ಇರುವ ದತ್ತ ಇತಿಹಾಸ ಸಾಮಗ್ರಿಗಳಲ್ಲಿ ಪ್ರಾಚೀನ ಆರ್ಯ ಸಂಸ್ಕೃತಿಗಳಾದ ಕೆಲ್ಟ್, ಟ್ಯೂಟನ್, ಗ್ರೀಕ್ ಮತ್ತು ಭಾರತೀಯ ವಿಭಾಗಗಳು ಒಂದೇ ಒಂದು ಸಾಂಸ್ಕೃತಿಕ ಮೂಲವುಳ್ಳವುಗಳೆಂಬುದಕ್ಕೂ ಅವೆಲ್ಲಾ ಅಪ್ರಬುದ್ಧವೂ ಬರ್ಬರವೂ ಆಗಿದ್ದವೆಂಬುದಕ್ಕೂ ಅಗತ್ಯವಾದ ನೈಗಮನಿಕ ಆಧಾರಗಳು ದೊರಕುವುದಿಲ್ಲ. ಒಂದು ವಿಧದ ಪರಿಶುದ್ಧವೂ ಉದಾತ್ತ ಸರಳತೆಯೂ ಆರ್ಯರ ಹೊರಬಾಳಿನಲ್ಲೂ ಸಂಘಟನೆಗಳಲ್ಲೂ ಕಂಡುಬಂದಿವೆ ಮತ್ತು ಒಂದು ವಿಧದ ಸ್ಥೂಲ, ಮೂರ್ತ, ವಾಸ್ತವಿಕತೆ ಹಾಗೂ ಸ್ಪಷ್ಟವಾದ ಸುಪರಿಚಿತತೆಗಳೂ ಅವರು ಆರಾಧಿಸಿದ ದೇವತೆಗಳ ಕಲ್ಪನೆಯಲ್ಲೂ ಸಂಬಂಧಗಳಲ್ಲೂ ವ್ಯಕ್ತವಾಗಿವೆ. ಇವುಗಳನ್ನು ಆರ್ಯ ಮಾದರಿ ಎನ್ನಬಹುದು. ತದ್ಭಿನ್ನವಾಗಿರುವ ಈಜಿಪ್ಟೋ-ಚಾಲ್ಡಿಯನ್ ನಾಗರಿಕತೆಯಲ್ಲಿ ಗಂಭೀರವೂ, ಮಾಂತ್ರಿಕವೂ ಆದ ಮತಧರ್ಮಗಳಿರುವುದು ಈ ಎರಡನ್ನೂ ಎರಡು ಭಿನ್ನ ಮಾದರಿಗಳನ್ನಾಗಿ ಮಾಡಿದೆ ಎಂದು ಹೇಳಬಹುದು. ಆದರೆ ಈ ಲಕ್ಷಣಗಳು ಒಂದು ಉದಾತ್ತ ಅಂತಃಸಂಸ್ಕೃತಿಗೆ ಹೊಂದಲಾರವು ಎಂದು ಹೇಳುವುದು ಕಷ್ಟ. ಹಾಗಲ್ಲದೆ, ಮಹಾ ಆಧ್ಯಾತ್ಮಿಕ ಪರಂಪರೆಯಲ್ಲಿ ಈ ಅಂಶಗಳು ನಮಗೆದುರಾಗುವುದರಿಂದ ಸಾಮಾನ್ಯ ಸಿದ್ಧಾಂತವನ್ನವು ಪ್ರತಿಷೇಧಿಸುತ್ತವೆ. ಹಳೆಯ ಕೆಲ್ಟಿಕ್ ಕುಲಗಳು ಖಂಡಿತವಾಗಿಯೂ ಕೆಲ ಅತ್ಯುನ್ನತ ತತ್ವಶಾಸ್ತ್ರೀಯ ಕಲ್ಪನೆಗಳನ್ನು ಹೊಂದಿದ್ದವು ಮತ್ತು ಅವು ಪ್ರಾಚೀನ ಯೌಗಿಕ ಹಾಗೂ ಪ್ರಾತಿಭ ಜ್ಞಾನಾಭಿವೃದ್ಧಿಯು ತಮ್ಮ ವಾಙ್ಮಯದಲ್ಲಿ ಮುದ್ರಿತವಾಗಿರುವುದನ್ನು ಇಂದೂ ಉಳಿಸಿಕೊಂಡಿರುವುದು ಸುಸ್ಪಷ್ಟವಾಗಿದೆ ; ಆ ಅಭಿವೃದ್ಧಿಯು ಬಹಳ ಕಾಲದ್ದೂ, ಬಹಳ ವಿಕಾಸ ಹೊಂದಿದ್ದೂ ಆಗಿರುವುದರಿಂದಲೇ ಅಂಥ ಸತತವಾಗಿ ಬಾಳುತ್ತಾ ಬಂದ ಪರಿಣಾಮಗಳಿಗೆ ಕಾರಣವಾಯಿತು. ಈ ಪ್ರಕಾರವಾಗಿಯೇ ಗ್ರೀಸಿನಲ್ಲಿ ಆರ್ಫಿಕ್ ಮತ್ತು ಎಲ್ಯೂಸೀನಿಯನ್ ಪ್ರಭಾವದಿಂದ ಹೆಲ್ಲೆನಿಕ್ ಮಾದರಿಯ ಸಂಸ್ಕೃತಿಯು ರೂಪಿತವಾದದ್ದು ಸಂಭಾವ್ಯವಾಗಿದೆ. ಹಾಗೇ ನಮಗೆ ದೊರಕಿರುವ ರೂಪದಲ್ಲಿ ಗ್ರೀಕ್ ಪುರಾಣ ಕಥೆಗಳು ಸೂಕ್ಷ್ಮವಾದ ಮಾನಸ ಶಾಸ್ತ್ರೀಯ ಸೂಚನೆಗಳಿಂದ ತುಂಬಿವೆ. ಅದೂ ನಮಗೆ ದೊರೆತ ಆರ್ಫಿಕ್ ಉಪದೇಶ ಫಲ. ಈ ವಿಚಾರ ಧಾರೆಗೆ ಸರಿಸಮವಾಗಿಯೇ ನಾಗರಿಕತೆಗಳ ಸಾಮಾನ್ಯ ಪರಂಪರೆಗೆ ಅನುಗುಣವಾಗಿ ಭಾರತೀಯ ನಾಗರಿಕತೆ ಉದ್ದಕ್ಕೂ ನಮ್ಮ ವೈದಿಕ ಪಿತೃಪಿತಾಮಹರು ಬಿತ್ತಿ ಹೋದ ಪ್ರವೃತ್ತಿ ಬೀಜಗಳ ದೀರ್ಘೀಕರಣವೆಂದರೆ ತಪ್ಪಾಗದು. ಆಧುನಿಕ ಮಾನವನ ಮುಖ್ಯ ಮಾದರಿಗಳನ್ನು ಈಗಲೂ ನಿರ್ಧರಿಸುತ್ತಿರುವ ಈ ಪ್ರಾಚೀನ ಸಂಸ್ಕೃತಿಗಳ ಅಸಾಧಾರಣವಾದ

೧. ಭಾರತದಲ್ಲಿ ನಮಗೆ ಹೆಚ್ಚಾಗಿ ಪರಿಚಿತವಾಗಿರುವ ಅಂಶಗಳೆಂದರೆ : ಹಳೆಯ ಭಾಷಾಶಾಸ್ತ್ರೀಯ ವಿಭಜನೆಗಳು - ಅವುಗಳನ್ನಾಧರಿಸಿ ಕಲ್ಪಿಸಿದ ಭಾರತೀಯ ಕುಲಗಳು ಮತ್ತು ಈ ಹಳೆಯ ಉತ್ಸರ್ಗಗಳನ್ನಾಧರಿಸಿ ಶ್ರೀ ರಿಸ್ಲಿಯು ಮಾಡಿದ ಊಹಾಪೋಹಗಳು ಮಾತ್ರ. ಆದರೆ ಹೆಚ್ಚು ಪ್ರಬುದ್ಧವಾದ ಕುಲಶಾಸ್ತ್ರವು ಭಾಷೆಯ ನಿಕಷಗಳೆಲ್ಲವನ್ನೂ ತಿರಸ್ಕರಿಸಿದೆ ಮತ್ತು ಭಾರತೀಯ ಪರ್ಯಾಯದ್ವೀಪದಲ್ಲಿ ವಾಸಿಸುತ್ತಿರುವ ಜನಗಳೆಲ್ಲಾ ಒಂದೇ ಒಂದು ಸಮನ್ವಿತ ಕುಲಕ್ಕೆ ಸೇರಿದವರು ಎಂಬ ಅಭಿಪ್ರಾಯಕ್ಕೆ ಒಲಿದಿದೆ.

ಜೀವಶಕ್ತಿಯು ಎಂದೂ ಅರೆಪೊರಕ ಬರ್ಬರತೆಯಿಂದ ಹುಟ್ಟಿದ್ದಾಗಿರಲಾರದು. ಆಧುನಿಕ ಮನುಷ್ಯನ ಮನೋಧರ್ಮದ ಮುಖ್ಯಾಂಶಗಳನ್ನು, ಅವನ ವಿಚಾರದ ಮುಖ್ಯ ಪ್ರವೃತ್ತಿಗಳನ್ನು ಮತ್ತು ಕಲೆ ಹಾಗೂ ಮತಧರ್ಮಗಳ ಒಲಿತಗಳನ್ನು ಆ ಸಂಸ್ಕೃತಿಗಳಲ್ಲದೆ ಇನ್ನಾವುವು ರೂಪಿಸುತ್ತಿವೆ ? ಅವೆಲ್ಲವೂ ಆಳವೂ ಪ್ರಬಲವೂ ಆದ ಪ್ರಾಗೈತಿಹಾಸಿಕ ಅಭಿವೃದ್ಧಿಯ ಫಲ.

ತುಲನಾತ್ಮಕ ಪುರಾಣ ಶಾಸ್ತ್ರವು ಮಾನವ ಪ್ರಗತಿಯ ಈ ಮುಖ್ಯ ಮಜಲನ್ನು ಅಲಕ್ಷಿಸಿ ಮಾನವೀಯ ಪರಂಪರೆಗಳ ಸ್ವರೂಪವನ್ನು ಕೆಡಿಸಿದೆ. ಪ್ರಾಚೀನ ಬರ್ಬರನಿಗೂ ಪ್ಲೇಟೋ ಮತ್ತು ಉಪನಿಷತ್ತುಗಳಿಗೂ ನಡುವೆ ಏನನ್ನೂ ಕಾಣಲಾರದ ಒಂದು ಸಿದ್ಧಾಂತವನ್ನದು ಅವಲಂಬಿಸಿ ತನ್ನ ಅರ್ಥವಿವರಣೆಯನ್ನು ಮುಂದಿಟ್ಟಿತು. ಅದು ಊಹಿಸಿದ್ದು ಹೀಗೆ : "ಉಷಃ ಕಾಲ, ರಾತ್ರಿ ಮತ್ತು ಸೂರ್ಯ ಎಂಬಂತಹ ಆಶ್ಚರ್ಯಕರ, ವಸ್ತುಗಳನ್ನು ಒಮ್ಮೆಲೇ ಕಂಡು ಎಚ್ಚೆತ್ತ ಬರ್ಬರರ ಅಪೂರ್ವಾನುಭವವನ್ನೇ ಅವರು ಆಧರಿಸಿ ತಮ್ಮ ಮತಧರ್ಮಗಳನ್ನು ನಿರ್ಮಿಸಿದರು ; ಅವರ ಆ ನಿರ್ಮಾಣ ಯತ್ನವು ಒರಟೊರಟೂ ಅನಾಗರಿಕವೂ ಕಾಲ್ಪನಿಕವೂ ಆಗಿದ್ದು ಅದರಿಂದಲೇ ಅವರು ಉಷಾದಿ ಪ್ರಾಕೃತಿಕ ಘಟನೆಗಳನ್ನು ವಿವರಿಸಿದರು. ಈ ಬಾಲಸಹಜ ಅದ್ಭುತತೆಯ ಪ್ರಜ್ಞೆಯಿಂದ ಒಮ್ಮೆಲೇ ನಾವು ಒಂದೇ ಒಂದು ದಾಪುಗಾಲು ಹಾಕಿ ಗ್ರೀಕ್ ತತ್ತ್ವಜ್ಞಾನಿಗಳ ಹಾಗೂ ವೇದಾಂತ ಋಷಿಗಳ ಕಾಲಕ್ಕೆ ಬಂದು ತಲುಪಿದೆವು !" ಇದೆಂದೂ ನಿಜವಾದದ್ದಲ್ಲ. ತುಲನಾತ್ಮಕ ಪುರಾಣಶಾಸ್ತ್ರವು ಹೆಲೆನಿಕ್ಕಲ್ಲದ ದತ್ತ ಸಂಗ್ರಹವನ್ನು ಹೆಲೆನಿಸ್ಟರು ಗ್ರೀಕ್ ಮನೋಧರ್ಮದ ಅಜ್ಞಾನವನ್ನಾಧರಿಸಿದ ದೃಷ್ಟಿಕೋನದಿಂದ ವಿವರಿಸಿದುದರ ಫಲ. ಅದರ ಪದ್ಧತಿಯು ಕಾವ್ಯಮಯ ಕಲ್ಪನಾಶಕ್ತಿಯ ವಿಕಟ ಲೀಲೆಯಾಗಿತ್ತಲ್ಲದೆ, ಸಹನಶೀಲ ಸಂಪನ್ನವಾದ ವೈಜ್ಞಾನಿಕ ಸಂಶೋಧನೆಯಾಗಲಿಲ್ಲ.

ಹೆಲ್ಲೆನಿಸ್ಟರ ಪದ್ಧತಿಯನ್ನು ಅವಲೋಕಿಸಿದರೆ, ರೂಪಕ ಪ್ರತಿಮೆಗಳ ಅಸಾಧಾರಣ ಕಲಸುಮೇಲೋಗರ, ಗೊಂದಲ, ಗಲಿಬಿಲಿ, ಕಂಡುಬರುವುದಲ್ಲದೆ, ಅವರ ವ್ಯಾಖ್ಯಾನಗಳಲ್ಲಿ ಎಲ್ಲೆಲ್ಲೂ ಯಾವ ಸುಸಾಂಗತ್ಯವೂ ಸುಸಂಬಂಧವೂ ಕಂಡುಬರುವುದಿಲ್ಲ. ಅದೊಂದು ಪರಸ್ಪರ ಪ್ರತಿ ಪ್ರವಿಷ್ಟವಾದ ವಿವರಗಳ ಮುದ್ದೆ, ಪರಸ್ಪರ ದಾರಿಯಲ್ಲಿ ಕಂಗಾಣದೆ ಅಡ್ಡ ಹಾಯುವ ಸಂಗತಿಗಳ ರಾಶಿ, ಪರಸ್ಪರ ಹೊಂದದೆಯೇ ತಳಕು ಹಾಕಿಕೊಂಡ ಸರಪಳಿ, ತಮ್ಮ ಸತ್ಯತೆಗೆ ಭೃಂಗದ ಬೆನ್ನೇರಿದ ವಿಶೃಂಖಲ ಕಲ್ಪನಾ ವಿಲಾಸವನ್ನಾಧರಿಸಿದ ತುಣುಕುಗಳ ಗುಡ್ಡೆ - ಅದೇ ನಮ್ಮ ಜ್ಞಾನದ ಏಕೈಕ ಸಾಧನ. ಈ ಅಸಮನ್ವಿತತೆಯನ್ನು ಸತ್ಯದ ಉನ್ನತ ಮಟ್ಟವೆಂಬ ಅಟ್ಟಕ್ಕೇರಿಸಲಾಗಿದೆ ; ಹೀಗೆ ಹೇಳಿದರೆ ಪ್ರಖ್ಯಾತರಾದ ವಿದ್ವಾಂಸರೇನೆನ್ನುತ್ತಾರೆ ಗೊತ್ತೇ? ಪ್ರಾಚೀನ ಪೌರಾಣಿಕ ಕಾವ್ಯಕಲೆಯ ಸಾರವೇ ಗಲಿಬಿಲಿ ಎಂದು ಇಟ್ಟುಕೊಳ್ಳಬೇಕಾಗಿರುವುದರಿಂದ ಇನ್ನೂ ಹೆಚ್ಚಿನ ತರ್ಕಶುದ್ಧ ಮತ್ತು ಕ್ರಮಬದ್ಧ ಫಲಿತಾಂಶವನ್ನು ಮುಟ್ಟುವ ಪದ್ಧತಿಯನ್ನು ಹಿಡಿದರೆ, ಅದರ ಸಮನ್ವಿತತೆಯೇ ಅದರ ಸತ್ಯತೆಯನ್ನೂ ಶ್ರದ್ಧೇಯತೆಯನ್ನೂ ಬುಡ ಮೇಲು ಮಾಡಿಬಿಡುತ್ತದೆ ಎಂದು ಗಂಭೀರವಾಗಿ ಅವರು ವಾದಿಸುತ್ತಾರೆ. ಅವರ ಈ ವಾದವನ್ನು ಒಪ್ಪಿದರೆ, ತುಲನಾತ್ಮಕ ಪುರಾಣಶಾಸ್ತ್ರದ ಸಂಶೋಧನ ಪರಿಣಾಮಗಳಲ್ಲಿ ಯಾವುದೂ ಖಚಿತವೆಂದು ಹೇಳಲು ಸಾಧ್ಯವಾಗದು ; ಅದರ ಒಂದು ಸಿದ್ಧಾಂತವು ಅದರ ಇನ್ನೊಂದು (ವಿರುದ್ಧ) ಸಿದ್ಧಾಂತಕ್ಕೆ ಸಮಾನ ಎಂದು ಒಪ್ಪಬೇಕಾಗುವುದು. ಏಕೆಂದರೆ, ಯಾವುದಾದರೂ ಒಂದು ಅಸಮನ್ವಿತ ಮುದ್ದೆಯು ಭಿನ್ನ ಸ್ವರೂಪದ ಅಂಥ ಇನ್ನೊಂದು ಅಸಮನ್ವಿತ ಮುದ್ದೆಗಿಂತ ಮೇಲು ಅದು ಸತ್ಯ, ಇದು ಸುಳ್ಳು ಎಂದು ಗ್ರಹಿಸಲು ಯಾವ ಕಾರಣವೂ ದೊರಕದು.

ತುಲನಾತ್ಮಕ ಪುರಾಣಶಾಸ್ತ್ರದ ತಾರ್ಕಿಕ ಊಹೆಗಳಲ್ಲಿ ಪ್ರಯೋಜನಕರವಾದ ಅಂಶಗಳು ಬೇಕಾದಷ್ಟಿವೆ ; ಆದರೆ ದೃಢಾಧಾರ ಸಹಿತವಾಗಿ ನಿಂತ ಮತಧರ್ಮವಿಜ್ಞಾನದ ಅಂಗವಾಗುವಂತೆ

ಅದು ತನ್ನನ್ನು ತಾನೇ ಹೆಚ್ಚು ಸಹನಶೀಲ ಹಾಗೂ ಸುಸಂಬದ್ಧ ಪದ್ಧತಿಯಿಂದ ಪುನರ್ಘಟಿಸಿ-ಕೊಂಡಾಗ ಮಾತ್ರ ಸ್ವೀಕಾರ್ಯವಾದೀತು, ಸಮರ್ಪಕವೆನ್ನಿಸೀತು. ಹಳೆಯ ಮತಧರ್ಮಗಳು ನಮ್ಮ ಆಧುನಿಕ ನಂಬಿಗೆಗಳಷ್ಟೇ ಆದರೂ ಸವ್ಯುನಿತ ಕಲ್ಪನೆಗಳನ್ನಾಧರಿಸಿದ ಅವಯವಿಕ ಪದ್ಧತಿಗಳೆನ್ನುವುದನ್ನು ನಾವು ಗಮನಿಸಬೇಕು ; ಹಾಗೇ ಹಿಂದಿನಿಂದ ಮುಂದಕ್ಕೆ ಬರುತ್ತಾ ನಡೆದ ಮತಧಾರ್ಮಿಕ ಶ್ರದ್ಧಾಸ್ಥಾನಗಳಲ್ಲಿ ಹಾಗೂ ತತ್ವಶಾಸ್ತ್ರೀಯ ಆಲೋಚನೆಗಳಲ್ಲಿ ಪ್ರತ್ಯಕ್ಷವಾದ ಮತ್ತು ಸುಸ್ಪಷ್ಟವಾದ ಪ್ರಗತಿಪರ ಅಭಿವೃದ್ಧಿಯಿರುವುದನ್ನೂ ನಾವು ಗಮನಿಸಬೇಕು. ನಿಜವಾದ ಜ್ಞಾನವನ್ನು ನಾವು ತಲುಪಬೇಕಾದರೆ, ನಮ್ಮ ಲಬ್ಧ ಸಂಗ್ರಹವನ್ನು (ದತ್ತ ಸಂಗತಿಗಳನ್ನು) ಈ ದೃಷ್ಟಿಯಿಂದ ಅಭ್ಯಸಿಸಿ, ಮಾನವ ಹಾಗೂ ನಂಬಿಗೆಯ ವಿಚಾರದ ನಿಜವಿಕಾಸದ ಹೊಳಹನ್ನು ಹೊರಗೆಡಹಬೇಕು. ಗ್ರೀಕ್ ಮತ್ತು ಸಂಸ್ಕೃತ ಹೆಸರುಗಳನ್ನು ಸಮಾನಾರ್ಥಕಗಳೆಂದು ಭಾವಿಸಿ ಏಕೀಕರಿಸಿ ಗುರುತಿಸಿ ಬಿಟ್ಟರೆ ಸಾಲದು ; ಹೆರಾಕ್ಲೀಸನ ಚಿತೆಯು ಮುಳುಗುವ ಸೂರ್ಯನ ಪ್ರತಿಮೆ (ರೂಪಕೋಕ್ತಿ), ಅಥವಾ ಪ್ಯಾರಿಸ್ ಹಾಗೂ ಹೆಲೆನ್ ಎಂಬಿವು ವೈದಿಕ ಸರಮೆ ಮತ್ತು ಪಣಿಗಳ ತದ್ಭವಗಳು ಎಂಬ ವಿಕಟ ಸಂಶೋಧನೆ ಮಾಡಿಬಿಟ್ಟರೆ ಸಾಲದು. ಇಂಥ ಸಂಶೋಧನೆಯು (ಇತ್ತೀಚಿನ ಕನ್ನಡದಲ್ಲಿ ಸಂಶಂಬಿಸುವಿಕೆಯು) ಕಲ್ಪನಾಶಕ್ತಿ ಸಂಪನ್ನ ಮನಸ್ಸಿಗೊಂದು ಆಟವಾದೀತಷ್ಟೇ - ಅದೆಂದೂ ಗಂಭೀರವಾದ ಫಲಿತಾಂಶವನ್ನು ದೊರಕಿಸಿ ಕೊಡಲಾರದು.ಅದು ಸರಿಯೆಂದು ಸಿದ್ಧವಾದರೂ ಅಷ್ಟೇ. ಆಗದಿದ್ದರೂ ಅಷ್ಟೇ. ಅದರಲ್ಲಿ ನಿಃಸಂದಿಗ್ಧವಾದ ಸತ್ಯತೆ ಇಲ್ಲವೇ ಇಲ್ಲ ; ಏಕೆಂದರೆ, ಸೂರ್ಯ-ನಕ್ಷತ್ರ ಪುರಾಣ ಸ್ವರೂಪದ ವ್ಯಾಖ್ಯಾನವು ರಚಿತವಾದದ್ದು ಹರಕು ಮುರುಕಾದ ಕಾಲ್ಪನಿಕ ಪದ್ಧತಿಯ ದುರ್ವರ್ತನೆಯ ಮೇಲಿನಿಂದ ; ಅಂಥ ವ್ಯಾಖ್ಯಾನಗಳನ್ನು ಪ್ರತಿಯೊಂದು ಮಾನವ್ಯ ಪರಂಪರೆಗೂ ನಂಬಿಗೆಗೂ ಅಥವಾ ಇತಿಹಾಸದ ಪ್ರತ್ಯಕ್ಷ ಘಟನೆಗೆ ಕೂಡಾ ಅಷ್ಟೇ ಸುಲಭವಾಗಿ ಅನ್ವಯಿಸಲು ಸಾಧ್ಯವಾಗದು. ಈ ಪದ್ಧತಿಯಿಂದ ಸತ್ಯ ನಮಗೆ ಗೊತ್ತಾಯಿತೋ ಇಲ್ಲವೆ ನಾವು ಬರಿ ವಿಕಟ ಕಲ್ಪನಾ ಕಥೆಯನ್ನು ಕೇಳುತ್ತಿರುವೆವೋ ಎಂಬುದನ್ನು ಹೇಳಲಾರೆವು.[೧]

ತುಲನಾತ್ಮಕ ಭಾಷಾ ಶಾಸ್ತ್ರವನ್ನು ನಿಜವಾಗಿ ನಾವು ನಮ್ಮ ನೆರವಿಗೆ ತೆಗೆದುಕೊಳ್ಳಬಹುದು ; ಆದರೆ ಆ ಶಾಸ್ತ್ರದ ಇಂದಿನ ಸ್ಥಿತಿಯಲ್ಲಿ ಅದಕ್ಕೆ ಸಾಕಷ್ಟು ನೈಗಮನಿಕ ನಿಶ್ಚಿತತೆ ಬಂದಿಲ್ಲ. ಆಧುನಿಕ ಭಾಷಾಶಾಸ್ತ್ರವು ೧೯ ನೆಯ ಶತಮಾನದಲ್ಲಿ ನಮ್ಮ ನೆರವಿಗಿದ್ದ ಎಲ್ಲ ತತ್ಸದೃಶ ಶಾಸ್ತ್ರಗಳಿಗಿಂತಲೂ ಹೆಚ್ಚು ಸಮೃದ್ಧವಾಗಿದೆ. ಕೇವಲ ಸ್ವಾಪ್ನಿಕ ಕಲ್ಪನೆಗಳ ಬದಲು ಅದು ಒಂದು ದೃಷ್ಟಿಕೋನವನ್ನೂ ಕ್ರಮವನ್ನೂ ಒದಗಿಸಿ ಕೊಟ್ಟಿದೆ ; ಭಾಷೆಯ ಶಬ್ದರೂಪಶಾಸ್ತ್ರಕ್ಕೆ ನಿರುಕ್ತಕ್ಕೆ ಸಾಧ್ಯವಾಗದ ಅಥವಾ ಆಗುವ ಕೊಡುಗೆಯನ್ನು ಕೊಟ್ಟಿದೆ. ಭಾಷೆ ಹೇಗೆ ಸವೆದು ಹೋಗುತ್ತದೆ ಎಂಬ ಬಗ್ಗೆ ಅದು ಕೆಲ ನಿಯಮಗಳನ್ನು ಸ್ಥಾಪಿಸಿದೆ ಮತ್ತು ಆ ಮೂಲಕ ಅದು ಭಿನ್ನವಾದರೂ ಸಂಬಂಧಿಕ ಎನ್ನಿಸಿದ ಇತರ ಭಾಷೆಯಲ್ಲಿ ಒಂದು ಭಾಷೆಯ ಒಂದು ಶಬ್ದವು ಮೂಲತಃ ಇದೇ ಎಂದು ಗುರುತಿಸಲು ಮಾರ್ಗದರ್ಶನ ಮಾಡುತ್ತದೆ. ಆದರೆ ಇಲ್ಲಿ ಅದರ ಸಾಧನೆಗಳು ನಿಂತು ಬಿಡುತ್ತವೆ. ಅದು ಹುಟ್ಟುವಾಗ ನಾವು ನಿರೀಕ್ಷಿಸಿದ್ದ ಮಹಾಕಾಂಕ್ಷೆಯನ್ನದು ತನ್ನ ಪ್ರೌಢಾವಸ್ಥೆಯಲ್ಲಿ (ಪಕ್ವಾವಸ್ಥೆಯಲ್ಲಿ) ಪೂರೈಸಲಾರದಾಯಿತು. ಅದು ಭಾಷಾ ವಿಜ್ಞಾನ ಎಂಬೊಂದು ಶಾಸ್ತ್ರವನ್ನು

---

೧. ಉದಾ : ಒಬ್ಬ ಮಹಾವಿದ್ವಾಂಸನ ಪ್ರಕಾರ, ಕ್ರಿಸ್ತನೂ ಅವನ ೧೨ ಜನ ಪ್ರವರ್ತನಾಚಾರ್ಯರೂ ಸೂರ್ಯ ಮತ್ತು ವರ್ಷದ ೧೨ ತಿಂಗಳುಗಳು. ಎಲ್ಲ ಪುರಾಣೇತಿಹಾಸಗಳಲ್ಲೂ ನೆಪೋಲಿಯನ್ನನ ಜೀವನ ಕಾರ್ಯವು ಅತ್ಯಂತ ಪರಿಪೂರ್ಣವಾದ ಸೂರ್ಯ ಪುರಾಣ ಕಥೆಯಾಗಿದೆ.

ನಿರ್ಮಿಸಲಾರ-ದಾಯಿತು ; ಮತ್ತು ಕೆಲ ದಶಕಗಳು ಕಳೆದ ಮೇಲೆ ಒಬ್ಬ ದೊಡ್ಡ ಭಾಷಾ ಶಾಸ್ತ್ರಜ್ಞನು ತಾನು ಪ್ರೀತಿಯಿಂದ ಅಭ್ಯಸಿಸುತ್ತಾ ಹೋಗಿದ್ದ ಈ ಶಾಸ್ತ್ರವನ್ನು ಕುರಿತು ದಾಕ್ಷಿಣ್ಯದಿಂದ "ನಮ್ಮ ಕ್ಷುಲ್ಲಕವಾದ ಊಹಾತ್ಮಕ ವಿಜ್ಞಾನ" ಎಂದು ಹೇಳಬೇಕಾಗಿ ಬಂದಿತು ; ಅವನು ಅಭ್ಯಸಿಸುತ್ತಿದ್ದ ತತ್ಸದೃಶ ಶಾಸ್ತ್ರಗಳ ಬಗೆಗೂ ಅವನು ಹಾಗೇ ಹೇಳಬೇಕಾಯಿತು. ಆದರೆ ಊಹಾತ್ಮಕ ಶಾಸ್ತ್ರವು ಶಾಸ್ತ್ರವೇ ಅಲ್ಲ. ಆದುದರಿಂದ ಅದಕ್ಕಿಂತ ಹೆಚ್ಚು ಸಮರ್ಪಕವೂ ಸೂಕ್ಷ್ಮದರ್ಶಕವೂ ಆದ ಜ್ಞಾನ ವಿಭಾಗಗಳನ್ನು ಅಭ್ಯಸಿಸುತ್ತಿದ್ದವರು ತುಲನಾತ್ಮಕ ಭಾಷಾ ಶಾಸ್ತ್ರವನ್ನು ಒಂದು ಶಾಸ್ತ್ರವೆಂದು ಕರೆಯಲೊಪ್ಪದೆ ಹೋದುದಲ್ಲದೆ, ಭಾಷೆಯ ಶಾಸ್ತ್ರವೊಂದು ಹುಟ್ಟುವುದೇ ಅಸಾಧ್ಯವೆಂದೂ ಸಾರಿದರು.

ಭಾಷಾ ಶಾಸ್ತ್ರವು ಈಗ ನಮಗೆ ಲಭ್ಯವಾಗಿ ಮಾಡಿದ ಫಲಿತಾಂಶಗಳಲ್ಲಿ ನಿಜವಾದ ನಿಶ್ಚಿತತೆ ಎಂಬುದೇ ಇಲ್ಲ ; ಒಂದೆರಡು ನಿಯಮಗಳನ್ನು ಬಿಟ್ಟರೆ ಅದರಲ್ಲಿ ಎಲ್ಲಿಯೂ ನಿಶ್ಚಿತವಾದ ಬುಡವಿಲ್ಲ : ಆ ಒಂದೆರಡು ನಿಯಮಗಳ ವ್ಯಾಪ್ತಿ ಕೂಡಾ ಬಹಳ ಪರಿಸೀಮಿತವಾಗಿದೆ. ನಿನ್ನೆ ಮೊನ್ನಿನವರೆಗೆ ನಾವು ವರುಣನೆಂದರೆ ಔರೇನೋಸ್ (ಗ್ರೀಕರ ಸ್ವರ್ಗ) ಎಂದು ತಿಳಿದುಕೊಂಡಿದ್ದೆವು. ಆದರಿಂದು ಅದನ್ನು ಭಾಷಾಶಾಸ್ತ್ರೀಯ ತಪ್ಪೆಂದು ಹೀಗಳೆಯಲಾಗಿದೆ. ನಾಳೆ ಮತ್ತೆ ಅದು ಸರಿಯೆಂದು ಯಾರಾದರೂ ಸಮರ್ಥಿಸಬಹುದಾಗಿದೆ. "ಪರಮೇ ವ್ಯೋಮನ್" ಎಂಬುದು ಒಂದು ವೈದಿಕ ಮೇಳ ನುಡಿ (ಪದಸಂಹತಿ). ಆದರೆ ಶ್ರೀ ಟಿ. ಪರಮೇಶ್ವರ ಅಯ್ಯರರು "ಋಕ್ಕುಗಳು" ಎಂಬ ತಮ್ಮ ಉಜ್ವಲವೂ ಆಶ್ಚರ್ಯಕರವೂ ಆದ ಗ್ರಂಥದಲ್ಲಿ ಅದರ ಅರ್ಥವು "ಅತ್ಯುನ್ನತ ಸ್ವರ್ಗ" ಎಂದಲ್ಲ. "ಅತ್ಯಂತ ಆಳವಾದ ಕಂದರ" ಎಂದು ಬರೆದಿದ್ದಾರೆ. "ವ್ಯೋಮನ್" ಎಂದರೆ ಒಡಕು, ಬಿರುಕು ; ಊಮಾ ಅಥವಾ ಅಕ್ಷರಶಃ ರಕ್ಷಣಾರಾಹಿತ್ಯ (ಅಥವಾ ಅರಕ್ಷಿತ ಸ್ಥಳ) ಎಂದರ್ಥ. ಅಯ್ಯರರ ವಾದವು ಸಂಪೂರ್ಣವಾಗಿ ಆಧುನಿಕ ವಿದ್ವಾಂಸರ ರೀತಿಯದು. ಅದರಿಂದ ಭಾಷಾಶಾಸ್ತ್ರಿಗೆ ರಕ್ಷಣಾರಾಹಿತ್ಯವೆಂಬುದು ಎಂದೂ ಕೊರಕಲು ಎಂದಾಗದು - ಈ ತತ್ವಗಳನ್ನಾಧರಿಸಿ ಮನುಷ್ಯ ಭಾಷೆ ಹುಟ್ಟಿಲ್ಲ ಎನ್ನಲು ಬಾಯಿಯೇ ಇಲ್ಲ. ಏಕೆಂದರೆ ಭಾಷೆ ಹೇಗೆ ರಚಿತವಾಯಿತು ಅಥವಾ ಅವಯವಿಕವಾಗಿ ಹೇಗೆ ಬೆಳೆಯಿತು ಎಂದು ಭಾಷಾಶಾಸ್ತ್ರಕ್ಕೆ ಹುಡುಕಿ ಹೇಳಲು ಶಕ್ತಿಯಿಲ್ಲ-ಅಲ್ಲಿ ಅದು ಸೋತಿತು. ತದ್ವಿರುದ್ಧವಾಗಿ, ಆ ಶಾಸ್ತ್ರವು ಬರಿ ಸ್ವಾಪ್ನಿಕ ಚಿತ್ರವನ್ನೂ ವಿಕಟ ಕಲ್ಪಕತೆಯನ್ನೂ ಅಂಥ ಎಷ್ಟೋ ಪ್ರೋಜ್ವಲ ಅಪಘಾತೋನ್ಮುಖ ನಿಗಮನಗಳಿಂದ ಸಾಗುವ ಹಳೆಯ ದೃಷ್ಟಿಕೋನವನ್ನೂ ಸಾಕಷ್ಟು ಪರಿಮಾಣದಲ್ಲಿ ಉಳಿಸಿಕೊಂಡೇ ಇದೆ. ಆದರೆ ತತ್ಫಲವಾಗಿ "ಪರಮೇ ವ್ಯೋಮನ್" ಎಂದರೆ ಅತ್ಯುಚ್ಚ ಸ್ವರ್ಗ ಎಂದೂ ಹೇಳಲಾರೆವು. ಅತ್ಯಗಾಧ ಪೊಟ್ಟರೆ ಎಂದೂ ಹೇಳಲಾರೆವು. ಆದುದರಿಂದ ಇಷ್ಟು ಅಪೂರ್ಣವಾದ ಭಾಷಾಶಾಸ್ತ್ರವು ಒಂದು ಉಜ್ವಲ ಸಹಾಯಕವಾಗ-ಬಹುದಾದರೂ ವೇದಾರ್ಥ ಪ್ರಕಾಶನಕ್ಕೆ ಎಂದೂ ಅದೊಂದು ಖಚಿತವಾದ ಮಾರ್ಗದರ್ಶಕವಾಗಲಾರದು.

ಸಾರ್ವಜನಿಕರ ಮನಸ್ಸಿನಲ್ಲಿ ತನ್ನ ವೇದವ್ಯವಹಾರದ ಮೂಲಕ ಯುರೋಪೀಯ ಪಾಂಡಿತ್ಯವು ಹೆಚ್ಚಿನ ಸ್ಥಾನಮಾನ ಪಡೆಯಲು ಯುರೋಪೀಯ ವಿಜ್ಞಾನದ ಪಥ ಚಲನದೊಡನೆ ಅದು ಸಂಪರ್ಕವನ್ನಿಟ್ಟು ಕೊಂಡದ್ದೇ ಕಾರಣ. ಸತ್ಯಸಂಗತಿ ಹೀಗಿದೆ : ಸಹನಶೀಲವೂ, ಸೂಕ್ಷ್ಮ ಸಂದೇಹೋನ್ಮುಖವೂ ಅನ್ಯೂನಾನತಿರಿಕ್ತವೂ ಆದ ಭೌತ ವಿಜ್ಞಾನಗಳಿಗೂ-ಈ ಝುಗ ಝುಗಿಸುವ ಆದರೆ ಅಪಕ್ವವೂ ಆದ ಜ್ಞಾನಶಾಖೆಗಳಿಗೂ (ವೈದಿಕ ವಿದ್ವತ್ತೆ ಈ ಅಪಕ್ವ ಜ್ಞಾನ ಶಾಖೆಯನ್ನು ಅವಲಂಬಿಸಿದೆ) ಅಜಗಜಾಂತರವಿದೆ. ಅವು ತಮ್ಮ ಬುನಾದಿಯ ಬಗೆಗೆ ಎಚ್ಚರಿಕೆಯನ್ನು ತಾಳಿವೆ, ಉತ್ಸರ್ಗಿಸುವುದರಲ್ಲಿ ನಿಧಾನ ಮಾಡುತ್ತವೆ, ನಿಗಮನಗಳಲ್ಲಿ ಗಟ್ಟಿ ಮುಟ್ಟಾಗಿರುತ್ತವೆ ; ಇವುಗಳಾದರೋ ಅತಿ ಸ್ವಲ್ಪ ಲಬ್ಧ

ಸಂಗ್ರಹವನ್ನಾಧರಿಸಿ (ಅದತ್ತ ದತ್ತಕವನ್ನು ಅವಲಂಬಿಸಿ) ದೊಡ್ಡ ದೊಡ್ಡ ಸಾಗರೋತ್ತರಂಗಗಳಂತೆ ಎಲ್ಲವನ್ನೂ ಕೊಚ್ಚಿಕೊಂಡು ಹೋಗುವ ಸಿದ್ಧಾಂತಗಳನ್ನು ಕಟ್ಟಿಕೊಳ್ಳುವ ಒತ್ತಾಯಕ್ಕೆ ಬಲಿಯಾಗಿ, ಖಚಿತ ಸೂಚನೆಗಳ ಕೊರತೆಯನ್ನು ಅತಿ ಹೆಚ್ಚಾದ ಊಹೆ ಮತ್ತು ತಾತ್ಕಾಲಿಕ ಸಿದ್ಧಾಂತಗಳಿಂದ ತುಂಬಿಕೊಳ್ಳುತ್ತವೆ. ಇವು ಪ್ರಖರ ಪ್ರಕಾಶಮಾನವಾದ ಆರಂಭಗಳಿಂದ ಕೂಡಿವೆ ; ಆದರೆ ಇವೆರಡೂ ಸುರಕ್ಷಿತ ನಿಗಮನಗಳಿಗೆ ಬರಲಾರವು. ಇವು ಈ ವಿಜ್ಞಾನಕ್ಕೆ ಅಗತ್ಯವಾದ ಮೊಟ್ಟ ಮೊದಲನೆಯ ಹರಗೆಡಿದ ಗುಟ್ಟಗಳು ; ಆದರಿವು ಇನ್ನೂ ವಿಜ್ಞಾನದ ಶಾಸ್ತ್ರೀಯತೆಯನ್ನು ಏರಿದಂಥವುಗಳಲ್ಲ.

ಇದರಿಂದ ತಿಳಿದು ಬರುವುದೇನೆಂದರೆ - ವೇದಾರ್ಥ ಪ್ರಕಾಶನದ ಇಡೀ ಸಮಸ್ಯೆಯು, ವೇದಕ್ಕೆ ಅರ್ಥ ಹೇಳುವ ಇಡೀ ಜವಾಬ್ದಾರಿಯು - ಇನ್ನೂ ತೆರೆದಿಟ್ಟ ಪ್ರಶ್ನೆಯಾಗಿಯೇ ಉಳಿದಿದೆ ; ಬೆಳಕು ಬರುವ ಯಾರ ಯಾವ ಕೊಡುಗೆ ಬಂದರೂ ಅದಕ್ಕಿಲ್ಲಿ ಖಂಡಿತ ಸ್ವಾಗತವಿದೆ. ಅಂಥ ಮೂರು ಸೂಚನಾ ವೀಚಿಗಳು ಭಾರತೀಯ ವಿದ್ವಾಂಸರಿಂದ ಬಂದಿವೆ. ಅವುಗಳಲ್ಲಿ ಎರಡು ಯುರೋಪೀಯನ್ ಸಂಶೋಧನ ಪದ್ಧತಿಗಳನ್ನು ಅನುಸರಿಸಿವೆ. ಅವು ತೆರೆದಿಟ್ಟ ಹೊಸ ಸಿದ್ಧಾಂತಗಳನ್ನವಲಂಬಿಸಿ ಸುಪ್ರತಿಷ್ಠಿತಗೊಳಿಸಿದರೆ, ವೇದಸೂಕ್ತಗಳ ಬಾಹ್ಯಾರ್ಥದ ಬಗ್ಗೆ ನಾವು ತಳೆದ ಅಭಿಪ್ರಾಯವನ್ನು ತಕ್ಕ ಮಟ್ಟಿಗೆ ಬದಲಾಯಿಸಬಲ್ಲವು. ಶ್ರೀ ಬಾಲಗಂಗಾಧರ ತಿಲಕರು, "ವೇದದಲ್ಲಿ ಕಂಡು ಬರುವ ಆರ್ಕ್‌ಟಿಕ್ ಆರ್ಯಧಾಮ" ಎಂಬ ತಮ್ಮ ಗ್ರಂಥದಲ್ಲಿ ಯುರೋಪೀಯ ವೈದುಷ್ಯ ಮಾಡಿದ ಸಾಮಾನ್ಯ ನಿಗಮನಗಳನ್ನು ಒಪ್ಪಿಕೊಂಡಿದ್ದಾರೆ; ಆದರೆ ವೈದಿಕ ಭಾಷೆಯ ಪುನಃ ಪರೀಕ್ಷಣದಿಂದ, ವೈದಿಕ ಗೋವುಗಳ ಹಾಗೂ ವೇದಸೂಕ್ತಗಳ ಖಗೋಲ ಶಾಸ್ತ್ರೀಯ ಲಬ್ಧ ಸಾಕ್ಷಿಗಳಿಂದ (ದತ್ತ ಪ್ರಮಾಣಗಳಿಂದ) ಜಾಗತಿಕ ಹಿಮ ಪ್ರವಾಹದ ಅವಧಿಯಲ್ಲಿ ಆರ್ಯ ಕುಲಗಳು ಆರ್ಕ್‌ಟಿಕ್ ಪ್ರದೇಶಗಳಿಂದ ಮೂಲತಃ ದಕ್ಷಿಣದತ್ತ ಸಾಗಿಬಂದವೆಂಬ ಬಲಿಷ್ಠ ಸಂಭಾವ್ಯತೆಯನ್ನು ಅವರು ಪ್ರತಿಷ್ಠಾಪಿಸಿದ್ದಾರೆ. ಶ್ರೀ ಟಿ. ಪರಮಶಿವ ಅಯ್ಯರರು ಇನ್ನೂ ಹೆಚ್ಚಿನ ತೃತೀಯ ಪಥಗಾಮಿಗಳಾಗಿ ಇಡೀ ಋಗ್ವೇದವು ಒಂದು ಅಲಂಕಾರಿಕ ಪ್ರತಿವಿಧಾನ ; ಆ ಪ್ರತಿವಿಧಾನವು ಹೇಳುವುದೇನೆಂದರೆ - ಆ ಅವಧಿಯ ಭೌಗೋಲಿಕ ವಿಕಾಸದಲ್ಲಿ ತಾನು ಸುದೀರ್ಘಕಾಲ ಹಿಮಪಾತಲಬ್ಧ ಮರಣದಶೆಯಲ್ಲಿದ್ದು, ಅನಂತರ ನಮ್ಮ ಈ ಭೂಗ್ರಹವು ತನ್ನ ಹೊಸ ಹುಟ್ಟಿಗೆ ಸಂಬಂಧಿಸಿದ ಭೂಗರ್ಭ ಶಾಸ್ತ್ರೀಯ ಘಟನಾವಳಿಗಳನ್ನು ಬಿಂಬಿಸುತ್ತದೆ ಎಂಬುದಾಗಿ. ಶ್ರೀ ಅಯ್ಯರರ ತರ್ಕವನ್ನೂ ನಿಗಮನಗಳನ್ನೂ ಇಡಿ ಇಡಿಯಾಗಿ ಸ್ವೀಕರಿಸಲು ಸಾಧ್ಯವಿಲ್ಲದಿದ್ದರೂ ವೇದದ ಅಹಿವೃತ್ರನ ಹಾಗೂ ಸಪ್ತಸಿಂಧುಬಂಧ ವಿಮೋಚನೆಯ ಮಹಾಪುರಾಣ ಕಥೆಗಳ ಮೇಲೆ ಅವರು ಬೆಳಕು ಬೀರಿ ಉಪಕಾರ ಮಾಡಿದ್ದಾರೆ. ವೇದ ಸೂಕ್ತಗಳ ಭಾಷೆ ಒಪ್ಪದ ಸದ್ಯದ ಸಿದ್ಧಾಂತಕ್ಕಿಂತ ಅವರ ಸಿದ್ಧಾಂತವು ಹೆಚ್ಚು ಸುಸಂಬದ್ಧವೂ ಸಂಭಾವ್ಯವೂ ಆಗಿದೆ. ಶ್ರೀ ತಿಲಕರ ಗ್ರಂಥದೊಂದಿಗೆ ಅದನ್ನವಲೋಕಿಸಿದರೆ ಅದು ಹಳೆಯ ಶ್ರುತಿರಾಶಿಯ ಬಾಹ್ಯಾರ್ಥ ವಿವರಣೆಯ ಹೊಸ ಪ್ರಯತ್ನದ ಒಂದು ಆರಂಭಬಿಂದುವಾಗಬಹುದಾಗಿದೆ. ಅದು ಈಗ ವಿವರಿಸಲಸಾಧ್ಯವಾದ ಎಷ್ಟೋ ವಿಷಯುಗಳನ್ನು ವಿವರಿಸೀತು ಮತ್ತು ಹಳೆಯ ಆರ್ಯ ಪ್ರಪಂಚದ ವಾಸ್ತವಿಕ ಭೌತಿಕಾವರಣವನ್ನಲ್ಲದಿದ್ದರೂ ಅದರ ಭೌತಿಕ ಯೋನಿಗಳ (ಜನ್ಮಸ್ಥಳಗಳ) ಪುನಾರಚನೆಯನ್ನು ನಮ್ಮೆದುರಿಗೆ ಮಾಡಿ ಇಟ್ಟೀತು.

ಮೂರನೆಯ ಭಾರತೀಯ ದೇಣಿಗೆಯು ಕಾಲಮಾನದಲ್ಲಿ ಹಳೆಯದಾದರೂ ನನ್ನ ವರ್ತಮಾನ ಉದ್ದೇಶಕ್ಕೆ ಹೆಚ್ಚು ಹತ್ತಿರವಾದುದಾಗಿದೆ. ಅದಾವುದೆಂದರೆ : ವೇದವನ್ನು ಒಂದು ಜೀವಂತ ಶ್ರುತಿಯನ್ನಾಗಿ ಪುನಃ ಪ್ರತಿಷ್ಠಿಸುವುದರ ಸಲುವಾಗಿ ಆರ್ಯ ಸಮಾಜವನ್ನು ಸಂಸ್ಥಾಪಿಸಿದ

ದಯಾನಂದ ಸ್ವಾಮಿಗಳು ಇತ್ತ (ಸತ್ಯಪ್ರಕಾಶವೆಂಬ) ಕೊಡುಗೆ. ದಯಾನಂದ ಸ್ವಾಮಿಗಳೂ ನಿರುಕ್ತದಲ್ಲಿ ಲಭ್ಯವಾದ ಪ್ರಾಚೀನ ಭಾರತೀಯ ಭಾಷಾಶಾಸ್ತ್ರವನ್ನು ಸ್ವತಂತ್ರವಾಗಿ ಬಳಸಿಕೊಂಡರು ಮತ್ತು ಅದನ್ನೇ ತಮ್ಮ ಸಿದ್ಧಾಂತದ ನೆಲಗಟ್ಟನ್ನಾಗಿ ತೆಗೆದುಕೊಂಡರು. ಸ್ವತಃ ಮಹಾಸಂಸ್ಕೃತ-ವಿದ್ವಾಂಸರಾಗಿದ್ದ ಅವರು ಸ್ವ ಸಾಮಗ್ರಿಗಳನ್ನು ಸ್ತುತ್ಯರ್ಹ ಶಕ್ತಿಯಿಂದಲೂ ಸ್ವಾತಂತ್ರ್ಯದಿಂದಲೂ ಬಳಸಿಕೊಂಡರು. ಹಳೆಯ ಸಂಸ್ಕೃತ ಭಾಷೆಯ ನವಾರ್ಥದ್ಯೋತಕ ಬಳಕೆಯು ಅವರ ವೈಶಿಷ್ಟ್ಯ. ಅಂಥ ಬಳಕೆಯ ಬಗ್ಗೆ ಸಾಯಣ ಹೇಳಿದ "ಧಾತುಗಳ ಬಹ್ವರ್ಥವತ್ತೆ" ಆಧಾರ. ವೈದಿಕ ಋಷಿಗಳ ವಿಲಕ್ಷಣ ಪದ್ಧತಿಯನ್ನರಿತುಕೊಳ್ಳಲು ಈ ಸೂಚನೆಯನ್ನು ಚೆನ್ನಾಗಿ ಬಳಸಿಕೊಳ್ಳುವುದು ಬಹಳ ಮುಖ್ಯ ಎಂಬುದನ್ನು ಇನ್ನು ನೋಡೋಣ.

ದಯಾನಂದರ ವ್ಯಾಖ್ಯಾನಕ್ಕೆ ಆಧಾರಭೂತವಾದ ಕಲ್ಪನೆ ಇಂತಿದೆ : ವೇದಗಳು ಮತಧಾರ್ಮಿಕ, ನೈತಿಕ ಮತ್ತು ವೈಜ್ಞಾನಿಕ ಸತ್ಯದ ಸಮಗ್ರ ಆವಿರ್ಭೂತಿ. ಅವುಗಳ ಮತಧಾರ್ಮಿಕ ಉಪದೇಶವು ಏಕದೇವತಾವಾದ ; ವೈದಿಕ ದೇವತೆಗಳು ಒಬ್ಬನೇ ಒಬ್ಬನಾದ ಮಹಾದೇವನ ವಿವಿಧ ವರ್ಣನಾತ್ಮಕ ಹೆಸರುಗಳು : ಅವು ಅವರ ಶಕ್ತಿಗಳ ಕುರುಹುಗಳೂ ಆಗಿವೆ - ಆ ಶಕ್ತಿಗಳು ನಿಸರ್ಗದಲ್ಲಿ ನಡೆಸುತ್ತಿರುವ ವ್ಯಾಪಾರ ನಮ್ಮ ಮುಂದಿದೆ. ವೇದಗಳ ಅರ್ಥವನ್ನು ನಿಜವಾಗಿ ತಿಳಿದುಕೊಂಡರೆ ಆಧುನಿಕ ಶೋಧಗಳಿಂದ ಕಂಡುಹಿಡಿದ ಸತ್ಯಗಳೆಲ್ಲವನ್ನೂ ನಾವು ನಿಗಮಿಸಬಹುದು.

ಇಂಥ ಸಿದ್ಧಾಂತವನ್ನು ಸ್ಥಾಪಿಸುವುದು ಕಷ್ಟ ಎಂಬುದು ಸ್ಪಷ್ಟ. ದೇವತೆಗಳೆಲ್ಲಾ ಒಂದೇ ಒಂದಾದ ವಿಶ್ವಜನೀನ ಸತ್ತೆಯ (ಸತ್ತಾತ್ಮಕ ಪರಮಾತ್ಮನ) ವಿವಿಧ ಹೆಸರುಗಳು ಮತ್ತು ಅಭಿವ್ಯಕ್ತಿಗಳು ; ತನ್ನ ಸತ್ಯತೆಯ ಮೂಲಕ ಆ ಸತ್ತಾಪರಮಾತ್ಮನು ವಿಶ್ವೋತ್ತರಸ್ಥನಾಗಿರುತ್ತಾನೆ - ಎಂದು ಋಗ್ವೇದವೇ ಹೇಳುತ್ತದೆ. ಆದರೆ ಸೂಕ್ತಗಳ ಭಾಷೆಯಿಂದ ಆ ದೇವತೆಗಳಲ್ಲಿ ಭಿನ್ನ ನಾಮಗಳನ್ನಲ್ಲದೆ ಭಿನ್ನ ರೂಪಗಳನ್ನು (ಆಕಾರಗಳನ್ನೂ) ಶಕ್ತಿಗಳನ್ನೂ, ವ್ಯಕ್ತಿತ್ವಗಳನ್ನೂ ಆ ಏಕದೇವನ ಅಂಶಗಳನ್ನಾಗಿ ನಾವು ನೋಡುತ್ತೇವೆ. ವೇದದ ಏಕದೇವತಾವಾದವು ಜಗತ್ತಿನಲ್ಲಿ ಪ್ರಚುರವಾಗಿರುವ ಐಕ್ಯವಾದ, ಸರ್ವಪದಾರ್ಥಗಳೂ ದೇವತೆಗಳೆಂಬ ಅಜಿಜ್ಞಾನವಾದ (ಎಲ್ಲವೂ ದೇವರೇ ಎಂಬ ವಾದ) ಎಂಬ ಈ ಎಲ್ಲವನ್ನೂ ಒಳಗೊಳ್ಳುತ್ತದೆ ; ಅದೆಂದೂ ಇಂದಿನ ಹರಿತವೂ ನಿಶ್ಚಿತವೂ ಸರಳವೂ, ಆದ ಆಸ್ತಿಕ ಮತ ಶ್ರದ್ಧೆಯಾಗಿರಲಿಲ್ಲವೆಂಬುದಂತೂ ಖಚಿತ. ಇಂಥ ಸರಳವಾದ (ಅಥವಾ ಕಡಿಮೆ ಜಟಿಲವಾದ) ಸಿದ್ಧಾಂತವನ್ನು ವೇದ ಸೂಕ್ತಗಳಿಂದ ಹೊರತೆಗೆಯಬೇಕಾದರೆ ವೇದದ ಪಾಠದೊಡನೆ ಹಿಂಸಾತ್ಮಕ ಹೋರಾಟವನ್ನೇ ನಾವು ನಡೆಸಬೇಕಾಗುತ್ತದೆ. ಅರ್ಥಾತ್ ವೇದದ ಏಕದೇವತಾವಾದವು (ಏಕದೇವತಾವಾದವೇ ಆದರೂ) ಬಹಳ ಜಟಿಲ ಎಂದು ತಾತ್ಪರ್ಯ.

ಹಳೆಯ ಕುಲದವರು ಭೌತಿಕ ವಿಜ್ಞಾನಗಳಲ್ಲಿ ಬಹಳ ಹೆಚ್ಚು ಮುಂಬರಿದಿದ್ದರೆಂಬುದನ್ನೂ ಬೇಕಾದರೆ ಒಪ್ಪಬಹುದು. ಈ ಅಂಶವನ್ನಿನ್ನೂ ಯಾರೂ ಮನ್ನಿಸದಿದ್ದರೂ ಸರಿಯೆ. ಈಜಿಪ್ಟಿನವರೂ ಚಾಲ್ಡಿಯದವರೂ ಆಧುನಿಕ ವಿಜ್ಞಾನವು ಪುನಃ ಸಂಶೋಧಿಸಿದ ಹಾಗು ಪುನಃ ಸಂಶೋಧಿಸದ ಎಷ್ಟೋ ಅಂಶಗಳನ್ನು ಬಲ್ಲವರಾಗಿದ್ದರೆಂಬುದಿಗ ನಮಗೆ ತಿಳಿದು ಬಂದಿದೆ. ಪ್ರಾಚೀನ ಭಾರತೀಯರೇನೂ ಕಡಿಮೆ ಮಟ್ಟದ ಖಗೋಲ ಶಾಸ್ತ್ರಜ್ಞರಾಗಿರಲಿಲ್ಲ. ಅವರು ಯಾವಾಗಲೂ ಕುಶಲ ವೈದ್ಯಶಾಸ್ತ್ರಜ್ಞರಾಗಿದ್ದರು ; ಹಿಂದು ವೈದ್ಯಶಾಸ್ತ್ರವೂ ರಸಾಯನಶಾಸ್ತ್ರವೂ ವಿದೇಶೀಯ ಮೂಲವುಳ್ಳವುಗಳಾಗಿರಲಿಲ್ಲ. ಪ್ರಾಚೀನ ಕಾಲದಲ್ಲೇ ಅವರು ಇತರ ಭೌತಿಕ ಜ್ಞಾನ ಶಾಖೆಗಳಲ್ಲಿಯೂ ಹೆಚ್ಚಿನ ಪ್ರಬುದ್ಧರಾಗಿದ್ದಿರುವುದು ಸಾಧ್ಯ. ಆದರೆ ದಯಾನಂದರು ನಿರ್ದಾರವಾಗಿ ಹೇಳಿದ ಹಾಗೆ

ವೈಜ್ಞಾನಿಕ ವಿಷಯಗಳ ನಿರಪೇಕ್ಷ ಸಮಗ್ರತೆ ವೇದದಲ್ಲಿ ಆವಿರ್ಭವಿಸಿತ್ತೆಂಬುದನ್ನು ಸಿದ್ಧ ಮಾಡಲು ಬಹಳ ಸಾಹಸ ಮಾಡಬೇಕಾದೀತು-ಅದನ್ನೆತ್ತಿ ಹಿಡಿಯಲು ಇನ್ನೂ ಹೆಚ್ಚಿನ ಪ್ರಮಾಣಗಳನ್ನು ಹುಡುಕಿ ತೆಗೆಯಬೇಕಾದೀತು.

ನಾನು ಎದುರಿಡಲಿರುವ ತಾತ್ಕಾಲಿಕ ಸಿದ್ಧಾಂತದ ಪ್ರಕಾರ ಸಂಶೋಧಿಸಲು ಹೊರಟಾಗ ವೇದಾರ್ಥವು ದ್ವಿಮುಖವಾಗಿದೆಯೆಂಬುದನ್ನೂ ಆ ಮುಖಗಳೆರಡೂ ನಿಕಟವರ್ತಿಗಳಾಗಿದ್ದರೂ ಅವುಗಳನ್ನು ಪ್ರತ್ಯೇಕವಾಗಿಯೇ ಇಡಬೇಕೆಂಬುದನ್ನೂ ಒಪ್ಪಿಕೊಳ್ಳಬೇಕಾಗುತ್ತದೆ. ಋಷಿಗಳು ತಮ್ಮ ವಿಚಾರದ ಸಾರವನ್ನು ಒಂದು ಸಮಾನಾಂತರ ರೇಖೆಗಳ ಪದ್ಧತಿಯಲ್ಲಿ ವ್ಯವಸ್ಥಾಪಿಸಿದರು. ಒಂದೇ ದೇವತೆಗಳು, ಆ ಪದ್ಧತಿಯ ಪ್ರಕಾರ, ಒಂದೇ ಬಾರಿಗೆ, ವಿಶ್ವ ನಿಸರ್ಗದ ಆಂತರಿಕ ಮತ್ತು ಬಾಹ್ಯ ಶಕ್ತಿಗಳಾಗಿದ್ದವು; ಎರಡೂ ಪ್ರಕಾರಗಳಲ್ಲಿ ಅವುಗಳನ್ನು ಆರಾಧಿಸಲು ಅನುಕೂಲವಾಗುವಂತೆ ದ್ವಿಮೌಲ್ಯಪದ್ಧತಿಯನ್ನುಳ್ಳ ಒಂದೇ ಬಗೆಯ ಭಾಷೆಯ ಮೂಲಕ ಉಕ್ತ ವಿಚಾರ ಸಾರವನ್ನು ಅಭಿವ್ಯಂಜಿಸುವ ವ್ಯವಸ್ಥೆ ಮಾಡಿದರು. ಆದರೆ ಮಾನಸಶಾಸ್ತ್ರೀಯ ಅರ್ಥವು ಯಾಜಮಾನ್ಯ ವಹಿಸಿರುವುದಲ್ಲದೆ, ಅದು ಹೆಚ್ಚು ಸುಸಂಬದ್ಧವಾಗಿಯೂ ಸುಸನ್ನಿಹಿತವಾಗಿಯೂ ಸುಸಮನ್ವಿತವಾಗಿಯೂ ವ್ಯಾಪಕವಾಗಿಯೂ ಹರಿಯುತ್ತದೆ ; ಭೌತಿಕಾರ್ಥವು ಅದರ ಮುಂದೆ ಗೌಣವಾಗುತ್ತದೆ. ವೇದವು ಮೂಲತಃ ಆಧ್ಯಾತ್ಮಿಕ ಪ್ರಬೋಧೋದಯಕ್ಕೂ ಆತ್ಮ ಸಂಸ್ಕರಣಕ್ಕೂ ಮೀಸಲಾಗಿದೆ. ಅದರ ಪ್ರಥಮೋದ್ದೇಶವೇ ಇದು. ಆದುದರಿಂದ ಈ ಅರ್ಥವನ್ನು ನಾವು ಮೊದಲು ಅದಕ್ಕೆ ಮತ್ತೆ ಕೊಡಿಸಬೇಕಾಗಿದೆ.

ಈ ಕಷ್ಟಕಾರ್ಯಕ್ಕೆ ಹಿಂದಿನ ಮತ್ತು ಇಂದಿನ ಪ್ರತಿಯೊಂದು ವಿವರಣ ಪದ್ಧತಿಯೂ ನೆರವೀಯುತ್ತದೆ. ಹೊರ ಸಂಕೇತಗಳ ಮತ್ತು ಅವುಗಳ ಅಪಾರವಾದ ಪಾರಂಪರಿಕ ಅರ್ಥಗಳನ್ನೂ ವಿವರಣೆಗಳನ್ನೂ ಸಾಯಣನೂ ಯಾಸ್ಕನೂ ಒದಗಿಸುತ್ತಾರೆ ; ಆ ಸಂಕೇತಗಳು ಕರ್ಮಕಾಂಡದ ಚೌಕಟ್ಟಿಗೆ ಸೇರಿದಂಥವುಗಳು. ಪ್ರಾಚೀನ ಋಷಿಗಳ ಮಾನಸಶಾಸ್ತ್ರೀಯ ಹಾಗೂ ತತ್ವಶಾಸ್ತ್ರೀಯ ಕಲ್ಪನೆಗಳ ಸೂಚಕಗಳನ್ನು ಉಪನಿಷತ್ತುಗಳು ಒದಗಿಸುತ್ತವೆ ; ಅಲ್ಲದೆ, ಅವು ಅವರ ಆಧ್ಯಾತ್ಮಿಕ ಅನುಭೂತಿಯ ಹಾಗೂ ಪ್ರತಿಭೋನ್ಮೇಷಗಳ ಪದ್ಧತಿಯನ್ನೂ ಕೈಗೆ ಕೊಡುತ್ತವೆ. ಯುರೋಪೀಯ ಪಾಂಡಿತ್ಯವು ತುಲನಾತ್ಮಕ ಸಂಶೋಧನೆಯ ವೈಮರ್ಶಿಕ ಪದ್ಧತಿಯನ್ನು ಒದಗಿಸುತ್ತದೆ - ಆದರೆ ಅದನ್ನಿನ್ನೂ ಸಮಗ್ರಗೊಳಿಸಬೇಕಾಗಿದೆ ; ಹೀಗಿದ್ದರೂ ಅದು ಲಭ್ಯ ವಸ್ತುಗಳ ಸಂಗ್ರಹವನ್ನು ಅಧಿಕಗೊಳಿಸಬಲ್ಲದು ಮತ್ತು ಖಚಿತಗೊಳಿಸಬಲ್ಲದು. ಆ ಮೂಲಕ ಅದು ಕಾಲ ಕ್ರಮೇಣ, ಈವರೆಗೆ ನ್ಯೂನವಾಗಿದ್ದ ವೈಜ್ಞಾನಿಕ ನಿಶ್ಚಿತತೆಯನ್ನೂ ಸುದೃಢವಾದ ಬೌದ್ಧಿಕ ಆಧಾರವನ್ನೂ ವೇದಾರ್ಥನಿರ್ಣಯಕ್ಕೆ ಕೊಡಬಲ್ಲುದು. ಋಷಿಗಳ ಭಾಷೆಯ ರಹಸ್ಯಕ್ಕೆ ದಯಾನಂದರು ಸೂಚನೆಗಳನ್ನು ಕೊಟ್ಟಿದ್ದಾರೆ ಮತ್ತು ವೈದಿಕ ಮತದ ಒಂದೇ ಒಂದಾದ ಕೇಂದ್ರ ವಿಚಾರವನ್ನು ಪುನಃ ಒತ್ತಿ ಹೇಳಿದ್ದಾರೆ. ಆ ವಿಚಾರವೆಂದರೆ, ಒಬ್ಬನೇ ಸತ್ತಾತ್ಮಕ ಸತ್‌ಪದಾರ್ಥವೆಂಬುದು ವೇದ ಸಾರ ; ಇತರ ದೇವತೆಗಳು ತಮ್ಮ ಅಸಂಖ್ಯಾತ ಹೆಸರುಗಳಿಂದ ಮತ್ತು ಆಕೃತಿಗಳಿಂದ ಆ ಪರತತ್ವದ (ಪರಪದಾರ್ಥದ) ಐಕ್ಯಭಾವದ ಬಹುಮುಖತೆಯನ್ನು ಅಭಿವ್ಯಕ್ತಗೊಳಿಸುತ್ತವೆ.

ಮಧ್ಯಭೂತಕಾಲದ ಇಷ್ಟು ನೆರವಿನಿಂದ ವೇದದ ಈ ಪ್ರಪ್ರಾಚೀನತೆಯನ್ನು ಪುನಾರಚಿಸುವುದರಲ್ಲೂ ವೇದದ್ವಾರಾ ಪ್ರಾಗೈತಿಹಾಸಿಕ ಜನರ ವಿವೇಕವನ್ನು ರೂಪಿಸಿದ ಆಲೋಚನೆಗಳ ಹಾಗೂ ವಾಸ್ತವಿಕತೆಗಳ ಮಹಾಸೌಧವನ್ನು ಹೊಗುವುದರಲ್ಲೂ ನಾವು ಜಯಶೀಲರಾದೇವು.

❖ ❖

## ಅಧ್ಯಾಯ-೪

# ಮಾನಸಶಾಸ್ತ್ರೀಯ ಸಿದ್ಧಾಂತದ ಬುನಾದಿಗಳು

ವೇದಭಾಷೆಯೇ ಸ್ಪಷ್ಟವಾಗಿ ತೋರಿಸುವ ತನ್ನ ನೆಲಗಟ್ಟಿನಿಂದಲೇ ನಾವು ವೇದಾರ್ಥದ ಬಗೆಗಿನ ತಾತ್ಕಾಲಿಕ ಸಿದ್ಧಾಂತವನ್ನು ನಿಶ್ಚಿತವೂ ಸಮಂಜಸವೂ ಆಗುವಂತೆ ಸ್ಥಾಪಿಸಬಲ್ಲೆವು. ಅದರ ತಾತ್ಪರ್ಯದ ಬಹುಭಾಗವು ಸಂಕೇತಗಳ ಮತ್ತು ಅಲಂಕಾರೋಕ್ತಿಗಳ ಪದ್ಧತಿಯದೇ ಆಗಿದ್ದರೂ ಅದರ ಅರ್ಥವನ್ನಿನ್ನೂ ನಾವು ಹುಡುಕಿ ತೆಗೆಯಬೇಕಾಗಿದ್ದರೂ ಆ ನಿಶ್ಚಿತಾರ್ಥಕ್ಕೆ ನಮ್ಮನ್ನು ಕರೆದುಕೊಂಡು ಹೋಗುವ ಸ್ಪಷ್ಟ ಸೂಚನೆಗಳು ಅದರ ಸೂಕ್ತಗಳ ಸುವ್ಯಕ್ತ ಭಾಷೆಯಲ್ಲಿ ಇದ್ದಿರಲೇಬೇಕು. ಹಾಗಲ್ಲದೆ ಸ್ವತಃ ಸಂಕೇತಗಳೇ ಸಂದಿಗ್ಧವಾಗಿದ್ದರೆ, ಋಷಿಗಳು ಆಯ್ದುಕೊಂಡ ಅಲಂಕಾರೋಕ್ತಿಗಳ ನಿಜವಾದ ಸಾರಾಂಶವನ್ನು ಶೋಧಿಸುವುದರ ಬದಲು ನಮ್ಮ ಊಹೆ ಮತ್ತು ಪಕ್ಷಪಾತಗಳಿಂದ ನಮ್ಮದೇ ಆದ ಒಂದು ಪದ್ಧತಿಯನ್ನು ರಚಿಸಿ ಸಿದ್ಧ ಮಾಡುವ ಅಪಾಯವು ಕಾದಿದೆ. ಆದ್ದರಿಂದ ನಮ್ಮ ಸಿದ್ಧಾಂತವು ವಿಕಟೋನ್ಮೇಷವಾಗಿರಲಿ, ಸಮಗ್ರವಾಗಿರಲಿ ಅದೊಂದು ಹೊಳೆ ಹೊಳೆವ ಗಾಳಿ ಗೋಪುರವಾದೀತಲ್ಲದೆ, ಘನತೆವೆತ್ತ ವಾಸ್ತವಿಕ ಸೌಧವೆಂದಾಗದು.

ಈ ಸಂದರ್ಭದಲ್ಲಿ ನಮ್ಮ ಕರ್ತವ್ಯವೇನು? ವೇದದಲ್ಲಿ ಅರೆಪೊರಕ ಅನಾಗರಿಕ ಅರ್ಥವಿಲ್ಲವಷ್ಟೇ ಅಲ್ಲದೆ, ಆಲಂಕಾರಿಕ ಹಾಗೂ ಸಾಂಕೇತಿಕ ಉಕ್ತಿಗಳಿವೆ ; ಸ್ಪಷ್ಟವಾಗಿ ಬರೆದ ಸೂಕ್ತಗಳಲ್ಲಿ ಸ್ಪಷ್ಟವೂ ಉದಾತ್ತವೂ ಆದ ಸಾರವಿದೆ - ಎಂಬ ನಮ್ಮ ಊಹೆಯನ್ನು ಅವುಗಳಲ್ಲಿಯ ಮಾನಸ ಶಾಸ್ತ್ರೀಯ ತಿರುಳು ಸಮರ್ಥಿಸುವಷ್ಟಿದೆಯೋ ಇಲ್ಲವೋ - ಎಂಬುದನ್ನು ನಿರ್ಧರಿಸುವುದೇ ನಮ್ಮ ಕರ್ತವ್ಯ. ಆಮೇಲೆ ಅವುಗಳಲ್ಲಿರುವ ಪ್ರತಿಯೊಂದು ಸಾಂಕೇತಿಕ ಹಾಗೂ ಅಲಂಕಾರಿಕ ಉಕ್ತಿಯ ಅರ್ಥವನ್ನು ಸಾಧ್ಯವಿದ್ದಷ್ಟು ಮಟ್ಟಿಗೆ ಸೂಕ್ತಗಳ ಆಂತರಿಕ ಪ್ರಮಾಣದಿಂದಲೇ ದೊರಕಿಸಿಕೊಳ್ಳುವುದು - ಅವುಗಳಿಂದಲೇ ಪ್ರತಿಯೊಂದು ದೇವತೆಯ ಸರಿಯಾದ ಮಾನಸ ಶಾಸ್ತ್ರೀಯ ಕರ್ತವ್ಯವನ್ನು ಕಂಡುಕೊಳ್ಳುವುದು ನಮ್ಮ ಕರ್ತವ್ಯ. ವೇದದ ಪ್ರತಿಯೊಂದು ಪದಕ್ಕೂ ಅಶಿಥಿಲವೂ ಸುದೃಢವೂ ಆಗಿ ನೆಲೆನಿಂತ ಅರ್ಥಕ್ಕೆ ಭಾಷಾಶಾಸ್ತ್ರದ ಸಮರ್ಥನೆ ಕೊಡಬೇಕು. ಹಾಗೆ ಕೊಡುವಾಗ ಆ ಪದ ಬಂದಲ್ಲೆಲ್ಲಾ ಸಂದರ್ಭೋಚಿತವಾಗಿದೆಯೇ ಇಲ್ಲವೇ ಎಂಬುದನ್ನು ಪರಾಂಬರಿಸಬೇಕು. ಏಕೆಂದರೆ ನಾವು ಮೊದಲೇ ಹೇಳಿದಂತೆ ವೇದದ ಭಾಷೆ ಸುಸ್ಥಿರ, ಬದಲಾಗದಿರುವಂಥದು. ಅದರ ಪದ ಸಂಘಟನೆಯು ಜಾಗರೂಕತೆಯಿಂದಲೂ ಎಚ್ಚರಿಕೆಯಿಂದಲೂ ಆದದ್ದೆಂಬ ಗೌರವ ಬೇರೆ ಇದೆ. ಆ ಪದಬಂಧವು ಅನುಸ್ಯೂತವಾಗಿ ಲೋಕಾಭಿರಾಮ ನಂಬಿಗೆಯನ್ನೋ ಕರ್ಮವನ್ನೋ ಸಾಂಪ್ರದಾಯಿಕ ಸಿದ್ಧಾಂತವನ್ನೋ ಅನುಭವವನ್ನೋ

ಹೇಳುವಂಥದಾಗಿದೆ. ವೇದರ್ಷಿಗಳ ವಾಣಿಯು ಕ್ಷಣಿಕವೂ ಪರಿವರ್ತ್ಯವೂ ಸ್ವಚ್ಛಂದವೂ ಆಗಿದ್ದರೆ ಅಥವಾ ಅವರ ವಿಚಾರಗಳು ಸ್ಪಷ್ಟವಾಗಿ ಸಂಶಯಾಸ್ಪದವುಳ್ಳವುಗಳಾಗಿದ್ದರೆ ಮಾತ್ರ ನಾವು ಬೇಕಾದ ಹಾಗೆ ಅವರ ಸಂಜ್ಞಾಪದಗಳಿಗೆ ಅಸಂಬದ್ಧ ಅರ್ಥ ಹಚ್ಚಿದ್ದನ್ನೂ ಅಸಂಬದ್ಧ ಸಂಬಂಧವನ್ನು ಅವರ ಕಲ್ಪನೆಗಳ ನಡುವೆ ಇರುವುವೆಂದು ನಾವು ನಿಗಮಿಸಿದ್ದನ್ನೂ ಸಹಿಸಬಹುದಾಗಿತ್ತು, ಸಮರ್ಥಿಸಿಕೊಳ್ಳ-ಬಹುದಾಗಿತ್ತು. ಆದರೆ ವೇದ ಸೂತ್ರಗಳೇ ಸ್ವತಃ ನಮ್ಮ ಮೇಲ್ನೋಟಕ್ಕೇ ಕಾಣುವ ತದ್ವಿರುದ್ಧ ನಿದರ್ಶನವನ್ನು ನೀಡುತ್ತವೆ. ಅರ್ಥವಿವರಣಕಾರನಿಗೆ ನೀನು ಅರ್ಥಮಾಡ ಹೊರಟ ಮೂಲ ಸೂಕ್ತಗಳಲ್ಲಿಯ ಪ್ರಾಮಾಣಿಕತೆ ಮತ್ತು ಜಾಗರೂಕತೆಗಳನ್ನು ನಿನ್ನಿಂದ ನಿರೀಕ್ಷಿಸುತ್ತೇವೆ-ಎಂದು ಕೇಳುವ ಹಕ್ಕು ನಮಗಿದೆ. ಮೇಲ್ನೋಟಕ್ಕೇ ಕಾಣುವಂತೆ ವೇದಧರ್ಮದ ವಿವಿಧಾಭಿಪ್ರಾಯಗಳ ಹಾಗೂ ಪ್ರಶಸ್ತ ಪದ ಪ್ರಯೋಗಗಳ ನಡುವೆ ಯಾವಾಗಲೂ ಒಂದು ಸಂಬಂಧ ಸಾತತ್ಯವಿದೆ. ಅದರ ಅರ್ಥವನ್ನು ವ್ಯಾಖ್ಯಾನಿಸುವಾಗ ಎಲ್ಲಾದರೂ ಅಸಮನ್ವಯ ಅಥವಾ ಅನಿಶ್ಚಯ ಕಂಡುಬಂದರೆ ಅದು ವ್ಯಾಖ್ಯಾತೃಗತವಾದ ದೌರ್ಬಲ್ಯವನ್ನು ಸೂಚಿಸುವುದಲ್ಲದೆ, ಸಂಶೋಧಕತ್ವದ ನ್ಯೂನತೆಯನ್ನು ಎತ್ತಿ ತೋರಿಸುವುದಲ್ಲದೆ, ವೇದದ ವಾಚ್ಯಾರ್ಥವು ಸುಸಂಬಧವುಳ್ಳದ್ದಾಗಿಲ್ಲ, ಅದು ಅಪಮಾರ್ಗದರ್ಶನ ಮಾಡುತ್ತದೆ ಎಂದು ನಾವು ಹೇಳಲು ಸಾಧ್ಯವಿಲ್ಲ-ಎಂಬುದನ್ನು ಸೂಕ್ತಗಳು ಸಿದ್ಧಮಾಡಿ ತೋರಿಸುತ್ತವೆ.

ನಾವು ಈ ಮೊದಲ ಕರ್ತವ್ಯವನ್ನು ಜಾಗರೂಕತೆಯಿಂದಲೂ ತಲಸ್ಪರ್ಶಿಯಾದ ಸೂಕ್ಷ್ಮಜ್ಞತೆಯಿಂದಲೂ ಪರಿಪೂರ್ಣವಾಗಿ ಮಾಡಿದ ಮೇಲೆ ನಾವು ನಿರ್ಧರಿಸಿದ ಅರ್ಥವಿವರಣೆಯು ಯಾವುದೇ ಸಂದರ್ಭದಲ್ಲಾದರೂ ಸ್ವಾಭಾವಿಕವಾಗಿ ಹಾಗೂ ಸುಲಭವಾಗಿ ಒಗ್ಗುತ್ತದೆ ಎಂಬುದನ್ನು ಸೂಕ್ತಗಳನ್ನು ಭಾಷಾಂತರಿಸುವ ಮೂಲಕ ತೋರಿಸಿ ಕೊಡಬೇಕು. ಅಸ್ಪಷ್ಟವೆನ್ನಿಸುತ್ತಿದ್ದ ಅಂಶಗಳನ್ನು ನಮ್ಮ ವ್ಯಾಖ್ಯಾನ ಸ್ಪಷ್ಟಪಡಿಸಬೇಕು. ಗೊಂದಲವಿದ್ದಲ್ಲಿ ಸುಸಂಬದ್ಧತೆ ಇದೆ ಎಂದು ತೋರಿಸಬೇಕು. ಇಡೀ ಸೂಕ್ತಗಳು ಈ ಪ್ರಕಾರ ಸ್ಪಷ್ಟವೂ ಸುಸಂಬದ್ಧವೂ ಆದ ಅರ್ಥವನ್ನು ಕೊಡುತ್ತವೆ ಎಂಬುದನ್ನು ತೋರಿಸಿ ಕೊಡಬೇಕು ; ಉತ್ತರೋತ್ತರವಾಗಿ ಬರುವ ಸೂಕ್ತಗಳು ಸಂಬಂಧಿಸಿದ ವಿಚಾರಗಳಲ್ಲಿ ಹೀಗಿರುವುದನ್ನು ತೋರಿಸಿ ಕೊಡಬೇಕು ; ಈಯೆಲ್ಲವುಗಳಿಂದ ಲಬ್ಧವಾದ ಪರಿಣಾಮವು ಅಗಾಧವೂ ಸುಸಂಬದ್ಧವೂ ಆದ ಪ್ರಾಚೀನ ಸಿದ್ಧಾಂತಗಳೆಂದು ತೋರಬೇಕು - ಈ ಕರ್ತವ್ಯವನ್ನು ನಾವು ಮಾಡಿದ ಮೇಲೆ, ಇತರ ತಾತ್ಕಾಲಿಕ ಸಿದ್ಧಾಂತಗಳ ಜೊತೆಗೆ ನಿಲ್ಲುವ ಹಕ್ಕನ್ನು ಪಡೆದು ಅವುಗಳಿಗೆ ರಣಾಹ್ವಾನನೀಡಬಹುದು ಅಥವಾ ಅವುಗಳಲ್ಲಿರುವ ಸಾಧಾರಣಾಂಶಗಳನ್ನು ನಮ್ಮ ಬೆಂಬಲದಿಂದ ಸರಿಯಾಗಿ ಪೂರ್ತಿಗೊಳಿಸ-ಬಹುದು. ನಮ್ಮ ತಾತ್ಕಾಲಿಕ ಸಿದ್ಧಾಂತದ ಸಂಭಾವ್ಯತೆ ಅದರಿಂದ ಕಡಿಮೆಯಾಗದು ; ವೇದದಲ್ಲಿ ಆವಿರ್ಭವಿಸಿದ ವಿಚಾರಗಳೂ ಸಿದ್ಧಾಂತಗಳೂ ಆಮೇಲೆ ಬಂದ ಭಾರತೀಯ ವಿಚಾರ ಮತ್ತು ಧಾರ್ಮಿಕ ಅನುಭವಗಳ ಸ್ವರೂಪದ ಸ್ವಾಭಾವಿಕವಾದ ಮೂಲ (ತಂದೆ) ಎಂಬ ನಮ್ಮ ವಾದದ ನ್ಯಾಯ್ಯತೆಯು ಸಮರ್ಥಿಸಲ್ಪಟ್ಟೀತು : ವೇದಾಂತ ಹಾಗೂ ಪುರಾಣಗಳೇ ಆಮೇಲೆ ಉದಯಿಸಿದ ಭಾರತೀಯ ವಿಚಾರ ಮತ್ತು ಧಾರ್ಮಿಕಾನುಭವಗಳೆಂಬುದಿಲ್ಲಿ ಸ್ಪಷ್ಟ.

ಇಂಥ ಗುರುತರವೂ ಸೂಕ್ಷ್ಮಾಂಶ ವಿಶ್ಲೇಷಕವೂ ಆದ ಶ್ರಮವು ಈ ಸಂಕ್ಷಿಪ್ತವೂ ಸಾರಾಂಶ ಸ್ವರೂಪದ್ದೂ ಆದ ಅಧ್ಯಾಯಗಳ ವ್ಯಾಪ್ತಿಯನ್ನು ಮೀರಿದಂಥದಾಗಿದೆ. ವೇದವೇ ಸ್ವತಃ ನಮಗೆ ನಿಗಮನಿಸಲೆಡೆಗೊಡುವ ಮುಖ್ಯ ಸೂಚನೆಗಳೇ ನಾನು ನನ್ನ ಅಭ್ಯಾಸದಿಂದ ಕಂಡುಕೊಂಡ ಫಲಿತಾಂಶಗಳು - ಈ ಫಲಿತಾಂಶಗಳೇ ನಾನು ವರವಾಗಿ ಪಡೆದ ವೇದದರ್ಶನ ಮಾರ್ಗ ಮತ್ತು ಅದರ ಮುಖ್ಯ ಅಡ್ಡ ತಿರುಹುಗಳು ; ಇವು ನಾನು ಕೊಡುವ ಸೂಚನೆಗಳು ; ಹೀಗೆ

ಕೊಡುವುದರ ಉದ್ದೇಶ ಇಷ್ಟವಿದ್ದವರಿಗೆ ಪ್ರಯೋಜನವಾಗಲಿ ಎಂದು. ಇಷ್ಟು ಮಾತ್ರ ಈಗ ಮುಂದೆ ಬರಲಿರುವ ಅಧ್ಯಾಯಗಳ ವ್ಯಾಪ್ತಿಗೆ ಒಳಪಟ್ಟಿದೆ. ನನ್ನ ಮನಸ್ಸಿನಲ್ಲಿ ಹುಟ್ಟಿದ ಈ ಸಿದ್ಧಾಂತದ ಮೂಲದ ಅಂಶಗಳನ್ನು ವಿವರಿಸುವುದು ನನಗೆ ಯೋಗ್ಯವೆಂದು ತೋರುತ್ತದೆ. ಏಕೆಂದರೆ, ಓದುಗನಿಗೆ ನಾನು ಹಿಡಿದ ಮಾರ್ಗದ ಪರಿಚಯ ಹೆಚ್ಚು ಚೆನ್ನಾಗಿ ಅರ್ಥವಾದೀತು ಅಥವಾ ಅವನಿಗಿಷ್ಟ ಬಂದರೆ ಈ ಕಷ್ಟವಾದ ಸಮಸ್ಯೆಗೆ ನ್ಯಾಯವಾಗಿ ಅನ್ವಯಿಸದ ಹಾಗೂ ಬೇಕಾದ ವಿಚಾರ ಧಾರೆಯನ್ನು ಪರಿಸೀಮಿತಗೊಳಿಸಿರಬಹುದಾದ ಅಥವಾ ಅದರ ಮೇಲೆ ಪ್ರಭಾವ ಬೀರಿರಬಹುದಾದ ವೈಯಕ್ತಿಕ ಪಕ್ಷಪಾತಗಳನ್ನು ಅಥವಾ ಪೂರ್ವಗ್ರಹಗಳನ್ನು ಪರೀಕ್ಷಿಸಿ ತಡೆಹಿಡಿಯಬಹುದು.

ವೇದವೋದದ ಬಹುಸಂಖ್ಯಾತ ಭಾರತೀಯ ವಿದ್ಯಾವಂತರಂತೆ ನಾನೂ ನಿರಾಲೋಚನೆಯಿಂದ ಮತ್ತು ನಿಷ್ಪರೀಕ್ಷಣದಿಂದ ಧಾರ್ಮಿಕ, ಐತಿಹಾಸಿಕ ಹಾಗೂ ಕುಲೀನ ವೇದಾರ್ಥಗಳನ್ನು ಪ್ರಾಚೀನ ಸೂಕ್ತಗಳಲ್ಲಿ ಕೊಟ್ಟಿರುವುದು ಹೀಗೆ ಎಂದು ಯುರೋಪಿಯನ್ ವಿದ್ವದ್‌ಗಣ ಹೇಳಿದ್ದನ್ನು ಒಪ್ಪಿಕೊಂಡಿದ್ದೆ. ತತ್ಫಲವಾಗಿ ಆಧುನೀಕೃತ ಹಿಂದು ಅಭಿಪ್ರಾಯದ ಸಾಮಾನ್ಯ ಹಾದಿಯನ್ನು ಹಿಡಿದು ನಾನು ಭಾರತೀಯ ವಿಚಾರದ ಮತ್ತು ಮತಧರ್ಮದ ಅತ್ಯಂತ ಹಳೆಯ ಆಕರವೆಂದರೆ ಉಪನಿಷತ್ತು, ಅದೇ ನಿಜವಾದ ವೇದ, ಮೊಟ್ಟಮೊದಲನೆಯ ಜ್ಞಾನಗ್ರಂಥ ಎಂದು ತಿಳಿದೆನು. ನನಗೆ ಋಗ್ವೇದದ ಇಂದಿನ ಭಾಷಾಂತರ ಮಾತ್ರ ಗೊತ್ತಿತ್ತು. ಈ ಅಗಾಧ ಶ್ರುತಿಯು ನಮ್ಮ ರಾಷ್ಟ್ರೀಯ ಚರಿತ್ರೆಯ ಬಹು ಮುಖ್ಯ ದಾಖಲೆಯಾಗಿದೆಯಾದರೂ ವಿಚಾರ ಚರಿತ್ರೆಯ ಹಾಗೂ ಆಧ್ಯಾತ್ಮಿಕ ಅನುಭೂತಿಯ ದೃಷ್ಟಿಯಲ್ಲಿ ಅದು ಬಹಳ ಅಲ್ಪ ಬೆಲೆಯದು ಅಥವಾ ಅಗಣ್ಯವಾದುದು ಎನ್ನಿಸಿತು.

ನಾನು ಭಾರತೀಯ ಯೋಗಮಾರ್ಗ ಹಿಡಿದು ಒಂದು ವಿಧದ ಆತ್ಮವಿಕಾಸ ಪಡೆಯುತ್ತಿದ್ದಾಗ, ವೈದಿಕ ವಿಚಾರದ ಮೊದಲ ಸಂಪರ್ಕವು ನನಗೆ ಪರೋಕ್ಷವಾಗಿ ಉಂಟಾಯಿತು. ಅದು ನನಗೆ ತಿಳಿಯದಂತೆಯೇ ಹಳೆಯದೂ ನಮ್ಮ ಹಿರಿಯರು ನಡೆದುದೂ ಆದರೀಗ ಬಹಳ ಜನ ಅನುಸರಿಸದಿರುವುದೂ ಆದ ದಾರಿಗಳಲ್ಲಿ ಕೂಡಿಕೊಂಡಿತು. ತಾವೇ ಕ್ರಮಬದ್ಧವಾಗುತ್ತಿದ್ದ ಕೆಲ ಮಾನಸ ಶಾಸ್ತ್ರೀಯ ಅನುಭವಗಳಿಗೆ, ಅಂಟಿಕೊಂಡಿದ್ದ ಸಾಂಕೇತಿಕ ಹೆಸರುಗಳು, ಆ ಕಾಲದಲ್ಲಿ, ನನ್ನ ಮನಸ್ಸಿನಲ್ಲಿ ಉದಯಿಸತೊಡಗಿದವು. ಅವುಗಳಲ್ಲಿ ಇಳೆ, ಸರಸ್ವತಿ, ಸರಮೆ ಎಂಬ ಮೂರು ಸ್ತ್ರೀಶಕ್ತಿಗಳು ಪ್ರಾತಿಭ ವಿಚಾರ ಧಾರೆಯ ಮೂರು ಅಂಗಗಳನ್ನು ಪ್ರತಿನಿಧಿಸುತ್ತಿದ್ದವು. ಆ ವಿಚಾರಧಾರೆಯ ಅಂಗಗಳು ನಾಲ್ಕು.[೧] ಈ ಮೂರರಲ್ಲಿ ಎರಡು ವೈದಿಕ ದೇವತೆಗಳ ಹೆಸರುಗಳೆಂಬುದು ನನಗೆ ಗೊತ್ತಿರಲಿಲ್ಲ. ಸರಮೆಯ ಪರಿಚಯ ಚೆನ್ನಾಗಿತ್ತು : ಸರಸ್ವತಿಯು ವಿದ್ಯಾದೇವತೆಯೆಂದೂ ಇಳೆ ಚಂದ್ರವಂಶದ ತಾಯಿಯೆಂದೂ ಹಳೆಯ ಪುರಾಣಗಳಿಂದ ತಿಳಿಯಿತು. ಸರಮೆಯು ಸುಪರಿಚಿತೆ. ಆದರೆ ಅವಳು ವೈದಿಕ ಸ್ವರ್ಗದ ನಾಯಿ ! ಅವಳು ಅರ್ರೀವ್ ಹೆಲನೆಂದೆನ್ನಿಸಿತು ; ಭೌತಿಕ ಉಷೆಯು ಅಂಧಕಾರದ ಗುಹೆಗೆ ಓಡುತ್ತಿರುವ ಭೌತಿಕ ಬೆಳಕಾಗಿ ನನಗವಳು ತೋರಿದಳು. ಅವಮಾನಸವೇ ಆ ಅಂಧಕಾರದ ಗುಹೆ. ಅದರಲ್ಲಿದ್ದ ಜ್ಞಾನಕಿರಣಗಳನ್ನು ಮುಕ್ತಗೊಳಿಸುವುದು ಉಷೆಯ ಗುರಿ. ಆ ಕಿರಣಗಳೇ ಕಳೆದು ಹೋದ

---

೧. ವಿಚಾರಶಕ್ತಿ, ಆವಿರ್ಭಾವ, ಸ್ಫುರಣ ಮತ್ತು ಪ್ರತಿಭಾವ

ದನಗಳ ಹಿಂಡುಗಳು. ಈ ಅಂಶವು ಆಗ ನನ್ನ ಸ್ಮೃತಿ ಪಟಲದಲ್ಲಿ ಮೂಡಿತು. ಆದರಾಸೂಚನೆ ನ್ಯೂನವಾಗಿತ್ತು. ಸಂಕೇತೈಕ್ಯ ಗೊತ್ತಾಗದೆ ಆಗ ನಾನು ನಾಮೈಕ್ಯವನ್ನಷ್ಟೇ ಊಹಿಸಬೇಕಾಯಿತು.

, ದಕ್ಷಿಣ ಭಾರತದಲ್ಲಿ ನಾನು ಉಳಿದಾಗ ಮೊಟ್ಟಮೊದಲು ನನಗೆ ವೇದದ ಬಗೆಗೆ ಗಂಭೀರವಾಗಿ ಲಕ್ಷ್ಯ ಹರಿಯಿತು. ಔತ್ತರೇಯ ಆರ್ಯರು ಮತ್ತು ದಾಕ್ಷಿಣಾತ್ಯ ದ್ರಾವಿಡರು ಎಂಬ ವಿಭಜನೆಯ ಪರೋಕ್ಷ ನಂಬಿಗೆಗೆ ಮೂರ್ಛೆ ಬರುವಂಥ ಪೆಟ್ಟು ಬಿದ್ದಿತು. ಈ ಕಾಲ್ಪನಿಕ ವಿಭಜನೆಗೆ ಆರ್ಯ-ದ್ರಾವಿಡರ ಶಾರೀರಿಕ ವ್ಯತ್ಯಾಸವೂ ಭಾಷಾ ಭೇದವೂ ನನಗೆ ಆಧಾರವಾಗಿತ್ತು. ಸಂಸ್ಕೃತ ಜನ್ಯ-ಸಂಸ್ಕೃತೇತರ ಭಾಷಾಜನ್ಯ ಭಾಷೆಗಳ ಉಪಸ್ಥಿತಿಯು ರೂಢಿಯ ಮಾತಾಗಿತ್ತು. ಈ ಆರ್ಯ-ದ್ರಾವಿಡ ಕುಲ ಭೇದದ ಬದಲು ಭಾರತದಲ್ಲಿ ಇಂಡೋ-ಆಫ್‌ಗನ್ ಎಂಬ ದ್ರಾವಿಡ ಕುಲವೇ ಆರ್ಯ-ದ್ರಾವಿಡ ಕುಲಭೇದದ ಬದಲು ಭಾರತದಲ್ಲಿ ತುಂಬಿಕೊಂಡಿತ್ತು ಎಂಬ ಹೇಳಿಕೆಯೂ ನನಗೆ ಗೊತ್ತಿತ್ತು. ಭಾರತ ಪರ್ಯಾಯ ದ್ವೀಪದ ಬಗೆಗಿನ ಇಂಥ ಯಾವ ಊಹಾಪೋಹಗಳ ಬಗೆಗೂ ನಾನು ಮೊದಲು ಲಕ್ಷ್ಯ ಹಾಕಿರಲಿಲ್ಲ. ಬಹಳ ಕಾಲ ದಕ್ಷಿಣ ಭಾರತದಲ್ಲಿದ್ದ ಮೇಲೆ ನನಗೆ ತಮಿಳರಲ್ಲಿ ಉತ್ತರದ ಆರ್ಯ ಮಾದರಿಯ ಪುನರವತಾರಗಳನ್ನು ನೋಡದೆ ಇರಲಾಗಲಿಲ್ಲ. ನಾನು ತಿರು ತಿರುಗಿ ನೋಡಿದಾಗಲೆಲ್ಲಾ (ಬಂಗಾಳವೊಂದರಲ್ಲಿ ಅಲ್ಪ ಪ್ರಮಾಣದಲ್ಲಿ ಎಂದರೂ) ಮನುಷ್ಯ ಮಾದರಿಗಳ ಈ ಸಾದೃಶ್ಯವು ಮಹಾರಾಷ್ಟ್ರ, ಗುಜರಾತ್ ಮತ್ತು ಹಿಂದುಸ್ತಾನಗಳಲ್ಲಿ ನೆಲೆಸಿರುವ ನನ್ನ ಮಿತ್ರರೆಲ್ಲರಲ್ಲೂ ಕಾಣಿಸತೊಡಗಿತು. ದಕ್ಷಿಣಭಾರತದಲ್ಲಿ ಯಾವುದಾದರೂ ಬೇರೆ ಕುಲವದವರಿದ್ದುದ್ದು ನಿಜವೇ ಆಗಿದ್ದರೆ ಅವರನ್ನೆಲ್ಲಾ ಉತ್ತರದ ಆರ್ಯಸೈನ್ಯವು ನುಂಗಿ ನೊಣೆದು ಹಾಕಿ ಬಿಟ್ಟಿತ್ತೇನೋ ಎನ್ನುವಷ್ಟು ಮಟ್ಟಿಗೆ ಆರ್ಯಾನಾರ್ಯಭೇದಕ್ಕೂ ಉತ್ತರ-ದಕ್ಷಿಣಭಾರತಗಳ ಭೇದಕ್ಕೂ ತಳಬುಡವೇ ಇಲ್ಲ ಎನ್ನಿಸತೊಡಗಿತು. ದಕ್ಷಿಣ ಭಾರತದ ಆರ್ಯೀಕರಣ ಇಷ್ಟರಮಟ್ಟಿಗೆ ಆಗಿದೆ. ದಕ್ಷಿಣದ ಮಾದರಿಯ ಸಾಮಾನ್ಯ ಭಾವನೆ ಉಳಿದಿದ್ದಾಗಲೂ ವ್ಯಕ್ತಿಗಳ ಮುಖ ಸಾಮುದ್ರಿಕವನ್ನು ನೋಡಿದಾಗ ಉಕ್ತ ಪ್ರತ್ಯೇಕತೆಯನ್ನು ಖಚಿತವಾಗಿ ನಿರ್ಧರಿಸುವುದು ಅಸಾಧ್ಯವೇ ಆಯಿತು. ಕೊನೆಯದಾಗಿ, ಹಿಂದೆ ಯಾವ ಯಾವ ಬಗೆಯ ಪ್ರಾದೇಶಿಕ ಸಂಕರ ನಡೆದಿರಬಹುದಾಗಿದ್ದರೂ ಇಂದು ಎಲ್ಲಾ ಬದಲಾವಣೆಗಳ ಪರದೆಯ ಹಿಂದೆ ಒಂದೇ ಒಂದಾದ ದೈಹಿಕ ಹಾಗೂ ಸಾಂಸ್ಕೃತಿಕ ಮಾದರಿ[೧] ಭಾರತದಾದ್ಯಂತವಾಗಿ ಇದೆ ಎಂಬುದು ಖಾತ್ರಿಯಾಯಿತು. ಮಿಕ್ಕವರಿಗೆ ಕುಲಶಾಸ್ತ್ರದ ಬಗೆಗಿನ ಊಹಾಪೋಹಗಳನ್ನು[೨] ಹೆಚ್ಚಿಸುವ ಪ್ರವೃತ್ತಿಯುಳ್ಳ ನಿಗಮನವಿದು.

ಆದರೆ ಭಾಷಾಶಾಸ್ತ್ರಕಾರರು ಆರ್ಯ-ದ್ರಾವಿಡ ಕುಲಗಳ ನಡುವೆ ನಿರ್ಮಿಸಿದ ಹರಿತವಾದ ವ್ಯತ್ಯಾಸಕ್ಕೇನು ಪರಿಹಾರ? ಅದು ಅದೃಶ್ಯವಾಗುವುದು. ಆರ್ಯಾಕ್ರಮಣವನ್ನು ಒಪ್ಪಿಕೊಂಡರೆ, ಅದು

---

೧. ಕುಲವೆಂಬ ಪದವನ್ನು ಬಳಸಲು ನಾನು ಇಷ್ಟಪಡುವುದಿಲ್ಲ. ಕುಲದ ಅರ್ಥವನ್ನುನಿರ್ಧರಿಸುವುದು ಕಷ್ಟ, ನಾವು ಊಹಿಸಿಕೊಂಡಿರುವಷ್ಟು ಸುಲಭವಲ್ಲ-ಅದು ಅದಕ್ಕೂ ಹೆಚ್ಚು ಅಸ್ಪಷ್ಟ. ಸಾಮಾನ್ಯ ಜನರಲ್ಲಿ ರೂಢಮೂಲವಾಗಿರುವ ಅದರ ಹರಿತವಾದ ಅರ್ಥವು ಅರ್ಥಾತ್ ಕುಲಭೇದಗಳು - ಸಂಪೂರ್ಣವಾಗಿ ಅಸಾಂದರ್ಭಿಕ.

೨. ಕುಲಶಾಸ್ತ್ರದ ಊಹಾಪೋಹಗಳಿಗೆ ಏನಾದರೂ ಸತ್ಯತೆ ಇದೆ ಎಂಬುದನ್ನು ಯಾವಾಗಲೂ ಗ್ರಹಿಸಿಕೊಂಡಿರುವುದು. ಮಾನವನ, ತಲೆಬುರುಡೆಯ ಆನುವಂಶಿಕ ಅಪರಿವರ್ತನೀಯತೆಯ ಸಿದ್ಧಾಂತವೊಂದೇ ಕುಲಶಾಸ್ತ್ರದ ಸುದೃಢವಾದ ಆಧಾರ.

ಪ್ರವಾಹದಂತೆ ಭಾರತದಲ್ಲೆಲ್ಲಾ ತುಂಬಿ ಹರಿದು ಯಾವ ಯಾವುದೋ ಬದಲಾವಣೆಯೊಡನೆ ಭಾರತೀಯರ ದೈಹಿಕ ಮಾದರಿಯನ್ನು ನಿರ್ಧಾರಗೊಳಿಸಿತು ಎಂದು ಅಥವಾ ಆ ಆರ್ಯರು ಅಲ್ಪ ಸಂಖ್ಯಾತರೂ ಕಡಿಮೆ ನಾಗರಿಕತೆಯವರೂ ಆಗಿದ್ದು ಭಾರತವನ್ನು ಹೊಕ್ಕು ಇಲ್ಲಿಯ ಮೂಲ ಜನತೆಯಲ್ಲಿ ಕರಗಿ ಹೋದರು-ಎಂದು ಹೇಳಬೇಕಾಗುತ್ತದೆ. ಈ ಎರಡನೆಯ ವಿಕಲ್ಪವನ್ನು ಒಪ್ಪಿದರೆ, ಈ ಭಾರತ ಪರ್ಯಾಯ ದ್ವೀಪದಲ್ಲೆಲ್ಲಾ ಹರಡಿದ್ದ ಸುನಾಗರಿಕರೂ ಮಹಾನಗರ ನಿರ್ಮಾಪಕರೂ ಮಹಾವ್ಯಾಪಾರೋದ್ಯಮಿಗಳೂ ಆದರೆ ಮಾನಸಿಕ ಹಾಗೂ ಆಧ್ಯಾತ್ಮಿಕ ಸಂಸ್ಕೃತಿ ಇಲ್ಲದವರೂ ಆಗಿದ್ದ ಜನತೆಯ ಮೇಲೆ ಆ ಅತ್ಯಲ್ಪಸಂಖ್ಯಾತ ಆರ್ಯಗಣಗಳು ತಮ್ಮ ಭಾಷೆಯನ್ನೂ ಮತಧರ್ಮವನ್ನು ವಿಚಾರಗಳನ್ನೂ ರೂಢಿನಿಯಮಗಳನ್ನೂ ಹೇರಲು ಶಕ್ತರಾದರು ಎನ್ನಬೇಕಾಗುತ್ತದೆ.

ಆಕ್ರಾಮಕರು ಅತಿ ಹೆಚ್ಚು ಸುವ್ಯವಸ್ಥಿತವಾದ ಭಾಷೆಯನ್ನಾಡುವವರೂ ಹೆಚ್ಚು ಬಲಿಷ್ಠ ಪ್ರತಿಭೆಯುಳ್ಳವರೂ ಸ್ಫೂರ್ತಿಸಂಪನ್ನರೂ ಹೆಚ್ಚು ಚುರುಕಾದ ಕಾರ್ಯಕರ ಧರ್ಮದೃಷ್ಟಿಯುಳ್ಳವರೂ ಹೆಚ್ಚಿನ ವ್ಯವಸ್ಥಿತ ಧರ್ಮಾಚಾರವುಳ್ಳವರೂ ಆಗಿದ್ದುದರಿಂದ ಮಾತ್ರ ಅಂಥ ಪವಾಡವನ್ನು ಸಾಧಿಸಲು ಶಕ್ತರಾದರು ಎನ್ನಬೇಕಾಗುತ್ತದೆ.

ಕುಲಸಂಗಮ ಸಿದ್ಧಾಂತಕ್ಕೆ ಸದಾ ಭಾಷಾಭೇದ ಸಿದ್ಧಾಂತವು ಸಮರ್ಥನೆಗೆ ನಿಂತಿರುತ್ತದೆ. ಆದರೆ ಇಲ್ಲೂ ನಾನು ಮೊದಲು ತಿಳಿದುಕೊಂಡಿದ್ದ ವಿಚಾರಗಳು ಗಲಿಬಿಲಿ ಗೊಂದಲ-ಗಳಿಗೀಡಾದವು. ಏಕೆಂದರೆ, ತಮಿಳು ಪದಗಳನ್ನು ಪರೀಕ್ಷೆ ಮಾಡಿದಾಗ ಅವು ಸಾಂಸ್ಕೃತಿಕವಾಗಿ ಭಾಷಾರೂಪಲಕ್ಷಣಗಳಲ್ಲಿ ಪರಕೀಯವೆನ್ನಿಸಿದರೂ ಶುದ್ಧ ತಮಿಳು ಎಂದು ಗ್ರಹಿಸಲಾದ ಪದ-ಪದಕುಟುಂಬಗಳಲ್ಲಿ ಸಂಸ್ಕೃತಕ್ಕೂ ಅದರ ದೂರದ ಸೋದರಿಯಾದ ಲ್ಯಾಟಿನ್ನಿಗೂ ಹಾಗೇ ಎಷ್ಟೋವೇಳೆ ಗ್ರೀಕ್ ಮತ್ತು ಸಂಸ್ಕೃತ ಭಾಷೆಗಳಿಗೂ ಹೊಸ ಸಂಬಂಧಗಳನ್ನು ಸ್ಥಾಪಿಸಲು ಅಗತ್ಯವಾದ ಸಾಮಗ್ರಿಗಳು ದೊರಕಿದವು. ಎಷ್ಟೋ ಸಲ ತಮಿಳು ಪದವು ಉಕ್ತ ಸಂಬಂಧವನ್ನು ಸೂಚಿಸಿದ್ದಲ್ಲದೆ ಸುಸಂಬದ್ಧ ಪದ ಕುಟುಂಬವೊಂದರಲ್ಲಿ ಕಳೆದು ಹೋಯ್ತೆಂದು ತಿಳಿಯಲಾದ ಸಂಬಂಧ ಸಂಕ್ರಮವನ್ನು ಕಾಣಲು ಸಾಧ್ಯವಾಯಿತು. ಆರ್ಯ ಭಾಷೆಗಳ ಭ್ರೂಣ ಶಾಸ್ತ್ರವು ಅಂಥ ಪದ ಕುಟುಂಬಗಳಲ್ಲಿದ್ದಿತು. ಅದರಿಂದ ಆರ್ಯ ಭಾಷಾಮೂಲದ ಜ್ಞಾನ ನನಗೆ ದೊರಕಿತು. ಆದರಿಂದಲೇ ನಿಶ್ಚಿತ ನಿಗಮನಕ್ಕೆ ಬರುವಷ್ಟು ನನ್ನ ಈ ಪ್ರಯೋಗ ಪರೀಕ್ಷೆಯನ್ನು ಮುಂಬರಿಸಲು ಸಾಧ್ಯವಾಗಲಿಲ್ಲ. ಆದರೆ ಅಷ್ಟರಿಂದಲೇ ಆರ್ಯ-ದ್ರಾವಿಡ ಭಾಷೆಗಳು ಮರೆತು ಹೋದ ಅರೆವೊರಕ ಮೂಲಭಾಷೆಯ ಇಮ್ಮುಖವಾಗಿ ಹೊರಟ ಎರಡು ಶಾಖೆಗಳು, ಕುಟುಂಬಗಳು ; ಅವುಗಳು ಮೂಲತಃ ಅತಿ ನಿಕಟವರ್ತಿಗಳೂ ವಿಸ್ತಾರವಾದ ಸಂಬಂಧವುಳ್ಳವುಗಳೂ ಆಗಿದ್ದವು ; ಈಗ ಸಾಮಾನ್ಯವಾಗಿ ತಿಳಿದಂತೆ ಅವು ಮಹದಂತರವುಳ್ಳವುಗಳಾಗಿರಲಿಲ್ಲ ಎಂದು ಹೇಳಲು ಸಾಧ್ಯ ಎಂದು ನನಗೆನ್ನಿಸಿದೆ. ಇದು ನಿಜವಾದರೆ, ದ್ರಾವಿಡ ಭಾರತವನ್ನು ಆರ್ಯರು ಹೊಕ್ಕು ಗೆದ್ದು ತಮ್ಮ ಸಂಸ್ಕೃತಿಯನ್ನು ಪ್ರಚುರಪಡಿಸಿದರೆನ್ನಲು ಬೇಕಾದ ಸಾಕ್ಷಿಗಳನ್ನು ವೇದ ಸೂಕ್ತಗಳ ಸೂಚಕತೆಯಲ್ಲಿಯೇ ಹುಡುಕಬೇಕಾಗುತ್ತದೆ.

ಆದುದರಿಂದ ಇದಕ್ಕಾಗಿಯೇ ನಾನು ವೇದಾಭ್ಯಾಸಕ್ಕೆ ತೊಡಗಿದೆನು. ಆ ಅಭ್ಯಾಸವು ಹೇಳಿಕೊಳ್ಳುವಷ್ಟು ನಿಕಟವೂ ಗಂಭೀರವೂ ಆಗಿರಲಿಲ್ಲ. ಆದರೆ ಆರ್ಯದಸ್ಯುಗಳ ಅಥವಾ ಆರ್ಯದ್ರಾವಿಡರ ಬಗೆಗಿನ ವೇದ ಸೂಚನೆಗಳು ತೀರಾ ಅದೃಢ, ಇಲ್ಲಿಯ ಮೂಲನಿವಾಸಿಗಳು ದ್ರಾವಿಡರೆಂಬ ದಸ್ಯುಗಳು ಎಂಬುದನ್ನವು ಸಮರ್ಥಿಸುವಂತಿಲ್ಲ ಎಂಬುದನ್ನು ನಾನು ಬಹುಬೇಗ ತಿಳಿದುಕೊಂಡೆ.

ಈಯೆಲ್ಲವುಗಳಿಗೂ ಹೆಚ್ಚಾಗಿ ನನ್ನ ಆಸಕ್ತಿಯನ್ನು ಬಡಿದೆಬ್ಬಿಸಿದ ಅಂಶವೆಂದರೆ ಪ್ರಾಚೀನ ಸೂಕ್ತಗತವಾದ ಉಕ್ತ ಅಗಾಧ ಅಸ್ಪಷ್ಟಾರ್ಥವ್ಯಂಜಕ ಮಾನಸ ಶಾಸ್ತ್ರೀಯ ವಿಚಾರಗಳು ಮತ್ತು ಅನುಭವಗಳು. ಅವನ್ನು ಎಲ್ಲರೂ ನಿರ್ಲಕ್ಷಿಸಿದ್ದಾರೆ ಎಂಬುದು ಗೊತ್ತಾಯಿತು. ಇಂಥ ಗೂಡಾರ್ಥ ಸೂಚಕ ಸೂಕ್ತಗಳ ಸಂಖ್ಯೆಯೇನೂ ಕಡಿಮೆಯಾಗಿರಲಿಲ್ಲ. ಈ ಗೂಡಾರ್ಥಗಳ ಬಗೆಗೆ ಯುರೋಪೀಯ ಮನಃಶಾಸ್ತ್ರಗಳಾಗಲಿ, ಯೋಗಶಾಸ್ತ್ರೋಪದೇಶಗಳಾಗಲಿ, ವೇದಾಂತೋಕ್ತಿಗಳಾಗಲಿ ತಕ್ಕ ಬೆಳಕನ್ನು ಚೀಲಿರಲಿಲ್ಲ. ಈ ಮಂತ್ರಗಳ ಅರ್ಥಪ್ರಕಾಶನಕ್ಕೆ ನನ್ನ ಅನುಭವಗಳೇ ಆಧಾರಗಳಾದವು ; ಅವು ನನ್ನ ಅನುಭವಗಳನ್ನು ದೃಢಪಡಿಸಿದವು - ಅವುಗಳಿಗೆ ಸಾಕ್ಷಿಗಳಾಗಿ ವಿವರಣೆ ನೀಡಿದವು. ಉಪನಿಷತ್ತಿನಲ್ಲಿದ್ದ ನನಗೆ ಸ್ಪಷ್ಟವಾಗದ ಅಂಶಗಳ ಮೇಲೂ ಆ ಸೂಕ್ತಗಳು ಹೊಸ ಬೆಳಕನ್ನು ಚೆಲ್ಲಿದವು. ಆಗ ನನಗೆ ಆ ಸೂಕ್ತಗಳ ಪ್ರಾಧಾನ್ಯ ಇನ್ನಷ್ಟು ಹೆಚ್ಚಿನದೆಂದು ತೋರಿತು.

ಸುದೈವದಿಂದ ಆಗ ನಾನು ಸಾಯಣಭಾಷ್ಯವನ್ನು ಓದಿರಲಿಲ್ಲ. ಅದು ಉಪಕಾರವೇ ಆಯಿತು. ಅದರಿಂದಲೇ ನನಗೆ ಪೂರ್ವೋಕ್ತ ನಿಗಮನಗಳಿಗೆ ಬರಲು ಸಾಧ್ಯವಾಯಿತು. ಸಾಯಣ ಭಾಷ್ಯದ ಅಜ್ಞಾನದ ದೆಸೆಯಿಂದ ನನಗೆ ವೇದದ ಧೀ ಮುಂತಾದ ಪದಗಳ ಸ್ವಾಭಾವಿಕವಾದ ಮಾನಸ ಶಾಸ್ತ್ರೀಯ ಅರ್ಥಗಳನ್ನು ತಿಳಿದುಕೊಳ್ಳಲು ಸ್ವತಂತ್ರ ಅವಕಾಶ ದೊರಕುವಂತಾಯಿತು ; ಅನೇಕಾನೇಕ ರೂಢ ಪದಗಳ ಅರ್ಥ ಹೊಳೆಯುವಂತಾಯಿತು : ಧೀ=ವಿಚಾರ ; ಮನಸ್=ಮನಸ್ಸು ; ಮತಿ=ವಿಚಾರ, ಭಾವನೆ ಅಥವಾ ಮನಃಸ್ಥಿತಿ ; ಮನೀಷೆ=ಬುದ್ಧಿ ; ಋತ=ಸತ್ಯ ; ಕವಿ=ದ್ರಷ್ಟಾರ ; ಮನೀಷೀ=ಚಿಂತಕ ; ವಿಪ್ರ, ವಿಪಶ್ಚಿತ್=ಪ್ರಬುದ್ಧಮನ ಎಂಬಂಥ ಅನೇಕ ಪದಗಳ ನಿಜವಾದ ಅರ್ಥ ನನಗೆ ಗೋಚರವಾಯಿತು. ಸಾಯಣನ ಪ್ರಕಾರ ದಕ್ಷ=ಸಾಮರ್ಥ್ಯ; ಶ್ರವಸ್=ಶ್ರೀಮಂತಿಕೆ, ಐಶ್ವರ್ಯ ಅಥವಾ ಆಹಾರ ಇಲ್ಲವೆ ಕೀರ್ತಿ. ಇವುಗಳಿಗೆಲ್ಲಾ ನನಗೆ ಹೊಸ ಮಾನಸ ಶಾಸ್ತ್ರೀಯ ಅರ್ಥವನ್ನು ಹೇಳುವ ಧೈರ್ಯ ಉಂಟಾಯಿತು. ಈ ಪದಗಳಿಗೆ ಅವುಗಳ ಸ್ವಾಭಾವಿಕ ಅರ್ಥಗಳನ್ನು ಹೇಳುವ ಹಕ್ಕು ನಮಗಿದೆ ಎಂಬುದರ ಮೇಲೇ ನನ್ನ ಮಾನಸಶಾಸ್ತ್ರೀಯ ವೇದಸಿದ್ಧಾಂತವು ನಿಂತಿದೆ.

ಧೀ, ಋತಂ ಮೊದಲಾದ ಪದಗಳಿಗೆ ಸಾಯಣನು ಬೇರೆ ಬೇರೆ (ಹೊತ್ತು ಹೊತ್ತಿಗೆ ಬದಲಾಗುವ) ಅರ್ಥಗಳನ್ನು ಕೊಡುತ್ತಾನೆ. ಮಾನಸ ಶಾಸ್ತ್ರೀಯ ಅಥವಾ ಯಾವದೇ ಆಧ್ಯಾತ್ಮಿಕ ಅರ್ಥವಿವರಣೆಗೆ ಮೂಲ ಸೂತ್ರವಾದ ಋತವೆಂಬ ಪದಕ್ಕೆ ಅವನು ಅನೇಕ ಬಾರಿ ಸತ್ಯವೆಂಬ ಅರ್ಥವನ್ನೂ ಎಷ್ಟೋ ಸಲ ಯಜ್ಞವೆಂಬ ಅರ್ಥವನ್ನೂ ಕೆಲವು ಸಲ ನೀರೆಂಬ ಅರ್ಥವನ್ನೂ ಕೊಟ್ಟಿದ್ದಾನೆ. ಮಾನಸಶಾಸ್ತ್ರೀಯ ಅರ್ಥ ವಿವರಣೆ ಯಾವಾಗಲೂ ಸತ್ಯವೆಂದೇ ; ಧೀಯೆಂಬ ಪದಕ್ಕೆ ಸಾಯಣನು ವಿಚಾರ, ಪ್ರಾರ್ಥನೆ, ಕರ್ಮ, ಆಹಾರ ಎಂದು ಮುಂತಾಗಿ ಅರ್ಥ ಹೇಳುತ್ತಾನೆ. ಮಾನಸ ಶಾಸ್ತ್ರೀಯ ವೇದಾರ್ಥವು ಅದಕ್ಕೆ ವಿಚಾರ ಅಥವಾ ಅರ್ಥ ಮಾಡಿಕೊಳ್ಳುವುದು ಎಂಬುದೇ ಅಲ್ಲದೆ ಇನ್ನಾವುದೂ ಅಲ್ಲ. ಇದೇ ಪ್ರಕಾರ ಅವನು ಸ್ಥಿರಾರ್ಥವುಳ್ಳ ವೈದಿಕ ಪದಗಳಿಗೂ ಹೀಗೇ ಭಿನ್ನ ಭಿನ್ನ ಅರ್ಥಗಳನ್ನು ಭಿನ್ನ ಭಿನ್ನ ಸಂದರ್ಭಗಳಲ್ಲಿ ಕೊಟ್ಟಿದ್ದಾನೆ. ಪದಗಳ ಭಿನ್ನ ಭಿನ್ನ ಅರ್ಥಚ್ಛಾಯೆಗಳನ್ನು ಮತ್ತು ವ್ಯತ್ಯಾಸಗಳನ್ನು ಅಳಿಸಿ ಹಾಕಿ ಅವುಗಳ ಸರ್ವ ಸಾಧಾರಣವಾದ ಲೋಕಾಭಿರಾಮ ಅರ್ಥವನ್ನು ಹೇಳುವುದು ಸಾಯಣನ ಪ್ರವೃತ್ತಿ. ಮಾನಸಕ್ರಿಯಾವಾಚಕಗಳಾದ ವಿಶೇಷಣಗಳೆಲ್ಲಾ ಅವನ ಪಾಲಿಗೆ, "ಬುದ್ಧಿವಂತ" ಎಂದಿಷ್ಟೇ ಅರ್ಥ ; ಒತ್ತಡ, ಬಲ ಎಂಬ ಅರ್ಥವನ್ನು ಸೂಚಿಸುವ ಎಲ್ಲ ಪದಗಳೂ (ವೇದದ ತುಂಬ ಅವೇ ತುಂಬಿವೆ) ಅವನಿಗೆ ಶಕ್ತಿ, ಬಲ ಎಂದಿಷ್ಟೇ ಅರ್ಥವಾಗುತ್ತದೆ. ಈ ಅರ್ಥ ಬಹು ವಿಶಾಲವಾದದ್ದು. ತದ್ವಿರುದ್ಧವಾಗಿ ಸಾಮಾನ್ಯಾರ್ಥದಲ್ಲಿ ಭಿನ್ನ

ಪದಗಳು ಎಷ್ಟೇ ನಿಕಟಾರ್ಥವುಳ್ಳವುಗಳಾದರೂ ನ್ಯಾಯವಾದ ಅರ್ಥಚ್ಛಾಯೆಯನ್ನು ಭಿನ್ನ ಪದಗಳಿಗೆ ಅಚ್ಚುಕಟ್ಟಾದ ಸಂಪರ್ಕವನ್ನು ನಿರ್ಧರಿಸಿ, ಉಳಿಸುವುದು ನನಗೆ ಬಹಳ ಮಹತ್ವದ್ದೆನಿಸಿತು. ಇತರ ಕಾವ್ಯಶೈಲಿ ಪಂಡಿತರಾದ ಕವಿಗಳ ಮಾದರಿಯನ್ನು ಬಿಟ್ಟು, ವೇದದ ಋಷಿಗಳು, ಏತಕ್ಕಾಗಿ ಯುಕ್ತಾಯುಕ್ತ ವಿವೇಕವಿಲ್ಲದೆ, ಯದ್ವಾತದ್ವಾರೀತಿಯಿಂದ, ಪದಗಳ ನ್ಯಾಯವಾದ ಸಂಯೋಗವನ್ನು ಬಿಟ್ಟು ಪದಪ್ರಯೋಗ ಮಾಡಿದರೆಂಬುದು ನಿಜವಾಗಿ ನನಗೆ ಅರ್ಥವಾಗಲಿಲ್ಲ ; ವೇದ ಪದಗಳ ಸರಿಯಾದ ಹಾಗೂ ಅನ್ಯೂನಾನತಿರಿಕ್ತ ಶಕ್ತಿಯನ್ನು ಪದಸಂಯೋಗದಲ್ಲಿ ಅವರೇಕೆ ಬಳಸದಾದರು ಎಂಬುದು ನನಗೆ ಏನು ಮಾಡಿದರೂ ಅರಿಯದಂತಾಯಿತು.

ಈ ತತ್ವವನ್ನು ಅನುಸರಿಸಿ ನೋಡಿದಾಗ - ಅರ್ಥಾತ್ ಸರಳವೂ, ಸ್ವಾಭಾವಿಕವೂ, ನೇರವೂ ಆದ ಅರ್ಥವನ್ನು ಪದಗಳಿಗೂ ಉಪವಾಕ್ಯಗಳಿಗೂ ಅನ್ವಯಿಸಿದಾಗ - ಪ್ರತ್ಯೇಕ ಋಕ್ಕುಗಳಲ್ಲದೆ ಇಡಿಇಡಿಯಾದ ಅನುಚ್ಛೇದಗಳೇ ವಿಪರೀತಾರ್ಥಕ್ಕೆ ಗುರಿಯಾದದ್ದು ಕಂಡುಬಂದಿತು ; ಅವು ವೇದದ ಇಡಿ ಸ್ವರೂಪವನ್ನೇ ಬದಲಾಯಿಸುವಂಥ ಪ್ರಾಮುಖ್ಯವುಳ್ಳ ಪದ ಮತ್ತು ವಾಕ್ಯಾಂಗಗಳು ವಾಕ್ಯ ಸಮುಚ್ಚಯಗಳು. ಅಲ್ಲದೆ, ವೇದದ ಬಹುಸಂಖ್ಯಾತ ಸೂಕ್ತಗಳಲ್ಲಿ ವಿಚಾರದ ಸ್ವರ್ಣರಸದ ಅತಿ ಸಮೃದ್ಧವಾದ ಸತತಪ್ರವಾಹ ಉದ್ದಕ್ಕೂ ಕೆಲವೊಮ್ಮೆ ದೊಡ್ಡ ದೊಡ್ಡ ಗುಂಪುಗಳಾಗಿಯೂ ಕೆಲವೊಮ್ಮೆ ಸಣ್ಣ ಕಿರಣರೇಖಾ ರೂಪದಲ್ಲಿಯೂ ಹರಿಯುವುದು ಕಂಡುಬಂದಿತು. ವೇದಸೂಕ್ತಗಳು ಸಂದರ್ಭಾನುಸಾರವಾಗಿ ತಮ್ಮ ಪದಗಳ ಮೂಲಕ ಸರಳವೂ ಸಾಮಾನ್ಯವೂ ಆದ ಮಾನಸಶಾಸ್ತ್ರೀಯ ಅರ್ಥ ಸಂಪತ್ತನ್ನು ಹೊರಗೆಡುವುವಲ್ಲದೆ - ವೇದದ ಬಗ್ಗೆ, ಅದರ ಸಾಮಾನ್ಯ ತಾತ್ಪರ್ಯದ ಬಗ್ಗೆ, ನಾವಿಟ್ಟುಕೊಂಡ ಕಲ್ಪನೆಗೆ ಅನುಗುಣವಾಗಿ ಹೊರ ಭೌತಿಕ ಮೌಲ್ಯವನ್ನೂ ಕೊಡಬಹುದು. ಅಲ್ಲದೆ ಒಳ ಮಾನಸಶಾಸ್ತ್ರೀಯ ಮೌಲ್ಯವನ್ನು ಕೊಡಬಹುದು- ಎಂಬುದು ಒಂದು ವಿಶೇಷ. ರಾಯೆ, ರಯಿ, ರಾಧಸ್, ರತ್ನ ಎಂಬ ಪದಗಳು ಭೌತಿಕ ಅಭಿವೃದ್ಧಿಯನ್ನೂ ಐಶ್ವರ್ಯವನ್ನೂ ತಮ್ಮ ಅರ್ಥದ ಗುರಿಯನ್ನಾಗಿ ಇಟ್ಟುಕೊಳ್ಳಬಹುದು ಅಥವಾ ವ್ಯಕ್ತಿನಿಷ್ಠವೂ ವಸ್ತುನಿಷ್ಠವೂ ಆದ ಅಂಶಗಳಿಗೆ ಅನ್ವಯಿಸುವ ಆಂತರಿಕ ಸುಖಾವಹತೆಯನ್ನೂ ವಿಸ್ತಾರವನ್ನೂ ಗುರಿಯನ್ನಾಗಿ ಇಟ್ಟುಕೊಳ್ಳಬಹುದು. "ಧನ, ವಾಜ, ಪೋಷ"ಗಳು ವಾಸ್ತವಿಕ ಐಶ್ವರ್ಯಾರ್ಥವೂ ಆಗಬಹುದು, ಉಕ್ತಪದಗಳಿಗೆ ಯಥೇಷ್ಟ ಭೌತಿಕ ವಸ್ತುಸಮೃದ್ಧಿ ಮತ್ತು ವೃದ್ಧಿ ಎಂದೂ ಅರ್ಥವಾಗಬಲ್ಲುದು ಅಥವಾ ಒಳ ಹೊರ ಯಾವ ಆಸ್ತಿಯೇ ಆಗಲಿ, ವ್ಯಕ್ತಿಯ ಬಾಳಿನಲ್ಲಿ ವಿಸ್ತರಿಸುವುದನ್ನೂ, ಬೆಳೆಯುವುದನ್ನೂ, ಅವು ಹೇಳಬಹುದು. ಋಗ್ವೇದದ ಒಂದು ಉದ್ಧೃತ ವಾಕ್ಯವನ್ನಾಗಿ ಉಪನಿಷತ್ತಿನಲ್ಲಿ "ರಾಯೇ" ಎಂಬುದನ್ನು ಬಳಸಲಾಗಿದೆ ; ಅದರ ಅರ್ಥ ಆಧ್ಯಾತ್ಮಿಕ ಸುಖಾವಹತೆ ಅಥವಾ ಧನ್ಯತೆ. ಮೂಲ ಪಠ್ಯದಲ್ಲಿ ಆ ಅರ್ಥವನ್ನೂ ಅದು ಹೇಳಲಾರದೆಂದು ಗ್ರಹಿಸುವುದೇಕೆ? ಪದೇ ಪದೇ ವಾಜ ಎಂಬ ಶಬ್ದ ಕೆಲವು ಸಂದರ್ಭಗಳಲ್ಲಿ ಬರುತ್ತದೆ. ಆ ಸಂದರ್ಭಗಳಲ್ಲಿ ಇತರ ಎಲ್ಲ ಶಬ್ದಗಳಿಗೂ ಮಾನಸಶಾಸ್ತ್ರೀಯ ಅರ್ಥವಿರುತ್ತದೆ ; ಭೌತಿಕ ಸಮೃದ್ಧ್ಯರ್ಥದ ಈ ವಾಜಪದವು ಒಮ್ಮಿಂದೊಮ್ಮೆ ಅವುಗಳ ಮಧ್ಯ ಅಪಸ್ವರದಂತೆ ತಲೆ ಹಾಕುತ್ತದೆ. ಇಡಿ ಸಂದರ್ಭದ ತಾತ್ಪರ್ಯಾರ್ಥದ ಸಮನ್ವಯ ಅದರಿಂದ ನಷ್ಟವಾಗುತ್ತದೆ. ಆದುದರಿಂದ ವೇದದಲ್ಲಿಯ ಅಂಥ ಸಂದರ್ಭಗಳಲ್ಲಿ ಮಾನಸ ಶಾಸ್ತ್ರೀಯ ತಾತ್ಪರ್ಯವನ್ನೇ ಮುಖ್ಯವೆಂದು ಗಣಿಸಬೇಕೆಂಬುದು ವಿವೇಕ.

ಆದರೆ ಇದನ್ನೇ ನಾನು ಕ್ರಮಬದ್ಧವಾಗಿ ಮಾಡುತ್ತಾ ಹೋದರೆ ಇಡಿ ಋಕ್ಕುಗಳ, ಇಡಿ ಅನುಚ್ಛೇದಗಳ, ಇಡಿ ಸೂಕ್ತಗಳ ಸ್ವರೂಪವು ಮಾನಸಶಾಸ್ತ್ರೀಯ ಬಣ್ಣವನ್ನು ಹೊಂದುತ್ತವೆ. ವೇದದ

ಯಜ್ಞವೆಂಬುದು ಸಾಂಕೇತಿಕ ಎಂಬುದನ್ನು ತಪ್ಪದೆ ಒಪ್ಪಿಕೊಳ್ಳುವ ಶರ್ತಕ್ಕೆ ನಾವು ಒಳಪಟ್ಟರೆ ಮಾತ್ರ ಸೂಕ್ತದ ಯಾವ ಒಂದು ಪದ ಅಥವಾ ಪದಸಂಹತಿಯೂ ಅರ್ಥ ಪರಿವರ್ತನೆ ಹೊಂದದೆ ಉಳಿಯದು. ಗೀತೆಯಲ್ಲಿ ಯಜ್ಞವೆಂಬ ಪದವನ್ನು ಸಾಂಕೇತಿಕಾರ್ಥದಲ್ಲಿ ಬಳಸಿದ್ದನ್ನು ನಾವು ಕಾಣುತ್ತೇವೆ. ಅದರ ಪ್ರಕಾರ ಕರ್ಮವೆಲ್ಲಾ ಯಜ್ಞ-ಒಳಕರ್ಮವಾಗಿರಲಿ, ಹೊರ ಕರ್ಮವಾಗಿರಲಿ ಅದು ದೇವತೆಗಳಿಗೆ ಅಥವಾ ಪರಬ್ರಹ್ಮನಿಗೆ ಸಮರ್ಪಿತವಾಗಿದ್ದರೆ ಸರಿ. ಅಂಥ ಸಾಂಕೇತಿಕ ಬಳಕೆಯು ಅನಂತರದ ತಾತ್ವಿಕ ಬೌದ್ಧಿಕತೆಯಿಂದ ಹುಟ್ಟಿತೇ? ಅಥವಾ ಅದು ಯಜ್ಞದ ವೈದಿಕ ಕಲ್ಪನೆಯ ಜೊತೆಗೇ ಹುಟ್ಟಿ ಬಂದಿತ್ತೇ? ವೇದದಲ್ಲಿಯೇ ಯಜ್ಞಪಶುವು ಸಾಂಕೇತಿಕ, ಯಜ್ಞವು ಸಾಂಕೇತಿಕ ಎಂಬುದನ್ನು ಅದರ ಸೂಕ್ತಗಳು ಹೇಳುವುದನ್ನು ನಾನು ಕಂಡೆನು ; ಕೆಲ ಸೂಕ್ತಗಳಲ್ಲಿದು ಸ್ಪಷ್ಟವಾಗಿ ಉಕ್ತವಾಗಿದ್ದರೆ ಮತ್ತೆ ಕೆಲ ಸೂಕ್ತಗಳಲ್ಲಿ ತೆರೆಮರೆಯಲ್ಲಿಟ್ಟಂತೆ ಪಾರದರ್ಶಕವಾಗಿ ಸೂಚಿಸಲ್ಪಟ್ಟಿದೆ. ಈಗ ಒಂದು ಪ್ರಶ್ನೆ ಉದ್ಭವಿಸುತ್ತದೆ : ಇವೆಲ್ಲಾ ಅನಂತರದ ರಚನೆಗಳೋ? ಅರೆವೊರಕ ಸಾಂಕೇತಿಕತೆಯ ರೂಪದಲ್ಲಿ ಹೊರಬಿದ್ದ ಹಳೆಯ ಅಂಧಶ್ರದ್ಧೆಯ ಆಚಾರಗಳೋ? ಅಥವಾ ವಿರಳವಾಗಿ ಹೊರಟ ಬಹುಸೂಕ್ತಗತ, ಹೆಚ್ಚು ಕಡಿಮೆ ಬುದ್ಧಿಪೂರ್ವಕಕೃತ ರೂಪಕೋಕ್ತಿಯ ಸರಳತರ ಹೇಳಿಕೆಯೋ? ವೇದದಲ್ಲಿ ಮಾನಸ ಶಾಸ್ತ್ರೀಯ ಅನುಚ್ಛೇದಗಳೂ ಪದೇ ಪದೇ ಬಾರದೆ ಇದ್ದಿದ್ದರೆ ನಿಃಸಂದೇಹವಾಗಿ ಮೊದಲನೆಯ ವಿವರಣೆಯನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ಆದರೆ, ತದ್ವಿರುದ್ಧವಾಗಿ, ಇಡಿ ಇಡೀ ಸೂಕ್ತಗಳೇ ಸ್ವಾಭಾವಿಕವಾಗಿ ಋಕ್ಕಿನಿಂದ ಋಕ್ಕಿಗೆ ಸಂಪೂರ್ಣವಾದ ಸ್ಫುರತ್ ಸಮನ್ವಯದಿಂದ ಸಾಗುತ್ತಿರುವಾಗ ಮೇಲಿನ ಅಭಿಪ್ರಾಯವನ್ನು ಹೇಗೆ ಒಪ್ಪಲು ಸಾಧ್ಯ? ಯಜ್ಞದ ಉಲ್ಲೇಖ, ಹವಿಸ್ಸಿನ ಮಾತು ಅಥವಾ ಕೆಲವೊಮ್ಮೆ ಕಾರ್ಯಪರ ಅರ್ಚಕ (ಹೋತೃ, ಅಧ್ವರ್ಯು, ಉದ್ಗಾತೃ ಮತ್ತು ಬ್ರಹ್ಮ = ಅರ್ಚಕರು ಅಥವಾ ಪುರೋಹಿತರು) ಪದದ ಬಳಕೆ-ಒಮ್ಮೆ ಆ ಅರ್ಚಕ ದೇವತೆಯಾಗಿರಬಹುದು ಅಥವಾ ಮನುಷ್ಯನಾಗಿರಬಹುದು-ಇವಿಷ್ಟೇ ಅಸ್ಪಷ್ಟತೆಗೆ ಪಾತ್ರವಾಗುತ್ತವೆ. ಈ ಪದಗಳನ್ನು ಮಾನಸಶಾಸ್ತ್ರೀಯ ವಿವರಣೆಗೆ ಒಳಪಡಿಸಲು ಸಾಧ್ಯವಾದಾಗಲೆಲ್ಲಾ ವಿಚಾರದ ಪ್ರಗತಿಯು ಹೆಚ್ಚು ಪ್ರಕಾಶಮಯವೂ ಹೆಚ್ಚು ಸಮನ್ವಿತವೂ ಆಗಿ ತೋರಿತಲ್ಲದೆ, ಇಡೀ ಸೂಕ್ತದ ಅರ್ಥವು ಜಯಪ್ರದವಾಗಿ ಪೂರ್ಣತೆಯನ್ನು ಸಾಧಿಸಿದ್ದು ಕಂಡುಬಂದಿತ್ತು. ಆದುದರಿಂದ ಸುಬದ್ಧವಾದ ಸರ್ವವಿಮರ್ಶ-ಸೂತ್ರಗಳ ಪ್ರಕಾರವಾಗಿಯೂ ನನ್ನ ತಾತ್ಕಾಲಿಕ ಸಿದ್ಧಾಂತವನ್ನು ವೇದಕರ್ಮಕಾಂಡದ ಸಾಂಕೇತಿ-ಕಾರ್ಥವನ್ನು ಮೈಗೂಡಿಸಿಕೊಂಡು ಮುಂಬರಿಸಿಕೊಂಡು ಹೋಗುವುದು ಸಮರ್ಥನೀಯವೆಂದು ನನಗೆ ತೋರಿತು.

ಹೀಗಿದ್ದರೂ ಇಲ್ಲಿಯೇ ಮಾನಸ ಶಾಸ್ತ್ರೀಯ ಅರ್ಥವ್ಯಾಖ್ಯಾನದ ಮೊದಲನೆಯ ನಿಜವಾದ ಕಷ್ಟ ಎದುರಾಗುತ್ತದೆ. ಈವರೆಗೆ ನಾನು ಪದ-ವಾಕ್ಯಗಳ ವಾಚ್ಯಾರ್ಥವನ್ನೇ ಅವಲಂಬಿಸಿ ಪೂರ್ಣ ನೇರವಾದ ಸ್ವಾಭಾವಿಕ ವಿವರಣಾ ಪದ್ಧತಿಯನ್ನೇ ಅನುಸರಿಸುತ್ತಾ ನಡೆದೆನು. ಈಗ ವಾಚ್ಯಾರ್ಥವನ್ನು ಧಿಕ್ಕರಿಸುವ ಹಂತಕ್ಕೆ ನಾನು ಬಂದು ಮುಟ್ಟಿದೆ. ಇಲ್ಲಿ ಪ್ರತಿಯೊಬ್ಬ ಪ್ರಾಮಾಣಿಕ ವಿಮರ್ಶಕನೂ ಸತತ ಸಂದೇಹಗಳನ್ನು ಎದುರಿಸಬೇಕಾಗಿ ಬರುತ್ತದೆ. ಈಗ ಈ ಕಾರ್ಯದಲ್ಲಿ ಯಾವನೇ ಆಗಲಿ, ಸರಿಯಾದ ಸೂಚನೆ ಮತ್ತು ನ್ಯಾಯವಾದ ವಿವರಣೆ ಸಿಕ್ಕಿತೆಂದು ಖಾತ್ರಿ ಮಾಡಿಕೊಳ್ಳಬಲ್ಲನೇ? ವೇದ ಯಜ್ಞದ ಲಕ್ಷಣಗಳು ಮೂರು-ಮಂತ್ರವನ್ನೂ ದೇವತೆಯನ್ನೂ ತಾತ್ಕಾಲಿಕವಾಗಿ ಮರೆತು ಬಿಡೋಣ. ೧) ಹವಿರ್ದಾತ ೨) ಹವಿಸ್ಸು ಮತ್ತು ೩) ಹವಿರ್ದಾನದ ಫಲಗಳು. ಯಜ್ಞವು ಕರ್ಮ ದೇವತೆಗಳಿಗೆ ಅರ್ಪಿತವಾದುದಾಗಿದ್ದರೆ ಯಜಮಾನನನ್ನು ಯಜ್ಞಕರ್ತನೆಂದು ಅರ್ಥಮಾಡದೆ ಗತ್ಯಂತರವಿಲ್ಲ. ಯಜ್ಞವೆಂದರೆ ಕರ್ಮ-ಅದು ಒಳಕ್ರಿಯೆಯಾಗಿರಬಹುದು ಅಥವಾ ಹೊರಕರ್ಮ-

ವಾಗಿರಬಹುದು -ಯಜಮಾನನಂತೂ ಜೀವಾತ್ಮನು ಅಥವಾ ಕರ್ತೃತ್ವವುಳ್ಳ ಒಬ್ಬ ವ್ಯಕ್ತಿ. ಆದರೆ ಯಜ್ಞದಲ್ಲಿ ಅಧಿಕೃತವಾಗಿ ನಿಯಮಿಸಲ್ಪಟ್ಟ ಅರ್ಚಕರಾದ ಹೋತೃ ಋತ್ವಿಕ್, ಪುರೋಹಿತ, ಬ್ರಹ್ಮನ್, ಅಧ್ವರ್ಯ ಮುಂತಾದವರೂ ಇದ್ದಾರೆ. ಸಾಂಕೇತಿಕತೆಯಲ್ಲಿ ಅವರ ಪಾತ್ರವಾವುದು? ಒಮ್ಮೆ ನಾವು ಯಜ್ಞವೊಂದು ಸಂಕೇತ ಎಂದು ಬಿಟ್ಟರೆ ಆ ಸಮಾರಂಭದ ಎಲ್ಲ ಅಂಶಗಳೂ ಸಾಂಕೇತಿಕ ಎನ್ನಬೇಕಾಗುತ್ತದೆ. ದೇವತೆಗಳನ್ನು ಸತತವಾಗಿ ಹವಿರ್‌ದಾತೃಗಳಾದ ಅರ್ಚಕರೆಂದು ಕರೆದದ್ದನ್ನು ಕಂಡೆ ; ಹಾಗೇ ಅನೇಕ ಅನುಚ್ಛೇದಗಳಲ್ಲಿ (ಪ್ರಕರಣಗಳಲ್ಲಿ) ಯಜ್ಞಾಧ್ಯಕ್ಷನು ಮನುಷ್ಯೇತರ ಶಕ್ತಿ ಅಥವಾ ಬಲ ಎಂದು ಮುಚ್ಚು ಮರೆಯಿಲ್ಲದೆ ಹೇಳಿದ್ದನ್ನು ನೋಡಿದೆ. ಅಷ್ಟೇ ಅಲ್ಲದೆ, ಉದ್ದಕ್ಕೂ ನಮ್ಮ ವ್ಯಕ್ತಿತ್ವದ ಅಂಶಗಳನ್ನು ಸತತವಾಗಿ ಮೂರ್ತರೂಪದಲ್ಲಿ ಪರಿವರ್ತಿಸಿ ಇಟ್ಟದ್ದನ್ನೂ ವೇದ ಸೂಕ್ತಗಳಲ್ಲಿ ನಾನು ನೋಡಿದೆ. ಈ ನಿಯಮವನ್ನು ನಾನು ತಿರುವು ಮುರುವು ಮಾಡಿ ಅನ್ವಯಿಸಿ ಬಿಟ್ಟರೆ ಸರಿ ಎಂದುಕೊಂಡೆ : ಅಂದರೆ ಸೂಕ್ತಗಳಲ್ಲಿ ಹೇಳಿದ ಹೊರರೂಪದಲ್ಲಿ ವರ್ಣಿಸಿದ ಅರ್ಚಕನ ಶರೀರವನ್ನು ಒಳಚಟುವಟಿಕೆಗಳ ಪ್ರತಿನಿಧಿಯೆಂದು ತಿಳಿದುಕೊಂಡರಾಯಿತು- ಅವನು ಒಂದು ಅತಿಮಾನುಷ ಶಕ್ತಿ ಅಥವ ಸಾಮರ್ಥ್ಯ ಇಲ್ಲವೆ ನಮ್ಮ ವ್ಯಕ್ತಿತ್ವದ ಒಂದು ಅಂಗ ಎಂದು ಭಾವಿಸಿಕೊಂಡರಾಯಿತು. ಭಿನ್ನ ಭಿನ್ನ ಅರ್ಚಕ ಕರ್ತವ್ಯಗಳನ್ನೀಗ ನಿರ್ದಿಷ್ಟಗೊಳಿಸುವುದೊಂದೇ ಉಳಿಯಿತು. ಇಲ್ಲಿ ವೇದವೇ ಸ್ವತಃ ಭಾಷಾ ಶಾಸ್ತ್ರೀಯ ಉದಾರಣೆಗಳನ್ನೂ ಸೂಚನೆಗಳ್ನೂ ಕೊಟ್ಟಿತು. ಪುರೋಹಿತ = ಮುಂದಿಡಲ್ಪಟ್ಟವನು (ಪ್ರತಿನಿಧಿ ಎಂಬರ್ಥದಲ್ಲಿ) ಎಂಬುದೊಂದು ಉದಾಹರಣೆ. ಹಾಗೇ ಅಗ್ನಿ = ಮಾನವನ ದಿವ್ಯ ಸಂಕಲ್ಪ ಶಕ್ತಿ (ಇಚ್ಛಾಶಕ್ತಿ) ಅದು ಎಲ್ಲ ಕರ್ಮ ಸಮರ್ಪಣೆಯಲ್ಲೂ ಕರ್ತೃತ್ವವನ್ನು ವಹಿಸಿಕೊಳ್ಳುತ್ತದೆ.

ಹವಿರ್ಭಾಗಗಳ ಅಂತರರ್ಥವನ್ನು ತಿಳಿದುಕೊಳ್ಳುವುದು ಹೆಚ್ಚು ಕಷ್ಟವಾಯಿತು. ಸಂದರ್ಭಾನುಸಾರವಾಗಿ ಸೋಮಮದ್ಯವನ್ನೂ ಅದರ ಬಳಕೆಯನ್ನೂ ಪರಿಣಾಮವನ್ನೂ ಭಾಷಾಶಾಸ್ತ್ರೀಯ ಸಮಾನಾರ್ಥಕ ಪದಗಳಿಂದ ದೊರೆತ ಸೂಚನೆಯಿಂದ ತಿಳಿದುಕೊಳ್ಳಲು ಸಾಧ್ಯವಾದರೂ ಕಾಯಿಸಿದ (ಶೋಧಿಸಿದ) ಬೆಣ್ಣೆ ಎಂಬರ್ಥದ ಘೃತವನ್ನು ಏನೆಂದು ಅರ್ಥಮಾಡಬೇಕು? ವೇದವು ತಾನು ಬಳಸಿದ ಆ ಪದದ ಸಾಂಕೇತಿಕ ಅರ್ಥವನ್ನೇ ಪದೇ ಪದೇ ಒತ್ತಿ ಹೇಳುತ್ತದೆ. ಶುದ್ಧಿಕರಿಸಿದ ಬೆಣ್ಣೆ (ತಿಳಿಗೊಳಿಸಲಾದ ಬೆಣ್ಣೆ) ಆಕಾಶದಿಂದ (ಸ್ವರ್ಗದಿಂದ) ಅಥವಾ ಇಂದ್ರನ ಕುದುರೆಗಳಿಂದ ಅಥವಾ ಮನಸ್ಸಿನಿಂದ ಹನಿಹನಿಯಾಗಿ ಬೀಳುತ್ತಿರುವುದು ಬಹಳ ಶಿಥಿಲ ಸಂಕೇತ-ಚಿಂತಕನ ಮನದಲ್ಲಿ ಇಡಿಯಾಗಿ ಅಥವಾ ಬಿಡಿಯಾಗಿ, ಘೃತದ ಬಾಹ್ಯಾರ್ಥವು ದೂರೀಕೃತವಾಗಿದೆ. ಪದಗಳ ಅರ್ಥವನ್ನು ನಮಗನುಕೂಲವಾಗುವಂತೆ ಬದಲಾಯಿಸುವುದು ಸಾಧ್ಯವಾಗುವುದೆಂಬುದೇನೋ ನಿಜ. ಕೆಲವೊಮ್ಮೆ ಘೃತವೆಂದರೆ ಬೆಣ್ಣೆ, ಕೆಲವೊಮ್ಮೆ ನೀರು ಎಂದೂ ಮನಸ್ ಎಂದರೆ ಮನಸ್ಸೆಂದೂ ಕೆಲವೊಮ್ಮೆ ಆಹಾರ ಅಥವಾ ದೋಸೆಯೆಂದೂ ಅರ್ಥಮಾಡಿಕೊಳ್ಳಲು ಸಾಧ್ಯ. ಆದರೆ ಘೃತ ಪದವನ್ನು ಪದೇ ಪದೇ (ಸತತವಾಗಿ) ಮಾನಸದ ಯಾ ವಿಚಾರದ ಜೊತೆಗೆ ಬಳಸಿದ್ದನ್ನೂ ವೇದದ ಸ್ವರ್ಗವು ಮನಸ್ಸಿನ ಸಂಕೇತವೆಂದು ತಿಳಿದು ಅದರಲ್ಲಿ ಬಳಸಿದ್ದನ್ನೂ ಇಂದ್ರ ಎಂದರೆ ದೀಪ್ತ ಮನಸ್ಥಿತಿಯೆಂದೂ ಅವನ ಎರಡು ಕುದುರೆಗಳು ಆ ಮನಃಸ್ಥಿತಿಯ ಶಕ್ತಿದ್ವಯವೆಂದು ಬಳಸಿದ್ದನ್ನೂ ಅರಿತೆನು. ಅಲ್ಲದೆ, ಕೆಲವೊಮ್ಮೆ "ಘೃತಂನ ಪೂತಂ ಧಿಷಣಾಂ (III 2.1) ಎಂಬ ಪ್ರಯೋಗದಿಂದ ಗೊತ್ತಾಗುವಂತೆ ನಮ್ಮ ಬುದ್ಧಿಯನ್ನು ಘೃತವೆಂದು ದೇವತೆಗಳಿಗೆ ಅರ್ಪಿಸುವ ಕರ್ಮವನ್ನು ಸರಳವಾಗಿ ವೇದವು ಹೇಳಿಬಿಟ್ಟಿದೆ. ತನ್ನ ಭಾಷಾ ಶಾಸ್ತ್ರೀಯ ಅರ್ಥಗಳಲ್ಲಿ ಘೃತಕ್ಕೆ ಸಮೃದ್ಧ ಅಥವಾ ಸುಖೋಷ್ಣ ಪ್ರಕಾಶ ಎಂಬುದೂ

ಒಂದು ಅರ್ಥವಾಗಿದೆ. ಸೂಚನೆಗಳ ಈ ಏಕಾಭಿಪ್ರಾಯದ ದೆಸೆಯಿಂದ ತಿಳಿಗೊಳಿಸಲಾದ ಬೆಣ್ಣೆಯೆಂಬ ಅಲಂಕಾರೋಕ್ತಿಗೆ ಒಂದು ಮಾನಸ ಶಾಸ್ತ್ರೀಯ ಅರ್ಥವನ್ನು ನಿಶ್ಚಿತಗೊಳಿಸುವುದು ನ್ಯಾಯ ಎಂದುಕೊಂಡೆನು. ಹಾಗೇ ಇದೇ ನಿಯಮವು ಇದೇ ಕ್ರಮದಿಂದ ಯಜ್ಞದ ಇತರ ಲಕ್ಷಣಗಳಿಗೂ ಅನ್ವಯಿಸುತ್ತದೆ ಎಂಬುದನ್ನು ನಾನು ಕಂಡುಕೊಂಡೆನು.

ತೋರಿಕೆಗೆ ಆಹುತಿಯ ಪದಾರ್ಥಗಳೆಲ್ಲಾ ಭೌತಿಕ-ದನಗಳು, ಕುದುರೆಗಳು, ಚಿನ್ನ, ಅಪತ್ಯ ಮನುಷ್ಯರು, ದೇಹಶಕ್ತಿ ಮತ್ತು ಯುದ್ಧದಲ್ಲಿ ದೊರಕಿದ ಗೆಲುವು. ಇಲ್ಲಿ ಕಷ್ಟವು ಕಷ್ಟತರವಾಯಿತು. ಆದರೆ ವೈದಿಕ ದನವು ಒಂದು ದೊಡ್ಡ ಒಗಟು - ಅದೆಂದೂ ಭೌತಿಕವಲ್ಲ - ನಮ್ಮ ದನಗಳ ಗೋಲಿಗೆ ಸೇರಿದ ಪ್ರಾಣಿಯಲ್ಲ ಎಂಬುದನ್ನು ನಾನು ಆಗಲೇ ಶೋಧಿಸಿಬಿಟ್ಟಿದ್ದೆನು. "ಗೋ" ಎಂದರೆ ಹಸುವು ಹೌದು. ಬೆಳಕೂ ಹೌದು. ಅನೇಕ ಅನುಚ್ಛೇದಗಳಲ್ಲಿ ಗೋಚಿತ್ರವನ್ನು ನಮ್ಮೆದುರಿಡುವಾಗಲೂ ಗೋ ಶಬ್ದಕ್ಕೆ ವೇದವು ಬೆಳಕೆಂಬ ಅರ್ಥದಲ್ಲಿ ಬಳಸಿದ್ದುಂಟು. ಈ ಅರ್ಥವು ಸೂರ್ಯನ ಗೋವುಗಳು (ಹೋಮರ ಹೇಳಿದ ಹೀಲಿಯೇಸ್ ದೇವತೆಯ ಗೋವೃಂದ) ಎನ್ನುವಲ್ಲಿ ಹಾಗೂ ಉಷೆಯ ದನಗಳು ಎನ್ನುವಲ್ಲಿ ಬೆಳಕೆಂದಲ್ಲದೆ ಬೇರೆ ಏನೆಂದೂ ಆಗಲಾರದು. ಮಾನಸ ಶಾಸ್ತ್ರೀಯವಾಗಿ, ಭೌತಿಕ ಬೆಳಕು ಜ್ಞಾನದ ಸಂಕೇತವೆಂದು - ಅದರಲ್ಲೂ ದಿವ್ಯ ಜ್ಞಾನವೆಂದು - ಸಂಕೇತಾರ್ಥವನ್ನು ಹೇಳಬಹುದು. ಈ ಬರಿ ಸಾಧ್ಯತೆಯನ್ನು ಪರೀಕ್ಷಿಸಿ ನಿಖರಗೊಳಿಸುವುದು ಹೇಗೆ? ಸುತ್ತಮುತ್ತಲಿನ ಸಂದರ್ಭಗಳಲ್ಲೆಲ್ಲವೂ ಮಾನಸ ಶಾಸ್ತ್ರೀಯವಾಗಿರುವ ಅನುಚ್ಛೇದಗಳನ್ನು ಕಂಡೆ ; ಆದರೆ ದನದ ಪ್ರತಿಮೆ (ಅಲಂಕಾರ) ಮಾತ್ರ ತನ್ನ ವಿಘ್ನಕಾರಕ ಭೌತಿಕ ಸೂಚನೆಯಿಂದ ಮಧ್ಯ ತಲೆಹಾಕಿತು. ಇಂದ್ರನನ್ನು ಸೋಮಮಧ್ಯವನ್ನು ಕುಡಿಯಲು ಬೇಕಾದ ಸಮಗ್ರ ಪಾತ್ರೆಗಳನ್ನು ಮಾಡುವವನು ಎಂದು ಆಮಂತ್ರಿಸಲಾಗಿದೆ. ಕುಡಿದ ಮೇಲೆ ಅವನು ಅಮಿತಾನಂದ-ತುಂದಿಲನಾಗುವನು ಮತ್ತು ಗೋದಾನಕರ್ತನಾಗುವನು. ಆಗ ನಾವು ಅವನ ಅತ್ಯಂತ ನಿಕಟ ಅಥವಾ ನ್ಯಾಯವಾದ ಆಲೋಚನೆಗಳನ್ನು ಪಡೆಯಬಹುದು. ಆಗ ನಾವು ಅವನನ್ನು ಪ್ರಶ್ನಿಸ ಬಲ್ಲವರಾಗುವೆವು ಮತ್ತು ಅವನು ಅನಂತರ ನಮಗೆ ಅತ್ಯುಚ್ಚ ಒಳಿತನ್ನು ದಯಪಾಲಿಸುವನು. ಇಂಥ ವಾಕ್ಯೋಚ್ಚಯದಲ್ಲಿ - ಈ ದನಗಳೆಂದೂ ಭೌತಿಕ ಗೋಗಣವಾಗಲಾರವು ; ಹಾಗೇ ಭೌತಿಕ ಬೆಳಕನ್ನು ಕೊಡುವ ಪದಾರ್ಥಗಳೂ ಆಗಲಾರವು. ಒಂದೇ ಒಂದು ಉದಾಹರಣೆಯಲ್ಲಿ ವೈದಿಕ ಗೋವಿನ ಮಾನಸಶಾಸ್ತ್ರೀಯ ಸಂಕೇತವು ಹೊಳೆಯಿತು ; ನಿಶ್ಚಿತವಾಗಿ ಮನದಲ್ಲಿ ನೆಲೆನಿಂತಿತು. ಅದನ್ನು ಅನಂತರ ನಾನು ಉಳಿದ ಗೋಪದವುಳ್ಳ ವಾಕ್ಯೋಚ್ಚಯಗಳಿಗೆ ಅನ್ವಯಿಸಿದೆನು. ಹಾಗೆ ಮಾಡಿದಾಗಲೆಲ್ಲಾ ಅದರಿಂದ ಅತ್ಯುನ್ನತ ಅರ್ಥ ಮೂಡಿತು ಮತ್ತು ಸಂದರ್ಭದಲ್ಲಿ ಸಾಧ್ಯತಮವಾದ ಸಮನ್ವಯವನ್ನು ಉಂಟು ಮಾಡಿತು.

ಗೋವು ಮತ್ತು ಅಶ್ವ (ಕುದುರೆ) ಯಾವಾಗಲೂ ಜೊತೆ ಜೊತೆಗೇ ಹೋಗುತ್ತವೆ. ಉಷೆಯನ್ನು ಗೋಮತಿ ಮತ್ತು ಅಶ್ವಮತಿ ಎಂದು ಬಣ್ಣಿಸಲಾಗಿದೆ. ಉಷೆಯು ಯಜಮಾನನಿಗೆ ಗೋವುಗಳನ್ನೂ ಅಶ್ವಗಳನ್ನೂ ಕೊಡುತ್ತಾಳೆ. ಭೌತಿಕ ಉಷಃ ಕಾಲಕ್ಕೆ ಅನ್ವಯಿಸಿದರೆ ಅದು ಬೆಳಕಿನ ಕಿರಣಗಳನ್ನು ಮಾನವನಿಗೆ ಕೊಡುತ್ತದೆ ಮತ್ತು ಅಂತರರ್ಥದಲ್ಲಿ ಮಾನವನ ಮನವನ್ನು ಬೆಳಗುತ್ತದೆ. ಹಾಗೇ "ಅಶ್ವಮತಿ" ಎಂಬ ಪದದಲ್ಲಿ ಅದೆಂದೂ ಭೌತಿಕ ಅಶ್ವವನ್ನು ಹೇಳಲಾರದು. ಅದಕ್ಕೆ ಮಾನಸಶಾಸ್ತ್ರೀಯ ಅರ್ಥವು ಇರಲೇಬೇಕು. ವೈದಿಕ "ಅಶ್ವದ" ಅಭ್ಯಾಸದಿಂದ "ಗೋ" ಮತ್ತು "ಅಶ್ವ"ಗಳು ಬೆಳಕು ಮತ್ತು ಕ್ರಿಯಾಶಕ್ತಿ ಅಥವಾ ಪ್ರಜ್ಞೆ ಮತ್ತು ಕಾರ್ಯಜನಕ ಬಲ ಎಂಬುದು ಗೊತ್ತಾಯಿತು. ವೈದಿಕ

ಹಾಗೂ ವೇದಾಂತೀಯ ವಿಚಾರವಂತರಿಗೆ ಅವು ಬಾಳಿನ ಎಲ್ಲ ಚಟುವಟಿಕೆಗಳ ಯಮಳ ಲಕ್ಷಣಗಳೆನ್ನಿಸುತ್ತವೆ.

ಆದುದರಿಂದ ವೈದಿಕ ಯಜ್ಞದ ಎರಡು ಫಲಗಳಾದ ಗೋಧನ-ಅಶ್ವಧನಗಳು ಮಾನಸಿಕ ಜ್ಞಾನೋದಯದ ಶ್ರೀಮಂತಿಕೆ ಮತ್ತು ಅಪಾರವಾದ ಕಾರ್ಯಶಕ್ತಿ (ಪ್ರಾಣಶಕ್ತಿ) ಸಂಪನ್ನತೆ-ಎಂಬುದು ನಿಶ್ಚಿತ. ಉಳಿದ ತತ್ಸಂಗತ ಫಲಗಳೂ ಹೀಗೇ ಮಾನಸಶಾಸ್ತ್ರೀಯ ಅರ್ಥವುಳ್ಳವುಗಳಾಗಿರಬೇಕು. ವೇದದಲ್ಲಿ ಬರುವ ಅವುಗಳ ಸಮಂಜಸವಾದ ಅರ್ಥವನ್ನು ನಿಶ್ಚಿತಗೊಳಿಸುವುದು ಉಳಿದ ಕೆಲಸ.

ವೈದಿಕ ಸಾಂಕೇತಿಕತೆಯ ಇನ್ನೊಂದು ಮುಖ್ಯವಾದ ಲಕ್ಷಣವೆಂದರೆ ತದುಕ್ತ, ಲೋಕಗಣ ಮತ್ತು ದೇವತಾಕರ್ತವ್ಯಗಳು. ವೈದಿಕ ವ್ಯಾಹೃತಿಗಳಲ್ಲಿ ಲೋಕಗಳ ಸಂಕೇತಾರ್ಥ ಹೊಳೆಯಿತು. "ಓಂ ಭೂರ್ಭುವಃ ಸ್ವಃ" ಎಂಬುದೇ ವ್ಯಾಹೃತಿತ್ರಯ. "ಮಹಃ" ಎಂಬುದು ನಾಲ್ಕನೆಯ ವ್ಯಾಹೃತಿ (ಸಾಂಕೇತಿಕ ಪದ) ; ಋತ ಎಂಬ ಮಾನಶಾಸ್ತ್ರೀಯ ಅರ್ಥ ಅದರೊಡನೆ ಸೇರಿಕೊಂಡಿದೆ. ಋಷಿಗಳು ಮೂರು ವಿಶ್ವ ವಿಭಾಗಗಳನ್ನು ಭೂಮಿ, ಅಂತರಿಕ್ಷ, ದ್ಯೌ (ಆಕಾಶ) ಎಂದು ಕರೆಯುತ್ತಾರೆ. "ಬೃಹದ್ಯೌಃ" ಎಂಬುದು ಅದಕ್ಕೂ ದೊಡ್ಡ ಆಕಾಶ ಅಥವಾ ಸ್ವರ್ಗ. ಅದನ್ನು ಕೆಲವೊಮ್ಮೆ ಮಹೋ ಅರ್ಣಃ = ಮಹಾಜಲ ಎಂದು ಕರೆಯಲಾಗಿದೆ. ಬೃಹತ್ತನ್ನು ಋತಂಬೃಹತ್ತೆಂದು ಅಥವಾ "ಸತ್ಯಂ ಋತಂ ಬೃಹತ್" ಎಂದೂ ಋಷಿಗಳು ಹೇಳುತ್ತಾರೆ. ಬೃಹತ್ = ವಿಶಾಲ. ಉಪನಿಷತ್ತುಗಳಲ್ಲಿ ಹೇಳಿದ ಮಹೋವ್ಯಾಹೃತಿಯು ಚತುರ್ಥವಾದ ವಿಶಾಲ ಸತ್ಯಲೋಕವನ್ನು ಸೂಚಿಸುತ್ತದೆ. ಪುರಾಣ ಸೂತ್ರದಲ್ಲಿ ಈ ನಾಲ್ಕಕ್ಕೆ ಜನ, ತಪ, ಸತ್ಯ ಎಂಬ ಮೂರನ್ನು ಸೇರಿಸಿ ಸಂಖ್ಯೆಯನ್ನು ಏಳಕ್ಕೆ ಏರಿಸಲಾಗಿದೆ. ಈ ಜನಃ, ತಪಃ, ಸತ್ಯಂ-ಎಂಬವು ಹಿಂದು ವಿಶ್ವಶಾಸ್ತ್ರದ ಮೂರು ಅತ್ಯುತ್ತುಂಗ ಜಗತ್ತುಗಳು. ವೇದದಲ್ಲೂ ನಾವು ಮೂರು ಮಹೋತ್ತುಂಗ ಲೋಕಗಳ ಉಲ್ಲೇಖವನ್ನು ಕಾಣುತ್ತೇವೆ. ಆದರೆ ಅಲ್ಲಿ ಅವುಗಳ ಹೆಸರುಗಳನ್ನು ಹೇಳಿಲ್ಲ. ಆದರೆ ವೇದಾಂತ-ಪುರಾಣಗಳ ಏಳು ಲೋಕಗಳು ಏಳು ಮಾನಸಶಾಸ್ತ್ರೀಯ ತತ್ತ್ವಗಳನ್ನು ಅಥವಾ ಸತ್ತಾರೂಪಗಳನ್ನು ಸೂಚಿಸುತ್ತವೆ. ಸತ್, ಚಿತ್, ಆನಂದ, ವಿಜ್ಞಾನ, ಮನಸ್, ಪ್ರಾಣ ಮತ್ತು ಅನ್ನ. ಮಧ್ಯತತ್ವವಾದ ವಿಜ್ಞಾನವು ಮಹಸ್=ಮಹಾಲೋಕ. ಅದು ವಸ್ತುಗಳ ಸತ್ಯ-ಋತೈಕಾರ್ಥಕ ; ಬೃಹತ್ತಿನ ತತ್ತ್ವವೂ ಅದೇ. ಬೃಹತ್=ಅಗಲವಾದದ್ದು, ಪುರಾಣಗಳ ಪ್ರಕಾರ ಮಹೋಲೋಕದ ಮೇಲೆ ಜನೋಲೋಕ. ಜನೋಲೋಕವು ದಿವ್ಯಾನಂದದಾಗಾರ. ವೇದದಲ್ಲಿ ಋತವು ಅದರ ನೆಲೆಗೆ ನಮ್ಮನ್ನು ಮುಟ್ಟಿಸುವ ಸಾಧನ. ಆನಂದವು ಅದರಲ್ಲಿ ಮಯಸ್-ಅದು ಊರ್ಧ್ವಲೋಕ. (ವೇದ ಪುರಾಣ ಲೋಕಗಳ ಅನುಕ್ರಮ; ಭೂರ್ ಭುವಃ ಸುವರ್ ಮಹರ್ ಜನಸ್ತಪಃ ಸತ್ಯಂ). ಆದ್ದರಿಂದ ವೇದ-ವೇದಾಂತ ಪದ್ಧತಿಗಳೆರಡೂ ಒಂದೇ ಮತ್ತು ಎರಡೂ ಸಪ್ತ ತತ್ವಗಳನ್ನಾಧರಿಸಿದಂಥವು ಎಂಬುದು ನಿಶ್ಚಿತವೆಂದು ಹೇಳಬಹುದು. ಈ ಏಳು ವೈಯಕ್ತಿಕ ಪ್ರಜ್ಞೆಯ ಏಳು ಸ್ತರಗಳು ; ಅವು ವಸ್ತುನಿಷ್ಠ ಪ್ರಪಂಚದಲ್ಲಿ ರೂಪಗೊಳ್ಳುತ್ತವೆ. ವಸ್ತುನಿಷ್ಠ ಲೋಕಗಳು ಏಳು. ಆದ್ದರಿಂದ ಈ ಎರಡು ಪದ್ಧತಿಗಳೂ ಒಂದೇ, ಎರಡೂ ಚಿತ್ತಿನ ವ್ಯಕ್ತಿನಿಷ್ಠವಾದ ಏಳು ತತ್ವಗಳನ್ನೇ ಆಧರಿಸಿವೆ. ಅವೇ ವಸ್ತುನಿಷ್ಠವಾದ ಏಳು ಬಾಹ್ಯಲೋಕಗಳನ್ನು ನಿರ್ಮಿಸಿವೆ-ಎಂದು ಸಾಮಾನ್ಯವಾಗಿ ನಿರ್ಧರಿಸಬಹುದು. ಈ ತತ್ವವನ್ನವಲಂಬಿಸಿ

೧. ವಿಜ್ಞಾನ ಬೃಹದೃತ್ ಮಹೋವಸ್ತು ಸತ್ಯಮಿತ್ಯನರ್ಥಾಂತರಂ - ಶ್ರೀ ಅರವಿಂದೋಕ್ತ್ಯಾ (ಅನುವಾದಕ)

ನಾನು ವೇದದ ಸಪ್ತಲೋಕಗಳನ್ನೂ ತತ್ಸದೃಶವಾದ ಮಾನಸಶಾಸ್ತ್ರೀಯ ಪ್ರಜ್ಞಾಸ್ತರಗಳನ್ನೂ ಗುರುತಿಸಬಲ್ಲವನಾದೆನು ಮತ್ತು ಇಡೀ ವೇದ ಪದ್ಧತಿಯು ನನ್ನ ಮನಸ್ಸಿಗೆ ಸ್ಪಷ್ಟವಾಗಿ ಗೋಚರಿಸಿತು.

ಇಷ್ಟನ್ನು ಸುಸ್ಥಿರ ದರ್ಶನವೆಂದು ಸಿದ್ಧಮಾಡಿಕೊಂಡ ಅನಂತರ ಮಿಕ್ಕವು ಸ್ವಾಭಾವಿಕವಾಗಿಯೇ ಅನಿವಾರ್ಯವಾಗಿ ಅದರಿಂದ ಫಲಿತವಾದವು. ಮಾನವ ಜೀವವು ಮರಣ ಸ್ಥಿತಿಯಿಂದ ಅಮೃತತ್ವಕ್ಕೇರಲು ಅಸತ್ತಿಗೆ ಬದಲಾಗಿ ಸತ್ತನ್ನು ತೆಗೆದುಕೊಳ್ಳಬೇಕು, ಭಿನ್ನ ಭಿನ್ನ ಅಸ್ತಿತ್ವದಿಂದ ಪೂರ್ಣತೆಗೆ ಹಾಗೂ ಅನಂತಕ್ಕೆ ಹೋಗಬೇಕು-ಈ ಜೀವ ಪ್ರಜ್ಞೆಯೊಂದು (ಪರಿವರ್ತನೀಯ) ಮಧ್ಯಸ್ಥಿತಿ-ಎಂಬುದು ವೈದಿಕ ಋಷಿಗಳ ಕೇಂದ್ರ ಧ್ಯೇಯ ಎಂಬುದನ್ನು ನಾನು ಆಗಲೇ ಕಂಡುಕೊಂಡುಬಿಟ್ಟೆನು. ಮರಣವೆಂದರೆ ಮನಃಪ್ರಾಣಗಳು ಭಾಗವಹಿಸಿದ ಜಡಪದಾರ್ಥದ ಮರ್ತ್ಯಸ್ಥಿತಿ ; ಅಮರತ್ವವು ಅನಂತವಾದ ಸಚ್ಚಿದಾನಂದ. ಮನುಷ್ಯನು ಎರಡು ಮಧ್ಯಮಲೋಕ-ಗಳನ್ನು ದಾಟಿ (ರೋದಸೀ)[೧], ಸ್ವರ್ಗ ಮತ್ತು ಭೂಮಿ, ಮನಸ್ಸು ಮತ್ತು ದೇಹ ಇವುಗಳನ್ನು ದಾಟಿ, ಮಹಸ್ಸತ್ಯದ ಅನಂತಸ್ಥಿತಿಗೆ ಏರುತ್ತಾನೆ. ನಮ್ಮ ಪ್ರಾಚೀನ ಋಷಿಗಳು, ನಮ್ಮ ಪೂರ್ವಜರು, ಕಂಡುಹಿಡಿದ "ಮಹಾದ್ವಾರ" (ಮಹಾಮಾರ್ಗ, ಮಹಾಯಾನ)ಇದೇ.

ಅದಿತಿಯೆಂದರೆ ಅನಂತ, ಅಪ್ರಮೇಯ ; ದೇವತೆಗಳು ಅದರ ಮಕ್ಕಳು ಎಂದು ವರ್ಣಿತರಾಗಿದ್ದಾರೆ - ವೇದದಲ್ಲಿ ಯಾವ ಅಪವಾದವೂ ಇಲ್ಲದೆ ಅವರು ಮನುಷ್ಯನನ್ನು ಸಂವರ್ಧಿಸುತ್ತಾರೆ , ಅವನಿಗೆ ಬೆಳಕು ತೋರಿಸುತ್ತಾರೆ, ಅವನ ಮೇಲೆ ಜಲದ ಪೂರ್ಣತೆಯನ್ನೂ ಸ್ವರ್ಗಗಳ ಅಪಾರ ಐಶ್ವರ್ಯವನ್ನೂ ಸುರಿಯುವುದಲ್ಲದೆ, ಅವನಲ್ಲಿಯ ಸತ್ಯವನ್ನು ಬೆಳೆಯಿಸುತ್ತಾರೆ, ಅವನಿಗಾಗಿ ದಿವ್ಯಲೋಕಗಳನ್ನು ನಿರ್ಮಿಸುತ್ತಾರೆ; ಎಲ್ಲ ಅಡೆತಡೆ ಹೊಡೆತಗಳಿಂದಲೂ ಪಾರು ಮಾಡಿ ಅವನನ್ನು ಆ ಮಹಾಧ್ಯೇಯದತ್ತ ಕರೆದೊಯ್ಯುತ್ತಾರೆ-ಅದೇ ಸಮಗ್ರ ಸುಖ, ಸೌಲಭ್ಯ, ಪೂರ್ಣಾನಂದ. ಅವರ ಚಟುವಟಿಕೆಗಳಿಂದಲೂ ವಿಶೇಷಣಗಳಿಂದಲೂ ತತ್ಸಂಬಂಧಿಗಳಾದ ಮಾನಸಶಾಸ್ತ್ರೀಯ ಅರ್ಥದ ಐತಿಹ್ಯಗಳಿಂದಲೂ ಉಪನಿಷತ್ಸೂಚನೆಗಳಿಂದಲೂ ಪುರಾಣಗಳ ನಿರ್ದೇಶನಗಳಿಂದಲೂ ಗ್ರೀಕ್ ಪುರಾಣದ ವಿರಳವಾದ ಅಡ್ಡ ಬೆಳಕಿನಿಂದಲೂ ಆ ದೇವತೆಗಳ ಪ್ರತ್ಯೇಕ ಕರ್ತವ್ಯಗಳು ರೂಪಿತವಾದವು. ತದ್ವಿರುದ್ಧವಾಗಿ ಅವರನ್ನು ವಿರೋಧಿಸಿದ ರಾಕ್ಷಸರು ಎಂದರೆ ವಿಭಜನೆಯ ಮತ್ತು ಮಿತಿಕರಣದ ಶಕ್ತಿಗಳು, ಆಘಾದಕರು, ವಿದ್ರಾವಕರು, ಭಕ್ಷಕರು, ಕಟ್ಟಿ ಹಾಕುವವರು, ದ್ವಿಧಾಕಾರಕರು, ವಿಘ್ನಕಾರಕರು; ಅವರ ಹೆಸರೇ ಈ ಅರ್ಥಗಳನ್ನು ಹೇಳುತ್ತವೆ : ಅವರು ಸ್ವತಂತ್ರವೂ ಏಕೀಕೃತವೂ ಆದ ಪೂರ್ಣಾಸ್ತಿತ್ವಕ್ಕೆ ವಿರುದ್ಧ ವರ್ತಿಸುವವರು. ಈ ವೃತ್ರರು, ಪಣಿಗಳು, ಅತ್ರಿಗಳು[೨], ರಕ್ಷಸರು, ಶಂಬರ-ವಲ-ನೇಮುಚಿಗಳು ದ್ರಾವಿಡರಾಜರಲ್ಲ, ದೇವತೆಗಳಲ್ಲ. ಆದರೆ ಇಂದಿನ ಅತಿಶಯೋಕ್ತಿಹತವಾದ ಇತಿಹಾಸ ಪ್ರಜ್ಞೆಯು ಹಾಗೆ ತಿಳಿದುಕೊಂಡಿದೆ. ಆ ರಾಕ್ಷಸಾದಿಗಳು ಪ್ರಾಚೀನ ತರವಾದ ಕಲ್ಪನೆಗಳನ್ನು ಹೆಚ್ಚು ಚೆನ್ನಾಗಿ ಪ್ರತಿನಿಧಿಸುತ್ತಾರೆ; ಅವರು ನಮ್ಮ ಪಿತೃ ಪಿತಾಮಹರ ಧಾರ್ಮಿಕ ಹಾಗೂ ನೈತಿಕ ಮಗ್ನತೆಗೆ ತಕ್ಕ ಪ್ರತೀಕಗಳಾಗಿದ್ದರು. ಅವರು ಮೇಲಿಳಿತು ಮತ್ತು ಕೆಳಬಯಕೆಗಳ ಶಕ್ತಿಗಳ ನಡುವಣ ಹೋರಾಟವನ್ನು ಪ್ರತಿನಿಧಿಸುತ್ತಾರೆ. ಉದಾತ್ತಾನುದಾತ್ತ ಧ್ಯೇಯಗಳ ಮಧ್ಯದ ಸೆಣಸಾಟವನ್ನು ಸೂಚಿಸುತ್ತಾರೆ. ಋಗ್ವೇದದ ಈ ದ್ವಂದ್ವದ

---

೧. ದ್ಯಾವಾಪೃಥಿವೀ = ಸ್ವರ್ಗ-ಮರ್ತ್ಯಲೋಕಗಳು.

೨. ಅತ್ರಿಯೆಂಬ ಮುನಿಯಲ್ಲ.

ಕಲ್ಪನೆಯು ಜೋರೋ ಅಸ್ಟ್ರಿಯನ್ನರ ಶ್ರುತಿಯಲ್ಲಿಯೂ ಕಾಣಬಹುದು. ಈ ದ್ವಂದ್ವವು ಒಳಿತು-ಕೆಡಕುಗಳ ನಡುವಿನದು. ಇದನ್ನು ಜೋರೋ ಅಸ್ಟ್ರಿಯನ್ ಶ್ರುತಿಯು[೧] ಹೆಚ್ಚಿನ ನೈತಿಕ ಋಜುತ್ವದಿಂದಲೂ ಕಡಿಮೆ ಮಾನಶಾಸ್ತ್ರೀಯ ಸೂಕ್ಷ್ಮತೆಯಿಂದಲೂ ಪರ್ಯಾಯವಾಗಿ ಹೇಳುತ್ತದೆ. ಬಹುಶಃ ಈ ಜೋರೋ ಅಸ್ಟ್ರಿಯನ್ (ಅಥವಾ ಪಾರಸೀಕ) ಪದ್ಧತಿಯು ಆರ್ಯ ಸಂಸ್ಕೃತಿಯ ಮೂಲಭೂತ ಸರ್ವಸಾಧಾರಣ ಅಂಶಗಳಿಂದಲೇ ಹುಟ್ಟಿದ್ದಾಗಿರಬೇಕು.

ಕೊನೆಯದಾಗಿ, ವೇದದ ಪದ್ಧತಿಬದ್ಧ ಸಾಂಕೇತಿಕತೆಯನ್ನು ಪ್ರಾಚೀನ ಋಷಿಗಳೊಡನೆ ವ್ಯವಹರಿಸುತ್ತಿದ್ದ ದೇವತೆಗಳ ಬಗೆಗಿನ ಐತಿಹ್ಯಕ್ಕೂ ಚಿತ್ತರಿಸಿ ಅನ್ವಯಿಸಲಾಯಿತೆಂದು ನನಗೆ ಗೊತ್ತಾಯಿತು. ಇಂಥ ಕೆಲ ಪುರಾಣ ಗಾಥೆಗಳು ಬಹುಶಃ ನಿಸರ್ಗವಾದೀಯ ಹಾಗೂ ಖಗೋಲ ಶಾಸ್ತ್ರೀಯ ಮೂಲದವುಗಳಾಗಿರಬಹುದು. ಹಾಗಾದುದೇ ಆಗಿದ್ದರೆ ಅವುಗಳ ಮೂಲಾರ್ಥಕ್ಕೆ ಒಂದು ಮಾನಸಶಾಸ್ತ್ರೀಯ ಸಾಂಕೇತಿಕತೆಯನ್ನು ಪೂರಕವನ್ನಾಗಿ ಮಾಡಲಾಯಿತೆನ್ನಬೇಕಾಗುತ್ತದೆ. ಒಮ್ಮೆ ವೈದಿಕ ಸಂಕೇತಗಳ ಅರ್ಥ ಗೊತ್ತಾಯಿತೆಂದರೆ ಈ ಐತಿಹ್ಯಗಳ ಆಧ್ಯಾತ್ಮಿಕ ಉದ್ದೇಶವು ಎದ್ದು ಕಾಣುತ್ತದೆ ಮತ್ತು ಅನಿವಾರ್ಯವೆಂಬುದೂ ಗೊತ್ತಾಗುತ್ತದೆ. ಪ್ರತಿಯೊಂದು ವೇದಾಂಶವೂ ವೇದದಲ್ಲಿಯ ಇತರ ಅಂಶದೊಡನೆ ಬಿಡಿಸಲಾರದ ಕಗ್ಗಂಟಿನಂತೆ ಹಾಸು ಹೊಕ್ಕಾಗಿರುವುದೂ ಅದರ ಪ್ರಬಂಧನ್ಯಾಸದ ಶೈಲಿಯೂ-ಒಮ್ಮೆ ನಾವು ಒಂದು ವಿಧದ ಅರ್ಥವಿವರಣಾ ತಂತ್ರವನ್ನು ಹಿಡಿದ ಮೇಲೆ - ಅದರ ದೂರತಮ ವೈಚಾರಿಕ ಇತಿಮಿತಿಗಳವರೆಗೂ ಒಯ್ಯಲೇಬೇಕೆಂದು ನಮ್ಮ ವೇದವ್ಯಾಖ್ಯಾಪದ್ಧತಿಯು ನಮ್ಮನ್ನು ಒತ್ತಾಯಿಸುತ್ತದೆ. ದೃಢ ಹಸ್ತಗಳಿಂದ ವೇದ ಸಾಮಗ್ರಿಯು ಎರಕ ಹೊಯ್ಯಲ್ಪಟ್ಟಿದೆ ಮತ್ತು ಅವುಗಳನ್ನು ಅರ್ಥೈಸುವಾಗ ನಾವೇನಾದರೂ ತಪ್ಪು ಮಾಡಿದರೆ ಅವುಗಳ ಇಡಿ ಸ್ವರೂಪವನ್ನು ನಾಶಗೊಳಿಸಿದಂತಾಗುವುದಲ್ಲದೆ, ಅವುಗಳ ಸಮನ್ವಿತ ಆಲೋಚನಾ ಕ್ರಮವನ್ನೂ ಒಡೆದು ಚೂರು ಚೂರು ಮಾಡಿದಂತಾಗುತ್ತದೆ.

ಹೀಗೆ ನನ್ನ ಮನಸ್ಸಿನಲ್ಲಿ ಆ ಪ್ರಾಚೀನ ಛಂದೋವಾಣಿಯಲ್ಲಿ ಒಂದು ವೇದವೇ ಮೂಡಿಬಂದಂತಾಯಿತು. ಅದೋ ಉದ್ದಕ್ಕೂ ಮಹತ್ತಾದ ಪ್ರಾಚೀನ ಮತಧರ್ಮದ ಶ್ರುತಿ. ಅದರಲ್ಲಿ ಅತ್ಯಂತ ಆಳವಾದ ಮಾನಸ ಶಾಸ್ತ್ರೀಯ ಸಂಪ್ರದಾಯ ಅಡಗಿತ್ತು. ಆ ಶ್ರುತಿಯಲ್ಲಿ ವಿಚಾರದ ಗೊಂದಲವಿಲ್ಲ ; ತಾತ್ಪರ್ಯದಲ್ಲಿ ಅದು ಅರೆಪೊರಕವಾಗಿರಲಿಲ್ಲ. ವಿಜಾತೀಯವೂ ಅನಾಗರಿಕವೂ ಆದ ಅಂಶಗಳಿಂದ ಕೂಡಿರಲಿಲ್ಲ ; ಅದು ಒಂದು ಇಡಿಯಾದ ಆತ್ಮಪ್ರಜ್ಞೆಯುಳ್ಳ ಉದ್ದೇಶಬದ್ಧವಾದ ತಾತ್ಪರ್ಯವನ್ನು ಪ್ರಚ್ಛನ್ನವಾಗಿಟ್ಟುಕೊಂಡ ಗ್ರಂಥರಾಶಿಯಾಗಿತ್ತು. ಆ ಪ್ರಚ್ಛಾದನ ಕೆಲವೊಮ್ಮೆ ಪಾರದರ್ಶಕವೂ ಕೆಲವೊಮ್ಮೆ ಅಪಾರದರ್ಶಕವೂ ಆಗಿತ್ತು. ಅದರಲ್ಲಿ ಇನ್ನೊಂದು ಭೌತಿಕಾರ್ಥ ಅಡಗಿತ್ತು - ಆದರೆ ಅದೆಂದೂ ಒಂದು ಕ್ಷಣದ ಮಟ್ಟಿಗಾದರೂ ತನ್ನ ಉದಾತ್ತ, ಆಧ್ಯಾತ್ಮಿಕ ಗುರಿಯನ್ನಾಗಲಿ ಪ್ರವೃತ್ತಿಯನ್ನಾಗಲಿ ಕಳೆದುಕೊಂಡಿರಲಿಲ್ಲ.



---

೧. ಜೆಂಡ್ ಅವೆಸ್ತವು ಪಾರಸೀಕರ ಶ್ರುತಿ ಗ್ರಂಥ. - ಅನುವಾದಕ

## ಅಧ್ಯಾಯ-೫

# ವೇದದ ಭಾಷಾಶಾಸ್ತ್ರೀಯ ಪದ್ಧತಿ

ಸುಸಂಬದ್ಧವೂ ಸುಸ್ಥಿರವೂ ಆದ ಭಾಷಾಶಾಸ್ತ್ರೀಯ ಬುನಾದಿಯಿಲ್ಲದೆ ವೇದ ವಾಙ್ಮಯದ ಯಾವ ಅರ್ಥ ವಿವರಣೆಯೂ ಸಮಂಜಸವೆನ್ನಿಸಲಾರದು. ಆದರೆ ತನ್ನ ಅಸ್ಪಷ್ಟ ಹಾಗೂ ಪ್ರಾಚೀನ ಮಾತಿನಿಂದ ಈ ಒಂದೇ ಒಂದಾದ ದಾಖಲೆಯು ಅನನ್ಯವಾದ ಭಾಷಾಶಾಸ್ತ್ರೀಯ ತೊಂದರೆಗಳನ್ನು ಎದುರೊಡ್ಡುತ್ತದೆ. ಪಾರಂಪರಿಕವೂ ಎಷ್ಟೋ ಸಲ ಕಲ್ಪನಾತ್ಮಕವೂ ಆದ ಭಾರತೀಯ ವಿದ್ವಾಂಸರ ಭಾಷ್ಯಗಳನ್ನು ಯಾವ ವಿಮರ್ಶಕ ಬುದ್ಧಿಯೂ ಒಪ್ಪಿಕೊಳ್ಳಲು ಸಾಧ್ಯವಾಗದು. ಆಧುನಿಕ ಭಾಷಾಶಾಸ್ತ್ರವು ಹೆಚ್ಚು ಸುರಕ್ಷಿತವೂ (ಸುದೃಢವೂ) ವೈಜ್ಞಾನಿಕವೂ ಆದ ಆಧಾರವನ್ನು ಹುಡುಕಲು ಹೋರಾಡುತ್ತಿದೆ- ಆದರೆ ಅದಕ್ಕಿನ್ನೂ ಆ ಆಧಾರ ದೊರಕಿಲ್ಲ.

ತೃಪ್ತಿಕರವಾದ ಭಾಷಾ ಶಾಸ್ತ್ರೀಯ ಸಮರ್ಥನೆಯಿಂದ ಮಾತ್ರ ಪರಿಹರಿಸಬಹುದಾದ ಎರಡೇ ಎರಡು ತೊಂದರೆಗಳು ವಿಶೇಷತಃ ವೇದದ ಮಾನಸ ಶಾಸ್ತ್ರೀಯ ವ್ಯಾಖ್ಯೆಯನ್ನು ಮಾಡಹೊರಟವರಿಗೆ ಎದುರಾಗುತ್ತವೆ. ಈ ವ್ಯಾಖ್ಯಾನ ಪದ್ಧತಿಯು ಸಾಕಷ್ಟು ಸುಸ್ಥಿರವಾದ ವೈದಿಕ ಪಾರಿಭಾಷಿಕ ಪದಗಳಿಗೆ ಹೊಸ ಅರ್ಥಗಳನ್ನು ಸ್ವೀಕರಿಸುವ ಒತ್ತಾಯವನ್ನು (ಅಗತ್ಯವನ್ನು) ತರುತ್ತದೆ. ಊತಿ, ಅವಸ್, ವಯಸ್ ಎಂಬ ಪದಗಳನ್ನು ಉದಾಹರಣೆಗಳನ್ನಾಗಿ ತೆಗೆದುಕೊಳ್ಳಬಹುದು. ಈ ನವಾರ್ಥಗಳು ನಾವು ನ್ಯಾಯವಾಗಿ ಮಾಡುವ ಒಂದು ಪರೀಕ್ಷೆಯಲ್ಲಿ ಉತ್ತೀರ್ಣವಾಗಬಹುದು. ಅವು ಪ್ರತಿಯೊಂದು ಸಂದರ್ಭಕ್ಕೂ ಹೊಂದುತ್ತವೆ, ಅರ್ಥವನ್ನು ಸ್ಪಷ್ಟೀಕರಿಸುತ್ತವೆ, ಗುಟ್ಟನ್ನೆಟ್ಟಂತೆ ಸ್ಥಿರೀಕೃತವಾದ ಸ್ವರೂಪದ ವೇದದಂಥ ಗ್ರಂಥದಲ್ಲಿ ಆ ನವವ್ಯಾಖ್ಯೆಗಳು ಒಂದೇ ಪದಕ್ಕೆ ಭಿನ್ನಾರ್ಥಗಳನ್ನು ಹಚ್ಚುವ ಅವಶ್ಯಕತೆಯಿಂದ ನಮ್ಮನ್ನು ಮುಕ್ತಗೊಳಿಸಬಲ್ಲವು. ಆದರೆ ಈ ಪರೀಕ್ಷೆಯು ಸಾಕಾಗದು. ಇದರ ಜೊತೆಗೆ ನಮಗೆ ನಮ್ಮ ನವವ್ಯಾಖ್ಯೆಯನ್ನು ಸಮರ್ಥಿಸಬಲ್ಲ ಮತ್ತು ಒಂದೇ ಪದವು ಅನೇಕಾರ್ಥಕವಾದ ಬಗೆ ಹೇಗೆಂಬುದನ್ನು ಹೇಳಲು ಭಾಷಾಶಾಸ್ತ್ರೀಯ ಬುನಾದಿ ಬೇಕು ; ಅದರ ಮಾನಸಶಾಸ್ತ್ರೀಯ ಅರ್ಥವನ್ನೂ ಹಳೆಯ ವೈಯಾಕರಣರು ಅದಕ್ಕೆ ಕೊಟ್ಟ ಅರ್ಥವನ್ನೂ ಉತ್ತರ ಕಾಲೀನ ಸಂಸ್ಕೃತ ಭಾಷೆ ಅದಕ್ಕೆ ಮಾಡಿದ ಅರ್ಥವನ್ನೂ ಆ ಭಾಷಾಶಾಸ್ತ್ರೀಯ ಬುನಾದಿ ಸಮರ್ಥಿಸುವಂತಿರಬೇಕು. ಹೀಗೆ ಮಾಡಲು ಇಂದಿನವರೆಗಿನ ಭಾಷಾಶಾಸ್ತ್ರದ ಶೋಧ ಸಾಕಾಗದು. ಇದಕ್ಕೂ ಹೆಚ್ಚಿನ ವೈಜ್ಞಾನಿಕ ತಳಹದಿಯು ಸಿದ್ಧವಾದ ಹೊರತೂ ಉಕ್ತ ಸರ್ವಾಂಗೀಣ ಪರೀಕ್ಷೆಯು ಸುಲಭಸಾಧ್ಯವಾಗದು.

ಎರಡನೆಯದಾಗಿ, ಮಾನಸಶಾಸ್ತ್ರೀಯ ಅರ್ಥವಿವರಣೆಯು ವೇದದ ಗಣ್ಯಪದಗಳ ಶ್ಲೇಷಾರ್ಥವನ್ನು ಅವಲಂಬಿಸಿರುತ್ತದೆ. ಅಂಥ ಗಣ್ಯ ಶಬ್ದಗಳು ಗೂಢಾರ್ಥವಾಚಕಗಳಾಗಿರುತ್ತವೆ. ಶ್ಲೇಷಾಲಂಕಾರವು ಸಂಸ್ಕೃತ ವಾಙ್ಮಯದಲ್ಲಿ ಪರಂಪರಾಗತ. ಉತ್ತರ ಕಾಲೀನ ಸಂಸ್ಕೃತ ಅಭಿಜಾತ

ಸಾಹಿತ್ಯದಲ್ಲಿ ಕೆಲ ಸಲ ಅತಿಕೃತಕ ಕೌಶಲದಿಂದ ಬಳಸಲಾಗಿದೆ. ಈ ಶ್ಲೇಷವು ದ್ವಂದ್ವಾರ್ಥಕವಾದ ಒಂದು ಅಲಂಕಾರ. ಅದರ ಕೃತಕತೆಯೇ ಅದು ಅನಂತರದ ಅವಧಿಯ ಹೆಚ್ಚು ಪರಿಷ್ಕೃತವಾದ ಸಂಸ್ಕೃತಿಗೆ ಸೇರಿದ್ದೆಂದು ನಂಬಲು ನಮ್ಮಲ್ಲಿ ಎಡೆಗೊಡುತ್ತದೆ. ಪ್ರಾಚೀನತಮ ಗ್ರಂಥವೊಂದರಲ್ಲಿ ಸದಾ ಅದರ ಬಳಕೆಯಿರುವುದನ್ನು ನಾವು ಹೇಗೆ ಸಮರ್ಥಿಸಬಲ್ಲವರಾದೆವು? ಅಷ್ಟಲ್ಲದೆ, ವೈದಿಕ ಪ್ರಯೋಗದಲ್ಲಿ ಅದರ ವಿಲಕ್ಷಣ ವಿಸ್ತಾರವಿದೆ - ಒಂದೇ ಪದದಲ್ಲಿ ಕೈಯಲ್ಲಾದಷ್ಟು ಅರ್ಥಗಳನ್ನು ತುಂಬಿಸುವುದಕ್ಕೋಸ್ಕರ ಬುದ್ಧಿ ಪೂರ್ವಕವಾಗಿ ಸಂಸ್ಕೃತ ಧಾತುಗಳನ್ನು ಬಳಸಲಾಗಿದೆ. ಅವು ಯಾವಾಗಲೂ “ನಾನಾರ್ಥಕ”. ಅದು ಕಂಡ ಕೂಡಲೇ ಅತಿಹೆಚ್ಚಾದ ಕಾಠಿಣ್ಯವನ್ನು ನಮ್ಮ ಮುಂದೆ ಇಡುತ್ತದೆ. ಉದಾಹರಣೆ : ಅಶ್ವವೆಂದರೆ ಸಾಮಾನ್ಯವಾಗಿ ಕುದುರೆ ಎಂದರ್ಥ. ಅದನ್ನು ವೇದವು ಪ್ರಾಣದ ಪ್ರತೀಕವನ್ನಾಗಿ ಬಳಸುತ್ತದೆ ; ಪ್ರಾಣವೆಂದರೆ ನರಮಂಡಲದ ಶಕ್ತಿ, ಜೈವಿಕ ಶ್ವಾಸ, ಅರ್ಧ ಮಾನಸಿಕ ಮತ್ತು ಅರ್ಧ ಭೌತಿಕವಾದ ಕ್ರಿಯಾಶಕ್ತಿ-ಅದು ಮನಸ್ಸನ್ನೂ ಜಡಪದಾರ್ಥವನ್ನೂ ಜೋಡಿಸುತ್ತದೆ. ಮಿಕ್ಕ ಅರ್ಥಗಳೊಡನೆ ಅದರ ಧಾತುವು ಪ್ರವರ್ತಕತ್ವ ಎಂಬ ಅರ್ಥವನ್ನು (ಚೋದನಾರ್ಥವನ್ನು) ಕೊಡುತ್ತದೆ. ಪ್ರವರ್ತನೆ, ಚೋದನೆ, ಒತ್ತಡ, ಒಡೆಯತನ, ಭೋಗ ಎಂಬ ಅರ್ಥಗಳೆಲ್ಲಾ ಅಶ್ವ ಎಂಬ ಪ್ರತಿಮಾಲಂಕಾರದಲ್ಲಿ (ರೂಪಕ ಸಂಕೇತದಲ್ಲಿ) ಸಂಯೋಜಿಸಲಾಗಿದೆ ಈ ಅಶ್ವವು ಜೀವಾಶ್ವ ; ಇದರ ಸಾರವತ್ತಾದ ಪ್ರವೃತ್ತಿಗಳೆಲ್ಲವನ್ನೂ ಸೂಚಿಸಲು ಅಶ್ವಶಬ್ದವು ಬಳಸಲ್ಪಟ್ಟಿದೆ. ಆರ್ಯಪೂರ್ವಜರ ಮಾತು ನಮ್ಮ ಆಧುನಿಕ ಭಾಷೆಯ ಸಂಪ್ರದಾಯ (ಸಮಯ)ವನ್ನು ಅನುಸರಿಸುತ್ತಿದ್ದಿದ್ದರೆ ಅಥವಾ ಇದೇ ವಿಕಾಸಾವಸ್ಥೆಯಲ್ಲಿದ್ದಿದ್ದರೆ ಅಂಥ ಭಾಷಾಪ್ರಯೋಗವು ಸಾಧ್ಯವಾಗುತ್ತಿರಲಿಲ್ಲ. ಆದರೆ ವೈದಿಕ ಋಷಿಗಳ ಭಾಷೆಯಲ್ಲಿ ವೈಲಕ್ಷಣವಿತ್ತು ; ಶಬ್ದಗಳನ್ನು ಅವರು ಹೆಚ್ಚು ಜೀವಂತವೆಂದು ಭಾವಿಸುತ್ತಿದ್ದರು ; ಅವರಿಗೆ ಶಬ್ದಗಳು ಕಲ್ಪನೆಗಳ ಸಾಮಯಿಕ ಸಂಕೇತಗಳು ಮಾತ್ರ ಆಗಿರಲಿಲ್ಲ ; ಉತ್ತರಕಾಲೀನ ಭಾಷಾ ಪ್ರಯೋಗಕ್ಕಿಂತ ಅವು ಅವರಿಗೆ ತಮ್ಮ ಅರ್ಥದ ಪರಿವರ್ತನಾವಸ್ಥೆಯಲ್ಲಿ ಹೆಚ್ಚು ಸ್ವತಂತ್ರವೆನ್ನಿಸಿದ್ದವು-ಎಂದು ನಾವು ಕಲ್ಪಿಸಿಕೊಂಡರೆ - ಅವರ ಈ ಉಪಾಯಗಳೆಲ್ಲವೂ ಸ್ವಾಭಾವಿಕ, ಅಕೃತಕ ಯಾ ನೇಯಾರ್ಥಕ ಎಂದು ಅವರಿಗೆ ತೋರಲಿಲ್ಲವೆಂಬುದೂ ಹೊಸ, ಸಂಕ್ಷಿಪ್ತ, ಪರಿಪೂರ್ಣ ಸ್ವರೂಪದ ಭಾಷಾ ನೀತಿಯನ್ನು ಅನುಸರಿಸಲು ಕುತೂಹಲವುಳ್ಳವರಿಗೆ ಉಕ್ತ ಉಪಾಯಗಳು ಮೊಟ್ಟಮೊದಲ ಸ್ವಾಭಾವಿಕ ಅರ್ಥವ್ಯಂಜಕ ಸಾಧನಗಳಾದಾವು ; ಆ ಸಾಧನಗಳ ಮೂಲಕ ಗ್ರಾಮ್ಯರಿಗೆ ತಿಳಿಯದ ಮಾನಸಶಾಸ್ತ್ರೀಯ ಅರ್ಥವನ್ನು ತುಂಬಲು ಅವರಿಗೆ ಸಾಧ್ಯವಾಯಿತು, ಅಪವಿತ್ರ ಮನಸ್ಕರಿಗೆ ಆ ಅರ್ಥ ಗೊತ್ತಾಗದಂತೆ ಇಡಲು ಶಕ್ಯವಾಯಿತು-ಎಂದು ನಾವು ಸಮಾಧಾನ ಹೊಂದಬಹುದು. ಇದೇ ನಿಜವಾದ ವಿವರಣೆಯೆಂದು ನಾನು ನಂಬುತ್ತೇನೆ. ತಮ್ಮ ಜನಪ್ರಿಯ ಬಳಕೆಯಲ್ಲಿ ಸರಳವೂ ಅಚ್ಚುಕಟ್ಟೂ ಭೌತಿಕಾರ್ಥವುಳ್ಳವುಗಳೂ ಆದ ಶಬ್ದಗಳನ್ನು ವಿಲಕ್ಷಣವೂ, ಗುಟ್ಟಾಗಿಯಂತೆ ಮಾನಸಶಾಸ್ತ್ರೀಯ ಅರ್ಥವನ್ನೊಳಗಿರಿಸಿ ಬಳಸಲು ಅನುಕೂಲವೂ ಆದ ಒಂದು ವಿಕಾಸಾವಸ್ಥೆಯನ್ನು ಆರ್ಯಭಾಷೆ ದಾಟಿ ಹೋಗಿದೆ ಎಂಬುದನ್ನು ಅದರ ಅಭಿವೃದ್ಧಿಯ ಸ್ವರೂಪದ ಅಭ್ಯಾಸದಿಂದ ಸತ್ಯವೆಂದು ಸಿದ್ಧ ಮಾಡಬಹುದೆಂದು ನನ್ನ ನಂಬಿಗೆ.

ಆಗಲೇ ನಾನು ಮೊದಲು ಮಾಡಿದ ತಮಿಳು ಪದಗಳ ಅಭ್ಯಾಸದಿಂದ ಹಳೆಯ ಸಂಸ್ಕೃತ ಭಾಷೆಯ ಮೂಲಗಳಿಗೂ ರಚನೆಗೂ ತಕ್ಕ ಸೂಚಕಗಳು ದೊರಕಿದಂತೆ ತೋರಿತು ಎಂಬುದನ್ನು ಹೇಳಿಬಿಟ್ಟಿದ್ದೇನೆ. ಈ ಸೂಚಕಗಳು ನನ್ನನ್ನು ಎಲ್ಲಿಯವರೆಗೆ ಕೊಂಡೊಯ್ದುವೆಂದರೆ, ನನ್ನ ಮೂಲ ಆಸಕ್ತಿಯಾದ ಆರ್ಯ-ದ್ರಾವಿಡ ಭಾಷೆಗಳ ಸಂಬಂಧಗಳನ್ನು ನಿರ್ಧರಿಸುವ ಯತ್ನವೇ ಮರೆತು

ಹೋಗಿ ಇನ್ನೂ ಹೆಚ್ಚು ಆಸಕ್ತಿ ಪ್ರಚೋದಕವಾದ ಇಡೀ ಮಾನವ ಕುಲದ ಭಾಷೆಯ ಮೂಲಗಳನ್ನೂ ವಿಕಾಸ ನಿಯಮಗಳನ್ನೂ ಶೋಧಿಸುವುದರಲ್ಲಿ ನನ್ನನ್ನು ಮುಳುಗಿಸಿಬಿಟ್ಟಿತು. ಯಾವುದೇ ನಿಜವಾದ ಭಾಷಾಶಾಸ್ತ್ರದ ಮೊದಲ ಕೇಂದ್ರ ಧ್ಯೇಯವು ಈ ಮಹಾ ಸಂಶೋಧನೆಯೇ ಆಗಿರಬೇಕಲ್ಲದೆ, ಭಾಷಾ ಶಾಸ್ತ್ರಜ್ಞರು ಸಾಮಾನ್ಯವಾದ ವಿಚಾರಗಳಲ್ಲಿ ಮಗ್ನರಾಗಿರುವುದು ಅವರ ಆದ್ಯ ಕೇಂದ್ರ ಧ್ಯೇಯವಾಗಬಾರದು ಎಂದು ನನಗೆ ತೋರಿತು.

ಆಧುನಿಕ ಭಾಷಾ ಶಾಸ್ತ್ರದ ಹುಟ್ಟು ನನ್ನ ಮೊದಲ ಪ್ರತ್ಯಾಶೆಗಳನ್ನು ಸುಳ್ಳು ಮಾಡಿದ್ದರಿಂದ - ಉಕ್ತ ಸಾಧನೆಯಲ್ಲಿ ಸೋತುದರಿಂದ ಅದರ ಅಲ್ಪ ಫಲಿತಾಂಶಗಳಿಂದಲೂ "ಚಿಲ್ಲರೆ ಊಹಾತ್ಮಕ ವಿಜ್ಞಾನ" ಎಂದು ಅದು ಕರೆಯಲ್ಪಡುವ ಸ್ಥಿತಿಗೆ ಇಳಿದುದರಿಂದಲೂ ಅಂಥ ಸ್ಥಿತಿ ಹೆಪ್ಪುಗಟ್ಟಿ ನಿಂತುದರಿಂದಲೂ ಭಾಷಾ ಶಾಸ್ತ್ರವೆಂಬ ಶಾಸ್ತ್ರವೇ ಈಗ ಅಶ್ರದ್ಧೇಯವಾಗಿದೆ ; ಅದರ ಅಪೂರ್ಣ ವಿಚಾರದ ಮೇಲಿನಿಂದ ನಾಳೆಯಾದರೂ ಅದೊಂದು ಶಾಸ್ತ್ರ (ವಿಜ್ಞಾನ) ಎನ್ನಿಸೀತು ಎಂಬ ಕಲ್ಪನೆಯು ಸಹಾ ಸಂಪೂರ್ಣವಾಗಿ ಅಲ್ಲಗಳೆಯಲ್ಪಟ್ಟಿದೆ. ಅಂಥ ಆತ್ಯಂತಿಕ ನಿಷೇಧವನ್ನು ನಾನು ಒಪ್ಪಲಾರೆನೆನ್ನಿಸುತ್ತದೆ. ಆಧುನಿಕ ವಿಜ್ಞಾನವು ಜಯಪ್ರದವಾಗಿ ಸಿದ್ಧಮಾಡಿದ ಯಾವುದಾದರೂ ಒಂದು ತತ್ವವಿದ್ದರೆ ಅದು - ಎಲ್ಲ ಪಾರ್ಥಿವ ಪದಾರ್ಥಗಳ ಚರಿತ್ರೆಯಲ್ಲೂ ವಿಧಿಬದ್ಧತೆ ಮತ್ತು ವಿಕಾಸಪ್ರಕ್ರಿಯೆಗಳಿದ್ದೇ ಇವೆ - ಎಂಬುದೇ ಆಗಿದೆ. ವಾಕ್ಕಿನ ಗಂಭೀರ ಸ್ವಭಾವವು ಏನೇ ಆಗಿರಲಿ, ಮನುಷ್ಯ ಭಾಷೆಯ ಹೊರ ಆವಿರ್ಭಾವದಲ್ಲಿ ಅದು ಒಂದು ಅವಯವಿಯಾಗಿದೆ, ಒಂದು ಬೆಳವಣಿಗೆ, ಒಂದು ಭೌಮ ವಿಕಾಸ. ಅದು ನಿಜವಾಗಿ ಯಾವಾಗಲೂ ಮಾನಸಶಾಸ್ತ್ರೀಯ ಅಂಶವನ್ನು ಉಳ್ಳದ್ದಾಗಿದೆ. ಆದ್ದರಿಂದ ಅದು ಹೆಚ್ಚು ಸ್ವತಂತ್ರವೂ ನಮ್ಯವೂ ಬುದ್ಧಿಪೂರ್ವಕವಾಗಿ ಸ್ವಯಂ ಹೊಂದಿಕೊಳ್ಳುವಂಥದೂ ಆಗಿದೆ ; ಶುದ್ಧ ಭೌತಿಕ ಅವಯವಿಗಳು ಹೀಗಿಲ್ಲ. ಅದರ ಗೌಪ್ಯವನ್ನು ಗ್ರಹಿಸುವುದು ಹೆಚ್ಚು ಕಷ್ಟ. ಅದರ ಅವಯವಗಳು (ಅಂಗಗಳು) ವಿಶ್ಲೇಷಣೆಯ ಅನಿಶ್ಚಿತವೂ ಸೂಕ್ಷ್ಮತರವೂ ಆದ ಪದ್ಧತಿಗೆ ಒಳಪಡುತ್ತವೆ. ಹೆಚ್ಚು ಆವಿಯಂತಿದ್ದರೂ ಬದಲಾಯಿಸುವಂಥವು-ಗಳಾಗಿದ್ದರೂ ಜಡ ಪದಾರ್ಥಗಳಿಗಿಂತ ಅವುಗಳೇನೂ ಕಡಿಮೆ ವಿದಿಬದ್ಧತೆಗೂ ಪ್ರಕ್ರಿಯಾಕ್ರಮಕ್ಕೂ ಒಳಗಾಗಿಲ್ಲ. ವಿಧಿಯೂ ಪ್ರಕ್ರಿಯೆಯೂ ಭಾಷೆಯ ಹುಟ್ಟನ್ನೂ ಬೆಳವಣಿಗೆಯನ್ನೂ ನಿಯಂತ್ರಿಸಿರಬೇಕು. ಅವಶ್ಯಕ ಸೂಚನೆ ಮತ್ತು ಸಾಕಷ್ಟು ದತ್ತ ಸಾಮಗ್ರಿ (ಲಬ್ಧ ಸಂಗ್ರಹ) ಇದ್ದದ್ದೇ ಆದರೆ ಭಾಷೆಯ ಮೂಲಗಳನ್ನೂ ವಿಕಾಸ ಸೋಪಾನಗಳನ್ನೂ ಕಂಡುಹಿಡಿಯಬಹುದು ಎಂಬುದು ಖಂಡಿತ. ಸಂಸ್ಕೃತ ಭಾಷೆಯಲ್ಲಿ ಸೂಚನೆ ಲಭ್ಯ, ಲಬ್ಧ ಸಂಗ್ರಹವು ವಿಚಾರಣೆಗೆ ಸಿದ್ಧವಾಗಿದೆ.

ಈ ದಿಕ್ಕಿನಲ್ಲಿ ಹೆಚ್ಚು ತೃಪ್ತಿಕರವಾದ ಫಲಿತ ದೊರಕದಂತಾಗಲು ಭಾಷೆಯ ಭೌತಿಕ ಭಾಗಗಳಲ್ಲೇ ಭಾಷಾಶಾಸ್ತ್ರವು ಮಗ್ನವಾದದ್ದು ಕಾರಣ. ಭಾಷೆಯ ಬಾಹ್ಯ ಶಬ್ದರೂಪ ಶಾಸ್ತ್ರದಲ್ಲಿ ಅದು ಹೆಚ್ಚಾಗಿ ಮಗ್ನವಾದದ್ದೇ ಹೇತು ಮತ್ತು ತನ್ನ ಮಾನಸ ಶಾಸ್ತ್ರೀಯ ಅಂಗದಲ್ಲಿ ಅದು ಹಾಗೇ ತತ್ಸಂಬದ್ಧ ಭಾಷೆಗಳ ನಿಷ್ಪನ್ನ ರೂಪದ ಬಾಹ್ಯ ಸಂಬಂಧದ ಬಗೆಗೂ ವೈಯಾಕರಣ ವಿಭಕ್ತಿಗಳ ಬಗೆಗೂ ಹೆಚ್ಚು ಲಕ್ಷ್ಯ ಹಾಕುತ್ತಾ ಹೋದದ್ದೇ ಬೀಜ. ಮೂಲಗಳತ್ತ ಹೊರಳುವುದೇ ವಿಜ್ಞಾನದ ನಿಜ ಪದ್ಧತಿ. ಭಾಷೆಯ ಭ್ರೂಣ ಶಾಸ್ತ್ರದತ್ತ ಗಮನ ಹರಿಸಬೇಕು ; ಅದರ ಅವಿಚ್ಛೇದ್ಯ ಅಂಗಗಳತ್ತ ಮತ್ತು ಅದರ ಹೆಚ್ಚು ಅಸ್ಪಷ್ಟ ಪ್ರಕ್ರಿಯಾಂಶಗಳತ್ತ, ಹೆಚ್ಚು ಲಕ್ಷ್ಯ ಹಾಕಬೇಕು. ಹೊರ ಹೊರಗೆ ಕಣ್ಣಿಗೆ ಕಾಣಿಸುವ ಅಂಶಗಳಿಂದ ಹೊರ ಹೊರಗಿನ ಹಾಗೂ ಮೇಲು ಮೇಲಿನ ಸಂಗತಿಗಳಷ್ಟೇ ಗೊತ್ತಾಗುತ್ತವೆ. ವಿಷಯದ ಗಂಭೀರಾಂತರಾಳವನ್ನೂ ಅದರ ನಿಜ ಸತ್ಯವನ್ನೂ ಅದರ ಬಾಹ್ಯಾಕಾರವು

ಅಡಗಿಸಿಟ್ಟುಕೊಂಡಿರುವ ಅಂಶಗಳೊಳಹೊಕ್ಕು ಶೋಧಿಸುವುದರಿಂದಲೇ ಹುಡುಕಿ ತೆಗೆಯಬಹುದು. ಅವು ಭೂತಕಾಲೀನ ಗೌಪ್ಯಗಳು. ಅವಿರುವುದು ಪರಿಪೂರ್ಣತೆ ಹೊಂದಿದ ಶಬ್ದರೂಪಗಳಲ್ಲಿ. ನಾವೀಗ ಕಾಣುವುದು ಚೆಲ್ಲಾಪಿಲ್ಲಿಯಾದ ಸೂಚಕಗಳನ್ನು ಅಥವಾ ಸಂಭಾವ್ಯತೆಗಳನ್ನು. ಇದೇ ತರಹದ ಪದ್ಧತಿಯಿಂದ ಒಳಹೊಕ್ಕು ಪರಿಶೀಲಿಸಿದರೆ ನಿಜವಾದ ಮಾನವ ವಿಜ್ಞಾನ (ಶಾಸ್ತ್ರ)ವನ್ನು ಪಡೆಯಬಹುದು.

ಈ ದಾರಿಹಿಡಿದ ನಾನು ಇನ್ನೊಂದು ವಿಷಯಕ್ಕೆ ಮೀಸಲಾದ ಗ್ರಂಥದ ಚಿಕ್ಕ ಅಧ್ಯಾಯದಲ್ಲಿ ನಿಮ್ಮೆದುರು ಮೇಲೆ ಹೇಳಿದ ಎಲ್ಲ ವಿಷಯಗಳ ವಿವರಗಳನ್ನೂ ಮಂಡಿಸಲಾರೆನು. ಇಲ್ಲಿ ವೇದಾರ್ಥ ಪ್ರಕಾಶನದ ವಿಷಯಕ್ಕೆ ಬೇಕಾದ ಒಂದೆರಡು ಭಾಷಾ ವಿಜ್ಞಾನ ಲಕ್ಷಣಗಳನ್ನು ಅದಕ್ಕೆ ನೇರವಾಗಿ ಸಂಬಂಧಿಸಿದಂತೆ ಸಂಕ್ಷಿಪ್ತವಾಗಿ ಸೂಚಿಸಬಲ್ಲೆನಷ್ಟೆ. ಅವನ್ನಿಲ್ಲಿ ನಾನು ಹೇಳಲು ಹೊರಟದ್ದೇಕೆಂದರೆ, ನನ್ನ ವಾಚಕರು ಕೆಲ ವೈದಿಕ ಪದಗಳ ಅರ್ಥವನ್ನು ಹೇಳುವಾಗ ನಾನು ವಿಕಟವೂ ವಿಲಕ್ಷಣವೂ ಆದ ಊಹಾಪೋಹಗಳನ್ನವಲಂಬಿಸಿದ್ದೇನೆ, ಅವುಗಳ ಲಾಭ ಪಡೆದಿದ್ದೇನೆ-ಎಂಬ ಭಾವನೆ ಬರಬಾರದು ಎಂಬ ಕಾರಣದಿಂದ ಮಾತ್ರ. ಅಂಥ ಊಹಾಪೋಹಗಳು ಏಕಕಾಲಕ್ಕೆ ಆಧುನಿಕ ಭಾಷಾಶಾಸ್ತ್ರದ ಆಕರ್ಷಣೆಯೂ ಹೌದು. ಅತ್ಯಂತ ಹೆಚ್ಚಿನ ದೌರ್ಬಲ್ಯವೂ ಹೌದು.

ಶಬ್ದಗಳು ಸಸ್ಯ ಮತ್ತು ಪ್ರಾಣಿಗಳಂತೆಯೇ ಬೆಳವಣಿಗೆಗಳಲ್ಲದೆ, ಯಾವ ಅರ್ಥದಲ್ಲೂ ಅವು ಕೃತಕ ವಸ್ತುಗಳಲ್ಲ-ಅವು ಕೆಲ ಬೀಜಶಬ್ದಗಳನ್ನಾಧರಿಸಿ ಹುಟ್ಟಿ ಜೀವಂತವಾಗಿ ಬೆಳೆದು ಬಂದ ಪದಾರ್ಥಗಳು. ಈ ಬೀಜ ಶಬ್ದಗಳಿಂದ ಅಲ್ಪ ಸಂಖ್ಯೆಯ ಅರೆಪೂರಕ ಧಾತು ಧ್ವನಿಗಳು ಹುಟ್ಟಿ ತಮ್ಮ ಸಂತತಿಯನ್ನು ಬೆಳೆಯಿಸುತ್ತಾ ಹೋಗುತ್ತವೆ ; ಅವು ಉತ್ತರೋತ್ತರ ಸಂತಾನದ ತಲೆಮಾರುಗಳು ಹುಟ್ಟಿ ಬೆಳೆದು ಕಾಡುಗುಂಪು, ಊರುಗುಂಪು, ಕುಟುಂಬಗಳ ಗುಂಪುಗಳಾಗಿ ಪ್ರತ್ಯೇಕ ಶಾಖೆಗಳಾಗಿ ಹೋಗುತ್ತವೆ. ಆದರೆ ಅವೆಲ್ಲವುಗಳಿಗೂ (ಪ್ರತ್ಯೇಕವಾದ ಗುಂಪುಗಳಲ್ಲಿ ಒಂದೊಂದಕ್ಕೂ) ಅವವೇ ಆಯ್ದುಕೊಂಡ ಸಾಮಾನ್ಯ ಮೂಲ ಮತ್ತು ಸಾಮಾನ್ಯ ಮಾನಸಶಾಸ್ತ್ರೀಯ ಚರಿತ್ರೆ ಇರುತ್ತದೆ. ಪ್ರಾಚೀನ ನರನ ಜೈವಿಕ ಪ್ರಜ್ಞೆ (ನಾಡೀಮನ) ಆಯ್ದುಕೊಂಡ ಕೆಲವು ಸಾಮಾನ್ಯಾರ್ಥಗಳು ಅಥವಾ ಅರ್ಥಪೂರ್ಣವಾದ ಶಬ್ದಗಳು (ಅವುಗಳಿಗೆ ಸಾಮಾನ್ಯ ಪ್ರಯೋಜನ ಮತ್ತು ಇಂದ್ರಿಯಜ್ಞಾನದ ಮೌಲ್ಯಗಳಿರುತ್ತವೆ) ಎಂಬಿವುಗಳಿಂದ ಆದ ಸಂಘಟನೆಯೇ ಭಾಷಾಭಿವೃದ್ಧಿಯ ಮೂಲಸ್ತಂಭ. ಈ ಸಂಘಟನೆಯ ಪ್ರಕ್ರಿಯಾ ಸೋಪಾನಪಂಕ್ತಿಯೂ ಕೃತಕವಲ್ಲ - ಸ್ವಾಭಾವಿಕ ; ಅದನ್ನು ಸರಳ ಮತ್ತು ಖಚಿತ ಮಾನಸ ಶಾಸ್ತ್ರೀಯ ನಿಯಮಗಳು (ವಿಧಿಗಳು) ನಿಯಂತ್ರಿಸಿರುತ್ತವೆ.

ಆದಿಯಲ್ಲಿ ನಾವು ವಿಚಾರ (ಕಲ್ಪನೆ, ಭಾವ, ಆಲೋಚನೆ)ಎಂದು ಕರೆಯುವ ಪದಾರ್ಥವನ್ನು ಹೇಳಲು ಭಾಷೆಯ ಧ್ವನಿಗಳು (ಸದ್ದುಗಳು) ಬಳಸ್ಪಡುತ್ತಿರಲಿಲ್ಲ ; ಅವು ಕೆಲವು ಸಾಮಾನ್ಯ ಸಂವೇದನೆಗಳ ಮತ್ತು ಭಾವನಾತ್ಮಕ ಮೌಲ್ಯಗಳ ವಾಚಕ ಪರ್ಯಾಯಗಳಾಗಿದ್ದವು. ನಮ್ಮ ನರನಾಡಿಗಳಲ್ಲದೆ ಬುದ್ಧಿಯು ಭಾಷೆಯನ್ನು ನಿರ್ಮಿಸಲಿಲ್ಲ. ವೈದಿಕ ಸಂಕೇತಗಳನ್ನೆತ್ತಿಕೊಂಡರೆ - ಇಂದ್ರನಲ್ಲ, ಅಗ್ನಿ ಮತ್ತು ವಾಯುಗಳು ಮಾನವನ ಮಾತನ್ನು ಮಾಡಿದವರು. ಜೈವಿಕ ಹಾಗೂ ಸಂವೇದನಾತ್ಮಕ ಚಟುವಟಿಕೆಗಳು ಮನಸ್ಸನ್ನು ಹಡೆದವು. ಮನುಷ್ಯನಲ್ಲಿಯ ಬುದ್ಧಿಯು ಇಂದ್ರಿಯಾರ್ಥ ಸಂಯೋಗ (ಸಂವೇದನಾ ಸಂಯೋಜನೆ) ಮತ್ತು ಇಂದ್ರಿಯಾರ್ಥ ಅನುಕ್ರಿಯೆ (ಪ್ರತಿಕ್ರಿಯೆ) ಗಳಿಂದ ಬುದ್ಧಿಯು ತನ್ನನ್ನು ತಾನೇ ರಚಿಸಿಕೊಂಡಿದೆ. ಸಂವೇದನೆ-ಭಾವನೆಗಳ ನೈಸರ್ಗಿಕ

ನಿಯಮದಿಂದ ಹಾಗೇ ಭಾಷೆಯ ಬೌದ್ಧಿಕ ಬಳಕೆಯು ಅಭಿವೃದ್ಧಿ ಹೊಂದಿತು. ಅವು ಮೂಲತಃ ಜೈವಿಕ ವಿಸರ್ಜನೆಗಳಾಗಿದ್ದು ಅಸ್ಪಷ್ಟ ಸಂವೇದನಾರ್ಥಗಳನ್ನು ಗರ್ಭೀಕರಿಸಿಕೊಂಡು ಬೆಳೆದು ಬಂದಂಥವುಗಳು. ಆ ಬೆಳವಣಿಗೆಯಲ್ಲಿ ಅವುಗಳು ಕೊನೆಗೆ ಬೌದ್ಧಿಕ ನಿಷ್ಕೃಷ್ಟಾರ್ಥವುಳ್ಳ ಸ್ಥಿರ ಸಂಕೇತಗಳಾಗಿ ನಿಂತವು.

ಇದರ ಫಲವಾಗಿ ಮೂಲತಃ ಶಬ್ದವು ಯಾವ ಒಂದು ನಿರ್ದಿಷ್ಟ ಕಲ್ಪನೆಗೂ ಅಂಟಿಕೊಂಡಿರಲಿಲ್ಲ. ಅನೇಕ ವಿಧವಾಗಿ ಬಳಸಬಹುದಾದ ಗುಣ ಅದಕ್ಕಿತ್ತು. ಆದ್ದರಿಂದ ಮೊಟ್ಟ ಮೊದಲು ಶಬ್ದ ಕುಲಗಳೂ ಶಬ್ದ ಕುಟುಂಬಗಳೂ ಸಾಮಾಜಿಕ ಪದ್ಧತಿಯ ಪ್ರಕಾರ ತಮ್ಮ ಬಾಳನ್ನು ಆರಂಭಿಸಿದವು. ಅವುಗಳಿಗಾಗ ಸಾಧ್ಯವೂ ಪ್ರಾಪ್ಯವೂ ಆದ ಸರ್ವಸಾಧಾರಣ ಅರ್ಥಗಳಿದ್ದವು ; ಹಾಗೇ ಅವೆಲ್ಲವುಗಳಿಗೂ ಸರ್ವಸಾಮಾನ್ಯ ಹಕ್ಕೂ ಇತ್ತು. ಅವುಗಳ ವ್ಯಕ್ತಿತ್ವವು ಒಂದೇ ಅರ್ಥದ ಛಾಯಾರ್ಥಛಾಯೆಗಳನ್ನು ಹೇಳುವುದರಲ್ಲಷ್ಟಲ್ಲದೆ, ಯಾವುದಾದರೂ ಒಂದೇ ಅರ್ಥಕ್ಕೆ ಅಂಟಿಕೊಂಡಿರುವ, ಒಂದೇ ಅರ್ಥವನ್ನು ಹೇಳುವ, ವಿಶಿಷ್ಟ ಹಕ್ಕಿರಲಿಲ್ಲ. ಭಾಷೆಯ ಪ್ರಾಚೀನೇತಿಹಾಸದ ಸ್ವರೂಪವೇ ಹೀಗಿತ್ತು. ಅದು ಒಂದು ಸಾಮುದಾಯಿಕ ಜೀವನ. ಶಬ್ದಗಳೇ ಸಮುದಾಯದ ಸದಸ್ಯರು. ಈ ಸಾಮುದಾಯಿಕ ಜೀವನ ಪದ್ಧತಿಯು ಕ್ರಮೇಣ ಯಾವುದಾದರೂ ಒಂದು ಬೌದ್ಧಿಕ ಅರ್ಥ ನನ್ನದು ಎಂಬ ವೈಯಕ್ತಿಕ ಆಸ್ತಿವಂತಿಕೆಗೆ ತಿರುಗಿತು. ಈ ಶಬ್ದ ಸಂಸಾರದಲ್ಲಿ ಆಸ್ತಿ ಪಾಲುಗಾರಿಕೆಯು ಮೊದಲು ಶಿಥಿಲವಾಗಿತ್ತು. ಆಮೇಲೆ ಅದು ಗಟ್ಟಿಯಾಗುತ್ತಾ ಹೋಯಿತು. ಆಗ ಶಬ್ದ ಕುಟುಂಬಗಳು ಹುಟ್ಟಿದವು. ಅನಂತರ ಅದರ ಒಂದೊಂದು ಶಬ್ದವೂ ತನ್ನದೇ ಆದ ಸ್ವತಂತ್ರ ಜೀವನವನ್ನು ಆರಂಭಿಸಿತು. ಈ ಕೊನೆಯ ಹಂತದಲ್ಲಿ ತಾನು ಪ್ರತಿನಿಧಿಸುವ ಅರ್ಥದ ಜೀವನಕ್ಕೆ ಆ ಶಬ್ದದ ಜೀವನವು ಸಂಪೂರ್ಣ ಅಡಿಯಾಳಾಯಿತು.[೧] ಏಕೆಂದರೆ, ಭಾಷೆಯ ಮೊದಲ ಹಂತದಲ್ಲಿ ಶಬ್ದವು ಅದರ ಅರ್ಥದಷ್ಟೇ ಅಥವಾ ಅದಕ್ಕೂ ಹೆಚ್ಚು ಜೀವಂತವಾಗಿತ್ತು ; ಧ್ವನಿಯು (ನಾದವು) ಅರ್ಥವನ್ನು ನಿರ್ಧರಿಸುತ್ತಿತ್ತು. ಅದರ ಕಡೆಯ ಅವಸ್ಥೆಯಲ್ಲಿ ಶಬ್ದಾರ್ಥಗಳಲ್ಲಿ ಸ್ಥಾನ ಪರ್ಯಾಯವುಂಟಾಯಿತು. ಅರ್ಥ (ಕಲ್ಪನೆ) ಸರ್ವ ಪ್ರಧಾನವಾಯಿತು, ಶಬ್ದವು ಗೌಣವಾಯಿತು.

ಪ್ರಾಚೀನ ಭಾಷೇತಿಹಾಸದ ಇನ್ನೊಂದು ಲಕ್ಷಣ ಹೀಗಿದೆ : ಗಣ್ಯವಾಗಿ ಅದು ಅಲ್ಪಸಂಖ್ಯಾತವೂ ಅತ್ಯಂತ ಸಾಧಾರಣವೂ ಸಾಮಾನ್ಯವಾಗಿ ಅತಿಮೂರ್ತವೂ ಆದ ಬೆಳಕು, ಚಲನ, ಸ್ಪರ್ಶ, ದ್ರವ್ಯ, ವಿಸ್ತಾರ, ಬಲ, ವೇಗ ಎಂಬಂತಹ ಕಲ್ಪನೆಗಳನ್ನು ಹೇಳುವ ಶಬ್ದಗಳಷ್ಟೇ ಅಂದು ಭಾಷೆಯ ಬಂಡವಾಳವಾಗಿತ್ತು. ಆಮೇಲೆ ಕಲ್ಪನೆಯ (ವಿಚಾರದ) ವೈವಿಧ್ಯವೂ ನಿಷ್ಪಷ್ಟತೆಯೂ ನಿಧಾನವಾಗಿ ಹೆಚ್ಚಾದವು. ಈ ಪ್ರಗತಿಯಾದದ್ದು ಸಾಮಾನ್ಯದಿಂದ ವಿಶೇಷಕ್ಕೆ, ಅನಿಷ್ಕೃಷ್ಟತೆಯಿಂದ ನಿಷ್ಕೃಷ್ಟತೆಗೆ, ಭೌತಿಕದಿಂದ ಮಾನಸಿಕಕ್ಕೆ, ಮೂರ್ತದಿಂದ ಅಮೂರ್ತಕ್ಕೆ, ಸದೃಶ ವಸ್ತುಗಳ, ಭಾವನೆಗಳ ಮತ್ತು ಕ್ರಿಯೆಗಳ ಸಂವೇದನೆಗಳನ್ನು ಯಥೇಷ್ಟ ವೈವಿಧ್ಯಪೂರ್ಣ ಉಕ್ತಿಗಳಿಂದ ಹೇಳುವ ಸ್ಥಿತಿಯಿಂದ ಸದೃಶ ವಸ್ತುಗಳ ನಿಷ್ಕೃಷ್ಟ ವ್ಯತ್ಯಾಸವನ್ನು ಹೇಳುವ ಉಕ್ತಿಗಳನ್ನು ರಚಿಸುವ ಸ್ಥಿತಿಗೆ ! ಈ ಪ್ರಗತಿಯು ಉಂಟಾದದ್ದು . ಯಾವಾಗಲೂ ಒಂದೇ ಆಗಿದ್ದ ಹಾಗೂ ಯಾವಾಗಲೂ ಪುನರುಕ್ತವಾಗುತ್ತಿದ್ದ ಆಲೋಚನೆಗಳ (ವಿಚಾರಗಳ) ಸಂಯೋಗದಿಂದ, ಸಹವಾಸದಿಂದ. ಹೀಗಾದದ್ದು ಜನರ ಆವರಣಗಳ ಮತ್ತು ನಿಜಾನುಭವಗಳ ವ್ಯತ್ಯಾಸದಿಂದ ಎಂಬುದೇನೋ ನಿಃಸಂದಿಗ್ಧವಾದರೂ ಈ ಪ್ರಗತಿಯು

---

೧. "ವಾಚಮರ್ಥೋಽನುಧಾವತಿ" ಎಂಬ ಸ್ಥಿತಿ ಹೋಗಿ, "ಅರ್ಥಂವಾಗನುಧಾವತಿ" ಎಂಬ ಸ್ಥಿತ್ಯಂತರ ಉಂಟಾಯಿತು (ಅನುವಾದಕ).

ಅಲುಗಾಡದಂಥ ನೈಸರ್ಗಿಕ ಅಭಿವೃದ್ಧಿ ನಿಯಮಗಳ ಕವಚವನ್ನು ಧರಿಸಿದವು. ನಿಯಮ, ಕಾಯದೆ, ವಿಧಿ ಎಂದು ಹೇಳುವುದರ ಅರ್ಥವಾದರೂ ಏನು? ಜನರ ಆವರಣದ ಅವಶ್ಯಕತೆಗಳಿಗನುಗುಣವಾಗಿ ಪದಾರ್ಥಗಳು ತಮ್ಮ ಸ್ವಭಾವದಿಂದ ಪಕ್ವ ಮಾಡಿಕೊಂಡ ಒಂದು ಪ್ರಕ್ರಿಯೆ ಮತ್ತು ಆ ಪ್ರಕ್ರಿಯೆ ಅನಂತರ ಅವರ ಕರ್ಮದ ನಿಷ್ಕೃಷ್ಟಾಭ್ಯಾಸವಾದದ್ದು -ಇಷ್ಟೇ ಅಲ್ಲವೇ?

ಭಾಷೆಯ ಈ ಪ್ರಾಚೀನೇತಿಹಾಸದಿಂದ ಕೆಲವು ಫಲಿತಾಂಶಗಳು ಉಂಟಾಗುತ್ತವೆ. ಅವು ವೇದಾರ್ಥ ಪ್ರಕಾಶನಕ್ಕೆ ಸಾಕಷ್ಟು ಗಣ್ಯ ಅಗತ್ಯಗಳಾಗಿವೆ. ಮೊದಲನೆಯದಾಗಿ ಸಂಸ್ಕೃತ ಭಾಷೆಯಲ್ಲಿ ಧ್ವನಿ ಮತ್ತು ಅರ್ಥಗಳ (ವಾಗರ್ಥಗಳ) ಸಂಬಂಧಗಳು ಯಾವ ನಿಯಮಗಳಿಗೆ ಅನುಗುಣವಾಗಿ ಹುಟ್ಟಿದವು ಎಂಬ ಜ್ಞಾನದಿಂದ ಮತ್ತು ಆ ಭಾಷೆಯ ಶಬ್ದ ಕುಟುಂಬಗಳ ಸೂಕ್ಷ್ಮವೂ ಜಾಗರಿತವೂ ಆದ ಅಭ್ಯಾಸದಿಂದ ವೈಯಕ್ತಿಕ ಶಬ್ದಗಳ ನಷ್ಟವಾದ ಗತೇತಿಹಾಸವನ್ನು ಪುನಃ ಪಡೆಯಬಹುದು. ಶಬ್ದಾರ್ಥಗಳು ವಿವಿಧ ಭಾಷಾ ವಿಕಾಸಾವಸ್ಥೆಗಳ ಮೂಲಕ ತಮ್ಮ ಅರ್ಥಗಳನ್ನು ರೂಪಿಸಿಕೊಂಡವು ಎಂಬುದಕ್ಕೆ ಕಾರಣ ಕೊಡಲು, ಭಿನ್ನಾರ್ಥಗಳ ಪರಸ್ಪರ ಸಂಬಂಧಗಳನ್ನು ಸುಸ್ಥಿರಗೊಳಿಸಲು ಮತ್ತು ಎಷ್ಟೇ ಅಗಲದ ವ್ಯತ್ಯಾಸವಿದ್ದಾಗಲೂ ಸಂವೇದನ ಮೌಲ್ಯಗಳಲ್ಲಿ ಕೆಲವೊಮ್ಮೆ ತೀರಾ ವಿರುದ್ಧವಾಗಿದ್ದರೂ ಅವೆಲ್ಲವೂ ಒಂದೇ ಶಬ್ದಕ್ಕೆ ಹೇಗೆ ಅಂಟಿಕೊಂಡವು ಎಂಬುದನ್ನು ವಿವರಿಸಲಿಕ್ಕೂ ಪೂರ್ವೋಕ್ತ ಶಬ್ದ ಕುಟುಂಬಾಭ್ಯಾಸವು ನಮಗೆ ಬಲವನ್ನು ಕೊಡುತ್ತದೆ. ಕಳೆದ ಅರ್ಥಗಳನ್ನು ಮತ್ತೆ ಪಡೆಯಬಹುದು. ಹಾಗೆ ಪಡೆಯಲು ಖಚಿತ ವೈಜ್ಞಾನಿಕ ತಳಹದಿಯನ್ನು ರಚಿಸಬಹುದು. ದೃಷ್ಟ ಸಂಯೋಗ ಸೂತ್ರಗಳ ಪ್ರಕಾರ ಅವುಗಳನ್ನು ಸಮರ್ಥಿಸಬಹುದು. ಹಳೆಯ ಆರ್ಯ ಭಾಷೆಯು ಅನುಸರಿಸುತ್ತಿದ್ದ ಅಂಥ ಶಬ್ದ ಸಂಯೋಗ ಸೂತ್ರಗಳನ್ನು ಕಂಡುಹಿಡಿಯಬಹುದು. ಅದಕ್ಕೆ ಪದದ ಗುಪ್ತ ಸಾಕ್ಷಿಯೇ ಸಾಕು. ಜೊತೆಗೆ ತತ್ಪೋಷಕವಾದ ಬಂಧು ಪದಗಳ ಸಾಕ್ಷಿ ಸಿಕ್ಕುತ್ತದೆ. ಹೀಗೆ ನಾವು ಪೂರ್ಣ ಅವಲಂಬನೀಯ ತಳಹದಿಯ ಮೇಲೆ ವೇದಾರ್ಥಶೋಧ ಮಾಡಬಹುದು- ವೇದ ಶಬ್ದಗಳೊಡನೆ ತೇಲುವ ಊಹಾಧಾರ ಹಿಡಿದು ವ್ಯವಹರಿಸಬೇಕಾಗಿಲ್ಲ.

ಒಂದಾನೊಂದು ಕಾಲದಲ್ಲಿ ವೈದಿಕ ಶಬ್ದವೊಂದಕ್ಕೆ ಯಾವುದಾದರೊಂದು ಅರ್ಥವಿದ್ದಿತೆಂಬ ಕಾರಣದಿಂದ ನಿಜವಾದ ವೇದ ಪದ್ಯವೊಂದಕ್ಕೆ ಸುರಕ್ಷಿತವಾಗಿ ಆ ಅರ್ಥವನ್ನು ಅನ್ವಯಿಸಬಹುದೆಂಬ ನಿಗಮನವು ಸಹಜವಾಗದು. ಆದರೆ ನಾವು ಸಮಂಜಸಾರ್ಥವನ್ನು ಸ್ಥಿರಪಡಿಸುತ್ತೇವೆ, ಅದೇ ವೇದದ ಸರಿಯಾದ ಅರ್ಥವಾಗಿರಬೇಕೆಂದು ಸ್ಪಷ್ಟವಾದ ಸಂಭಾವ್ಯತೆಯನ್ನು ದೃಢಪಡಿಸುತ್ತೇವೆ. ಒಂದು ಪದವು ಬಳಸಲ್ಪಟ್ಟ ಪದ್ಯಗಳ ಮತ್ತು ಅದರ ಸಾಂದರ್ಭಿಕವಾದದ ಸತತ ಅರ್ಹತೆಯನ್ನು ನಿರ್ಧರಿಸುವ ತುಲನಾತ್ಮಕ ಅಭ್ಯಾಸವು ನಾವು ಮಾಡತಕ್ಕ ಉಳಿದ ಕೆಲಸ. ನಾನು ಸತತವಾಗಿ ಕಂಡದ್ದೇನೆಂದರೆ - ಹೀಗೆ ನಷ್ಟವಾದ ಅರ್ಥವನ್ನು ಪುನಃ ಪಡೆದುಕೊಂಡಾಗ ಆ ಅರ್ಥ ಕೊಡುವ ಪದವು ಅದನ್ನು ಬಳಸಿದ ಎಲ್ಲಾ ಸಂದರ್ಭಗಳನ್ನೂ ಬೆಳಗಿಸುತ್ತದೆ ಮತ್ತು ಆ ಶಬ್ದದ ಚರಿತ್ರೆ ನಮ್ಮನ್ನು ಕೊಂಡೊಯ್ಯುವ ಸಂದರ್ಭವು ಅಗತ್ಯವೆಂದು ಒತ್ತಾಯಿಸುವ ಅರ್ಥವು ಅದೇ ಆಗಿರುತ್ತದೆ-ಎಂಬುದನ್ನು. ಪರಿಪೂರ್ಣ ನಿಶ್ಚಿತತೆಗಲ್ಲವಾದರೂ ಸಹಜವಾದ ನೈತಿಕ ನಿಶ್ಚಿತತೆಗೆ ಬಂದುಮುಟ್ಟಲು ಇಷ್ಟು ಸಾಕು.

ಎರಡನೆಯದಾಗಿ, ಒಂದೇ ಒಂದು ಪದಕ್ಕೆ ಅನೇಕಾನೇಕ ಅರ್ಥಗಳನ್ನು ಕೊಡುವ ಶಕ್ತಿಯು ಆರ್ಯ ಭಾಷೆಯ ಆರಂಭದೆಶೆಯಲ್ಲೇ ಕಂಡುಬರುವುದು ಮತ್ತು ಒಂದೇ ಒಂದು ಭಾವವನ್ನು ಹೇಳಲು ಅನೇಕಾನೇಕ ಶಬ್ದಗಳನ್ನು ಬಳಸುವುದು ಆ ಭಾಷೆಯ ಮಹತ್ವದ ಲಕ್ಷಣ. ಅನಂತರ ಈ ಉಷ್ಣಕಟಿಬಂಧದ ಸಂಪತ್ತನ್ನು ಕಡಿಮೆ ಮಾಡುತ್ತ ಬರಲಾಯಿತು. ಅಲ್ಲಿ ಬುದ್ಧಿಯು ತಲೆ

ಹಾಕಿ ತನ್ನ ನಿಷ್ಕೃಷ್ಟತೆಯ ಅವಶ್ಯಕತೆಗನುಗುಣವಾಗಿ ಮಿತವ್ಯಯದ ಗುರಿಯನ್ನು ಸಾಧಿಸಲು ಶುರು ಮಾಡಿತು. ಪದಗಳ ಮತ್ತು ಒಂದೇ ಅರ್ಥವನ್ನು ಹೇಳಲು ಅನವಶ್ಯಕವಾದ ಬಹಳ ಪದಗಳನ್ನು ಬಳಸುವುದನ್ನು ಸಹಿಸದಾಯಿತು. ಹಾಗೇ ಒಂದೇ ಒಂದು ಪದವು ಅನವಶ್ಯಕವಾದ ವಿವಿಧ ಅರ್ಥರಾಶಿಯನ್ನು ಹೇಳಲು ಬಳಸಲ್ಪಡುವುದನ್ನೂ ಬುದ್ಧಿಯು ಸಹಿಸದಾಯಿತು. ಈ ವಿಷಯಗಳಲ್ಲಿ ಅತಿ ಅವಿಚಲವಲ್ಲವಾದರೂ ಸಾಧಾರಣವಾಗಿ ಹಾಗೆನ್ನಿಸುವ ಮಿತವ್ಯಯ ಪ್ರವೃತ್ತಿಯು ಸಮದೃಷ್ಟಿಯ ಬದಲಾವಣೆಯ ಶ್ರೀಮಂತಿಕೆಯೊಡನೆ, ಭಾಷೆಯ ಕಟ್ಟ ಕಡೆಯ ವಿಧಿ (ನಿಯಮ) ಎನ್ನಿಸಿತು. ಆದರೆ ಸಂಸ್ಕೃತ ಭಾಷೆಯು ಈ ಅಭಿವೃದ್ಧಿಯ ಕೊನೆಯ ಹಂತವನ್ನು ಮುಟ್ಟಲಿಲ್ಲ. ಅದು ಬಹಳ ಮೊದಲೇ ಪ್ರಾಕೃತ ಉಪಭಾಷೆಗಳಾಗಿ ಕರಗಿಹೋಯಿತು. ತನ್ನ ಅತ್ಯಾಧುನಿಕ ಹಾಗೂ ಅತಿ ಸಾಹಿತ್ಯಿಕ ರೂಪದಲ್ಲಿಯೂ ಸಂಸ್ಕೃತವು ಒಂದೇ ಒಂದು ಪದಕ್ಕೆ ವಿವಿಧಾರ್ಥಗಳನ್ನು ಹಚ್ಚುವ ದುಂದನ್ನು ಮಾಡುತ್ತಲಿದೆ ; ಅದು ಅನವಶ್ಯಕ ಪುನರುಕ್ತಿಯ ಪರ್ಯಾಯ ಪದಗಳ ಸಂಪತ್ತಿನಿಂದ ಕಟ್ಟೆಯೊಡೆದು ಹರಿಯುತ್ತಿದೆ. ಆದುದರಿಂದ ಬೇರೆ ಯಾವ ಭಾಷೆಗೂ ಕಷ್ಟಕರವೆನ್ನಿಸುವಂತಹ ವಿಶೇಷತಃ ಶ್ಲೇಷದಂತಹ ಯದ್ವಾತದ್ವಾ ಕೃತಕವಾದ ವಾಗ್ಮಿತ್ವದ ತಂತ್ರಗಳನ್ನು ಸಂಸ್ಕೃತವು ತನ್ನ ಶಬ್ದಗಳ ಮೇಲೆ ಹೇರಿತು.

ವೇದದ ಸಂಸ್ಕೃತವು ಭಾಷೆಯ ಬೆಳವಣಿಗೆಯ ಇನ್ನೂ ಹಳೆಯ ಸ್ತರವನ್ನು ಪ್ರತಿನಿಧಿಸುತ್ತದೆ. ತನ್ನ ಬಾಹ್ಯ ಲಕ್ಷಣಗಳಲ್ಲಿಯೂ ಅದು ಯಾವದೇ ಅಭಿಜಾತ ಭಾಷೆಗಿಂತಲೂ ಅಧಿಕತರ ಅಸ್ಥಿರವಾಗಿದೆ ; ಅದರಲ್ಲಿ ಶಬ್ದರೂಪಗಳ ವೈವಿಧ್ಯವೂ ವಿಭಕ್ತಿಗಳ ನಾನಾತ್ವವೂ ತುಂಬಿ ಹೋಗಿವೆ. ಅದು ದ್ರವಣಶೀಲವೂ ಅಸ್ಪಷ್ಟವೂ ಆಗಿದೆ-ಆದರೆ ತನ್ನ ವಿಭಕ್ತಿ ಪ್ರತ್ಯಯಗಳ ಹಾಗೂ ಭೂತಾದಿ ಕಾಲಗಳ ಬಳಕೆಯಲ್ಲಿ ಅದು ಸಂಪನ್ನ ಸೂಕ್ಷ್ಮತೆಯನ್ನು ಹೊಂದಿದೆ. ಮತ್ತು ತನ್ನ ಮಾನಸಶಾಸ್ತ್ರೀಯ ದಿಕ್ಕಿನಲ್ಲಿ ಅದಿನ್ನೂ ಹರಳುಗಟ್ಟಿಲ್ಲ (ಸುದೃಢಾರ್ಥದ್ಯೋತಕತೆಯನ್ನು ಪಡೆದಿಲ್ಲ) ; ಬೌದ್ಧಿಕ ನಿಷ್ಕೃಷ್ಟತೆಯ ಸಂಪೂರ್ಣವಾಗಿ ಅನಮ್ಯ (ಅಚಲ) ರೂಪಗಳನ್ನು ತಾಳಿಲ್ಲ. ವೇದದ ಋಷಿಗೆ ಶಬ್ದವು ಇನ್ನೂ ಒಂದು ಜೀವತ್‌ಪದಾರ್ಥ, ಸಶಕ್ತ ವಸ್ತು ; ಅದು ಸರ್ಜನಾತ್ಮಕ ಮತ್ತು ಆಕೃತಿ ನಿರ್ಮಾಪಕ. ಅದಿನ್ನೂ ಆತನಿಗೆ ಒಂದು ಕಲ್ಪನೆಗೆ ಸಾಂಪ್ರದಾಯಿಕವಾದ ಸಂಕೇತವೆನ್ನಿಸಿಲ್ಲ ; ಅದೇ ಕಲ್ಪನೆಗಳ ಜನಕ ಮತ್ತು ರೂಪಕ ಎನ್ನಿಸಿದೆ : ತನ್ನ ಧಾತುಗಳ ಸ್ಮೃತಿಯನ್ನು ಅದು ಹೊತ್ತುಕೊಂಡೇ ಇದೆ - ಅದಿನ್ನೂ ತನ್ನ ಚರಿತ್ರೆಯ ಪ್ರಜ್ಞೆಯನ್ನು ನೆನಪಿನಲ್ಲಿಟ್ಟುಕೊಂಡೇ ಇದೆ.

ಋಷಿಯ ಭಾಷಾ ಪ್ರಯೋಗವು ಶ್ರುತ್ಯಾತ್ಮಕ ಶಬ್ದದ ಈ ಪ್ರಾಚೀನ ಮನಃಶಾಸ್ತ್ರದಿಂದ ನಿಯಂತ್ರಿತವಾಗಿತ್ತು. ಇಂಗ್ಲೀಷಿನಲ್ಲಿ ನಾವು "ತೋಳ" ಅಥವಾ "ದನ" ಎಂಬ ಪದವನ್ನು ಬಳಸಿದರೆ ಆ ಪದವು ಹೇಳುವ ಪ್ರಾಣಿ ಎಂದಷ್ಟೇ ಅದರ ಅರ್ಥವೆಂದು ತಿಳಿಯುತ್ತೇವೆ ; ಅದರ ಉದ್ದಿಷ್ಟಾರ್ಥವು ಅದು. ಭಾಷೆಯ ಆ ಅನುಚಾನ ರೂಢಿಯೊಂದನ್ನು ಬಿಟ್ಟು, ಆ ಕಲ್ಪನೆಗೆ ಆ ಪದವನ್ನೇ ಏಕೆ ಬಳಸಬೇಕೆಂಬುದರ ಬಗೆಗೆ ಇನ್ನಾವ ವಿಚಾರವನ್ನೂ ಮಾಡುವ ಪ್ರಜ್ಞೆಯುಳ್ಳವ-ರಾಗಿರುವುದಿಲ್ಲ ; ಕೃತಕ ಶೈಲೀತಂತ್ರದಿಂದಲ್ಲದೆ ಆ ಪದವನ್ನು ಇನ್ನಾವ ಉದ್ದೇಶದಿಂದಾಗಲಿ, ಅರ್ಥದಲ್ಲಾಗಲಿ, ನಾವು ಬಳಸಲಾರೆವು. ಆದರೆ ವೇದ ಋಷಿಗೆ "ವೃಕ" ಎಂದರೆ ಹರಿದು ಹಾಕುವವನು ; "ಧೇನು" ಎಂದರೆ ಪೋಷಕ. ಆದ್ದರಿಂದ ದನ ಆದರೆ ಮೂಲದ ಸಾಮಾನ್ಯಾರ್ಥ ಗಣ್ಯವಾಗಿ ಇದ್ದೇ ಇರುತ್ತದೆ ; ಅದರಿಂದ ಹುಟ್ಟಿದ ವಿಶೇಷಾರ್ಥವು ಗೌಣ. ಆದ್ದರಿಂದ ಸೂಕ್ತಕಾರನಿಗೆ ಇಂಥ ಸಾಮಾನ್ಯ ಪದಗಳನ್ನು ಬಹಳ ನಮ್ಯತೆಯಿಂದ - ಅಂದರೆ, ಕೆಲವು ಸಲ ತೋಳದ ಅಥವಾ ದನದ ಪ್ರತಿಮೆಯನ್ನು

ಮುಂದಿಟ್ಟು ಕೆಲವೊಮ್ಮೆ ಅದರ ಸಾಮಾನ್ಯಾರ್ಥಕ್ಕೆ ಹೊಸಬಣ್ಣ ಬರುವಂತೆ, ಮತ್ತೆ ಕೆಲವು ಸಲ ತನ್ನ ಮನಸ್ಸು ಗುಣುಗುಣಿಸುತ್ತಲಿದ್ದ ಮಾನಸ ಶಾಸ್ತ್ರೀಯ ಭಾವನೆಗೆ ಪ್ರತೀಕವಾಗಿ ಹಾಗೂ ಕೆಲವು ಸಲ ಆ ಪ್ರತಿಮೆಯ ನೆನಪನ್ನೇ ಮರೆತು - ಬಳಸಲು ಸಾಧ್ಯವಾಯಿತು. ಹಳೆಯ ಭಾಷೆಯ ಈ ಮನಃಶಾಸ್ತ್ರದ (ಮನೋಧರ್ಮದ) ದೃಷ್ಟಿಯಿಂದಲೇ ನಾವು, ಋಷಿಗಳು ಬಳಸಿದಂತೆ, ಅತಿ ಸ್ಪಷ್ಟವೂ ಸ್ಥೂಲವೂ ಆಗಿದ್ದಾಗಲೂ ವೈದಿಕ ಸಾಂಕೇತಿಕತೆಯ ರೂಪಕೋಕ್ತಿಗಳನ್ನು (ಅಲಂಕಾರಗಳನ್ನು) ತಿಳಿದುಕೊಳ್ಳಬೇಕು. ಹೀಗೇ ಘೃತ=ಶುದ್ಧೀಕೃತ ಬೆಣ್ಣೆ, ಸೋಮ=ಪವಿತ್ರ ಮದ್ಯ, ಮುಂತಾದ ಹಲವಾರು ಪದಗಳನ್ನು ಬಳಸಲಾಗಿದೆ.

ಇಷ್ಟಲ್ಲದೆ, ವಿಚಾರಶಕ್ತಿಯು ಒಂದೇ ಪದಕ್ಕೆ ಕೊಟ್ಟ ಅರ್ಥ ಭೇದಗಳು ಆಧುನಿಕ ಭಾಷೆಯಲ್ಲಿರುವುದಕ್ಕಿಂತ ಕಡಿಮೆ ಪ್ರತ್ಯೇಕಾರ್ಥಕಗಳಾಗಿವೆ. ಇಂಗ್ಲೀಷಿನಲ್ಲಿ "ಫ್ಲೀಟ್" ಎಂದರೆ ಹಡಗುಗಳ ಗುಂಪು-ಹಾಗೇ "ಫ್ಲೀಟ್" ಎಂದರೆ ವೇಗಯುಕ್ತ-ಆದರೆ ಈ ಎರಡು ಪದಗಳೂ ಭಿನ್ನ. ಮೊದಲ ಅರ್ಥದಲ್ಲಿ ನಾವು ಉಕ್ತ ಪದವನ್ನು ಬಳಸಿದಾಗ ಹಡಗಿನ ಚಲನದ ವೇಗವನ್ನು ನಾವು ಎಣಿಸುವುದಿಲ್ಲ ; ಎರಡನೆಯ ಅರ್ಥದಲ್ಲಿ ಅದನ್ನು ಬಳಸಿದಾಗ ಹಡಗುಗಳು ವೇಗವಾಗಿ ಸಮುದ್ರದಲ್ಲಿ ಧಾವಿಸುವುದನ್ನೂ ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ. ಆದರೆ ವೈದಿಕ ಪ್ರಯೋಗದಲ್ಲಿ ಸಂಭವಿಸುತ್ತಿದ್ದದ್ದು ಈ ಯುಗಲಾರ್ಥ ಪ್ರಾಧಾನ್ಯವೇ. ಭಗ=ಸುಖಾನುಭವ ಮತ್ತು ಭಾಗ=ಪಾಲು ಎಂಬಿವು ವೈದಿಕ ಮನಕ್ಕೆ ಭಿನ್ನ ಪದಗಳಾಗಿರಲಿಲ್ಲ. ಒಂದೇ ಪದ ಆದರೆ ಎರಡು ಭಿನ್ನ ಬಳಕೆಗಳನ್ನು ಬೆಳೆಯಿಸಿಕೊಂಡದ್ದು. ಆದುದರಿಂದ ವೇದದ ಋಷಿಯು ಆ ಪದದ ಎರಡರಲ್ಲಿಯ ಒಂದರ್ಥದಲ್ಲೋ (ಒಂದರ್ಥ ಹಿಂದೆ, ಇನ್ನೊಂದು ಅದಕ್ಕೆ ಮುಂದೆ ನಿಂತು ರಂಗುಕೊಡಲು) ಅಥವಾ ಎರಡೂ ಅರ್ಥಗಳಲ್ಲೋ ಬಳಸಲು ಸುಲಭವಾಯಿತು; ಎರಡನೆಯ ಕ್ರಮದಲ್ಲಿ ಒಂದೇ ಸಲ ಕ್ರಮಪೂರಕವಾದ ಅರ್ಥಬರುವ ಹಾಗೆ ಆತನು ಬಳಸಬಲ್ಲವನಾಗಿದ್ದನು. ಅದೊಂದು ತರಹದ ಅಲಂಕಾರ ಎನ್ನುವಂತಿತ್ತು. ಚನಸ್ = ಆಹಾರ. ಹಾಗೇ ಅದಕ್ಕೆ "ಭೋಗ, ಸುಖಾನುಭವ" ಎಂಬ ಅರ್ಥವೂ ಇದೆ. ಆದ್ದರಿಂದ ಅಪವಿತ್ರ ಮನಸ್ಸಿನವರಿಗೆ ಯಜ್ಞದಲ್ಲಿ ದೇವತೆಗಳಿಗೆ ಕೊಟ್ಟ ಆಹಾರ ಎಂದು ಅರ್ಥವಾಗುವಂತೆಯೂ ವೇದದೀಕ್ಷಿತರಾದವರಿಗೆ (ಉಪನೀತರಿಗೆ) ಅನ್ನಮಯಕೋಶವನ್ನು ಪ್ರವೇಶಿಸುವ ದಿವ್ಯಾನಂದ ಎಂದು ಅರ್ಥವಾಗುವಂತೆಯೂ ಸೂಚಿಸುವಂತಲ್ಲದೆ, ದೇವತಾಹಾರ ಮತ್ತು ಆನಂದ ಸಂಕೇತ ಎಂಬೆರಡರ್ಥಗಳಲ್ಲೂ ಋಷಿಯು ಚನಸ್ಸನ್ನು ಬಳಸುತ್ತಿದ್ದನು.

ವೈದಿಕ ಸೂಕ್ತಗಳ ಭಾಷೆಯಲ್ಲಿ ಎಲ್ಲೆಲ್ಲೂ ಈ ವಿಧದ ಶಬ್ದ ಪ್ರಾಧಾನ್ಯವನ್ನು ನಾವು ನೋಡಬಹುದು. ಅದು ಪ್ರಾಚೀನ ಯೋಗಿಗಳು ತಮ್ಮ ಕಾರ್ಯದ ಕಷ್ಟವನ್ನು ಬಗೆಹರಿಸಿಕೊಳ್ಳಲು ಬಳಸಿದ ಒಂದು ಮಹೋಪಾಯ. ಸಾಮಾನ್ಯ ಅರ್ಚಕನಿಗೆ ಅಗ್ನಿಯು ಬರಿ ವೇದೋಕ್ತ ಬೆಂಕಿದೇವರಾಗಿರಬಹುದು ; ಅಥವಾ ಭೌತಿಕ ನಿಸರ್ಗದ ಉಷ್ಣತೆ ಮತ್ತು ಪ್ರಕಾಶಗಳ ತತ್ವವಾಗಿರಬಹುದು ; ಅಥವಾ ತೀರಾ ದಡ್ಡನಿಗೆ ಮಾನವನ ಆಶೆಗಳನ್ನು ಪೂರೈಸುವ ಅತಿಮಾನವ ವ್ಯಕ್ತಿಗಳಲ್ಲಿ ಅಗ್ನಿಯೂ ಒಬ್ಬ ಐಶ್ವರ್ಯದಾತೃವಾಗಿ ತೋರಿರಬಹುದು. ಅಗ್ನಿ ದೇವತೆಯ ಗಭೀರತರವಾದ ಮಾನಸ ಶಾಸ್ತ್ರೀಯ ಕರ್ತವ್ಯದ ಅರ್ಥವನ್ನು ಗ್ರಹಿಸಿಕೊಳ್ಳಬಲ್ಲವರಿಗೆ ಅಗ್ನಿಪದದ ಬಳಕೆಯಿಂದ ಹೇಗೆ ಅಂತರರ್ಥವನ್ನು ಸೂಚಿಸಬೇಕು? ಅಗ್ನಿ ಪದವೇ ಆ ಕೆಲಸವನ್ನು ಮಾಡಿತು. ಅಗ್ನಿ ಎಂದರೆ ಬಲಿಷ್ಠ, ಉಜ್ವಲ, ಪ್ರಣೋದಕ (ಬಲಾತ್ಕಾರಕಾರಕ) ಝಗಝಗಿಸುವ ಬೆಳಕು. ಉಪನೀತನಿಗೆ (ದೀಕ್ಷಿತನಿಗೆ) ಅದು ಬಂದಲ್ಲೆಲ್ಲಾ ಜಗನ್ನಿರ್ಮಾಪಕ ಮನುಷ್ಯನನ್ನು ಅತ್ಯುನ್ನತ ಧಾಮಕ್ಕೇರಿಸುವ ಮಹಾಕಾರ್ಯಸಾಧಕ, ಯಜ್ಞದ ಪುರೋಹಿತ ಎಂಬ ಅರ್ಥವನ್ನು ಕೊಡುತ್ತದೆ.

ಅಥವಾ ಶ್ರಾವಕನ ಮನಸ್ಸಿನಲ್ಲಿ ಈಯೆಲ್ಲ ದೇವತೆಗಳೂ ಒಬ್ಬನೇ ಆದ ವಿಶ್ವದೇವನ ಅವತಾರಗಳು (ವ್ಯಕ್ತಿತ್ವಗಳು) ಎಂದು ಹೊಳೆಯಿಸಲು ಸಾಧ್ಯ? ದೇವತಾನಾಮಗಳೆಲ್ಲವೂ ಮೂಲತಃ ವಿಶೇಷಣಗಳು, ಗುಣವಾಚಕಗಳು, ವರ್ಣನಾರ್ಥಕಗಳು-ಅವಾವುವೂ ಅಂಕಿತನಾಮಗಳಲ್ಲ. ಮಿತ್ರನು ಪ್ರೇಮದೇವ, ಸಾಮಶ್ರುತ್ಯನಾಯಕ ; ಭಗನು ಭೋಗರಾಜ; ಸೂರ್ಯನು ಪ್ರಕಾಶಕ ; ವರುಣನು ಸರ್ವವ್ಯಾಪಕ ವಿಸ್ತಾರ (ಬಯಲು) ಮತ್ತು ಜಗತ್ತನ್ನು ಎತ್ತಿ ಹಿಡಿದ ಹಾಗೂ ಪರಿಪೂರ್ಣಗೊಳಿಸುವ ದಿವ್ಯ ಪಾವಿತ್ರ್ಯದ ತೇಜಸ್ಸು. ದೀರ್ಘತಮಸ್ಸೆಂಬ ಋಷಿ ಹೇಳುತ್ತಾನೆ : "ಸತ್ತೆಂಬುದೊಂದೇ ಒಂದು. ಆದರೆ ಋಷಿಗಳದನ್ನು ವಿವಿಧವಾಗಿ ಹೇಳುತ್ತಾರೆ ; ಇಂದ್ರ, ವರುಣ, ಮಿತ್ರ, ಅಗ್ನಿ, ಯಮ, ಮಾತರಿಶ್ವ ಎಂದು ನಾನಾ ರೀತಿಯಲ್ಲಿ ವರ್ಣಿಸುತ್ತಾರೆ."[೧] ದೀಕ್ಷಿತರಿಗೆ, (ಉಪನೀತರಿಗೆ) ವೇದಜ್ಞಾನದ ಆದಿ ಕಾಲದಲ್ಲಿ ಇಂಥ ವ್ಯಕ್ತ ಉಪದೇಶ ಬೇಕಾಗಿರಲಿಲ್ಲ. ದೇವತಾನಾಮಗಳೇ ಅವುಗಳ ಅರ್ಥಗಳನ್ನು ಅವರಿಗೆ ಸೂಚಿಸುತ್ತಿದ್ದವು ಮತ್ತು ಅವುಗಳಲ್ಲಡಗಿರುವ ಮೂಲಭೂತ ಮಹಾಸತ್ಯವು ಯಾವಾಗಲೂ ಅವರ ಸ್ಮೃತಿ ಪಟಲದಲ್ಲಿ ಜಾಗರಿತವಾಗಿರುತ್ತಿತ್ತು.

ಆದರೆ ಅನಂತರದ ಯುಗಗಳಲ್ಲಿ ಋಷಿಗಳು ಬಳಸಿದ ಉಪಾಯಗಳೇ (ತಂತ್ರಗಳೇ) ಅವರು ಉಳಿಸಲು ಯತ್ನಿಸಿದ ಜ್ಞಾನದ ವಿರುದ್ಧವಾಗಿ ಎದ್ದು ನಿಂತವು. ಭಾಷೆ ತನ್ನ ಚಾರಿತ್ರ್ಯವನ್ನು ಬದಲಾಯಿಸಿತು. ತನ್ನ ಹಿಂದಿನ ನಮ್ಯತೆಯನ್ನದು ತ್ಯಜಿಸಿತು ; ಹಳೆಯ ಸುಪರಿಚಿತ ಅರ್ಥಗಳನ್ನು ಕಳಚಿ ಹಾಕಿತು ; ಶಬ್ದವು ಸಂಕುಚಿತವಾಯಿತು, ಮುರುಟಿತು-ತನ್ನ ಹೊಸ ಸ್ಥೂಲಾರ್ಥವನ್ನಷ್ಟೇ ಉಳಿಸಿಕೊಂಡಿತು. ಭೌತಿಕ ಆಹುತಿ ದಾನದಲ್ಲಿಯ ಆನಂದದ ಅಮೃತ (ಮಧು) ಮದ್ಯವು ವಿಸ್ಮೃತವಾಯಿತು. ತಿಳಿಗೊಳಿಸಿದ ಬೆಣ್ಣೆಯ ಪ್ರತಿಮೆಯು (ರೂಪಕವು) ಭೌತಿಕ ಶಕ್ತಿ ಮತ್ತು ತೇಜಸ್ಸಷ್ಟನ್ನು ಮಾತ್ರ ಉಳಿಸಿಕೊಂಡ ಬೆಂಕಿ ದೊರೆಗಳು, ಮೋಡದೊಡೆಯರು, ಬಿರುಗಾಳಿ ಹೊಡೆತದ ವೀರರು ಎಂಬಂತಹ ಪೌರಾಣಿಕ ದೇವರುಗಳಿಗೆ ಸಮರ್ಪಿಸುವ ಪವಿತ್ರಾಹುತಿಯಷ್ಟೇ ಆಗಿ ಉಳಿಯಿತು. ಅಕ್ಷರ ಉಳಿಯಿತು, ಅರ್ಥ ಅಳಿಯಿತು ; ಜೀವ ಮರೆತು ಹೋಯ್ತು, ಶವ ಉಳಿಯಿತು. ದೇವತಾವಾದದ (ದೇವಶಾಸ್ತ್ರದ) ದೇಹ ಉಳಿಯಿತು, ಸಂಕೇತ ಉಳಿಯಿತು - ಆದರೆ ಅದರ ಕವಚವನ್ನು ಹರಿದು ಹಾಕಿ ಜ್ಞಾನದ ಆತ್ಮವು ಹಾರಿ ಹೋಯಿತು.



೧ , ಋಗ್ವೇದ-I, 164, 46

## ಅಧ್ಯಾಯ-೬

# ಅಗ್ನಿ ಮತ್ತು ಸತ್ಯ

ತನ್ನ ಎಲ್ಲ ಭಾಗಗಳಲ್ಲಿಯೂ ಋಗ್ವೇದವು ಒಂದೇ ಆಗಿದೆ. ಅದರ ೧೦ ಮಂಡಲಗಳಲ್ಲಿ ನಾವು ಯಾವುದನ್ನು ಆರಿಸಿಕೊಂಡರೂ ನಮಗೆ ಸಿಕ್ಕುವುದು ಒಂದೇ ಸಾರ, ಒಂದೇ ಸತ್ವ ; ಒಂದೇ ತರಹದ ವಿಚಾರಗಳು, ಒಂದೇ ತರಹದ ಅಲಂಕಾರೋಕ್ತಿಗಳು ಒಂದೇ ಬಗೆಯ ಪದಸಂಹತಿಗಳು. ಋಷಿಗಳು ಒಂದೇ ಸತ್ಯದ ದ್ರಷ್ಟಾರರು; ಅದನ್ನು ವ್ಯಕ್ತ ಪಡಿಸಲು ಒಂದೇ ಬಗೆಯ ಭಾಷೆಯನ್ನು ಬಳಸುತ್ತಾರೆ. ಅವರು ತಮ್ಮ ಮನೋಧರ್ಮದಲ್ಲೂ ವ್ಯಕ್ತಿತ್ವದಲ್ಲೂ ಭಿನ್ನರು. ಅವರಲ್ಲಿಯ ಕೆಲವರು ವೈದಿಕ ಸಾಂಕೇತಿಕತೆಯ ಶ್ರೀಮಂತವೂ ಸೂಕ್ಷ್ಮವೂ ಗಭೀರವೂ ಆದ ಪ್ರಯೋಗಗಳನ್ನು ಬಳಸಬಯಸುವವರು ; ಇತರರು ಕಡಿಮೆ ವೈಚಾರಿಕ ಕಡಿಮೆಫಲವತ್ತೆಯುಳ್ಳ, ಕಾವ್ಯಾಲಂಕಾರದಲ್ಲೂ ನ್ಯೂನವಾದ, ಗಾಧವಾದ, ಸೂಚನಾದಾರಿದ್ರ್ಯವುಳ್ಳ, ಹೆಚ್ಚು ನಿರಾವರಣವಾದ ಮತ್ತು ಅಧಿಕ ಸರಳವಾದ ಪದಬಂಧಗಳ ಮೂಲಕ ತಮ್ಮ ಆಧ್ಯಾತ್ಮಿಕ ಅನುಭೂತಿಯನ್ನು ವ್ಯಕ್ತಪಡಿಸಿದರು. ಬಹಳ ಸಾರಿ ಒಬ್ಬ ದ್ರಷ್ಟಾರನ ಗೀತಗಳು (ಸೂಕ್ತಗಳು) ತಮ್ಮ ರೀತಿ-ಅಳತೆಗಳಲ್ಲಿ (ಶೈಲಿ-ಮಟ್ಟಗಳಲ್ಲಿ) ಅತಿ ಸರಳತೆಯಿಂದ ಅತಿ ಕುತೂಹಲಕರ ಶ್ರೀಮದ್ ಗಂಭೀರ ವಚನರಚನೆಯವರೆಗೆ ಹೋಗುತ್ತವೆ. ಅಥವಾ ಒಂದೇ ಸೂಕ್ತದಲ್ಲಿ ಏಳು-ಬೀಳುಗಳಿರುವ ಯಜ್ಞದ ಸಾಮಾನ್ಯ ಸಂಕೇತದ ಅತ್ಯಂತ ಚರ್ವಿತ ಚರ್ವಣ ಸಮಯಗಳಿಂದ ಹಿಡಿದು ಜಡಿದ ಜಟಿಲ ವಿಚಾರಗಳವರೆಗೂ ಅದು ಹೋಗುತ್ತದೆ. ಕೆಲವು ಸೂಕ್ತಗಳು ಸರಳ ಮತ್ತು ಭಾಷೆಯಲ್ಲಿ ಇಂದಿಗೆ ನಿಕಟವರ್ತಿ ; ಮತ್ತೆ ಕೆಲವು ಮೊದಲ ನೋಟಕ್ಕೆ ತಮ್ಮ ಪ್ರಾಚೀನ ಅಸ್ಪಷ್ಟತೆಯಿಂದ ನಮ್ಮನ್ನು ಕಂಗಾಲು ಮಾಡುತ್ತವೆ. ಆದರೆ ಈ ವ್ಯತ್ಯಾಸಗಳು ರೀತಿಗೆ ಸಂಬಂಧಿಸಿವೆ ; ಇವು ಆಧ್ಯಾತ್ಮಿಕ ಅನುಭವದ ಐಕಮತ್ಯವನ್ನೆಂದೂ ಕೆಡಿಸುವುದಿಲ್ಲ. ಆತ್ಮಾನುಭೂತಿಯ ಐಕ್ಯಕ್ಕೆ ಯಾವ ಭಂಗವನ್ನೂ ತರುವುದಿಲ್ಲ. ಸಿದ್ಧಾರ್ಥಕ ಪದಗಳು ಬದಲಾವಣೆಯಿಂದ ಮತ್ತು ಸರ್ವಸಾಮಾನ್ಯ ಸೂತ್ರಗಳಿಂದ ದೂರ ಹೋಗಿ ಅವು ಯಾವ ಜಟಿಲತೆಯನ್ನೂ ಉಂಟುಮಾಡುವುದಿಲ್ಲ. ದೀರ್ಘತಮಸ್ ಔಚಥ್ಯನ ಅಗಾಧ ಯೌಗಿಕ (ಯೋಗಸಹಜ) ಶೈಲಿಯಲ್ಲಿ, ಮೇಧಾತಿಥಿ ಕಣ್ವನ ಸುಶ್ರಾವ್ಯ ಪ್ರಸಾದ ಗುಣದಲ್ಲಿ, ವಿಶ್ವಾಮಿತ್ರನ ಬಲಿಷ್ಠವೂ ರಭಸನಿರ್ಭರವೂ ಆದ ಸೂಕ್ತಗಳಲ್ಲಿ ಮತ್ತು ವಸಿಷ್ಠನ ಸಾಮಶ್ರುತ್ಯಗಳಲ್ಲಿ ಒಂದೇ ತರಹದ ಸುಸ್ಥಿರ ಜ್ಞಾನಾಧಾರತಲವನ್ನೂ, ದೀಕ್ಷಿತನು ಹಿಡಿಯುವ ಪವಿತ್ರ ಸಮಯಗಳ ಜಾಗರೂಕ ಅನುಸರಣೆಯನ್ನೂ ನಾವು ಕಾಣುತ್ತೇವೆ.

ವೈದಿಕ ಪ್ರಬಂಧಗಳ (ಕೃತಿಗಳ) ಈ ವೈಲಕ್ಷಣದ ದೆಸೆಯಿಂದ ನಾನು ವಿವರಿಸಿದ ಅರ್ಥಾವಧಾರಣ ಪದ್ಧತಿಯನ್ನು ಸರಿಸಮಾನ ರೀತಿಯಿಂದ ಹತ್ತು ಮಂಡಲಗಳಿಂದ

ಚೆಲ್ಲಾಪಿಲ್ಲಿಯಾದ ಸೂಕ್ತಗಳಿಂದಾಗಲಿ, ಯಾವನಾದರೊಬ್ಬ ಋಷಿಯ ಚಿಕ್ಕ ಸೂಕ್ತಗಣದಿಂದಾಗಲಿ, ಉದಾಹರಿಸಬಹುದು. ನಾನೀಗ ಕೊಡುವ ಅರ್ಥವಿವರಣೆಯು ಖಂಡನೀಯತೆಯ ಎಲ್ಲ ಸಂಭಾವ್ಯತೆಯಿಂದಲೂ ಹೊರಗಿರುವಂತೆ ಪ್ರತಿಷ್ಠಾಪಿಸುವುದು ನನ್ನ ಉದ್ದೇಶವಾದರೆ ಇದಕ್ಕಿಂತ ಹೆಚ್ಚು ವಿವರ ಪೂರ್ವಕವೂ ತೂಕವುಳ್ಳದ್ದೂ ಆದ ಕೃತಿಯನ್ನು ರಚಿಸುವುದು ಅಗತ್ಯವಾದೀತು. ಹತ್ತೂ ಮಂಡಲಗಳ ವಿಮರ್ಶಾತ್ಮಕ ಸೂಕ್ಷ್ಮಾವಲೋಕನವು ಅನಿವಾರ್ಯವಾದೀತು. ವೈದಿಕ ಪದವಾದ ಋತವನ್ನು[1] ಸತ್ಯವೆಂಬ, ಗೋವು ಬೆಳಕಿನ ಸಂಕೇತವೆಂಬ ನನ್ನ ವಿವರಣೆಯನ್ನು ಸಮರ್ಥಿಸಲು ಸತ್ಯದ ಕಲ್ಪನೆ ಅಥವಾ ಗೋವಿನ ಸಂಕೇತವಿರುವ (ವೇದ) ಮುಖ್ಯ ಅನುಚ್ಛೇದಗಳೆಲ್ಲವನ್ನೂ ಹೇಳಿ ಅವುಗಳ ಅರ್ಥವನ್ನೂ ಸಂದರ್ಭವನ್ನೂ ಪರೀಕ್ಷಿಸಿ ನನ್ನ ಸಿದ್ಧಾಂತವನ್ನು ಸ್ಥಾಪಿಸಬೇಕಾದೀತು. ಅಥವಾ ಇಂದ್ರನು ತನ್ನ ಮಾನಸ ಶಾಸ್ತ್ರೀಯ ಕರ್ತವ್ಯ ನಿರ್ವಹಿಸುವ ಪಾತ್ರದಲ್ಲಿ ಪ್ರಕಾಶಾತ್ಮಕ ಮನಸ್ಸು ಎಂಬುದರ ಒಡೆಯ (ದ್ಯೌಃ=ಸ್ವರ್ಗದಲ್ಲಿ ಅವನ ಮಾದಲಿಯಿದೆ; "ರೋಚನಾದಿ" ಮೂರು ರಾಜ್ಯಗಳಿಂದದು ಕೂಡಿದೆ). ಎಂಬ ಅಂಶವನ್ನು ಸಿದ್ಧಪಡಿಸಲು, ಅದೇ ಪ್ರಕಾರ ನಾನು ಇಂದ್ರಸೂಕ್ತಗಳನ್ನು ಪರೀಕ್ಷಿಸಬೇಕು, ವೈದಿಕ ಪದ್ಧತಿಯ ಜಗತ್ತುಗಳ ಸ್ಪಷ್ಟ ಉಲ್ಲೇಖವಿರುವ ಉದ್ಧೃತ ಭಾಗಗಳನ್ನು (ಅನುಚ್ಛೇದಗಳನ್ನು), ಪರಿಶೀಲಿಸಬೇಕು. ಇದೂ ಸಾಕಾಗಲಾರದು. ಏಕೆಂದರೆ, ವೇದದ ಕಲ್ಪನೆಗಳು ಬಹಳ ಪರಸ್ಪರಾವಲಂಬಿಗಳೂ ಹಾಸು ಹೊಕ್ಕುಗಳೂ ಆಗಿವೆ. ಇತರ ದೇವತೆಗಳನ್ನು ಸೂಕ್ಷ್ಮವಾಗಿ ಅವಲೋಕಿಸದಿರಲು ಸಾಧ್ಯವಿಲ್ಲ ; ಸತ್ಯಕ್ಕೆ ಸಂಬಂಧಿಸಿದ ಇತರ ಮಾನಸ ಶಾಸ್ತ್ರೀಯ ಪದಗಳನ್ನು ಪರಿಶೀಲಿಸದಿರಲಾಗದು; ಅದನ್ನು ಮನುಷ್ಯನು ತಲುಪಲು ಸಾಧನವಾದ ಮಾನಸಿಕ ಸ್ಫುರತ್‌ಪ್ರಭೆಯನ್ನು ಗಣನೆಗೆ ತೆಗೆದುಕೊಳ್ಳದಿರಲು ಬಾರದು. ಅಂಥ ಸಮರ್ಥನ ಕೃತಿಯ ಅವಶ್ಯಕತೆಯನ್ನು ನಾನು ಮನ್ನಿಸುತ್ತೇನೆ (ಗಣ್ಯವೆಂದು ಗುರುತಿಸುತ್ತೇನೆ.) ಮತ್ತು ವೈದಿಕ ಸತ್ಯ, ವೈದಿಕ ದೇವತೆಗಳು ಮತ್ತು ವೈದಿಕ ಸಂಕೇತಗಳ ಬಗೆಗಿನ ಇತರ ಅಭ್ಯಾಸಗಳಲ್ಲಿ ಆ ಪ್ರಕಾರ ಮಾಡುವ ಪ್ರತ್ಯಾಶೆಯನ್ನಿಟ್ಟುಕೊಂಡಿದ್ದೇನೆ. ಆದರೆ ಈ ಬಗೆಯ ಶ್ರಮವು ಈ ಕೃತಿಗೆ ಮೀರಿದ್ದು ; ಇದು ನನ್ನ ಪದ್ಧತಿಯನ್ನು ನಿದರ್ಶಿಸುವ ಮತ್ತು ನನ್ನ ಸಿದ್ಧಾಂತವನ್ನು ಸಂಕ್ಷಿಪ್ತವಾಗಿ ಹೇಳುವುದಕ್ಕೆ ಮಾತ್ರ ಸೀಮಿತವಾಗಿದೆ.

ನಾನು ಸೂಚಿಸುವ ಪದ್ಧತಿಯನ್ನು ನಿದರ್ಶಿಸಲು ಋಗ್ವೇದದ ಮೊದಲ ಮಂಡಲದ ೧೧ ಸೂಕ್ತಗಳನ್ನು ತೆಗೆದುಕೊಳ್ಳುತ್ತೇನೆ ಮತ್ತು ಒಂದು ಮಾನಸ ಶಾಸ್ತ್ರೀಯ ಅರ್ಥವಿವರಣೆಯ ಕೆಲ ಕೇಂದ್ರ ವಿಚಾರಗಳು ಹೇಗೆ ಕೆಲಮುಖ್ಯ ಅನುಚ್ಛೇದಗಳಿಂದ ಏಳುತ್ತವೆ, ಅಥವಾ ಒಂದೇ ಒಂದು ಸೂಕ್ತದಿಂದ ಹೇಗೆ ಉದ್ಭವಿಸುತ್ತವೆ ಎಂಬುದನ್ನೂ ಅನುಚ್ಛೇದಗಳನ್ನು (ಉದ್ಧೃತ ಭಾಗಗಳನ್ನು) ಸುತ್ತುವರಿದ ಸಂದರ್ಭಗಳ ಮೂಲಕ ಹೊರ ಹೊಮ್ಮುವುದೆಂಬುದನ್ನೂ-ಹಾಗೇ ಸೂಕ್ತಗಳ ಸರ್ವಸಾಧಾರಣ ವಿಚಾರಧಾರೆಯು ಈ ಗಭೀರತರ ಚಿಂತನದ ದೆಸೆಯಿಂದ ಹೇಗೆ ಸಂಪೂರ್ಣ ಹೊಸ ರೂಪ ತಾಳುವುದೆಂಬುದನ್ನು ತೋರಿಸಿಕೊಡುತ್ತೇನೆ.

ನಮಗೆ ದೊರಕಿರುವ ಋಗ್ವೇದ ಸಂಹಿತೆಯು ೧೦ ಮಂಡಲಗಳಾಗಿ ವಿಭಕ್ತವಾಗಿದೆ. ಅದು ತನ್ನ ಕ್ರಮವಿನ್ಯಾಸದಲ್ಲಿ ದ್ವಿಮುಖ ತತ್ತ್ವವನ್ನು ಅವಲಂಬಿಸಿದೆ. ಉಕ್ತ ಮಂಡಲಗಳಲ್ಲಿ ಆರರ ಸೂಕ್ತಗಳು ಏಕ ಋಷಿಕೃತ ಅಥವಾ ಏಕಋಷಿಕುಟುಂಬ ಕೃತ. ಈ ಪ್ರಕಾರ ಎರಡನೆಯ

---

೧. "ಸತ್ಯಂತ್ವರ್ತೇನ ಪರಿಷಿಂಚಾಮಿ" ಎಂಬುದನ್ನು ಹೋಲಿಸಿರಿ (ಅನುವಾದಕ)

ಮಂಡಲದಲ್ಲಿ ಮುಖ್ಯವಾಗಿ ಗೃತ್ಸಮದ ಋಷಿಯ ಸೂಕ್ತಗಳಿವೆ ; ಮೂರನೆಯದರಲ್ಲಿ ವಿಶ್ವಾಮಿತ್ರ ಮಹರ್ಷಿಯ ಮತ್ತು ಏಳನೆಯದರಲ್ಲಿ ವಸಿಷ್ಠ ಮಹರ್ಷಿಯ ಸೂಕ್ತಗಳಿವೆ. ನಾಲ್ಕನೆಯ ಮಂಡಲದ ಸೂಕ್ತಗಳು ವಾಮದೇವಕೃತ ಮತ್ತು ಆರನೆಯ ಮಂಡಲದ ಸೂಕ್ತಗಳ ದ್ರಷ್ಟಾರನು ಭರದ್ವಾಜ. ಐದನೆಯ ಮಂಡಲದ ತುಂಬಾ ಅತ್ರಿಕುಟುಂಬದ[೧] ಸೂಕ್ತಗಳಿವೆ. ಈ ಪ್ರತಿಯೊಂದು ಮಂಡಲದಲ್ಲಿಯೂ ಅಗ್ನಿಯನ್ನು ಸಂಬೋಧಿಸಿದ ಸೂಕ್ತಗಳು ಮೊದಲು ಬರುತ್ತವೆ ; ಅನಂತರ ಇಂದ್ರ ಸಂಬೋಧಕ ಸೂಕ್ತಗಳು ಬಂದಿವೆ ; ಬೃಹಸ್ಪತಿ, ಸೂರ್ಯ, ಋಭುಗಳು, ಉಷೆ (ಉಷಸ್) ಮುಂತಾದ ದೇವತೆಗಳಿಗೆ ಸಂಬಂಧಿಸಿ ಆಮಂತ್ರಿಸಿದ ಸೂಕ್ತಗಳು ಬರುತ್ತವೆ. ಒಂಭತ್ತನೆಯದಾದ ಇಡೀ ಮಂಡಲವು ಸೋಮಸೂಕ್ತಗಳಿಂದ ತುಂಬಿ ಹೋಗಿದೆ. ಪ್ರಥಮ, ಅಷ್ಟಮ ಮತ್ತು ದಶಮ ಮಂಡಲಗಳಲ್ಲಿ ವಿವಿಧ ಋಷಿಗಳು ಕಂಡ ಸೂಕ್ತಗಳ ಸಂಗ್ರಹಗಳಿವೆ. ಆದರೆ ಪ್ರತಿಯೊಬ್ಬ ದ್ರಷ್ಟಾರನ ಸೂಕ್ತಗಳನ್ನೂ ಅಗ್ನಿ, ಇಂದ್ರ ಮತ್ತು ತದಿತರರಿಗೆ ಸಂಬಂಧಿಸಿದಂತೆ ಅನುಕ್ರಮವಾಗಿ ಕೊಟ್ಟಿರುವುದು ಅಷ್ಟಮ-ದಶಮ ಮಂಡಲಗಳ ವೈಶಿಷ್ಟ್ಯ. ಹೀಗೆ ಪ್ರಥಮ ಮಂಡಲವು ವಿಶ್ವಾಮಿತ್ರನ ಮಗನಾದ ಮಧುಚ್ಛಂದಸ್ ಋಷಿಯ ಹತ್ತು ಸೂಕ್ತಗಳಿಂದ ಪ್ರಾರಂಭವಾಗುತ್ತವೆ. ಹನ್ನೊಂದನೆಯ ಸೂಕ್ತವು ಮಧುಚ್ಛಂದಸ್ಸಿನ ಮಗನಾದ ಜೇತೃವು ಕಂಡದ್ದು. ಕೊನೆಯದಾದ ಈ ಸೂಕ್ತವು ಶೈಲಿ, ರೀತಿ ಮತ್ತು ಇಂಗಿತಗಳಲ್ಲಿ ಹಿಂದಿನ ಮಂಡಲಗಳ ಸೂಕ್ತಗಳಿಗೆ ಸಾರೂಪ್ಯ ಸಂಬಂಧದಲ್ಲಿರುವುದರಿಂದ ಉದ್ದೇಶ ಹಾಗೂ ಪದಬಂಧಗಳಲ್ಲಿ ಅವನ್ನೂ ಸೇರಿಸಿಕೊಂಡು ನೋಡಿದರೆ ಈ ಪ್ರಥಮ ಮಂಡಲವಿಡೀ ಒಂದೇ ಒಂದು ಘಟಕ, ಗಣ, ಎಂದು ವರ್ಗೀಕರಿಸಬಹುದಾಗಿದೆ.

ಈ ವೇದ ಸೂಕ್ತಗಳ ಕ್ರಮಿಕ ವಿನ್ಯಾಸದಲ್ಲಿ ಒಂದು ಬಗೆಯ ವಿಚಾರ ವಿಕಾಸ ತತ್ತ್ವವನ್ನು ನಾವೂ ಕಾಣಬಹುದು. ಈ ಪ್ರಥಮ ಮಂಡಲದ ಯೋಜನೆಯ ವೈಶಿಷ್ಟ್ಯ ಹೀಗಿದೆ : ತನ್ನ ವಿವಿಧಾಂಶಗಳೊಡನೆ ಸಾಧಾರಣ ವೈದಿಕ ವಿಚಾರವು, ಕ್ರಮಶಃ, ಕೆಲ ಮಹರ್ಷಿಗಳು ಪ್ರತಿಷ್ಠಾಪಿಸಿದ ಸಂಕೇತಗಳ ಕವಚದೊಳಗೆ, ಅವರ ಸ್ವರದ (ದನಿಯ) ಮೂಲಕ ತೆರೆ ತೆರೆಯಾಗಿ ತೆರೆಯುತ್ತಾ ಹೋಗುತ್ತದೆ. ಈ ಮಹರ್ಷಿಗಳಾದರೋ ಉನ್ನತ ಮಟ್ಟದ ಚಿಂತಕರೂ ಪವಿತ್ರಗಾಯಕರೂ ಆಗಿದ್ದಾರೆ ; ಅವರಲ್ಲಿ ಕೆಲವರಂತೂ ವೈದಿಕ ಪರಂಪರೆಯಲ್ಲಿ ಅತ್ಯಂತ ಸುಪ್ರಸಿದ್ಧರು. ಹತ್ತನೆಯ ಅಥವಾ ಕೊನೆಯ ಮಂಡಲವು ಇನ್ನೂ ಹೆಚ್ಚು ವಿವಿಧ ಗ್ರಂಥಕರ್ತರ ಮೂಲಕ, ವೇದ ವಿಚಾರದ ವಿಕಾಸದ ಅಂತ್ಯಾವಸ್ಥೆಯನ್ನೂ ವೇದಸೂಕ್ತಗಳ ಅತ್ಯಾಧುನಿಕ ಭಾಷಾ ಸ್ವರೂಪವನ್ನೂ ತೋರಿಸುತ್ತಿರುವುದು ಒಂದು ಆಕಸ್ಮಿಕ ಘಟನೆ ಎಂದು ನಾನು ನಂಬಲಾರೆನು. ಇಲ್ಲೇ ನಾವು ಪುರುಷಯಜ್ಞವನ್ನೂ ಮಹಾಸೃಷ್ಟಿಸೂಕ್ತವನ್ನೂ ಕಾಣುತ್ತೇವೆ : ಇಲ್ಲೇ ಆಧುನಿಕ ವಿದ್ವಾಂಸರು ವೇದಾಂತ ತತ್ತ್ವಜ್ಞಾನದ ಬ್ರಹ್ಮವಾದದ ಮೂಲಗಳನ್ನು ಹುಡುಕಿದ್ದೇವೆ ಎಂದು ತಿಳಿಯುವುದು !

ಯಾವುದು ಹೇಗೇ ಇರಲಿ-ಋಗ್ವೇದ ಆರಂಭವಾಗುವುದು ವಿಶ್ವಾಮಿತ್ರನ ಮಗನ ಮತ್ತು ಮೊಮ್ಮಗನ ಸೂಕ್ತಗಳಿಂದ ; ಅವು ಪ್ರಶಂಸನೀಯವಾಗಿ ವೈದಿಕ ಸಾಮಶ್ರುತ್ಯದ (ಶ್ರುತಿ ಸಮನ್ವಯದ) ಮೊಟ್ಟಮೊದಲ ಸಾರವತ್ತಾದ ಧಾಟಿಗಳನ್ನು ಹಾಡಿ (ಬಾರಿಸಿ) ತೋರಿಸುತ್ತವೆ, ಸ್ವರಸಾಮರಸ್ಯದ ಪ್ರಸ್ತಾರವನ್ನು ನಿದರ್ಶಿಸುತ್ತವೆ. ಅಗ್ನಿಯನ್ನು ಸಂಬೋಧಿಸಿದ ಮೊದಲನೆಯ ಸೂಕ್ತವು ಪರಮ

---

೧. ಅತ್ರಿಯಿಲ್ಲಿ ಸಪ್ತರ್ಷಿಗಳಲ್ಲಿ ಎರಡನೆಯವನು. ಸಪ್ತರ್ಷಿಗಳು "ಕಶ್ಯಪೋಽತ್ರಿ ಭರದ್ವಾಜೋ ವಿಶ್ವಾಮಿತ್ರೋಽಥ ಗೌತಮಃ ।ಜಮದಗ್ನಿರ್ವಸಿಷ್ಠಶ್ಚ...." (ಅನುವಾದಕ)

ಸತ್ಯದ ಕೇಂದ್ರಕಲ್ಪನೆಯನ್ನು ಸೂಚಿಸುತ್ತದೆ. ದೇವಗಣ ಪರಿವೃತನಾದ ಇಂದ್ರನನ್ನು ಆಮಂತ್ರಿಸುವ ೨ ನೆಯ ಮತ್ತು ಮೂರನೆಯ ಸೂಕ್ತಗಳು ಉಕ್ತ ಸೂಚನೆಯನ್ನು ದೃಢಪಡಿಸುತ್ತವೆ. ಉಳಿದ ೮ ಸೂಕ್ತಗಳಲ್ಲಿ ಇಂದ್ರನೇ ಪ್ರಧಾನ ದೇವತೆ. ಒಂದು ಸೂಕ್ತದಲ್ಲಿ ಮಾತ್ರ ಅವನ ಆರಾಧನೆಯು ಮರುತ್ತುಗಳನ್ನೊಳಗೊಂಡಿದೆ: ಸೋಮ ಮತ್ತು ಗೋಗಳ ಸಂಕೇತವನ್ನು ಕಾಣುತ್ತೇವೆ ; ವಿಘ್ನಕರ ವೃತ್ರನ ಉಲ್ಲೇಖವಿದೆ. ಇಂದ್ರನು ಮಾನವನನ್ನಲ್ಲಿ ಜ್ಯೋತಿರ್ಮಯ ಪ್ರಜ್ಞಾಸ್ತರಕ್ಕೆ ಒಯ್ಯುತ್ತಾನೆ- ಅವನ ಪಾತ್ರ ಅದರಲ್ಲಿ ಹಿರಿಯದು; ಮಾನವನ ಪ್ರಗತಿಗೆ ಅಡ್ಡ ಬರುವ ಗೋಡೆಗಳನ್ನಾತನು ಕೆಡಹುತ್ತಾನೆ. ಆದ್ದರಿಂದ ಈ ಸೂಕ್ತಗಳು ಬಹಳ ಮುಖ್ಯವಾದವುಗಳು. ಏಕೆಂದರೆ, ಅವುಗಳ ಮೂಲಕ ನಾವು ವೇದದ ಮಾನಸ ಶಾಸ್ತ್ರೀಯ ವಿವರಣೆಯನ್ನು ತಿಳಿದುಕೊಳ್ಳಬಹುದು.

ಅಗ್ನಿ ಸೂಕ್ತಗಳಲ್ಲಿ ೫ ರಿಂದ ೮ ರವರೆಗಿನ ನಾಲ್ಕು ಸೂಕ್ತಗಳಲ್ಲಿ ಮಾನಸ ಶಾಸ್ತ್ರೀಯ ಅರ್ಥವು ಮಹಾರಭಸದಿಂದ ಸಂಕೇತದ ಮುಸುಕಿನಿಂದ ಹೊರಗೆ ಸ್ಪಷ್ಟವಾಗಿ ಮೂಡುತ್ತದೆ.

**ಅಗ್ನಿರ್ಹೋತಾ ಕವಿಕ್ರತುಃ ಸತ್ಯಶ್ಚಿತ್ರಶ್ರವಸ್ತಮಃ**
**ದೇವೋ ದೇವೇಭಿರಾಗಮಹತ್ ।**
**ಯದ್ ಅಂಗ ದಾಶುಷೇ ತ್ವಂ, ಅಗ್ನೇ ಭದ್ರಂ ಕರಿಷ್ಯಸಿ,**
**ತವೇತ್ ತತ್ ಸತ್ಯಂ ಅಂಗಿರಃ ॥**
**ಉಪ ತ್ವಾಗ್ನೇ ದಿವೇ ದಿವೇ ದೋಷಾವಸ್ತರ್ ಧಿಯಾ ವಯಂ**
**ನಮೋ ಭರಂತ ಏಮಸಿ ।**
**ರಾಜಂತಂ ಅಧ್ವರಾಣಾಂ, ಗೋಪಾಂ ಋತಸ್ಯ ದೀದಿವಿಂ,**
**ವರ್ಧಮಾನಂ ಸ್ವೇ ದಮೇ ॥**

ಈ ಅವತರಣಿಕೆಯಲ್ಲಿ (ಉದ್ಧೃತ ಭಾಗದಲ್ಲಿ) ಮಾನಸ ಶಾಸ್ತ್ರೀಯ ಅರ್ಥವನ್ನು ಸರಳವಾಗಿ ಅಥವಾ ಎದ್ದುಕಾಣುವಂತೆ ಕೊಡುವ ಪದಪಂಕ್ತಿಗಳಿವೆ; ಮತ್ತು ಆ ಪದ ಪಂಕ್ತಿಗಳು ಇಡೀ ಸಂದರ್ಭಕ್ಕೆ ತಮ್ಮ ಬಣ್ಣವನ್ನು ಬಳಿಯುತ್ತವೆ. ಆದರೆ ಸಾಯಣನು ಶುದ್ಧ ಕರ್ಮಕಾಂಡದ ಅರ್ಥವನ್ನೇ ಹೇರುತ್ತಾನೆ ಮತ್ತು ಆ ಅರ್ಥಕ್ಕೆ ಅವನು ಬರುವುದನ್ನು ನೋಡುವುದು ಕುತೂಹಲಕರ. ಮೊದಲ ಪದ'ಸಂಹತಿಯಲ್ಲಿ (ಮೇಳ ನುಡಿಯಲ್ಲಿ) ಕವಿಯೆಂದರೆ ದ್ರಷ್ಟಾರ ಮತ್ತು ನಾವು ಕ್ರತುವನ್ನು ಯಜ್ಞವೆಂದು ಅರ್ಥ ಮಾಡಿದರೂ ಅದರ ಫಲವಾಗಿ "ಅರ್ಚಕನಾದ ಅಗ್ನಿಯ ಕರ್ಮವು ದ್ರಷ್ಟಾರನ ಕರ್ಮ" ಎಂದು ಅರ್ಥೈಸಬೇಕಾಗುತ್ತದೆ. ಈ ತಿರುಹು ಯಜ್ಞಕ್ಕೆ ಒಮ್ಮೆಲೇ ಸಾಂಕೇತಿಕಾರ್ಥವನ್ನು ಕೊಡುವುದು ; ಗಭೀರ ತರವಾದ ವೇದಾರ್ಥಗ್ರಹಣಕ್ಕೆ ಇದಿಷ್ಟೇ ಬೀಜವಾಗಬಲ್ಲದು. ಹೇಗಾದರೂ ಮಾಡಿ ಈ ಆತಂಕವನ್ನು ಪರಿಹರಿಸಬೇಕೆಂದು ನಿರ್ಧರಿಸಿ ಸಾಯಣನು ಕವಿ ಶಬ್ದಕ್ಕೆ ದ್ರಷ್ಟಾರನೆಂಬ ಅರ್ಥವನ್ನು ಹೇಳದೆ, ಅದಕ್ಕೆ ಅಸಾಮಾನ್ಯವಾದ ಇನ್ನೊಂದರ್ಥವನ್ನು ಹೇಳಿಬಿಡುತ್ತಾನೆ. ಆಮೇಲೆ ಅವನು ಅಗ್ನಿಯೆಂದರೆ ಸತ್ಯವೆನ್ನುತ್ತಾನೆ ; ಏಕೆಂದರೆ ಅವನು ಯಜ್ಞದ ನಿಜಫಲವನ್ನು ತರುತ್ತಾನೆ. ಸಾಯಣನ ಪ್ರಕಾರ "ಶ್ರವಸ್" ಎಂದರೆ ಯಶಸ್ಸು. ಅಗ್ನಿಗೆ ಅತಿಶಯ ವೈವಿಧ್ಯ ಪೂರ್ಣ ಕೀರ್ತಿಯಿದೆ. ಈ ಅರ್ಥದ ಅಸಾಮಂಜಸ್ಯವನ್ನು ಪರಿಹರಿಸಿಕೊಳ್ಳಲು ಅವನು ಶ್ರವಸ್ಸೆಂದರೆ ಸಂಪತ್ತು ಎಂದು ಅರ್ಥ ಮಾಡಬಹುದಾಗಿತ್ತು. ಆಗ ೫ ನೆಯದಾದ ಈ ಋಕ್ಕಿಗೆ "ಅರ್ಚಕನಾದ ಅಗ್ನಿಯು, ಕರ್ಮದಲ್ಲಿ ಸಕ್ರಿಯನಾಗಿ, (ಫಲದಲ್ಲಿ) ಸತ್ಯನಾಗಿದ್ದಾನೆ; ಏಕೆಂದರೆ, ಅವನದು ಬಹಳ ವೈವಿಧ್ಯಮಯವಾದ

ಸಂಪತ್ತು-ಅವನು ಬರಲಿ, ದೇವನಾದ ಅವನು ದೇವರುಗಳೊಡನೆ-" ಎಂಬುದು ಹೆಚ್ಚು ಸರಿಯಾದ ಅರ್ಥವೆನ್ನಿಸುತ್ತಿತ್ತು.

ವ್ಯಾಖ್ಯಾತನಾದ ಸಾಯಣನು ೬ ನೆಯ ಋಕ್ಕಿಗೆ ಬಹಳ ಅಸಭ್ಯವೂ ಆಕಸ್ಮಿಕವೂ ಆದ ಅರ್ಥವನ್ನು ಪದ್ಯಪ್ರವಾಹವನ್ನು ಪೂರ್ತಿಯಾಗಿ ತಡೆಗಟ್ಟುವ ವಿಚಾರದ ಚಿಲ್ಲರೆ ತಿರುಹನ್ನೂ ಕೊಡುತ್ತಾನೆ. "ಆ ಒಳಿತನ್ನು (ವೈವಿಧ್ಯಮಯ ಸಂಪತ್ತಿನ ರೂಪವುಳ್ಳದ್ದನ್ನು) ದಾನಿಗೆ ನೀನು ಫಲಿಸುವಂತೆ ಮಾಡುವೆ. ಅದು ನಿನ್ನದು. ಇದು ನಿಜ, ಎಲೈ ಅಂಗಿರಸ್ಸೇ"- ಅಂದರೆ ಈ ಸಂಗತಿಯ ಬಗೆಗೆ ಸಂಶಯವೇ ಇರಲಾರದು. ಏಕೆಂದರೆ ದಾನಿಗೆ ಅಗ್ನಿಯು ಒಳಿತನ್ನು ಮಾಡಿದರೆ-ಸಂಪತ್ತನ್ನಿತ್ತರೆ, ದಾನಿಯು ಅಗ್ನಿಗೆ ಅದಕ್ಕೆ ಪ್ರತಿಯಾಗಿ ಹೊಸ ಯಜ್ಞಗಳನ್ನು ಮಾಡುವನು ; ಹೀಗೆ ಯಾಜಕನ ಒಳಿತು ದೇವತೆಯ ಒಳಿತೇ ಆಗುವುದು. ಇಲ್ಲಿಯೂ ಇದಕ್ಕಿಂತ ಚೆನ್ನಾದ ಅರ್ಥವನ್ನು ಹೇಳಬಹುದು : "ದಾನಿಗೆ ನೀನು ಮಾಡುವ ಒಳಿತೆಂಬುದು-ಅದೇ ನಿನ್ನ ಸತ್ಯ, ಓ ಅಂಗಿರಸ್". ಏಕೆಂದರೆ, ಈ ವಿವರಣೆ ತನ್ನ ಅರ್ಥದಲ್ಲೂ ಆಲೋಚನಾರಚನೆಯಲ್ಲೂ ಸರಳ ; ಅಲ್ಲದೆ ಯಜ್ಞಾಗ್ನಿ ದೇವತೆಗನ್ವಯಿಸಿದ ಸತ್ಯ (ನಿಜ) ಎಂಬ ವಿಶೇಷಣವು ಸರಳಾನುವಾದಕ್ಕೆ ಒಪ್ಪುತ್ತದೆ. ಯಾಜಕನಿಗೆ ಅಗ್ನಿಯು ಒಳಿತನ್ನು ಪ್ರತಿಫಲವಾಗಿ ಕೊಡುವುದು ಅಗ್ನಿಯ ಸತ್ಯ.

ಒಂದು ಅಪೂರ್ವ ಪದ ಸಂಹತಿಯನ್ನು ಬಿಟ್ಟರೆ ೭ ನೆಯ ಋಕ್ಕು ಕರ್ಮಕಾಂಡಾನು-ಗುಣವಾದ ಅರ್ಥವನ್ನು ಹೇಳಲು ಎಲ್ಲೂ ಅಡ್ಡಿ ಮಾಡದು. ಆ ಅಪೂರ್ವ ಪದ ಸಂಹತಿಯೆಂದರೆ "ನಾವು ನಮಸ್ಕಾರವನ್ನು ಹೊತ್ತು ಬರುತ್ತೇವೆ" ಹೊರುವುದೆಂದರೆ ಮಾಡುವುದು ಎನ್ನುತ್ತಾನೆ ಸಾಯಣ, "ನಿನಗೆ, ದಿನದಿನವೂ ಇರುಳು ಮತ್ತು ಹಗಲು, ಸಾಷ್ಟಾಂಗ ನಮಸ್ಕಾರ ಹಾಕುತ್ತಾ ಚಿಂತನ (ವಿಚಾರ) ದೊಡನೆ ಬರುತ್ತೇವೆ." ೮ನೆಯ ಋಕ್ಕಿನಲ್ಲಿ "ಋತಸ್ಯ" ಎಂಬುದನ್ನು "ಸತ್ಯಸ್ಯ" ಎಂದು ಭಾವಿಸಿಕೊಂಡು "ಕರ್ಮದ ನಿಜವಾದ ಫಲ" ಎಂದು ಅವನು ವಿವರಿಸುತ್ತಾನೆ: "ಹೊಳೆಯುವ ನಿನಗೆ, ಯಜ್ಞಗಳ ರಕ್ಷಕನಿಗೆ ಅವುಗಳ ಸತ್ಯವನ್ನು ಯಾವಾಗಲೂ ಅಭಿವ್ಯಕ್ತಗೊಳಿಸುವ (ಸತ್ಯವಿಲ್ಲಿ ಅವುಗಳ ಅಪರಿಹಾರ್ಯ ಫಲ) ನಿನಗೆ, ಸ್ವಗೃಹದಲ್ಲಿ ಬೆಳೆಯುತ್ತಿರುವ ನಿನಗೆ." ವ್ಯಾಖ್ಯಾತೃವಿನ ಪ್ರಕಾರ ಅಗ್ನಿಯ "ಸ್ವಗೃಹ" ವೆಂದರೆ ಯಜ್ಞಮಾಡುವ ಸ್ಥಳ-ಸಂಸ್ಕೃತದಲ್ಲಿ ಇದನ್ನು ನಿಜವಾಗಿ ಪದೇ, ಪದೇ, ಸಾಕಷ್ಟು ಸಾರಿ, "ಅಗ್ನಿಯ ಮನೆ" ಎನ್ನಲಾಗುತ್ತದೆ."

ಆದ್ದರಿಂದ ಸ್ವಲ್ಪ ಹಾಗೂ ಹೀಗೂ ಮೊಗಚಾಡಿದರೆ ನೋಡಿದೊಡನೆಯೇ ಸಾಕಷ್ಟು ಮಾನಸ ಶಾಸ್ತ್ರೀಯ ಅರ್ಥ ಸಂಪತ್ತು ಕಾಣುವಂತಿರುವ ಉಪಚ್ಛೇದದಲ್ಲಿಯೂ ಅದು ಶೂನ್ಯಾರ್ಥಕ-ವಾಗುವಂತೆ ಅದಕ್ಕೆ ಬರಿ ಕರ್ಮಕಾಂಡಾರ್ಥವನ್ನು ಹೇಳಿ ಮುಗಿಸಿ ಬಿಡಬಹುದು. ಈ ಕೆಲಸವನ್ನು ಎಷ್ಟು ವಿಕಟ ಪ್ರಯತ್ನದಿಂದ ಮಾಡಿದರೂ ಅದರಲ್ಲಿ ಉಳಿಯುವ ಒಡಕು-ಬಿರುಕುಗಳು ಅದರ ಕೃತಕತೆಯನ್ನು ಬಯಲಿಗೆಳೆಯುತ್ತವೆ. ಕವಿ ಪದಕ್ಕೆ ವೇದದ ಉದ್ದಕ್ಕೂ ಅಂಟಿಕೊಂಡಿರುವ ಸರಳಾರ್ಥವನ್ನು ಕಿತ್ತೆಸೆದು ನಾವು ಅದರ ಮೇಲೆ ಸುಳ್ಳು ಅರ್ಥವನ್ನು ಹೇರಬೇಕಾಯಿತು. ನಾವು ಸತ್ಯ ಮತ್ತು ಋತಗಳೆಂಬ ಪದಗಳು ವೇದದಲ್ಲಿ ಬಹಳ ನಿಕಟವರ್ತಿಗಳಾಗಿದ್ದರೂ ಅವುಗಳಲ್ಲಿ ವಿವಾಹ ವಿಚ್ಛೇದ ಮಾಡಬೇಕು ಅಥವಾ ಋತಕ್ಕೆ ಒತ್ತಾಯದಿಂದ ಬೇರೆಯ ಅರ್ಥವನ್ನು ಹಚ್ಚಬೇಕು ; ಮತ್ತು ಉದ್ದಕ್ಕೂ ನಾವು ಋಷಿಯ ಭಾಷೆಯು ನಮ್ಮ ಮೇಲೆ ಒತ್ತಾಯಿಸಿದ ಸ್ವಾಭಾವಿಕ ಸೂಚನೆಗಳನ್ನು ದೂರ ಇಟ್ಟೆವು-ಅವುಗಳಿಂದ ತಪ್ಪಿಸಿಕೊಂಡೇ ತಿರುಗಿದೆವು-ಹಾಗೇ ತಿರುಗಬೇಕು !

ಈಗ ನಾವು, ತದ್ವಿರುದ್ಧವಾಗಿರುವ ತತ್ವವನ್ನು ಹಿಡಿದು ವೇದ ಸೂಕ್ತಗಳ ಸ್ಫೂರ್ತ ಪರ್‍ಯದ ಪದಗಳಿಗೆ ಪೂರ್ಣವಾದ ಮಾನಸ ಶಾಸ್ತ್ರೀಯ ಮೌಲ್ಯವನ್ನು ಕೊಡಬೇಕು. ಸಂಸ್ಕೃತದಲ್ಲಿ "ಕ್ರತು" ಎಂದರೆ ಕೆಲಸ ಅಥವಾ ಕಾರ್ಯ; ಅದರಲ್ಲೂ "ಯಜ್ಞ" ಎಂಬ ಅರ್ಥದ "ಕೆಲಸ" ಎಂಬುದು ಆ ಪದಕ್ಕಂಟಿಕೊಂಡ ಅರ್ಥ ; ಆದರೆ ಅದಕ್ಕೆ ಗ್ರೀಕ್ ಭಾಷೆಯಲ್ಲಿ "ಕ್ರತೋಸ್" ಎಂಬ ಪದಕ್ಕಿರುವ "ಕಾರ್ಯಕರವಾದ ಬಲ ಅಥವಾ ಶಕ್ತಿ" ಎಂಬ ಅರ್ಥವೂ ಇದೆ. ಮಾನಸ ಶಾಸ್ತ್ರೀಯವಾಗಿ ಕಾರ್ಯಕರವಾದ ಈ ಶಕ್ತಿಯೆಂದರೆ ಸಂಕಲ್ಪ ಶಕ್ತಿ, ಇಚ್ಛಾಶಕ್ತಿ. ಮನಸ್ಸು ಅಥವಾ ಬುದ್ಧಿ ಎಂದು ಸಹಾ ಆ ಪದಕ್ಕೆ ಅರ್ಥ ಹೇಳಬಹುದು ಮತ್ತು ಸಾಯಣನು ವಿಚಾರ ಅಥವಾ ಜ್ಞಾನ ಎಂಬ ಅರ್ಥ ಆ ಪದಕ್ಕಿದೆ ಎಂದು ಒಪ್ಪುತ್ತಾನೆ ; ಅದು ಅವನ ಪ್ರಕಾರ ಕ್ರತುಪದದ ಒಂದು ಸಂಭಾವ್ಯಾರ್ಥ (ಸಾಧ್ಯವಾದ ಅರ್ಥ). "ಶ್ರವಸ್" ಎಂಬುದರ ಅಕ್ಷರಾರ್ಥವು ಕೇಳುವುದು ಎಂದು; ಅದರ ಈ ಮೂಲಾರ್ಥದಿಂದ ಯಶಸ್ಸೆಂಬ ಗೌಣಾರ್ಥ ಅದಕ್ಕೆ ಅಂಟಿಕೊಂಡಿತು. ಆದರೆ ಮಾನಸ ಶಾಸ್ತ್ರೀಯವಾಗಿ ಸಂಸ್ಕೃತದಲ್ಲಿ, ಕೇಳುವುದೆಂಬ ಕಲ್ಪನೆಯು "ಶ್ರವಣ, ಶ್ರುತಿ, ಶ್ರುತ" ಆವಿರ್ಭೂತಜ್ಞಾನ, ಸ್ಫೂರ್ತಜ್ಞಾನ- ಎಂಬರ್ಥಕ್ಕೆ ನಮ್ಮನ್ನು ಒಯ್ಯುತ್ತದೆ. ದೃಷ್ಟಿ ಮತ್ತು ಶ್ರುತಿ = ನೋಟ ಮತ್ತು ಕೇಳ್ಮೆ=ಆವಿರ್ಭಾವ ಮತ್ತು ಸ್ಫೂರ್ತಿ, ಸ್ಫುರಣ ಎಂಬಿವು ಅತಿಮಾನಸ ಪ್ರಜ್ಞೆಯ ಎರಡು ಮುಖ್ಯ ಶಕ್ತಿಗಳು ಇವು ಋತವೆಂಬ ಪ್ರಾಚೀನ ವೈದಿಕರ ಸತ್ಯದ ಕಲ್ಪನೆಗೆ ಸೇರಿದ್ದಾಗಿವೆ. ಕೋಶಕಾರರು "ಶ್ರವಸ್" ಎಂಬ ಪದಕ್ಕೆ ಈ ಅರ್ಥವಿದೆ ಎಂದು ಮನ್ನಿಸಿಯೇ ಇಲ್ಲ ; ಅದಕ್ಕೆ ಸೂಕ್ತ ಎಂಬ ಅರ್ಥವಿದೆ ಎಂದು ಒಪ್ಪಿಕೊಂಡಿದ್ದಾರೆ : ಸೂಕ್ತವೆಂದರೆ ವೇದದ ಸ್ಫೂರ್ತ ಶಬ್ದ. ಒಂದಲ್ಲಾ ಒಂದು ಕಾಲದಲ್ಲಿ ಈ ಪದಕ್ಕೆ "ಸ್ಫೂರ್ತಿ" ಅಥವಾ "ಸ್ಫೂರ್ತಪದ" ಅಥವಾ "ಜ್ಞಾನ" ಎಂಬ ಅರ್ಥವಿತ್ತೆಂಬುದು ಗೊತ್ತಾಗುತ್ತದೆ. ಹೀಗಿರುವಾಗ ಪ್ರಸ್ತುತ ಅನುಚ್ಛೇದದಲ್ಲಿ ಆ ಪದಕ್ಕೆ ತಾತ್ಪೂರ್ತಿಕವಾಗಿಯಾದರೂ ಈ ಅರ್ಥವನ್ನು ನಾವು ಕೊಡಬಲ್ಲವರಾಗುತ್ತೇವೆ. ಏಕೆಂದರೆ ಇನ್ನೊಂದರ್ಥವಾದ ಯಶಸ್ಸೆಂಬುದು ಪ್ರಸ್ತುತ ಸಂದರ್ಭದಲ್ಲಿ ಸಂಪೂರ್ಣವಾಗಿ ಅನನ್ವಿತವೂ ಅರ್ಥಹೀನವೂ ಆಗುತ್ತದೆ. ಹಾಗೇ "ನಮಸ್" ಎಂಬುದೂ ಮಾನಸ ಶಾಸ್ತ್ರೀಯ ಅರ್ಥವನ್ನು ಕೊಡಬಲ್ಲುದು. ಅದರ ಅಕ್ಷರಾರ್ಥವು "ಬಾಗು, ಬಗ್ಗು" ಎಂದು. ಅರ್ಚನಾತ್ಮಕ ಶರಣಾಗತಿಯ ಅರ್ಥದಲ್ಲಿ ದೈಹಿಕವಾಗಿ ದೇವರಿಗೆ ಸಾಷ್ಟಾಂಗ ನಮಸ್ಕಾರ ಮಾಡುವುದು "ನಮಸ್". ಆದ್ದರಿಂದ ಋಷಿಯು "ವಿಚಾರದ ಮೂಲಕ ಅಗ್ನಿಗೆ ಶರಣು ಹೋಗುವುದು" ಎಂದು ಹೇಳಿದಾಗ, ಅವನದಕ್ಕೆ ಮಾನಸಶಾಸ್ತ್ರೀಯವಾದ ಆಂತರಿಕ ಸಾಷ್ಟಾಂಗಪ್ರಣಾಮ ಅಥವಾ ದೇವರಿಗೆ ವಶವರ್ತಿಯಾಗುವುದು ಅಥವಾ ಶರಣಾಗತನಾಗುವುದು ಎಂಬ ಅರ್ಥವನ್ನೇ ಮನಸ್ಸಿನಲ್ಲಿಟ್ಟುಕೊಂಡಿದ್ದಾನೆ ಎಂಬುದರಲ್ಲಿ ನಾವು ಯಾವ ಸಂಶಯವನ್ನೂ ಇಟ್ಟುಕೊಳ್ಳುವಂತಿಲ್ಲ.

ನಮಗೀಗ ಉಕ್ತ ನಾಲ್ಕು ಋಕ್ಕುಗಳ ಅರ್ಥವು ಹೀಗೆ ಲಭಿಸುತ್ತದೆ :-

ಯಜ್ಞದ ಪುರೋಹಿತನಾದ, ಕರ್ಮದ ಆರ್ಷ ಸಂಕಲ್ಪ ಶಕ್ತಿಯುಳ್ಳವನಾದ, ಸತ್ಯನಾದ ಮತ್ತು ವಿವಿಧ ಸ್ಫೂರ್ತಿ ಸಂಪತ್ತಿನಲ್ಲಿ ಅತಿ ಹೆಚ್ಚಿನವನಾದ ಅಗ್ನಿದೇವನು ಇತರ ದೇವತೆಗಳೊಡನೆ ಬರಲಿ.

"ಎಲೈ ಅಂಗಿರಸ್ಸೇ, ದಾನಿಗೆ ನೀನು ನಿರ್ಮಿಸಿಕೊಡುವ ಒಳಿತು ಎಂಬುದೇ ನಿನ್ನ ಆ ಸತ್ಯ."

"ಎಲೈ ಅಗ್ನಿಯೇ, ಪ್ರತಿದಿನವೂ ಹಗಲಿರುಳೂ (ಬೆಳಕು ಕತ್ತಲೆಗಳೆರಡಲ್ಲೂ) ಶರಣಾಗತ-ಭಾವದಿಂದ ನಾವು ಮನಸಾ ನಿನ್ನೆಡೆಗೆ ಬರುತ್ತೇವೆ."

"ಯಜ್ಞಗಳಿಂದೆದ್ದು ಹೊಳೆಯುವನಾದ (ಅಥವಾ ಯಜ್ಞನಿಯಾಮಕನಾದ), ಪರಮ ಸತ್ಯದ ಮತ್ತು ಅದರ ಪ್ರಕಾಶನದ ಕಾವಲುಗಾರನಾದ ಮತ್ತು ಸ್ವಗೃಹದಲ್ಲಿ ದಿನೇ ದಿನೇ ವರ್ಧಮಾನನಾಗುವ ನಿನಗೆ (ನಾವು ಶರಣಾಗತರಾಗುತ್ತೇವೆ)."

ಭಾಷಾಂತರದ ನ್ಯೂನತೆಯು ಇರುವುದು ನಾವು ಸತ್ಯ ಮತ್ತು ಋತಗಳೆಂಬ ಎರಡು ಪದಗಳಿಗೂ ಒಂದೇ ಪದವನ್ನು ಬಳಸಬೇಕಾಗಿ ಬಂದುದರಲ್ಲಿ. ಆದರೆ ವೇದಪದಸೂತ್ರದಲ್ಲಿ "ಸತ್ಯಂ ಋತಂ ಬೃಹತ್" ಎಂಬ ಪದಗಳಿವೆಯಲ್ಲದೆ, ವೈದಿಕ ಮನದಲ್ಲಿ ಮೊದಲನೆರಡು ಪದಗಳ ಅರ್ಥಗಳಲ್ಲಿ ಸರಿಯಾದ ಭೇದವಿದೆ. ಇಷ್ಟು ಯೌಗಿಕ ಆವೇಶ ನಿರ್ಭರತೆಯ ಭಾಷೆಯಿಂದ ಸಂಬೋಧಿಸಲ್ಪಟ್ಟ ಈ ಅಗ್ನಿ ಯಾರು? ಇಷ್ಟೆಲ್ಲಾ ವಿಶಾಲವೂ ಆಳವೂ ಆದ ಕರ್ತವ್ಯಗಳಿಗೆ ಬಾಧ್ಯನಾದ ಈ ದೇವ ಯಾವನು? ಪರಮ ಸತ್ಯದ ರಕ್ಷಕನೂ ತನ್ನ ಕ್ರಿಯೆಯಲ್ಲಿ ಅದರ ಜ್ಯೋತಿಸ್ಸೂ ಆದ ಮತ್ತು ತನ್ನ ಕರ್ಮದಲ್ಲಿಯ ಸಂಕಲ್ಪದಲ್ಲಿ ಆರ್ಷಸಂಕಲ್ಪ ಸ್ವರೂಪನೂ ಆದ ಹಾಗೂ ತನ್ನ ವೈವಿಧ್ಯದಿಂದ ಸುಸಂಪನ್ನವಾದ ಸ್ಫೂರ್ತಿಯನ್ನು ನಿಯಂತ್ರಿಸಬಲ್ಲ ದಿವ್ಯ ವಿವೇಕವುಳ್ಳ ಈತನು ಯಾರು? ಈತನು ಕಾಯುತ್ತಿರುವ ಪರಮ ಸತ್ಯವು ಯಾವುದು? ತನ್ನೆಡೆಗೆ ವಶ್ಯತೆಯನ್ನೂ ಆತ್ಮ ಸಮರ್ಪಣೆಯನ್ನೂ ತಾನು ಮಾಡುವ ಯಜ್ಞವೆಂದು ತಿಳಿದುಕೊಂಡು, ವಿಚಾರಾತ್ಮಕತೆಯಿಂದ ಬರುವ ದಾನಿಗೆ ಇವನು ಕೊಡುವುದಾದರೂ ಏನನ್ನು? ಇವನು ತರುವುದು ಚಿನ್ನ, ಕುದುರೆ, ದನ ಕರುಗಳನ್ನೋ, ದಿವ್ಯತರವಾದ ಯಾವುದಾದರೂ ಐಶ್ವರ್ಯವನ್ನೋ?

ಯಜ್ಞಾಗ್ನಿಯು ಈ ಕರ್ತವ್ಯಗಳನ್ನು ನೆರವೇರಿಸಲಾರದು ; ಹಾಗೇ ಅದೆಂದೂ ಭೌತಿಕ ಜ್ವಾಲೆ, ಜಡ ಉಷ್ಣತಾ ತತ್ವ ಮತ್ತು ಬೆಳಕು ಎನ್ನಿಸಲಾರದು. ಆದರೂ ಉದ್ದಕ್ಕೂ ಯಜ್ಞಾಗ್ನಿಯ ಸಂಕೇತವನ್ನು ಇಟ್ಟುಕೊಂಡೆ ಹೋಗಲಾಗಿದೆ : ಇದರಿಂದ ಸ್ಪಷ್ಟವಾಗುವುದೇನೆಂದರೆ: ನಮ್ಮೆದುರು ಒಂದು ಯೌಗಿಕ ಸಾಂಕೇತಿಕತೆಯಿದೆ: ಅದರ ಪ್ರಕಾರ ಬೆಂಕಿ, ಯಾಗ,ಪೂಜಕ ಎಂಬಿವೆಲ್ಲಾ ಅಗಾಧತರ ಉಪದೇಶದ ಹೊರ ಅಲಂಕಾರಗಳು ಮಾತ್ರ ; ಹೀಗಿದ್ದರೂ ಈ ಅಲಂಕಾರಗಳನ್ನು ಇಟ್ಟುಕೊಳ್ಳುವುದು ಅಗತ್ಯ ಮತ್ತು ಇವುಗಳನ್ನು ಸತತವಾಗಿ ಮುಂದಿಟ್ಟುಕೊಳ್ಳುವುದು ಅವಶ್ಯಕ ಎಂಬ (ನಿರ್ಧಾರತ್ಮಕ) ಆಲೋಚನೆ ಋಷಿಗಳಲ್ಲಿತ್ತು ಎನ್ನಬೇಕಾಗುತ್ತದೆ.

ಉಪನಿಷತ್ತುಗಳ ಆದಿಮ ವೇದಾಂತ ಬೋಧೆಯಲ್ಲಿ ಎಷ್ಟೋಸಲ ವೇದ-ಸೂತ್ರಗಳಿಂದಾಯ್ದು ಕೊಂಡು ವ್ಯಕ್ತಪಡಿಸಿದ ಪರಮಸತ್ಯಕಲ್ಪನೆಯನ್ನು ಕಾಣುತ್ತೇವೆ. ಸತ್ಯಂ ಋತಂ ಬೃಹತ್ತೆಂಬುದು ಹಾಗೆ ವೇದಸೂಕ್ತಗಳಿಂದಾಯ್ದ ಒಂದು ಸೂತ್ರ ನಿಯಮ: ಸತ್ಯ=ನಿಜ; ಋತ=ಸರಿಯಾದದ್ದು; ಬೃಹತ್=ವಿಶಾಲವಾದದ್ದು. ವೇದವು ಪರಮಸತ್ಯವನ್ನು (ಪರಮ) ಸುಖಕ್ಕೊಯ್ಯುವ ಮಾರ್ಗ; ಅಮೃತತ್ವವೇ ಪರಮಸುಖ-ಎನ್ನುತ್ತದೆ. ಉಪನಿಷತ್ತುಗಳಲ್ಲೂ ಪರಮಸತ್ಯದ ಮಾರ್ಗದಲ್ಲಿ ನಡೆದೇ ದ್ರಷ್ಟಾರನು ಅಥವಾ ಕವಿಯು ವಿಶ್ವೋತ್ತರ ಸ್ಥಾನವನ್ನು ಮುಟ್ಟುವನು. ಅವನು ಅನೃತಾತೀತನಾಗಿ ಮರ್ತ್ಯತ್ವದಿಂದ ಅಮರ್ತ್ಯತ್ವಕ್ಕೆ ಏರುವನು. ಆದುದರಿಂದ ವೇದ, ವೇದಾಂತಗಳೆರಡರಲ್ಲೂ ಉಕ್ತ ಐಕ್ಯೈಕ ಕಲ್ಪನೆ ಇದೆ ಎಂದು ಭಾವಿಸಲು ನಮಗೆ ಹಕ್ಕಿದೆ.

ಈ ಮಾನಸ ಶಾಸ್ತ್ರೀಯ ಸತ್ಯಕಲ್ಪನೆಯು ದಿವ್ಯ ಸಾರದ ಸತ್ಯ-ಮರ್ತ್ಯ ಸಂವೇದನೆಯ ಸತ್ಯವಲ್ಲ-ಮರ್ತ್ಯಲೋಕದ ಆಭಾಸಿಕ ಸತ್ಯವಲ್ಲ. ಅದು ಸತ್ಯಂ=ಅಸ್ತಿತ್ವದ ಸತ್ಯ, ಇರುವಿಕೆಯ

ನನ್ನಿ. ಆಗುವಿಕೆಯ (ತನ್ನ ಕಾರ್ಯದ)ರೂಪದಲ್ಲಿ ಅದು ಋತ(ಸರಿ, ಕ್ರಮಬದ್ಧ, ನ್ಯಾಯ್ಯ): ಎಂದರೆ ಅದು ದಿವ್ಯಾಸ್ತಿತ್ವದ ಸತ್ಯ-ದೇಹಮನಗಳ ಸರಿಯಾದ ಕರ್ಮವನ್ನು ನಿಯಂತ್ರಿಸುವ ಕರ್ತೃ. ಅದು ಬೃಹತ್=ವಿಶ್ವವ್ಯಾಪಕ ಸತ್ಯ, ಅನಂತದಿಂದ (ಅಪ್ರಮೇಯದಿಂದ)ಕುರೂಪಕ್ಕಿಳಿಯದೆ ನೇರವಾಗಿ ಸಾಗುವ ಸತ್ಯ. ತತ್ಸಹಜವಾದ ಪ್ರಜ್ಞೆಯೂ ಅನಾದಿಮಧ್ಯಾಂತ, ದೇಶಕಾಲಾದ್ಯನವಚ್ಛಿನ್ನ. ಬೃಹತ್ತಿಗೆ ವಿರುದ್ಧವಾದುದು ಅಲ್ಪ (ಚಿಕ್ಕದು); ಬೃಹತ್ತು ಭೂಮಾ (ದೊಡ್ಡದ್ದು). ಈ ಮಾನಸೋತ್ತರ ಪದಾರ್ಥಕ್ಕೆ ಅಥವಾ ಪರಮಸತ್ಯ ಪ್ರಜ್ಞೆಗೆ ಮಹಸ್ಸೆಂಬುದಿನ್ನೊಂದು ಹೆಸರು. ಮಹಸ್ಸೆಂದರೂ ದೊಡ್ಡದು, ವಿಶಾಲವಾದುದು ಎಂದೇ ಅರ್ಥ. ಸಂವೇದನೆ ಮತ್ತು ತೋರಿಕೆಗಳ ಸಂಗತಿಗಳಾದರೋ ಎಲ್ಲಾ ಸುಳ್ಳು (ಅನೃತ=ಋತವಲ್ಲದುದು); ಸುಳ್ಳೆಂದರೆ ಮನೋದೈಹಿಕ ಕಾರ್ಯಗಳಲ್ಲಿ ಮಾಡುವ ಸತ್ಯದ ಅಪಾನ್ವಯ. ಪಂಚೇಂದ್ರಿಯಗಳು ಇಲ್ಲಿ ನಮಗೆ ಸಾಧನಗಳು; ಇಂದ್ರಿಯಾಧೃತ ಮನಸ್ಸು ಸಾಧನ; ಅವುಗಳ ಸಾಕ್ಷಿಯನ್ನಾಧರಿಸಿ ಕೆಲಸ ಮಾಡುವ ಬುದ್ಧಿಯೂ ಸಾಧನ. ಇಂದ್ರಿಯ,ಮನ, ಬುದ್ಧಿಗಳು ಹೀಗೆ ಅಸತ್ಯಪ್ರಜ್ಞಾ ಸಾಧನಗಳಾದರೆ, ದೃಷ್ಟಿ, ಶ್ರುತಿ, ವಿವೇಕಗಳು (ಸತ್ಯದ ನೇರವಾದ ದರ್ಶನ, ಅದರ ಶಬ್ದದ ನೇರವಾದ ಶ್ರವಣ ಮತ್ತು ಅದರ ನೇರವಾದ ಋತಾನೃತಭೇಧ ಪ್ರಜ್ಞೆ) ಸತ್ಯ ಪ್ರಜ್ಞಾ ಸಾಧನಗಳು. ಯಾರಿಗೆ ಈ ಸತ್ಯ ಪ್ರಜ್ಞೆ ಇದೆಯೋ ಅಥವಾ ತದನುಗುಣ ಸಾಧನಗಳ ಕೆಲಸಕ್ಕೆ ಯಾರು ಅವಕಾಶ ಕೊಡುವರೋ ಅವನೇ ಋಷಿ, ಅವನೇ ಕವಿ (ಮುನಿ ಅಥವಾ ದ್ರಷ್ಟಾರ). ವೇದದ ಈ ಪ್ರಥಮ ಸೂಕ್ತಕ್ಕೆ ಸತ್ಯ ಮತ್ತು ಋತಗಳೆಂಬಿವೇ ತದ್ಗತ ಸತ್ಯದ ಅರ್ಥಗಳು ಎಂದು ನಾವು ಅನ್ವಯಿಸಿಕೊಳ್ಳಬೇಕು[೧].

ವೇದದಲ್ಲಿ ಯಾವಾಗಲೂ ಅಗ್ನಿ ಎಂಬ ಪದವನ್ನು ಬಳಸಿದಲ್ಲೆಲ್ಲಾ ಬಲಪ್ರಯೋಗ ಅಥವಾ ಬಲಾತ್ಕಾರ ಮತ್ತು ಬೆಳಕು ಎಂಬ ದ್ವಂದ್ವಾರ್ಥ ಇದ್ದೇ ಇರುತ್ತದೆ. ಅವನು ಜಗನ್ನಿರ್ಮಾಪಕನಾದ ಸರಭಸ ದಿವ್ಯಶಕ್ತಿ, ಪೂರ್ಣ ಪ್ರಜ್ಞೆಯಿಂದಲೇ ಯಾವಾಗಲೂ ವರ್ತಿಸುವ ಶಕ್ತಿ; ಏಕೆಂದರೆ ಅಗ್ನಿಯು ಜಾತವೇದಸ್=ಎಲ್ಲ ಜನ್ಮಗಳನ್ನು ಬಲ್ಲವನು; ವಿಶ್ವಾನಿ ವಯುನಾನಿ ವಿದ್ವಾನ್=ಭೌತಿಕ ಅವತಾರ (ಅಭಿವ್ಯಕ್ತಿ) ಅಥವಾ ಘಟನೆಗಳೆಲ್ಲವನ್ನೂ ತಿಳಿದವನು ಅಥವಾ ಅವನ ಹತ್ತಿರ ದಿವ್ಯವಿವೇಕದ ಎಲ್ಲರೂಪಗಳೂ ಕ್ರಿಯೆಗಳೂ ಇವೆ. ಇಷ್ಟೇ ಅಲ್ಲದೆ, ದೇವತೆಗಳೆಲ್ಲರೂ ಸೇರಿ ಮರ್ತ್ಯರ ನಡುವೆ ಅಮರ್ತ್ಯನೆಂದು ಸ್ಥಾಪಿಸಿದ್ದಾಗಿ ಪದೇ ಪದೇ ಹೇಳಲಾಗಿದೆ. ಅವನು ಮಾನವನಲ್ಲಿ ಇರುವ ದಿವ್ಯಶಕ್ತಿ-ಮಾನವನಲ್ಲಿ ದೇವತೆಗಳು ಮಾಡುವ ಕೆಲಸದ ಪೂರಯಿಕೆಯ ಶಕ್ತಿಯೇ ಅಗ್ನಿ: ಈ ಕೆಲಸವೇ ಯಜ್ಞ.

ಮಾನಸಶಾಸ್ತ್ರೀಯವಾಗಿ, ಈಗ ದಿವ್ಯವಿವೇಕದಿಂದ ಪೂರ್ಣ ಸ್ಫೂರ್ತಿ ಪಡೆದ ದಿವ್ಯ ಸಂಕಲ್ಪ ಎಂದು ಅಗ್ನಿಗೆ ಅರ್ಥವನ್ನು ನಾವು ಹೇಳಬಹುದು; ನಿಜವಾಗಿಯೂ ಅವನು ಆ ದಿವ್ಯ ಸಂಕಲ್ಪವೇ ಆಗಿದ್ದಾನೆ-ಅದೇ ಸತ್ಯಪ್ರಜ್ಞೆಯ ಕ್ರಿಯಾಶೀಲ ಅಥವಾ ಪರಿಣಾಮಕರ ಶಕ್ತಿ. "ಕವಿಕ್ರತುಃ" ಎಂಬ ಪದದ ಸ್ಪಷ್ಟಾರ್ಥವಿದೇ-ಅವನ ಕ್ರಿಯಾಶೀಲ ಸಂಕಲ್ಪ ಅಥವಾ ಪರಿಣಾಮಕರ ಶಕ್ತಿಯು ದ್ರಷ್ಟಾರನದೇ ಎಂದರ್ಥ. ಅವನು ಅಪಾನ್ವಯರಹಿತವಾದ ಅಥವಾ ತಪ್ಪಿಲ್ಲದ ರೀತಿಯಿಂದ ಸತ್ಯಪ್ರಜ್ಞೆಯಿಂದ ಬಂದ ಜ್ಞಾನದಂತೆ ವರ್ತಿಸುತ್ತಾನೆ. ಮುಂದೆ ಬರುವ ವಿಶೇಷಣಗಳು ಈ ಅರ್ಥವಿವರಣೆಯನ್ನು

---

೧. ಸತ್ಯದ ಕ್ರಿಯಾ ಶಕ್ತಿಯೇ ಋತವಾದುದರಿಂದ ಸತ್ಯವೆಂಬ ಪದದಲ್ಲಿ ಋತಾರ್ಥವು ಗರ್ಭೀಕೃತವಾಗಿದೆ. ಸತ್ಯವೆಂದರೆ ಜ್ಞಾನಕ್ರಿಯೆಗಳ ಒಂದು ಸಂಯುಕ್ತ; ಹೀಗೆ ತಿಳಿದಾಗ ಋತವೆಂದರೆ ಸತ್ಯವೆಂದೂ ಅರ್ಥೈಸಬಹುದು. ಈ ಅರ್ಧನಾರೀಶ್ವರದಲ್ಲಿ ಸತ್ಯವು ಜ್ಞಾನಶಕ್ತಿ. (ಅನುವಾದಕ).

ದೃಢಪಡಿಸುತ್ತವೆ. ಅಗ್ನಿಯು ಸತ್ಯ=ತನ್ನ ಅಸ್ತಿತ್ವದಲ್ಲಿ ನಿಜ. ತನ್ನ ಸತ್ಯವನ್ನು ಸಂಪೂರ್ಣವಾಗಿ ಸ್ವಾಧೀನ ಮಾಡಿಕೊಂಡಿರುವವನು. ವಸ್ತುಗಳ ಈ ಸಾರಭೂತವಾದ ಸತ್ಯವು ಎಲ್ಲಕಾರ್ಯದಲ್ಲೂ ಬಲಪ್ರಯೋಗದ ಎಲ್ಲ ಚಲನೆಯಲ್ಲೂ ಅವನಿಗೆ ಅದನ್ನು ಸಮಗ್ರವಾಗಿ ಬಳಸುವ ಶಕ್ತಿಯನ್ನು ಕೊಡುತ್ತದೆ. ಅವನಲ್ಲಿ ಸತ್ಯವೂ ಇದೆ, ಋತವೂ ಇದೆ. ಅಲ್ಲದೆ, ಅವನು ಚಿತ್ರಶ್ರವಸ್ತಮನು-ಋತದಿಂದ ಪೂರ್ಣಸ್ವರೂಪದ ಕಾರ್ಯವನ್ನು ಮಾಡಲು ಬೇಕಾದ ಶಕ್ತಿಯನ್ನು ಕೊಡುವ ಶ್ರೀಮಂತವೂ ಉಜ್ವಲವೂ ವಿವಿಧವೂ ಆದ ಸ್ಫೂರ್ತಿಗಳ ಪೂರ್ಣತೆಯನ್ನವನು ಪಡೆಯುವನು. ಇವೆಲ್ಲಾ ಹೋತೃಸ್ಥಾನದಲ್ಲಿರುವ ಅಗ್ನಿಯ ವಿಶೇಷಣಗಳು; ಹೋತೃವು ಯಜ್ಞದ ಅರ್ಚಕ, ಯಜ್ಞಕ್ಕೆ ಆಹುತಿಹಾಕುವವನು (ಆಹುತಿ ಹಾಕಲು ದೇವತೆಗಳನ್ನು ಆಮಂತ್ರಿಸುವವನು). ಆದುದರಿಂದ ಯಜ್ಞವು ಸಂಕೇತಿಸಿದ ಅಪಸ್ಸಿನಲ್ಲಿ ಅಥವಾ ಕರ್ಮದಲ್ಲಿ ಇರುವ ಸತ್ಯವನ್ನು ಅನ್ವಯಿಸುವ ಅಗ್ನಿಶಕ್ತಿಯೇ ಹೋತೃತ್ವ.[೧] ಆ ಸ್ಥಾನದಿಂದಲೇ ಅವನು ಮಾನವನಿಗೆ ಆಮಂತ್ರಣೀಯ ನಾಗುತ್ತಾನೆ; ಮಾನವನ ಪರವಾಗಿ ಅವನು ದೇವತೆಗಳನ್ನು ಆಹುತಿ ತೆಗೆದುಕೊಳ್ಳಲು ಕರೆಯಬೇಕಾದರೆ ಅವನನ್ನು ಮೊದಲು ಮಾನವ ಕರೆಯಬೇಕು.[೨] ಅಂತರ್ಯಜ್ಞದಲ್ಲಿ ಒಳಗಿರುವ ಬೆಳಕಿನ ಹಾಗೂ ಬಲದ ಏಕೀಕೃತ ರಭಸಕ್ಕೂ ಇರುವ ಪ್ರಾಮುಖ್ಯವು ಬಹಿರ್ಯಜ್ಞಾಗ್ನಿಯ ಪ್ರಾಮುಖ್ಯಕ್ಕೆ ಸರಿಸಮವಾಗಿದೆ. ಅಂತರ್ಯಜ್ಞದಲ್ಲಿ ಮರ್ತ್ಯಾಮರ್ತ್ಯರ ಸಂಪರ್ಕ ಹಾಗೂ ಅಂತರ್ವಿನಿಮಯವು ನಡೆಯುತ್ತದೆ. ಇತರ ಕಡೆಗಳಲ್ಲಿ ಅಗ್ನಿಯನ್ನು ಅಂಥ ಸಂಪರ್ಕ ಹಾಗೂ ವಿನಿಮಯಗಳ ರಾಯಭಾರಿ (ದೂತ) ಎಂದು ಕರೆಯಲಾಗಿದೆ.

ಯಜ್ಞದಲ್ಲಿ ಯಾವ ಪಾತ್ರವಹಿಸಲು ಅಗ್ನಿಯನ್ನು ಆಮಂತ್ರಿಸಲಾಗುತ್ತದೆ ಎಂಬುದೀಗ ನಮಗೆ ಸ್ಪಷ್ಟವಾಗುತ್ತದೆ. "ದೇವನಾದ ಅವನು ಇತರ ದೇವರುಗಳೊಡನೆ ಬರಲಿ" ಎಂಬ ಪುನರುಕ್ತಿಯಿಂದ ಒತ್ತಿ ಹೇಳಿದ್ದು ("ದೇವೋ ದೇವೇಭಿರಾಗಮತ್") ಅಗ್ನಿಯನ್ನು ಯಾವಾಗಲೂ ಮಾನವಾಂತರ್ಗತ ದೇವನೆಂದೂ ಮರ್ತ್ಯಾಂತರ್ಗತ ಅಮರ್ತ್ಯನೆಂದೂ ದಿವ್ಯಾತಿಥಿಯೆಂದೂ ಕರೆದದ್ದು ನೆನಪಾದಾಗ ಗೊತ್ತಾಗುತ್ತದೆ. "ದಿವ್ಯಶಕ್ತಿಯಾದ ಅವನು ದಿವ್ಯಶಕ್ತಿಗಳೊಡನೆ ಬರಲಿ" ಎಂದು ಭಾಷಾಂತರಿಸಿದರೆ ನಾವು ಉಕ್ತ ಋಕ್‌ಪಂಕ್ತಿಯ ಪೂರ್ಣ ಮಾನಸ ಶಾಸ್ತ್ರೀಯ ಅರ್ಥವನ್ನು ಹೇಳಿದಂತಾಗುತ್ತದೆ. ವೇದದ ಬಾಹ್ಯಾರ್ಥದಲ್ಲಿ ದೇವತೆಗಳೆಲ್ಲರೂ ವಿಶ್ವಜನೀನ ನಿಸರ್ಗ ಶಕ್ತಿಗಳ ವ್ಯಕ್ತೀಕೃತ ರೂಪಗಳು; ನಿಸರ್ಗದ ವ್ಯಕ್ತಿನಿಷ್ಠ ಚಟುವಟಿಕೆಗಳಲ್ಲಿ ಅವುಗಳೆಲ್ಲಾ ಅದರ ಸಂಕಲ್ಪ, ಮನಸ್ಸು ಮುಂತಾದವುಗಳು. ಆದರೆ ವೇದದಲ್ಲಿ ಯಾವಾಗಲೂ ಈ ಶಕ್ತಿಗಳ ಮಾನವ್ಯ ಅಥವಾ ಮಾನಸ ಕ್ರಿಯೆಗಳಿಗೂ(ಮನುಷ್ವತ್) ಮತ್ತು ದಿವ್ಯಕ್ರಿಯೆಗಳಿಗೂ ವ್ಯತ್ಯಾಸವಿದ್ದೇ ಇದೆ. ಆ ಶಕ್ತಿಗಳ ಮಾನಸಿಕ ಕ್ರಿಯೆಗಳನ್ನು ಅಂತರ್ ಯಜ್ಞದಲ್ಲಿ ಮನುಷ್ಯನು ಸರಿಯಾಗಿ ಬಳಸಿಕೊಂಡರೆ ಅವುಗಳನ್ನು ಅವುಗಳ ನಿಜವಾದ ಅಥವಾ ದಿವ್ಯ ಸ್ವಭಾವಕ್ಕೆ ಪರಿವರ್ತಿಸಿ ಮರ್ತ್ಯತ್ವದಿಂದ ಅಮರ್ತ್ಯತ್ವಕ್ಕೆ ಏರಬಹುದು-ಎಂದು ನಂಬಲಾಗಿದೆ. ಹೀಗೆ ಋಭುಗಳು ಮೊದಲು ಮನುಷ್ಯ ವ್ಯಕ್ತಿಗಳೋ ಅಥವಾ ಮಾನುಷ ಮನಃ ಶಕ್ತಿಗಳ ಪ್ರತಿನಿಧಿಗಳೋ ಆಗಿದ್ದು ತಮ್ಮ ಕ್ರಿಯಾಸಮಗ್ರತೆಯಿಂದ (ಸುಕೃತ್ಯಯಾ, ಸ್ವಪಸ್ಯಯಾ") ದಿವ್ಯವೂ ಅಮರ್ತ್ಯವೂ ಆದ ಶಕ್ತಿಗಳಾದರು. ಮಾನವನು ಸತತವಾಗಿ ದೈವೀ

---

೧. ಅನುವಾದಕ ಮಾಡಿದ ತಾತ್ಪರ್ಯ, ಏಕೆಂದರೆ ಸಾಕ್ಷಾತ್ತಾಗಿ ಆಹುತಿ ಹಾಕುವವನು ಹೋತೃವಲ್ಲ-ಅಧ್ವರ್ಯು.

೨. ಅನುವಾದಕ ಮಾಡಿದ ತಾತ್ಪರ್ಯ, ಏಕೆಂದರೆ ಅವನು ಮಾನವಾಹ್ವಾನದ ಕರ್ತಾರನಲ್ಲ. ಮಾನವನು ದೇವತಾಹ್ವಾನಕ್ಕಾಗಿ ಇಟ್ಟುಕೊಂಡ ಪುರೋಹಿತ (ಪ್ರಾತಿನಿಧಿಕ ಅರ್ಚಕ).

ಶಕ್ತಿಗೆ ತನ್ನನ್ನು ಸಮರ್ಪಿಸಿಕೊಳ್ಳುವುದನ್ನೂ ದೈವೀ ಶಕ್ತಿಯು ಸತತವಾಗಿ ಮಾನವನಲ್ಲಿ ಇಳಿದು ಬರುತ್ತಿರುವುದನ್ನೂ ಯಜ್ಞದಲ್ಲಿ ಸೂಚಿಸಿರುವಂತೆ ತೋರುತ್ತದೆ.

ಹೀಗೆ ಪಡೆದುಕೊಂಡ ಅಮೃತತ್ವವು ಸತತಸುಖ ಅಥವಾ ಆನಂದ: ಅದು ಪೂರ್ಣ ಸತ್ಯ ಮತ್ತು ಪೂರ್ಣಋತಗಳನ್ನು ಆಧರಿಸಿದೆ ಎಂದು ಭಾವಿಸಲಾಗಿದೆ. ಈ ಅರ್ಥದಲ್ಲಿ ಮುಂದಿನ ಋಕ್ಕನ್ನು ಅರ್ಥಮಾಡಿಕೊಳ್ಳಬೇಕು: "ನೀನು ದಾನಿಗೆ ಮಾಡುವ ಒಳಿತು (ಸುಖವು) ಎಂಬುದೇ - ಓ ಅಗ್ನಿಯೇ-ನಿನ್ನ ಸತ್ಯ". ಇನ್ನೊಂದು ರೀತಿಯಿಂದ ಹೇಳುವುದಾದರೆ, ಅಗ್ನಿರೂಪದಲ್ಲಿರುವ ಸತ್ಯದ ಸಾರವು ಕೇಡಿನಿಂದ ಮುಕ್ತವಾಗುವಿಕೆಯೇ-ಅಗ್ನಿಯ ಸ್ವಭಾವವೇ ಅದು. ಅದೇ ಪೂರ್ಣಸುಖ, ಪೂರ್ಣ ಒಳಿತುಗಳು ಋತದಲ್ಲಿವೆ. ಅಗ್ನಿಯ ಕಾರ್ಯದ ಮೂಲಕ ಮಾನವನು, ಯಜ್ಞಾಹುತಿಯನ್ನು ಸಮರ್ಪಿಸಿದ ಮೇಲೆ ಅವನಲ್ಲಿ ಪೂರ್ಣಸುಖ-ಆನಂದ[೧] ಉಂಟಾಗುವುವು-ಅಗ್ನಿಯು ದಿವ್ಯಾರ್ಚಕ; ಮಾನವನು ಮರ್ತ್ಯ. ಭದ್ರವೆಂಬ ಪದಕ್ಕೆ ಒಳಿತೆಂದರ್ಥ-ಯಾವ ಬಗೆಯ ಒಳಿತಾದರೂ ಸರಿಯೆ; ಅದು ಶುಭವಾಚಕ ಪದ, ಸುಖಾರ್ಥಕ-ಅದಕ್ಕೆ ಯಾವ ಆಳವಾದ ಅರ್ಥವೂ ಇಲ್ಲ. ಆದರೆ ವೇದದಲ್ಲಿ ಭದ್ರ ಪದದ ಬಳಕೆಯು ವಿಶಿಷ್ಟವಾಗಿರುವುದು ಕಂಡು ಬರುತ್ತದೆ; ಋತಕ್ಕೆ ಹೇಗೋ ಹಾಗೇ ಭದ್ರಕ್ಕೂ ಅರ್ಥಚ್ಛಾಯೆ ಸ್ವಲ್ಪ ಭಿನ್ನವಾಗಿದೆ. ಋಗ್ವೇದದ V ೮೨, ೪-೫ ಸೂಕ್ತಗಳಲ್ಲಿ ಋತೇತರವಾದ ದುಃಸ್ವಪ್ನ, ದುರಿತ, ದುರ್ಮಾರ್ಗಗಮನ, ಸಮಗ್ರದೌಷ್ಟ್ಯ, ನರಳಾಟ-ಎಂಬ ಅರ್ಥಗಳಿಗೆ ವಿರುದ್ಧವಾದ ಅರ್ಥದಲ್ಲಿ ಭದ್ರ ಪದವು ಪ್ರಯುಕ್ತವಾಗಿದೆ; ಭದ್ರವೆಂದರೆ ಸುವಿತ ಅಥವಾ ನ್ಯಾಯಮಾರ್ಗದಲ್ಲಿ ವರ್ತಿಸುವುದು-ಅಂದರೆ-ಋತಸ್ವರೂಪದ ಪೂರ್ಣಸತ್ಯಕ್ಕೆ ಸೇರಿದ ಎಲ್ಲ ಒಳಿತೂ ಸುಖವೂ ಅದೇ; ಅದೇ ಮಯಸ್ ಅಥವಾ ಸುಖ, ಸೌಲಭ್ಯ. ಪರಮಸತ್ಯಪ್ರಜ್ಞೆಯನ್ನು ಪ್ರತಿನಿಧಿಸುವ ದೇವತೆಗಳೆಲ್ಲಾ ಮಯೋಭುವರು- ಸೌಲಭ್ಯವನ್ನು (ಸುಖವನ್ನು, ಸೌಕರ್ಯವನ್ನು) ತಮ್ಮ ಅಸ್ತಿತ್ವದಲ್ಲಿಯೇ ತರುವಂಥವರು. ಹೀಗೆ ವೇದದ ಪ್ರತಿಯೊಂದು ಭಾಗವೂ ಸರಿಯಾಗಿ ತಿಳಿದುಕೊಂಡಾಗ ಇತರ ಪ್ರತಿಯೊಂದು ಭಾಗದ ಮೇಲೂ ಬೆಳಕು ಬೀರುತ್ತದೆ. ನಾವು ಅದರ ಮುಸುಕುಗಳಿಂದ ತಪ್ಪುದಾರಿ ಹಿಡಿದಾಗ ಮಾತ್ರ ಅದರಲ್ಲಿ ಅಸಮನ್ವಿತತೆಯನ್ನು ಕಾಣುವೆವು.

ಮುಂದಿನ ಋಕ್ಕಿನಲ್ಲಿ ಪರಿಣಾಮಕರವಾದ ಯಜ್ಞದ ಶರ್ತವನ್ನು (ನಿಕಷವನ್ನು) ಹೇಳಿರುವಂತೆ ತೋರುತ್ತದೆ. ಅದಾವ ಒರೆಗಲ್ಲು? ಅದಾವ ಉಪಾಧಿ? ದಿನದಿನವೂ ಹಗಲಿರುಳೂ ಸತತವಾಗಿ ಮಾನವಗತ ವಿಚಾರವು ವಶವರ್ತಿತ್ವ, ಆರಾಧನೆ, ಸ್ವಾತ್ಮ- ಸಮರ್ಪಣೆಗಳೊಂದಿಗೆ ಅಗ್ನಿಪ್ರತಿನಿಹಿತವಾದ ದಿವ್ಯ ಸಂಕಲ್ಪ ಮತ್ತು ದಿವ್ಯ ವಿವೇಕಗಳನ್ನು ಆಶ್ರಯಿಸುವುದೇ ಆ ನಿಕಷ, ಶರ್ತ. " ನಕ್ತೋಷಾಸಾ"= ರಾತ್ರಿ ಹಗಲುಗಳೂ ಸಂಕೇತಗಳು; ಉಳಿದ ವೈದಿಕ ದೇವತೆಗಳೆಲ್ಲಾ ಹಾಗೇ ಸಂಕೇತಗಳೇ ಅಲ್ಲವೇ? ಆದ್ದರಿಂದ ಅದರರ್ಥವು ಸ್ಪಷ್ಟಾಸ್ಪಷ್ಟವೆಂಬ ಭೇದವಿಲ್ಲದೆ ಪ್ರಜ್ಞೆಯ ಎಲ್ಲಾ ಸ್ತರಗಳಲ್ಲೂ ಸತತವಾದ ದೇವಾಧೀನತಾಭಾವ ಮತ್ತು ದೇವ ನಿಯಂತ್ರಣಕ್ಕೆ ಎಲ್ಲ ಚಟುವಟಿಕೆಗಳೂ ಒಳಪಟ್ಟಿರುವುದರ ಸ್ಮರಣೆ ಜಾಗರಿತವಾಗಿರಬೇಕು-ಎಂದಿರುವುದಾಗಿ ತೋರುತ್ತದೆ.

ಏಕೆಂದರೆ, ಅಗ್ನಿಯು ಹಗಲು ರಾತ್ರಿಗಳ ಭೇದವಿಲ್ಲದೆ ಯಜ್ಞಗಳಲ್ಲಿ ರಾರಾಜಿಸುತ್ತಾನೆ; ಅವನು ಪರಮಸತ್ಯದ ರಕ್ಷಕ, ಮಾನವಗತ ಪರಮಋತದ ಕಾವಲುಗಾರ. ಅದನ್ನು ಆತನು ಅಂಧಕಾರ

೧. ಪೂರ್ಣಸುಖ, ಪೂರ್ಣಒಳಿತು, ಪೂರ್ಣ ಆನಂದ, ಅಮೃತತ್ವ, ಕೇಡಿನಿಂದ ಶಾಶ್ವತ ಮುಕ್ತಿ ಎಂಬ ಪದಸಂಹತಿಗಳ ಅರ್ಥಸಾರವು ಋತ-ಸತ್ಯಗಳ ಅರ್ಥಸಾರದಂತೆ ಪರಮಪದವೆಂದೇ. "ದಿವ್ಯಜೀವನ" ದಲ್ಲಿ ತತ್ಸಮವಾಗಿ ಅತಿಮಾನಸವಾದ ಸತ್ಯ, ಸೌಂದರ್ಯ, ಸೌಜನ್ಯಗಳು ಉಕ್ತ(ಅನುವಾದಕ).

ಶಕ್ತಿಗಳ ಆಕ್ರಮಣದಿಂದ ಕಾಯುತ್ತಾನೆ; ಮನದ ಅಸ್ಪಷ್ಟವೂ ಬದ್ಧವೂ (ಆಕ್ರಾಂತವೂ) ಆದ ಸ್ಥಿತಿಗಳಲ್ಲಿಯೂ ಅವನು ಉಜ್ವಲವಾಗಿ ಪ್ರಕಾಶಪಡಿಸುತ್ತಾನೆ. ಹೀಗೆ ಎಂಟನೆಯ ಋಕ್ಕಿನಲ್ಲಿ ಸೂಚಿತವಾದ ಕಲ್ಪನೆಗಳು ಋಗ್ವೇದದಲ್ಲಿರುವ ಎಲ್ಲ ಅಗ್ನಿಸೂಕ್ತಗಳಲ್ಲಿಯೂ ಸತತವಾಗಿ ಕಂಡು ಬರುತ್ತವೆ.

ಕೊನೆಯದಾಗಿ ಅಗ್ನಿಯು ಸ್ವಗೃಹದಲ್ಲಿ ವರ್ಧಮಾನನೆಂದು ಉಕ್ತವಾಗಿದೆ. ವೈದಿಕ ಗೃಹಸ್ಥನ ಅಗ್ನಿಶಾಲೆಯೆಂಬ ಕೋಣೆಯೇ ಅಗ್ನಿಯ ಸ್ವಗೃಹ ಎಂಬ ಅರ್ಥದಿಂದ ನಾವು ತೃಪ್ತರಾಗಲಾರೆವು. ವೇದದಲ್ಲಿಯೇ ಸ್ವಗೃಹದ (=ಸ್ವೇದಮೇ) ಅನ್ವಾರ್ಥವನ್ನು ಹುಡುಕಬೇಕು; ಮೊದಲ ಮಂಡಲದ ೭೫ ನೆಯ ಸೂಕ್ತದಲ್ಲಿ ಆ ಅನ್ವಾರ್ಥ ನಮಗೆ ಸಿಕ್ಕುತ್ತದೆ;

**ಯಜಾನೋ ಮಿತ್ರಾವರುಣಾ ಯಜಾ ದೇವಾನ್ ಋತಂ ಬೃಹತ್,**

**ಅಗ್ನೇ ಯಕ್ಷಿ ಸ್ವಂ ದಮಂ.** (I-೭೫-೫)

"ಮಿತ್ರ-ವರುಣರಾದ ನಮಗಾಗಿ ಯಜ್ಞ ಮಾಡು; ದೇವತೆಗಳಿಗಾಗಿ ಯಜ್ಞಮಾಡು; ಪರಮಸತ್ಯಕ್ಕಾಗಿ ಯಾಗ ಮಾಡು, ಅಪ್ರಮೇಯ ವಿಸ್ತಾರಕ್ಕಾಗಿ ಮಾಡು; ಎಲೈ ಅಗ್ನಿಯೇ ನಿನ್ನ ಮನೆಗಾಗಿ ಯಜ್ಞಮಾಡು."

ಇಲ್ಲಿ "ಋತಂ ಬೃಹತ್ ಸ್ವಂ ದಮಂ" ಎಂಬಿವು ಯಜ್ಞದ ಗುರಿಯನ್ನು ವ್ಯಕ್ತ ಪಡಿಸುವಂತೆ ತೋರುತ್ತದೆ. ವೇದದ ಪ್ರತಿಮಾವಳಿ(ಅಲಂಕಾರೋಕ್ತಿಗಳು) ಸೂಚಿಸುವ ಅರ್ಥಕ್ಕೆ ಇದು ಸಂಪೂರ್ಣವಾಗಿ ಹೊಂದುತ್ತದೆ. ವೇದವು ಯಜ್ಞವೆಂಬುದು ದೇವೋನ್ಮುಖವಾದ ಪ್ರಯಾಣ, ಮಾನವನು ಸತ್ಯದೆಡೆಗೆ ಪಯಣ ಮಾಡುವವನು, ಸತ್ಯವು ಜ್ಯೋತಿಸ್ ಅಥವಾ (ಮಂಗಲಕರ ಬೆಳಕು) ಪರಮಸುಖ ಆದುದರಿಂದ ಪರಮ ಸತ್ಯ, ಪರಮವೈಶಾಲ್ಯ (ವಿಸ್ತಾರ) ಮತ್ತು ಅಗ್ನಿಯ ಸ್ವಗೃಹ ಎಂಬೀಯೆಲ್ಲವೂ ಒಂದೇ. ಅಗ್ನಿಯೂ ಇತರ ದೇವತೆಗಳೂ ಸತ್ಯಜಾತರೆಂದೂ ಪರಮವೈಶಾಲ್ಯ ನಿವಾಸಿಗಳೆಂದೂ (ಪರಂಧಾಮವಾಸಿಗಳೆಂದೂ) ಪದೇ ಪದೇ ವೇದದಲ್ಲಿ ಹೇಳಲಾಗಿದೆ. ನಾವೆತ್ತಿಕೊಂಡ ಸೂಕ್ತಗಳಲ್ಲಿ-ಮಾನವಾಂತರ್ಗತ ದಿವ್ಯ ಸಂಕಲ್ಪ ಮತ್ತು ದಿವ್ಯ ಶಕ್ತಿಗಳು, ಪರಮ ಸತ್ಯ ಪ್ರಜ್ಞೆಯಲ್ಲಿ ಹೆಚ್ಚಾಗುವುವು; ಪರಮ ಸತ್ಯ ಪ್ರಜ್ಞೆಯು ಅವುಗಳ ಉಚಿತ ವಲಯ-ಅಲ್ಲಿ ಅನೃತೋಪಾಧಿಗಳು ಮುರಿದು ಹೋಗುವುವು(ಕೃತಕಮಿತಿಗಳು ಅಳಿದು ಹೋಗುವುವು)-ಯಾವುದರಲ್ಲಿ?" ಉ ರೌ.....ಅನಿಬಾಧೇ" = ವಿಸ್ತಾರವೂ ಅಸೀಮವೂ ಆದ ಸ್ಥಾನದಲ್ಲಿ.

ಈ ಪ್ರಕಾರ ವೇದದ ಮೊದಲ ಈ ನಾಲ್ಕು ಋಕ್ಕುಗಳಲ್ಲಿ ವೈದಿಕ ಋಷಿಗಳ ಮುಖ್ಯ ವಿಚಾರಗಳಾದ (೧) ದಿವ್ಯವಾದ ಅತಿಮಾನಸ (ಸುಪ್ರಮಾನಸ) ಸತ್ಯ ಪ್ರಜ್ಞೆಯ ಕಲ್ಪನೆ; (೨) ಮರ್ತ್ಯ ಮಾನಸವನ್ನು ಅನೃತಗಳಿಂದ ಮೇಲೆತ್ತಲು ಪರಮ ಸತ್ಯಪ್ರಜ್ಞೆಯ ಶಕ್ತಿಗಳೇ ಅವುಗಳೆಂದು ತಿಳಿದು ದೇವತೆಗಳನ್ನು ಆಮಂತ್ರಿಸುವುದು; (೩) ಈ ಪರಮಸತ್ಯದಿಂದ ಮತ್ತು ಈ ಪರಮಸತ್ಯದಲ್ಲಿ ಪರಮಸೌಜನ್ಯವನ್ನೂ ಪರಮಸುಖವನ್ನೂ ಪಡೆಯುವುದು; (೪) ದಿವ್ಯ ಸಂತೃಪ್ತಿಗಾಗಿ (ದಿವ್ಯ ಪರಿಪೂರ್ಣತೆಗಾಗಿ, ದಿವ್ಯ ಪೂರ್ಣೀಕರಣಕ್ಕಾಗಿ) ಇರುವ ಸಾಧನವೆಂದರೆ ಅಂತರ್ಯಜ್ಞ ಮತ್ತು ಪ್ರತಿಯೊಬ್ಬ ಮರ್ತ್ಯನೂ ಅಮರ್ತ್ಯಕ್ಕೆ ತಾನೇನಾಗಿರುವನೋ ಅದನ್ನು ಮತ್ತು ತನ್ನಲ್ಲಿರುವುದೆಲ್ಲವನ್ನು ಆಹುತಿಯನ್ನಾಗಿ ಕೊಡುವುದು ಎಂಬಿವೇ ಆಗಿರುವ ಪ್ರಾಥಮಿಕ ಸೂಚನೆಗಳನ್ನು ಪಡೆಯುತ್ತೇವೆ. ವೇದದ ಆಧ್ಯಾತ್ಮಿಕ ಮುಖಗಳಲ್ಲಿ ಮಿಕ್ಕ ಎಲ್ಲ ವೈದಿಕ ವಿಚಾರಗಳೂ ಈ ಕೇಂದ್ರ ವಿಚಾರಗಳ ಸುತ್ತಲೂ ತಿರುಗುವಂತೆ ವರ್ಣೀಕರಿಸಲಾಗಿದೆ.

❖ ❖

ಅಧ್ಯಾಯ-೨

# ವರುಣ-ಮಿತ್ರ ಮತ್ತು ಪರಮಸತ್ಯ

ವೇದದ ಪ್ರಾರಂಭದ ಸೂಕ್ತದಲ್ಲಿಯೇ ಪರಮಸತ್ಯದ ಕಲ್ಪನೆಯನ್ನು ನಾವು ಕಂಡುಹಿಡಿದದ್ದು ನಿಜವಾದರೆ, ಆ ಸತ್ಯವು ವಾಸ್ತವಿಕವಾಗಿ ನಾವೆಣಿಸಿದ ಹೂರಣವನ್ನು ಹೊಂದಿರುವುದು ನಿಜವಾದರೆ, ಅಮೃತತ್ವಕ್ಕೆ ಅಥವಾ ಪರಮ ಸಾಯುಜ್ಯಕ್ಕೆ ಆ ಹೂರಣದಲ್ಲಿರುವ ಅತಿಮಾನಸ ಪ್ರಜ್ಞೆಯು ಅನಿವಾರ್ಯ ಸಾಧನ ಎಂಬುದು ನಿಜವಾದರೆ, ಮತ್ತು ಇದು ವೈದಿಕ ಋಷಿಗಳ ಪ್ರಧಾನ ವಿಚಾರವೆಂಬುದು ಹೌದಾದರೆ, ಇತರ ಹಾಗೂ ಅವಲಂಬಿತ ಮಾನಸಶಾಸ್ತ್ರೀಯ ಸಾಕ್ಷಾತ್ಕಾರಗಳಿಗೆ ಕೇಂದ್ರವಾಗಿ ಇದು ಸೂಕ್ತಗಳಲ್ಲಿ ಉದ್ದಕ್ಕೂ ಪುನರುಕ್ತವಾಗಿರುವುದನ್ನು ನಾವು ಕಂಡೇ ಕಾಣುವೆವೆಂಬುದು ಖಂಡಿತ. ಇಂದ್ರ-ವಾಯುಗಳನ್ನು ಸಂಬೋಧಿಸಿ ಮಧುಚ್ಛಂದಸ್ ಋಷಿಯು ಹೇಳಿದ ಮುಂದಿನ ಸೂಕ್ತದಲ್ಲಿಯೇ (ಆ ಸೂಕ್ತದ ಕೊನೆಯ ಮೂರು ಋಕ್ಕುಗಳಲ್ಲಿಯೇ)-ಅದರ ಒಂದು ಅನುಚ್ಛೇದದಲ್ಲಿಯೇ - ಇನ್ನೂ ಹೆಚ್ಚು ಸ್ಪಷ್ಟವಾಗಿಯೂ ಅಜಯ್ಯವಾಗಿರುವ ಮಾನಸಶಾಸ್ತ್ರೀಯ ಸೂಚನೆಗಳ ಮೂಲಕವಾಗಿಯೂ ಋತ ವಿಚಾರವು ಅಗ್ನಿ ಸೂಕ್ತದಲ್ಲಿರುವುದಕ್ಕಿಂತ ಹೆಚ್ಚು ರಭಸಾವೇಶದಿಂದ ಪ್ರತಿಪಾದಿತವಾಗಿದೆ:

**ಮಿತ್ರಂ ಹುವೇ ಪೂತದಕ್ಷಂ, ವರುಣಂ ಚ ರಿಶಾದಸಂ,**
**ಧಿಯಂ ಘೃತಾಚೀಂ ಸಾಧಂತಾ ॥**
**ಋತೇನ ಮಿತ್ರಾವರುಣಾ, ಋತಾವೃಧಾ ಋತಸ್ಪೃಶಾ,**
**ಕ್ರತುಂ ಬೃಹಂತಂ ಆಶಾಥೇ ।**
**ಕವೀನೋ ಮಿತ್ರಾವರುಣಾ, ತುವಿಜಾತಾ ಉರುಕ್ಷಯಾ,**
**ದಕ್ಷಂ ದಧಾತೇ ಅಪಸಂ ॥**

ಈ ಅವತರಣಿಕೆಯಲ್ಲಿರುವ ಮೊದಲ ಋಕ್ಕಿನಲ್ಲಿ ಬರುವ ದಕ್ಷ ಪದಕ್ಕೆ ಸಾಯಣನು ಸಾಮಾನ್ಯವಾಗಿ ಬಲಿಷ್ಠ ಎಂದು ಅರ್ಥ ಹೇಳುತ್ತಾನೆ, ಆದರದು ಮಾನಸ ಶಾಸ್ತ್ರೀಯ ಅರ್ಥವನ್ನು ಕೊಡಬಲ್ಲದು. ಘೃತಾಚೀ ಎಂಬ ಗುಣವಾಚಕ ರೂಪದಲ್ಲಿರುವ ಘೃತಶಬ್ದವು ಮುಖ್ಯ ಮತ್ತು "ಧಿಯಂಘೃತಾಚೀಂ" ಎಂಬ ಪದಸಂಹತಿಯೂ ಗಮನಾರ್ಹ. ಈ ಋಕ್ಕನ್ನು ಅಕ್ಷರಶಃ ಹೀಗೆ ಭಾಷಾಂತರಿಸಬಹುದು : "ಪವಿತ್ರೀಕೃತ ಬಲವನ್ನು ಅಥವಾ ದೃಷ್ಟಿಯನ್ನು ತಳೆದ ಮಿತ್ರನನ್ನು ಮತ್ತು ನಮ್ಮ ಹಗೆಗಳನ್ನು ನಾಶಮಾಡಿ ನಮ್ಮಲ್ಲಿಯ ಪ್ರಕಾಶಮಯ ತಿಳಿವನ್ನು ಪೂರ್ಣಗೊಳಿಸುವ ವರುಣನನ್ನು ನಾನು ಆಹ್ವಾನಿಸುತ್ತೇನೆ."

ಎರಡನೆಯ ಋಕ್ಕಿನಲ್ಲಿ ಮೂರು ಸಾರಿ ಋತಶಬ್ದವು ಪುನರುಕ್ತವಾಗಿದೆ ಮತ್ತು ಬೃಹತ್ ಹಾಗೂ ಕ್ರತು ಶಬ್ದಗಳು ಪ್ರಯುಕ್ತವಾಗಿವೆ : ಈ ಎರಡು ಪದಗಳಿಗೂ ನಾವು ವೇದದ ಮಾನಸಶಾಸ್ತ್ರೀಯ ಅರ್ಥದ ಗಣನೀಯ ಪ್ರಾಮುಖ್ಯವನ್ನು ಕೊಟ್ಟಿದ್ದೇವೆ. ಕ್ರತು=ಯಜ್ಞಕರ್ಮ ಅಥವಾ ಪರಿಣಾಮಕರವಾದ ಶಕ್ತಿ. "ಯಜ್ಞಂ ಬೃಹಂತಂ ಆಶಾಥೇ" ಎಂಬ ಇನ್ನೊಂದು ಸೂಕ್ತ ಭಾಗವು ತತ್ಸದೃಶವಾಗಿದೆ. ಮಿತ್ರ-ವರುಣರು ಪರಮ ಸತ್ಯದಿಂದ ಮಹಾಯಾಗವನ್ನು ಪಡೆದು ಸೃಜಿಸಿದರು. ಆದರೀ ಅರ್ಥವು ಇದಮಿತ್ಥಂ ಅಲ್ಲ. ಏಕೆಂದರೆ, ಒಂದರಲ್ಲಿ ಯಜ್ಞವೇ ಅರ್ಥವೆಂದಾದರೆ ಇನ್ನೊಂದರಲ್ಲಿ ಯಜ್ಞವನ್ನು ಪರಿಣಾಮಗೊಳಿಸುವ ಶಕ್ತಿ ಎಂದು ಅರ್ಥ. ಉಕ್ತ ಋಕ್ಕನ್ನು ಹೀಗೆ ಅಕ್ಷರಶಃ ಅನುವಾದಿಸಬಹುದು : "ಪರಮಸತ್ಯದ ದೆಸೆಯಿಂದ ಸತ್ಯಸಂವರ್ಧನರೂ ಸತ್ಯಸಂಸ್ಪರ್ಶಕರೂ ಆದ ಮಿತ್ರ-ವರುಣರು ಮಹಾಕಾರ್ಯವೊಂದನ್ನು ಸಾಧಿಸಿದರು" ಅಥವಾ "ಒಂದು ಮಹಾಶಕ್ತಿಯನ್ನು ಪಡೆದರು."

ಕೊನೆಯಲ್ಲಿ, ಮೂರನೆಯ ಋಕ್ಕಿನಲ್ಲಿ ಮತ್ತೆ ದಕ್ಷಶಬ್ದ ಬಂದಿದೆ. ಮಧುಚ್ಛಂದಸ್ಸು ಆಗಲೇ ಕವಿಯನ್ನು (ದ್ರಷ್ಟಾರನನ್ನು) ಕ್ರತು (ಕೆಲಸ ಅಥವಾ ಸಂಕಲ್ಪ) ಎಂಬ ಪದದೊಡನೆ ಜೋಡಿಸಿ ಜಟ್ಟಿದ್ದನ್ನು ನಾವು ಕಂಡಿದ್ದೇವೆ. ಪರಮಸತ್ಯದ ಅರ್ಥ ನಮಗೆ ಗೊತ್ತಾಗಿದೆ ; "ಉರುಕ್ಷಯ" ಎಂಬಲ್ಲಿ "ಉರು" ಎಂದರೆ ಅಗಲ ಅಥವಾ ವಿಶಾಲ (ಬಹುಶಃ ಅದು ಬೃಹತ್ತಿಗೆ ಸಮಾನಾರ್ಥಕವಾಗಿದ್ದೀತು) ಎಂಬುದನ್ನು ಪ್ರಪಂಚವನ್ನು ಅಥವಾ ಪರಮಸತ್ಯಪ್ರಜ್ಞಾಸ್ತರವನ್ನು ವರ್ಣಿಸಲು ಬಳಸಿದ ಪದವಾಗಿರಬೇಕು. ಪರಮಸತ್ಯವೇ ಅಗ್ನಿಯ "ಸ್ವಗೃಹ". ನಾನು ಉಕ್ತ ಋಕ್ಕನ್ನು ಅಕ್ಷರಶಃ ಹೀಗೆ ಅನುವಾದಿಸುತ್ತೇನೆ :-

"ಋಷಿಗಳಾದ ಮತ್ತು ಯಮಳರಾಗಿ ಹುಟ್ಟಿದ ಹಾಗೂ ವಿಶಾಲ ಗೃಹವುಳ್ಳ ಮಿತ್ರ - ವರುಣರೇ, ನಮಗಾಗಿ ಕಾರ್ಯಕರ ಶಕ್ತಿಯನ್ನು (ಅಥವಾ ಸೂಕ್ಷ್ಮಜ್ಞತೆಯನ್ನು) ಎತ್ತಿ ಹಿಡಿಯಿರಿ."

ಪ್ರಥಮ ಸೂಕ್ತದಲ್ಲಿ ನಾವು ಕಂಡಂತೆಯೇ, ಕಂಡು ಸಿದ್ಧಮಾಡಿದಂತೆಯೇ, ಈ ಉಪಚ್ಛೇದದಲ್ಲಿ, ಎರಡನೆಯ ಸೂಕ್ತದ ಅವತರಣಿಕೆಯಲ್ಲಿ, ಅದೇ ವಿಚಾರಾನುಕ್ರಮವೂ ಅದೇ ಬಹುಸಂಖ್ಯಾತ ಅಭಿವ್ಯಂಜಕ ಪದಗಳೂ ಕಂಡುಬರುವುದು ಒಮ್ಮೆಲೇ ಸ್ಪಷ್ಟವಾಗುತ್ತದೆ. ಆದರೆ ಇಲ್ಲಿ ಅವುಗಳ ಅನ್ವಯವು ಪ್ರತ್ಯೇಕ ; ಅಲ್ಲದೆ, ಪವಿತ್ರೀಕೃತ ಸೂಕ್ಷ್ಮಜ್ಞತೆ, ಸಂಪದ್‌ಭರಿತ ಪ್ರಕಾಶವುಳ್ಳ ತಿಳಿವಳಿಕೆ ("ಧಿಯಂ ಘೃತಾಚೀಂ") ಎಂಬ ಕಲ್ಪನೆಗಳು ಮತ್ತು ಯಜ್ಞಕರ್ಮದಲ್ಲಿ ಪರಮಸತ್ಯದ ಕೆಲಸ ("ಅಪಸ್") ಮತ್ತು ಹೊಸ ನ್ಯಾಯವಾದ ಅರ್ಥನಿಷ್ಪತ್ತಿತೆಯನ್ನು ಋಷಿಗಳ ಕೇಂದ್ರ ಭಾವನೆಗಳನ್ನು ಹೆಚ್ಚು ಸ್ಪಷ್ಟ ಮಾಡುವುದಕ್ಕೆಂದು ಬಳಸಿರುವುದು-ಇಲ್ಲಿ ಸ್ಪಷ್ಟ.

ಈ ಭಾಗದಲ್ಲಿ "ದಕ್ಷ" ಎಂಬ ಪದದ ಅರ್ಥವು ಸಂದಿಗ್ಧವಾಗಿದೆ ; ಸಾಯಣ ಇದನ್ನು ಬಲ ಎಂದು ಭಾಷಾಂತರಿಸಿದ್ದಾನೆ. ತನ್ನ ಬಾಂಧವ ಪದಗಳಂತೆಯೇ ಅದು "ದಶ್, ದಿಶ್, ದಹ್" ಎಂಬ ಧಾತುಗಳಿಂದ ಹುಟ್ಟಿದೆ. ಈ ಧಾತುಗಳು ಮೊಲತಃ ಆಕ್ರಾಮಕ ಒತ್ತಡ, ಯಾವುದಾದರೂ ಬಗೆಯ ಅಪಾಯ ಎಂಬ ಅರ್ಥವನ್ನು ಸೂಚಿಸುತ್ತವೆ ; ವಿಶೇಷತಃ ವಿಭಾಗ ಮಾಡುವುದು, ಕಡಿದು ತುಂಡು ಮಾಡುವುದು, ಜಜ್ಜುವುದು ಮತ್ತು ಕೆಲವೆಡೆ ಸುಡುವುದು ಎಂಬ ಅರ್ಥಗಳನ್ನು ಹೇಳುತ್ತವೆ. ಬಲಾರ್ಥಕಗಳಾದ ಅನೇಕ ಶಬ್ದಗಳಿಗೆ ಮೂಲತಃ ಅಪಾಯಕಾರಕ ಶಕ್ತಿ, ಮಾರಕ ಯೋಧನ ಆಕ್ರಾಮಕ ಬಲ, ಪ್ರಾಚೀನ ಅನಾಗರಿಕ ಮಾನವನು ತಾನು ಪಿತ್ರಾರ್ಜಿತವಾಗಿ ಪಡೆದುಕೊಂಡು ಜಾಗದಲ್ಲಿ ತನ್ನ ಸ್ಥಳವನ್ನು ಹಿಂಸಾಚಾರದಿಂದ ಹಿಡಿದಿಟ್ಟುಕೊಳ್ಳಲು ಅಗತ್ಯವೆಂದು

ಬಹಳ ಮೆಚ್ಚಿಕೊಂಡ ಸ್ವರೂಪದ ಕಸುವು - ಎಂಬ ಅರ್ಥಗಳಿವೆ. ಈ ಅರ್ಥಸಂಬಂಧವನ್ನು ಸಾಮಾನ್ಯ ಸಂಸ್ಕೃತದ "ಬಲಂ" ಎಂಬ ಪದದಲ್ಲಿ ನಾವು ಕಾಣುತ್ತೇವೆ- ಬಲವೆಂದರೆ ಬಡಿದು ಹಾಕುವ ಬಲಾತ್ಕಾರ. "ಬಲ್ಲೋ" = ನಾನು ಹೊಡೆಯುತ್ತೇನೆ ಮತ್ತು "ಬೆಲೋಸ್"=ಆಯುಧ ಎಂಬ ಗ್ರೀಕ್ ಪದಕುಟುಂಬಕ್ಕೆ ಸಂಸ್ಕೃತದ "ಬಲ" ಸೇರಿದ್ದಾಗಿದೆ.

ಆದರೆ ವಿಭಜನಾರ್ಥಕವಾದ ಉಕ್ತ ಪದದ ಅರ್ಥವು ಭಾಷಾಭಿವೃದ್ಧಿಯ ಮಾನಸಶಾಸ್ತ್ರದಲ್ಲಿ ಕಲ್ಪನೆಗಳ ಪ್ರತ್ಯೇಕ ಕ್ರಮವನ್ನೇ ಅನುಸರಿಸಿತು. ಮಾನಸಿಕ ಕಲ್ಪನೆಗಳನ್ನು ಹೇಳಲು ಪದಗಳು ಬೇಕೆಂದು ಮನುಷ್ಯನಿಗೆ ಎನ್ನಿಸಿದಾಗ ಭೌತಿಕ ಕಾರ್ಯದ ರೂಪಕೋಕ್ತಿಗಳನ್ನು ಮಾನಸಿಕ ಚಲನವಲನಗಳಿಗೆ ಅನ್ವಯಿಸುವುದು ಅವನ ಸಧ್ಯಃಸಿದ್ಧ ಪದ್ಧತಿಯಾಗಿ ಹೋಯಿತು. ಭೌತಿಕವಾದ ವಿಭಜನೆಯ ಅಥವಾ ಪ್ರತ್ಯೇಕೀಕರಣದ ಕಲ್ಪನೆಯನ್ನು ಹೀಗೆ ಬಳಸಿಕೊಂಡು ಪೃಥಕ್ತ್ವವನ್ನು ಕಲ್ಪಿಸಿಕೊಳ್ಳಲಾಯಿತು. ನೇತ್ರಾರ್ಥದಿಂದ ಪದಾರ್ಥಭೇದವನ್ನು ಗ್ರಹಿಸುವುದು ಪ್ರಥಮ ; ಅನಂತರ ಮಾನಸಕ್ರಿಯೆಯ ಪ್ರತ್ಯೇಕೀಕರಣ-ಸೂಕ್ಷ್ಮಾವಲೋಕನ, ತೀರ್ಪು-ಹೀಗೆ ಮಾನವನ ಚೇತನೆ ವಿಕಾಸ ಹೊಂದಲಾರಂಭಿಸಿರಬೇಕು. ವಿದ್ ಎಂಬ ಧಾತುವಿಗೆ ಸಂಸ್ಕೃತದಲ್ಲಿ "ಹುಡುಕಿತೆಗೆ ಅಥವಾ ತಿಳಿ" ಎಂಬ ಅರ್ಥವಿದೆ. ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಅದಕ್ಕೆ ನೋಡೆಂಬ ಅರ್ಥವಿದೆ. ದೃಶ್ (ನೋಡು) ಎಂಬುದರ ಮೂಲಾರ್ಥವು "ತುಂಡುಮಾಡು". ಪಶ್ (ನೋಡು) ಎಂಬುದಕ್ಕೂ ತತ್ಸದೃಶ ಮೂಲವಿದೆ. ಈ ವಿಷಯದಲ್ಲಿ ಮೂರು ನಿಕಟದೇಶೀಯ ಧಾತುಗಳಿವೆ : ೧) ಪಿಶ್ =ನೋಯಿಸು, ಹಾನಿ ಮಾಡು, ಅಪಾಯಕ್ಕೀಡು ಮಾಡು ; ಬಲಿಷ್ಠನಾಗಿರು ; ೨) ಪಿಶ್ = ನೋಯಿಸು, ಅಪಾಯ ಮಾಡು, ಬಲಿಷ್ಠನಾಗಿರು ; ಜಜ್ಜು ; ಕುಟ್ಟ ಪುಡಿಮಾಡು ; ೩) ಪಿಶ್ = ರೂಪಿಸು, ರೂಪತಾಳು ಸಂಘಟಿಸು ; ವಿಘಟಿತವಾಗು-ಈಯೆಲ್ಲಾ ಕಲ್ಪನೆಗಳೂ ಮೂಲದ ವಿಶ್ಲೇಷಣ, ವಿಭಜನ, ಭೇದನ, ಕರ್ತನ ಎಂಬ ಕಲ್ಪನೆಯ ಸುಳಿವನ್ನು ಕೊಡುತ್ತವೆ. ಪಿಶ್‌ಧಾತುಜಗಳು : ಪಿಶಾಚ (ದೆವ್ವ), ಪಿಶುನ (ಒಬ್ಬದಿಯಲ್ಲಿ ಕಠಿನ, ಕ್ರೂರ, ದುಷ್ಟ ವಿಶ್ವಾಸ ಘಾತಕ, ಅಪಪ್ರಚಾರಶೀಲ) - ಇವೆಲ್ಲಾ ಹಿಂಸಾರ್ಥಮೂಲವುಳ್ಳವುಗಳು ; ಇನ್ನೊಂದು ಬದಿಯಲ್ಲಿ ಪಿಶ್ = ಸೂಚಕ, ಅಭಿವ್ಯಂಜಕ (ಆವಿರ್ಭಾವಿಕ), ಪ್ರದರ್ಶಕ, ಸ್ಪಷ್ಟಕಾರಕ-ಎಂದು ವ್ಯತ್ಯಾಸಾರ್ಥಮೂಲವಾದ ಪದನಿರ್ಮಾಣಕ್ಕೆ ಕಾರಣವಾಯಿತು. ಆದ್ದರಿಂದ ಕೃತ್=ಹಾನಿಗೊಳಿಸು, ಹಿಂಸಿಸು, ವಿಭಜಿಸು, ಹರಡು ಎಂಬುದು ಗ್ರೀಕಿನಲ್ಲಿ ಕೃನೋ=ನಾನು ಬೇರ್ಪಡಿಸುತ್ತೇನೆ, ಆಯುತ್ತೇನೆ, ತೀರ್ಮಾನಿಸುತ್ತೇನೆ, ನಿಷ್ಕೃಷ್ಟಗೊಳಿಸುತ್ತೇನೆ-ಎಂದಾಗುತ್ತದೆ. ದಕ್ಷಕ್ಕೂ ಇಂಥ ಚರಿತ್ರೆ ಇದೆ. ಅದು ದಶ್ ಧಾತುವಿನ ಸಂಬಂಧಿಕ. ಲ್ಯಾಟಿನ್ನಿನಲ್ಲಿ "ದೋಸಿಯೋ" = ನಾನು ಕಲಿಸುತ್ತೇನೆ ಮತ್ತು ಗ್ರೀಕಿನಲ್ಲಿ "ದೋಕೆಯೋ'= ನಾನು ಆಲೋಚಿಸುತ್ತೇನೆ, ನಿರ್ಣಯಿಸುತ್ತೇನೆ, ಗಮನಿಸುತ್ತೇನೆ ಮತ್ತು "ದೋಕಾಜೋ"=ನಾನು ಸೂಕ್ಷ್ಮವಾಗಿ ನೋಡುತ್ತೇನೆ, ನಾನು ಈ ಅಭಿಪ್ರಾಯವುಳ್ಳವ-ನಾಗಿದ್ದೇನೆ. ಹೀಗೇ ತತ್ಸಂಬಂಧಿಯಾಗಿರುವ "ದಿಶ್" ಧಾತುವಿಗೆ ಎತ್ತಿ ತೋರಿಸು, ಕಲಿಸು ಎಂದೂ ಗ್ರೀಕಿನಲ್ಲಿ "ದೆಯಿಕ್-ನುಮಿ" ಎಂದೂ ಅರ್ಥವಿದೆ. ಗ್ರೀಕಿನ "ದೋಕ್ಷವು" ದಕ್ಷಾರ್ಥಕವೆಂದೇ ಹೇಳಬಹುದು ; ಗ್ರೀಕಿನ "ದೋಕ್ಷ" = ಅಭಿಪ್ರಾಯ, ತೀರ್ಪು ಮತ್ತು "ದೆಕ್ಸಿಕೋಸ್" = ಚತುರ, ನಿಪುಣ, ಬಲಗೈ ಎಂದಾಗುತ್ತದೆ. ಸಂಸ್ಕೃತದಲ್ಲಿ "ದಕ್ಷ್" ಎಂದರೆ ಹಿಂಸಿಸು, ಕೊಲ್ಲು ಎಂದೂ ಸಮರ್ಥನಾಗು, ಶಕ್ತನಾಗು ಎಂದಾಗುವುದಲ್ಲದೆ, ಅದರ ಗುಣವಾಚಕವಾದ ದಕ್ಷಕ್ಕೆ ಕುಶಲ, ಚತುರ, ಸಮರ್ಥ, ಅರ್ಹ, ಜಾಗರಿತ, ಅವಧಾನಿ ಎಂಬ ಅರ್ಥಗಳಿವೆ ; ದಕ್ಷಿಣ = ನಿಷ್ಣಾತ, ಕುಶಲ, ಬಲಗೈ = 'ದೆಕ್ಸಿಯೋಸ್" ಮತ್ತು ದಕ್ಷ ಎಂಬ ನಾಮಪದಕ್ಕೆ = ಬಲ, ದೌಷ್ಟ್ಯ (ಹಿಂಸಾರ್ಥದಲ್ಲಿ), ಮಾನಸಿಕ

ದಕ್ಷತೆ ಅಥವಾ ಯೋಗ್ಯತೆ ಎಂದು ತತ್ಕುಟುಂಬಸ್ಥ ಇತರ ಪದಗಳಾಗಿರುವಂಥ ಅರ್ಥಗಳಿವೆ. "ದಶಾ" ಎಂಬುದನ್ನೂ ನಾವಿಲ್ಲಿ ಹೋಲಿಸಬಹುದು : ದಶಾ = ಮನಸ್ಸು, ತಿಳಿವಳಿಕೆ. ಈಯೆಲ್ಲ ಸಾಕ್ಷಿಗಳೂ ಒಟ್ಟಾದರೆ - ದಕ್ಷಪದವು ಒಮ್ಮೆ ಸೂಕ್ಷ್ಮಾವಲೋಕನ, ನ್ಯಾಯನಿರ್ಣಯ, ವಿವೇಚಕ ವಿಚಾರ ಶಕ್ತಿ ಮತ್ತು ಅದರ ಕಾರಣವಾದ ಮಾನಸಿಕ ಶಕ್ತಿ ಎಂಬುದು ಮಾನಸಿಕ ವಿಭಜನಶೀಲ ಎಂಬುದರಿಂದಲ್ಲದೆ ಮನಸ್ಸಿನ ಶಕ್ತಿಗೆ ಭೌತಿಕ ಬಲವನ್ನು ಸ್ಥಾನಾಂತರಗೊಳಿಸಿದ್ದರಿಂದಲ್ಲ - ಎಂಬುದು ಸಾಕಷ್ಟು ಸ್ಪಷ್ಟವಾಗಿ ಗೋಚರಿಸುತ್ತದೆ.

ಆದುದರಿಂದ ವೇದದ ದಕ್ಷಪದಕ್ಕೆ ಅರ್ಥತ್ರಯವಿರುವ ಸಾಧ್ಯತೆಯಿದೆ : ೧) ಸಾಮಾನ್ಯವಾಗಿ ಬಲ, ಮನಃಶಕ್ತಿ, ವಿಶೇಷತಃ ನಿರ್ಣಾಯಕ ಶಕ್ತಿ, ಸೂಕ್ಷ್ಮಾವಲೋಕನ; ೨) ದಕ್ಷಪದವು ಯಾವಾಗಲೂ ಕ್ರತುಪದದೊಡನೆ ಬರುತ್ತದೆ : "ದಕ್ಷಾಯ ಕ್ರತ್ವೇ"=ಸಾಮರ್ಥ್ಯ ಮತ್ತು ಪರಿಣಾಮಕರ ಶಕ್ತಿ ಎಂದಾಗಬಹುದು. ಸತತವಾಗಿ ಮಾನಸಕ್ರಿಯೆಗಳಿಗೆ ಸಂಬಂಧಿಸಿಯೇ ಇಡೀ ಸಂದರ್ಭದಲ್ಲಿ ದಕ್ಷಪದವು ವಿವಿಧ ಉಪಚ್ಛೇದಗಳಲ್ಲಿ ಬರುವುದುಂಟು ; ೩) ಕೊನೆಯದಾಗಿ, ದಕ್ಷಿಣೆ ಎಂಬ ದೇವಿಯ ಉಲ್ಲೇಖವಿದೆ ; ಅವಳು ದಕ್ಷನ ನಾರೀರೂಪವಾಗಿರಬಹುದು - ದಕ್ಷನೇ ಸ್ವತಃ ಒಬ್ಬ ದೇವತೆ ; ಪುರಾಣಗಳಲ್ಲಿ ಆಮೇಲೆ ಅವನು ಪ್ರಜಾಪತಿಗಳಲ್ಲೊಬ್ಬ : ಪ್ರಜಾಪತಿಯೆಂದರೆ ಮೂಲ ಜನಕ ಎಂದರ್ಥ. ಜ್ಞಾನಾವಿರ್ಭಾವಕ್ಕೆ ದಕ್ಷಿಣೆ ಸಂಬಂಧಿಸಿದ್ದಾಳೆ ; ಕೆಲವೊಮ್ಮೆ ದಕ್ಷಿಣೆ ಎಂದರೆ ದಿವ್ಯೋಷಃ ಕಾಲ ದೇವತೆ ಎಂದೇ ಹೇಳಲಾಗಿದೆ ; ಉಷೆಯು ಪ್ರಕಾಶದಾತ್ರಿ. ಹೆಚ್ಚು ಪ್ರಸಿದ್ಧಳಾದ ಇಳೆಯಂತೆಯೇ ಹಾಗೇ ಸರಸ್ವತೀ ಸರಮೆಯರಂತೆಯೇ ನಾಲ್ಕು ದೇವಿಯರಲ್ಲಿ ಒಬ್ಬಳು. ಈ ನಾಲ್ವರು ಪರಮಸತ್ಯಪ್ರಜ್ಞೆಯ ಅಥವಾ ಋತದ ನಾಲ್ಕು ಕ್ರಿಯಾಶಕ್ತಿಗಳಾಗಿ ಪ್ರತಿನಿಹಿತರಾಗಿದ್ದಾರೆ. ಇಳೆ=ಸತ್ಯದರ್ಶನ ಅಥವಾ ಸತ್ಯಾವಿರ್ಭಾವ ; ಸರಸ್ವತೀ = ಸತ್ಯಶ್ರವಣ ಅಥವಾ ಸತ್ಯಸ್ಫುರಣ, ಅರ್ಥಾತ್ ದಿವ್ಯಶಬ್ದ ; ಸರಮೆ = ದಿವ್ಯ ಪ್ರತಿಭೆ (ಪಳಚ್ಚನೆ ಹೊಳೆಯಿಸುವ ಶಕ್ತಿ) ಮತ್ತು ದಕ್ಷಿಣೆ= ವಿಭಾಜಕ ಪ್ರಾತಿಭ ವಿವೇಕ. ಈಗ ದಕ್ಷ ಎಂದರೆ ವಿವೇಕ, ಪ್ರತ್ಯೇಕೀಕರಣ - ಆ ಯುಕ್ತಾಯುಕ್ತ ವಿವೇಕವು ಮಾನಸಸ್ತರದಲ್ಲಿ ಮಾನಸಿಕ ನ್ಯಾಯನಿರ್ಧಾರವಾದೀತು; ಋತಸ್ತರದಲ್ಲಿ ಪ್ರಾತಿಭ ಸೂಕ್ಷ್ಮಾವಲೋಕನ ಎಂದಾದೀತು.

ನಾವು ತೆಗೆದುಕೊಂಡಿರುವ ಮೂರು ಋಕ್ಕುಗಳು ಒಂದು ಸೂಕ್ತದ ಕೊನೆಯ ಅನುಚ್ಛೇದ. ಆ ಸೂಕ್ತದ ಮೊದಲ ಮೂರು ಋಕ್ಕುಗಳು ವಾಯುವನ್ನು ಮಾತ್ರ ಸಂಬೋಧಿಸುತ್ತವೆ ; ಮುಂದಿನ ಮೂರು ಇಂದ್ರ-ವಾಯುಗಳನ್ನೊಟ್ಟಾಗಿ ಕರೆಯುತ್ತವೆ. ಸೂಕ್ತಗಳ ಮಾನಸಶಾಸ್ತ್ರೀಯ ವ್ಯಾಖ್ಯಾನುಸಾರವಾಗಿ ಇಂದ್ರನು ದಿವ್ಯ ಮನಃಶಕ್ತಿ, ಇಂದ್ರಿಯವೆಂಬ ಇಂದ್ರಿಯಶಕ್ತಿಬೋಧಕ ಪದವು ಇಂದ್ರಪದಜನ್ಯ. ಅವನ ವಿಶಿಷ್ಟ ರಾಜ್ಯವು ಸ್ವರ್=ಸೂರ್ಯ ಅಥವಾ ಪ್ರಕಾಶಲೋಕ - ಅದು ಸೂರ ಮತ್ತು ಸೂರ್ಯಪದಗಳಿಗೆ ಬಂಧು. ಅದು ವೇದದ ಮೂರನೆಯ ವ್ಯಾಹೃತಿ, ಮೂರನೆಯ ವೈದಿಕ ಲೋಕ=ಅಸ್ಪಷ್ಟೀಕರಣಕ್ಕೊಳಪಡದ ಶುದ್ಧಮನಸ್ತತ್ವ. ಸೂರ್ಯನು ಮಾನವ ಮನದಲ್ಲಾಗುವ ಋತಪ್ರಕಾಶನವನ್ನು ಪ್ರತಿನಿಧಿಸುತ್ತಾನೆ ; ಸತ್ಯ ಪ್ರಕಾಶನವನ್ನು ನೇರವಾಗಿ ಸ್ವೀಕರಿಸಬಲ್ಲುದು ಸ್ವರ್ ಎಂಬ ಪ್ರಜ್ಞಾಸ್ತರ (ಮನಸ್ತರ). ವಾಯುವು ಸದಾ ಪ್ರಾಣ ಅಥವಾ ಜೈವಿಕ ಶಕ್ತಿಯೊಡನೆ ಯಾವಾಗಲೂ ಸಂಬಂಧವುಳ್ಳ ದೇವತೆ. ನರಮಂಡಲದ ಎಲ್ಲಾ ಚಟುವಟಿಕೆಗಳೂ ಜೈವಿಕ ಶಕ್ತಿಯಿಂದ ನಡೆಯುತ್ತವೆ. ಅವು ಇಂದ್ರನಿಯಂತ್ರಿತವಾದ ಮಾನಸ ಶಕ್ತಿಗಳನ್ನು ಬೆಂಬಲಿಸುತ್ತವೆ. ಅವುಗಳ ಸಂಯೋಗವು ಮಾನವನ ನೈಸರ್ಗಿಕ ಮನೋಧರ್ಮವೆನ್ನಿಸಿವೆ. ಸೋಮರಸವನ್ನು

ಸ್ವೀಕರಿಸಲೆಂದು ಈ ಉಭಯದೇವತೆಗಳನ್ನು ಒಟ್ಟಿಗೆ ಆಮಂತ್ರಿಸಲಾಗಿದೆ. ಈ ಸೋಮಮದ್ಯವು ಋತದ ಮೂಲಕ (ಸತ್ಯದ ಮೂಲಕ) ಅತಿಮಾನಸ ಪ್ರಜ್ಞೆಯಿಂದ ಮನಸ್ಸಿನೊಳಗೆ ಹರಿದು ಬರುವ ಆನಂದೋದ್ರೇಕ ; ಆನಂದವು ಸತ್ತಾಸ್ವರೂಪದ ದಿವ್ಯ ಸಂತೋಷ. ಈ ಮಾತಿಗೆ ವೇದದಲ್ಲಿ ಬೇಕಾದಷ್ಟು ಪುರಾವೆಗಳಿವೆ-ಅದರಲ್ಲೂ ಋಗ್ವೇದದ ೯ ನೆಯ ಮಂಡಲವಿಡೀ ಇದಕ್ಕೆ ಸಾಕ್ಷಿ. ಈ ಅರ್ಥವಿವರಣೆಗಳನ್ನು ನಾವು ಒಪ್ಪಿದರೆ ಉಕ್ತ ಸೂಕ್ತವನ್ನು ನಾವು ಸುಲಭವಾಗಿ ಅದರ ಮಾನಸಶಾಸ್ತ್ರೀಯ ತಾತ್ಪರ್ಯಕ್ಕೆ ಅನುಗುಣವಾಗಿ ಭಾಷಾಂತರಿಸಬಹುದಾಗಿದೆ.

ಸೋಮರಸದ ಪ್ರವಾಹ ಹರಿದೊಡನೆ ಇಂದ್ರ ವಾಯುಗಳು ಜಾಗರಿತರಾಗುತ್ತಾರೆ. ಎಲ್ಲಿ ? ನಮ್ಮ ಚೇತನೆಯಲ್ಲಿ, ಪ್ರಜ್ಞೆಯಲ್ಲಿ : ಎಂದರೆ ಮನಃಶಕ್ತಿಯೂ ಜೀವಶಕ್ತಿಯೂ ಮಾನವ ಮನೋಧರ್ಮದಲ್ಲಿ ಒಟ್ಟಿಗೆ ಕೆಲಸ ಮಾಡುತ್ತಾ ಆನಂದದ ಅನುಪ್ರವೇಶಕ್ಕೆ ಜಾಗರಿತವಾಗುತ್ತವೆ. ಈ ಆನಂದವು ಅಮೃತ - ಮೇಲಿಂದ ಬಂದ ಸಂತೋಷದ ಹಾಗೂ ಅಮರ್ತ್ಯತೆಯ ಸ್ವರೂಪವುಳ್ಳದ್ದು. ಮನಃಶಕ್ತಿಯೂ ಜೀವಶಕ್ತಿಯೂ ಅದನ್ನು ಮೈತುಂಬಾ ತುಂಬಿಕೊಳ್ಳುವಂತೆ ಉಕ್ತ ದೇವತೆಗಳು ಸ್ವೀಕರಿಸುತ್ತಾರೆ ("ಚೇತಥಃಸುತಾ ನಾಂ ವಾಜಿನೀವಸೂ")[೧] ಹೀಗೆ ಸ್ವೀಕೃತವಾದ ಆನಂದವು ಹೊಸ ಕಾರ್ಯರೂಪವನ್ನು ತಾಳುತ್ತದೆ : ಮರ್ತ್ಯನಲ್ಲಿ ಅಮರ್ತ್ಯ ಚೇತನೆಯನ್ನು ತಯಾರಿಸುವುದೇ ಆ ಕೆಲಸ. ಇಂದ್ರ ಮತ್ತು ವಾಯುಗಳನ್ನು ಆ ಕೆಲಸವನ್ನು ಬೇಗ ಪೂರ್ಣಗೊಳಿಸಲು ಕರೆಯಲಾಗಿದೆ. ಆ ಕೆಲಸಕ್ಕೆ ವಿಚಾರದ ಪಾತ್ರ ಅಗತ್ಯ ("ಆ ಯಾತಂ ಉಪನಿಷ್ಕೃತಂ ಮಕ್ಷು......ಧಿಯಾ")[೨]. ಧೀ ಎಂದರೆ ವಿಚಾರಶಕ್ತಿ, ಬುದ್ಧಿ ಅಥವಾ ತಿಳಿವಳಿಕೆ. ಅದು ಮನುಷ್ಯನ ನೈಸರ್ಗಿಕ ಮನೋಧರ್ಮಕ್ಕೂ ಋತಕ್ಕೂ (ಪರಮಸತ್ಯಪ್ರಜ್ಞೆಗೂ) ನಡುವೆ ಇದೆ : ಇಂದ್ರ-ವಾಯುಗಳ ಸಂಯೋಗವು ಉಕ್ತ ಮನೋಧರ್ಮವನ್ನು ಪ್ರತಿನಿಧಿಸುತ್ತದೆ.

ಈ ಸಂಧಿಯಲ್ಲಿ ವರುಣ-ಮಿತ್ರರು ತಲೆಹಾಕುತ್ತಾರೆ ; ಮತ್ತು ನಮ್ಮ ಅವತರಣಿಕೆ ಆರಂಭವಾಗುತ್ತದೆ. ಮಾನಸಶಾಸ್ತ್ರೀಯ ಸೂಚನೆಯಿಲ್ಲದಾಗ ಸೂಕ್ತದ ಆದ್ಯಂತ ಭಾಗಗಳ ಸಂಬಂಧವು ಬಹಳ ಸ್ಪಷ್ಟವಾಗದು ; ಹಾಗೇ ವರುಣ-ಮಿತ್ರರ ಮತ್ತು ಇಂದ್ರ-ವಾಯುಗಳ ಯಮಳತೆ ಕೂಡಾ ಸ್ಪಷ್ಟವಾಗಿ ಅರ್ಥವಾಗದು. ಉಕ್ತ ಸೂಚನೆಯಿಂದ ಉಕ್ತ ಸಂಬಂಧಗಳು ಸ್ಪಷ್ಟವಾಗುತ್ತವೆ : ನಿಜವಾಗಿ ಅವು ಪರಸ್ಪರಾವಲಂಬಿಗಳಾಗಿರುತ್ತವೆ. ಸೂಕ್ತದ ಮೊದಲಿನ ಮೂರು ಋಕ್ಕುಗಳಲ್ಲಿ ವಾಯುವೊಬ್ಬನನ್ನೇ ಆಮಂತ್ರಿಸಲಾಗಿದೆ. ಜೈವಿಕ ಬಲಾವೇಶಗಳ ತಯಾರಿಕೆಯು ಅವನ ವಿಷಯ. ಅನಂತರ ಇಂದ್ರ-ವಾಯುಗಳಿಂದ ಪ್ರತಿನಿಹಿತವಾದ ಮನೋಧರ್ಮ ಬರುತ್ತದೆ. ಅದು ಬರುವುದು ಮಾನವನಲ್ಲಿರುವ ಪರಮಸತ್ಯಪ್ರಜ್ಞೆಯ ಚಟುವಟಿಕೆಗಳಿಗಾಗಿ. ಸೂಕ್ತಾಂತದಲ್ಲಿ ಬರುವ ವಿಷಯವೆಂದರೆ ಬುದ್ಧಿಯನ್ನು ಪೂರ್ಣತೆಗೊಯ್ಯಲು ಮತ್ತು ಕ್ರಿಯೆಗಳನ್ನು ವಿಸ್ತರಿಸಲು ಮಾನವಮನೋಧರ್ಮದ ಮೇಲೆ ನಡೆಯುವ ಪರಮಸತ್ಯ ಪ್ರಜ್ಞೆಯ ಕ್ರಿಯೆಗಳು. ಮಾನವಮನದಲ್ಲಿ ಮತ್ತು ವೃತ್ತಿಯಲ್ಲಿ ನಡೆಯುವ ಪರಮಸತ್ಯಪ್ರಜ್ಞಾಕ್ರಿಯೆಗಳನ್ನು ನಾಲ್ಕರಲ್ಲಿ ಇಬ್ಬರಾದ ವರುಣ-ಮಿತ್ರರು ಪ್ರತಿನಿಧಿಸುತ್ತಾರೆ.

ವೇದದ ಶೈಲಿಯಲ್ಲಿ ಒಂದು ವಿಚಾರದ ಗರ್ಭದಿಂದ ಇನ್ನೊಂದು ಹೊರಹೊಮ್ಮಿ ಬೆಳೆದು ಬರುವ ಚಲನ ವಲನ ನಡೆಯುವಾಗ ಹಿಂದಿನ ವಿಚಾರ ಚಲನದ ಕೊನೆಯಲ್ಲಿ ಆಗಲೇ ಬಂದಿದ್ದ ಒಂದು ಮುಖ್ಯ ಪದದ ಪುನರುಕ್ತಿಯ ಮೂಲಕ ತತ್ಸಂಬಂಧವನ್ನು ಸೂಚಿಸಲಾಗುತ್ತದೆ. ಪ್ರತಿಧ್ವನಿಯ

೧. I. ೨. ೫.

೨. I. ೨. ೬.

ಮೂಲಕ ಸೂಚಿಸುವ ತತ್ವವು ಎಂದು ಕರೆಯಬಹುದಾದ ಈ ತತ್ವವು ಸರ್ವಸೂಕ್ತ ವ್ಯಾಪಕವಾಗಿದೆ. ಇದು ಎಲ್ಲ ಋಷಿಗಳ ಒಂದು ವಿಶಿಷ್ಟ ಚಟವಾಗಿದೆ. ಧೀಯೆಂಬುದಿಲ್ಲಿ ಸಮುಚ್ಚಾಯಕ ಪದ ; 'ಧೀ' ಎಂದರೆ ವಿಚಾರ ಅಥವಾ ಬುದ್ಧಿ : ಈ ಪದವು 'ಮತಿ'ಯ ಅರ್ಥದಿಂದ ಭಿನ್ನವಾದ ಅರ್ಥವುಳ್ಳದ್ದು. ಮತಿಗೆ ಮೂರರ್ಥಗಳು : ಕೆಲವೊಮ್ಮೆ ಮನಃಸ್ಥಿತಿ ಯಾ ಸಾಮಾನ್ಯ ಮನಃಕ್ರಿಯೆ ; ಕೆಲವೊಮ್ಮೆ ವಿಚಾರವನ್ನೋ, ಭಾವನೆಯನ್ನೋ ಸೂಚಿಸುತ್ತದೆ; ಮತ್ತೆ ಕೆಲವೆಡೆ ಇದಿ ಮನಸ್ಸಿನ ಧರ್ಮವನ್ನು ಸೂಚಿಸುತ್ತದೆ. ಧೀಯಾದರೋ ಯಾವಾಗಲೂ ವೈಚಾರಿಕ ಮನ ಅಥವಾ ಬುದ್ಧಿಯೆಂದೇ ಗ್ರಹಿಸಲ್ಪಡುತ್ತದೆ ; ಅದು ತಿಳಿವಳಿಕೆ ಬೌದ್ಧಿಕ ವಿಚಾರ ಕ್ರಿಯೆಯನ್ನು ಸಂಜ್ಞಾಪಿಸುತ್ತದೆ; ಅದು ಗ್ರಹಣ ಶಕ್ತಿ - ತನ್ನೆಡೆಗೆ ಬಂದದ್ದನ್ನೆಲ್ಲಾ ಹಿಡಿದುಕೊಳ್ಳುತ್ತದೆ. ಅದು ಪ್ರತ್ಯೇಕವಾದ ವೈಯಕ್ತಿಕ ವಿಚಾರ ಯಾ ಬೌದ್ಧಿಕ ಚಟುವಟಿಕೆಗಳ ಸಮೂಹ. ವಿಚಾರದ ಮೂಲಕವೇ (ಪ್ರತಿಯೊಂದನ್ನೂ ಲಕ್ಷಣಿಸಿ ಅದರ ಸರಿಯಾದ ಸ್ಥಾನದಲ್ಲಿ ಇಡುವ ಶಕ್ತಿಯ ಮೂಲಕವೇ[೧]) ನರಮಂಡಲದ ಚಟುವಟಿಕೆಗಳನ್ನು, ನಾಡೀಮಯ ಮನೋಧರ್ಮವನ್ನು, ಪೂರ್ಣಗೊಳಿಸಲು ಇಂದ್ರ-ವಾಯುಗಳನ್ನು ಕರೆಯಲಾಗಿದೆ.- "ನಿಷ್ಕೃತಂ.....ಧಿಯಾ". ಆದರೆ ಈ ಸಾಧನವು, ವಿಚಾರವು, ಸ್ವತಃ ಪರಿಪೂರಣೀಯ-ಸ್ವತಃ ಶ್ರೀಮಂತವಾಗಿ ಮಾಡಲ್ಪಡತಕ್ಕದ್ದಾಗಿದೆ ; ಪರಮಸತ್ಯಪ್ರಜ್ಞೆಯೊಡನೆ ಮನಸ್ಸು ಸ್ವತಂತ್ರ ಸಂಪರ್ಕ ಹೊಂದುವುದಕ್ಕಿಂತ ಮೊದಲೇ-ಅಂಥ ಶಕ್ತಿ ಅದಕ್ಕೆ ದೊರಕುವ ಮೊದಲೇ-ಸ್ವೀಕೃತವಾಗ-ಬೇಕಾಗಿದೆ. ಆದುದರಿಂದ ಪರಮಸತ್ಯಪ್ರಜ್ಞೆಯ ಶಕ್ತಿಗಳಾದ ವರುಣ-ಮಿತ್ರರನ್ನು ಆಮಂತ್ರಿಸಲಾಗಿದೆ-ಶ್ರೀಮಂತ ಪ್ರಕಾಶವುಳ್ಳ ವಿಚಾರ ("ಧಿಯಂ ಘೃತಾಚೀಂ")ವಾಗಿ ಅದು ಅವರಿಂದ ರೂಪಿಸಲ್ಪಡಬೇಕಾಗಿದೆ.

ಘೃತ ಪದ ವೇದದಲ್ಲಿ ಬರುವುದು ಇದೇ ಮೊದಲ ಸಲ. ಅದಿಲ್ಲಿ ಗುಣವಾಚಕವಾಗಿ ಮಾರ್ಪಟ್ಟು ಬಂದಿದೆ. ವೈದಿಕ ಪದವಾದ ಧೀಗೆ ಅದು ವಿಶೇಷಣವಾಗಿ ಬಂದಿರುವುದಿಲ್ಲಿ ಬಹಳ ಮುಖ್ಯ. ಇತರ ಉಪಚ್ಛೇದಗಳಲ್ಲೂ "ಮನಸ್, ಮನೀಷಾ" ಎಂಬ ಪದಗಳೊಡನೆ ಅಥವಾ ವಿಚಾರಕ್ರಿಯೆ ಸೂಚಿತವಾದಲ್ಲೇ ಸತತವಾಗಿ ಬಳಸಲ್ಪಟ್ಟಿದೆ. ಘೃ ಎಂಬ ಧಾತುವಿಗೆ ಬಲವಾದ ಬೆಳಕು (ಹೊಳಪು), ಉಷ್ಣತೆ ಎಂಬರ್ಥವಿದೆ-ಆ ಉರಿಯುವ ಬೆಳಕು ಅಗ್ನಿಸದೃಶ ಯಾ ಸೂರ್ಯಸದೃಶ - ಅದರಲ್ಲೂ ಬೇಸಿಗೆಯ ಸೂರ್ಯನ ಸುಡು ಬಿಸಿಲಿಗೆ ಸದೃಶ. ಅದಕ್ಕೆ ಚಿಮುಕಿಸು ಯಾ ಪವಿತ್ರ ಜಲಸೇಕ ಮಾಡು ಎಂಬ ಗ್ರೀಕ್ "ಬ್ರಿಯೋ" ವಿನ ಅರ್ಥವೂ ಇದೆ. ಅದು ಯಾವ ದ್ರವ ಪದಾರ್ಥವಾಚಕವೂ ಆಗಬಲ್ಲುದು ; ಆದರೆ ಆ ದ್ರವವು ಹೊಳೆವ ದಪ್ಪವಾದ ರಸ. ಹೇಳಬಹುದಾದ ಈ ಎರಡರ್ಥಗಳ ಸಂದಿಗ್ಧತೆಯನ್ನು ವೇದದ ಋಷಿಗಳು ತಮ್ಮ ಅನುಕೂಲಕ್ಕಾಗಿ ಬಳಸಿಕೊಂಡರು : ಬಹಿರ್ಯಜ್ಞದಲ್ಲದು ಶುದ್ಧೀಕೃತ ಬೆಣ್ಣೆ ; ಅಂತರ್ಯಜ್ಞದಲ್ಲಿ ಹೊಳೆಯಿಸಲ್ಪಟ್ಟ ವಿಚಾರದ ಸಾರ, ಆಧಾರ-"ಮೇಧಾ" ಶ್ರೀಮಂತವೂ ಸ್ವಚ್ಛವೂ ಆದ ಬೌದ್ಧಿಕ ಶಕ್ತಿ ಅಥವಾ ಕ್ರಿಯೆ. "ಧಿಯಂ ಘೃತಾಚೀಂ" ಎಂಬುದರಿಂದ ಸುಸಂಪನ್ನವೂ ಪ್ರಕಾಶಮಾನವೂ ಆದ ಮಾನಸಿಕ ಕ್ರಿಯೆ ಎಂಬ ಅರ್ಥ ಉದ್ಭವಿಸುತ್ತದೆ.

ಬುದ್ಧಿಯ ಈ ಸ್ಥಿತಿಯನ್ನು ಪರಿಪೂರ್ಣಗೊಳಿಸುವ ಯಾ ಸಾಧಿಸಿಕೊಡುವ ವರುಣ-ಮಿತ್ರರನ್ನು ಎರಡು ವಿಶೇಷಣಗಳಿಂದ ಎದ್ದು ಕಾಣುವಂತೆ ಮಾಡಲಾಗಿದೆ. ಮಿತ್ರನು ಪೂತದಕ್ಷನು = ಪವಿತ್ರೀಕೃತ ನಿರ್ಧಾರವುಳ್ಳವನು ; ವರುಣನು ರಿಶಾದಸ್= ಎಲ್ಲ ಹಗೆಗಳನ್ನೂ ಯಾ ಬೇಟೆಗಾರರನ್ನೂ ನಾಶ ಮಾಡುವವನು. ವೇದದಲ್ಲಿ ಕೇವಲ ಕಾವ್ಯಶೋಭಾಕರಗಳಾದ

---

೧. "ಧೀ" ಎಂಬ ಧಾತುವಿಗೆ ಗ್ರಹಿಸು ಯಾ ಇಡು, ಇರಿಸು ಎಂದರ್ಥ.

ವಿಶೇಷಣಗಳಲ್ಲ. ಪ್ರತಿಯೊಂದು ಪದವೂ ಯಾವುದಾದರೊಂದು ನಿಷ್ಕೃಷ್ಟಾರ್ಥ ಹೇಳಲು ಯಾ ಆಗಲೇ ಇದ್ದ ಪದದ ಅರ್ಥವನ್ನು ಪುಷ್ಟಗೊಳಿಸಲು ಮತ್ತು ತನ್ನನ್ನು ಬಳಸಿದ ವಾಕ್ಯದ ವಿಚಾರಕ್ಕೆ ಕಟಿಬದ್ಧವಾಗಿ ಸಂಬಂಧಿಸಿರುತ್ತದೆ. ಪರಮಸತ್ಯಪ್ರಜ್ಞೆಯ ಪರಿಪೂರ್ಣ ಪ್ರತಿಫಲಕ ದರ್ಪಣವಾಗಬೇಕಾದರೆ ಬುದ್ಧಿಗೆ ಎರಡು ವಿಘ್ನಗಳು ಎದುರಾಗುತ್ತವೆ. : ೧) ಸೂಕ್ಷ್ಮಾವಲೋಕನದ ಅಶುದ್ಧತೆ ಯಾ ವಿವೇಚಿಸುವ ಶಕ್ತಿಯ ಅಪವಿತ್ರತೆ - ಇದರಿಂದ ಪರಮಸತ್ಯದ ದರ್ಶನದಲ್ಲಿ ಗಲಿಬಿಲಿಯುಂಟಾಗುತ್ತದೆ ; ೨) ಪರಮಸತ್ಯದ ಬೆಳವಣಿಗೆಯ ಪೂರ್ಣಾನ್ವಯವನ್ನು ಮೊಟಕುಗೊಳಿಸಲು ತಲೆಹಾಕುವ ಅನೇಕ ಕಾರಣಗಳು ಯಾ ಪ್ರಭಾವಗಳು - ಅವು ಅದರ ವಿಚಾರ ಸಂಬಂಧಗಳನ್ನೂ ಸಮಶ್ರುತಿಯನ್ನೂ ಒಡೆದು ಹಾಕಿ, ಅದನ್ನು ಅರ್ಥದರಿದ್ರವನ್ನಾಗಿ ಮಾಡಿ, ಅದರ ಒಳ ತಿರುಳನ್ನು ಸುಳ್ಳು ಮಾಡುತ್ತವೆ. ವೇದದ ದೇವತೆಗಳು ಇಲ್ಲಿಗಿಳಿದು ಬಂದ ವಿಶ್ವವ್ಯಾಪಕ ಶಕ್ತಿಗಳು-ಪರಮ ಸತ್ಯ ಪ್ರಜ್ಞೆ ಅವುಗಳ ಮೂಲ ಸ್ಥಳ. ಅವು ಪ್ರಪಂಚಗಳ ಸಾಮಶ್ರುತ್ಯವನ್ನು ಸಾಧಿಸುತ್ತವೆ : ಮತ್ತು ಅವು ಮಾನವನ ಪ್ರಗತಿಶೀಲ ಪೂರ್ಣತ್ವ ಸಾಧನೆಯಲ್ಲಿ ನೆರವೀಯುತ್ತವೆ. ಹಾಗೇ ಅವು ಈ ಗುರಿಗಳನ್ನು ಮುಟ್ಟಲು ಯತ್ನಿಸುವಾಗ ವಿಘ್ನಗಳಾಗಿ ಬರುವ ಮತ್ತು ಆ ಯತ್ನವನ್ನು ಒಡೆಯುವ, ಮಿತಗೊಳಿಸುವ, ತಡೆಹಿಡಿಯುವ ಮತ್ತು ಇಲ್ಲದಂತೆ ಮಾಡುವ ಬಯಕೆಯುಳ್ಳ ಶತ್ರುಗಳೂ ಇದ್ದಾರೆ. ಅವರೇ ದಸ್ಯುಗಳು ಮತ್ತು ವೃತ್ರರು. ವೇದದಲ್ಲಿ ವರುಣನು ಯಾವಾಗಲೂ ವೈಶಾಲ್ಯ - ಪಾವಿತ್ರ್ಯಗಳಿಗೆ ಪ್ರಸಿದ್ಧನು. ಅವನು ಮಾನವನಲ್ಲಿ ಪರಮಸತ್ಯದ ಜಾಗರಿತಶಕ್ತಿಯಾಗಿರುವಾಗ ಮಾನವನ ಸ್ವಭಾವದಲ್ಲಿ ಪ್ರಮಾದವನ್ನು ಪಾಪವನ್ನು ಮತ್ತು ದುಷ್ಟತೆಯನ್ನು ಪ್ರವೇಶಗೊಳಿಸಿ ಆ ಸ್ವಭಾವವನ್ನು ಪರಿಮಿತಗೊಳಿಸುವ ಮತ್ತು ಹಿಂಸಿಸುವ ಎಲ್ಲವನ್ನೂ ಸ್ವಸಂಪರ್ಕದಿಂದ ನಾಶಗೊಳಿಸುವನು. ಅವನು "ರಿಶಾದಸ್"=ಶತ್ರು ಸಂಹಾರಕ - ಸರ್ವವೃದ್ಧಿ ವಿಘ್ನಕಾರಕರನ್ನು ನಾಶ ಮಾಡುವವನು. ವರುಣನಂತೆಯೇ ಮಿತ್ರನೂ ಪರಂಜ್ಯೋತಿಯ ಹಾಗೂ ಪರಮಸತ್ಯದ ಒಂದು ಶಕ್ತಿ. ವಿಶೇಷತಃ ಪ್ರೇಮಕ್ಕೆ ಅವನು ಹೆಸರು ಪಡೆದವನು; ಸಂತೋಷ - ಸಮಶ್ರುತಿಗಳಿಗೆ ಪ್ರಸಿದ್ಧನು. ಈ ಗುಣಗಳು ವೈದಿಕ ಮುಕ್ತಿಯ ಅಥವಾ "ಮಯಸ್ಸಿನ" ಮೂಲಾಧಾರಗಳು. ವರುಣನ ಪಾವಿತ್ರ್ಯದೊಂದಿಗೆ ಕ್ರಿಯಾಶೀಲನಾಗಿ ಮಿತ್ರನು ಮಾನವನ ಸೂಕ್ಷ್ಮಾವಲೋಕನ ಶಕ್ತಿಗೆ ಆ ಪಾವಿತ್ರ್ಯವನ್ನಿತ್ತು ಅದಕ್ಕೆ ಎಲ್ಲ ಅಪಶ್ರುತಿಯನ್ನೂ ಗೊಂದಲವನ್ನೂ ದೂರ ಸರಿಸಿ ಬಲಿಷ್ಠವೂ ಜ್ಯೋತಿರ್ಮಯವೂ ಆದ ಬುದ್ಧಿಯಲ್ಲಿ ಸರಿಯಾಗಿ ಕೆಲಸ ಮಾಡುವ ಶಕ್ತಿಯನ್ನು ನೆಲೆಗೊಳಿಸುತ್ತಾನೆ.

ಈ ಪ್ರಗತಿಯು ಋತಕ್ಕೆ (ಪರಮಸತ್ಯಪ್ರಜ್ಞೆಗೆ) ಮಾನವ ಮಾನಸ ಧರ್ಮದಲ್ಲಿ ಕೆಲಸ ಮಾಡಲು ಶಕ್ತಿಯನ್ನು ಕೊಡುತ್ತದೆ. "ಋತವು"=ಕರ್ತ ; "ಋತೇನ"-ಮಾನವನಲ್ಲಿಯ ಪರಮಸತ್ಯ ಕ್ರಿಯೆಯನ್ನು ವೃದ್ಧಿಗೊಳಿಸುವುದರಿಂದ ; "ಋತಾವೃಧಾ"= ಸತ್ಯವನ್ನು ಮುಟ್ಟುವ ಯಾ ಸೇರುವ ಕಾರ್ಯದಿಂದ ಅದೇ ಕರಣ. ಅಂದರೆ ಋತವು ಮಾನವನ ಮನಃಪ್ರಜ್ಞೆಗೆ ಋತಪ್ರಜ್ಞೆಯೊಡನೆ ಜಯಪ್ರದ ಸಂಪರ್ಕ ಉಂಟಾಗುವಂತೆ ಮಾಡುತ್ತದೆ ; ಋತಪ್ರಜ್ಞೆಯ ಒಡೆತನವನ್ನು ಕೊಡಿಸುತ್ತದೆ. "ಋತಸ್ಪೃಶಾ"=ಋತಸ್ಪರ್ಶದಿಂದ ಮಿತ್ರ-ವರುಣರು" "ಕ್ರತುಂ ಬೃಹಂತಂ ಆಸಾಥೇ"=ವಿಶಾಲವೂ ಪರಿಣಾಮಕವೂ ಆದ ಸಂಕಲ್ಪ ಶಕ್ತಿಯನ್ನು ಅನುಭವಿಸಲು ಸಮರ್ಥರಾಗುತ್ತಾರೆ-ತಚ್ಛಕ್ತಿಯುಕ್ತರಾಗುತ್ತಾರೆ. ಅಂತರ್ಯಜ್ಞದ ಮುಖ್ಯ ಪರಿಣಾಮಕ ಕರ್ತೃವು ಋತಪ್ರಜ್ಞೆಯ ಸಂಕಲ್ಪವೇ. ಆದರಾ ಸಂಕಲ್ಪವು ಪರಮ ಸತ್ಯದೊಡನೆ ಸಮಶ್ರುತಿ ಹೊಂದಿರಬೇಕು ; ಅಂದರೆ ಪವಿತ್ರೀಕೃತ ಸೂಕ್ಷ್ಮಜ್ಞತೆಯ ಮಾರ್ಗದರ್ಶನ ಹೊಂದಿರಬೇಕು ಎಂದರ್ಥ. ಪರಮಸತ್ಯ-ಪ್ರಜ್ಞೆಯ ವಿಸ್ತಾರದಲ್ಲಿ

(ಹರಹಿನಲ್ಲಿ) ಆ ದಿವ್ಯ ಸಂಕಲ್ಪವು ಹೆಚ್ಚು ಹೆಚ್ಚಾಗಿ ಪ್ರವೇಶಿಸುತ್ತಾ ಹೋದ ಹಾಗೆ ಸ್ವತಃ ತಾನು ಅಗಲವೂ ಅಪಾರವೂ ಆಗುತ್ತದೆ-ಅದರ ದೃಷ್ಟಿಗಾಗ ಮಿತಿಯಿರದು, ಪರಿಣಾಮಕತೆಗೆ ಅಡೆತಡೆಯಿರದು. ಅದು "ಅನಿಬಾಧೇ" ತನ್ನ ವಿಸ್ತಾರದಲ್ಲಿ ಯಾವ ವಿಘ್ನವೂ ಇತಿಮಿತಿಯ ಗೋಡೆಯೂ ಇಲ್ಲದೆ ಕೆಲಸ ಮಾಡುತ್ತದೆ.

ಈ ಪ್ರಕಾರ, ವೇದದ ಋಷಿಗಳು ಯಾವಾಗಲೂ ಒತ್ತಿ ಹೇಳುವ ಎರಡು ಅವಶ್ಯಕತೆಗಳು ಲಬ್ಧವಾದವು - ದಿವ್ಯಜ್ಯೋತಿ ಮತ್ತು ದಿವ್ಯಶಕ್ತಿ ಜ್ಞಾನದಲ್ಲಿ ಪರಮಸತ್ಯದ ಪರಂಜ್ಯೋತಿಯು ಕೆಲಸ ಮಾಡುವುದು, "ಧಿಯಂ ಘೃತಾಚೀಂ", ಪರಿಣಾಮಕರ ಮತ್ತು ಪ್ರಬುದ್ಧ ದಿವ್ಯ ಸಂಕಲ್ಪದಲ್ಲಿ ಪರಮಸತ್ಯದ ಶಕ್ತಿಯು ಕೆಲಸ ಮಾಡುವುದು, "ಕ್ರತುಂಬೃಹಂತಂ". ತತ್‌ಫಲವಾಗಿ, ವರುಣನೂ ಮಿತ್ರನೂ ಸೂಕ್ತದ ಕೊನೆಯ ಋಕ್ಕಿನಲ್ಲಿ ತಮ್ಮ ಪರಮ ಸತ್ಯದ ಪೂರ್ಣಾರ್ಥದಲ್ಲಿ, "ಕವಿ ತುವಿಜಾತಾ ಉರುಕ್ಷಯಾ" ಕೆಲಸ ಮಾಡುವುದನ್ನು ನಮಗೆ ತೋರಿಸಲಾಗಿದೆ. ಕವಿ ಎಂದರೆ ಪರಮ ಸತ್ಯ ಪ್ರಜ್ಞಾವಂತ, ಆ ಪ್ರಜ್ಞೆಯ ದರ್ಶನ ಶಕ್ತಿಗಳನ್ನೂ, ಸ್ಫೂರ್ತಿಯನ್ನೂ, ಪ್ರತಿಭೆಯನ್ನೂ, ವಿವೇಚನಾ ಶಕ್ತಿಯನ್ನೂ ಬಳಸಿಕೊಂಬುವನು ಎಂಬುದನ್ನಾಗಲೇ ಕಂಡಿದ್ದೇವೆ. "ತುವಿಜಾತಾ" ಎಂದರೆ ಬಹುಜಾತ. ತುವಿಯು ಮೂಲತಃ ಸಾಮರ್ಥ್ಯ ಯಾ ಬಲಪ್ರಯೋಗ - ಫ್ರೆಂಚ್ ಪದ "ಫೋರ್ಸ್" ಎಂಬುದಕ್ಕೆ ಬಹು ಎಂಬ ಅರ್ಥವಿದೆ. ಆದರೆ ದೇವತೆಗಳ ಹುಟ್ಟಿನಿಂದ ನಾವು ಯಾವಾಗಲೂ, ವೇದದಲ್ಲಿ, ಅವರ ಅಭಿವ್ಯಕ್ತಿ, ಅವತಾರ, ಆವಿರ್ಭಾವ ಎಂದು ತಿಳಿದುಕೊಳ್ಳಬೇಕು. ಹೀಗೆ "ತುವಿಜಾತ" ಎಂದರೆ, "ಬಹುವಾಗಿ ಆವಿರ್ಭವಿಸಿದವರು" ಎಂದು - ಅರ್ಥಾತ್-ಬಹುರೂಪ-ಬಹುಕಾರ್ಯಗಳಲ್ಲಿ ಅಭಿವ್ಯಕ್ತರಾದವರು ಎಂದು ಅರ್ಥ. "ಉರುಕ್ಷಯಾ" = ವಿಸ್ತಾರದಲ್ಲಿ ವಾಸಿಸುವುದು; ಈ ಕಲ್ಪನೆ ವೇದದಲ್ಲಿ ಪದೇ ಪದೇ ಬರುತ್ತದೆ. ಉರು=ಬೃಹತ್ = ನಿಃಸೀಮಬಯಲು; ಅದು ಪರಮಸತ್ಯ ಪ್ರಜ್ಞೆಯ ಅನಂತ ಸ್ವಾತಂತ್ರ್ಯ, ಅಸೀಮ ಮುಕ್ತಿ. ಹೀಗೆ ಋತದ ಹೆಚ್ಚು ಹೆಚ್ಚಾಗುತ್ತಾ ಬಂದ ಚಟುವಟಿಕೆಯ ಫಲವಾಗಿ, ಮಾನವನಲ್ಲಿ ವೈಶಾಲ್ಯ ಶಕ್ತಿಗಳೂ ಪಾವಿತ್ರ್ಯ, ಸಂತೋಷ, ಸಮಶ್ರುತಿ ಶಕ್ತಿಗಳೂ ವ್ಯಕ್ತವಾಗುತ್ತವೆ. ಈ ಅವತರಣ ಯಾ ಆವಿರ್ಭಾವವು ರೂಪಶ್ರೀಮಂತಿಕೆಯುಳ್ಳದ್ದು ; ಋತವಿಸ್ತಾರದಲ್ಲಿ ಉಪವಿಷ್ಟವಾದುದು ಮತ್ತು ಅತಿಮಾನಸಪ್ರಜ್ಞೆಯ ಶಕ್ತಿಗಳನ್ನು ಬಳಸಿಕೊಂಡಂಥದು.

ಪರಮಸತ್ಯದ ಶಕ್ತಿಗಳ ಈ ಆವಿರ್ಭಾವವು ತಾನು ಕೆಲಸ ಮಾಡುವಾಗ, "ದಕ್ಷಂ ದಧಾತೇ ಅಪಸಂ", ಸೂಕ್ಷ್ಮದರ್ಶನವನ್ನು ದೃಢಪಡಿಸುತ್ತದೆ. ಈಗ ಶುದ್ಧಿಕೃತವಾದ ಮತ್ತು ಬೆಂಬಲ ಪಡೆದ ಸೂಕ್ಷ್ಮದರ್ಶನವು ಪರಮಸತ್ಯದ ಒಂದು ಶಕ್ತಿಯಾಗಿ ಸತ್ಯಾರ್ಥದಲ್ಲಿ ಕೆಲಸ ಮಾಡುತ್ತದೆ ಮತ್ತು ವಿಚಾರಗಳನ್ನೂ ಸಂಕಲ್ಪಗಳನ್ನೂ ಅವುಗಳ ಕಾರ್ಯ ಮತ್ತು ಫಲಗಳಲ್ಲಿ ದೋಷ-ಗಲಿಬಿಲಿಗಳಿಂದ ಮುಕ್ತಗೊಳಿಸಿ, ಇಂದ್ರ-ವಾಯುಗಳ ಚಟುವಟಿಕೆಗಳನ್ನು ಪೂರ್ಣತೆಗೊಯ್ದು ಮುಟ್ಟಿಸುತ್ತದೆ.

ಈ ಅನುಚ್ಛೇದದ ಪದಗಳಿಗೆ ನಾವಿತ್ತ ಅರ್ಥಗಳನ್ನು ದೃಢಪಡಿಸಲು ನಾಲ್ಕನೆಯ ಮಂಡಲದ ಒಂದು ಸೂಕ್ತವನ್ನು ಎತ್ತಿ ಹೇಳಬಹುದು :

"ಅಧಾಹ್ಯಗ್ನೇ ಕ್ರತೋರ್ ಭದ್ರಸ್ಯ ದಕ್ಷಸ್ಯ ಸಾಧೋಃ
ರಥೀರ್ ಋತಸ್ಯ ಬೃಹತೋ ಬಭೂಥ (ಋಗ್.೧೦.೨)

"ಓ ಅಗ್ನಿ, ಆಗ ನಿಜವಾಗಿ, ಸುಖ ಸ್ವರೂಪದ ಸಂಕಲ್ಪ ಶಕ್ತಿಯೆಂಬ ರಥದ ಸಾರಥಿಯಾಗುವೆ, ಪೂರ್ಣ ಸೂಕ್ಷ್ಮಜ್ಞತೆಯ ಸೂತನಾಗುವೆ, ವಿಶಾಲತಮ ಸ್ವರೂಪದ ಸತ್ಯದ ಅಶ್ವವಾಹಕನಾಗುವೆ."

ಮೊದಲ ಮಂಡಲದ ಮೊದಲ ಸೂಕ್ತದಲ್ಲಿಯ ತಾತ್ಪರ್ಯವೇ ಇಲ್ಲಿದೆ : ಪರಮಸತ್ಯಪ್ರಜ್ಞೆಯ ಪರಿಣಾಮಕರ ಸಂಕಲ್ಪವು ಅದರ ಸ್ವಭಾವವು, "ಕವಿಕ್ರತುಃ", ಮತ್ತು ಆದ್ದರಿಂದ ಅದು ಒಳಿತಿನಲ್ಲಿ ಯಾ ಪರಮಾನಂದದ ಒಂದು ಅವಸ್ಥೆಯಲ್ಲಿ ಒಳಿತನ್ನು ಯಾ ಭದ್ರವನ್ನು ರಚಿಸುತ್ತದೆ, ಉಂಟುಮಾಡುತ್ತದೆ. "ದಕ್ಷಸ್ಯಸಾಧೋಃ" ಎಂಬ ಪದ ಸಂಹತಿಯಲ್ಲಿ ಒಂದು ಪರ್ಯಾಯೋಕ್ತಿಯೂ ಇದೆ, ಅದೇ ಸಮಯದಲ್ಲಿ ೨ ನೆಯ ಸೂಕ್ತದ ಕೊನೆಯ ಭಾಗದ "ದಕ್ಷಂ ಅಪಸಂ" ಎಂಬ ಮೇಳನುಡಿಯ ವಿವರಣೆಯೂ ಇದೆ : ದಕ್ಷಂ ಅಪಸಂ = ಮಾನವನ ಅಂತಃಕಾರ್ಯವನ್ನು ಪೂರ್ಣಗೊಳಿಸಿ ಮುಗಿಸಿಕೊಡುವ ಸೂಕ್ಷ್ಮದರ್ಶನ. ಶಕ್ತಿಯ ಮತ್ತು ಜ್ಞಾನದ, ದಿವ್ಯ ಸಂಕಲ್ಪದ ಮತ್ತು ಸೂಕ್ಷ್ಮದರ್ಶನದ, ಕ್ರತುವಿನ ಮತ್ತು ದಕ್ಷದ ರೂಪಗಳಲ್ಲಿರುವ ಈ ಎರಡು ಕಾರ್ಯಗಳ ಪೂರ್ಣೀಕರಣವು ವಿಶಾಲ ಸತ್ಯವೇ. ಪದ ಅರ್ಥಗಳ ಈ ಬಗೆಯ ಪುನರುಕ್ತಿಯಿಂದ ಮತ್ತು ಕಲ್ಪನೆಗಳಲ್ಲಿಯ ಒಂದೇ ಬಗೆಯ ಸಂಬಂಧದಿಂದ ವೇದ ಸೂಕ್ತಗಳು ಪರಸ್ಪರವಾಗಿ ಒಂದನ್ನಿನ್ನೊಂದು ದೃಢಪಡಿಸುತ್ತವೆ. ಕವಿ, ಕ್ರತು, ದಕ್ಷ, ಭದ್ರಂ, ಋತಂ ಮುಂತಾದ ನೆಲೆನಿಂತ ಪದಗಳಿಗೆ ಸರಿಯಾದ ತಾತ್ಪರ್ಯದೊಡನೆ ಸಿದ್ಧಮಾಡಿದ ಸಮನ್ವಿತ ತತ್ವಪ್ರಣಾಲಿಯನ್ನಾಧರಿಸದೆ ಹೋಗಿದ್ದರೆ ಇದೆಂದೂ ಸಾಧ್ಯವಾಗುತ್ತಿರಲಿಲ್ಲ. ಋಕ್ಕುಗಳ ಆಂತರಿಕ ಸಾಕ್ಷಿಗಳೇ ಈ ತಾತ್ಪರ್ಯವು ಮಾನಸ ಶಾಸ್ತ್ರೀಯವೆಂಬುದನ್ನು ಪ್ರತಿಷ್ಠಾಪಿಸುತ್ತವೆ ; ಅಲ್ಲದಿದ್ದರೆ ಪದಗಳು ತಮ್ಮ ನಿರ್ದಿಷ್ಟಾರ್ಥವನ್ನು, ಸ್ಥಿರ ಮೌಲ್ಯವನ್ನು, ಅಗತ್ಯವಾದ ಸಂಬಂಧವನ್ನು ಕಳೆದುಕೊಳ್ಳುತ್ತಿದ್ದವು ಮತ್ತು ಅವುಗಳ ಪರಸ್ಪರ ಸಂಬಂಧಯುಕ್ತವಾದ ಸತತ ಪುನರುಕ್ತಿಗಳು ಮನಸ್ವಿಯಾದವುಗಳೆಂದೂ ಕಾರಣ ಯಾ ಉದ್ದೇಶ ಇಲ್ಲದವುಗಳೆಂದೂ ಪರಿಗಣಿಸಬೇಕಾಗುವುದು.

ಎರಡನೆಯ ಸೂಕ್ತದಲ್ಲಿ ಈಗ ನಾವು ಮೊದಲ ಸೂಕ್ತದ ನಿಯಾಮಕ ಕಲ್ಪನೆಗಳನ್ನೇ ಕಾಣುತ್ತೇವೆ. ಎಲ್ಲವೂ ಅತಿ ಮಾನಸದ (ಸುಪ್ರಮಾನಸದ) ಅಥವಾ ಪರಮಸತ್ಯಪ್ರಜ್ಞೆಯ ಕೇಂದ್ರ ವೈದಿಕ ಕಲ್ಪನೆಯನ್ನಾಧರಿಸಿದೆ. ಒಂದು ಗುರಿ ಪರಮ ಪರಿಪೂರ್ಣತೆ ಎಂದು ಗ್ರಹಿಸಿ ಅದರೆಡೆಗೆ ಮಾನವನ ಕ್ರಮಿಕ ವಿಕಾಸಲಬ್ಧ ಪೂರ್ಣತೆವೆತ್ತ ಮನೋಧರ್ಮವು ಹೋಗುತ್ತದೆ. ಮೊದಲ ಸೂಕ್ತದಲ್ಲಿ ಯಜ್ಞದ ಗುರಿ ಇದೇ ಎಂದು ಸಾಮಾನ್ಯವಾಗಿ ಹೇಳಿಕೊಂಡು ಹೋಗಲಾಗಿದೆ ಮತ್ತು ಅಗ್ನಿಯ ವಿಶಿಷ್ಟ ಕಾರ್ಯವೆಂದು ತಿಳಿಸಲಾಗಿದೆ. ಎರಡನೆಯ ಸೂಕ್ತವು ಇಂದ್ರ-ವಾಯು, ಮಿತ್ರ-ವರುಣ ಇವರಿಂದ ಆಗುವ ಪ್ರಾಥಮಿಕ ತಯಾರಿಕೆಯ ಕೆಲಸವನ್ನು ಹೇಳುತ್ತದೆ : ಈ ದೇವತಾದ್ವಂದ್ವಗಳು ಆನಂದದ ಪ್ರಣೋದನದಿಂದಲೂ ಪರಮಸತ್ಯದ ಹೆಚ್ಚುತ್ತಿರುವ ಬೆಳವಣಿಗೆಯಿಂದಲೂ ಹುಟ್ಟಿ ಮಾನವನ ಸಾಮಾನ್ಯ ಮನೋಧರ್ಮವನ್ನು ತಕ್ಕಂತೆ ರೂಪಿಸುತ್ತವೆ.

ಇಡೀ ಋಗ್ವೇದವು ವಸ್ತುತಃ ಈ ಉದ್ದೇಶದ್ವಯದ ಸತತವಾದ ಬದಲಾವಣೆಯ ಸ್ವರೂಪವುಳ್ಳದ್ದೆಂದು ನಮಗೆ ಗೊತ್ತಾಗುತ್ತದೆ :

೧) ದೇಹ-ಮನಗಳಲ್ಲಿ ಮಾನವನು ಮಾಡಿಕೊಳ್ಳಬೇಕಾದ ಸಿದ್ಧತೆ ; ಮತ್ತು

೨) ಅವನಲ್ಲಿರುವ ದೇವತ್ವವನ್ನು ಯಾ ಅಮೃತತತ್ವವನ್ನು ಸಿದ್ಧಿಸಿಕೊಳ್ಳಲು ಪರಮ ಸತ್ಯವನ್ನೂ ಸಾಯುಜ್ಯ ಮುಕ್ತಿಯನ್ನೂ ಸಾಧಿಸಿ ಬಳಸಿಕೊಳ್ಳುವುದು.



## ಅಧ್ಯಾಯ-೮

# ಅಶ್ವಿನೀ ದೇವತೆಗಳು-ಇಂದ್ರ-ವಿಶ್ವದೇವತೆಗಳು

ಮಧುಚ್ಛಂದಸ್ ಮಹರ್ಷಿಯ ಮೂರನೆಯ ಸೂಕ್ತವು ಮತ್ತೆ ಸೋಮಯಾಗದ್ದೇ ಆಗಿದೆ. ಅದರ ಹಿಂದಿನ ೨ ನೆಯ ಸೂಕ್ತದಂತೆ ಮೂರು ಮೂರು ಋಕ್ಕುಗಳ ಛಂದೋಗತಿ ಇಲ್ಲಿಯೂ ಇದೆ. ಮೊದಲನೆಯದು ಅಶ್ವಿನೀ ದೇವತೆಗಳನ್ನು ಸಂಬೋಧಿಸುತ್ತದೆ ; ಎರಡನೆಯದು ಇಂದ್ರನನ್ನು ಆಮಂತ್ರಿಸುತ್ತದೆ ; ಮೂರನೆಯದು ವಿಶ್ವದೇವತೆಗಳನ್ನೂ ನಾಲ್ಕನೆಯದು ಸರಸ್ವತೀ ದೇವಿಯನ್ನೂ ಆಹ್ವಾನಿಸುತ್ತವೆ. ಈ ಸೂಕ್ತದಲ್ಲೂ ಕೊನೆಯ ಛಂದೋಗತಿಯಲ್ಲಿ ಸರಸ್ವತಿಯನ್ನು ಕರೆಯುವಾಗ ಇರುವ ಅನುಚ್ಛೇದವು ಸ್ಪಷ್ಟವಾದ ಮಾನಸ ಶಾಸ್ತ್ರೀಯ ಅರ್ಥವುಳ್ಳದ್ದಾಗಿದೆ ; ಇದು ಆಗಲೇ ನಮಗೆ ವೇದದ ಗೂಢ ವಿಚಾರವನ್ನು ತಿಳಿಯಲು ನೆರವಿತ್ತ ಇತರ ಸೂಕ್ತಗಳಿಗಿಂತ ಅಧಿಕ ಸ್ಪಷ್ಟತೆಯನ್ನುಳ್ಳದ್ದಾಗಿದೆ.

ಆದರೆ ಈ ಇಡೀ ಸೂಕ್ತವು ಮಾನಸ ಶಾಸ್ತ್ರೀಯ ಸೂಚನೆಗಳಿಂದ ತುಂಬಿ ಹೋಗಿದೆ. ಇದರಲ್ಲಿ ವೈದಿಕ ಋಷಿಗಳು ಸಂಬಂಧವನ್ನು ಸಂಸ್ಥಾಪಿಸಿ ಪೂರ್ಣಗೊಳಿಸಬಯಸಿದ, ಮಾನವಾತ್ಮ ಸಹಜವಾದ, ಮೂರು ಹಿತಾಸಕ್ತಿಗಳ ಉಲ್ಲೇಖವಿದೆ : ೧) ವಿಚಾರ ಮತ್ತು ಅದರ ಆತ್ಯಂತಿಕ ಜಯಪ್ರದಪ್ರಜ್ವಲನಗಳು, ೨) ಕರ್ಮ ಮತ್ತು ಅದರ ಕಟ್ಟಕಡೆಯ ಸರ್ವೋಚ್ಚ ಹಾಗೂ ಸರ್ವಸಿದ್ಧಿಪ್ರದ ಬಲಪ್ರಣೋದನಗಳು - ಅಲ್ಲದೆ ೩) ಭೋಗ ಮತ್ತು ಅದರ ಅತ್ಯುನ್ನತ ಆಧ್ಯಾತ್ಮಿಕ ಆನಂದೋದ್ರೇಕಗಳು. ಸೋಮರಸವು ನಮ್ಮ ಸಾಮಾನ್ಯ ಇಂದ್ರಿಯ ಭೋಗಕ್ಕೆ ದಿವ್ಯಾನಂದವನ್ನು ಆದೇಶವಾಗಿ ಕೊಡುತ್ತದೆ. ಆ ಆದೇಶವು ನಮ್ಮ ವಿಚಾರ ಕ್ರಿಯೆಯನ್ನು ದೈವೀಕರಣ ಮಾಡುವುದರ ಮೂಲಕ ನಡೆಯುತ್ತದೆ. ಅದು ಮುನ್ನಡೆಯಿಡುತ್ತಾ ಹೋದ ಹಾಗೆ ತನ್ನನ್ನು ತಂದ ಕ್ರಿಯಾಚಲನೆಯನ್ನು ಪೂರ್ಣತೆಗೊಯ್ಯುವಲ್ಲಿ ನೆರವನ್ನೀಯುತ್ತದೆ. ಗೋವು, ಅಶ್ವ ಮತ್ತು ಸೋಮರಸ (ಸೋಮಮದ್ಯ)ಗಳು ಈ ತ್ರಿಮುಖ ಯಜ್ಞದ ಪ್ರತೀಕಗಳು. ಘೃತಾಹುತಿಯು ಗೋಜನ್ಯ ; ಅಶ್ವಾಹುತಿಯು ಅಶ್ವಮೇಧ ; ಸೋಮಾಹುತಿಯು ಸೋಮರಸ ಸ್ವರೂಪದ ಹವಿರ್ಭಾಗ - ಈ ಮೂರು ಉಕ್ತ ಯಜ್ಞದ ತ್ರಿಮುಖಗಳು ಯಾ ಮೂರು ಅಂಗಗಳು. ಜೊತೆಗೆ ಗೌಣವಾದ ಪುರೋಡಾಶ (ದೋಸೆ) ದ ಆಹುತಿಯನ್ನೂ ಉಲ್ಲೇಖಿಸಲಾಗಿದೆ. ಬಹುಶ=ಅದು ಜಡಪದಾರ್ಥದ, ಶರೀರದ ಸಂಕೇತವಾಗಿರಬಹುದಾಗಿದೆ.

ಅಶ್ವಿನೀದ್ವಯದ ಆಮಂತ್ರಣ ಮೊದಲು ಬರುತ್ತದೆ. ಅವರು ಅಶ್ವಾರೂಢರು ; ಹಳೆಯ ಭೂಮಧ್ಯ ಸಮುದ್ರದ ಪುರಾಣ ಶಾಸ್ತ್ರದ ಕ್ಯಾಸ್ಟರ್ ಪೋಲೀಡ್ಯೂಸಿಸ್ ಇವರೇ. ಪುರಾಣ ಶಾಸ್ತ್ರಜ್ಞರ ಪ್ರಕಾರ ಈ ಇಬ್ಬರು ಗಗನಸ್ಥತಾರಾದ್ವಯ. ಉಳಿದ ನಕ್ಷತ್ರಗಳ ರಾಶಿಗಿಂತ ಇವರು

ಹೇಗೋ ಹೆಚ್ಚು ಭಾಗ್ಯವಂತರು. ಆದ್ದರಿಂದ ಆರ್ಯರ ವಿಶೇಷ ಲಕ್ಷ್ಯಕ್ಕೆ ಇವರು ಪಾತ್ರರಾದರು. ನಾವು ಅಭ್ಯಸಿಸುತ್ತಿರುವ ಸೂಕ್ತದಲ್ಲಿ ಇವರನ್ನು ಹೇಗೆ ವರ್ಣಿಸಲಾಗಿದೆ ಎಂಬುದನ್ನು ನೋಡೋಣ. ಇವರು ಮೊಟ್ಟ ಮೊದಲು "ಅಶ್ವಿಗಳು, ಆನಂದದ ಚುರುಕುಗಾಲಿನ ಒಡೆಯರು, ಬಹುಭೋಗಿಗಳು - ದ್ರವತ್‌ಪಾಣೀ ಶುಭಸ್ಪತೀ ಪುರುಭುಜಾ". ಶುಭ ಎಂಬ ಪದವು ರತ್ನ, ಚಂದ್ರ ಎಂಬ ಪದಗಳಂತೆ ಬೆಳಕೆಂದೂ ಅರ್ಥ ಕೊಟ್ಟೀತು, ಭೋಗವೆಂಬ ಅರ್ಥವನ್ನೂ ನೀಡೀತು ; ಆದರೆ ಈ ಅವತರಣಿಕೆಯಲ್ಲಿ ಪುರುಭುಜಾ = ಬಹುಭೋಗಿ ಎಂಬ ಮತ್ತು "ಚನಸ್ಯತಂ= ಸಂತೋಷಪಟ್ಟುಕೋ" ಎಂಬ ಪದಗಳೊಡನೆ ಬಳಸಲ್ಪಟ್ಟಿರುವುದರಿಂದ ಸುಖ ಅಥವಾ ಆನಂದ ಎಂದೇ ಅರ್ಥ ಮಾಡಬೇಕು.

ಆಮೇಲೆ ಈ ಯಮಳ ದೇವತೆಗಳನ್ನು "ಅಶ್ವಿಗಳೆಂದೂ ದಿವ್ಯಾತ್ಮಗಳೆಂದೂ ಬಹುಕರ್ಮಿಗಳೆಂದೂ ವಿಚಾರಗ್ರಾಹಿಗಳೆಂದೂ ಮಂತ್ರದ ಪುರುದಂಸಸಾ ನರಾ ಶವೀರಯಾ ಧಿಯಾ ಧಿಷ್ಣ್ಯಾ = ಉತ್ಸಾಹವರ್ಧಕ ವಿಚಾರದೊಡನೆ" ಎಂಬ ಭಾಷೆಯಲ್ಲಿ ಇವರು ಸ್ವೀಕರಿಸಿ ಸುಖ ಪಡುವಂಥವರು ಎಂದೂ ಹೇಳಲಾಗಿದೆ. ವೇದದ ನೃಶಬ್ದಕ್ಕೆ ದೇವರೆಂಬ ಅರ್ಥವೂ ಇದೆ ಮನುಜನೆಂಬ ಅರ್ಥವೂ ಇದೆ- ಕೇವಲ ಮನುಷ್ಯ ಎಂಬ ಅರ್ಥವಿಲ್ಲ. ನಾನೆಣಿಸುವಂತೆ ಅದರ ಅರ್ಥವು ಮೂಲತಃ ಬಲಿಷ್ಠ ಯಾ ಕ್ರಿಯಾಶೀಲ ಎಂಬ ಅರ್ಥದಿಂದ ಹೊರಟು ಗಂಡಸೆಂಬ ಅರ್ಥವನ್ನು ತಲುಪಿ, ಪುಂದೇವತೆಗಳಿಗನ್ವಿತವಾಯಿತು=ಕ್ರಿಯಾಶೀಲ ದಿವ್ಯಾತ್ಮಗಳೆಂಬ ಯಾ ದಿವ್ಯಶಕ್ತಿಗಳೆಂಬ ಅರ್ಥವು (ಪುರುಷರೆಂಬ ಅರ್ಥವು) ಅವರ ಕ್ರಿಯಾಶಕ್ತಿಗಳಾದ "ಜ್ಞಾಃ" ಎಂಬುದಕ್ಕೆ ವಿರುದ್ಧವಾಗಿ ರೂಢಿಗೆ ಬಂದಿರಬೇಕು. ಅದಿನ್ನೂ ಋಷಿಗಳ ಮನದಲ್ಲಿ ತನ್ನ ಮೂಲಾರ್ಥವನ್ನು ಉಳಿಸಿಕೊಂಡಿತ್ತೆನ್ನಬಹುದು : "ನೃಮ್ಣ"=ಬಲ ಮತ್ತು "ನೃತಮೋನೃಣಾಂ" = ದಿವ್ಯಶಕ್ತಿಗಳಲ್ಲಿ ಅತ್ಯಂತ ಬಲಿಷ್ಠ ಎಂಬಿವು ನಿದರ್ಶನಗಳಾಗಿವೆ. ಶವಸ್ ಮತ್ತು ಅದರ ಗುಣವಾಚಕ ಶವೀರ ಎಂಬಪದಗಳು ಕ್ರಿಯಾಶಕ್ತಿ ವಾಚಕಗಳು. ಆದರೆ ತದ್ದೂರಾರ್ಥಕಗಳಾದ ಜ್ವಾಲೆ ಯಾ ಬೆಳಕು ಎಂಬರ್ಥದೊಡನೆ ಅವು ಸದಾ ಸಂಗತವಾಗಿಯೇ ಬರುತ್ತವೆ. ಆದ್ದರಿಂದ ಶವೀರವು ಧೀಗೆ ತಕ್ಕ ಪರ್ಯಾಯಪದ : ಧೀಃ = ಹೊಳೆವ ಕ್ರಿಯಾಶಕ್ತಿಯುಳ್ಳ ವಿಚಾರ. ಧಿಷ್ಣ್ಯೆಯು ಧಿಷಣೆಗೆ (ಯಾ ಬುದ್ಧಿಗೆ, ತಿಳಿವಳಿಕೆಗೆ) ಸಂಬಂಧಿಸಿದೆ. ಅದನ್ನು ಸಾಯಣನು ಬುದ್ಧಿಮಂತೌ=ಬುದ್ಧಿವಂತರು, ಬೌದ್ಧಿಕರು ಎಂದು ಅನುವಾದಿಸಿದ್ದಾನೆ.

ಅಲ್ಲದೆ ಈ ಅಶ್ವಿಗಳು ಕರ್ಮದಲ್ಲಿ ಪರಿಣಾಮಕಾರಿಗಳಂತೆ -ಗತಿ ಕ್ರಮದ ಶಕ್ತಿಗಳು - ತಮ್ಮ ಮಾರ್ಗಗಳಲ್ಲಿ ಸಂಚರಿಸುವ ಪ್ರಣೋದಕಗಳು- "ದಸ್ರಾ ನಾಸತ್ಯಾ ರುದ್ರ ವರ್ತನೀ". ವೇದೋಕ್ತ ವಿಶೇಷಣಗಳಾದ ದಸ್ರ ಮತ್ತು ದಸ್ಮಗಳನ್ನು ಸಾಯಣನು ತನ್ನ ಅನುಕೂಲಕ್ಕಾಗಿ ಯಾ ಅಲಕ್ಷ್ಯತನದಿಂದ "ವಿನಾಶಕ", "ಸುಂದರ" ಯಾ "ಉದಾರ" ಎಂದೆಲ್ಲಾ ಅರ್ಥ ಮಾಡಿದ್ದಾನೆ. "ದಶ್" ಎಂಬ ಧಾತುವಿಗೆ ತುಂಡುಮಾಡು, ಹೋಳು ಮಾಡು ಹಾಗೂ ತಜ್ಜನ್ಯವಾದ ಹಾಳು ಮಾಡು ಮತ್ತು ಕೊಡು ಎಂಬ ಅರ್ಥಗಳನ್ನು ನಾನು ಹಚ್ಚುವುದಿಲ್ಲ ; ಹಾಗೇ ನೋಡು, ಸೂಕ್ಷ್ಮವಾಗಿ ನೋಡು ಎಂಬ ಅರ್ಥಕೊಟ್ಟು ಅದರಿಂದ ಸಾಯಣನಂತೆ ದಶನೀಯ=ಸುಂದರ ಎಂಬ ಅರ್ಥವನ್ನೂ ಹಚ್ಚುವುದಿಲ್ಲ ; ಅದರ ಬದಲು ಎರಡನೆಯ ಋಕ್ಕಿನಲ್ಲಿ ಬಂದ "ಪುರುದಂಸಸಾ" ಎಂಬ ಪದಕ್ಕಿರುವಂತೆ ಮಾಡು, ವರ್ತಿಸು, ರೂಪಿಸು, ಸಾಧಿಸು ಎಂಬ

ಅರ್ಥವನ್ನು ಅದಕ್ಕೆ ಹಚ್ಚುತ್ತೇನೆ. ಕೆಲವರು "ನಾಸತ್ಯ" ಎಂಬುದು ಅಶ್ವಿನೀ ದೇವತೆಗಳ ಅಪತ್ಯಾರ್ಥಕ ನಾಮ ಎನ್ನುತ್ತಾರೆ. "ಸುಳ್ಳಲ್ಲ, ಸತ್ಯ" ಎಂಬ ಅರ್ಥವನ್ನದಕ್ಕೆ ವಿಕಟ ಬುದ್ಧಿವಂತಿಕೆಯಿಂದ ಹಿಂದಿನ ವೈಯಾಕರಣರು ಹೇಳಿದರು; ಆದರೆ ನಾನು ನಸ್=ಚಲಿಸು ಎಂಬುದರಿಂದ ತೆಗೆದುಕೊಳ್ಳುತ್ತೇನೆ. ಅಶ್ವಿಗಳು ಕುದುರೆ ಸವಾರರೆಂಬುದನ್ನು ನಾವು ಮರೆಯಬಾರದು. "ಚುರುಕು ನಡಿಗೆಯ" ಎಂಬಂತಹ ಚಲನಾರ್ಥಕ ವಿಶೇಷಣಗಳಿಂದ ಅನೇಕ ಬಾರಿ ಕರೆಯಲಾಗಿದೆ : ತಮ್ಮ ಪಥದಲ್ಲಿ ಭಯಂಕರವಾಗಿ ಹೋಗುವವರೆಂದೂ ಅವರನ್ನು ವರ್ಣಿಸಲಾಗಿದೆ. ಗ್ರೀಕೋ ಲ್ಯಾಟಿನ್ ಪುರಾಣ ಶಾಸ್ತ್ರದಲ್ಲಿ ಕ್ಯಾಸ್ಟರ್ ಮತ್ತು ಪೊಲ್ಯುಕ್ಷರನ್ನು ಸಮುದ್ರಯಾನ ಮಾಡುವಾಗ ನಾವಿಕರನ್ನು ರಕ್ಷಿಸುವ ಮತ್ತು ಬಿರುಗಾಳಿಗಳಿಂದ ಹಾಗೂ ಹಡಗೊಡೆಯುವ ಹಾನಿಯಿಂದ ಅವರನ್ನು ಕಾಯುವ ದೇವತೆಗಳೆನ್ನಲಾಗಿದೆ ; ಹಾಗೇ ಅಶ್ವಿಗಳನ್ನು ಋಗ್ವೇದದಲ್ಲಿ ಋಷಿಗಳನ್ನು ಹಡಗಿನಲ್ಲಿ ಕೊಂಡೊಯ್ಯುವಂತೆ ಕರೆದೊಯ್ಯುವ ಮತ್ತು ಕಡಲಿನಲ್ಲಿ ಮುಳುಗದಂತೆ ಅವರನ್ನು ಕಾಯುವ ದೇವತೆಗಳೆಂದು ಹೇಳಲಾಗಿದೆ. ಆದುದರಿಂದ ನಾಸತ್ಯಪದಕ್ಕೆ ಜಲಯಾನಾಧಿಪತಿಗಳು, ಪ್ರಯಾಣಾಧಿಪತಿಗಳು ಯಾ ಚಲನದ ಶಕ್ತಿಗಳು ಎಂದು ಅರ್ಥ ಹೇಳಬಹುದು. "ರುದ್ರವರ್ತನೀ" =ರಕ್ತಪಥಿಕರು ಎಂಬುದು ಆಧುನಿಕ ವಿದ್ವಾಂಸರ ರೂಢಿ. ಏಕೆಂದರೆ, ತಾರೆಗಳು ಕೆಂಪಾಗಿವೆ ಮತ್ತು ಹಿರಣ್ಯವರ್ತನೀ=ಸುವರ್ಣಪಥಿಕರು ಎಂಬ ಸದೃಶ ಶಬ್ದವಿದೆ. ಖಂಡಿತವಾಗಿಯೂ ಒಂದಾನೊಂದು ಕಾಲದಲ್ಲಿ "ರುದ್ರ" ಎಂದರೆ ಕೆಂಬಣ್ಣ ಎಂಬರ್ಥವಿದ್ದಿರಬೇಕು. ರುಷ್, ರುಶ್, ರುಧಿರ=ರಕ್ತ (ಯಾ ಕೆಂಪು) ಎಂಬ ಪದಗಳು ಲ್ಯಾಟಿನ್ನಿನ ರುಬೇರ್, ರುತಿಲಸ್, ರುಫಸ್ = ಕೆಂಪು ಎಂಬ ಅರ್ಥವುಳ್ಳ ಪದಗಳಿಗೆ ಸಮಾನವಾಗಿವೆ. "ರೋದಸೀ" ಎಂಬ ದ್ವಿವಚನಾಂತ, ವೈದಿಕ ಪದಕ್ಕೆ "ದ್ಯಾವಾಪೃಥಿವೀ" (ಸ್ವರ್ಗ ಮತ್ತು ಭೂಲೋಕ) ಎಂಬ ಅರ್ಥವಿದೆ. ಇತರ ವೈದಿಕ ಪದಗಳಾದ ರಜಸ್ ಮತ್ತು ರೋಚನಾ ಎಂಬ ಪದಗಳಂತೆಯೇ ಹೊಳೆಯುವ ಸ್ವರ್ಗೀಯ ಮತ್ತು ಪಾರ್ಥಿವ ಪ್ರಪಂಚಗಳಿಗಿದು ಅರ್ಥದಲ್ಲಿ ಸದೃಶ. ತದ್ವಿರುದ್ಧವಾಗಿ, ಅಪಾಯ ಮತ್ತು ಹಿಂಸೆ ಎಂಬ ಅರ್ಥಗಳು ಈ ಕುಟುಂಬದ ಪದಗಳಿಗೆ ಸಹಜ. ತದರ್ಥಕ ಧಾತುಗಳಲ್ಲಿದು ಸಾರ್ವತ್ರಿಕ ಎಂದೇ ಹೇಳಬಹುದು. "ಭಯಂಕರ" ಯಾ "ಹಿಂಸಾತ್ಮಕ" ಎಂಬರ್ಥಗಳು ರುದ್ರ ಶಬ್ದಕ್ಕೆ ಕೆಂಪಿನಷ್ಟೇ ಯುಕ್ತಾರ್ಥಗಳಾದವು. ಅಶ್ವಿಗಳು ಹಿರಣ್ಯ ವರ್ತನಿಗಳೂ ಹೌದು ರುದ್ರ ವರ್ತನಿಗಳೂ ಹೌದು. ಏಕೆಂದರೆ, ಅಶ್ವಿಗಳು (ಅಶ್ವಿನೀ ದೇವತೆಗಳು) ದಿವ್ಯಜ್ಯೋತಿರ್ಬಲ ಮತ್ತು ನಾಡೀಬಲ. ಮೊದಲ ಅರ್ಥದಲ್ಲಿ ಈ ದೇವತೆಗಳಿಗೆ ಹೊಳೆವ ಚಿನ್ನದ ಬಣ್ಣದ ಚಲನವಿದೆ ; ಎರಡನೆಯ ಅರ್ಥದಲ್ಲಿ ಇವರು ತಮ್ಮ ಚಲನದಲ್ಲಿ ಅಪಾಯಕಾರಿಗಳು. ಒಂದು ಸೂಕ್ತದಲ್ಲಿ (V. 75.3) "ರುದ್ರಾಹಿರಣ್ಯವರ್ತನೀ" ಎಂಬ ಪದ ಸಂಯೋಗವಿದೆ : ಅಂದರೆ ಈ ದೇವತೆಗಳು ಹಿಂಸಾಕಾರಿಗಳೂ ಬೆಳಕಿನ ಮಾರ್ಗದಲ್ಲಿ ಸಂಚರಿಸುವವರೂ ಆಗಿದ್ದಾರೆ ಎಂದರ್ಥ. ತಾರೆಗಳು ಕೆಂಪಾಗಿವೆ ಆದರೆ ಅವುಗಳ ಚಲನ ಅಥವಾ ಪಥವು ಬಂಗಾರದ ಬಣ್ಣದ್ದು ಎಂಬ ಅರ್ಥದಲ್ಲಿ ಸಮನ್ವಯವಿದೆ ಎಂದು ಹೇಳುವುದು ಕಷ್ಟ.

ಈಗ ಈ ಮೂರು ಋಕ್ಕುಗಳಲ್ಲಿ ಸ್ವರ್ಗೀಯ ನಕ್ಷತ್ರ ಪುಂಜದ ಎರಡು ನಕ್ಷತ್ರಗಳಿಗೆ ಅಸಾಧಾರಣ ಮಾನಸಶಾಸ್ತ್ರೀಯ ಕರ್ತವ್ಯಗಳ ಸಾಲುಗಳನ್ನು ಅನ್ವಯಿಸಲಾಗಿದೆ. ಅಶ್ವಿಗಳ

ಭೌತಿಕ ಮೂಲವು ಇದಾದರೆ ಗ್ರೀಕ್ ಪುರಾಣ ಶಾಸ್ತ್ರದಲ್ಲಾದಂತೆಯೇ ತಮ್ಮ ಶುದ್ಧ ತಾರೇಯ ಸ್ವಭಾವಗಳನ್ನಿವು ಎಂದೋ ಕಳೆದುಕೊಂಡು ಬಿಟ್ಟಿವೆ. ಅಥೀನೆಯಂತೆ (ಉಷೋದೇವತೆಯಂತೆ) ಒಂದು ಮಾನಸ ಶಾಸ್ತ್ರೀಯ ಸ್ವರೂಪವನ್ನೂ ಕರ್ತವ್ಯವನ್ನೂ ಪಡೆದುಕೊಂಡಿವೆ. ಇವರು ಹಯಾರೂಢರು. ಹಯವು (ಅಶ್ವವು) ರಭಸಬಲಸಂಪನ್ನತೆಯ-ಅದರಲ್ಲೂ ಹೆಚ್ಚಾಗಿ ಜೈವಿಕ ಬಲ ಪ್ರಣೋದದ ಮತ್ತು ನಾಡೀಬಲ ಪ್ರಚೋದನೆಯ-ಅರ್ಥಾತ್-ಪ್ರಾಣದ ಸಂಕೇತಗಳಾಗಿವೆ. ಭೋಗ ದೇವತೆಗಳೆಂಬುದು ಇವರ ಉಭಯಸಾಧಾರಣ ಧರ್ಮ-ಇವರು ಮಧುವನ್ನು ಬಯಸುವವರು ; ಇವರು ವೈದ್ಯರು : ಇವರು ವೃದ್ಧರನ್ನು ಚ್ಯವನರನ್ನಾಗಿ ಮಾಡಬಲ್ಲರು; ರೋಗಿಗಳಿಗೆ ಆರೋಗ್ಯವನ್ನುಂಟು ಮಾಡಬಲ್ಲರು, ಅಂಗವಿಕಲರಿಗೆ ವಿಕಲಿತ ಅಂಗಗಳನ್ನು ಪುನಃ ದೊರಕಿಸಿಕೊಡಬಲ್ಲರು. ಚಲನವು (ಗಮನಶೀಲವು) ಈ ದೇವತೆಗಳ ಲಕ್ಷಣ. ಇವರು ಶೀಘ್ರಗಾಮಿಗಳು, ಹಿಂಸಕರು ಮತ್ತು ಅಪ್ರತಿಭಟನೀಯರು; ಇವರ ವೇಗವಾದ ಮತ್ತು ಅಜಯ್ಯವಾದ ರಥವು ಯಾವಾಗಲೂ ಹಬ್ಬಕ್ಕೆ ಪಾತ್ರ. ಇವರನ್ನಿಲ್ಲಿ ಶೀಘ್ರಪಾದರೆಂದೂ ತಮ್ಮ ನಡೆಯಲ್ಲಿ ಹಿಂಸಾಶೀಲರೆಂದು ಹೇಳಲಾಗಿದೆ. ಇವರು ಹಕ್ಕಿಗಳಂತೆ ಶೀಘ್ರಗಾಮಿಗಳು, ಮನೋವೇಗವುಳ್ಳವರು, ಗಾಳಿಯ ಬಿರುಸುಳ್ಳವರು (V. 77.3 ಮತ್ತು 78.1) ಇವರು ಮನುಷ್ಯನಿಗಾಗಿ ತಮ್ಮ ತೇರುಗಳಲ್ಲಿ ಪಕ್ವ ಯಾ ಪೂರ್ಣೀಕೃತ ತೃಪ್ತಿಗಳನ್ನು ತರುವವರು. ಇವರು ಆನಂದದ (ಮಯಸ್ಸಿನ) ನಿರ್ಮಾಪಕರು. ಈ ಸೂಚನೆಗಳೆಲ್ಲವೂ ಸಂಪೂರ್ಣ ಸ್ಪಷ್ಟವಾದವುಗಳು. ಕಾರ್ಯ ಮತ್ತು ಕಾರ್ಯಫಲಭೋಗಗಳ ಅರ್ಥದಲ್ಲಿ ಮಾನವನ ನಾಡೀಯ ಯಾ ಜೈವಿಕ ಅಸ್ತಿತ್ವದ ಪೂರ್ಣತೆಯನ್ನು ಸಾಧಿಸಿ ಕೊಡುವುದು ಇವರ ವಿಶಿಷ್ಟ ಕರ್ತವ್ಯ - ಇವರು ಯಮಳರಾದ ದಿವ್ಯಶಕ್ತಿಗಳು. ಆದರೆ ಇವರು ಪರಮಸತ್ಯದ ಶಕ್ತಿಗಳೂ ಹೌದು ; ಬುದ್ಧಿವಂತಿಕೆಯಿಂದ ಕೆಲಸ ಮಾಡುವವರೂ ಧರ್ಮ್ಯ ಭೋಗಿಗಳೂ ಉಷೆಯೊಡನೆ ಆವಿರ್ಭವಿಸುವವರೂ ಅಸ್ತಿತ್ವದ (ಸತ್ತೆಯ) ಸಾಗರದಲ್ಲಿ ಹುಟ್ಟಿದ ಪರಿಣಾಮಕರ ಕಾರ್ಯಶಕ್ತಿಗಳೂ ಆಗಿದ್ದಾರೆ ಈ ದೇವತೆಗಳು. ಇವರು ದಿವ್ಯವಾಗಿರುವುದರಿಂದ ನಿಜವಾದ ಸಾರವನ್ನೂ (ತಿರುಳನ್ನೂ) ನಿಜವಾದ ಸಂಪತ್ತನ್ನೂ ಅರಿತುಕೊಳ್ಳಬಲ್ಲ ವಿಚಾರಶಕ್ತಿಯ ಮೂಲಕ ಉನ್ನತತರ ಅಸ್ತಿತ್ವದ ಸುಖಗಳನ್ನು ಸುರಕ್ಷಿತವಾಗಿ ಮಾನಸೀಕರಿಸಬಲ್ಲವರಾಗಿದ್ದಾರೆ.

**ಯಾ ದಸ್ರಾ ಸಿಂಧು ಮಾತರಾ, ಮನೋತರಾರಯೀಣಾಂ;**
**ಧಿಯಾ ದೇವಾ ವಸುವಿದಾ (I.46.2)**

ಇವರು ಪ್ರಣೋದಕ ಶಕ್ತಿಯನ್ನು, ಆ ಮಹಾಕಾರ್ಯಕ್ಕಾಗಿ ನೀಡುತ್ತಾರೆ - ಆ ಕಾರ್ಯದ ಸ್ವಭಾವವೂ ಸಾರವೂ ಆದ ಸತ್ಯಜ್ಯೋತಿಸ್ಸಿನ ಮೂಲಕ ಮನುಷ್ಯನನ್ನು ಅಂಧಕಾರದಾಚೆಗೆ ಒಯ್ಯುತ್ತಾರೆ.

**ಯಾನಃ ಪೀಪರದ್ ಅಶ್ವಿನಾ ಜ್ಯೋತಿಷ್ಮತೀ ತಮಸ್ ತಿರ**
**ತಾಮಸ್ಮೇ ರಾಸಾಥಾಮಿಷಂ (I.46.6)**

ಇವರು ಮಾನವನನ್ನು ಅವನ ಮನದ ವಿಚಾರಗಳ ಹಾಗೂ ಸ್ಥಿತಿಗಳ ಆಚೆಯ ದಡಕ್ಕೆ ತಮ್ಮ ನೌಕೆಯಲ್ಲಿ ಕರೆದುಕೊಂಡು ಹೋಗುತ್ತಾರೆ - ಅಂದರೆ ಮಾನಸೋತ್ತರ ಪ್ರಜ್ಞಾಸ್ಥಲಕ್ಕೆ ಒಯುತ್ತಾರೆ - "ನಾವಾ ಮತೀನಾಂ ಪಾರಾಯ" (I.46.7) ಸೂರ್ಯನ ಮಗಳಾದ ಸೂರ್ಯೆಯು ಇವರ ಸತಿಯಾಗಿ ಇವರ ರಥವನ್ನು ಹತ್ತುವಳು. ಸೂರ್ಯನಾದರೋ ಸತ್ಯದ

ದೊರೆ, ಪರಮ ಸತ್ಯದ ಒಡೆಯ. ಈಗ ನಾವು ತೆಗೆದುಕೊಂಡ ಸೂಕ್ತದಲ್ಲಿ ಅಶ್ವಿನೀ ದೇವತೆಗಳನ್ನು ಆಹ್ವಾನಿಸಲಾಗಿದೆ. ಇವರನ್ನು ವೇಗಗತಿಯ ಆನಂದಾಧಿಪತಿಗಳೆಂದು ಕರೆಯಲಾಗಿದೆ ; ತಮ್ಮೊಡನೆ ಇವರು ಬಹಳ ಭೋಗ್ಯಗಳನ್ನು ತರುತ್ತಾರೆ. ಇವರು ಬರುವುದು ಯಜ್ಞದ ಚೋದಕ ಶಕ್ತಿಗಳಲ್ಲಿ ಸಂತೋಷಪಡಲೆಂದು- "ಯಜರೀರ್ ಇಷಃ.....ಚನಸ್ಯತಂ" ಈ ಚೋದಕ ಶಕ್ತಿಗಳು ಸೋಮಪಾನದಿಂದ ಜನಿಸಿದವುಗಳೆಂಬುದು ಸ್ಪಷ್ಟ - ಅರ್ಥಾತ್- ದಿವ್ಯಾನಂದದ ಒಳಹರಿವಿನಿಂದ. "ಗಿರಃ" ಎಂಬ ಅಭಿವ್ಯಂಜಕ ಪದದಿಂದ ಸೂಚಿತವಾದ ವಿಚಾರಗಳಂತಿವೆ : ಪ್ರಜ್ಞೆಯಲ್ಲಿ ಮೂಡಬೇಕಾದ ಹೊಸ ರೂಪಗಳನ್ನು ನಿರ್ಮಿಸಲು ಯಜ್ಞ ಸಾಮಗ್ರಿಗಳನ್ನು ರಾಶಿ ಮಾಡಲಾಗಿದೆ. ಮತ್ತು ಶಕ್ತಿದಾಯಕ ಸೋಮರಸವನ್ನು ಹಿಂಡಿ ಮದ್ಯವನ್ನಾಗಿ ಮಾಡಿಡಲಾಗಿದೆ.[೧] ಅಶ್ವಿಗಳು ಕರ್ಮದ ಪರಿಣಾಮಕ ಶಕ್ತಿಗಳಾಗಿ "ಪುರುದಂಸಸಾನರಾ" ಮಂತ್ರೋಕ್ತಿಗಳಿಂದ ಸಂತೋಷಪಡಲು ಮತ್ತು ಹೊಳೆವ[೨] ಶಕ್ತಿಯಿಂದ ಆ ಮಂತ್ರೋಕ್ತಿಗಳನ್ನು ಬುದ್ಧಿಯಲ್ಲಿ ಹಿಡಿದಿಡಲು ಬರಬೇಕಾಗಿದೆ. ದಸ್ರಾ=ಕಾರ್ಯವನ್ನು (ಕರ್ಮಾಂಗವನ್ನು) ಪೂರ್ತಿಗೊಳಿಸುವವರಾಗಿ ಬರಬೇಕಾಗಿದೆ. ಹೇಗೆ? ತಮ್ಮ "ರುದ್ರವರ್ತನೀಯನ್ನು" ತಮ್ಮ ಹಾದಿಯಲ್ಲಿ ಅಪ್ರತಿಭಟನೀಯವಾಗಿರುವ ರಭಸಗತಿಯಿಂದ, ಯಜ್ಞ ಕರ್ಮದ ಸಂತೋಷವನ್ನು ಕೊಡುವುದರ ಮೂಲಕ ಮತ್ತು ಎಲ್ಲ ವಿರೋಧಗಳನ್ನೂ (ವಿಘ್ನಗಳನ್ನೂ) ದಾಟುವುದರ ಮೂಲಕ. ಇವರು ಆರ್ಯ ಪ್ರಯಾಣದ ದಿವ್ಯಶಕ್ತಿಗಳಾಗಿ ಬರುತ್ತಾರೆ. ಉದ್ದಕ್ಕೂ ನಾವು ಕಾಣುವುದೆಂದರೆ, ಈ ಅಶ್ವಿಗಳು (ಅಶ್ವಾರೂಢರು) ಕಾರ್ಯೋತ್ಸಾಹವನ್ನು ಕೊಡತಕ್ಕವರು ; ಯಜ್ಞ ಕರ್ಮದ ಶಕ್ತಿಗಳಲ್ಲಿ ಇವರು ಸಂತೋಷಪಡಬೇಕು ; ಶಬ್ದವನ್ನು ಸಶಕ್ತ ವಿಚಾರದೆತ್ತರಕ್ಕೆ ಒಯ್ಯಬೇಕು ; ಹಾದಿಯಲ್ಲಿವರು ತಮ್ಮ ರಭಸಪೂರ್ಣ ಚಲನವನ್ನು ತರಬೇಕು. ಈ ಕಾರ್ಯಶಕ್ತಿಯ ಬೇಡಿಕೆಗೆ ಕಾರ್ಯ ಪರಿಣಾಮಕತೆ ಮತ್ತು ಮಹಾಪ್ರಯಾಣಕ್ಕೆ ಬೇಕಾದ ವೇಗ-ಇವೇ ವಸ್ತು (ವಿಷಯ, ಗುರಿ, ಉದ್ದೇಶ). ಈ ಮಾನಸಶಾಸ್ತ್ರೀಯ ಅರ್ಥವಿವರಣೆಯನ್ನು ಋಷಿಗಳ ವಿಚಾರವು ಗೃಹೀತವನ್ನಾಗಿ ಇಟ್ಟುಕೊಂಡಿದೆ. ಕಲ್ಪನೆಯ ಹೊಂದಿಕೆ, ರಚನೆಯ ಸಮನ್ವಿತತೆ, ಹೊರನಕ್ಷೆಯ ಸುಲಭ ಸ್ಪಷ್ಟತೆ ಮತ್ತು ಅರ್ಥನಿಷ್ಕೃಷ್ಟತೆ ಇವು ಮಾನಸ ಶಾಸ್ತ್ರೀಯ ವಿವರಣೆಯಿಂದ ಮಾತ್ರ ಉಕ್ತ ಋಷಿ ಸೂಕ್ತಕ್ಕೆ ಲಭ್ಯ. ತದ್ವಿರುದ್ಧವಾಗಿ, ವೇದವೊಂದು ವಿವೇಕ ಗ್ರಂಥ, ಅಗಾಧ ಜ್ಞಾನನಿಧಿ ಎಂಬ ಪಾರಂಪರಿಕ ನಂಬಿಗೆಯನ್ನು ಅಲಕ್ಷಿಸಿ ಮಾಡಿದ ಅರ್ಥವಿವರಣೆಯು ಅಡ್ಡತಿಡ್ಡ ಹೊಕ್ಕು, ಕಾಡು ಜೀಡಾಗಿ ತಲೆ ಕೆಡಿಸುವ ಅಸಮನ್ವಿತತೆಯಿಂದ ಆಕಸ್ಮಿಕವಾಗಿ ಥಟ್ಟನೆ ನಿಂತು ಬಿಟ್ಟರೆ ಬರುವ ಲಾಭವೇನು?

ಮೊದಲನೆಯ ಮೂರು ಋಕ್ಕುಗಳ ಭಾಷಾಂತರ ಹೀಗಿರಬೇಕು : "ಹೇ ಅಶ್ವಾರೂಢರೇ, ಶೀಘ್ರಗಾಮಿಗಳೇ (ಶೀಘ್ರಪದಿಗಳೇ), ಬಹುಭೋಗಿಗಳಾದ ಆನಂದಾಧಿಪತಿಗಳೇ ಯಜ್ಞದ ಕಾರ್ಯಶಕ್ತಿಗಳಲ್ಲಿ ಹರ್ಷಪಡಿರಿ.

---

೧. ಯುವಾಕವಃ ಸುತಾ ವೃಕ್ತ ಬರ್ಹಿಷಃ ॥

೨. ಶವೀರಯಾ ಧಿಯಾ ಧಿಷ್ಣ್ಯಾ ವನತಂಗಿರಃ ॥

"ಹೇ ಹಯಾರೂಢರೇ, ಬಹುವಿಧ ಕಾರ್ಯಕಾರಿಗಳಾದ ಗಂಡು ಜೀವಾತ್ಮಗಳೇ (ಪುರುಷರೇ), ರಾರಾಜಿಸುವ ಸಶಕ್ತ ವಿಚಾರದಿಂದ ಬುದ್ಧಿಯಲ್ಲಿ ಹಿಡಿದು ನಿಂತವರೇ, ಶಬ್ದಗಳ ಹರ್ಷವನ್ನು ಸ್ವೀಕರಿಸಿರಿ - ಮಂತ್ರೋಕ್ತಿಗಳಿಂದ ಸಂತೋಷಪಡಿರಿ.

"ನಾನು ಯಜ್ಞವೇದಿಕೆಯನ್ನು ಸಂಘಟಿಸಿದ್ದೇನೆ ; ಮಾದಕ ಸೋಮರಸವನ್ನು ಹಿಂಡಿ ತೆಗೆದಿಟ್ಟಿದ್ದೇನೆ ; ಎಲೈ ಕರ್ಮಫಲಾವಾಪಕರೇ, ಕರ್ಮಾನುಷ್ಠಾನ ಶಕ್ತಿಗಳೇ, ನಿಮ್ಮ ಅತಿರಭಸದ ವೇಗದಿಂದ ಸ್ವಪಥ ಹಿಡಿದು ಇವುಗಳೆಡೆಗೆ ಬನ್ನಿರಿ."

ಎರಡನೆಯ ಸೂಕ್ತದಲ್ಲಿರುವಂತೆಯೇ ಮೂರನೆಯದರಲ್ಲಿಯೂ ಋಷಿಯು ನರಮಂಡಲದಲ್ಲಿ (ಧಮನೀಸ್ತೋಮದಲ್ಲಿ) ಅಥವಾ ಜೈವಿಕ ಬಲೋತ್ಸಗಳಲ್ಲಿ ಕೆಲಸ ಮಾಡುವ ದೇವತೆಗಳನ್ನು ಆಮಂತ್ರಿಸಲಾರಂಭಿಸುತ್ತಾನೆ. ಅದರಲ್ಲಿ ಆತನು ವಾಯುವನ್ನು ಕರೆಯುತ್ತಾನೆ. ವಾಯುವು ಜೈವಿಕ ಶಕ್ತಿಗಳನ್ನು ಪೂರೈಸುವವನು ; ಜೀವಶಕ್ತಿ ರೂಪದ ತನ್ನ ಕುದುರೆಗಳನ್ನವನು ತರುವವನು. ಇಲ್ಲಿ ಅವನು ಅಶ್ವಿನೀ ದೇವತೆಗಳನ್ನು ಆಹ್ವಾನಿಸುತ್ತಾನೆ ; ಇವರು ಜೈವಿಕ ಶಕ್ತಿಗಳನ್ನು ಬಳಸಿಕೊಂಡು ಕುದುರೆಯೇರಿ ಬರುತ್ತಾರೆ. ಎರಡನೆಯ ಸೂಕ್ತ ಹೇಳಿದಂತೆಯೇ ಋಷಿಯು ಜೈವಿಕ ಯಾ ನಾಡೀಯ ಕ್ರಿಯೆಯಿಂದ ಮನಃಕ್ರಿಯೆಗೆ ಏರುತ್ತಾನೆ. ಎರಡನೆಯ ಲಯಗತಿಯಲ್ಲಿ ಅವನು ಇಂದ್ರನ ಬಲವನ್ನು ಆಮಂತ್ರಿಸುತ್ತಾನೆ. ಹಿಂಡಿ ತೆಗೆದ ಸೋಮರಸವು (ಸಂತೋಷವೆಂಬ ಮದ್ಯವು) ಅವನ ಬರವನ್ನು ಹಾರಯಿಸುತ್ತದೆ - "ಸುತಾ ಇಮೇತ್ವಾಯವಃ" ; ಅದು ಜ್ಯೋತಿರ್ಮಯ ಮನವು ತನ್ನ ಚಟುವಟಿಕೆಗಳಿಗಾಗಿ ತನ್ನನ್ನು (ಸೋಮವನ್ನು) ತೆಗೆದು ಸ್ವಾಧೀನಪಡಿಸಿಕೊಳ್ಳಬೇಕೆಂದು ಬಯಸುತ್ತದೆ. ಅದು ಶುದ್ಧೀಕೃತ "ಅಣ್ವೀಭಿಸ್‌ತನಾ" ಸೋಮ. ಸಾಯಣ ಭಾಷ್ಯದ ಪ್ರಕಾರ ಅದರ ಅರ್ಥ "ಬೆರಳಿಂದ ಮತ್ತು ಶರೀರದಿಂದ" ಸೋಸಿದ್ದು (ಗಾಳಿಸಿದ್ದು). "ಶುದ್ಧ ಮನಸ್ಸಿನ ಸೂಕ್ಷ್ಮ ಶಕ್ತಿಗಳಿಂದ" ಶೋಧಿಸಿ - ಎಂಬ ಅರ್ಥವನ್ನು ವಿಸ್ತರಿಸಿ ಭೌತಿಕ ಪ್ರಜ್ಞೆಯ ಭಾಷೆಯಲ್ಲಿ (ಅನ್ನಮಯಕೋಶದ ಪ್ರಕಾರ) ಹೇಳಲಾಗಿದೆ ಎಂಬುದು ನನ್ನ ಮತ. ಏಕೆಂದರೆ ಈ ೧೦ ಬೆರಳುಗಳು ಬೆರಳುಗಳೇ ಆದರೆ ಅವು ಸೂರ್ಯನ ಮಗಳಾದ ಸೂರ್ಯೆಯ ಬೆರಳುಗಳು - ಅಶ್ವಿನೀ ದೇವತೆಗಳ ಪತ್ನಿ ಸೂರ್ಯೆ. ೯ ನೆಯ ಮಂಡಲದ ಪ್ರಥಮ ಸೂಕ್ತದಲ್ಲಿ ಈ ಮಧುಚ್ಛಂದಸ್ ಋಷಿಯೇ ಈ ಕಲ್ಪನೆಯನ್ನು ವಿಸ್ತಾರಗೊಳಿಸಿದ್ದಾನೆ- ಇಲ್ಲಿ ಮಾತ್ರ ಬಹು ಸಂಕ್ಷಿಪ್ತತೆಯಿಂದ ಗುಳಿಗೆ ಮಾಡಿ ಹೇಳಿದ್ದಾನೆ. ಹೇಳಿ ಜಾರಿಕೊಂಡು ಬಿಟ್ಟಿದ್ದಾನೆ. ಅಲ್ಲಿ ಅವನು, "ಸೂರ್ಯ ಪುತ್ರಿಯು ಸೋಮವು ಅವಳ ಸಾರಣಿಗೆಯಲ್ಲಿ ಜಾಲಾಡಿ ಹರಿಯುತ್ತಿರುವಾಗ ಅದನ್ನು ಸತತವಾಗಿ ಜಿತ್ತರಿಸುತ್ತಾ ಶುದ್ದೀಕರಿಸುತ್ತಾಳೆ" ಎಂದು ಸೋಮದೇವತೆಯನ್ನುದ್ದೇಶಿಸಿ ಹೇಳುತ್ತಾನೆ. "ವಾರೇಣ ಶಶ್ವತಾ ತನಾ". ಕೂಡಲೇ ಅವನು ಆ ಮಾತಿಗೆ ಸೇರಿಸುತ್ತಾನೆ : "ಸೂಕ್ಷ್ಮ ದೇವತೆಗಳು ತಮ್ಮ ಕಾಯಕದಲ್ಲಿ ಅದನ್ನು ಹಿಡಿದುಕೊಳ್ಳುತ್ತಾರೆ (ಅಥವಾ ಆ ಮಹಾಕಾರ್ಯದಲ್ಲಿ, ಹೋರಾಟದಲ್ಲಿ, ಉದಾತ್ತೋದ್ದೇಶದಲ್ಲಿ ಎಂದು ಕಾಯಕಕ್ಕೆ ಅರ್ಥ ಹೇಳಬಹುದು) ; ಸ್ವರ್ಗದಲ್ಲಿಯ ಹತ್ತು ಜನ ಸೋದರಿಯರಾದ ಮಹಾವಧುಗಳನ್ನು ದಾಟಬೇಕು"-ಈ ಪದಸಂಹತಿಯು ಒಮ್ಮಿಂದೊಮ್ಮೆಗೆ ವಿಚಾರೋತ್ತರ ಸ್ಥಲಕ್ಕೆ ನಮ್ಮನ್ನೊಯ್ಯುವ ಅಶ್ವಿಗಳ ಹಡಗನ್ನು ನೆನಪು ಮಾಡಿಕೊಡುತ್ತದೆ. ವೇದದಲ್ಲಿ ಸ್ವರ್ಗವೆಂದರೆ ಶುದ್ಧವಾದ ಮಾನಸಪ್ರಜ್ಞಾಸ್ತರ (ಮನೋಮಯ ಕೋಶ) ಮತ್ತು ಭೂಮಿಯು ಶುದ್ಧವಾದ

ಭೌತಿಕ ಪ್ರಜ್ಞೆಯ (ಅನ್ನಮಯಕೋಶದ) ಪ್ರತೀಕ. ಶುದ್ಧ ಮನೋವಾಸಿಗಳಾದ ಈ ಸೋದರಿಯರು ಸೂಕ್ಷ್ಮಾಕೃತಿ ಉಳ್ಳವರು "ಅಣ್ವೀ:". "ದಶಯೋಷಣಾ:" - ಈ ಹತ್ತು ಜನ ಸೋದರಿಯರನ್ನು ಬೇರೆ ಕಡೆಯಲ್ಲಿ "ದಶಕ್ಷಿಪ:=ಹತ್ತು ಜನ ಕ್ಯಾಸ್ಟರರು -ಏಕೆಂದರೆ ಸೋಮವನ್ನು ಹಿಡಿದು ಅದನ್ನು ಅದರ ಪಥದಲ್ಲಿ ವೇಗವಾಗಿ ಹೋಗುವಂತೆ ಮಾಡುತ್ತಾರೆ. ದಶಯೋಷಣೆಯರು ಬಹುಶ: ಅವರು "ದಶಗಾವ:" ಎಂದು ವೇದದಲ್ಲಿ ಕೆಲವೆಡೆ ಹೇಳಿರುವಂತೆ ಸೂರ್ಯನ ಹತ್ತು ಕಿರಣಗಳೆಂದೇ ತೋರುತ್ತದೆ. "ನಪ್ತೀಭಿರ್ವಿವಸ್ವತ:" ಎಂಬಲ್ಲಿ ಅಶ್ವಿನಿಗಳನ್ನು ಸೂರ್ಯನ ಮೊಮ್ಮಕ್ಕಳು ಅಥವಾ ವಂಶದವರು ಎಂದು ವರ್ಣಿಸಿರುವಂತೆ ತೋರುತ್ತದೆ (IX. 14.5) ಪವಿತ್ರೀಕರಣದ ಕೆಲಸದಲ್ಲಿ ಅವರಿಗೆ ೭ (ಏಳು) ಬಗೆಯ ವೈಚಾರಿಕ ಪ್ರಜ್ಞೆಗಳು - ಸಪ್ತಧೀತಿಭಿ: (IX. 9.4) ಸಹಾಯಕವಾಗಿವೆ. ಇನ್ನೂ ಋಷಿ ಹೇಳುತ್ತಾನೆ "ಇಂದ್ರನು ಪೂರ್ಣಗೊಳಿಸಿದ ಕ್ಷೇತ್ರವನ್ನು (ಯಾ ಕಾರ್ಯವನ್ನು) ತಲುಪಲು "ಧಿಯಾ ಅಣ್ವ್ಯಾ" ಸೂಕ್ಷ್ಮ ವಿಚಾರದ ಬಲ ಪ್ರಣೋದದ ಮೂಲಕ ಸೋಮನು ಶೂರನಾಗಿ ತನ್ನ ವೇಗವಾಗಿ ಹೋಗುವ ರಥಗಳಲ್ಲಿ ಮಂಬರಿಯುತ್ತಾನೆ ಮತ್ತು ದೇವತೆಯ ಆ ವಿಸ್ತಾರವಾದ ಬಡಾವಣೆಯಲ್ಲಿ (ಅಥವಾ ರೂಪಿತ ಪ್ರದೇಶದಲ್ಲಿ) ಅಂದರೆ ಅಮರರಿರುವ ಜಾಗದಲ್ಲಿ ಹೋಗಲು ಸೋಮನು ವಿಚಾರದ ಅನೇಕ ರೂಪಗಳನ್ನು ತಾಳುತ್ತಾನೆ.

**ಏಷ ಪುರೂ ಧಿಯಾಯತೇ, ಬೃಹತೇ ದೇವತಾತಯೇ,**
**ಯತ್ರಾಮೃತಾಸ ಆಸತೇ (IX. 15.1.2)**

ಈ ವಿಷಯವನ್ನು ನಾನು ವಿವರಿಸಿದ್ದೇಕೆಂದರೆ, ವೇದರ್ಷಿಗಳ ಸೋಮರಸವು ಹೇಗೆ ಸಂಪೂರ್ಣವಾಗಿ ಸಾಂಕೇತಿಕ ಮತ್ತು ಹೇಗೆ ಮಾನಸಶಾಸ್ತ್ರೀಯ ಕಲ್ಪನೆಗಳಿಂದ ಯಥೇಷ್ಟವಾಗಿ ಸುತ್ತುವರಿದಿದೆ, ಹೇಗೆ ೯ ನೆಯ ಮಂಡಲವು ಸಾಂಕೇತಿಕ ಪ್ರತಿಮಾವಳಿಯಿಂದ (ರೂಪಕೋಕ್ತಿಗಳಿಂದ) ವೈಭವಾತಿಶಯ ಸಂಪನ್ನವಾಗಿದೆ ಹಾಗೂ ಹೇಗೆ ಮಾನಸಶಾಸ್ತ್ರೀಯ ಸೂಚನೆಗಳಿಂದ ತುಂಬಿ ಹರಿಯುತ್ತಿದೆ - ಎಂಬುದು ಉಕ್ತ ಮಂಡಲವನ್ನು ಓದುವವರೆಲ್ಲರಿಗೂ ಗೊತ್ತಾಗದೆ ಉಳಿಯದು - ಎಂಬುದನ್ನು ತೋರಿಸುವುದಕ್ಕಾಗಿಯೇ.

ಅದು ಹೇಗೇ ಇರಲಿ, ಸೋಮದ ಮತ್ತು ಅದರ ಶುದ್ಧೀಕರಣವಿಲ್ಲಿ ಮುಖ್ಯವಲ್ಲ; ಆದರೆ ಇಂದ್ರನ ಮಾನಸಶಾಸ್ತ್ರೀಯ ಕರ್ತವ್ಯವು ಮುಖ್ಯ. "ಇಂದ್ರ ಚಿತ್ರ ಭಾನೋ- ನೀನು ವಿವಿಧ ಶ್ರೀಮಂತ ಕಾಂತಿಗಳಿಂದ ಕೂಡಿದ ಇಂದ್ರನೇ" ಎಂದು ಸಂಬೋಧಿಸಲಾಗಿದೆ. ಇಂದ್ರನನ್ನು ಸೋಮರಸವು ಬಯಸುತ್ತದೆ. ಒಳಗಿನ ಚಿಂತಕನಿಂದ ಪ್ರಕಾಶಿತನಾಗಿ ಇಂದ್ರನು ಅವನ ಚಿಂತನದಿಂದ ಉತ್ಸಾಹಿತನಾಗಿ "ಧಿಯೇಷಿತೋ ವಿಪ್ರಜೂತ:" ಚಿಂತಕ ಋಷಿಯ ಆತ್ಮ ವಿಚಾರಗಳತ್ತ ಬರಲು ಒತ್ತಾಯಿಸಲ್ಪಟ್ಟಿದ್ದಾನೆ; ಈ ಋಷಿಯು ಸಂತೋಷದ ಮದ್ಯವನ್ನು (ಸೋಮರಸವನ್ನು) ಹಿಂಡಿ ಅದನ್ನು ಮಾತಿನಲ್ಲಿ ವ್ಯಕ್ತಪಡಿಸಲು ಸ್ತೂರ್ತಮಂತ್ರಗಳನ್ನು ಬಳಸುತ್ತಾನೆ- "ಸುತಾವತ: ಉಪ ಬ್ರಹ್ಮಾಣಿ ವಾ ಘತ:" ಇಂದ್ರನು ಜ್ಯೋತಿರ್ಮಯ ಮನ: ಪ್ರಭಾವದಿಂದ ತನ್ನ ವೇಗ ಮತ್ತು ಬಲ ಪ್ರಣೋದಗಳಿಂದ ಉತ್ತೇಜಿತನಾಗಿ ಬರುತ್ತಾನೆ; ತನ್ನ ಪ್ರಖರ ಪ್ರಕಾಶಮಯ ಕುದುರೆಗಳೊಡನೆ ಆ ವಿಚಾರಗಳತ್ತ ಬರುತ್ತಾನೆ - "ತೂತು ಜಾನಾ ಉಪ ಬ್ರಹ್ಮಾಣಿ ಹರಿವ:" ಮತ್ತು ಆ ಋಷಿಯ ಸೋಮಾಹುತಿಯಲ್ಲಿಯ ಸಂತೋಷವನ್ನು ದೃಢಪಡಿಸಲು ಯಾ ಹಿಡಿದಿಡಲೆಂದು ಪ್ರಾರ್ಥಿಸುತ್ತಾನೆ. "ಸುತೇ ದಧಿಷ್ವ ನಶ್ಚನ:". ಅಶ್ವಿಗಳು

ಆನಂದದ ಕಾರ್ಯದಲ್ಲಿ ಜೈವಿಕ ಮಂಡಲದ ಸಂತಸವನ್ನು ತಂದು ಬಲಪಡಿಸಿದ್ದಾರೆ. ಪ್ರಜ್ಞೆಯಿಂದ ಆ ಸಂತಸ ಹಾರಿ ಹೋಗದಂತೆ ಹಿಡಿದಿಡಲು ಇಂದ್ರನು ಅಗತ್ಯನಾಗಿದ್ದಾನೆ.

"ಓ ಇಂದ್ರನೇ, ನಿನ್ನ ಶ್ರೀಮಂತ ಪ್ರಭೆಗಳೊಡನೆ ಬಾ. ಈ ಸೋಮರಸವು ನಿನ್ನನ್ನು ಬಯಸುತ್ತದೆ ; ಅವು ಸೂಕ್ಷ್ಮ ಶಕ್ತಿಗಳಿಂದಲೂ ದೇಹದಲ್ಲಿ ದೇಹಗತ ವ್ಯಾಪಕತೆಯಿಂದಲೂ ಶುದ್ಧೀಕರಿಸಲ್ಪಟ್ಟಿವೆ.

"ಹೇ ಇಂದ್ರ, ಮನದಿಂದ ಚೋದಿತನಾಗಿ, ಪ್ರಬುದ್ಧ ಚಿಂತಕನಿಂದ ಮುಂದೊತ್ತಲ್ಪಟ್ಟವನಾಗಿ ನನ್ನ ಆತ್ಮ ವಿಚಾರಗಳೆಡೆಗೆ ಬಾ ; ನಾನು ಸೋಮರಸವನ್ನು ಸುರಿದಿದ್ದೇನೆ, ಮತ್ತು ಅದನ್ನು ಮಾತಿನಲ್ಲಿ ವ್ಯಕ್ತಪಡಿಸಬಯಸುತ್ತೇನೆ.

"ಓ ಇಂದ್ರ, ನೀನು ಶಕ್ತಿಯುತ ವೇಗದಿಂದ ನನ್ನ ಆತ್ಮ ವಿಚಾರಗಳತ್ತ ಬಾ ; ಎಲೈ ರಾರಾಜಿಸುವ ವಾಜಿಗಳೊಡೆಯನೇ, ಸೋಮರಸಗತವಾದ ಸಂತೋಷವನ್ನು ದೃಢವಾಗಿ ಹಿಡಿದಿಡು."

ಋಷಿಯು ಅನಂತರ ವಿಶ್ವದೇವರುಗಳತ್ತ ಸಾಗುತ್ತಾನೆ. ಎಲ್ಲ ದೇವತೆಗಳ ಮೊತ್ತವೇ ಎಲ್ಲ ದೇವರುಗಳು. ಈ ವಿಶ್ವ ದೇವರುಗಳ ವರ್ಗವೊಂದು ಬೇರೆಯೇ ಆಗಿದೆಯೇ ಯಾ ಎಲ್ಲ ದೇವರುಗಳ (ದೇವತೆಗಳ) ಸಾಮಾನ್ಯ ನಾಮವಾಗಿ "ವಿಶ್ವೇದೇವಾಃ" ಎಂಬ ಮಾತು ಬಂದಿದೆಯೇ ಎಂಬ ಬಗೆಗೆ ಭಿನ್ನಾಭಿಪ್ರಾಯವಿದೆ. ನನ್ನ ಪ್ರಕಾರ ಉಕ್ತ ನಾಮವು ದಿವ್ಯಶಕ್ತಿಗಳೆಲ್ಲವುಗಳ ಸಾಮೂಹಿಕ ಅಭಿಧಾನ : ಏಕೆಂದರೆ, ಅವರನ್ನು ಆಮಂತ್ರಿಸುವ ಸೂಕ್ತಗಳ ಸಾಕ್ಷಾತ್ತಾದ ಅಭಿವ್ಯಂಜಕಗಳಿಗೆ ನಾನು ಹೇಳಿದ ಅರ್ಥವು ಅತ್ಯುಚಿತವಾಗಿ ಹೊಂದುತ್ತವೆ. ಈ ಸೂಕ್ತದಲ್ಲಿ ಅಶ್ವಿಗಳ ಮತ್ತು ಇಂದ್ರನ ಕರ್ತವ್ಯಗಳನ್ನು ಪೂರ್ಣಗೊಳಿಸುವ ಮತ್ತು ಬೆಂಬಲಿಸುವ ಸಾಮಾನ್ಯ ಕಾರ್ಯವನ್ನೆಸಗಲು ಅವರನ್ನು ಕರೆಯಲಾಗಿದೆ. ಯಜ್ಞಕ್ಕವರು ಸಾಮೂಹಿಕವಾಗಿ ಬರಬೇಕು ; ಹಾಗೆ ಬಂದು ಯೋಜಕ ಸೋಮ(ನನ್ನು) ವನ್ನು ಅವರಿಗೆ ವಿತರಣ ಮಾಡುವಾಗ ಅದನ್ನವರು ತಮ್ಮ ತಮ್ಮ ಪಾಲಿನಂತೆ (ಹವಿರ್ಭಾಗವನ್ನು) ಹಂಚಿಕೊಳ್ಳಬೇಕು.- ಈ ಸೋಮ ವಿತರಣ ಕಾರ್ಯವು ಋಷಿಯ ಯುಕ್ತವಾದ ಕರ್ಮದ ದಿವ್ಯವೂ ಮೋದಕರವೂ ಆದ ಆಚಾರ, ಅನುಷ್ಠಾನ ಎಂಬುದು ಸ್ಪಷ್ಟ. "ವಿಶ್ವೇದೇವಾಸ ಆಗತ, ದಾಶ್ವಾಂಸೋ ದಾಶುಷಃ ಸುತಂ". ಈ ಸೂಕ್ತದಲ್ಲಿ ಇಂದ್ರನ ಹಾಗೂ ಅಶ್ವಿನೀ ದೇವತೆಗಳ ಕರ್ತವ್ಯಗಳನ್ನು ಬೆಂಬಲಿಸುವ ಮತ್ತು ಮುಗಿಸುವ ಸಾಮಾನ್ಯ ಕಾರ್ಯಕ್ಕಾಗಿ ವಿಶ್ವೇ ದೇವರುಗಳನ್ನು ಕರೆಯಲಾಗಿದೆ. ಅವರು ಯಜ್ಞಕ್ಕೆ ಒಟ್ಟಾಗಿ ಬಂದು ಋಷಿಯ ದಿವ್ಯವೂ ಸಂತೋಷದಾಯಕವೂ ಆದ ಸ್ವಯುಕ್ತ ಕರ್ಮದಲ್ಲಿ ಪಾಲ್ಗೊಂಡು ತಮ್ಮ ತಮ್ಮ ಹವಿರ್ಭಾಗಗಳನ್ನು ತೆಗೆದುಕೊಂಡು ಹೋಗಬೇಕೆಂದು ಅಭಿಪ್ರಾಯಪಟ್ಟಿರುವುದು ಸ್ಪಷ್ಟ. ಯಜಮಾನನು ಸೋಮನನ್ನು ಅವರಿಗೆ ಅವರವರ ಹವಿರ್ಭಾಗಗಳನ್ನಾಗಿ ಹಂಚುತ್ತಾನೆ ಎಂಬುದು ತಾತ್ಪರ್ಯ[೧]. ಮುಂದಿನ ಋಕ್ಕಿನಲ್ಲಿ ಈ ಕರೆಯನ್ನು ಪುನರುಚ್ಚರಿಸಲಾಗಿದೆ. ಈ ಪುನರುಚ್ಚಾರದಲ್ಲಿ ಇನ್ನೂ ಹೆಚ್ಚಿನ ಒತ್ತಾಯವಿದೆ. ವಿಶ್ವ ದೇವತೆಗಳು "ತೂರ್ಣಯಃ" ಇನ್ನೂ

---

೧. ಇದು ಹಿಂದಿನ ವಾಕ್ಯದ ಪುನರ್ವಿವರಣೆ - (ಅನುವಾದಕ)

ಹೆಚ್ಚು ವೇಗವಾಗಿ ಬರಬೇಕು- ಸೋಮಾಹುತಿಯನ್ನು ಕೊಳ್ಳಲು ಅಥವಾ ಪ್ರಜ್ಞೆಯ ಎಲ್ಲಾ ಸ್ತರಗಳ ಮೂಲಕವೂ ಅವರು ಹಾಯ್ದು ಬರಬೇಕು ಎಂದೂ ಅರ್ಥವಾಗಬಹುದು. ಪ್ರಜ್ಞೆಯು ನೀರಿನಿಂದ (ನೀರುಗಳಿಂದ) ಸಂಕೇತಿತ. ಈ "ನೀರು" ಮಾನವನ ಭೌತಿಕ ಸ್ವಭಾವವನ್ನು ಆಯಾ ದೇವತೆಗಳಿಂದ ಬೇರ್ಪಡಿಸುತ್ತದೆ ಮತ್ತು ಭೂಮ್ಯಾಕಾಶಗಳ (ಭೂಲೋಕ ಸ್ವರ್ಗಲೋಕಗಳ) ನಡುವಿನ ಸಂಪರ್ಕಕ್ಕೆ ಎದುರಾಗುವ ಅಡ್ಡಿ ಆತಂಕಗಳಿಂದ ತುಂಬಿ ಹೋಗಿದೆ. "ಅಪ್ತುರಃ ಸುತಂ ಆ ಗಂತಾ ತೂರ್ಣಯಃ" ಅವರು ಸಾಯಂಕಾಲದಲ್ಲಿ ದನಗಳು ತಮ್ಮ ಕೊಟ್ಟಿಗೆಗಳಿಗೆ ಧಾವಿಸಿ ಬರುವಂತೆ ಬರಬೇಕಾಗಿದೆ : "ಉಸ್ರಾಇವಸ್ವ ಸರಾಣೀ". ಹೀಗೆ ಸಂತೋಷದಿಂದ ಬಂದು ಆ ವಿಶ್ವ ದೇವರುಗಳು ತಮ್ಮ ಹವಿರ್ಭಾಗಗಳನ್ನು ಸಂತೋಷದಿಂದ ಸ್ವೀಕರಿಸಿ ಯಜ್ಞಕ್ಕಂಟಿಕೊಂಡು ಅದನ್ನು ಬೆಂಬಲಿಸಿ ಆ ಯಜ್ಞವು ನಡೆದು ಗುರಿ ಮುಟ್ಟುವವರೆಗೆ ಅದರ ಹೊಣೆಯನ್ನು ಹೊತ್ತುಕೊಳ್ಳಬೇಕು. ಆ ಗುರಿಯು ದೇವೋನ್ಮುಖವಾಗಿ ಮೇಲೇರುವುದು ಯಾ ದೇವತಾಗೃಹವನ್ನು ಸೇರುವುದು - ಆ ದೇವಗೃಹವೆಂದರೆ ಪರಮಸತ್ಯ, ಪರಮ ವೈಶಾಲ್ಯ (ಪರಮವ್ಯೋಮ)- "ಮೇಧಾಂ ಜುಷಂತ ವಹ್ನಯಃ".

ವಿಶ್ವ ದೇವರುಗಳ ಗುಣ ಮಾಪಕ ಮತ್ತು ಕರ್ತವ್ಯ ನಿರ್ಧಾರಕ ವಿಶೇಷಣಗಳು ಅದೇ ಸರ್ವ ಸಾಧಾರಣತೆಯನ್ನು ಹೊಂದಿರುತ್ತವೆ. ಅವರನ್ನು ಅವರಿಗೆ ಆ ಪಾತ್ರತ್ವವಿದ್ದುದರಿಂದಲೇ ಸೋಮಯಾಗಕ್ಕೆ ಆಮಂತ್ರಿಸಿದ್ದು - ಸೋಮಾಹುತಿ ಅವರಿಗೆ ಹೇಳಿಸಿದ್ದು. ಆ ವಿಶೇಷಣಗಳು ಸರ್ವದೇವತಾ ಸಾಧಾರಣ. ವೇದದುದ್ದಕ್ಕೂ ಅವುಗಳನ್ನು ಅಪ್ರತ್ಯೇಕವಾಗಿ ಕೆಲವೇ ದೇವತೆಗಳಿಗೋ ಎಲ್ಲಾ ದೇವತೆಗಳಿಗೋ ಸಂದರ್ಭಾನುಸಾರವಾಗಿ ಅನ್ವಯಿಸಲಾಗಿದೆ. ಅವರು ಮನುಷ್ಯನನ್ನು ಸಾಕುವವರು ಯಾ ಪೋಷಕರು ಮತ್ತು ಅವನು ಮಾಡುವ ಯಜ್ಞ ಕರ್ಮದ ಪ್ರಯತ್ನವನ್ನು, ಕಾಯಕವನ್ನು, ಎತ್ತಿ ಹಿಡಿಯುವವರು "ಓಮಾಸಸ್ ಚರ್ಷಣೀ ಧೃತಃ". ಮಾನವರನ್ನು ಕಾಯುವವರು ಮತ್ತು ಉಳಿಸುವವರು ಎಂದು ಇದನ್ನು ಸಾಯಣನು ವ್ಯಾಖ್ಯಾನಿಸುತ್ತಾನೆ. ನನ್ನಿಚ್ಛೆಯಂತೆ ಈ ಪದ ಸಂಹತಿಗಳಿಗೆ ನಾನು ಕೊಟ್ಟ ಅರ್ಥವನ್ನು ಪೂರ್ಣತರವಾಗಿ ನಾನಿಲ್ಲಿ ಸಮರ್ಥಿಸಲು ಹೋಗುವುದಿಲ್ಲ - ಏಕೆಂದರೆ, ಆಗಲೇ ನಾನು ಅನುಸರಿಸುವ ಭಾಷಾ ಶಾಸ್ತ್ರೀಯ ಪದ್ಧತಿಯನ್ನು ಸೂಕ್ಷ್ಮವಾಗಿ ಹೇಳಿಬಿಟ್ಟಿದ್ದೇನೆ. ಅವ್, ಅವಸ್, ಊತಿ, ಉಮಾ ಇತ್ಯಾದಿ ಧಾತುಗಳಿಂದ ಹುಟ್ಟಿರುವ ಪದಗಳಿಗೆ ಯಾವಾಗಲೂ ರಕ್ಷಣಾರ್ಥವನ್ನು ಹೇಳಲು ಸಾಯಣನಿಗೆ ಅಸಾಧ್ಯವಾಯಿತು.ಈ ಪದಗಳು ಸೂಕ್ತಗಳಲ್ಲಿ ಪದೇ ಪದೇ ಬರುತ್ತವೆ. ಬೇರೆ ಬೇರೆ ಉಪಚ್ಛೇದಗಳಲ್ಲಿ ಅವುಗಳಿಗೆ ಬೇರೆ ಬೇರೆ ಅರ್ಥಗಳನ್ನು ಹೇಳಬೇಕಾದ ಒತ್ತಾಯ ಸಾಯಣನ ಮೇಲೆ ಬಂದಿದೆ. ಅವನು ಹಾಗೆ ಕೊಟ್ಟ ಅರ್ಥಗಳು ಅತ್ಯಂತ ಭಿನ್ನ ಮತ್ತು ಪರಸ್ಪರ ಸಂಬಂಧ ಇಲ್ಲದವುಗಳಾಗಿವೆ. ಇದೇ ಮೇರೆಗೆ "ಚರ್ಷಣಿ" ಮತ್ತು "ಕೃಷ್ಟಿ" ಎಂಬ ಪದಗಳು ಸ್ವಂತದ ಮೇಲೆ ನಿಂತಾಗ ಸಾಯಣನು "ಮನುಷ್ಯ" ಎಂದು ಅರ್ಥೈಸುತ್ತಾನೆ. ಆದರೆ ಈ ಪದಗಳೇ ಸಮಸ್ತಗಳಾಗಿ ವಿಚರ್ಷಣಿ, ವಿಶ್ವಚರ್ಷಣಿ, ವಿಶ್ವಕೃಷ್ಟಿ ಎಂಬ ರೂಪಗಳಲ್ಲಿ ಎದುರಾದಾಗ ಸಾಯಣನು ವಿಶ್ವಚರ್ಷಣಿ ಎಂದರೆ ಸರ್ವದರ್ಶಿ ಎಂದು ಅರ್ಥ ಹೇಳಬೇಕಾಗಿ ಬರುತ್ತದೆ - ಅವನದಕ್ಕೆ "ವಿಶ್ವಮಾನವ", "ವಿಶ್ವಮನುಕುಲ" ಎಂದು ಅರ್ಥ ಹೇಳಲಾರದವನಾಗುತ್ತಾನೆ. ಇಂಥ ಸ್ಥಿರವಾದ ವೈದಿಕ ಪದಗಳಿಗೆ ಆಕಾಶ-ಪಾತಾಳಗಳಷ್ಟು ಅಂತರವಿರುವ ಬದಲಾವಣೆಗಳನ್ನು ಮಾಡುವ ಸಾಧ್ಯತೆ ಇದೆ ಎಂಬುದನ್ನು ನಾನು ಒಪ್ಪುವುದಿಲ್ಲ. ಅವ್=ಇರು, ಹೊಂದು ಇಟ್ಟುಕೋ ; ಒಳಗೊಳ್ಳು, ಹಾಯು ; ಆಗು,

ಸೃಷ್ಟಿಸು ; ಸಾಕು, ಪೋಷಿಸು, ಏಳಿಗೆ ಹೊಂದು, ಅಭಿವರ್ಧಿಸು; ಸಂತೋಷಗೊಳಿಸು, ಸಂತೋಷಪಡು ಎಂಬ ಅರ್ಥಗಳನ್ನು ಹೇಳಬಹುದು. ಆದರೆ ವೃದ್ಧ್ಯರ್ಥ, ಪೋಷಣಾರ್ಥಗಳು ವೇದದಲ್ಲಿ ಗಣ್ಯ ಎಂದು ನನಗೆ ತೋರುತ್ತದೆ. "ಚರ್ಷ್" ಮತ್ತು "ಕೃಷ್" ಎಂಬ ಧಾತುಗಳು ಮೂಲತಃ "ಚರ್" ಮತ್ತು "ಕೃ" ಎಂಬ ಧಾತುಗಳಿಂದ ಹುಟ್ಟಿದವುಗಳು ; ಎರಡಕ್ಕೂ ಮಾಡು ಎಂಬುದೇ ಅರ್ಥ. ಈ ದ್ರಾವಿಡ ಪ್ರಾಣಾಯಾಮದ ಕ್ರಿಯಾರ್ಥ ಯಾ ಚಲನಾರ್ಥವು ಈಗಲೂ "ಕೃಷ್" (ಎಳೆ ಯಾ ಉಳು) ಧಾತುವಿನಲ್ಲಿ ಉಳಿದುಕೊಂಡಿದೆ. ಆದ್ದರಿಂದ ಚರ್ಷಣಿ ಮತ್ತು ಕೃಷ್ಟಿ ಎಂಬ ಪದಗಳಿಗೆ ಪ್ರಯತ್ನ ಕಷ್ಟದ ಕೆಲಸ ಅಥವಾ ಅಂಥ ಕೆಲಸಗಾರರು ಎಂದು ಅರ್ಥ ಹೇಳುವುದು ಯುಕ್ತವಾಗಿದೆ. ಅವೆರಡು ಪದಗಳು ಕರ್ಮ, ಅಪಸ್, ಕಾರ, ಕೀರಿ, ದುವಸ್ ಇತ್ಯಾದಿಗಳ ಗುಂಪಿಗೆ ಸೇರಿದ ಪದಗಳು. ಅವು ವೈದಿಕ ಕರ್ಮ, ಯಜ್ಞ, ಗುರಿಮುಟ್ಟಲು ಕಷ್ಟಪಡುವ ಮಾನವಕುಲದ ದುಡಿತ, ಆರ್ಯನ "ಅರತಿ" ಎಂಬ ಅರ್ಥವುಳ್ಳ ಪದಗಳು.

ವೈದಿಕ ದೇವತೆಗಳಿಗಿರುವ ಒಂದೇ ಒಂದು ಸರ್ವಸಾಧಾರಣ ಗುರಿ ಯಾ ಪೂರ್ವಗ್ರಹ ಎಂದರೆ - ಮಾನವನ ಬಾಳ ತಿರುಳಲ್ಲಿ ಮತ್ತು ಅವನ ಆಸ್ತಿಪಾಸ್ತಿಗಳಲ್ಲಿ ಅವನು ಏಳಿಗೆ ಹೊಂದುವಂತೆ ಮಾಡುವುದು ; ಅವನು ಪರಮಸತ್ಯಪ್ರಜ್ಞೆಯತ್ತ, ಅದರ ಪೂರ್ಣತೆ ಹಾಗೂ ಶ್ರೀಮಂತಿಕೆಯತ್ತ ಹೊರಳುವಂತೆ ಮಾಡುವುದು ; ಅವನ ಈ ಹೆಬ್ಬೋರಾಟದಲ್ಲಿ ಮತ್ತು ದುಡಿತದಲ್ಲಿ ಅವನಿಗೆ ಬೆಂಬಲ ಕೊಡುವುದೇ ಆಗಿದೆ. ಆಗ ಅವರು ಅಪ್ತುರಃ = ನೀರು ದಾಟುವವರು ಅಥವಾ ಸಾಯಣ ಹೇಳುವಂತೆ ಅವರು ಜಲದಾತರು. ಇದನ್ನವನು ವೃಷ್ಟಿದಾತರು ಎಂದು ಅರ್ಥೈಸುತ್ತಾನೆ. ನಿಜ ; ಇದು ಸಂಪೂರ್ಣವಾಗಿಯೂ ಸತ್ಯ : ವೇದದ ಎಲ್ಲಾ ದೇವತೆಗಳೂ ವೃಷ್ಟಿದಾತರು, ಬೇಕಾದಷ್ಟನ್ನು ಕೊಡುವವರು (ಏಕೆಂದರೆ, ವೃಷ್ಟಿ=ಮಳೆ ಯಾ ಬೇಕಾದಷ್ಟು ಸ್ವರ್ಗೀಯ ಸಂಪತ್ತು). ಕೆಲವು ವೇಳೆ ಈ ನೀರನ್ನು ಸೌರಜಲ=ಸ್ವರ್ವತೀರ್, ಅಪಃ=ಪ್ರಕಾಶಮಾನವಾದ ಸ್ವರ್ಗದ ಬೆಳಕನ್ನು ಹೊತ್ತು ತರುವ ನೀರು ಎಂದೂ ವರ್ಣಿಸಲಾಗಿದೆ. ಆದರೆ ವೇದೋಕ್ತವಾದ ಸಾಗರ ಮತ್ತು ನೀರು - ಈ ಪದ ಸಂಹತಿಯೇ ಹೇಳುವಂತೆ - ಪ್ರಜ್ಞಾಜೀವಿಯ ರಾಶಿ (ಮುದ್ದೆ) ಮತ್ತು ಚಲನವಲನಗಳ ಸಂಕೇತಗಳು. ದೇವತೆಗಳು ಈ ನೀರಿನ ಪೂರ್ಣತೆಯನ್ನು-ಅದರಲ್ಲೂ ಮೇಲ್ನೆಲೆಯ ನೀರಿನ ಪರಿಪೂರ್ಣತೆಯನ್ನು - ಸ್ವರ್ಗದ ನೀರನ್ನು ಸುರಿಸುತ್ತಾರೆ ; ಎಂದರೆ ಅವು ಪರಮಸತ್ಯದ ಧಾರೆಗಳು = "ಋತಸ್ಯಧಾರಾಃ" ; ಎಂಥ ವಿಘ್ನಗಳನ್ನೂ ದಾಟಿ ಅವು ಮಾನವ ಪ್ರಜ್ಞೆಯಲ್ಲಿ ಹೊಗುವಂತೆ ದೇವತೆಗಳು ಮಾಡುತ್ತಾರೆ. ಈ ಅರ್ಥದಲ್ಲಿ ಎಲ್ಲ ದೇವತೆಗಳು "ಅಪ್ತುರಃ" ಆದರೆ ಮನುಷ್ಯನನ್ನೂ ದೇವತೆಗಳ ಹೆಗಲ ಮೇಲೆ ಕುಳಿತು ನೀರನ್ನು ದಾಟಿ ತನ್ನ ಮನೆಯಾದ ಪರಮಸತ್ಯಪ್ರಜ್ಞೆಗೆ ಹೋಗುವವನೆಂದೂ ವರ್ಣಿಸಲಾಗಿದೆ. ಇಲ್ಲಿ ಈ ಅರ್ಥ ಸರಿಯೋ ತಪ್ಪೋ ಎಂಬುದು ಸಂದಿಗ್ಧ-ಅದರಲ್ಲೂ "ಅಪ್ತುರಃ..........ತೂರ್ಣಯಃ" ಎಂಬೆರಡು ಪದಗಳು ಬಹಳ ಹತ್ತಿರವಾಗಿವೆ, ಸುಸಂಬದ್ಧವಾಗಿವೆ ಎಂಬ ಅಂಶವು ಅರ್ಥಪೂರ್ಣವಾದೀತು.

ಪುನಃ ದೇವತೆಗಳೆಲ್ಲರೂ ದಕ್ಷ ವಿರೋಧಿಗಳಿಲ್ಲದವರು ; ನೋಯಿಸುವ ಮತ್ತು ಹಾನಿಮಾಡುವ ಯಾ ವಿರುದ್ಧವಾದ ಶಕ್ತಿಗಳಿಂದ ಮುಕ್ತರು. ಆದುದರಿಂದ ಅವರ ಜಾಗರಿತ ಪ್ರಜ್ಞೆಯ ಜ್ಞಾನದ ಸರ್ಜನಶೀಲ ನಿರ್ಮಿತಿಗಳು (ಅಥವಾ ಅವರ ಮಾಯವು)[೧] ಮುಕ್ತವಾಗಿ

---

೧. Maya=ಮಾಯಾ=ಮಾಯೆಯು

ಚಲಿಸುತ್ತವೆ, ವ್ಯಾಪಕವಾಗಿ ಸಂಚರಿಸುತ್ತವೆ, ತಮ್ಮ ನ್ಯಾಯವಾದ ಗುರಿಯನ್ನು ಮುಟ್ಟುತ್ತವೆ- "ಅಸೃಧ ಅಹಿಮಾಯಾಸೋ ಅದ್ರುಹಃ". ಅನೇಕಾನೇಕ ವೇದ ಭಾಗಗಳಲ್ಲಿ ಬರುವ ಯಜ್ಞದ ಕರ್ಮದ, ಪ್ರಯಾಣದ, ತೇಜೋವೃದ್ಧಿಯ, ಸಾಮಾನ್ಯೋದ್ದೇಶವನ್ನು ಗಣಿಸಿದರೆ-ಅಗ್ಗದ (ಹೇರಳ) ನೀರನ್ನು ನೆನೆದರೆ -ಋತವೆಂಬ ಸತ್ಯಪ್ರಜ್ಞೆಯನ್ನು ಸಾಧಿಸಿಕೊಳ್ಳುವುದನ್ನೂ ಅದರ ಫಲವಾಗಿ ಆನಂದವನ್ನು ಹೊಂದುವುದನ್ನೂ ಲೆಕ್ಕಿಸಿದರೆ (ಆನಂದ=ಮಯಸ್) ಮತ್ತು ಈ ವಿಶೇಷಣಗಳು ಅಪ್ರಮೇಯ ತತ್ವಕ್ಕೆ, ಅದರ ಶಕ್ತಿಗಳಿಗೆ ಅನ್ವಯಿಸುವುದನ್ನು ತಿಳಿದರೆ (ಆ ಅಪ್ರಮೇಯ, ಅನಂತ, ಅಸೀಮತತ್ವವೇ ಸಮಗ್ರ ಸತ್ಯಪ್ರಜ್ಞೆ) - ಈ ಮೂರು ಋಕ್ಕುಗಳಲ್ಲಿ ಸೂಚಿತವಾದದ್ದು ಉಕ್ತ ಪರಮಸತ್ಯದ ಸಾಧನೆ, ಸಿದ್ಧಿ-ಎಂಬುದು ನಮಗೆ ಗೊತ್ತಾಗುವುದು. ಈ ಸರ್ವ (ವಿಶ್ವ) ದೇವತೆಗಳು ಮಾನವನನ್ನು ಬೆಳೆಯಿಸುತ್ತಾರೆ, ಅವನ ಮಹಾಕಾರ್ಯದಲ್ಲಿ ಬೆಂಬಲ ಕೊಡುತ್ತಾರೆ, ಸ್ವರ್‌ಲೋಕದ ಜಲ ಸಮೃದ್ಧಿಯನ್ನವನಿಗೆ ತಂದು ಕೊಡುತ್ತಾರೆ (ಅವೇ ಪರಮಸತ್ಯದ ಧಾರೆಗಳು) ಮತ್ತು ಅದರ ವಿಶಾಲ ಜ್ಞಾನ ನಿರ್ಮಿತಿಗಳೊಡನೆ (ಮಾಯಾಃ) ಪರಮಸತ್ಯ ಪ್ರಜ್ಞೆಯ ವ್ಯಾಪಕ ಕಾರ್ಯದೊಡನೆ, ಸಮಗ್ರ ಕ್ರಿಯೆಯೊಡನೆ, ಆಬಾಧಿತವಾಗಿ ಸಂಪರ್ಕ ದೊರಕುವಂತೆ ಮಾಡುತ್ತಾರೆ.

"ಉಸ್ರಾಇವ ಸ್ವ ಸರಣೀ" ಎಂಬ ಪದ ಸಂಹತಿಯನ್ನು ನಾನು ಸಾಧ್ಯವಾಗುವಷ್ಟು ಬಾಹ್ಯಾರ್ಥದೊಡನೆ ಭಾಷಾಂತರಿಸಿದ್ದೇನೆ ; ಆದರೆ ವೇದದಲ್ಲಿ ಕಾವ್ಯಗತ ಉಪಮೆಗಳನ್ನು ಕೂಡಾ ಎಂದೂ ಕೇವಲ ಶೋಭಾಕರಗಳನ್ನಾಗಿ ಬಳಸುವುದಿಲ್ಲ. ಅವುಗಳನ್ನು ಸಹಾ ಮಾನಸಶಾಸ್ತ್ರೀಯ ಅರ್ಥಗಳನ್ನು ಅಗಾಧಗೊಳಿಸುವುದರಲ್ಲಿ ಶ್ಲೇಷ-ಸಾಂಕೇತಿಕತೆಗಳ ಮೂಲಕ ಬಳಸಲಾಗುತ್ತದೆ. ವೇದದಲ್ಲಿ ಉಸ್ರವನ್ನು ಗೋ ಪದದಂತೆಯೇ ಯಾವಾಗಲೂ ಬಳಸಲಾಗುತ್ತದೆ. ಶ್ಲೇಷದಂತೆ ಅದು ಎತ್ತು ಯಾ ಆಕಳು ಎಂಬುದು ಅದರ ಸ್ಥೂಲಾಕೃತಿ ; ಮಾನಸ ಶಾಸ್ತ್ರೀಯ ಸೂಚಕತ್ವದಂತೆ ತೇಜೋಮಯ ಪದಾರ್ಥಗಳು - ಮನುಷ್ಯನಲ್ಲಿರುವ ಪರಮಸತ್ಯದ ಪ್ರಬುದ್ಧ ಶಕ್ತಿಗಳು. ವಿಶ್ವೇ ದೇವರುಗಳು (ವಿಶ್ವ ದೇವತೆಗಳು) ಜ್ಯೋತಿರ್ಮಯ ಯಾ ಪ್ರಬುದ್ಧ ಶಕ್ತಿಗಳಾಗಿ ಹೇಗೆ ಸೋಮರಸಕ್ಕಾಗಿ ("ಸ್ವಸರಾಣಿ") ಬರುವರೋಹಾಗೇ ಆನಂದದ ಯಾ ಪ್ರಶಾಂತಿಯ ರೂಪಗಳತ್ತ ಅಥವಾ ಸ್ಥಾನಗಳತ್ತ ಬರುತ್ತಾರೆ. "ಸ್ವಸ್" ಧಾತುವು "ಸಸ್" ಧಾತುವಿನಂತೆಯೇ "ವಿಶ್ರಮಿಸು" ಮತ್ತು "ಭೋಗಿಸು" ಎಂಬ ಎರಡೂ ಅರ್ಥಗಳನ್ನು ಕೊಡುತ್ತದೆ. ಇಂದ್ರನ ಶುದ್ಧ ಮನಃಕ್ರಿಯೆ ಮತ್ತು ಎರಡೂ ಅರ್ಥಗಳನ್ನು ಕೊಡುತ್ತದೆ. ಇಂದ್ರನ ಶುದ್ಧ ಮನಃಕ್ರಿಯೆ ಮತ್ತು ಅಶ್ವಿಗಳ ಜೈವಿಕ ಹಾಗೂ ಮಾನಸಿಕ ಕ್ರಿಯೆಗಳು ಮಾನವನಲ್ಲಿ ಚಲಿಸಲಾರಂಭಿಸಿದೊಡನೆಯೇ ಅವನಲ್ಲಿರುವ ಆನಂದ ಧಾರೆಗಳೊಳಗೆ ಹೊಗುವ ಪರಮಸತ್ಯ (ಪ್ರಜ್ಞೆಯ) ಶಕ್ತಿಗಳ ಸ್ವರೂಪಗಳೇ ಆ ತೇಜೋಮಯ ಸತ್ಯ ಶಕ್ತಿಗಳು.

"ಹೇ ವಿಶ್ವ ದೇವರೇ, ಕರ್ಮದಲ್ಲಿ ಕರ್ಮಕಾರನನ್ನು ಬೆಂಬಲಿಸುವವರೇ, ಬನ್ನಿರಿ ಮತ್ತು ನಾನು ಹಂಚುವ ಸೋಮರಸವನ್ನು (ಮಧ್ಯವನ್ನು) ವಿಭಜಿಸಿ ತೆಗೆದುಕೊಳ್ಳಿರಿ.

"ಎಲೈ ಸರ್ವೇಶ್ವರರೇ, ನೀರನ್ನು ನಮಗೆ ಒದಗಿಸುವ ನೀವು ಬನ್ನಿರಿ ಮತ್ತು ಹಾಗೆ ದಾಟಿಕೊಂಡು ಬಂದು ಪ್ರಜ್ವಾಲಿತ ಶಕ್ತಿಗಳಾಗಿ ಸೋಮಾಹುತಿಯನ್ನು ಸ್ವೀಕರಿಸಿ ನಿಮ್ಮ ಆನಂದಪದಗಳಲ್ಲಿ ನೆಲೆಸಿರಿ.

"ಓ ಸಮಷ್ಟಿ ದೇವತಾ ಸ್ವರೂಪಿಗಳೇ, ನೀವು ಅಹಿಂಸ್ಯರು ಮತ್ತು ಅಹಿಂಸಕರು, ಜ್ಞಾನ ಸ್ವರೂಪಗಳಲ್ಲಿ ನೀವು ಮುಕ್ತರಾಗಿ ಸಂಚರಿಸುವವರು ; ಆದ್ದರಿಂದ ನನ್ನ ಯಜ್ಞಕ್ಕಂಟಿಕೊಳ್ಳಿರಿ, ಅದನ್ನು ಎತ್ತಿ ಹಿಡಿಯಿರಿ.

ಮತ್ತು ಅಂತ್ಯದಲ್ಲಿ, ಸೂಕ್ತದ ಕಡೆಯ ಲಯಗತಿಯಲ್ಲಿ, ಪರಮಸತ್ಯಪ್ರಜ್ಞೆ (ಪರಮಸತ್ಯೋದಯ) ಎಂಬುದೇ ಯಜ್ಞದ ಗುರಿ ಎಂಬುದಕ್ಕೆ ನಿಃಸಂದಿಗ್ಧವಾದ ಸೂಚನೆ ಅತಿಸ್ಪಷ್ಟವಾಗಿ ನಮಗೆ ದೊರಕುತ್ತದೆ. ಈ ಗುರಿ ಎಂದರೆ ಸೋಮಾಹುತಿಯ ಗುರಿ, ಅಶ್ವಿಗಳ ಕಾರ್ಯದ ಕೊನೆಯ ಹಂತ ಇಂದ್ರ ಮತ್ತು ವಿಶ್ವ ದೇವತೆಗಳು (ಎಲ್ಲಾಣ್ಮರ) ಮಾನವ ಮನದಲ್ಲಿಯೂ ಪ್ರಾಣದಲ್ಲಿಯೂ ಮಾಡುವ ಕೆಲಸದ ಅಂತ್ಯ ಸೋಪಾನ. ಏಕೆಂದರೆ, ಸರಸ್ವತಿಗೆ ಮೀಸಲಾದ ಋಕ್ಕುಗಳು ಈ ಮೂರು. ಸರಸ್ವತಿಯು ದಿವ್ಯಶಬ್ದ (ದಿವ್ಯವಾಣಿ) ; ಅವಳು ಪರಮಸತ್ಯಪ್ರಜ್ಞಾಸ್ತರ-ದಿಂದ ರಾಡಿಯಾಗದೆ ಅದರ ಅರ್ಥವನ್ನು ಹರಿಯಿಸುವ ವಾಗ್‌ಧಾರಾ ಪ್ರತಿನಿಧಿ :

"ಪವಿತ್ರಗೊಳಿಸುವ ಸರಸ್ವತಿಯು ತನ್ನ ಸಂಪದ್ಭರಿತ ಆಕೃತಿಗಳ ಎಲ್ಲ ಸಮಗ್ರತೆಯಿಂದ, ವಿಚಾರಸಾರದಿಂದ, ಶ್ರೀಮಂತಳಾಗಿದ್ದಾಳೆ ; ಅಂಥವಳು ನಮ್ಮ ಯಜ್ಞವನ್ನು ಅಪೇಕ್ಷಿಸಲಿ.

"ಸುಖಕರ ಸತ್ಯಗಳತ್ತ ನಮ್ಮನ್ನು ಪ್ರಚೋದಿಸುವವಳು ಸರಸ್ವತಿ ; ನ್ಯಾಯವಾದ ಮನಃಕ್ರಿಯೆಗಳತ್ತ ನಮ್ಮನ್ನು ಎಚ್ಚರಿಸುವವಳು ಸರಸ್ವತಿ ; ಇಂಥ ಸರಸ್ವತಿಯು ಯಜ್ಞವನ್ನು ಬೆಂಬಲಿಸಲಿ.

"ಪ್ರತ್ಯಕ್ಷವಾಗಿ ನಮ್ಮ ಪ್ರಜ್ಞೆಯಲ್ಲಿ ಮಹಾಪೂರದಿಂದ (ಋತದ ವಿಸ್ತಾರವಾದ ಚಲನವಲನ-ಗಳಿಂದ) ಜಾಗರಿತಳಾಗುತ್ತಾಳೆ ಮತ್ತು ನಮ್ಮೆಲ್ಲ ಆಲೋಚನೆಗಳನ್ನೂ ಉಜ್ವಲಗೊಳಿಸುತ್ತಾಳೆ."

ಸ್ಪಷ್ಟವೂ ಜ್ಯೋತಿರ್ಮಯವೂ ಆದ ಈ ಕೊನೆಯ ಭಾಗವು ಅದಕ್ಕೆ ಹಿಂದಿರುವ ಎಲ್ಲ ಮಂತ್ರಗಳ ಮೇಲೂ ತನ್ನ ಬೆಳಕನ್ನು ಚೀರುತ್ತದೆ. ಇದು ೧) ವೈದಿಕ ಯಜ್ಞ ಮತ್ತು ಮನದ ಹಾಗೂ ಜೀವಾತ್ಮದ ಒಂದು ಸ್ಥಿತಿಯ ನಡುವೆ ಇರುವ ನಿಕಟ ಸಂಬಂಧವನ್ನು, ೨) ಶುದ್ಧೀಕೃತ ನವನೀತ ಮತ್ತು ಸೋಮರಸ ಹಾಗೂ ಲಸದ್ವಿಚಾರಗಳ ಮಾನಸಶಾಸ್ತ್ರೀಯ ಸುಸ್ಥಿತಿಗಳ ಮತ್ತು ಅದರ ಜಾಗರಣ ಹಾಗೂ ಸತ್ಯ-ಜ್ಯೋತಿಗಳತ್ತಣ ಪ್ರಚೋದನೆಗಳ ನಡುವಣ ಸಂಬಂಧವನ್ನು ನಮಗೆ ತೋರಿಸಿ ಕೊಡುತ್ತದೆ. ಶ್ರುತಿಯ ಅಥವಾ ಸ್ಫೂರ್ತಿಯ ದೇವತೆ ಎಂದರೆ ಸರಸ್ವತಿಯೇ ಎಂಬುದನ್ನಿದು ತೆರೆದು ತೋರಿಸುತ್ತದೆ. ಮತ್ತು ಇದು ವೈದಿಕ ನದಿಗಳಿಗೂ ಮನದ ಮಾನಸ ಶಾಸ್ತ್ರೀಯ ಸ್ಥಿತಿಗಳಿಗೂ ನಡುವೆ ಇರುವ ಸಂಬಂಧವನ್ನು ಸ್ಥಾಪಿಸಿಬಿಡುತ್ತದೆ. ಈ ಅಂತ್ಯಾನುಚ್ಛೇದವು ಋಷಿಗಳು ಬುದ್ಧಿಪೂರ್ವಕವಾಗಿ ತಾವು ಬಳಸಿದ ಸಾಂಕೇತಿಕ ಶೈಲಿಯ ರಹಸ್ಯದತ್ತ ನಮಗೆ ದಾರಿ ತೋರಿಸಲೆಂದು ಅವುಗಳ ನಡುವೆ ಚೆಲ್ಲಿಬಿಟ್ಟ ಕಾಂತಿಮತ್ ಸೂಚನೆಗಳಲ್ಲಿ ಒಂದು.

❖❖

## ಅಧ್ಯಾಯ-೯

# ಸರಸ್ವತಿ ಮತ್ತು ಅವಳ ಸಹಚರಿಯರು

ಸರಸ್ವತೀ ದೇವತೆಯಲ್ಲಿ ವೇದದ ಸಾಂಕೇತಿಕತೆಯು ಅತ್ಯಂತ ಸ್ಪಷ್ಟವಾಗಿ ತನ್ನ ಸಾರವನ್ನು ಹೊರಗೆಡಹಿದೆ. ಉಳಿದ ದೇವತಾ ಸಂಕೇತಗಳಲ್ಲಿ ಅಂತರರ್ಥ-ಬಹಿರರ್ಥಗಳ ಸಮತೂಕವನ್ನು ಎಚ್ಚರಿಕೆಯಿಂದ ಉಳಿಸಿಕೊಂಡು ಬರಲಾಗಿದೆ. ಕೆಲವೊಮ್ಮೆ ಅವುಗಳ ಮುಸುಕು ಪಾರದರ್ಶಕ-ವಾಗಿದ್ದರೆ ಮತ್ತೆ ಕೆಲವೆಡೆ ಅದರ ತುದಿಗಳನ್ನೆತ್ತಿ ಸಾಮಾನ್ಯ ವೇದಶ್ರಾವಕನಿಗೂ ತಿಳಿಯುವಂತೆ ಮಾಡಲಾಗಿದೆ. ಆದರೆ ಆ ಮುಸುಕನ್ನು ಎಲ್ಲಿಯೂ ಪೂರ್ಣವಾಗಿ ತೆರೆದಿಡಲಿಲ್ಲ. ಅಗ್ನಿಯು ಯಜ್ಞಾಗ್ನಿಯ ಮೂರ್ತೀಕರಣವಷ್ಟೇ ಏಕಾಗಿರಬಾರದು? ಎಂದು ಒಬ್ಬ ಸಂಶಯಪಡಬಹುದು ; ಅಥವಾ ವಸ್ತುಗತವಾದ ಭೌತಿಕ ಕಾವು ಹಾಗೂ ಬೆಳಕಿನ ಆಕಾರವಷ್ಟೇ ಏಕಾಗಿರಬಾರದು? ಎಂದು ಶಂಕೆ ಪಡಬಹುದು. ಹಾಗೇ ಇಂದ್ರನು ಕೇವಲ ಆಕಾಶದೇವ, ಮಳೆಯೊಡೆಯ ಯಾ ಭೌತಿಕ ಬೆಳಕು ಆಗಿರಬಾರದೇಕೆ? ಅದೇ ಪ್ರಕಾರ ವಾಯುವು ಕೇವಲ ವಾತ ಮತ್ತು ಗಾಳಿಯಾಗಿರ-ಬಾರದೇಕೆ? ಅದೇಕೆ ಆ ದೇವತೆಯು ಪ್ರಾಣ ಸಂಜ್ಞೆಯಷ್ಟೇ ಆಗಿರಬಾರದು? ಎಂಬ ಸಂದೇಹ ಬರಬಹುದು. ಕೆಲದೇವತೆಗಳಲ್ಲಿ ಪ್ರಕೃತಿ ಪೂಜಾ ವಿಧಾನದ ಅರ್ಥವಿವರಣೆಗೆ ವಿಶ್ವಾಸ ಹುಟ್ಟಿಸುವಷ್ಟು ಗಟ್ಟಿಯಾದ ಆಧಾರವಿಲ್ಲ ; ಏಕೆಂದರೆ, ವರುಣನು ಕೇವಲ ವೈದಿಕ ಯುರೇನಸ್ ಯಾ ನೆಪ್‌ಚೂನ್ ಅಲ್ಲ ; ಅವನು ಅತಿದೊಡ್ಡ ಮತ್ತು ಅತಿಮುಖ್ಯ ನೈತಿಕ ಕಾರ್ಯಭಾರವುಳ್ಳ ದೇವನು ; ಮಿತ್ರನೂ ಭಗನೂ ಅದೇ ಮಾನಸಶಾಸ್ತ್ರೀಯ ಅಂಶವನ್ನುಳ್ಳ ದೇವತೆಗಳು. ಮನದಲ್ಲಿ ವಸ್ತುಗಳನ್ನು ನಿರ್ಮಿಸುವ ಮತ್ತು ಕರ್ಮದಿಂದ ಅಮೃತತ್ವವನ್ನು ರೂಪಿಸುವ ಋಭುಗಳನ್ನು ಹೇಗಾದರೂ ಮಾಡಿ ಮರ್ದಿಸಿ ಬಲಾತ್ಕಾರ ವಿಧಾನದಿಂದ ನಿಸರ್ಗವಾದೀಯ ಪುರಾಣ ಶಾಸ್ತ್ರಕ್ಕೆ ಒಳಪಡಿಸಬಹುದು. ಹೀಗೇ ಹೇಗಾದರೂ ಮಾಡಿ ವೈದಿಕ ಸೂಕ್ತಗಳನ್ನು ಕಂಡ ಕವಿಗಳ ಕಲ್ಪನೆಗಳ ಮೇಲೆ ಅಸ್ತವ್ಯಸ್ತ ಗೊಂದಲವನ್ನು ಆರೋಪಿಸಿ ಅರ್ಥೈಸುವಲ್ಲಿ ಬರುವ ಕಷ್ಟವನ್ನು ದಾಟಲಾಗದಿದ್ದರೂ ಕಾಲ ಕೆಳಗೆ ತುಳಿದಿಡಬಹುದು. ಆದರೆ ಸರಸ್ವತಿಯು ಅಂಥ ಯಾವ ಚಿಕಿತ್ಸೆಗೂ ಮಣಿಯಳು. ಅವಳು ಸ್ಪಷ್ಟವಾಗಿಯೂ ಸರಳವಾಗಿಯೂ ವಾಗ್‌ದೇವತೆ, ದಿವ್ಯ ಸ್ಫೂರ್ತಿಯ ಅಧಿದೇವತೆ.

ಇದರರ್ಥ ಇಷ್ಟೇ ಆದರೆ ಇದು ನಮ್ಮನ್ನು ಬಹಳ ದೂರ ಒಯ್ಯದು ; ಕಣ್ಣಿಗೆ ಕಂಡದ್ದಷ್ಟನ್ನೇ ಹೇಳಿದಂತಾಗುವುದು. ಆದರೆ ವೈದಿಕ ಋಷಿಗಳು ಕೇವಲ ನಿಸರ್ಗೋಪಾಸಕ ಬರ್ಬರರಾಗಿರಲಿಲ್ಲ ; ಅವರಿಗೆ ಮಾನಸ ಶಾಸ್ತ್ರೀಯ ಕಲ್ಪನೆಗಳಿದ್ದವು. ತಮ್ಮ ಕೃಷಿಕ, ಪಶುಪಾಲಕ ಮತ್ತು ಬಯಲು ವಾಸಗಳಿಗೆ ಸಂಬಂಧಿಸಿದ ಭೌತಿಕ ನಿಸರ್ಗದ ಕರ್ಮಗಳನ್ನು ಪ್ರತಿನಿಧಿಸುವ ಪೌರಾಣಿಕ ಸಂಕೇತಗಳನ್ನು ನಿರ್ಮಿಸುವ ಶಕ್ತಿ ಅವರಿಗಿತ್ತಲ್ಲದೆ, ಮನಸ್ಸು ಮತ್ತು ಜೀವಾತ್ಮಗಳ

ಅಂತಃಕ್ರಿಯೆಗಳನ್ನು ಪ್ರತಿನಿಧಿಸುವ ಸಂಕೇತಗಳನ್ನು ನಿರ್ಮಿಸುವ ಶಕ್ತಿಯೂ ಇತ್ತು. ಖಚಿತವಲ್ಲದಿದ್ದರೂ ಇಂದು ಸ್ವೀಕೃತವಾದ ತಾತ್ಕಾಲಿಕ ಅಭಿಪ್ರಾಯ ಇಂತಿದೆ:[೧] ಪ್ರಾಚೀನ ಮತಧರ್ಮ ವಿಚಾರದ ಚರಿತ್ರೆಯು ವಿಕಾಸ ಕ್ರಮವುಳ್ಳದ್ದು ; ಭೌತದಿಂದ ಆಧ್ಯಾತ್ಮಿಕಕ್ಕೆ, ಶುದ್ಧ ನಿಸರ್ಗೋಪಾಸನೆಯಿಂದ ನಿಸರ್ಗ, ಜಗತ್ತು ಹಾಗೂ ದೇವರುಗಳ ಬಗೆಗೆ ಹೆಚ್ಚು ಹೆಚ್ಚಿನ ನೈತಿಕ ಮತ್ತು ಮಾನಸಶಾಸ್ತ್ರೀಯ ದೃಷ್ಟಿಕೋನಕ್ಕೆ ಪ್ರಾಚೀನ ಮಾನವನ ಸಂತಾನವು ಏರುತ್ತಾ ಹೋಯಿತು. ಇದು ಸರಿಯಲ್ಲ. ವೇದದ ಕವಿಗಳು ಭೌತಿಕ ಮತ್ತು ನಿಸರ್ಗಾರಾಧನೆಯ ದೇವತಾಕಲ್ಪನೆಯನ್ನು ದಾಟಿ ನೈತಿಕ ಮತ್ತು ಆಧ್ಯಾತ್ಮಿಕ ದೇವತಾ ಕಲ್ಪನೆಗೆ ಆಗಲೇ ತಲುಪಿದ್ದರೆಂದು ನಾವು ಗ್ರಹಿಸಬೇಕಾಗುತ್ತದೆ. ಸರಸ್ವತಿಯಾದರೋ ಸ್ಫೂರ್ತಿದೇವಿಯಷ್ಟೇ ಅಲ್ಲ-ಅದೇ ಸಮಯದಲ್ಲಿ ಅವಳು ಪ್ರಾಚೀನ ಆರ್ಯ ಪ್ರಪಂಚದ ಏಳು ನದಿಗಳಲ್ಲಿ ಒಬ್ಬಳು. ಈ ಅಸಾಧಾರಣ ಏಕೀಕರಣ ಎಲ್ಲಿಂದ ಬಂದಿತು? ಎಂಬ ಪ್ರಶ್ನೆ ಏಳುತ್ತದೆ. ವೇದ ಸೂಕ್ತಗಳಲ್ಲಿ ಹೇಗೆ ಈ ಎರಡು ವಿಚಾರಗಳ ಸಂಬಂಧವು ಪ್ರಕಟಿಸಲ್ಪಟ್ಟಿತು? ಇನ್ನೂ ಹೆಚ್ಚು ಇದೆ-ಸರಸ್ವತಿಯು ಸ್ವತಃ ಪ್ರಮುಖಳಲ್ಲದೆ, ತನ್ನ ಸಂಬಂಧ-ಗಳಿಂದಲೂ ಅವಳು ಪ್ರಮುಖಳು. ಇನ್ನೂ ಮುಂದೆ ಹೋಗುವ ಮೊದಲು ಆ ಸೂಕ್ತಗಳತ್ತ ಒಂದು ಕ್ಷಣ ಲಕ್ಷ್ಯ ಹಾಕಿ (ಅರ್ಥಾತ್ ನಿಮಿಷಾವಲೋಕನ ಮಾಡಿ) ಅವು ನಮಗೇನನ್ನು ಕಲಿಸಬಲ್ಲವೆಂಬುದನ್ನು ತಿಳಿದುಕೊಳ್ಳೋಣ.

ಗ್ರೀಕ್ ಪುರಾಣಶಾಸ್ತ್ರದಲ್ಲೂ ನದಿಯೊಂದನ್ನು ಕಾವ್ಯಸ್ಫೂರ್ತಿಯೊಡನೆ ತಳಕು ಹಾಕಿದ್ದು ಕಂಡುಬರುತ್ತದೆ ; ಆದರೆ ಅಲ್ಲಿ ಕಲಾದೇವತೆಗಳನ್ನು ಹೊಳೆಗಳೆಂದು ಕಲ್ಪಿಸಿಲ್ಲ ; ಅಷ್ಟೇನೂ ಚೆನ್ನಾಗಿ ತಿಳಿಯಲಾರದ ರೀತಿಯಲ್ಲಿ ಅವುಗಳನ್ನು ಭೂಮಿಯಲ್ಲಿ ಹರಿವ ನದಿಯೊಡನೆ ಗಂಟು ಹಾಕಲಾಗಿದೆ. ಹಿಪ್ಪೋಕ್ರೀನ್ ಎಂಬುದೇ ಈ ನದಿ ; ಇದು ಕುದುರೆಯ ಒಂದು ಉತ್ಸ, ಚಿಲುಮೆ, ಬುಗ್ಗೆ. ಅದಕ್ಕೆ ಆ ಹೆಸರು ಬರಲು ಪೇಗಸಸ್ ಎಂಬ ಒಂದು ದಿವ್ಯಾಶ್ವದ ಗೊರಸಿನಿಂದ ಹುಟ್ಟಿದ್ದೇ ಕಾರಣವೆಂಬ ಕಥೆಯಿದೆ. ತನ್ನ ಗೊರಸಿನಿಂದ ಆ ಕುದುರೆಯು ಕಲ್ಲು ಬಂಡೆಯನ್ನು ಬಡಿಯಿತು; ಆಗ ಅದು ಬಡಿದ ಪರ್ವತ ಪ್ರದೇಶದಿಂದ ಸ್ಫೂರ್ತಿಯ ಜಲವು ಬುಗ್ಗೆಂದು ಚಿಮ್ಮಿತು. ಈ ಕಥೆಯು ಕೇವಲ ಒಂದು ಗ್ರೀಕ್ ಮಕ್ಕಳ ಕಥೆಯೋ (ಕಾಲ್ಪನಿಕ ದೇವತಾ ಕಥೆಯೋ) ಅಥವಾ ಇದಕ್ಕೇನಾದರೂ ವಿಶಿಷ್ಟ ಅರ್ಥವಿದೆಯೋ? ಇದಕ್ಕೇನಾದರೂ ಅರ್ಥವಿರುವುದೇ ಆದರೆ, ಸ್ಪಷ್ಟವಾಗಿ ಅದೊಂದು ಮಾನಸಶಾಸ್ತ್ರೀಯ ಘಟನೆಯನ್ನು ಸೂಚಿಸುವುದರಿಂದ, ಸ್ಫೂರ್ತಿಜಲೋದಯಕ್ಕೆ ಒಂದು ಮಾನಸ ಶಾಸ್ತ್ರೀಯ ಅರ್ಥ ಇರಲೇಬೇಕು. ಕೆಲ ಮಾನಸಶಾಸ್ತ್ರೀಯ ಘಟನೆಗಳನ್ನು ಒಂದು ಸ್ಥೂಲ ರೂಪದಲ್ಲಿಡಲು ಮಾಡಿದ ಪ್ರಯತ್ನವಾಗಿರಲೇಬೇಕದು. ಆರ್ಯ ಉಚ್ಚಾರಶಾಸ್ತ್ರಾನುಸಾರವಾಗಿ ಬರೆದರೆ "ಪೇಗಸಸ್ಸು" "ಪಾಜಸ"[೨] ವಾಗಿ ಪರಿಣಮಿಸುವುದು.

---

೧. ಧಾರ್ಮಿಕ ಕಲ್ಪನೆಗಳ ಪ್ರಾಥಮಿಕ ಚರಿತ್ರೆ ಬರೆಯಲು ಮತ್ತು ಮೊಟ್ಟಮೊದಲ ಮೂಲವನ್ನು ತಿಳಿದುಕೊಳ್ಳಲು ನಮಗೆ ಬೇಕಾದ ಸಾಮಗ್ರಿಗಳಿವೆ ಎಂದು ನನಗನ್ನಿಸುವುದಿಲ್ಲ. ಸಿಕ್ಕಿರುವ ಸಾಮಗ್ರಿಗಳಿಂದ ತೋರುವುದೇನೆಂದರೆ, ಪ್ರಾಚೀನೋಪದೇಶಗಳು ಮಾನಸಶಾಸ್ತ್ರೀಯವೂ ನಿಸರ್ಗೋಪಾಸನ ಪರವೂ ಆಗಿದ್ದವು ; ಅವುಗಳಿಗೆ ಎರಡು ಮುಖಗಳಿದ್ದವು. ಮೊದಲನೆಯದು ಮಸುಕಾಗುತ್ತಾ ಹೋಯಿತು. ಆದರೆ ಅದು ಸಂಪೂರ್ಣವಾಗಿ ಅಳಿಸಿಹೋಗಲಿಲ್ಲ. ಬರ್ಬರ ಕುಲಗಳಲ್ಲೂ ಅದು ಉಳಿಯಿತು. ಉದಾ : ಉತ್ತರ ಅಮೇರಿಕದ ಕಾಡು ಸಂತಾನಗಳು. ಆದರೆ ಈ ಉಪದೇಶವು, ಇತಿಹಾಸಪೂರ್ವ ಕಾಲದ್ದಾಗಿದ್ದರೂ, ಪ್ರಾಥಮಿಕ ಅರೆಪೊರಕ ಒರಟು ಉಪದೇಶವಂತೂ ಆಗಿರಲಿಲ್ಲ.

೨. Pajasa

ಪಾಜಸವೆಂಬ ಪದವು ಸ್ಪಷ್ಟವಾಗಿ ಸಂಸ್ಕೃತದಲ್ಲಿ ಪ್ರಣೋದಕ ಶಕ್ತಿ ಎಂಬ ಮೂಲಾರ್ಥವುಳ್ಳ ಪದಕ್ಕೆ ಹೊಂದುತ್ತದೆ. ಪ್ರಣೋದನ (ಪ್ರಚೋದನ)ಶಕ್ತಿ, ಉಚ್ಚಲನಗತಿ, ಕೆಲವೆಡೆ ಹೆಜ್ಜೆ ಹಾಕುವುದು ಎಂಬರ್ಥಗಳದಕ್ಕೆ ಹೊಂದುತ್ತವೆ. ಗ್ರೀಕಿನಲ್ಲಿಯೇ ಅದಕ್ಕೆ ಪೇಗೇ=ಹೊಳೆ ಎಂಬರ್ಥವಿದೆ (ನದ್ಯರ್ಥಕವಾಗಿದೆ). ಆದುದರಿಂದ ಉಕ್ತ ಕಥಾನುಸಾರವಾಗಿ ಸ್ಫೂರ್ತಿಯ ರಭಸಯುಕ್ತ ಚಲನ ಎಂಬ ಅರ್ಥದೊಡನೆ ಅದಕ್ಕೆ ಸತತ ಸಂಬಂಧ ಉಂಟಾಗುತ್ತದೆ. ನಾವೀಗ ವೈದಿಕ ಸಂಕೇತಗಳತ್ತ ತಿರುಗಿ ನೋಡಿದರೆ, ಅಶ್ವವು (ಕುದುರೆಯು) ಜೀವನದ ಒಂದು ಮಹಾ ಉತ್ಕ್ರಿಯಾತ್ಮಕ ಚೋದನಾ ಶಕ್ತಿಯ 'ಪ್ರತಿಮೆ'(ಪ್ರತೀಕ)-ಯಾಗಿದೆ. ಈ ಜೀವಶಕ್ತಿಯು ಪ್ರಾಣಿಕ ಮತ್ತು ನಾಡೀಯ ಶಕ್ತಿಯಾಗಿದೆ ಮತು ಅದನ್ನು ಉಕ್ತ ಪ್ರಜ್ಞೆಯೊಡನೆ ಪದೇ ಪದೇ ಸಂಯೋಜಿಸಲಾಗಿದೆ. ಅದ್ರಿಯು ಕಲ್ಲಿನ ಗುಡ್ಡ. ಅದು ನಮ್ಮ ಲೋಕಾಭಿರಾಮ ಜೀವನದ ಸಂಕೇತ-ಅದರಲ್ಲೂ ಭೌತಿಕ ಪ್ರಕೃತಿಯ ಔಪಚಾರಿಕ ಬಾಳಿನ ಒಂದು ರೂಪಕ. ಸೂರ್ಯನ ಗೋಲಿಗಳನ್ನು ಈ ಬಂಡೆಗಲ್ಲ ಗುಡ್ಡೆಯಿಂದಲೆ ಜಿಡಿಸಿಕೊಂಡು ಬಂದದ್ದು ಆಗ ಜಲವು ಧಾರಾಕಾರವಾಗಿ ಹರಿಯತೊಡಗಿತು. ಈ ಶಿಲೆಗಲ್ಲ ಗುಡ್ಡದಿಂದಲೇ ಮಧು (ಜೇನುತುಪ್ಪ), ಸೋಮ ಎಂಬುದರ ಧಾರೆಗಳನ್ನು ಕೆಚ್ಚಲಿನಿಂದ ಹಾಲು ಕರೆದಂತೆ ಕರೆಯಲಾಯಿತು ಎನ್ನಲಾಗಿದೆ. ಹೀಗೆ ನೋಡಿದರೆ, ಗ್ರೀಕ್ ಕಥೆಯ ಅಶ್ವಶಫಾಘಾತವು, ಕುದುರೆಗೊರಸಿನ ಹೊಡೆತವು ಬಂಡೆಯಿಂದ ಸ್ಫೂರ್ತಿಜಲವನ್ನು ಹೊರಡಿಸಿದ್ದು ಸ್ಪಷ್ಟವಾಗಿಯೂ ಒಂದು ಮಾನಸ ಶಾಸ್ತ್ರೀಯ ರೂಪಕೋಕ್ತಿ, ಪ್ರತಿಮೆ ಎಂದೇ ಹೇಳಬೇಕಾಗುತ್ತದೆ. ಪ್ರಾಚೀನ ಅದ್ಭುತಗಳ ಶರೀರವೇ ಆಗಿದ್ದ ಯೌಗಿಕ ಮತ್ತು ಕವೀಯ ಪ್ರತಿಮಾವಳಿಯ ಎರಕದಚ್ಚಿಗೆ ಅಂಥ ಮಾನಸಶಾಸ್ತ್ರೀಯ ಅನುಭವಗಳನ್ನು ಹಳೆಯ ಕಾಲದ ಗ್ರೀಕರೂ ಭಾರತೀಯರೂ ಹೊಯ್ಯಲಾರದವರಾಗಿದ್ದರೆಂದು ಹೇಳಲು ನಮಗೆ ಯಾವ ಕಾರಣವೂ ಇಲ್ಲ.

ಇನ್ನೂ ಮುಂದೆ ಹೋಗಿ ನಾವು "ಬೇಲ್ಲೇರುಸ್" ಎಂಬ ಶತ್ರುವನ್ನು ಅಶ್ವಾರೂಢನಾಗಿ ಹೋಗಿ ಕೊಂದ ಗ್ರೀಕ್ ವೀರ "ಬೇಲ್ಲೇರೋಫಾನ್" ಮತ್ತು ಬೆಳಕನ್ನು ತನ್ನೊಳಗೇ ಮುಚ್ಚಿಟ್ಟುಕೊಂಡಿದ್ದ ವಲನನ್ನು ಕೊಂದು "ವಲಹನ್" ಎನ್ನಿಸಿದ ವೈದಿಕ ವೀರನಾದ ಇಂದ್ರ-ಇವರಿಬ್ಬರಲ್ಲಿ ಮೂಲ ಸಂಬಂಧವೇನಾದರೂ ಇರಲಿಕ್ಕಿಲ್ಲವೇನು? ಎಂದು ಕೇಳಬಹುದು. ಆದರಿದು ನಮ್ಮನ್ನು ನಾವು ತೆಗೆದುಕೊಂಡ ವಿಷಯದ ಗಡಿಯ ಆಚೆಗೆ ಒಯ್ಯುತ್ತದೆ. ಹಾಗೇ ಪೇಗಸಸ್ ಕಥೆಯ ಅರ್ಥವಿವರಣೆಯೂ ಪ್ರಾಚೀನರ ಕಲ್ಪನಾಶಕ್ತಿಯ ಸ್ವಾಭಾವಿಕ ತಿರುಹು ಹೇಗಿತ್ತೆಂಬುದಕ್ಕಿಂತ ಮತ್ತು ಸ್ಫೂರ್ತಿಧಾರೆಯನ್ನು ಅವರು ಹೇಗೆ ನಿಜವಾದ ಹರಿನೀರಿನ ಹೊಳೆಯನ್ನಾಗಿ ಸಂಕೇತಿಸಿದರೆಂಬುದಕ್ಕಿಂತ ನಮ್ಮನ್ನು ಮುಂದಕ್ಕೆ ಒಯ್ಯಲಾರದು. "ಸರಸ್ವತಿ" ಎಂದರೆ "ನದೀಯೆ, ಪ್ರವಹಚ್ಚಲನೆ" ; ಆದ್ದರಿಂದ ಅದು ನದಿಗೂ ಸ್ಫೂರ್ತಿ ದೇವತೆಗೂ ಸ್ವಾಭಾವಿಕ ಹೆಸರಾಯಿತು. ಆದರೆ, ಸ್ಫೂರ್ತಿ ನದಿಯ ಸಾಮಾನ್ಯ ಕಲ್ಪನೆಯನ್ನು ಯಾವ ವಿಚಾರ ಪ್ರಕ್ರಿಯೆಯ ಮೂಲಕ ವಿಶೇಷ ಭೂವಾಹಿನಿಯೊಡನೆ ಗಂಟು ಹಾಕಲಾಯಿತು? ವೇದದಲ್ಲಿ ಯಾವುದಾದರೂ ಒಂದೇ ಒಂದು ನೈಸರ್ಗಿಕವೂ ಪೌರಾಣಿಕವೂ ಆದ ನದಿಯು ಮಾತ್ರ ತನ್ನ ಆವರಣಗಳ ಮೂಲಕ ಪವಿತ್ರ ಸ್ಫೂರ್ತಿಯ ಕಲ್ಪನೆಯೊಡನೆ ತಳಕು ಹಾಕುವುದು ಯೋಗ್ಯ ಎಂದು ಹೇಳಲು ಅವಕಾಶವಿಲ್ಲ. ಏಕೆಂದರಿಲ್ಲಿ ಒಂದಲ್ಲ-ಏಳು ನದಿಗಳಿವೆ. ಈ ಏಳೂ ಯಾವಾಗಲೂ ಋಷಿಗಳ ಮನದಲ್ಲಿ ಸಹಚಲಿಯರಾಗಿಯೇ ಇರುತ್ತವೆ ಮತ್ತು ಅವುಗಳ ಹುಟ್ಟು ಸೆಲೆಯ ಮೇಲೆ ತೆಕ್ಕೆಯಿಂದ ಮುದ್ರೆಯೊತ್ತಿ ಅವು ಹೊರ ಹೊರಡದಂತೆ ಮಾಡಿದ ಹೆಬ್ಬಾವನ್ನು (ಅಹಿಯನ್ನು) ಇಂದ್ರದೇವನು ಬಡಿದೊಡಿಸಿದಾಗ ಈ ಏಳೂ ನದಿಗಳು ಒಟ್ಟಿಗೇ ಮುಕ್ತವಾಗುತ್ತದೆ. ಈ ಏಳರಲ್ಲಿ ಒಂದು ನದಿಯು ಮಾತ್ರ

ಮಾನಸಶಾಸ್ತ್ರೀಯ ಅರ್ಥವನ್ನು ಪಡೆಯಿತೆಂದೂ ಮಿಕ್ಕ ಆರು ನದಿಗಳು ಪಂಜಾಬಿನ ವಾರ್ಷಿಕ ವೃಷ್ಟ್ಯಾಗಮನದೊಡನೆ ಮಾತ್ರ ಸಂಬಂಧ ಇಟ್ಟುಕೊಂಡವೆಂದೂ ಊಹಿಸುವುದು ಅಸಾಧ್ಯವೇ ಸರಿ. ಸರಸ್ವತಿಯ ಮಾನಸಶಾಸ್ತ್ರೀಯ ಅರ್ಥವು ವೈದಿಕ ಜಲದ ಇಡೀ ಸಂಕೇತದ ಅರ್ಥವನ್ನು ತನ್ನೊಡನೆಯೇ ತೆಗೆದುಕೊಂಡು ಹೋಗುತ್ತದೆ.

ಸರಸ್ವತಿಯನ್ನು ಕೇವಲ ನದಿಗಳೊಡನೆ ಗಂಟು ಹಾಕಿಲ್ಲ. ಅವಳನ್ನು "ಭಾರತೀ" ಮತ್ತು "ಇಳಾ" ಎಂಬಂತಹ ಸರಳ ಮಾನಸಶಾಸ್ತ್ರೀಯ ಸಂಕೇತಗಳೊಡನೆ ತಳಕು ಹಾಕಲಾಗಿದೆ. ಉತ್ತರಕಾಲೀನ[೧] ಪುರಾಣ ಪೂಜಾ ಪದ್ಧತಿಯಲ್ಲಿ ಸರಸ್ವತಿಯು ವಾಗ್ದೇವಿ, ವಿದ್ಯಾದೇವತೆ, ಕಾವ್ಯದೇವತೆ ; ಭಾರತಿಯು ಅವಳ ಅನೇಕ ಹೆಸರುಗಳಲ್ಲಿ ಒಂದು. ಆದರೆ ವೇದದಲ್ಲಿ ಭಾರತಿ-ಸರಸ್ವತಿಯರು ಭಿನ್ನ ದೇವತೆಗಳು. ಭಾರತಿಗೆ ಮಹಿ ಎಂಬ ಹೆಸರೂ ಇದೆ. "ಮಹೀ" ಎಂದರೆ ವ್ಯಾಪಕವಾದುದು, ಮಹತ್ತಾದುದು ಅಥವಾ ವಿಸ್ತಾರವಾದುದು ಎಂದರ್ಥ. ಅಗ್ನಿಯು ದೇವತೆಗಳನ್ನು ಯಜ್ಞಕ್ಕೆ ಕರೆಯುವಾಗ ಇಳಾ, ಮಹೀ ("ಭಾರತೀ"), ಸರಸ್ವತಿಯರನ್ನು (ತತ್ಸಂಬದ್ಧ ಸೂಕ್ತಗಳಲ್ಲಿ) ಒಂದೇ ಸೂತ್ರ ವಿನ್ಯಾಸದಲ್ಲಿ ಯಾವಾಗಲೂ ಇಡಲಾಗುತ್ತದೆ.

**ಇಳಾ ಸರಸ್ವತೀ ಮಹೀ ತಿಸ್ರೋದೇವೀರ್ ಮಯೋಭುವಃ,**
**ಬರ್ಹಿಃ ಸೀದಂತ್ವಸ್ರಿಧಃ (I. 13.9)**

"ಎಡಹದೆ ನಡೆಯುವ, ಆನಂದವನ್ನು ಪ್ರಸವಿಸುವ ಇಳಾ, ಸರಸ್ವತೀ, ಮಹಿಯರೆಂಬ ಮೂವರು ದೇವಿಯರು ಯಜ್ಞವೇದಿಕೆಯಲ್ಲಿ ಸ್ವಸ್ಥಾನಾಪನ್ನರಾಗಲಿ" : ಅಥವಾ "ಹಿಂಸಿಸಲು ಬರದ ಯಾ ಹಿಂಸಿಸದ ಯಾ ಎಡಹದ" ಎಂದು ಬದಲು ಮಾಡಿಕೊಳ್ಳಬಹುದು. ಉಕ್ತ ವಿಶೇಷಣಕ್ಕೆ ನನ್ನ ಪ್ರಕಾರ, "ದುರಿತಂ" ದುಷ್ಪರಿಣಾಮಕರವಾದ ಅನೃತಚಲನವಿಲ್ಲದ, ಪಾಪದ ಅಥವಾ ತಪ್ಪಿನ ಹೊಂಡದಲ್ಲಿ ಬೀಳದ" ಎಂದು ಅರ್ಥೈಸಬಹುದು. ೧೦ ನೆಯ ಮಂಡಲದ ೧೧೦ ನೆಯ ಸೂಕ್ತದಲ್ಲಿ ಈ ಸೂತ್ರವಿನ್ಯಾಸವನ್ನು ವಿಸ್ತರಿಸಲಾಗಿದೆ:

**ಆ ನೋ ಯಜ್ಞಂ ಭಾರತೀ ತೂಯಮೇತು,**
**ಇಳಾ ಮನುಷ್ವದ್ ಇಹ ಚೇತಯಂತೀ ।**
**ತಿಸ್ರೋದೇವೀರ್ ಬರ್ಹಿರೇದಂ ಸ್ಯೋನಂ**
**ಸರಸ್ವತೀ ಸ್ವಪಸಃ ಸದಂತು ॥**

"ನಮ್ಮ ಯಜ್ಞಕ್ಕೆ ಭಾರತಿಯು ಬೇಗ ಬರಲಿ ; ನಮ್ಮ ಪ್ರಜ್ಞೆಯನ್ನೆಚ್ಚರಿಸುತ್ತಾ ವಿವೇಕಿಯಾದ ಇಳೆಯು ನರನಲ್ಲಿ ಇಳಿದು ಬರಲಿ ; ಮತ್ತು ಅವರೂ ಸರಸ್ವತಿಯೂ ಸೇರಿ ಮೂವರು ದೇವಿಯರೂ ಈ ಆನಂದಮಯ ಆಸನದಲ್ಲಿ ಕುಳಿತುಕೊಳ್ಳಲಿ - ಕೆಲಸವನ್ನು ಚೆನ್ನಾಗಿ ಮಾಡುತ್ತಿರಲಿ. "ಪ್ರಜ್ಞೆ"=ಜ್ಞಾನ ಯಾ ಪ್ರತ್ಯಕ್ಷಜ್ಞಾನ. ಸರಸ್ವತಿಯ ಸ್ಫೂರ್ತಿದಾಯಕ ಶಕ್ತಿಗೆ ಹತ್ತಿರವಾದ ಕರ್ತವ್ಯದಲ್ಲಿ ಈ ಮೂವರು ದೇವಿಯರೂ ನಿಕಟ ಸಂಬಂಧವುಳ್ಳವರು. ಸರಸ್ವತಿಯು ಶಬ್ದ, ವಾಕ್, ಋತಜಾತ ಸ್ಫೂರ್ತಿ,

---

೧. ಉತ್ತರಕಾಲೀನ ಭಾರತೀಯ ವಿಚಾರದಲ್ಲಿ ನದಿಗಳಿಗೆ ಸಾಂಕೇತಿಕ ಅರ್ಥವಿದೆ. ಉದಾ : ತಾಂತ್ರಿಕಪ್ರತಿಮಾಶಾಸ್ತ್ರದಲ್ಲಿ ಗಂಗಾ ಯಮುನಾ ಸರಸ್ವತಿಯರೂ ಅವರ ಸಂಗಮವೂ (ಯೋಗ ಶಾಸ್ತ್ರೀಯ) ಯೌಗಿಕ ಸಂಕೇತಗಳಾಗಿವೆ. ಬೇರೆ ಬಗೆಯಿಂದಾದರೂ ಯೌಗಿಕ ಸಾಂಕೇತಿಕತೆಯಲ್ಲಿ ಸಾಮಾನ್ಯವಾಗಿ ಆ ಸಂಕೇತಗಳನ್ನು ಬಳಸಲಾಗುತ್ತದೆ.

ಪರಮಸತ್ಯಪ್ರಜ್ಞೆ ಎಂಬ ಅರ್ಥವನ್ನು ನಾನು ಸೂಚಿಸುತ್ತೇನೆ. ಭಾರತಿಯೂ ಇಳೆಯೂ ಅದೇ ಶಬ್ದದ ಯಾ ಜ್ಞಾನದ ಭಿನ್ನ ರೂಪಗಳಾಗಿರಬೇಕು. ಮಧುಚ್ಛಂದಸ್ ಋಷಿಯ ೮ ನೆಯ ಸೂಕ್ತದಲ್ಲಿರುವ ಒಂದು ಋಕ್ಕಿನಲ್ಲಿ ಭಾರತಿಯನ್ನು ಮಹಿಯೆಂದು ಕರೆಯಲಾಗಿದೆ.

**ಏವಾ ಹ್ಯಸ್ಯ ಸೂನೃತಾ, ವಿರಪ್‌ಶೀ ಗೋಮತೀ ಮಹೀ**
**ಪಕ್ವಾ ಶಾಖಾ ನ ದಾಶುಷೇ ॥**

"ತನ್ನ ಸ್ವಭಾವದಲ್ಲಿ ಒಂದು ಸುಖ ಸತ್ಯಳಾದ ಹಾಗೂ ತನ್ನಲ್ಲಿಯ ಸಂಪತ್ತಿನಿಂದ ತುಂಬಿ ಕೋಡಿವರಿಯುತ್ತಿರುವ ಕಿರಣಮಯ ಇಂದ್ರನಿಗಾಗಿ ಇರುವ ಮಹೀದೇವಿ ಯಜ್ಞದಾತನಿಗೆ ಪಕ್ವವಾದ (ಹಣ್ಣುಗಳಿಂದ ತುಂಬಿದ) ವೃಕ್ಷಶಾಖೆಯಂತಾಗಲಿ" (I.8.8)

ವೇದದಲ್ಲಿ ಕಿರಣಗಳೆಂದರೆ ಸೂರ್ಯನ ಕಿರಣಗಳು ಅಥವಾ ಸೂರ್ಯನೇ ಎಂದರ್ಥ. ಮಹೀದೇವಿಯು ಭೌತಿಕ ಬೆಳಕಿನ ಅಧಿದೇವತೆ ಎಂದು ನಾವು ಭಾಷಾಂತರಿಸಬೇಕೋ ಅಥವಾ "ಗೋ" ಎಂಬುದನ್ನು ದನವೆಂದು ಭಾವಿಸಿ ಮಹಿಯು ಯಜಮಾನನಿಗಾಗಿ ದನಕರುಗಳನ್ನು ಹೊತ್ತು ತರುವ ದೇವತೆ ಎಂದು ಭಾಷಾಂತರಿಸಬೇಕೋ? ಎರಡನೆಯ ಹಾಸ್ಯಾಸ್ಪದ ಊಹೆಯಿಂದ ನಮ್ಮನ್ನುಳಿಸಲು ಸರಸ್ವತಿಯ ಮಾನಸಶಾಸ್ತ್ರೀಯ ಲಕ್ಷಣವು ನೆರವಿಗೆ ಬರುತ್ತದೆ; ಆದರೆ ಅದು ಅಷ್ಟೇ ತೂಕದಿಂದ ನಿಸರ್ಗೋಪಾಸನಪರವಾದ ಅರ್ಥವಿವರಣೆಯನ್ನು ನಿಷೇಧಿಸುತ್ತದೆ. "ಯಜ್ಞದಲ್ಲಿ ಮಹಿಯು ಸರಸ್ವತಿಯ ಗೆಳತಿ, ಸ್ಫೂರ್ತ್ಯಧಿದೇವತೆಯ ಸೋದರೆ, ಉತ್ತರಕಾಲೀನ ಪುರಾಣ ಶಾಸ್ತ್ರದಲ್ಲಿ ಸರಸ್ವತಿಯಲ್ಲಿ ಐಕ್ಯ ಹೊಂದಿದವಳು" ಎಂಬ ಈ ಮಹೀಲಕ್ಷಣವು ಬೆಳಕೆಂಬುದು ವೇದದಲ್ಲಿ ಜ್ಞಾನದ, ಆಧ್ಯಾತ್ಮಿಕ, ಸ್ಫೂರ್ತಿಯ, ಸಂಕೇತವೆಂಬುದಕ್ಕೆ ದೊರಕುವ ನೂರಾರು ಪ್ರಮಾಣಗಳಲ್ಲಿ ಒಂದು. ಸೂರ್ಯನು ಅತ್ಯುಚ್ಚದೃಷ್ಟಿಯ, ಅತಿ ವಿಶಾಲ ಬೆಳಕಿನ "ಬೃಹತ್ ಜ್ಯೋತಿಃ" - ಒಡೆಯನು ; ಅಥವಾ ಕೆಲವೊಮ್ಮೆ ಹೇಳಿದಂತೆ ನಿಜವಾದ ಬೆಳಕು - "ಋತಂ ಜ್ಯೋತಿಃ" ಮತ್ತು ಋತ ಮತ್ತು ಬೃಹಚ್ಛಬ್ದಗಳ ಸಂಬಂಧವು ವೇದದಲ್ಲಿ ಸತತ.

ಈ ಹೇಳಿಕೆಗಳಲ್ಲಿ ಜ್ಯೋತಿರ್ಮಯ ಪ್ರಜ್ಞೆಯ ಸೂಚನೆಯನ್ನಲ್ಲದೆ ನನಗೆ ಮತ್ತೇನನ್ನೂ ಕಾಣಲು ಸಾಧ್ಯವಾಗದು. ಈ ಪ್ರಜ್ಞೆಯು ವಿಶಾಲ, "ಬೃಹತ್"; ಅಸ್ತಿತ್ವದ (ಸತ್ತೆಯು) ಸತ್ಯದಿಂದ ತುಂಬಿದ್ದು ಮತ್ತು ಜ್ಞಾನ ಹಾಗೂ ಕ್ರಿಯೆಗಳ ಸತ್ಯ, "ಋತಂ" ದೇವತೆಗಳಿಗೆ ಈ ಪ್ರಜ್ಞೆಯಿದೆ. ಉದಾ-ಅಗ್ನಿಯನ್ನು "ಋತಚಿತ್" ಎಂದು ಕರೆಯಲಾಗಿದೆ. ಅವನು ಪರಮಸತ್ಯಪ್ರಜ್ಞೆಯುಳ್ಳವ-ನೆಂದರ್ಥ. ಮಹಿಯ ಮೈತುಂಬಾ ಈ ಸೂರ್ಯನ ಕಿರಣಗಳಿವೆ ; ಮಹೀದೇವಿಯು ಈ ಪ್ರಬೋಧವನ್ನು ಹೊತ್ತು ಒಯ್ಯುತ್ತಾಳೆ. ಅಲ್ಲದೆ, ಅವಳು "ಸೂನೃತಾ" - ಅವಳು ಆನಂದಮಯ ಸತ್ಯದ ಶಬ್ದ. ಸುಖಕರ ಸತ್ಯ ಪ್ರಬೋಧಿಕೆ ಎಂದು ಸರಸ್ವತಿಯನ್ನು ವರ್ಣಿಸಿದಂತೆ ಅವಳು "ಚೋದಯಿತ್ರೀ ಸೂನೃತಾನಾಂ". ಕೊನೆಯದಾಗಿ ಅವಳು "ವಿರಪ್‌ಶಿ" ವಿಶಾಲೆ ಅಥವಾ ಅವಳು ಚಿಲಿದು ಅಪಾರ ಸಂಪತ್ತಾಗುತ್ತಾಳೆ. ಈ ಪದವು ಪರಮಸತ್ಯವು ಒಂದು ವಿಶಾಲತೆ "ಋತಂಬೃಹತ್" ಎಂಬುದನ್ನು ನಮಗೆ ನೆನಪು ಮಾಡಿಕೊಡುತ್ತದೆ. ಇನ್ನೊಂದು ಸೂಕ್ತದಲ್ಲಿ (I.22.10) ಅವಳನ್ನು "ವರೂತ್ರೀ ಧಿಷಣಾ" = ವಿಶಾಲವಾಗಿ ಮುಸುಕುವ ಯಾ ಆಲಿಂಗಿಸುವ ವಿಚಾರಶಕ್ತಿ ಎಂದು ವರ್ಣಿಸಲಾಗಿದೆ. ಆದ್ದರಿಂದ ಮಹಿಯು ಪರಮಸತ್ಯದ ಪ್ರಕಾಶಮಯವಾದ (ಪ್ರಬೋಧಮಯವಾದ) ವೈಶಾಲ್ಯ. ಅವಳು ವೈಶಾಲ್ಯವನ್ನು (ಬೃಹತ್ತನ್ನು) ಪ್ರತಿನಿಧಿಸುತ್ತಾಳೆ-ಋತವೆಂಬ ಪರಮಸತ್ಯವನ್ನೊಳಗೊಂಡ

ಅತಿಮಾನಸವನ್ನವಳು ಸಂಕೇತಿಸುತ್ತಾಳೆ. ಆದ್ದರಿಂದ ಅವಳು ಯಾಜಕನಿಗೆ ಪಕ್ವಫಲ ತುಂಬಿದ ವೃಕ್ಷಶಾಖೆಯಂತಿದ್ದಾಳೆ.

ಇಳೆ ಕೂಡಾ ಸತ್ಯದ ಶಬ್ದ ; ಉತ್ತರಕಾಲೀನ ಗಲಿಬಿಲಿಯಿಂದ ಅವಳ ಹೆಸರು ವಾಕ್ಕಿನ ಕಲ್ಪನೆಯಲ್ಲಿ ಬೆರೆತು ಹೋಯಿತು. ಸರಸ್ವತಿಯು ಹೇಗೆ ಸರಿಯಾದ ಚಿಂತನವನ್ನೂ ಮನಸ್ಥಿತಿಯನ್ನೂ ಏಳಿಸುವವಳೋ "ಚೇತಂತೀ ಸುಮತೀನಾಂ" ಹಾಗೇ ಇಳಾದೇವಿಯು ಯಜ್ಞಕ್ಕೆ ಬಂದು ಜ್ಞಾನದತ್ತ ಯಾಜಕನನ್ನು ಎಚ್ಚರಿಸುತ್ತಾಳೆ. - "ಚೇತಯಂತೀ". ಅವಳು ಶಕ್ತಿಮಯಿ, "ಸುವೀರಾ" ಮತ್ತು ಜ್ಞಾನವನ್ನು ತರುತ್ತಾಳೆ. ಸೂರ್ಯನೊಡನೆ ಅವಳ ಸಂಬಂಧವಿದೆ ; ಅಗ್ನಿ ಎಂಬ ಸಂಕಲ್ಪ ಶಕ್ತಿಯನ್ನು ಆಮಂತ್ರಿಸಿ (V.4.4) ಸೂರ್ಯನ ಕಿರಣಗಳ ಬಲದಿಂದ ದುಡಿಯಹಚ್ಚಲಾಗುತ್ತದೆ. (ಸೂರ್ಯನು ನಿಜಬೆಳಕಿನ ಯಾ ಪ್ರಬೋಧದ ಒಡೆಯ). ಇಳೆಯೊಡನೆ ಏಕ ಮನಸ್ಕತೆ ಇರುವುದರಿಂದ ಅವಳೊಡನೆ ಅಗ್ನಿಯನ್ನು ಆಹ್ವಾನಿಸಲಾಗುತ್ತದೆ- "ಇಳಯಾ ಸಜೋಷಾಯತಮಾನೋರಶ್ಮಿಭಿಃ ಸೂರ್ಯಸ್ಯ". ಅವಳು ಕಿರಣಗಳ ತಾಯಿ-ಕಿರಣಗಳು ಸೂರ್ಯನ ದನದ ಗೋಲೆ. ಅವಳ ಹೆಸರಿಗೆ "ಯಾರು ಹುಡುಕಿ ಪಡೆಯುತ್ತಾಳೋ ಅವಳು" ಎಂಬ ಅರ್ಥವಿದೆ. ಅದರಲ್ಲಿ ಋತಂ ಮತ್ತು ಋಷಿ ಎಂಬ ಪದಗಳ ಅರ್ಥ ಸಂಯೋಗವಿದೆ. ಆದುದರಿಂದ ಇಳೆಯು ಸತ್ಯಸಿದ್ಧಿಯನ್ನು ಪಡೆಯುವ ದ್ರಷ್ಟಾರನ ದರ್ಶನವಾಗಿರಬಹುದಾಗಿದೆ.

ಸರಸ್ವತಿಯು ಸತ್ಯ ಶ್ರವಣವನ್ನು, "ಶ್ರುತಿಯನ್ನು", ಪ್ರತಿನಿಧಿಸುತ್ತಾಳೆ. ಶ್ರುತಿಯು ಸ್ಫೂರ್ತಪದವನ್ನು ಕೊಡುತ್ತದೆ. ಆದ್ದರಿಂದ ಇಳೆಯು ದೃಷ್ಟಿಯನ್ನು ಪ್ರತಿನಿಧಿಸುತ್ತಾಳೆ; ದೃಷ್ಟಿ = ಸತ್ಯದರ್ಶನ. ಹಾಗಾದರೆ ದೃಷ್ಟಿಯೂ ಶ್ರುತಿಯೂ ಋಷಿಯ ಯಾ ಕವಿಯ ಎರಡು ಶಕ್ತಿಗಳಾಗಿರು-ವುದರಿಂದ (ಕವಿಯು ಸತ್ಯದ ದಾರ್ಶನಿಕ) ನಾವು ಇಳೆ ಮತ್ತು ಸರಸ್ವತಿಯರ ನಿಕಟ ಸಂಬಂಧವನ್ನು ತಿಳಿದುಕೊಳ್ಳಬಹುದು. ಭಾರತಿ ಅಥವಾ ಮಹಿಯು ಪರಸತ್ಯಪ್ರಜ್ಞೆಯ ವೈಶಾಲ್ಯ. ಅವಳು ಮಾನವನ ಪರಿಸೀಮಿತ ಮನದ ಮೇಲೆ ಹೊಳೆದು (ಉದಯಿಸಿ) ಉಕ್ತ ಇಬ್ಬರು ಬಲದೇವಿಯರನ್ನು ತನ್ನೊಡನೆ ಕರೆತರುತ್ತಾಳೆ. ಈ ಸೂಕ್ಷ್ಮವೂ ಜೀವಂತವೂ ಆದ ಪ್ರಭೇದಗಳು ಆಮೇಲೆ ವೈದಿಕ ಜ್ಞಾನವು ಇಳಿಯುತ್ತಾ ಹೋದ ಹಾಗೆ-ಹೇಗೆ ಅಲಕ್ಷಿತವಾದವು ಎಂಬುದನ್ನೂ ಭಾರತಿ, ಸರಸ್ವತಿ, ಇಳೆಯರು ಕರಗಿ ಹೇಗೆ ಒಂದಾದರೆಂಬುದನ್ನೂ ನಾವು ತಿಳಿದುಕೊಳ್ಳಬಲ್ಲೆವು.

ಈ ಮೂವರು ದೇವಿಯರು ಮಾನವನಿಗಾಗಿ ಮಯಸ್ಸನ್ನು ಯಾ ಆನಂದವನ್ನು ತರುವರು ಎಂದುದರ ಅರ್ಥವನ್ನೂ ನಾವು ಗಮನಿಸಬಹುದು. ವೈದಿಕ ದ್ರಷ್ಟಾರರು ಕಲ್ಪಿಸಿದಂತೆ ಪರಮಸತ್ಯ ಮತ್ತು ಆನಂದಗಳಿಗಿರುವ ನಿತ್ಯ ಸಂಬಂಧವನ್ನು ಆಗಲೇ ನಾನು ಒತ್ತಿ ಒತ್ತಿ ಹೇಳಿದ್ದೇನೆ. ಮನುಷ್ಯನಲ್ಲಿ ಅನಂತಪ್ರಜ್ಞೆ ಯಾ ಸತ್ಯಪ್ರಜ್ಞೆ ಮೂಡಿದ ಮೇಲೆ ಅವನು ದುಃಖದ ಹಾಗೂ ನೋವಿನ ಈ ದುಃಸ್ವಪ್ನದಿಂದ ಹೊರ ಜಿಗಿಯುತ್ತಾನೆ. ಇದು ಸೃಷ್ಟಿಯನ್ನು ವಿಭಜಿಸಿ ಆನಂದವನ್ನು ಪ್ರತ್ಯೇಕಿಸಿ ಹೇಳಿದೆ. ಆನಂದವನ್ನು ವೇದದಲ್ಲಿ ಸುಖಸ್ಥಿತಿ ಎಂದು ಮುಂತಾಗಿ ನಾನಾ ವಿಧವಾಗಿ ವರ್ಣಿಸಲಾಗಿದೆ. ಆನಂದವು ಭದ್ರಂ, ಮಯಸ್ (ಪ್ರೇಮ ಮತ್ತು ಸಂತೋಷ), ಸ್ವಸ್ತಿ=ಅಸ್ತಿತ್ವದ ಯಾ ಸತ್ತೆಯ ಒಳ್ಳೆಯ ಅವಸ್ಥೆ, ಸ್ಥಿತಿ-ನ್ಯಾಯವಾದ ಇರುವಿಕೆ. ಅದನ್ನು ಇತರರು ಕಡಿಮೆ ಪಾರಿಭಾಷಿಕತೆಯಿಂದ "ವಾರ್ಯಂ, ರಯಿಃ, ರಾಯಃ" ಎಂದು ಮುಂತಾಗಿ ಕರೆದಿದ್ದಾರೆ. ವೇದದ ಋಷಿಗೆ ಪರಮಸತ್ಯವು ಒಂದು ಮಾರ್ಗ ಮತ್ತು ಪಡಸಾಲೆ ; ದಿವ್ಯ ಜೀವನದ ಆನಂದವೇ ಗುರಿ : ಅಥವಾ ಪರಮಸತ್ಯವೇ ಬುನಾದಿ ಮತ್ತು ಪರಮಾನಂದವೇ ಅತ್ಯುನ್ನತ ಫಲ.

ಸರಸ್ವತಿಯ ಲಕ್ಷಣವು ಈ ಬಗೆಯದು. ಅವಳೊಂದು ಮಾನಸಶಾಸ್ತ್ರೀಯವಾದ ತತ್ವ. ಅವಳ ವಿಶಿಷ್ಟ ಕರ್ತವ್ಯ ಮತ್ತು ದೇವತೆಗಳಲ್ಲಿಯ ಅತ್ಯಂತ ಸದ್ಯೋವರ್ತಿಯಾದ ಜಂಟಿತನಗಳ ಸಂಬಂಧವು ಈ ಬಗೆಯದು. ಈ ಅಂಶಗಳು ವೈದಿಕ ನದಿಯಾಗಿರುವ ಅವಳು ತನ್ನ ಆರು ಸೋದರೀನದಿಗಳೊಡನೆ ಇಟ್ಟುಕೊಂಡ ಸಂಬಂಧದ ಮೇಲೆ ಎಷ್ಟರ ಮಟ್ಟಿಗೆ ಬೆಳಕನ್ನು ಬೀರುತ್ತವೆ? ವೈದಿಕ ಪದ್ಧತಿಯಲ್ಲಿ ಏಳು ಎಂಬ ಸಂಖ್ಯೆಯು ಇತರ ಹಳೆಯ ವಿಚಾರ ಪ್ರಸ್ಥಾನಗಳಲ್ಲಿ ಹೇಗೋ ಹಾಗೇ ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಅದು ಪದೇ ಪದೇ ಬರುವುದನ್ನು ನಾವು ಕಾಣುತ್ತೇವೆ. ಏಳು ಸಂತಸಗಳು-ಸಪ್ತರತ್ನಾನಿ ; ಏಳು ಜ್ವಾಲೆಗಳು-ಅಗ್ನಿ ನಾಲಿಗೆಗಳು ಯಾ ಕಿರಣಗಳು, "ಸಪ್ತ ಅರ್ಚಿಷಃ", "ಸಪ್ತಜ್ವಾಲಾಃ" ; ವಿಚಾರ ತತ್ವದ ಏಳು ರೂಪಗಳು, "ಸಪ್ತಧೀತಯಃ" ; ಏಳು ಗೋವುಗಳು ಅಥವಾ ಕಿರಣಗಳು, ಕೊಲ್ಲಲಾಗದ ಗೋವಿನ ರೂಪಗಳು, ದೇವತೆಗಳ ತಾಯಿಯಾದ ಅದಿತಿ, "ಸಪ್ತಗಾವಃ". ಏಳು ನದಿಗಳು, ಏಳು ಜನ ತಾಯಂದಿರು ಅಥವಾ ಸಪ್ತಧೇನವಃ = ಬೆಳೆಯಿಸುವವುಗಳು ; ಈ ಪದವನ್ನು ಅಲಕ್ಷ್ಯಭಾವದಿಂದ ದಿವ್ಯ ಕಿರಣಗಳಿಗೂ ದಿವ್ಯ ನದಿಗಳಿಗೂ ಅನ್ವಯಿಸಲಾಗಿದೆ. ಈ ಸಪ್ತಕಗಳೆಲ್ಲವೂ ವೇದವು ವರ್ಗೀಕರಿಸಿದ ಏಳು ಸತ್ತಾತತ್ವಗಳಿಗೆ ಅನ್ವಯಿಸುತ್ತವೆ-ಆ ಮೂಲತತ್ವಗಳನ್ನು ಅವಲಂಬಿಸುತ್ತವೆ-ಎಂದು ನನಗೆನ್ನಿಸುತ್ತದೆ. ಈ ತತ್ವಗಳ ಸಂಖ್ಯೆ ಎಷ್ಟೆಂಬ ಶೋಧದ ಬಗೆಗೆ ಹಳಬರ ತಾರ್ಕಿಕ ಬುದ್ಧಿಗೆ ಬಹಳ ಆಸಕ್ತಿಯುಂಟಾಯಿತೆಂದು ತೋರುತ್ತದೆ ಮತ್ತು ಭಾರತೀಯ ತತ್ವಶಾಸ್ತ್ರದಲ್ಲಿ ಅತ್ಯುನ್ನತವಾದ ಒಂದರಿಂದ ಹಿಡಿದು ಇಪ್ಪತ್ತರವರೆಗೆ ಉತ್ತರಗಳು ಹೊರಟದ್ದನ್ನು ನಾವು ಕಾಣುತ್ತೇವೆ. ವೈದಿಕ ವಿಚಾರದಲ್ಲಿ ಮಾನಸಶಾಸ್ತ್ರೀಯ ತತ್ವಗಳನ್ನು ಆಧಾರವನ್ನಾಗಿ ತೆಗೆದುಕೊಳ್ಳಲಾಗಿದೆ. ಏಕೆಂದರೆ, ಸರ್ವ ಸತ್ತೆಯೂ ಪ್ರಜ್ಞಾವಂತ ಸತ್ತಿನ (ಸತ್‌ಪದಾರ್ಥದ) ಚಲನವಲನವೆಂದು ವೇದದ ಋಷಿಗಳು ಕಲ್ಪಿಸಿಕೊಂಡಿದ್ದರು, ತಿಳಿದುಕೊಂಡಿದ್ದರು. ಆದರೆ ಆಧುನಿಕನಿಗೆ ಈ ಕಲ್ಪಿತಗಳು ಮತ್ತು ವರ್ಗೀಕರಣಗಳು ಎಷ್ಟೇ ಶುಷ್ಕವೂ ಕೇವಲ ಕುತೂಹಲಜನಕವೂ ಎನ್ನಿಸಿದರೂ ಇವೆಂದೂ ಕೇವಲ ಅತಿಭೌತಶಾಸ್ತ್ರೀಯ ವಿಂಗಡಣೆಗಳಾಗಿರಲಿಲ್ಲ ; ಇವು ಜೀವಂತ ಮಾನಸಶಾಸ್ತ್ರೀಯ ಆಚರಣೆಯೊಡನೆ, ಅನುಷ್ಠಾನದೊಡನೆ ನಿಕಟ ಸಂಪರ್ಕವುಳ್ಳವುಗಳಾಗಿದ್ದವು. ಆ ಅನುಷ್ಠಾನಕ್ಕೆ ಇವು ಬಹಳ ಮಟ್ಟಿಗೆ ವೈಚಾರಿಕ ಆಧಾರವಾಗಿದ್ದವು. ಮತ್ತು ಈ ಪ್ರಾಚೀನವೂ, ಕಾಲದಲ್ಲಿ ಬಹಳ ದೂರದ್ದೂ ಆದ ಪದ್ಧತಿಯ ಬಗೆಗೆ ಏನಾದರೂ ಒಂದು ಸರಿಯಾದ ಕಲ್ಪನೆಯನ್ನು ಮಾಡಿಕೊಳ್ಳಬೇಕೆಂದು ನಾವು ಬಯಸುವವರೇ ಆದರೆ ಉಕ್ತ ತತ್ವಗಳನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು.

ವೇದದಲ್ಲಿ ಈ ತತ್ವಗಳ ಸಂಖ್ಯೆಯನ್ನು ವಿವಿಧವಾಗಿ ಹೇಳಲಾಗಿದೆ. ಒಂದೆಂಬುದು ಮೂಲವಾದ ಆಧಾರ ಮತ್ತು ಅದು ಸರ್ವಗ್ರಾಹಕ. ಈ ಒಂದರಲ್ಲಿ ದಿವ್ಯ ಮತ್ತು ಮಾನವ್ಯ ಎಂಬ, ಮರ್ತ್ಯ ಮತ್ತು ಅಮರ್ತ್ಯ ಎಂಬ ಎರಡು ತತ್ವಗಳು ಅಡಗಿವೆ. ಈ ಎರಡೆಂಬ ಸಂಖ್ಯೆಯನ್ನು ಸ್ವರ್ಗ ಮತ್ತು ಭೂಮಿ, ಮನಸ್ಸು ಮತ್ತು ದೇಹ, ಜೀವಾತ್ಮ ಮತ್ತು ಪ್ರಕೃತಿ - ಎಂಬಿವನ್ನು ಹೇಳಲು ಅನ್ವಯಿಸಲಾಗಿದೆ. ಇವುಗಳನ್ನು ಜೀವಿಗಳೆಲ್ಲವುಗಳ ತಂದೆ ತಾಯಂದಿರೆಂದು ಗಣಿಸಲಾಗಿದೆ. ಆದರೆ ಸ್ವರ್ಗ-ಭೂಮಿಗಳು ಇಬ್ಬಗೆಯ ಪ್ರಾಕೃತಿಕ ಶಕ್ತಿಗಳನ್ನು ಪ್ರತಿನಿಧಿಸಿದಾಗ - ಮಾನಸಿಕ ಮತ್ತು ದೈಹಿಕ (ಭೌತಿಕ) ಕ್ರಿಯಾಬಲವನ್ನು ಸಂಕೇತಿಸಿದಾಗ-ಅವು ಮಾತಾಪಿತೃಗಳಲ್ಲ, ಎರಡೂ

ತಾಯಂದಿರು ಎಂದಿರುವುದು ಅರ್ಥಪೂರ್ಣವಾಗಿದೆ.[೧] ಮೂರರ ತತ್ವವು ಎರಡು ಬಗೆಯಿಂದ ಮನ್ನಿಸಲ್ಪಟ್ಟಿದೆ. ಮುಂದೆ ರೂಢಿಗೆ ಬಂದ ಸಚ್ಚಿದಾನಂದವನ್ನು ವಿವರಿಸುವುದು ತ್ರೈಪುಟಿಕ ತತ್ವ ಯಾ ದಿವ್ಯಸತ್ತೆ, ಪ್ರಜ್ಞೆ ಮತ್ತು ಆನಂದ ; ಮತ್ತು ಎರಡನೆಯದಾಗಿ, ಪ್ರಾಪಂಚಿಕ ತತ್ವತ್ರಯದಲ್ಲಿ ಮನಸ್ಸು, ಜೀವ ಮತ್ತು ಶರೀರ ಎಂಬಿವು ಮೂರರ ವರ್ಗಕ್ಕೆ ಅದೇ ಪ್ರಕಾರ ಸೇರುತ್ತವೆ : ವೇದ-ಪುರಾಣಗಳ ತ್ರೈಲೋಕ್ಯಕ್ಕೆ ಇದೇ ಆಧಾರ. ಆದರೆ ಸಾಮಾನ್ಯವಾಗಿ ಮಾನ್ಯತೆ ಪಡೆದ ಪೂರ್ಣ ಸಂಖ್ಯೆಯು ಏಳು. ಮೂರು ದಿವ್ಯ ತತ್ವಗಳೂ ಮೂರು ಅದಿವ್ಯ ತತ್ವಗಳೂ ಅವುಗಳನ್ನು ಜೋಡಿಸುವ ಋತಂಬೃಹತ್ತೆಂಬ ಪರಮಸತ್ಯಪ್ರಜ್ಞೆಯೂ ಸೇರಿದರೆ ಏಳಾಗುತ್ತವೆ. ಈ ಋತಂಬೃಹತ್ತನ್ನು ಆಮೇಲೆ ವಿಜ್ಞಾನ ಯಾ ಮಹಸ್ ಎಂದು ಕರೆಯಲಾಯಿತು. ಮಹಸ್ಸೆಂದರೆ ವಿಶಾಲ ವಿಸ್ತಾರ ; ಆದ್ದರಿಂದ ಬೃಹತ್ತಿಗೆ ಸಮಾನಾರ್ಥಕವಾಗಿದೆ. ಐದು, ಎಂಟು, ಒಂಬತ್ತು, ಹತ್ತು, ಹನ್ನೆರಡು ಎಂಬ ಸಂಖ್ಯೆಗಳನ್ನಾಧರಿಸಿದ ತತ್ವವಿಭಜನೆಗಳೂ ಇವೆ ; ಆದರೆ ಅವೀಗ ನಮ್ಮ ಪ್ರತಿಪಾದ್ಯ ವಿಷಯಕ್ಕೆ ಬೇಡ ; ಈ ಕೂಡಲೇ ಅವನ್ನು ಚರ್ಚಿಸಬೇಕಾಗಿಲ್ಲ.

ಈ ಎಲ್ಲ ತತ್ವಗಳೂ ನಿಜವಾಗಿ ಅವಿಭಾಜ್ಯ ಮತ್ತು ವಿಶ್ವವ್ಯಾಪಿ ಆದ್ದರಿಂದ ನಿಸರ್ಗದ ಪ್ರತಿಯೊಂದು ಪ್ರತ್ಯೇಕ ನಿರ್ಮಿತಿಗೂ ಅನ್ವಯಿಸುತ್ತವೆ. ಉದಾ : ಏಳು ವಿಚಾರಗಳು ಎಂದರೆ ಮನಸ್ಸು ಏಳರಲ್ಲಿಯ ಪ್ರತಿಯೊಂದು ಪ್ರಜ್ಞಾಸ್ತರಕ್ಕೂ ತನ್ನನ್ನು ಅನ್ವಯಿಸಿಕೊಳ್ಳುವುದು. ಈಗ ನಾವಾ ಮನಸ್ಸನ್ನು ಭೌತಿಕ ಮನ ಎನ್ನುತ್ತೇವೆ. ಹಾಗೇ ನಾಡೀಮನ, ಶುದ್ಧಮನ, ಸತ್ಯಮನಗಳನ್ನೇರುತ್ತ ಮತ್ತೂ ಮುಂದೆ ಮುಂದಕ್ಕೆ ಹೋಗಿ ನಾವು "ಪರಮಾ ಪರಾವತ್" ಎಂಬ ಶಿಖರವನ್ನು ತಲುಪುತ್ತೇವೆ. ಏಳು ಕಿರಣಗಳೆಂದರೆ ಗೋವುಗಳು = ಅದಿತಿ ಎಂಬ ಅಪ್ರಮೇಯ (ಅಪ್ರಮಿತ) ಮಾತೆ, ಅತುಚ್ಛ ಪ್ರಕೃತಿ ಯಾ ಅನಂತಪ್ರಜ್ಞೆ ಮುಂದೆ ರೂಢಿಗೆ ಬಂದ ಪ್ರಕೃತಿಯ ಯಾ ಶಕ್ತಿಯ ಪ್ರಾಚೀನ ನಿರ್ಮಲ ಸ್ಥಿತಿಯ ಆಕರ-ಈ ಪ್ರಾಚೀನ ಪಶುಪಾಲ ಪ್ರತಿಮಾವಳಿಯಲ್ಲಿ (ಪ್ರತೀಕಮಾಲೆಯಲ್ಲಿ) ಎತ್ತು ಯಾ ವೃಷಭವು ಪುರುಷ-ಈ ಪ್ರಕೃತಿಯು ಸರ್ವಮಾತೆ-ಆ ಸರ್ವಪದಾರ್ಥಗಳು ಜಾಗ್ರತ್‌ಸತ್ತಿನ ಶಕ್ತಿ ಸ್ವರೂಪದ ಅವಳ ಪ್ರಪಂಚ ಕಾರ್ಯದ ಸಪ್ತ ಸ್ತರಗಳು, ಏಳು ಹಾಸುಗಳು, ಏಳು ಮಟ್ಟಗಳು ಯಾ ನೆಲೆಗಳು ; ಈ ನೆಲೆಗಳ ಮೇಲೆ ಅವಳು ರೂಪ ತಾಳುವಳು, ಸಾಕಾರೆಯಾಗುವಳು. ಇದೇ ಮೇರೆಗೆ - ಏಳು ನದಿಗಳು ಪ್ರಜ್ಞಾ ಪ್ರವಾಹಗಳು, ಪ್ರಜ್ಞಾವಾಹಿನಿಗಳು-ಇವು ಸತ್ತೆಯ ಸಪ್ತವಿಧಗಳ ಸಾರ. ಈ ಸಪ್ತವಿಧಗಳೇ ಪುರಾಣೋಕ್ತವಾದ ಸಪ್ತಲೋಕಗಳು. ಸತ್‌ಪದಾರ್ಥದ ಪೂರ್ಣಕ್ರಿಯೆ, ಪೂರ್ಣಸಾರಸಂಪತ್ತು, ಪೂರ್ಣ ಶಕ್ತಿಲೀಲೆ ಇರುವುದು ಪುರಾಣೋಕ್ತ ಸಪ್ತವಾಹಿನಿಗಳ, ಸಪ್ತ ಸುಪ್ತ ಬಲಗಳ, ಸತ್ತಿನ[೨]

೧. "ಉರು ವ್ಯಚಸಾ ಮಹಿನೀ ಅಸಶ್ಚತಾ
ಪಿತಾ ಮಾತಾ ಚ ಭುವನಾನಿ ರಕ್ಷತಃ ।
ಸುಧೃಷ್ಟಮೇ ವಪುಷ್ಯೇ ನ ರೋದಸೀ"
ಪಿತಾ ಯತ್ಸೀ ಮಭಿ ರೂಪೈರವಾಸಯತ್ (I.160.1) - ನೋಡಿರಿ (ಅನುವಾದಕ)

೧. ಸತ್+ತ್ಯತ್ = ಸತ್ಯತ್ ಅಥವಾ ಸತ್ಯ= ಸತ್ಯಜ್ಞಾನಾನಂತ=ಸಚ್ಚಿದಾನಂದ=ಪೂರ್ಣಬ್ರಹ್ಮ= ಶುದ್ಧಪರಬ್ರಹ್ಮ+ಪ್ರಪಂಚ - ಅನುವಾದಕನ ಪ್ರಕಾರ, ಔಪನಿಷದಿಕವಾಗಿ ಸತ್=Being, ತ್ಯತ್=Becoming, ಸತ್ಯ, ಸತ್ಯದಪ್ರಜ್ಞೆ, ಸತ್ಯಜನ್ಯ ಆನಂದ, ಸತ್ಯದ ಅತಿಮಾನಸತೆ, ಅದರ ಅಪ್ರಮೇಯತೆ, ತದಾಧೃತ ಪ್ರಪಂಚ-ಎಂಬೀ ಎಲ್ಲವೂ ಅಸಂಪ್ರಜ್ಞಾತ (ಪಾತಂಜಲ) ಸಮಾಧಿಯಲ್ಲಿ ಅಭಿನ್ನ; ಅಪ್ರತ್ಯೇಕ, ಅಪೃಥಕ್, ಅಪರಿವೃತ್ತ ನಿತ್ಯಸ್ಥಿತಿ.

ಸಪ್ತಶಕ್ತಿಗಳ ಸಮಗ್ರ ಪ್ರವಾಹವು ಮಾನವ ಪ್ರಜ್ಞೆಯಲ್ಲಿ ಹರಿಯುತ್ತಿರುವುದರಲ್ಲೇ; ಇದೇ ಸತ್ ಪದಾರ್ಥದ ಸಮಗ್ರ ಕಾರ್ಯ ಸಂಪೂರ್ಣ ಕಾರ್ಯ. ವೇದದ ಪ್ರತೀಕ ಭಾಷೆಯಲ್ಲಿ (ಆ ಪಶುಪಾಲಾವಧಿಯ ವೈದಿಕರ ಸಂಸ್ಕೃತಿಯಲ್ಲಿ) ಪುರುಷನ (=ಸರ್ವಬೀಜಪ್ರಕೃತಿಯ) ದನಗಳು ಸಪ್ತಸಿಂಧುಗಳ ನೀರನ್ನು ಕುಡಿಯುತ್ತವೆ.

ಈ ರೂಪಕ ಮಾಲೆಯನ್ನು, ಪ್ರತಿಮಾವಳಿಯನ್ನು, ಸಂಕೇತಾರ್ಥಗಳನ್ನು ನಾವು ಸ್ವೀಕರಿಸಲು ಕಾರಣವಿದೆ. ಹಳೆಯ ಆರ್ಯ ವೈದಿಕರದ್ದು ಬಯಲು ಜೀವನ, ಪಶುಪಾಲನ ವೃತ್ತಿಯ ಜೀವನ, ಸರಳ ಜೀವನವೆಂಬ ಕಲ್ಪನೆಗಳನ್ನು ಒಪ್ಪಿದ ಮೇಲೆ ಇದು ಅವರ ನಿಸರ್ಗಸಹಜ ಪ್ರತಿಮಾಪ್ರಯೋಗ, ಆಲಂಕಾರಿಕ ರೀತಿ ಎಂಬುದನ್ನು ಒಪ್ಪಲೇ ಬೇಕಾಗುತ್ತದೆ ; ನಮಗೆ ದೇವತಾಶಾಸ್ತ್ರಜ್ಞಾನವು ಸುಪರಿಚಿತಗೊಳಿಸಿದ 'ಪ್ರಜ್ಞಾಸ್ತರಗಳ' ಹಾಗೇ ಆ ಆರ್ಯರಿಗೆ ಆ ಪ್ರತಿಮೆಗಳು, ಸಂಕೇತಗಳು, ಅಲಂಕಾರೋಕ್ತಿಗಳು ಅನಿವಾರ್ಯ. ಇದರಿಂದ ಸರಸ್ವತಿಯು ಏಳು ನದಿಗಳಲ್ಲಿ ಒಬ್ಬಳೆಂಬ ಅವಳ ಸ್ಥಾನವೀಗ ಸ್ಪಷ್ಟವಾಗುತ್ತದೆ. ಸರಸ್ವತಿಯು ಸತ್ಯತತ್ವದಿಂದ, ಮಹೋರೂಪದ ಋತದಿಂದ ಹರಿದು ಬರುವ ಪ್ರವಾಹ. ವೇದದಲ್ಲಿ ಈ ತತ್ವವನ್ನು ವಾಸ್ತವಿಕವಾಗಿ ಹೇಳಿರುವುದು ನಮಗೆ ಕಂಡುಬರುತ್ತದೆ. ಉದಾ : ನಾವು ತೆಗೆದುಕೊಂಡ ೩ ನೆಯ ಸೂಕ್ತದ ಅಂತ್ಯ ಉಪಚ್ಛೇದದಲ್ಲಿ "ಮಹೋಅರ್ಣಃ" - ಮಹಾಜಲ-ಎಂದ ಕೂಡಲೇ ಅದು ಮಹಸ್ಸೆಂಬ ಉತ್ತರಕಾಲೀನ ಪದದ ಮೂಲವನ್ನು ಸೂಚಿಸುತ್ತದೆ. ಕೆಲವೊಮ್ಮೆ "ಮಹಾನ್ ಅರ್ಣವಃ" ಎಂದೂ "ಮಹಸ್" ಎಂಬುದರ ಬದಲು ಬಳಸಲಾಗಿದೆ. ಉಕ್ತ ಸೂಕ್ತದಲ್ಲಿ ಸರಸ್ವತಿಗೂ ಈ ಮಹಾಜಲಕ್ಕೂ ಇರುವ ನಿಕಟ ಸಂಬಂಧವನ್ನು ಕಾಣುತ್ತೇವೆ. ವೈದಿಕ ಗೋಗಳ ಮತ್ತು ಅವುಗಳಿಗೂ ಇಂದ್ರನಿಗೂ ಇರುವ ಸಂಬಂಧದ ಹಾಗೂ ಸರಸ್ವತಿಗೂ ಅವಳ ಹತ್ತಿರದವಳಾದ ಸರಮೆಗೂ ಇರುವ ದಾಯಾದ ಸಂಬಂಧದ ಬಗೆಗೆ ವಿಚಾರ ಮಾಡುವುದರ ಮೊದಲು ಈ ಮಹಾಜಲಕ್ಕೂ ಇರುವ ಸಂಬಂಧವನ್ನು ಸ್ವಲ್ಪ ಹೆಚ್ಚು ಪರೀಕ್ಷಿಸೋಣ. ಏಕೆಂದರೆ, ಮಧುಚ್ಛಂದಸ್ಸನು ಅಪವಾದವಿಲ್ಲದಂತೆ ಮಿಕ್ಕ ಸೂಕ್ತಗಳಿಂದ ಇಂದ್ರನನ್ನು ಸಂಬೋಧಿಸಿದ್ದನ್ನು ಸೂಕ್ಷ್ಮವಾಗಿ ಪರಿಶೀಲಿಸುವುದರಲ್ಲಿ ಮುಂಬರಿವ ಮೊದಲು ಈ ಸಂಬಂಧಗಳನ್ನು ತರ್ಕಶುದ್ಧವಾಗಿ ಲಕ್ಷಣಿಸಿ ಹೇಳಬೇಕಾದದ್ದು ಅಗತ್ಯ. ಇಂದ್ರನು ವೇದದ ಮಹಾದೇವ, ಸ್ವರ್ಗಾಧಿಪತಿ ; ನಮ್ಮ ತಾತ್ಕಾಲಿಕ ಸಿದ್ಧಾಂತದ ಪ್ರಕಾರ ಮನದ ಶಕ್ತಿಯನ್ನು ಅವನು ಸಂಕೇತಿಸುತ್ತಾನೆ - ಅದರಲ್ಲೂ ಮಾನವನಲ್ಲಿರುವ ಸ್ವಯಂಪ್ರಕಾಶ ಮಾನಸಕ್ಕವನು ಸಂಕೇತ.



ಅಧ್ಯಾಯ-೧೦

# ಸಾಗರಗಳ ಮತ್ತು ನದಿಗಳ ಪ್ರತಿಮೆಗಳು

ಮಧುಚ್ಛಂದಸ್ಸನು ಮೂರನೆಯ ಸೂಕ್ತದ ಮೂರು ಋಕ್ಕುಗಳಲ್ಲಿ ಈ ಕೆಳಗೆ ಸಂಸ್ಕೃತದಲ್ಲಿ ಹೇಳಿದಂತೆ ಸರಸ್ವತಿಯನ್ನು ಸಂಬೋಧಿಸಿದ್ದಾನೆ :

**ಪಾವಕಾ ನಃ ಸರಸ್ವತೀ ವಾಜೇಭಿರ್ ವಾಜಿನೀವತೀ ;**
**ಯಜ್ಞಂವಷ್ಟು ಧಿಯಾವಸುಃ ॥**
**ಚೋದಯಿತ್ರೀ ಸೂನೃತಾನಾಂ, ಚೇತಂತೀ ಸುಮತೀನಾಂ**
**ಯಜ್ಞಂ ದಧೇ ಸರಸ್ವತೀ ॥**
**ಮಹೋ ಅರ್ಣಃ ಸರಸ್ವತೀ, ಪ್ರಚೇತಯತಿ ಕೇತುನಾ**
**ಧಿಯೋ ವಿಶ್ವಾ ವಿರಾಜತಿ ॥**

ಮೊದಲಿನೆರಡು ಋಕ್ಕುಗಳ ಅರ್ಥವು ಸಾಕಷ್ಟು ಸ್ಪಷ್ಟವಾಗಿದೆ. ಏಕೆಂದರೆ, ನಾವು ಸ್ಫೂರ್ತಿ ಎಂದು ಕರೆಯುವ ಪರಮಸತ್ಯಶಕ್ತಿಯೇ ಸರಸ್ವತಿ ಎಂಬುದು ನಮಗೆ ಗೊತ್ತಿದೆ. ಪರಮಸತ್ಯದಿಂದ ಬಂದ ಸ್ಫೂರ್ತಿಯು ಎಲ್ಲ ಅನೃತಗಳನ್ನೂ ತೊಳೆದು ನಮ್ಮನ್ನು ಶುದ್ಧ ಮಾಡುತ್ತದೆ. ಅನೃತ=ತಪ್ಪಾಗಿ ಸ್ಫೂರ್ತವಾದ ಭಾವನೆ;ಭಾರತೀಯರ ಪ್ರಕಾರ ಎಲ್ಲ ಅನೃತಗಳೂ ಪಾಪ ; ಪಾಪಗಳೆಲ್ಲಾ ಕೇವಲ ಅನೃತಗಳು = ತಪ್ಪಾಗಿ ನಿರ್ದಿಷ್ಟವಾದ ಸಂಕಲ್ಪ ಮತ್ತು ಕರ್ಮ. ನಮ್ಮ ಮತ್ತು ನಮ್ಮ ಜೀವನದ ಕೇಂದ್ರ ಕಲ್ಪನೆಯಿಂದ ನಾವು ಹೊರಡುತ್ತೇವಲ್ಲವೇ? ಆ ಕಲ್ಪನೆಯೇ ಒಂದು ಸುಳ್ಳು. ಮಿಕ್ಕ ಎಲ್ಲವೂ ಅದರಿಂದ ಅನೃತೀಕರಿಸಲ್ಪಡುತ್ತದೆ. ಪರಮಸತ್ಯವು ಒಂದು ಬೆಳಕಾಗಿ ನಮ್ಮೆಡೆಗೆ ಬರುತ್ತದೆ. ಅದು ತನ್ನ ಸ್ವರದಿಂದ ವಿಚಾರ ಪರಿವರ್ತನೆಯನ್ನು ನಮ್ಮ ಮೇಲೆ ಹೇರುತ್ತದೆ ; ನಮ್ಮ ಮೇಲೆ ಅದು ನಮ್ಮನ್ನೂ ನಮ್ಮ ಸುತ್ತಲಿನ ಆವರಣವನ್ನೂ ಒಂದು ಹೊಸ ದೃಷ್ಟಿಯಿಂದ ಅವಲೋಕಿಸಲು ಒತ್ತಾಯ ತರುತ್ತದೆ. ವಿಚಾರದ ಸತ್ಯವು ದರ್ಶನದ ಸತ್ಯವನ್ನು ನಿರ್ಮಿಸುತ್ತದೆ. ದರ್ಶನದ ಸತ್ಯವು ನಮ್ಮಲ್ಲಿ ಅಸ್ತಿತ್ವದ ಸತ್ಯವನ್ನು ರೂಪಿಸುತ್ತದೆ. ಅಸ್ತಿತ್ವದ (ಸತ್ತೆಯ) ಸತ್ಯದಿಂದ ಸ್ವಾಭಾವಿಕವಾಗಿ ಭಾವನಾಸತ್ಯವು ಹರಿದು ಬರುತ್ತದೆ, ಸಂಕಲ್ಪ ಸತ್ಯವು ಹೊರ ಚಿಮ್ಮುತ್ತದೆ, ಕರ್ಮಸತ್ಯವು ಹೊರಬೀಳುತ್ತದೆ. ಇದೇ ವೇದದ ಕೇಂದ್ರ ವಿಚಾರ.

ಸ್ಫೂರ್ತಿಸ್ವರೂಪದ ಸರಸ್ವತಿಯು ತನ್ನ ಜ್ಯೋತಿರ್ಮಯ ವೈಶಾಲ್ಯಗಳಿಂದ ತುಂಬಿ ಹೋಗಿದ್ದಾಳೆ-ವಿಚಾರ ಸಾರದಲ್ಲಿ ಅವಳು ಸಂಪದ್‌ಭರಿತೆ. ಅವಳು ಯಜ್ಞವನ್ನು ಬೆಂಬಲಿಸುತ್ತಾಳೆ. ಹೇಗೆ? ಮಾನವನ ಪ್ರಜ್ಞೆಯನ್ನು ಜಾಗರಿಸಿ ಆ ಮೂಲಕ ಅದು ಸರಿಯಾದ

ಭಾವನಾವಸ್ಥೆಗೇರು-ವಂತೆ ಮಾಡಿ, ಸರಸ್ವತಿಯು ತಾನು ಯಾವ ಪರಮಸತ್ಯದಿಂದ ಹಾಗೆ ಅವನ ಭಾವನಾವಸ್ಥೆಯನ್ನೂ ವಿಚಾರಧಾರೆಯನ್ನೂ ಸಲಿಪಡಿಸಲು ತನ್ನ ಪ್ರಬೋಧವನ್ನು ಸುರಿಯುತ್ತಾಳೋ ಆ ಸತ್ಯಕ್ಕನುಗುಣವಾಗಿ, ವಿಶಿಷ್ಟ ಸತ್ಯಗಳನ್ನು ಪ್ರಬೋಧಿಸುವುದರ ಮೂಲಕ ಯಜ್ಞವರ್ಧನೆಯಾಗುತ್ತಾಳೆ. ಆ ವಿಶಿಷ್ಟ ಸತ್ಯಗಳೆಂದರೆ, ವೇದದ ಋಷಿಗಳ ಪ್ರಕಾರ, ಬಾಳನ್ನು ಮುಕ್ತಗೊಳಿಸುವ, ಅಸಿತ್ವವನ್ನು ಅನೃತದಿಂದ ಬಿಡಿಸುವ ದೌರ್ಬಲ್ಯ ಮತ್ತು ಪರಿಸೀಮಿತತೆಗಳಿಂದ ಬಾಳಿನ ಸತ್ತೆಯನ್ನು ಬಿಡುಗಡೆಮಾಡುವ ಶಕ್ತಿಗಳು. ಅವು ಆ ಮೂಲಕ ಮಾನವನಿಗಾಗಿ ಪರಮಸುಖದ ಬಾಗಿಲನ್ನು ತೆರೆಯುತ್ತವೆ.

ಕೇತ್ವರ್ಥದಲ್ಲಿ (ಪ್ರತ್ಯಕ್ಷಾರ್ಥದಲ್ಲಿ)[೧] ಸಂಕ್ಷೇಪಿಸಿದಂತೆ ಈ ಸತತ ಜಾಗರಣ ಮತ್ತು ಪ್ರಬೋದನೆಗಳಿಂದ ಸರಸ್ವತಿಯು ಮಾನವನಲ್ಲಿ ಮಹಾಚಲನಶೀಲವಾದ, ಮಹಾಪ್ರವಾಹರೂಪದ, ಸತ್ಯಪ್ರಜ್ಞೆಯನ್ನು ತಂದು ಅವನ ಕ್ರಿಯಾಶೀಲ ಪ್ರಜ್ಞೆಯಲ್ಲಿ ತುಂಬಿ ಅದರಿಂದ ಅವನ ಎಲ್ಲ ವಿಚಾರಗಳನ್ನೂ ಜ್ಯೋತಿರ್ಮಯವನ್ನಾಗಿ ಮಾಡುತ್ತಾಳೆ. ವೈದಿಕ ಋಷಿಗಳ ಈ ಸತ್ಯಪ್ರಜ್ಞೆಯು ಅತಿಮಾನಸಪ್ರಜ್ಞಾಸ್ತರಕ್ಕೆ ಪರ್ಯಾಯಗುಡ್ಡದ ತಪ್ಪಲು ("ಅದ್ರೇ:ಸಾನು") - ಅದು ನಮಗೆ ಸಾಮಾನ್ಯವಾಗಿ ನಿಲುಕಲಾರದು ಮತ್ತು ನಾವು ಕಷ್ಟದಿಂದ ಹತ್ತಬೇಕು ಎಂಬುದನ್ನು ನಾವು ನೆನಪಿಟ್ಟುಕೊಳ್ಳಬೇಕು. ಅದು ನಮ್ಮ ಜಾಗರಿತ ಇರವಿನ ಭಾಗವಲ್ಲ ; ಅದು ಅತಿಮಾನಸದ ನಿದ್ರೆಯಲ್ಲಿ ಹುದುಗಿ ಹೋಗಿದೆ. ನಮ್ಮ ಪ್ರಜ್ಞೆಗೆ ಪರಮ ಸತ್ಯವನ್ನು ತನ್ನ ಸತತ ಕ್ರಿಯೆಯಿಂದ ಸ್ಫೂರ್ತಿ ನೀಡಿ ಎಚ್ಚರ ಮಾಡುತ್ತಾಳೆ ಎಂದು ಹೇಳಿದ ಮಧುಚ್ಛಂದಸ್ ಋಷಿಯ ಮಾತಿನ ಅರ್ಥವು ಆಗ ನಮಗೆ ಹೊಳೆಯುತ್ತದೆ.

ಆದರೆ, ಅದರ ಬರಿಯ ವ್ಯಾಕರಣರೂಪವನ್ನಷ್ಟೇ ಗ್ರಹಿಸಿದರೆ, ಉಕ್ತ ಪಂಕ್ತಿಯನ್ನು ಬೇರೆ ರೀತಿಯಿಂದ ಭಾಷಾಂತರಿಸಬಹುದು. ನಾವು "ಮಹೋಅರ್ಣ:" ಎಂಬುದನ್ನು ಸರಸ್ವತೀ ಪದದ ಎದುರಿಟ್ಟು "ಮಹಾನದಿಯಾದ ಸರಸ್ವತಿಯು ಪ್ರತ್ಯಕ್ಷದ ಮೂಲಕ ನಮ್ಮನ್ನು ಜ್ಞಾನದತ್ತ ಜಾಗರಿತಗೊಳಿಸುತ್ತಾಳೆ ಮತ್ತು ನಮ್ಮ ಎಲ್ಲ ವಿಚಾರಗಳಲ್ಲೂ ಬೆಳಗುತ್ತಾಳೆ" ಎಂದು ಅರ್ಥೈಸಬಹುದು. "ಮಹೋ ಅರ್ಣ:" ಎಂಬ ಪದದಿಂದ ಬಹುಶಃ ಸಾಯಣನಂತೆ "ಮಹಾನದಿ" ಎಂದು ತಿಳಿದುಕೊಂಡರೆ ಅದು ಪಂಜಾಬಿನಲ್ಲಿ ಸಾಕ್ಷಾತ್ತಾಗಿ ಹರಿಯುವ ಭೌತಿಕ ನದಿಯೇ ಆಗುವುದು. ಅದರಿಂದ ಅರ್ಥದ ಹೊಂದಿಕೆ ಹೊರಟು ಹೋಗುತ್ತದೆ ; ಭೂತ ಬಡಿದುಕೊಂಡವನೋ ಹುಚ್ಚನೋ ಹೇಳಬಹುದಾದ ಅರ್ಥವಾಗಿ ಪರಿಣಮಿಸುತ್ತದೆ. ಆದರೆ ಅದೊಂದು ಸ್ಫೂರ್ತಿಯ ಮಹಾಪ್ರವಾಹ ಎಂದು ಮಹಾಸಾಗರದಂಥ ಪರಮಸತ್ಯಪ್ರಜ್ಞೆಗೆ ಅದರ ಸಂಬಂಧ ಏನೂ ಇಲ್ಲವೆಂದೂ ತರ್ಕಿಸಲು ಸಾಧ್ಯವಿದೆ. ಇತರ ಕಡೆಗಳಲ್ಲಾದರೋ ದೇವತೆಗಳು ಆ ಮಹಾ ಪ್ರವಾಹದ ಅಪರಿಮಿತ ವಿಸ್ತಾರವಾದ ಶಕ್ತಿಯ ಮೂಲಕ "ಮಹ್ನಾ ಮಹತೋ ಅರ್ಣವಸ್ಯ" (X.67.12) ಕೆಲಸ ಮಾಡುವುದಕ್ಕೆ ಅನುಸೂಚನೆ ಬರುತ್ತದೆ. ಆದರೆ ಅಲ್ಲಿ ಸರಸ್ವತಿಯ ಹೆಸರಿಲ್ಲ ಮತ್ತು ಅವಳು ಆ ಸೂಕ್ತಕಾರನ ಮನಸ್ಸಿನಲ್ಲಿದ್ದಳೆಂದು ಹೇಳಲು ಸಾಧ್ಯವಿಲ್ಲ. "ಸರಸ್ವತಿಯು ಇಂದ್ರನ ಗೂಢಾತ್ಮ" ಎಂದು ವೇದದಲ್ಲಿ ಹೇಳಿರುವುದು ನಿಜ. ಈ

೧. ದಿವ್ಯ ಪ್ರತ್ಯಕ್ಷ = ಅಪರೋಕ್ಷಾನುಭೂತಿ = ಪ್ರತ್ಯಕ್ಷಕ್ಕಿಂತ ಹೆಚ್ಚು ಬಲಿಷ್ಠವೂ ನಿತ್ಯಸ್ಥಾಯಿಯೂ ಆದ ಪರಮಾನುಭೂತಿ. ದೈವ್ಯಕೇತು = ಮರ್ತ್ಯದ ಇಂದ್ರಿಯಪ್ರತ್ಯಕ್ಷವಲ್ಲ. - ಅನುವಾದಕ

ಮಾತಿನಲ್ಲಿ ಸರಸ್ವತಿಯು ಕೇವಲ ಔತ್ತರೇಯ ನದಿಯೆಂದಾದರೆ ಮತ್ತು ಇಂದ್ರನು ಆಕಾಶ ದೇವತೆಯಷ್ಟೇ ಎಂದು ತಿಳಿದರೆ ಅರ್ಥವೇ ಇಲ್ಲವಾದೀತು. ಆದರೆ, ಇಂದ್ರನು ಜ್ಯೋತಿರ್ಮಯ ಮನವೆಂದೂ ಸರಸ್ವತಿಯು ಅತಿಮಾನಸ ಸತ್ಯದ ಗೂಢ ನೆಲೆಯಿಂದ ಹೊರಡುವ ಸ್ಫೂರ್ತಿಯೆಂದೂ ತಿಳಿದಾಗ ಈ ಮಾತಿಗೆ ಬಹಳ ಗಭೀರವೂ ಪಳಚ್ಚನೆ ಮಿಂಚುವ ಅರ್ಥವೂ ಸಮನ್ವಯಿಸುವುದು. ಆದರೆ "ಮಹ್ನಾ ಮಹತೋ ಅರ್ಣವಸ್ಯ" ಎಂಬ ಪದಸಂಹತಿಗೆ "ಸರಸ್ವತಿಯ ಮಾಹಾತ್ಮ್ಯದಿಂದ" ಎಂದು ಅರ್ಥ ಹೇಳಿ ತನ್ಮೂಲಕ ಸೂಚಿತವಾಗುವ ಅವಳ ಅನ್ಯದೇವ ಸಮತ್ವವನ್ನು, ಅವರಿಗಿರುವ ಪ್ರಾಧಾನ್ಯವನ್ನು ಅವಳಿಗೆ ಅನ್ವಯಿಸುವುದು ಅಸಾಧ್ಯ. ದೇವತೆಗಳು ಪರಮಸತ್ಯದ ಶಕ್ತಿಯಿಂದ ಕೆಲಸ ಮಾಡುತ್ತಾರೆ ಎಂದು ಎಡೆಬಿಡದೆ ಹೇಳಲಾಗಿದೆ-"ಋತೇನ". ಆದರೆ ಸರಸ್ವತಿಯು ಆ ಪರಮಸತ್ಯದ ದೇವತೆಗಳಲ್ಲೊಬ್ಬಳು ; ಅವಳು ಅತ್ಯಂತ ಮುಖ್ಯಳೂ ಅಲ್ಲ, ಸರ್ವದೇವವ್ಯಾಪಿಕೆಯೂ ಅಲ್ಲ. ಆದುದರಿಂದ ನಾನು ಕೊಟ್ಟ ಅರ್ಥವು ಮಿಕ್ಕ ಅವತರಣಿಕೆಗಳಲ್ಲಿ ಬಳಸಲಾದ ಆ ಪದ ಸಂಹತಿಯ ತದಿತರಾರ್ಥ ವ್ಯಾವರ್ತಕ ಅರ್ಥವೆಂದೇ ಭಾವಿಸಬೇಕು-ಈ ಅರ್ಥವೊಂದೇ ಅಲ್ಲಿ ಹೊಂದುವಂಥ-ದೆಂದು ತಿಳಿಯಬೇಕು.

ಈ ಅನುಚ್ಛೇದವು ನಿರ್ವಿವಾದವಾಗಿ, ನಿಃಸಂದಿಗ್ಧವಾಗಿ, ಈ ನಿರ್ಣಾಯಕ ತೀರ್ಪಿನಿಂದ ಹೊರಟು ನಾವು-ಆ ಮಹಾನದಿಯು ಸರಸ್ವತಿಯಾಗಿರಲಿ ಯಾ ಪರಮಸತ್ಯಸಾಗರವಾಗಿರಲಿ - ವೈದಿಕ ಋಷಿಗಳು ನೀರಿನ, ನದಿಯ ಯಾ ಕಡಲಿನ ಪ್ರತಿಮೆಯನ್ನು ಆಲಂಕಾರಿಕವಾಗಿ ಬಳಸಿದ್ದಾರೆ ಮತ್ತು ಒಂದು ಮಾನಸಶಾಸ್ತ್ರೀಯ ಸಂಕೇತವನ್ನಾಗಿಯೂ ಉಪಯೋಗಿಸಿದ್ದಾರೆ ಎಂದು ಗ್ರಹಿಸಿದರೆ ಈ ಗ್ರಹಿಕೆ ನಮ್ಮನ್ನು ಎಷ್ಟು ದೂರ ಒಯ್ಯುತ್ತದೆ ಎಂಬುದನ್ನು ನೋಡೋಣ. ಹಿಂದು ಬರೆಹಗಳಲ್ಲಿ ಬಾಳುವೆ ಎಂದರೇ ಒಂದು ಸಾಗರ ; ವೇದ, ಪುರಾಣ, ತತ್ವ ಚರ್ಚೆಗಳಲ್ಲೆಲ್ಲಾ ಸಾಗರವೇ ಅಸ್ತಿತ್ವಕ್ಕೆ ಉಪಮೆಯಾಗಿದೆ ಎಂಬುದು ತೋರುತ್ತದೆ. ವೇದವು ಮೇಲ್ಗಡಲು, ಕೆಳಗಡಲು ಎಂದು ಎರಡು ಸಮುದ್ರಗಳನ್ನು ಹೇಳುತ್ತದೆ. ಕೆಳಗಡಲೆಂದರೆ ಅವಪ್ರಜ್ಞೆ, ಅಂಧಕಾರ, ಅನಿರ್ವಚನೀಯ ; ಮೇಲ್ಗಡಲೆಂದರೆ ಅತಿಮಾನಸ, ಪರಂಜ್ಯೋತಿ, ನಿತ್ಯಾಭಿವ್ಯಕ್ತ ಸತ್ಯ- ಆದರೆ ಮಾನಸಾತೀತ. ೪ ನೆಯ ಮಂಡಲದ ಕೊನೆಯ ಸೂಕ್ತದಲ್ಲಿ ವಾಮದೇವನು ಈ ಇರ್ಗಡಲುಗಳನ್ನು ಹೇಳುತ್ತಾನೆ. ಅವನು ಹೇಳಿದ್ದು ಇದು : ಸಾಗರದಿಂದ ಮಧುಮಯ ತರಂಗವು ಮೇಲೇರುತ್ತದೆ ; ಈ ಏರಿಕೆಯಿಂದ, ಸೋಮದ (ಅಂಶು) ಉದ್ಗಮನದಿಂದ, ಮಾನವನು ಸಂಪೂರ್ಣ ಅಮೃತತತ್ವವನ್ನು ಪಡೆಯುತ್ತಾನೆ ; ಸೋಮವು ಯಾ ತರಂಗವು ತಿಳಿತನದ ಗೂಢನಾಮ (ಘೃತಸ್ಯ-ಶುದ್ಧೀಕೃತ ಬೆಣ್ಣೆಯ) ; ಅದು ದೇವತೆಗಳ ನಾಲಿಗೆ, ಅದು ಅಮೃತತ್ವದ (ಅಮರತ್ವದ, ನಿತ್ಯತ್ವದ) "ನಾಭಿ" ಯಾ ಹೊಕ್ಕಳು.

**ಸಮುದ್ರಾದ್ ಊರ್ಮಿರ್ ಮಧುಮಾನ್ ಉದಾರದ್,**
**ಉಪಾಂಶುನಾ ಸಂ ಅಮೃತತ್ವಂ ಆನಟ್ ।**
**ಘೃತಸ್ಯ ನಾಮ ಗುಹ್ಯಂ ಯದ್ ಅಸ್ತಿ**
**ಜಿಹ್ವಾ ದೇವಾನಾಂ ಅಮೃತಸ್ಯ ನಾಭಿಃ॥ (IV.58.1)**

ಸಮುದ್ರ, ಜೇನುತುಪ್ಪ, ಸೋಮ, ತೊಳೆದ ಬೆಣ್ಣೆ-ಎಂಬೀ ಪದಗಳು ಮಾನಸಶಾಸ್ತ್ರೀಯ ಸಂಕೇತಗಳೆಂಬುದರಲ್ಲಿ ಯಾವ ಸಂದೇಹವೂ ಇಲ್ಲವೆಂದು ನಾನು ಭಾವಿಸುತ್ತೇನೆ.

ಖಂಡಿತವಾಗಿಯೂ, ವಾಮದೇವನು, ಮದ್ಯದ ಒಂದು ಪ್ರವಾಹ ಅಥವಾ ತರಂಗವು ಹಿಂದು ಮಹಾಸಾಗರದ ಉಪ್ಪು ನೀರಿನಿಂದ ಯಾ ಬಂಗಾಳಕೊಲ್ಲಿಯ ಕ್ಷಾರಜಲದಿಂದ - ಇಲ್ಲವಾದರೆ ಸಿಂಧುವಿನಿಂದ ಯಾ ಗಂಗೆಯಿಂದ, ಅವುಗಳ ಹೊಸ (ಸಿಹಿ) ನೀರಿನಿಂದ ಮೇಲಕ್ಕೇಲಿತೆಂದೂ ಈ ಹೆಂಡವು ತಿಳಿಗೊಳಿಸಿದ ಬೆಣ್ಣೆಯ ಗೂಢನಾಮವೆಂದೂ ಅಭಿಪ್ರಾಯ ಪಡಲಾರನು. ನಮ್ಮ ಅವಮಾನಸದ ಗುಂಡಿಗಳಿಂದ ಮಧುಮಯವಾದ ಅಲೆ, ಆನಂದವು ಅಥವಾ ಅಸ್ತಿತ್ವದ ಶುದ್ಧವಾದ ಆಹ್ಲಾದವು ಮೇಲೇಳುತ್ತದೆ ; ಈ ಆನಂದದಿಂದ ನಾವು ಅಮೃತತ್ವವನ್ನು ಸೇರಬಹುದು ; ಈ ಆನಂದವೇ ಗೂಢ ಸತ್ತೆ, ಮನಃ ಕ್ರಿಯೆಗಳ ಹಿಂದೆ ತನ್ನ ಹೊಳೆ ಹೊಳೆವ ತಿಳಿತನದಿಂದ ಕುಳಿತ ಗೂಢ ವಸ್ತು. ಸೋಮನು ಆನಂದ ದೈವತ ; ಅದು ಮನಸ್ಸಾಯಿತು, ಅಥವಾ ಇಂದ್ರಿಯಗಳ ಪ್ರತ್ಯಕ್ಷ ಜ್ಞಾನವಾಯಿತು-ಎಂದು ವೇದಾಂತ ಕೂಡಾ ಹೇಳುತ್ತದೆ. ಜಿಡಿಸಿ ಹೇಳುವುದಾದರೆ, ಮಾನಸಿಕ ಸಂವೇದನೆಗಳೆಲ್ಲಾ ತಮ್ಮಲ್ಲಿ ಇರುವಿಕೆಯ ಗುಪ್ತ ಸಂತೋಷವನ್ನಿಟ್ಟುಕೊಂಡೇ ಇರುತ್ತದೆ ; ಅವು ತಮ್ಮ ಅಸ್ತಿತ್ವ ಸ್ವರೂಪದ ಆ ಗೌಪ್ಯವನ್ನು ಪ್ರಕಟಿಸಲು ಹೋರಾಡುತ್ತಲೇ ಇರುತ್ತವೆ. ಆದುದರಿಂದ ಆನಂದವು ದೇವತೆಗಳ ನಾಲಿಗೆ ; ಅದರಿಂದ ಅವರು ಇರವಿನ ನಲ್ಮೆಯನ್ನು ರುಚಿ ನೋಡುತ್ತಾರೆ. ಅಮೃತತ್ವದ ಯಾ ದಿವ್ಯ ಜೀವನದ ಎಲ್ಲ ಚಟುವಟಿಕೆಗಳಿಗೂ ಅದು ಮಧ್ಯಸ್ಥಳ (ಹೊಕ್ಕುಳು) -ಅಲ್ಲಿ ಎಲ್ಲವೂ ಒಂದಾಗಿ ಸೇರುತ್ತವೆ. ವಾಮದೇವನು ಮುಂಬರಿದು ಇನ್ನೂ ಹೇಳುತ್ತಾನೆ: "ಈ ತಿಳಿತನದ, ಸ್ಪಷ್ಟತೆಯ ಗುಪ್ತನಾಮವನ್ನು ಹೇಳೋಣ-ಅಂದರೆ, ನಾವೀ ಸೋಮರಸವನ್ನು, ಅಸ್ತಿತ್ವದ ಗುಪ್ತ ಹರ್ಷವನ್ನು ಹೊರಗೆಡಹೋಣ. ಈ ವಿಶ್ವಯಜ್ಞದಲ್ಲಿ ಅಸ್ತಿತ್ವದ ಒಡೆಯನಾದ ಸಂಕಲ್ಪದ ಯಾ ಪ್ರಾಜ್ಞ ಶಕ್ತಿಯಾದ ಅಗ್ನಿಗೆ ಶರಣು ಹೋಗುವುದರಿಂದ, ಅವನಿಗೆ (ನಮ್ಮೆಲ್ಲವನ್ನೂ) ಸಮರ್ಪಿಸುವ ಮೂಲಕ, ಅದನ್ನು (ಸತ್ತೆಯ ಗೂಢಾನಂದವನ್ನು) ಹಿಡಿದಿಡೋಣ. ಆ ಒಡೆಯನು ಲೋಕಗಳ ಚತುಃಶೃಂಗ, ವೃಷಭ ; ಅವನು ಮಾನವನ ಆತ್ಮವಿಚಾರವನ್ನು ಕೇಳಿದೊಡನೆಯೇ ಸಂತೋಷದ ಈ ಗುಪ್ತನಾಮವನ್ನು ಅದು ತಲೆ ಮರೆಸಿಕೊಂಡು ಕುಳಿತ ಜಾಗದಿಂದ ಹೊರಗೆಳೆದು ಹಾಕುವನು."

**ವಯಂ ನಾಮ ಪ್ರ ಬ್ರವಾಮಾ ಘೃತಸ್ಯ**
**ಅಸ್ಮಿನ್ ಯಜ್ಞೇ ಧಾರಯಾಮಾ ನಮೋಭಿಃ ।**
**ಉಪಬ್ರಹ್ಮಾ ಶೃಣವಚ್ ಛಸ್ಯಮಾನಂ ।**
**ಚತುಃ ಶೃಂಗೋ ಅವಮೀದ್ ಗೌರ ಏತತ್ ।** **(IV.58.2)**

ಇಲ್ಲಿ ನಾವು ಆನುಷಂಗಿಕವಾಗಿ ನೋಡೋಣ : ಮದ್ಯವೂ, ಸೋಸಿದ ಬೆಣ್ಣೆಯೂ ಸಾಂಕೇತಿಕವಾಗಿರುವಾಗ ಯಜ್ಞವೂ ಸಾಂಕೇತಿಕವಾಗಿರಲೇಬೇಕು. ವಾಮದೇವನ ಇಂಥ ಸೂಕ್ತಗಳಲ್ಲಿ ವೈದಿಕ ಋಷಿಗಳು ಹೇಗೆ ಕರ್ಮಕಾಂಡದ ಮುಸುಕನ್ನು ಹಾಕಿದ್ದಾರೆ ಎಂಬುದೂ ಹೇಗೆ ಆ ಮುಸುಕು-ಅಷ್ಟು ವಿಸ್ತಾರವಾಗಿದ್ದರೂ-ಬಲೆಯಂತೆ ಹೆಣೆದದ್ದಾಗಿದ್ದರೂ-ನಮ್ಮ ಕಣ್ಣ ಮುಂದೆಯೇ ಎಷ್ಟು ಬೇಗ ಆ ಯೌಗಿಕ ಮುಸುಕು ನಿಮಿಷಾರ್ಧದಲ್ಲಿ ಮಂಜಿನಂತೆ ಕರಗಿ ಹೋಗಿ, ವೇದಾಂತದ ಸತ್ಯವು, ವೇದದ ರಹಸ್ಯವು, ಹೇಗೆ ಆವಿರ್ಭೂತವಾಗುವುದೆಂಬುದೂ ಗೊತ್ತಾಗುತ್ತದೆ.

ತಾನು ಹೇಳುವ ಸಾಗರದ ಸ್ವಭಾವದ ಬಗೆಗೆ ವಾಮದೇವನು ನಮ್ಮಲ್ಲಿ ಯಾವ ಸಂಶಯವನ್ನೂ ಉಳಿಯಗೊಡುವುದಿಲ್ಲ ; ಐದನೆಯ ಋಕ್ಕಿನಲ್ಲಿ ಆತನು ಬಹಿರಂಗವಾಗಿಯೇ ಆ ಸಮುದ್ರವನ್ನು "ಹೃದಯಸಮುದ್ರ" ಎಂದು ವರ್ಣಿಸಿರುವನಲ್ಲದೆ, ಅದರಿಂದ ಸ್ವಚ್ಛ ನೀರು

ಹೇಗೆ ಹೊರಬರುತ್ತದೆ ಎಂಬುದನ್ನು ಹೇಳಿದ್ದಾನೆ ("ಘೃತಸ್ಯ ಧಾರಾಃ" = ಸ್ವಚ್ಛ ನೀರು). ಅವನು ಮುಂಬರಿದು ಹೇಳುತ್ತಾನೆ:ಪ್ರವಾಹವು ಕ್ರಮಕ್ರಮವಾಗಿ ಶುದ್ಧವಾಗುತ್ತಾ ಹೋಗುತ್ತದೆ ; ಎಲ್ಲಿ? ಯಾವುದರಿಂದ? ಮನದ ಮೂಲಕ, ಅಂತರ್ಹೃದಯದ ಮೂಲಕ ("ಅಂತರ್ ಹೃದಾ ಮನಸಾ ಪೂಯ ಮಾನಾಃ"). ಮತ್ತು ಕೊನೆಯ ಋಕ್ಕಿನಲ್ಲಿ ಇಡೀ ಬಾಳು ಮುಪ್ಪುರಿಯಾಗಿ ಸ್ಥಾಪಿತವಾಗಿದೆ ಎಂಬುದನ್ನೂ ಅವನು ವಿವರಿಸುತ್ತಾನೆ : ಮೊದಲು ಅಗ್ನಿಯ ಆಸನದಲ್ಲಿ ಅದು ಪರಮ ಸತ್ಯ ಪ್ರಜ್ಞೆ, ಅಗ್ನಿಯ ಸ್ವಂತದ ಮನೆ ("ಸ್ವಂ ದಮಂ, ಋತಂ ಬೃಹತ್") ; ಎರಡನೆಯದಾಗಿ, ಹೃದಯದಲ್ಲಿ, ಸಮುದ್ರದಲ್ಲಿ = ಹೃದಯ ಸಮುದ್ರದಲ್ಲಿ ; ಮೂರನೆಯದಾಗಿ, ಮಾನವನ ಬಾಳಿನಲ್ಲಿ.

**ಧಾಮನ್‌ತೇ ವಿಶ್ವಂ ಭವನಂ ಅಧಿಶ್ರಿತಂ,**
**ಅಂತಃ ಸಮುದ್ರೇ ಹೃದ್ಯಂತರ್ ಆಯುಷಿ** ॥ **(IV.58.11)**

ಅತಿಮಾನಸ, ಅವಮಾನಸ ಸಮುದ್ರ, ಈ ಎರಡರ ನಡುವಿನ ಮಾನವ ಜೀವನ-ಇದೇ ನಮ್ಮ ಅಸ್ತಿತ್ವದ ವೈದಿಕ ಕಲ್ಪನೆ.

ಸ್ಪಷ್ಟತೆಯ, ತಿಳಿಯಾಗುವಿಕೆಯ, ನದಿಗಳು ಮಧುಮಯ ತರಂಗಗಳನ್ನುಳ್ಳವು-ಗಳಾಗಿವೆ ; ಅವುಗಳ ಗುರಿಯು ಅತಿಮಾನಸದ ಸಾಗರ ; ಅವುಗಳೇಳುವುದು ಒಳಗಿರುವ ಹೃದಯದ ಅವಮಾನಸದ ಸಾಗರದಿಂದ. ಈ ಊರ್ಧ್ವ ಸಮುದ್ರವನ್ನು ಸಿಂಧು ಎಂದು ಕರೆಯಲಾಗಿದೆ. ಸಿಂಧುವೆಂದರೆ ನದಿಯೂ ಆಗಬಹುದು, ಸಮುದ್ರವೂ ಆಗಬಹುದು. ಈ ಸ್ಪಷ್ಟತಾ ನದಿಗಳನ್ನು ಉಲ್ಲೇಖಿಸಿದ ವಾಮದೇವನ ಗಮನಾರ್ಹ ಭಾಷೆಯನ್ನು ಪರಿಶೀಲಿಸೋಣ : ಮೊಟ್ಟ ಮೊದಲು, ದೇವತೆಗಳು ಈ ದಿವ್ಯ ಪ್ರಸಾದವನ್ನು ಹುಡುಕಿ ಪಡೆದರು ; ಅದೇ ಘೃತ-ಪಣಿಗಳು ಗೋವಿನಲ್ಲಿ ಅದನ್ನು ಮುಮ್ಮಡಿಯಾಗಿ ಅಡಗಿಸಿಟ್ಟಿದ್ದರು. ವೇದದಲ್ಲಿ "ಗೌಃ" ಎಂಬ ಪದವನ್ನು ದನ ಮತ್ತು ಪ್ರಕಾಶ ಎಂಬ ಎರಡೂ ಅರ್ಥಗಳಲ್ಲಿ ಬಳಸಲಾಗಿದೆ ಎಂಬುದರಲ್ಲಿ ಸಂದೇಹವೇ ಇಲ್ಲ. ದನವು ಹೊರಗಿನ ಸಂಕೇತ, ಒಳಅರ್ಥವು ಪ್ರಕಾಶ (ಬೆಳಕು) ಎಂದು. ಪಣಿಗಳು ಗೋವುಗಳನ್ನು ಕದ್ದೊಯ್ದು ಮುಚ್ಚಿಡುವ ರೂಪಕೋಕ್ತಿಯು ವೇದದಲ್ಲಿ ಯಾವಾಗಲೂ ಬರುತ್ತದೆ. ಸಮುದ್ರವು ಮಾನಸಶಾಸ್ತ್ರೀಯ ಸಂಕೇತವಾಗಿರುವುದರಿಂದ-ಹೃದಯ ಸಮುದ್ರ ("ಸಮುದ್ರೇಹೃದಿ") ಎಂದಿರುವುದರಿಂದ ಮತ್ತು ಸೋಮವೂ ತಿಳಿಗೊಳಿಸಲಾದ ಬೆಣ್ಣೆಯೂ ಅಂಥ ಸಂಕೇತಗಳಾಗಿರುವುದರಿಂದ, ಶುದ್ಧೀಕೃತ ನವನೀತವನ್ನು ದೇವತೆಗಳು ಪಣಿಗಳು ಅಡಗಿಸಿ ಇಟ್ಟ ಗೋವಿನಲ್ಲಿ ಕಾಣುವುದರಿಂದ ಗೋವೂ ಅಂತಃಪ್ರಕಾಶದ, ಅಂತರುದ್ದೀಪನದ ಮಾನಸಶಾಸ್ತ್ರೀಯ ಸಂಕೇತವಾಗಿರಬೇಕಲ್ಲದೆ ಭೌತಿಕ ಬೆಳಕಲ್ಲವೇ ಅಲ್ಲ. ಹಸುವು ನಿಜವಾಗಿಯೂ ಅದಿತಿ=ಅವಮಾನಸದಲ್ಲಿ ಅಡಗಿರುವ ಅನಂತ, ಅಮಿತಪ್ರಜ್ಞೆ ; ಮತ್ತು ಅರ್ಥತ್ರಯಗರ್ಭಿತವಾದ ಘೃತವು ಮುಕ್ತ ಸಂವೇದನೆ : ಈ ಸಂವೇದನೆಯು (೧) ತನ್ನ ಸಂತೋಷದ ಗುಟ್ಟನ್ನು ತಿಳಿದುಕೊಳ್ಳುವುದು (೨) ತನ್ನ ವಿಚಾರಮನವು ಪ್ರಕಾಶ ಮತ್ತು ಆವಿರ್ಭಾವಕ ಪ್ರತಿಭಾಸ್ವರವನ್ನು ಪಡೆಯುವುದು ; (೩) ತನ್ನ ಆತ್ಯಂತಿಕ ಅತಿಮಾನಸದರ್ಶನ ಸ್ವರೂಪದ ಸತ್ಯವನ್ನೇ ಸಿದ್ಧಿಸಿಕೊಳ್ಳುವುದು. ಇದು ಋಕ್ಕಿನ ಉತ್ತರಾರ್ಧದಿಂದ ಸ್ಪಷ್ಟವಾಗುತ್ತದೆ (IV.58.4) ಅದರಲ್ಲಿ, "ಒಂದನ್ನು ಇಂದ್ರನು ಉತ್ಪಾದಿಸಿದನು ; ಒಂದನ್ನು ಸೂರ್ಯನು ; ಒಂದನ್ನು ಇತರ ದೇವತೆಗಳು ಯಾವುದರಿಂದ? ವೇನದಿಂದ". ಇಂದ್ರನು ವಿಚಾರಮನದ

ಅಧಿದೇವತೆ, ಸೂರ್ಯನು ಅತಿಮಾನಸದ ಬೆಳಕಿನ ಅಧಿದೇವತೆ ; ವೇನನೆಂದರೆ ಸೋಮ = ಸಂವೇದನಾತ್ಮಕ ಮನವನ್ನು ನಿರ್ಮಿಸಿದ ಮಾನಸಾಹ್ಲಾದದ ಅಧಿದೇವತೆ.

ಆನುಷಂಗಿಕವಾಗಿ ನಾವಿಲ್ಲಿ ಗಮನಿಸಬೇಕಾದದ್ದು ಪಣಿಗಳು ಆಧ್ಯಾತ್ಮಿಕತೆಯ ಶತ್ರುಗಳು, ಅಂಧಕಾರಶಕ್ತಿಗಳು-ದ್ರಾವಿಡ ದೇವತೆಗಳೂ ಅಲ್ಲ. ದ್ರಾವಿಡ ಕುಲಗಳೂ ಅಲ್ಲ - ಹಾಗೇ ದ್ರಾವಿಡ ವ್ಯಾಪಾರಸ್ಥರೂ ಅಲ್ಲ ಎಂದು. ಹೃದಯ ಸಮುದ್ರದಲ್ಲೆದ್ದು ಹೊರಟ ಘೃತದಾರೆಗಳನ್ನು, ಅವು ಕಾಣಿಸದಂತೆ ಶತಕಾರಾಗೃಹಗಳಲ್ಲಿ (ಕೊಟ್ಟಿಗೆಗಳಲ್ಲಿ) ಶತ್ರುಗಳು ಮುಚ್ಚಿಟ್ಟಿದ್ದಾರೆ ಎಂದು ವಾಮದೇವನು ತನ್ನ ಮುಂದಿನ ಋಕ್ಕಿನಲ್ಲಿ ಹೇಳಿದ್ದಾನೆ. ಹೀಗಿರುವಾಗ ಈ ಘೃತನದಿಗಳು ಹೃದಯ ಸಮುದ್ರದಿಂದ ಯಾ ಯಾವುದಾದರೂ ಸಮುದ್ರದಿಂದ ಎದ್ದು ಹರಿಯುವಾಗ ಹಾದಿಯಲ್ಲಿ ದುಷ್ಟರೂ ಅಪ್ರಾಮಾಣಿಕರೂ ಆದ ದ್ರಾವಿಡರಿಂದ-ಆರ್ಯರಾಗಲಿ, ಅವರ ದೇವರಾಗಲಿ, ಕಾಣಬಾರದೆಂದು - ನೂರು (ಜೈಲುಗಳಲ್ಲಿ) ಕೊಟ್ಟಿಗೆಗಳಲ್ಲಿ ಅಡಗಿಸಿಟ್ಟ ಹಸುಗಳಲ್ಲ. ಸೂಕ್ತೋಕ್ತ ಪಣಿ, ವೃತ್ರಾದಿಗಳು ಕೇವಲ ಮಾನಸಶಾಸ್ತ್ರೀಯ ಕಲ್ಪನೆಗಳಲ್ಲದೆ ನಮ್ಮ ಪಿತೃ-ಪಿತಾಮಹರು ಅಡ್ಡತಿಡ್ಡ ಹಾಸಾಗಿ ಹೊಕ್ಕ ಮಿಥ್ಯಾ ಕಥೆಗಳ ಮೋಡಗಳಲ್ಲಿ ಮುಂದಿನ ಪೀಳಿಗೆಗಳಿಗೆ ಗೊತ್ತಾಗಬಾರದೆಂದು, ಭಾರತದ ಪ್ರಾಚೀನೇತಿಹಾಸದ ಸಂಗತಿಗಳನ್ನು ಮುಚ್ಚಿಡಲು ಮಾಡಿದ ಪ್ರಯತ್ನವಿದಲ್ಲ ಎಂಬುದನ್ನು ನಾವು ಕಾಣುತ್ತೇವೆ. ತನ್ನ ಕರ್ಮಕಾಂಡೀಯ ಪ್ರತಿಮೆಗಳನ್ನು ಈ ಪ್ರಕಾರ ಅನಿರೀಕ್ಷಿತವಾಗಿ ವಿಪರ್ಯಸ್ತ ಸ್ವರೂಪಕ್ಕೆ ತಂದಿಳಿಸಿದ್ದನ್ನು ಕಂಡರೆ ವಾಮದೇವನು ಕಂಡಾಬಟ್ಟೆ ಹೆದರಿ ಕಂಗಾಲಾಗಿ ಬಿಡುತ್ತಿದ್ದನು. ಘೃತವನ್ನು ನೀರೆಂದು ತಿಳಿದುಕೊಂಡರೆ ಸಹಾ, ಹೃದ್ಯ ಸಮುದ್ರವನ್ನು ಆಹ್ಲಾದಕರ ಕೆರೆಯೆಂದು ಭಾವಿಸಿಕೊಂಡರೆ ಕೂಡಾ, ನೂರಾರು ಒಡ್ಡುಗಳಿಂದ ದ್ರಾವಿಡರು ನದೀ ನೀರನ್ನು ತಡೆಗಟ್ಟಿ ಆರ್ಯರಿಗೆ ಅದರ ಸುಳಿವೂ ಗೊತ್ತಾಗದಂತೆ ಮಾಡಿದರೆಂದು ಅರ್ಥೈಸಿದರೂ ನಾವು (ಈ ನವ್ಯ ಪಾಶ್ಚಾತ್ಯೋನ್ಮುಖ ವಿವರಣಕಾರರಿಗೆ) ಸಮರ್ಥನೆಯನ್ನು ಒದಗಿಸಿ ಕೊಟ್ಟಂತಾಗುವುದಿಲ್ಲ. ಏಕೆಂದರೆ, ಒಂದು ಹೃದ್ಯವಾದ ಕೆರೆಯಿಂದ ಪಂಜಾಬಿನ ಎಲ್ಲ ನದಿಗಳೂ ಹರಿದು ಹೊರಟರೂ ಆ ಹೊನಲುಗಳನ್ನು ಮುಮ್ಮಡಿಯಾಗಿ ಆಕಳಿನಲ್ಲಿಟ್ಟು, ಆ ಆಕಳನ್ನು ಗವಿಯಲ್ಲಿ ಅಡಗಿಸಿಬಿಟ್ಟರೆಂದರೆ - ಅಂಥ ಕೆಲಸವನ್ನು ಎಷ್ಟು ಚತುರರೂ ಎಂಥ ನಿರ್ಮಾಪಕ ಪ್ರತಿಭೆಯುಳ್ಳ ದ್ರಾವಿಡರೂ ಮಾಡಿರಲಾರರು.

ವಾಮದೇವ ಉವಾಚ: "ಅರಿಯಿಂದ ನೂರು ಆವಾರಗಳೊಳಗೆ ಹೃದಯ ಸಮುದ್ರದಿಂದ ಹೊರಟ ಈ ನದಿಗಳು ಕೂಡಿ ಹಾಕಲ್ಪಟ್ಟದ್ದರಿಂದ ಅವು ಕಾಣಲಾರದಾದವು. ನಾನು ಸ್ಪಷ್ಟತೆಯ, ಪಾರದರ್ಶಕತೆಯ, ಅತೀಂದ್ರಿಯ ದರ್ಶನದ, ಧಾರೆಗಳನ್ನು ಪ್ರವಾಹಗಳನ್ನು ನೋಡಲೆಳಸುತ್ತೇನೆ. ಏಕೆಂದರೆ ಅವುಗಳ ನಡುವೆ ಬಂಗಾರದ ಬಣ್ಣದ ಸೋಮಲತೆಯ ದಂಟಿದೆ, ಕಾಂಡವಿದೆ. ಆ ಪ್ರವಾಹಗಳು ಮನಸ್ಸಿನಿಂದಲೂ ಹೃದಯಾಕಾಶದಿಂದಲೂ[೧] ಶುದ್ಧಗೊಳಿಸಲ್ಪಟ್ಟು, ಹರಿವ ನದಿಗಳಂತೆ ಹೊರ ಹೊಮ್ಮುತ್ತವೆ. ಅತೀಂದ್ರಿಯ ಸ್ಪಷ್ಟತೆಯ ಅಲೆಗಳು ಗಾಡಿ ಹೊಡೆವವನ ಅಂಕೆಯಲ್ಲಿರುವ ಎತ್ತುಗಳಂತೆ (ಪ್ರಾಣಿಗಳಂತೆ) ಚಲಿಸುತ್ತವೆ. ಈ ಬಲಿಷ್ಠ ಬೆಳಕಿನ ಪ್ರವಾಹಗಳು ಸಿಂಧುವಿನ (ಸಮುದ್ರದ)

---

೧. ಹೃದಯದಲ್ಲಿ ರಕ್ತಕೋಶವಿಲ್ಲ ; ಅದರ ಪಕ್ಕದಲ್ಲಿರುವ ಆತ್ಮಾವಾಸ, ಖಾಲಿಸ್ಥಳ ಅದು ನಮ್ಮ ಬಲಬದಿಯಲ್ಲಿರುತ್ತದೆ-ಶ್ರೀ ರಮಣರ ಪ್ರಕಾರ (ಅನುವಾದಕ).

ಎದುರಿರುವ ದಾಲಿಯಲ್ಲಿ ರಭಸಮಯ ವೇಗದಿಂದ ಒಟ್ಟಾಗಿ, ಆದರೆ, ವಾತಾಹತವಾಗಿ (ಆತಂಕಗಳನ್ನು ದಾಟುತ್ತಾ) ಹರಿಯುತ್ತವೆ. ಅವು ಅಲೆಗಳಿಂದ ಪುಷ್ಟವಾಗುತ್ತಿರುವುದರಿಂದ ತನ್ನ ಗಡಿಗಳನ್ನು ಮೀರಿ ಹಾರಲು ಯತ್ನಿಸುವ ಕುದುರೆಯನ್ನು ಹೋಲುತ್ತವೆ. (IV.58.5-7) ಇದು ಯೋಗಿಯ ಪದ್ಯ ಕಾವ್ಯವೆಂಬುದು ನೋಡಿದ ಕೂಡಲೇ ಗೊತ್ತಾಗುತ್ತದೆ ; ತನ್ನ ಉದ್ದಿಷ್ಟಾರ್ಥವನ್ನವನು, ಅಪವಿತ್ರಾತ್ಮರಿಗೆ ಗೊತ್ತಾಗಬಾರದೆಂದು, ಗುಟ್ಟಾಗಿ ಇಟ್ಟಿದ್ದಾನೆ. ಆದರೆ ಆಗ ಈಗ ನೋಡಬಯಸುವ ಕಣ್ಣಿಗೆ ಅದು ಪಾರದರ್ಶಕವಾಗುವ ಹಾಗೂ ಮಾಡಿದ್ದಾನೆ. ಅವನು ಹೇಳುವ ತಾತ್ಪರ್ಯವಿದು : ದಿವ್ಯಜ್ಞಾನವು ಸದಾ ನಮ್ಮ ವಿಚಾರಗಳ ಹಿಂದೆ ಹರಿಯುತ್ತಲೇ ಇರುತ್ತದೆ ; ಆದರೆ ಅದು · ನಮ್ಮ ಭೌತಮನದ ಇಂದ್ರಿಯ ಕಾರ್ಯ ಮತ್ತು ಇಂದ್ರಿಯ ಪ್ರತ್ಯಕ್ಷಗಳಿಗಷ್ಟೇ ಪರಿಸೀಮಿತವಾಗಿ ನಮಗೆ ದೂರವಾಗಿಯೇ ಉಳಿಯುವಂತೆ ನಮ್ಮ ಅಂತಃಶತ್ರುಗಳಿಂದ ತಡೆಯಲ್ಪಟ್ಟಿದೆ. ನಮ್ಮ ಸತ್ತೆಯ ಅಲೆಗಳು ಅತಿಮಾನಸ ಸ್ವರೂಪವುಳ್ಳ ಅನಂತದ. ಅಸೀಮದ, ಗಡಿದಂಡೆಗೆ ಬಡಿಯುತ್ತಿದ್ದರೂ ಐಂದ್ರಿಯ ಮಾನಸದ ನಾಡೀಕ್ರಿಯೆಯಿಂದ ಅಡ್ಡಿಗೊಳಗಾಗಿವೆ ; ಮತ್ತು ಆ ಕಾರಣದಿಂದ ಅವು ತಮ್ಮ ಗೌಪ್ಯವನ್ನು ಹೊರಗೆಡಹಲಾರದಾಗಿವೆ. ಅವು ಸಾರಥಿಯ ಕಡಿವಾಣಕ್ಕೊಳಪಟ್ಟಂತಿವೆ. ತಮ್ಮ ಶಕ್ತಿಯನ್ನು ಪೂರ್ಣವಾಗಿ ಸಂವರ್ಧಿಸಿಕೊಂಡ ಮೇಲೆಯೇ (ಹೋರಾಡುತ್ತಿರುವ ಕುದುರೆಗಳು) ಈ ಅಡೆತಡೆಗಳನ್ನು ಒಡೆದು ಹಾಕಿದ ಮೇಲೆಯೇ ಸೋಮರಸವು (ಸೋಮಮದ್ಯವು) ಯಾವುದರಿಂದ ಹಿಂಡಲ್ಪಡುವುದೋ ಯಜ್ಞವು ಯಾವುದರಿಂದ ಜನಿಸುತ್ತದೆಯೋ ಆ ತತ್ತನ್ನು ಕುರಿತು ಅವು ಹರಿಯಬಲ್ಲವು.

**"ಯತ್ರ ಸೋಮಃ ಸೂಯತೇ ಯತ್ರ ಯಜ್ಞೋ**
**ಘೃತಸ್ಯ ಧಾರಾ ಅಭಿತತ್ ಪವಂತೇ (IV.58.9)**

ಈ ಗುರಿಯನ್ನು ಮತ್ತೆ "ಘೃತಸ್ಯಧಾರಾ ಮಧುಮತ್ ಪವಂತೇ ಜೇನುತುಪ್ಪವುಳ್ಳ (IV.58.10) ಘೃತದ ಧಾರೆಗಳು" ಎಂದು ವರ್ಣಿಸಲಾಗಿದೆ : ಅರ್ಥಾತ್ ಅದು ಆನಂದ ದಿವ್ಯವಾದ ಪರಮ ಸುಖ. ಈ ಗುರಿಯೇ ಸಿಂಧು = ಅತಿಮಾನಸ ಪ್ರಜ್ಞಾಸ್ತರದ ಸಾಗರ ಎಂದು ವಾಮದೇವನ" "ನಿನ್ನ ಮಧುಮತ್ತರಂಗವನ್ನು ನಾವು ಆಸ್ವಾದಿಸುವಂತಾಗಲಿ" ಋಕ್ಕು ಸ್ಪಷ್ಟಪಡಿಸುತ್ತದೆ. ನೀನೆಂದಲಿಲ್ಲ ಅಗ್ನಿ, ದಿವ್ಯಪುರುಷ, ಜಗಂಗಳ ಚತುಃಶೃಂಗವೃಷಭ- ಅದನ್ನು ನದೀ ಸಂಗಮದಲ್ಲಿ ನದಿಯ ನೀರುಗಳು ತಮ್ಮ ರಭಸದಲ್ಲಿ ಹೊತ್ತು ಸಾಗಿಸುತ್ತವೆ.

**ಅಪಾಂ ಅನೀಕೇ ಸಮಿಥೇ ಯ ಆಭೃತಃ,**
**ತಂ ಅಸ್ಯಾಮ ಮಧುಮಂತಂ ತ ಊರ್ಮಿಂ (IV.58.11)**

ಸೃಷ್ಟಿ ಸೂಕ್ತದಲ್ಲಿ (X.129.3-5) ವೈದಿಕ ಋಷಿಗಳ ಮೂಲ ಕಲ್ಪನೆಯನ್ನು ಹೊರಪಡಿಸಲಾಗಿದೆ. ಅದರಲ್ಲಿ ಅವಮಾನಸ ಪ್ರಜ್ಞೆಯನ್ನು ಹೀಗೆ ಬಣ್ಣಿಸಲಾಗಿದೆ. "ಆದಿಯಲ್ಲಿ ಕತ್ತಲಲ್ಲಿ ಕತ್ತಲಡಗಿದ್ದಷ್ಟೇ ಇತ್ತು ; ಅದೊಂದು ಕತ್ತಲುಗಡಲು. ಅದರಲ್ಲಿ ಮಾನಸಪ್ರಜ್ಞೆ ಇರಲಿಲ್ಲ ಅದರಿಂದ ಆ ಒಂದು ತನ್ನ ಶಕ್ತಿಯ ಮಹತ್ವದಿಂದ ಹುಟ್ಟಿತು. ಅದು ಮೊದಲು ತನ್ನಲ್ಲೇ ಒಂದು ಆಸೆಯನ್ನು ಚಲಿಸುವಂತೆ ಮಾಡಿತು. ಅದೇ ಮನದ ಮೊದಲ ಬೀಜ. ವಿವೇಕ ಪ್ರಬುದ್ಧರಾದ ಗುರುಗಳು ಅಸತ್ತಿನಲ್ಲಿ ಸತ್ತನ್ನು ನಿರ್ಮಿಸುವ ವಸ್ತುವನ್ನು ಕಂಡರು. ವಿಚಾರ ಮನಃಪ್ರಜ್ಞೆಯ ಮೂಲಕ ಉದ್ದೇಶಪೂರ್ವಕವಾದ ಪ್ರೇರಣೆಯಿಂದ ಅವರದನ್ನು ಹೃದಯದಲ್ಲಿ

ಹುಡುಕಿ ತೆಗೆದರು. ಅದರ ಕಿರಣವನ್ನು ಅಡ್ಡಗಲವಾಗಿ ವಿಸ್ತರಿಸಲಾಯಿತು ; ಅದರ ಮೇಲೆ ಇನ್ನೇನೋ ಇತ್ತು. ಅದರ ಕೆಳಗೆ ಇನ್ನೇನೋ ಇತ್ತು." ಈ ಅನುಚ್ಛೇದದಲ್ಲಿ ವಾಮದೇವನ ಸೂಕ್ತ ಹೇಳಿದ ಕಲ್ಪನೆಗಳನ್ನೇ ಪ್ರತಿಮಾ ಪ್ರಚ್ಛಾದನವಿಲ್ಲದೆಯೆ ಹೇಳಲಾಗಿದೆ. ಅವಮಾನಸ ಸಮುದ್ರದಿಂದ ಆ ಅದ್ವಿತೀಯವು ಏಳುತ್ತದೆ- ಮೊದಲು ಅದು ಏಳುವುದು ಹೃದಯದ ಒಂದು ಆಸೆಯಾಗಿಯೇ ; ಹೃದಯ ಸಮುದ್ರದಲ್ಲಿ ಆ ಅದ್ವಿತೀಯನು ಸತ್ತಾನಂದದ ಅನಭಿವ್ಯಕ್ತ ಆಸೆಯಾಗಿ ತಿರುಗುತ್ತಾನೆ ಮತ್ತೂ ಈ ಆಸೆಯೇ ಅನಂತರ ಐಂದ್ರಿಯ ಮನಸ್ಸೆಂದು ಅವತರಿಸುವ ಪದಾರ್ಥದ ಬೀಜ. ಸತ್ತೆಯನ್ನು ಕಟ್ಟಲು ದೇವತೆಗಳು ಈ ಪ್ರಕಾರ ಒಂದು ಸಾಧನವನ್ನು ಕಂಡುಹಿಡಿಯುತ್ತಾರೆ. ಈ ಸತ್ತೆಯೇ ಪ್ರಜ್ಞೆ ; ಇದನ್ನು ಅವಮಾನಸದ ಅಂಧಕಾರದಿಂದ ದೇವತೆಗಳು ಶೋಧಿಸಿ ತೆಗೆದದ್ದು ಉಕ್ತ. ಆ ದೇವತೆಗಳು ಹೃದಯದಲ್ಲಿ ದೊರೆತ ಅದನ್ನು ವಿಚಾರದ ಬೆಳೆವಣಿಗೆಯಿಂದಲೂ ಉದ್ದೇಶಪೂರ್ವಕವಾದ ಪ್ರಣೋದನದಿಂದಲೂ ("ಪ್ರತೀಶಯಾ") ಹೊರದೆಗೆದರು. ಪ್ರತೀಶೆಯೆಂದರೆ ಮಾನಸಿಕ ಆಸೆ ; ನಿಸರ್ಗದ ಬಲಿ ಪ್ರಾಣಪ್ರಜ್ಞೆಯ ರೂಪದಿಂದ ಇದಕ್ಕಿಂತ ಮೊದಲು ಹುಟ್ಟಿದ ಅಸ್ಪಷ್ಟ ಆಸೆಯಿಂದ ಇದು ಭಿನ್ನ. ಈ ಪ್ರಕಾರ ಅವರು ನಿರ್ಮಿಸಿದ ಜಾಗರಿತ ಸತ್ತೆಯನ್ನು ಆಮೇಲೆ ಇನ್ನೆರಡು ಬಡಾವಣೆಗಳ ನಡುವೆಯೋ ಎಂಬಂತೆ ಅಡ್ಡಡ್ಡವಾಗಿ ಎಳೆದು ಹಾಸಲಾಯಿತು : ಕೆಳಗೆ ಅವಮಾನಸದ ಅಂಧಕಾರದ ನಿದ್ರೆ, ಮೇಲೆ ಅತಿಮಾನಸದ ಪ್ರಜ್ವಲ ಗೌಪ್ಯ. ಇವೇ ಮೇಲ್ಗಡಲು, ಕೆಳಗಡಲುಗಳು.

ಈ ವೈದಿಕ ಪ್ರತಿಮಾವಳಿಯು ಪುರಾಣಗಳ ತತ್ಸದೃಶ ಸಾಂಕೇತಿಕ ಪ್ರತಿಮೆಗಳ ಮೇಲೆ ಸ್ಪಷ್ಟವಾದ ಬೆಳಕನ್ನು ಬೀರುತ್ತದೆ. ಅದರಲ್ಲೂ ಪ್ರಳಯೋತ್ತರ ಅವಧಿಯಲ್ಲಿ ವಿಷ್ಣುವು ಅನಂತನಾಗನ ತೆಕ್ಕೆಯ ಮೇಲೆ ಮಧುರಕ್ಷೀರ ಸಾಗರದಲ್ಲಿ ಮಲಗಿರುವ ಪ್ರತಿಮೆ (ರೂಪಕೋಕ್ತಿ) ಅವುಗಳಲ್ಲಿ ಬಹಳ ಗಣ್ಯ. ಅಂಧಶ್ರದ್ಧೆಯ ಹಿಂದುಗಳು -ಅರ್ಚಕರಾಗಿರಲಿ, ಕವಿಗಳಾಗಿರಲಿ - ಸೂರ್ಯನನ್ನೂ, ಚಂದ್ರನನ್ನೂ ರಾಹು ನುಂಗುವುದೇ ಗ್ರಹಣವೆಂದು ತಿಳಿದವರು, ಸುಲಭವಾಗಿ, ಪ್ರಲಯಕಾಲದಲ್ಲಿ (ಅಸೃಷ್ಟಿಯ ಅವಧಿಯಲ್ಲಿ) ಮಹೋಚ್ಚ ದೇವನು ಭೌತಿಕ ಶರೀರ ತಾಳಿ ಭೌತಿಕವಾದ ಹಾವಿನ ಮೇಲೆ ವಾಸ್ತವಿಕವಾದ ಕ್ಷೀರ ಸಮುದ್ರದಲ್ಲಿ ಮಲಗಿದನೆಂದು ನಂಬಿದ್ದರೇಕೆ ನಂಬಿರಬಾರದು? ಎಂದು ಯಾರಾದರೂ ಕೇಳಿಯಾರು. ಅದಕ್ಕೆ ಉತ್ತರ: ಈ ಕಥೆಗಳೆಲ್ಲಾ ವಿಕಟ ಕಲ್ಪನೆಗಳೆನ್ನಲು ಸಾಧ್ಯವಿಲ್ಲ. ಅಂಥ ಅರ್ಥ ಮಾಡುವ ಅಗತ್ಯವಿಲ್ಲ. ಈ ಮೂಢ ನಂಬಿಗೆಯ ಕವಿಗಳೇ ಎಲ್ಲರಿಗೂ ಕಾಣುವಂತೆ ಈ ಕಥೆಗಳ ಮೇಲ್ಮುಖದಲ್ಲಿಯೇ, ಕಾಣಬಾರದೆಂಬ ಹಠ ತೊಟ್ಟವರನು ಬಿಟ್ಟು, ಉಳಿದವರಿಗೆ ಸರಳವಾಗಿ ಸ್ಪಷ್ಟಗೊಳಿಸಿದ್ದಾರೆ : ವಿಷ್ಣುವಿನ ಹಾದಿಗೆ ಅನಂತವೆಂಬ ಒಂದು ಹೆಸರನ್ನು ಅವರು ಕೊಟ್ಟಿದ್ದಾರೆ ; ಅನಂತವೆಂದರೆ ಅಪ್ರಮೇಯ, ಅಸೀಮ. ಆದ್ದರಿಂದ ಅವರ ಈ ರೂಪಕವೊಂದು ಪ್ರಚ್ಛನ್ನಾರ್ಥಗರ್ಭಿತ ಕಟ್ಟು ಕಥೆ - ಇದರಲ್ಲಿ ವಿಷ್ಣುವು ವಿಶ್ವ ವ್ಯಾಪಕ ದೇವತೆ ; ಅಪ್ರಮೇಯ ಸತ್ಯದ ತೆಕ್ಕೆಯ ಮೇಲೆ ಅವನು ಅಸೃಷ್ಟಿಕಾಲದಲ್ಲಿ ಮಲಗಿರುತ್ತಾನೆ ; ವೇದದಲ್ಲಿ ಹೇಳಿದಂತೆ ಸಾಗರವು ನಿತ್ಯ ಸತ್ತೆ, ದೇಶ ಕಾಲಾತೀತ ಅಸ್ತಿತ್ವ. ಪ್ರತಿಮೋಕ್ತವಾದ ಈ ಸಾಗರವು ಸರ್ವತಂತ್ರ ಸ್ವತಂತ್ರವಾದ (ಪರನಿರಪೇಕ್ಷವಾದ) ಮಾಧುರ್ಯ, ಸಿಹಿರಸ ; ಈ ಮಾಧುರ್ಯವೇ ಶುದ್ಧ ಪರಮಾನಂದ. ಸಿಹಿವಾಲಿನಲ್ಲಿ (ವೇದಪ್ರತಿಮಾನುಸಾರ) ಸಾರತಃ ಮಧುಭಿನ್ನವಲ್ಲದ

ಅರ್ಥವಿದೆ ; ವಾಮದೇವೋಕ್ತವಾದ ಪದ ಮಧು = ಜೇನುತುಪ್ಪ, ಮಧ್ಯಸಾರ, ಸಿಹಿತನ, ಅಮೃತ, ಬೆಣ್ಣೆ = ಸಚ್ಚಿದಾನಂದ.

ಹೀಗೆ ವೇದ ಪುರಾಣಗಳೆರಡೂ ಒಂದೇ ಬಗೆಯ ಸಾಂಕೇತಿಕ ಪ್ರತಿಮೆಗಳನ್ನು ಬಳಸುತ್ತವೆ ; ವೇದ ಪುರಾಣಕಾರರಿಗೆ ಕಡಲು ಅನಂತದ ಪ್ರತಿಮೆ, ಸಾಕಾರ ಪ್ರತಿನಿಧಿ, - ದೇಶಕಾಲಾತೀತ ಸತ್ತೆ, ಇರುವಿಕೆ. ನದಿಯ ಅಥವಾ ಹರಿನೀರಿನ ಪ್ರತಿಮೆಯು ಪ್ರಜ್ಞಾಮಯ ಧಾರೆಯ ಸತ್ತಾ ಸ್ವರೂಪ. ಸರಸ್ವತಿಯು ಏಳು ಹೊಳೆಗಳಲ್ಲೊಬ್ಬಳು ; ಅವಳು ಸತ್ಯಪ್ರಜ್ಞೆಯ ಸ್ಫೂರ್ತಿನದಿ. ಆದುದರಿಂದ ಮಿಕ್ಕ ಆರು ನದಿಗಳೂ ಮಾನಸಶಾಸ್ತ್ರೀಯ ಸಂಕೇತಗಳೇ ಆಗಿರುವುವು ಎಂದು ಊಹಿಸುವುದು ನಮ್ಮ ಹಕ್ಕು.

ಆದರೆ ಎಷ್ಟೇ ಬಲಿಷ್ಠವೂ ಸಮಾಧಾನಕರವೂ ಆಗಿದ್ದರೂ ತಾತ್ಕಾಲಿಕ ಸಿದ್ಧಾಂತವನ್ನೂ ನಿಗಮನವನ್ನೂ ನಾವು ಅವಲಂಬಿಸಬೇಕಾಗಿಲ್ಲ. ವಾಮದೇವನ ಸೂಕ್ತದಲ್ಲಿ ನಾವು ಕಂಡಂತೆ, "ಘೃತಸ್ಯಧಾರಾಃ" ನದಿಗಳು ಅಲ್ಲಿ ನದಿಗಳಲ್ಲ - ತಿಳಿಗೊಳಿಸಿದ ಬೆಣ್ಣೆಯ ನದಿಗಳೂ ಅಲ್ಲ- ಭೌತಿಕವಾದ ನದಿಯೂ ಅಲ್ಲ ; ಅವು ಮಾನಸಶಾಸ್ತ್ರೀಯ ಸಂಕೇತಗಳು. ಆದ್ದರಿಂದ ಇತರ ಸೂಕ್ತಗಳಲ್ಲಿಯೂ ಏಳು ನದಿಗಳ ಪ್ರತಿಮೆಗಳನ್ನು ಹಾಗೇ ಮಾನಸಶಾಸ್ತ್ರೀಯ ಸಂಕೇತಗಳೆಂದೇ ತಿಳಿಯಬೇಕಾದ ಒತ್ತಾಯ ನಮ್ಮ ಮೇಲೆ ಸಾಕ್ಷಿಯಾಗಿ ನಿಲ್ಲುತ್ತದೆ ಈ ಉದ್ದೇಶಕ್ಕಾಗಿ ನಾನು ಇನ್ನೊಂದು ಸೂಕ್ತವನ್ನು ಅಂದರೆ ಅಗ್ನಿಯನ್ನು ಕುರಿತು ವಿಶ್ವಾಮಿತ್ರನು ಹಾಡಿದ ಮೂರನೆಯ ಮಂಡಲದ ಮೊದಲನೆಯ ಸೂಕ್ತವನ್ನು ಪರಿಶೀಲಿಸುತ್ತೇನೆ ; ಅದರಲ್ಲಿ ವಾಮದೇವನು ಸ್ಪಷ್ಟತೆಯ ನದಿಗಳ ಬಗೆಗೆ ಹೇಳಲು ಬಳಸಿದಂತಹ ಅರ್ಥವತ್ತಾದ ಮತ್ತು ಅನಪಾರ್ಥಕರವಾದ ಭಾಷೆಯಲ್ಲಿಯೇ ವಿಶ್ವಾಮಿತ್ರನು ವರ್ಣಿಸುತ್ತಾನೆ. ಅದೇ ಕಲ್ಪನೆಗಳನ್ನು ಅಷ್ಟೇ ನಿಷ್ಕೃಷ್ಟವಾಗಿ ಈ ಇಬ್ಬರು ಪವಿತ್ರ ಗಾಯಕರು ಭಿನ್ನ ತಿರುಳುಗಳನ್ನುಳ್ಳ ಮಂತ್ರಗಳಲ್ಲಿ ಹೇಳಿದ್ದಾರೆ.



## ಅಧ್ಯಾಯ-೧೧

# ಏಳು ನದಿಗಳು

ದಿವ್ಯನದಿಗಳನ್ನು ಕುರಿತೇ ವೇದವು ವಿಶೇಷವಾಗಿ ಹೇಳುತ್ತದೆ. "ಆಪೋದೇವೀಃ" ಯಾ "ಆಪೋ ದಿವ್ಯಾಃ" ಮತ್ತು ಸತತವಾಗಿ, "ಸ್ವರ್ವತೀರ್ ಆಪಃ" ಸೂರ್ಯ ಪ್ರಕಾಶವೆಂಬ ಸೌರಜಗತ್ತಿನ ಉಜ್ವಲ ಬೆಳಕನ್ನು ಆ ಜಲಧಾರೆಗಳು ಒಯ್ಯುತ್ತವೆ ಎಂಬುದನ್ನೂ ಆಗ ಈಗ ಹೇಳುತ್ತಲೇ ಹೋಗಿವೆ. ದೇವತೆಗಳಿಂದ ಅಥವಾ ದೈವ ಸಹಾಯ ಪಡೆದ ಮಾನವರಿಂದ ವ್ಯವಸ್ಥೆಗೊಳಿಸಲಾದ ಜಲ ಪ್ರವಾಹವು ಒಂದು ಸತತ ಸಂಕೇತ. "ಗಾಃ, ಅಪಃ, ಸ್ವಃ"= ದನಗಳ ಹಿಂಡು, ಜಲವಾಹಿನಿಗಳು ಮತ್ತು ಸೂರ್ಯ ಅಥವಾ ಸೂರ್ಯ ಪ್ರಪಂಚ-ಎಂಬೀ ಮೂರನ್ನು ಗೆಲ್ಲಲೆಂದೇ ಮಾನವರು ಆಶಿಸುತ್ತಾರೆ. ಅದಕ್ಕಾಗಿಯೇ ದೇವತೆಗಳು ಸತತವಾಗಿ ವೃತ್ರ-ಪಣಿಗಳೊಡನೆ ಯುದ್ಧ ಮಾಡುತ್ತಿರುತ್ತಾರೆ. ಇಲ್ಲಿ ಏಳುವ ಪ್ರಶ್ನೆಗಳು : - ಈ ಜಲ ಸ್ವರ್ಗದಿಂದ (ಆಕಾಶದಿಂದ) ಬೀಳುವ ಮಳೆಯೋ ವೃತ್ರ ಸ್ವರೂಪದ ದ್ರಾವಿಡರಿಂದ ಯಾ ಅವರ ದೇವತೆಗಳಿಂದ ತಮ್ಮ ಕಕ್ಷೆಯೊಳಗಿಟ್ಟುಕೊಂಡ ಯಾ ತಡೆಗಟ್ಟಿದ ಉತ್ತರ ಭಾರತದ ನದಿಗಳೋ? ಈ ಗೋವುಗಳು ಪಣಿಗಳೆಂಬ ಆದಿವಾಸಿ ದ್ರಾವಿಡ ಕಳ್ಳರು ಆರ್ಯರ ವಸತಿ ಸ್ಥಳಗಳಿಂದ ಕದ್ದುಕೊಂಡು ಹೋದ ಅಥವಾ ಅವರ ದೇವರುಗಳು ಕದ್ದೊಯ್ದ ಹಸುಗಳೋ? ಅಥವಾ ಇದರಲ್ಲಿ ಇದಕ್ಕೂ ಹೆಚ್ಚಿನ ಅಗಾಧತರವಾದ ಆಧ್ಯಾತ್ಮಿಕ ಅರ್ಥವಿರಬಹುದೋ? ಸ್ವರ್ಜಯವು ಮಳೆಗಾಳಿ ಮೋಡದ ನೆರಳಿನಿಂದ ಅಥವಾ ಗ್ರಹಣ ಹಿಡಿದಿದ್ದರಿಂದ ಯಾ ರಾತ್ರಿಯ ಕತ್ತಲು ಮುಚ್ಚಿಕೊಂಡದ್ದರಿಂದ ಸೂರ್ಯನನ್ನು ಆರ್ಯನಿಂದ ಹಗೆಗಳಾದ ನಿರ್ನಾಸಿಕ ಕೃಷ್ಣವರ್ಣೀಯ ಮಾನವರು ಮುಚ್ಚಿಡುವ ಘಟನೆಗಂತೂ ಇಲ್ಲಿ ಅರ್ಥವೇ ಇಲ್ಲ. ಅಥವಾ ಸ್ವರ್ಗಜಯವೆಂದರೆ ಕೇವಲ ಯಜ್ಞಮಾಡಿ ಪಡೆಯುವ ಒಂದು ಕಾರ್ಯವೇ? ಮತ್ತು ಈ ಎರಡು ಪ್ರಕರಣಗಳಲ್ಲೂ ದನ,ಜಲ,ಬಿಸಿಲುಗಳನ್ನು ಯಾ ದನ, ಜಲ, ಬಾನುಗಳನ್ನು ಒಟ್ಟಿಗೇ ಹೇಳುವ ಕುತೂಹಲಕಾರಕ ಸಂದರ್ಭದ ಅರ್ಥವೇನು? ಹಾಗಲ್ಲದೆ, ಇದು "ಗಾಃ" ಎಂದರೆ ಗೋವೆಂದೂ ಬೆಳಕಿನ ಕಿರಣಗಳೆಂದೂ ತಿಳಿದು ಇದರಿಂದ ಪರಮಸತ್ಯ ಸ್ವರೂಪದ, ಪರಂಜ್ಯೋತಿಃ ಸ್ವರೂಪದ ಮೂಲದಿಂದ ಹುಟ್ಟಿದ ಉನ್ನತ ಪ್ರಜ್ಞೆಯ ಮಿಂಚುವಿಕೆ ಎಂದು ಹೇಳುವ ಸಂಕೇತ ಪದ್ಧತಿ ಏಕಾಗಿರಬಾರದು? "ಸ್ವರ್" ಎಂದರೇ ವೇದ ಹೇಳುವ ನಿಜ ಜ್ಯೋತಿ ಮತ್ತು "ಋತಂ ಬೃಹತ್" ಆದ ವಿಶಾಲ ಸತ್ಯದಿಂದ ನಿಯಂತ್ರಿಸಲ್ಪಟ್ಟ ಪ್ರಪಂಚ ಯಾ ಸರಸ್ವತೀಃ=ಆ ಅಮೃತತ್ವದ ನೆಲೆಯೇ ಅಲ್ಲವೇ? ಮತ್ತು "ಆಪೋದೇವೀಃ, ದಿವ್ಯಾಃ ಯಾ ಸರಸ್ವತೀಃ=ಆ ಅಮೃತತ್ವದ ನೆಲೆಯಿಂದ ಮರ್ತ್ಯಮನದ ಮೇಲೆ ಸುರಿಯುವ ಉಚ್ಚ ಪ್ರಜ್ಞೆಯ ಜಲಪ್ರವಾಹ (ಮಹಾಪೂರ) ಗಳೇ ಅಲ್ಲವೇ?

ವೇದದ ಮಂತ್ರಪಾರಗಳನ್ನು ಯಾ ಸೂಕ್ತಗಳನ್ನು ಮೇಲು ಮೇಲಿಂದ ನೋಡಿದಾಗ ಮೇಲೆ ಹೇಳಿದ ಅರ್ಥವನ್ನು ಹೇಳುವ ಅವಶ್ಯಕತೆ ಇಲ್ಲವೆಂದೆನ್ನಿಸುವುದೇನೋ ನಿಃಸಂದಿಗ್ಧ ಎನ್ನಬಹುದು. ಏಕೆಂದರೆ, ಅವು ಮಳೆಗಾಗಿ ಮಾಡುವ ಪ್ರಾರ್ಥನೆ ಅಥವಾ ದೇವಸ್ತುತಿ ಎಂದೋ ಪಂಜಾಬಿನ ನದಿಗಳಿಗೋಸ್ಕರ ಮಾಡಿದ ಯುದ್ಧ ಎಂದೋ, ಪ್ರತ್ಯೇಕವಾಗಿ ಆ ಪಾರಗಳನ್ನು ವಿಂಗಡಿಸಿ, ಸೂಕ್ತಗಳನ್ನು ಬೇರ್ಪಡಿಸಿ, ಅರ್ಥ ವಿವರಣೆಯನ್ನು ಮಾಡಬಹುದು. ಆದರೆ ವೇದದ ಅರ್ಥವನ್ನು ಹಾಗೆ ಪ್ರತ್ಯೇಕವಾಗಿ ವಿಂಗಡಿಸಿ ಯಾ ಸೂಕ್ತಗಳನ್ನು ಪ್ರತ್ಯೇಕವಾಗಿ ಒಂದೊಂದನ್ನೇ ತೆಗೆದುಕೊಂಡು ವೇದಾರ್ಥವನ್ನು ವಿವರಿಸಹೋಗಬಾರದು. ಅದಕ್ಕೇನಾದರೂ ಜೊತೆಗೊಡುವ ಯಾ ಹೊಂದಿಕೆ-ಯಾಗುವ ಅರ್ಥವಿದ್ದದ್ದೇ ಹೌದಾದರೆ, ಇಡೀ ವೇದವನ್ನು ಇಡಿಯಾಗಿಯೇ ನಾವು ವಿವರಿಸಬೇಕು. ಬೇರೆ ಬೇರೆ ಅನುಚ್ಛೇದ-ಉಪಚ್ಛೇದಗಳಲ್ಲಿ "ಸ್ವರ್" ಯಾ "ಗಾಃ" ಎಂಬ ಪದಕ್ಕೆ ತೀರಾ ಭಿನ್ನವಾದ ಅರ್ಥಗಳನ್ನು ಹಚ್ಚಿ ನಾವು ವೇದಾರ್ಥ ವಿವರಣೆಯಲ್ಲಿ ಎದುರಾಗುವ ಕಷ್ಟದಿಂದ ಪಾರಾಗಬಹುದು. ಸಾಯಣ ಮಾಡಿದ್ದೇ ಹೀಗೆ: ಅವನು "ಗಾಃ" ಎಂದರೆ ಗೋವೆನ್ನುತ್ತಾನೆ, ಇನ್ನೊಮ್ಮೆ ಸೂರ್ಯ ರಶ್ಮಿಗಳೆನ್ನುತ್ತಾನೆ ಮತ್ತು ಇತರೆಡೆಗಳಲ್ಲಿ ಶಹಭಾಸೆನ್ನಬಹುದಾದ ಕುಶಾಲುತನದಿಂದ ಆ ಪದದ ಮೇಲೆ ಜಲ[೧] ಎಂಬರ್ಥವನ್ನು ಹೇರುತ್ತಾನೆ. ಆದರೆ ಅಂಥ ಅರ್ಥವಿವರಣ ಪದ್ಧತಿಯು, ಲೋಕಾಭಿರಾಮ ಅರ್ಥವನ್ನು ಕೊಡುವುದೆಂಬುದರಿಂದ ಯಾ ಆಭಾಸಿಕ ವೈಚಾರಿಕತೆಗೆ ಹೊಂದುವ ಅರ್ಥವನ್ನು ನೀಡುವುದೆಂಬುದರಿಂದ ತರ್ಕ ಶುದ್ಧ ಎಂದು ಎಂದೂ ಆಗಲಾರದು. ತದ್ವಿರುದ್ಧವಾಗಿ ಆ ಪದ್ಧತಿಯು ತಾರ್ಕಿಕ ವಿಚಾರ ಪದ್ಧತಿಯನ್ನೂ ಸಾಮಾನ್ಯ ರೂಢಿಯ ಅರ್ಥ ನಿರ್ಣಯ ಪದ್ಧತಿಯನ್ನೂ ತಳ್ಳಿಹಾಕುತ್ತದೆ. ಆ ಪದ್ಧತಿಯಿಂದ ನಾವು ನಮಗಿಷ್ಟವಾದ ಯಾವ ಫಲಿತಾಂಶಕ್ಕಾದರೂ ಮುಟ್ಟಬಹುದು ಆದರೆ ವಿಚಾರ ಪರವೂ ಅಪೂರ್ವಗ್ರಹಬದ್ಧವೂ ಆದ ಮನಸ್ಸು ವೇದ ಸೂಕ್ತಗಳ ಅಂಥ ವಿವರಣೆಯ ಫಲಿತವು ಸಮರ್ಪಕ, ಸಮಾಧಾನಕರ, ಸಮಂಜಸ ಎಂದು ತೃಪ್ತಿಪಟ್ಟುಕೊಳ್ಳಲಾರದು.

ಆದರೆ ನಾವು ಅದಕ್ಕಿಂತ ಹೆಚ್ಚಿನ ಯುಕ್ತವಾದ ಪದ್ಧತಿಯನ್ನು ಹಿಡಿದರೆ ವೇದದ ಕೇವಲ ಭೌತಿಕ ಅರ್ಥಕ್ಕೆದುರಾಗಿ ದಾಟಲಾಗದಂಥ ಆತಂಕಗಳು ಬಂದು ನಿಲ್ಲುತ್ತವೆ. ಉದಾ: ವಸಿಷ್ಠನು ದಿವ್ಯಜಲವನ್ನು ಕುರಿತು "ಆಪೋದೇವೀಃ, ಆಪೋ ದಿವ್ಯಾಃ" (VII.೪೯) ಎಂದು ಹೇಳಿದ ಸೂಕ್ತದ ಎರಡನೆಯ ಋಕ್ಕಿನಲ್ಲಿ-"ದಿವ್ಯ ಜಲಗಳು, ತೋಡಿದ ಕಾಲುವೆಗಳಲ್ಲಿ ಹರಿಯುವಂಥವು-ಗಳಾಗಿರಲಿ ಯಾ ಸ್ವಯಮುದ್ಭುದ್ಧವಾದಂಥವುಗಳಾಗಿರಲಿ, ಸಾಗರೋನ್ಮುಖವಾದ, ಪವಿತ್ರಗೊಳಿಸುವ ಅವು ಮತ್ತು ಪವಿತ್ರವಾದ ಅವು ನನ್ನನ್ನು ಸಾಕಲಿ" ಎಂಬ ಅರ್ಥವನ್ನು ಸಾಯಣನು ಕೊಟ್ಟಿದ್ದಾನೆ. ಇಲ್ಲಿ ಅರ್ಥವು ಸಂಪೂರ್ಣವಾಗಿ ಸ್ಪಷ್ಟ ಎಂದು ಯಾರಾದರೂ ಹೇಳಿ ಯಾರು. ಇಲ್ಲಿ ಭೌತಿಕ ಜಲಗಳು, ಪಾರ್ಥಿವ ನದಿಗಳು, ನಾಲೆಗಳು (ತೋಡುಗಳು) ಅಥವಾ "ಖನಿತ್ರಿಮಾಃ" ಎಂದರೆ ಕೇವಲ ತೋಡಿದ ಬಾವಿಗಳು ಎಂಬರ್ಥವನ್ನಿಟ್ಟುಕೊಂಡು ವಸಿಷ್ಠನು ತನ್ನ ಸೂಕ್ತವನ್ನು "ದಿವ್ಯಾಃ" ಎಂಬ ಕಾವ್ಯಶೋಭಾಕರ ವಿಶೇಷಣದಿಂದ ಸ್ತುತ್ಯರ್ಥದಲ್ಲಿ ಸಂಬೋಧಿಸಿದ್ದಾನೆ-ಎಂದೂ ಹೇಳಬಹುದು; ಅಥವಾ ಅವನು ವರ್ಣಿಸಿದ್ದನ್ನು ಹೀಗೂ ಅರ್ಥೈಸಬಹುದು: ಸ್ವರ್ಗದ ಜಲಗಳು ಅಂದರೆ-ಮಳೆ,

೧. ಹಾಗೇ ಅವನು ಅತಿ ಪ್ರಮುಖ ವೈದಿಕ ಪದವಾದ ಋತಕ್ಕೆ ಒಮ್ಮೆ ಯಜ್ಞವೆಂದೂ ಇನ್ನೊಮ್ಮೆ ಸತ್ಯವೆಂದೂ ಮತ್ತೊಮ್ಮೆ ಜಲವೆಂದೂ ಒಂದೇ ಸೂಕ್ತದ ಐದಾರು ಋಕ್ಕುಗಳಲ್ಲಿ ಹೇಳಿಬಿಡುತ್ತಾನೆ.

ಬಾವಿಯ ನೀರು ಯಾ ನದೀ ಜಲ-ಎಂದು. ಆದರೆ ನಾವು ಇಡೀ ಸೂಕ್ತವನ್ನು ಅಭ್ಯಸಿಸಿದರೆ ಈ ಅರ್ಥವು ನಿಲ್ಲಲಾರದು. ಏಕೆಂದರೆ, ಅದು ಹೀಗೆ ಹೋಗುತ್ತದೆ:

"ಆ ದಿವ್ಯಜಲಗಳು ನನ್ನನ್ನು ಸಾಕಲಿ-ವೃಷಭ ಸ್ವರೂಪದ, ವಜ್ರಭರ್ತನಾದ ಇಂದ್ರನು ಒಡೆದು ಹೊರ ಹೊಮ್ಮಿಸಿದ ಆ ಹೆಗ್ಗಡಲು ಹರಿವ ಮಹಾಪೂರದ ನಡುವೆ ನಿಲ್ಲದೆ, ನಮ್ಮನ್ನು ಪವಿತ್ರಗೊಳಿಸಲಿ. ನಾಲೆಗಳಲ್ಲಿ ಯಾ ತೋಡಿದ ಬಾವಿಗಳಲ್ಲಿ ಹರಿವ ಅವು ಸಮುದ್ರೋನ್ಮುಖವಾದ ದಿವ್ಯಜಲಗಳು; ಅವು ನಮ್ಮನ್ನು ಪೋಷಿಸಲಿ. ಅವುಗಳ ಮಧ್ಯದಲ್ಲಿದ್ದು ವರುಣ ರಾಜನು ಜೀವಜಾತದ ಸತ್ಯಾನೃತಗಳನ್ನು ಕೀಳ್ಗಣಿಸಿ ನೋಡುತ್ತಾನೆ. ಅವುಗಳೇ ಜೇನುಹೊಳೆಗಳು, ಪವಿತ್ರವಾದವುಗಳು, ಪವಿತ್ರಗೊಳಿಸುವವುಗಳು- ಆ ದಿವ್ಯ ಜಲಗಳು ನನ್ನನ್ನು ಪೋಷಿಸಲಿ. ಯಾವ ಜಲಗಳಲ್ಲಿ ವರುಣರಾಜ, ಸೋಮ ಮತ್ತು ಎಲ್ಲ ದೇವರುಗಳೂ ಶಕ್ತಿಮದಮತ್ತರಾಗುತ್ತಾರೋ, ವೈಶ್ವಾನರಾಗ್ನಿಯು ಯಾವವುಗಳಲ್ಲಿ ಹೊಕ್ಕಿರುವನೋ ಆ ದಿವ್ಯನೀರಗಳು ನನ್ನನ್ನು ಪುಷ್ಟಿಗೊಳಿಸಲಿ (IV. ೪೯. ೧-೪)".

ಇಲ್ಲಿ ವಸಿಷ್ಠನು ವಾಮದೇವ ಸೂಕ್ತಿಸಿದ ಜಲವನ್ನೇ ಹೇಳುತ್ತಾನೆ-ಇದೇ ಜಲ ಸಮುದ್ರದಿಂದೆದ್ದು ಸಮುದ್ರದಲ್ಲಿ ಹೋಗುತ್ತವೆ; ಈ ಜಲದ ಮಧುಮಯ ಅಲೆಗಳೇ ಉಕ್ತ ಕಡಲಿನಿಂದ ಮೇಲೆದ್ದಂಥವು. ಈ ಪ್ರವಾಹವೇ ಸರ್ವಪದಾರ್ಥಗಳ ಹೃದಯ. ತಿಳಿಹೊಳಪಿನ ಹೊನಲು "ಘೃತಸ್ಯ ಧಾರಾಃ" (ಈ ಪ್ರವಾಹಗಳೇ) ಸಮುನ್ನತ, ಸರ್ವವ್ಯಾಪಿ ಪ್ರಜ್ಞೆಯ ಸತ್ತೆ ; ಇಲ್ಲೇ ವರುಣನು ಮರ್ತ್ಯರ ಸತ್ಯಾನೃತಗಳನ್ನು ಕೀಳ್ಗಳೆದು ನೋಡುತ್ತಾನೆ- ಈ ಪದ ಸಂಹತಿಯನ್ನು ಜೀಳುವ ಮಳೆಗಾಗಲಿ, ಪಾರ್ಥಿವ ಕಡಲಿಗಾಗಲಿ ಅನ್ವಯಿಸಲು ಸಾಧ್ಯವಾಗಲಾರದು. ವೇದದ ವರುಣನು ಭಾರತೀಯ ನೆಪ್‌ಚ್ಯೂನನಲ್ಲ ; ಯುರೋಪೀಯ ವಿದ್ವಾಂಸರು ಮೊದಲು ಕಂಡಂತೆ ಅವನು ಗ್ರೀಕ್ ಔರಾನೋಸನೂ ಅಲ್ಲ, ಆಕಾಶವೂ ಅಲ್ಲ. ಅವನೊಬ್ಬ ದಿವ್ಯಾಯಾಮದ ಒಡೆಯ,. ಉತ್ತರತರ ಸಮುದ್ರ, ಸತ್ತೆಯ ವಿಸ್ತಾರ ಅದರ ಪಾವಿತ್ರ್ಯ ; ಆ ಆಯಾಮದಲ್ಲಿ ತೇಜಸ್ಸತ್ಯಗಳ ದೊರೆಯಾದ ಸೂರ್ಯನು ಓಡಾಡಲನುಕೂಲವಾಗುವಂತೆ ವರುಣನು ದಾರಿ ಮಾಡಿಕೊಟ್ಟವನು - ಆ ಆಯಾಮವೇ ಪಥರಹಿತವಾದ ಅನಂತ. ಅಲ್ಲಿಂದ ಆ ವರುಣನು ಮರ್ತ್ಯ ಪ್ರಜ್ಞೆಯ ಸಂಮಿಶ್ರ ಸತ್ಯಾಸತ್ಯಗಳನ್ನು ಕೀಳ್ಗಳೆದು ನೋಡುತ್ತಾನೆ..........ಮತ್ತು ಈ ಜಲಗಳು ಇಂದ್ರನು ಅಗೆದು ತೆಗೆದು ನೆಲದ ಮೇಲೆ ಹರಿಯುವಂತೆ ಮಾಡಿದವುಗಳೆಂಬುದನ್ನೂ ನಾವು ಗಮನಿಸಬೇಕು. ಈ ವರ್ಣನೆಯನ್ನು ವೇದದ ಉದ್ದಕ್ಕೂ ಸಪ್ತ ಸಿಂಧುಗಳಿಗೆ ಅನ್ವಯಿಸಲಾಗಿದೆ.

ವಸಿಷ್ಠ ಪ್ರಾರ್ಥಿಸಿದ ಜಲದೇವತೆಗಳೇ ವಾಮದೇವ ತನ್ನ ಮಹಾಸೂಕ್ತದಲ್ಲಿ ಪ್ರಾರ್ಥಿಸಿದ ಜಲದೇವತೆಗಳೆಂಬುದರಲ್ಲಿ ಯಾವುದಾದರೂ ಸಂದೇಹವಿದ್ದರೆ, "ಮಧುಮಾನ್ ಊರ್ಮಿಃ, ಘೃತಸ್ಯಧಾರಾಃ" ಎಂಬುದನ್ನು ನೋಡಿರಿ ; ವಸಿಷ್ಠನ ಇನ್ನೊಂದು ಸೂಕ್ತವು (VII.47) ಅದನ್ನು ಸಂಪೂರ್ಣವಾಗಿ ಪರಿಹರಿಸುತ್ತದೆ. ೪೯ ನೆಯ ಸೂಕ್ತದಲ್ಲಿ ಜಲದೇವತೆಗಳನ್ನು ಸಂಕ್ಷೇಪದಲ್ಲಿ ಮಧುಧಾರೆಗಳೆಂದು ("ಮಧುಶ್ಚ್ಯುತಃ) ಹೇಳಲಾಗಿದೆ ; ಅಲ್ಲದೆ, ಆ ಜಲಗಳಲ್ಲಿ ದೇವತೆಗಳು ಶಕ್ತಿಮದವನ್ನು ಭೋಗಿಸುವರೆಂದೂ ವರ್ಣಿಸಲಾಗಿದೆ. ("ಊರ್ಜಂ[೧] ಮದಂತಿ) ; ಇದರಿಂದ

---

೧. ಊರ್ಜಂ = Sap ರಸ - p 221., Col-3, A Sanskrit English Dictionary by Sri. M.M.Williams.
ಮದ = Rapture, excitement p.777 - Ditto ಸಂತೋಷದ ಅತಿರೇಕ, ಹುಚ್ಚು ಹೊನಲು - ಅನುವಾದಕ

ಮಧುವೆಂದರೆ, ಜೇನು ಮತ್ತು ಸೋಮವೆಂದರೆ ಆನಂದವೆಂಬ ಮದ್ಯ - ಇವುಗಳಿಂದ, ದೇವತೆಗಳು ಮೈಮರೆಯಿಸುವ ತೃಪ್ತಿಯನ್ನು ಹೊಂದುತ್ತಾರೆ- ಎಂದು ಗ್ರಹಿಸಬಹುದು. ಆದರೆ ೪೭ ನೆಯ ಸೂಕ್ತದಲ್ಲಿ ತನ್ನ ಸೂಕ್ತವನ್ನು ಇನ್ನಷ್ಟು ವಿಶದಪಡಿಸುತ್ತಾನೆ.

"ಎಲೈ ಜಲದೇವತೆಗಳೇ (ಜಲಗಳೇ, ಜಲವೇ) ನಿಮ್ಮ ಪರಮೋಚ್ಚ ವೀಚಿಗಳು ಇಂದ್ರನ ಪೇಯ. ದೇವತ್ವಾಕಾಂಕ್ಷಿಗಳು ಅವನ್ನು ತಮಗಾಗಿ ತಯಾರಿಸಿದ್ದಾರೆ. ನಿಮ್ಮ ಪವಿತ್ರವೂ ಸತತ ಧಾರಾವಾಹಿಯೂ ಆದ ಮತ್ತು ಅಕಶ್ಮಲತೆಯನ್ನು ಹರಿಯಿಸುವ ಹಾಗೂ ಅತ್ಯಂತ ಮಧುಮಯವಾದ ("ಘೃತಪ್ರುಷಂ ಮಧುಮಂತಂ")[೧] ತರಂಗವನ್ನು ಇಂದು ನಾವು ಭೋಗಿಸುವಂತಾಗಲಿ ; ಇಂದ್ರನು ವಸುಗಳೊಡನೆ ಅತಿ ತೃಪ್ತಿಯಿಂದ ಸೊಕ್ಕಲು ಕಾರಣವಾದ ನಿಮ್ಮ ಆ ಅಲೆಯಲ್ಲಿ ನಾವಿಂದು ದೇವತ್ವದ ರುಚಿಯನ್ನು ಸವಿಯುವಂತಾಗಲಿ. ನೂರು ಶೋಧಕ ಪಾತ್ರೆಗಳಲ್ಲಿ ಶೋಧಿಸಲ್ಪಟ್ಟ, ತಮ್ಮ ಸ್ವಭಾವತಃ ಅತಿ ತೃಪ್ತಿಯನ್ನು ಹೊಳೆ ಹರಿಸುವ ನಿಮ್ಮ ಅಲೆಗಳು ದಿವ್ಯ ಮತ್ತು (ಅತ್ಯುನ್ನತ ಸಾಗರ ಸ್ವರೂಪದ) ದೇವತಾ ಸಂಚಾರದ ಧ್ಯೇಯದತ್ತ ಹೊರಳುವಂಥವುಗಳು ; ಅವು ಇಂದ್ರನ ಕಾರ್ಯಗಳನ್ನು ಪರಿಮಿತಗೊಳಿಸವು ; ನದಿಗಳಿಗೆ ನಿಷ್ಕಲ್ಮಷತ್ವದ ಅನ್ನಾಹುತಿಯನ್ನು ಅವು ಹಾಕುತ್ತವೆ. ಸೂರ್ಯನು ತನ್ನ ಕಿರಣಗಳಿಂದ ರೂಪಿಸಿದ ನದಿಗಳು ಅವು ; ಇಂದ್ರನು ಅವುಗಳಿಂದ ಚಲದ್ವೀಚಿಯೊಂದನ್ನು ಅಗೆದು ತೆಗೆದನು. ಅಂಥ ನದಿಗಳು ನಮಗಾಗಿ ಎಲ್ಲಕ್ಕಿಂತಲೂ ಹೆಚ್ಚಿನ ಒಳಿತನ್ನು ಸಂಸ್ಥಾಪಿಸಿ ಕೊಡಲಿ. ಓ ದೇವರುಗಳೇ ನೀವು ಸೌಖ್ಯದ ಸ್ಥಿತಿಗಳನ್ನಿತ್ತು ನಮ್ಮನ್ನು ರಕ್ಷಿಸಿರಿ (VII.47. 1-4)

ಇಲ್ಲಿ ನಮಗೆ ವಾಮದೇವನ "ಮಧುಮಾನ್ ಊರ್ಮಿಃ" ಸಿಹಿಯಾದ ಮಾದಕ ಅಲೆ ಸಿಕ್ಕುತ್ತದೆ. ಈ ಮಾಧುರ್ಯವು ಈ ಜೇನು, ಸೋಮರಸ - ಇದು ಇಂದ್ರಪೇಯ ಎಂದು ಸರಳವಾಗಿ ಹೇಳಲಾಗಿದೆ. "ಶತ ಪವಿತ್ರಾಃ" ಎಂದು ವೈದಿಕ ಭಾಷೆಯಲ್ಲಿ ಸೋಮಕ್ಕೆ ಮಾತ್ರ ಅನ್ವಯಿಸುವ ವಿಶೇಷಣ ಪದದಿಂದ ಅದನ್ನು ಮತ್ತಷ್ಟು ಸ್ಪಷ್ಟಪಡಿಸಲಾಗಿದೆ ; ಅದು ನದಿಗಳ ವಿಶೇಷಣ, ಅವುಗಳಿಂದ ಹರಿವ ಅಲೆಯನ್ನು ಇಂದ್ರನು ತಂದದ್ದು, ವೃತ್ರನನ್ನು ಕೊಂದ ವಜ್ರಾಯುಧವು ಗಿರಿಗಳಿಂದ ಅದರ ಮಾರ್ಗವನ್ನು ಅಗೆದು ಮಾಡಿದ್ದು ಎಂಬುದನ್ನು ನಾವು ಗಮನಿಸಬೇಕು. ಈ ಜಲವನ್ನು ಏಳು ನದಿಗಳೆಂದೂ ಈ ನದಿಗಳನ್ನು ಹಿಡಿದು ಅಡಗಿಸಿಟ್ಟುಕೊಂಡಿದ್ದ ವೃತ್ರನ ಹಿಡಿತದಿಂದ ಇಂದ್ರನು ಬಿಡಿಸಿಕೊಂಡು ತಂದಂಥವುಗಳೆಂದೂ ಹಾಗೆ ಬಿಡಿಸಿಕೊಂಡು ಬಂದು ಭೂಮಿಯ ಮೇಲೆ ಕೆಳಗಿಳಿದು ಹರಿಯುವಂತೆ ಮಾಡಲ್ಪಟ್ಟವುಗಳೆಂದೂ ಮತ್ತೆ ಸ್ಪಷ್ಟಪಡಿಸಲಾಗಿದೆ.

ಸೋಮಮದ್ಯದಿಂದ, ಘೃತದಿಂದ, ಊರ್ಜ[೨]ವೆಂಬ ಕಾರ್ಯಕರ ಶಕ್ತಿಯಿಂದ ತುಂಬಿ ತುಳುಕುವ ಈ ನದಿಗಳು ಎಂಥವುಗಳಾಗಿರಬಹುದು? ದೇವತೆಗಳ ಚಲನವಲನಗಳ ಗುರಿಯತ್ತ ಹರಿಯುವ ಮತ್ತು ಹಾಗೆ ಹರಿದು ಮಾನವನಿಗಾಗಿ ಸರ್ವೋತ್ತಮ ಒಳಿತನ್ನು (ಯೋಗಕ್ಷೇಮವನ್ನು, ಲಾಭವನ್ನು) ದೊರಕಿಸಿಕೊಡುವ ನದಿಗಳಾವುವು? ಅವೆಂದೂ ಪಂಜಾಬಿನ ನದಿಗಳಾಗಿರಲಾರವು ; ಈ ಮಾತುಗಳಿಗೆ ಎಂಥ ಯದ್ವಾತದ್ವಾ ರೂಪದಿಂದ ಗ್ರಹಿಸಿಕೊಂಡ ಬರ್ಬರ ಗೊಂದಲಗೇಡಿತನ

---

೧. ಘೃತವತ್ = of clarity - ಅನುವಾದಕ

೨. ಊರ್ಜಂ = ಊರ್ಜ್ = ಸಸ್ಯಗತರಸ, (ಸಸ್ಯರಕ್ತ)

p.221, Col. 3, Askt. Eng. Dict. of M.M.Williams. - ಅನುವಾದಕ

ಅಥವಾ ಹುಚ್ಚು ಅಸಮನ್ವಿತತೆ ವೇದ ಋಷಿಗಳ ಮನೋಧರ್ಮದಲ್ಲಿ ಇತ್ತೆಂದು ನಾವು ಊಹಿಸಿಕೊಂಡರೂ ಇಂಥ ಉಕ್ತಿಗಳಿಗೆ ಅಂಥ ಅರ್ಥವಿವರಣೆಯನ್ನು ಕೊಡಲು ಸಾಧ್ಯವಿಲ್ಲ. ಸ್ಪಷ್ಟವಾಗಿ ಇವು ಪರಮಸತ್ಯದ ಮತ್ತು ಪರಮಾನಂದದ ಜಲಗಳು ; ಇವು ಸರ್ವೋನ್ನತ ಸಾಗರದಿಂದ ಹರಿದು ಬಂದಂಥವು. ಈ ನದಿಗಳೂ ನೆಲದ ಮೇಲೆ ಹರಿಯವು, ಇವು ಹರಿಯುವುದು ಸ್ವರ್ಗದಲ್ಲಿ. ಇವುಗಳನ್ನು ಬಲಾತ್ಕಾರದಿಂದ ವಶಪಡಿಸಿಕೊಂಡು ಅಡಗಿಸಿಟ್ಟಿರುವವನು ವೃತ್ರನು. ಮರ್ತ್ಯರಾದ ನಾವು ಜೀವಿಸಿರುವ ಭೂಪ್ರಜ್ಞೆ(ಅನ್ನಮಯಪ್ರಜ್ಞೆ)ಯ ಮೇಲೆ ಇವು ಹರಿದು ಬರಬಾರದೆಂಬುದೇ ಅವನ ಉದ್ದೇಶ. ಮನೋದೇವತೆಯಾದ ಇಂದ್ರನು ಆ ಪ್ರಚ್ಛಾದಕನಾದ ವೃತ್ರನನ್ನು ತನ್ನ ಹೊಳೆ ಹೊಳೆವ ಮಿಂಚುಗಳಿಂದ (ವಿದ್ಯುಚ್ಚಕ್ರಗಳಿಂದ) ಹೊಡೆದು ಈ ಭೂಪ್ರಜ್ಞೆಯ ಗಿರಿಶೃಂಗದಲ್ಲಿ ಹಾದಿಯೊಂದನ್ನು ಮಾಡಿ ಇವು ಕೆಳಗಿಳಿದು ಹರಿದುಬರಲು ಅನುಕೂಲ ಮಾಡಿಕೊಡುತ್ತಾನೆ. ವೇದಋಷಿಗಳ ವಿಚಾರ ಮತ್ತು ಭಾಷೆಗಳಿಗೆ ಇಂಥದೊಂದೇ ತರ್ಕಶುದ್ಧವಾದ, ಸಮನ್ವಿತ ಮತ್ತು ಅರ್ಥವತ್ತಾದ ವಿವರಣೆಯಾಗಿದೆ. ಮಿಕ್ಕವುಗಳನ್ನು ವಸಿಷ್ಠನು ನಮಗೆ ಸಾಕಷ್ಟು ಸ್ಪಷ್ಟವಾಗಿ ತಿಳಿಸುತ್ತಾನೆ : ಈ ಜಲಗಳು ಸೂರ್ಯನು ತನ್ನ ರಶ್ಮಿಗಳಿಂದ ಮಾಡಿದಂಥವುಗಳು ; ಭೂಸಂಚಾರಕ್ಕೆ ಭಿನ್ನವಾಗಿರುವ ಇವು ಅತ್ಯುನ್ನತ ಮಾನಸ ದೇವತೆಯಾದ ಇಂದ್ರನ ಕಾರ್ಯಗಳನ್ನು ಮಿತಗೊಳಿಸುವುದೂ ಇಲ್ಲ, ಕಡಿಮೆ ಮಾಡುವುದೂ ಇಲ್ಲ. ಇವು ಇನ್ನೊಂದು ವಿಧವಾಗಿ ಹೇಳಬೇಕೆಂದರೆ, ಬೃಹತ್ಸತ್ಯದ (ಬೃಹದೃತದ) ಜಲಗಳು - ನಾವು ಯಾವಾಗಲೂ ಕಂಡಂತೆ, ಈ ಸತ್ಯವು ಆನಂದವನ್ನು ನಿರ್ಮಿಸುತ್ತದೆ. ಬೇರೆ ಸೂಕ್ತಗಳಲ್ಲಿ ಇವನ್ನು "ಋತಸ್ಯಧಾರಾ": - ಸತ್ಯಜಲಗಳೆಂದು ಸರಳವಾಗಿ ಕರೆಯಲಾಗಿದೆ (ಉದಾ- (V. 12.2.) "ಓ ಸತ್ಯ ದ್ರಷ್ಟಾರನೇ, ಸತ್ಯವನ್ನು ಮಾತ್ರ ನೋಡು, ಸತ್ಯದ ಬಹಳ ಧಾರೆಗಳನ್ನು ತೋಡಿ ತೆಗೆ) : ಪರಮಸುಖವನ್ನು ಮಾನವರಿಗಾಗಿ ಸಂಸ್ಥಾಪಿಸು ; ಮತ್ತು ಪರಮಸುಖವೇ ಒಳಿತು,[೧] ದಿವ್ಯ ಜೀವನದ ಆನಂದ.

ಈಗಲೂ ಈ ಸೂಕ್ತಗಳಲ್ಲೂ ಅಥವಾ ವಾಮದೇವನ ಸೂಕ್ತಗಳಲ್ಲೂ ಸಪ್ತಸಿಂಧುಗಳ ಸ್ಪಷ್ಟೋಕ್ತಿಯಿಲ್ಲ. ಆದುದರಿಂದ ನಾವೀಗ ವಿಶ್ವಾಮಿತ್ರನು ಅಗ್ನಿಯನ್ನು ಕುರಿತು ಬರೆದ (III.1) ಸೂಕ್ತದ ೨ ನೆಯ ಋಕ್ಕಿನಿಂದ ೧೪ ನೆಯ ಋಕ್ಕಿನವರೆಗೆ ತಿರುಗೋಣ. ಅದೊಂದು ಉದ್ದವಾದ ಅವತರಣಿಕೆ ; ಆದರೆ ಅದು ಸಾಕಷ್ಟು ಮುಖ್ಯವೂ ಉದಾಹರಣೀಯವೂ ಪೂರ್ಣವಾಗಿ ಭಾಷಾಂತರಣೀಯವೂ ಆಗಿದೆ.

ಪ್ರಾಂಚಾಂ ಯಜ್ಞಂ ಚಕೃಮ ವರ್ಧತಾಂ ಗೀಃ
ಸಮಿದ್ಭಿರ್ ಅಗ್ನಿಂ ನಮಸಾ ದುವಸ್ಯನ್ ।
ದಿವಃಶಶಾಸುರ್ ವಿದಥಾ ಕವೀನಾಂ
ಗೃತ್ಸಾಯ ಚಿತ್ ತವಸೇ ಗಾತುಂ ಈಷುಃ ॥ (೨)

ಮಯೋ ದಧೇ ಮೇಧಿರಃ ಪೂತದಕ್ಷೋ
ದಿವಃ ಸುಬಂಧುರ್ ಜನುಷಾ ಪೃಥಿವ್ಯಾಃ ।
ಅವಿಂದನ್ ನು ದರ್ಶತಂ ಅಪ್ಸ್ವಂತರ್
ದೇವಾ ಸೋ ಅಗ್ನಿಂ ಅಪಸಿ ಸ್ವಸೃಣಾಂ ॥ (೩)

---

೧. ಈ ಶಬ್ದವನ್ನು ನಿಜವಾಗಿ (ಒಳಿತನ್ನು) ಪರಮಸುಖವೆಂದೇ ಅರ್ಥೈಸಲಾಗುತ್ತದೆ.

ಅವರ್ಧಯಂತ ಸುಭಗಂ ಸಪ್ತಯಹ್ವೀ :
ಶ್ವೇತಂ ಜಜ್ಞಾನಂ ಅರುಷಂ ಮಹಿತ್ವಾ ।
ಶಿಶುಂ ನ ಜಾತಂ ಅಭ್ಯಾರುರ್ ಅಶ್ವಾ
ದೇವಾಸೋ ಅಗ್ನಿಂ ಜನಿಮನ್ ವಪುಷ್ಯನ್ ॥ (೪)

ಶುಕ್ರೇಭಿರ್ ಅಂಗೈ ರಜ ಆತತನ್ವಾನ್
ಕ್ರತುಂ ಪುನಾನಃ ಕವಿಭಿಃ ಪವಿತ್ರೈಃ ।
ಶೋಚಿರ್ ವಸಾನಃ ಪರಿ ಆಯುರಪಾಂ
ಶ್ರಿಯೋ ಮಿಮೀತೇ ಬೃಹತೀರನೂನಾಃ ॥ (೫)

ವವ್ರಾಜ ಸೀಂ ಅನದತೀರದಬ್ಧಾ :
ದಿವೋಯಹ್ವೀರ್ ಅವಸಾನಾ ಅನಗ್ನಾಃ ।
ಶನಾ ಅತ್ರ ಯುವತಯಃ ಸಯೋನೀರ್
ಏಕಂ ಗರ್ಭಂ ದಧಿರೇ ಸಪ್ತವಾಣೀಃ ॥ (೬)

ಸ್ತೀರ್ಣಾ ಅಸ್ಯ ಸಂಹತೋ ವಿಶ್ವರೂಪಾ
ಘೃತಸ್ಯ ಯೋನೌ ಸ್ರವಥೇ ಮಧೂನಾಂ ।
ಅಸ್ಥುರ್ ಅತ್ರ ಧೇನವಃ ಪಿನ್ವಮಾನಾ
ಮಹೀ ದಸ್ಮಸ್ಯ ಮಾತರಾ ಸಮೀಚೀ ॥ (೭)

ಬಭ್ರಾಣಃ ಸೂನೋ ಸಹಸೋ ವ್ಯದ್ಯೌದ್
ದಧಾನಃ ಶುಕ್ರಾ ರಭಸಾ ವಪೂಂಷಿ ।
ಶ್ಚೋತಂತಿ ಧಾರಾ ಮಧುನೋ ಘೃತಸ್ಯ
ವೃಷಾ ಯತ್ರ ವಾವೃಧೇ ಕಾವ್ಯೇನ ॥ (೮)

ಪಿತುಶ್ ಚಿದ್ ಊಧರ್ ಜನುಷಾ ವಿವೇದ
ವ್ಯಸ್ಯ ಧಾರಾ ಅಸೃಜದ್ ವಿ ಧೇನಾಃ ।
ಗುಹಾ ಚರಂತಂ ಸಖಿಭಿಃ ಶಿವೇಭಿರ್
ದಿವೋ ಯಹ್ವೀಭಿರ್ ನ ಗುಹಾ ಬಭೂವ ॥ (೯)

ಪಿತುಶ್ಚ ಗರ್ಭಂ ಜನಿತುಶ್ಚ ಬಭ್ರೇ
ಪೂರ್ವೀರ್ ಏಕೋ ಅಧಯತ್ ಪೀಪ್ಯಾನಾಃ ।
ವೃಷ್ಣೇ ಸಪತ್ನೀ ಶುಚಯೇ ಸಬಂಧೂ
ಉಭೇ ಅಸ್ಮೈ ಮನುಷ್ಯೇ ನಿಪಾಹಿ ॥ (೧೦)

ಉರೌ ಮಹಾನ್ ಅನಿಬಾಧೇ ವವರ್ಧ
ಆಪೋ ಅಗ್ನಿಂ ಯಶಸಃ ಸಂ ಹಿ ಪೂರ್ವೀಃ ।
ಋತಸ್ಯ ಯೋನಾವಶಯದ್ ದಮೂನಾ
ಜಾಮೀನಾಂ ಅಗ್ನಿರ್ ಅಪಸಿ ಸ್ವಸೄಣಾಂ ॥ (೧೧)

ಅಕ್ರೋ ನ ಬಭ್ರಿಃ ಸಮಿಥೇ ಮಹೀನಾಂ
ದಿದೃಕ್ಷೇಯಃ ಸೂನವೇ ಭಾಋಜೀಕಃ ।

ಉದ್ ಉಸ್ರಿಯಾ ಜನಿತಾ ಯೋ ಜಜಾನ
ಅಪಾಂ ಗರ್ಭೋ ನೃತಮೋ ಯಹ್ವೋ ಅಗ್ನಿಃ ॥ (೧೨)

ಅಪಾಂ ಗರ್ಭಂ ದರ್ಶತಂ ಓಷಧೀನಾಂ
ವನಾ ಜಜಾನ ಸುಭಗಾ ವಿರೂಪಾಂ ।
ದೇವಾಸಸ್ ಚಿನ್ ಮನಸಾ ಸಂ ಹಿ ಜಗ್ಮುಃ
ಪನಿಷ್ಠಾಂ ಜಾತಂ ತವಸಂ ದುವಸ್ಯಂ ॥ (೧೩)

ಬೃಹಂತ ಇದ್ ಭಾನವೋ ಭಾರ್ಜೀಕಂ
ಅಗ್ನಿಂಸಚಂತ ವಿದ್ಯುತೋ ನ ಶುಕ್ರಾಃ ।
ಗುಹೇವ ವೃದ್ಧಂ ಸದಸಿ ಸ್ವೇ ಅಂತರ್
ಅಪಾರ ಊರ್ವೇ ಅಮೃತಂ ದುಹಾನಾಃ ॥ (೧೪)

"ನಾವು ಯಜ್ಞವು ಪರಮಪದದತ್ತ ಏರುವಂತೆ ಮಾಡಿದೆವು ; ಪದವು (ಮಂತ್ರವು) ಹೆಚ್ಚಾಗಲಿ. ಅಗ್ನಿಯ ಬೆಂಕಿಯಿಂದ ಎಚ್ಚಿಸಿದ ಉರಿಗಳೊಡನೆ ಸಮರ್ಪಣ ಭಾವದ ನಮನದಿಂದ ಅವನನ್ನು ಆ ಉರಿಗಳು ಕೆಲಸ ಮಾಡುವ ಹಾಗೆ ಪ್ರಚೋದಿಸಿದವು. ಋಷಿಗಳ ತಿಳಿವಳಿಕೆಗಳಿಗೆ ಸ್ವರ್ಗದಲ್ಲಿ ಅವು ಅಭಿವ್ಯಕ್ತಿಯನ್ನು ಕೊಟ್ಟವು. ಅವು ಅವನಿಗೆ ತನ್ನ ಪದವನ್ನು ತಲುಪಲು ಬೇಕಾದ ದಾರಿಯನ್ನು ಅವನ ಶಕ್ತಿಯಿಂದಲೇ ಮಾಡಿಕೊಡಬೇಕೆಂದು ಬಯಸುತ್ತವೆ.- (೨)

"ಮೇಧಾಮಯನಾಗಿ, ಶುದ್ಧವಾದ ಸೂಕ್ಷ್ಮದರ್ಶನ ಶಕ್ತಿಯಿಂದ ಕೂಡಿ, ಪೂರ್ಣಸ್ನೇಹಿತನೂ (ಅಥವಾ ನಿರ್ಮಾಪಕನೂ) ಆದ ಅಗ್ನಿಯು ಸ್ವರ್ಗಮರ್ತ್ಯ (ದ್ಯಾವಾಪೃಥಿವೀ)ಗಳ ಮೂಲಕ ಪಡೆದ ಜನ್ಮದಿಂದ ಆನಂದವನ್ನು ಸಂಸ್ಥಾಪಿಸುತ್ತಾನೆ, ದೃಢವಾಗಿ ನೆಲೆಯೂರಿಸುತ್ತಾನೆ. ದೇವತೆಗಳು - ನೀರಲ್ಲಿ, ಸೋದರಿಯರ ಕಾರ್ಯಗಳಲ್ಲಿ, ಅಗ್ನಿಯನ್ನು ಕಂಡರು - (೩)

"ಆ ಏಳು ಮಹಾಬಲಿಷ್ಠೆಯರು ಅವನನ್ನು ಬೆಳೆಯಿಸಿದರು ; ಅವನೋ ಪರಿಪೂರ್ಣ ಪರಮಸುಖಭೋಗಿ : ಹುಟ್ಟುವಾಗ ಅವನು ಬಿಳಿಯ, ಬೆಳೆದ ಮೇಲೆ ಕೆಂಗಳೆಯವನಾದನು. ಅವರು ಅವನ ಬೆನ್ನು ಹತ್ತಿ ಹೋದರು. ಅವನಿಗಾಗಿ ದುಡಿದರು; ಹೊಸ ಹುಟ್ಟಿನ ಅಗ್ನಿ ಶಿಶುವಿಗೆ ಅವರು ಹೆಣ್‌ಗುದುರೆಗಳಾದರು. ದೇವತೆಗಳು ಅಗ್ನಿ ಜನಿಸುವಾಗ ಆತನಿಗೆ ಶರೀರವನ್ನು ಕೊಟ್ಟರು. - (೪)

"ಅವನು ತನ್ನ ಶುದ್ಧ, ಪ್ರಕಾಶಮಾನ, ಕೈಕಾಲುಗಳಿಂದ ಬೆಳೆಯುತ್ತಾ ಹೋಗಿ ಅಂತರಿಕ್ಷವನ್ನು ರೂಪಿಸಿದನು. ದಿವ್ಯ ವಿವೇಕದ ಪವಿತ್ರ ಒಡೆಯರ ಸಹಾಯದಿಂದ ಅವನು ಕರ್ಮೋನ್ಮುಖ ಸಂಕಲ್ಪ ಶಕ್ತಿಯನ್ನು ಸೋಸಿದನು. ಬೆಳಕಿನುಡುಪನ್ನು ಧರಿಸಿದ ಅವನು ಜಲಗಳ ಎಲ್ಲ ಜೀವಜಾತದ ಸುತ್ತಲೂ ತನ್ನಲ್ಲೇ ತನ್ನ ವೈಭವವನ್ನು ಅನ್ಯೂನವಾಗಿ ರೂಪಿಸಿಕೊಂಡನು. -(೫)

"ಸ್ವರ್ಗೀಯರಾದ ಆ ಮಹಾ ಬಲಿಷ್ಠ ಸಪ್ತ ಪದ ದೇವತೆಗಳು ಎಲ್ಲೆಲ್ಲೂ ಚಲಿಸಿದರು ; ಅವರು ಭಕ್ಷಿಸಲಿಲ್ಲ. -ಅವರು ಸವಸ್ತ್ರರೂ ಆಗಿರಲಿಲ್ಲ, ನಿರ್ವಸ್ತ್ರರೂ ಆಗಿರಲಿಲ್ಲ. ಆ ಸಾರ್ವಕಾಲಿಕ ಜವ್ವನೆಯರಾದ ದೇವತೆಗಳು ಒಂದೇ ಗರ್ಭದಲ್ಲಿ ಒಂದು ಮಗುವನ್ನು ಧರಿಸಿದರು. - (೬)

"ವಿಶ್ವರೂಪಗಳಲ್ಲಿ ಅವನ ಆಕೃತಿಗಳು, ಸ್ಪಷ್ಟತೆಯ ಗರ್ಭದಲ್ಲಿ, ಮಾಧುರ್ಯಗಳ ಪ್ರವಾಹಗಳಲ್ಲಿ ಹರಡಿಹೋದವು ; ಇಲ್ಲಿ ಸಾಕು ಹೊಳೆಗಳು ತಮ್ಮನ್ನು ತಾವೇ ಹೊರೆದುಕೊಂಡವು ; ಸಾಧಿಸಲೆದ್ದ

ದೇವತೆಯ ಇಬ್ಬರು ತಾಯಂದಿರು ಸಮಶ್ರುತಿಯಿಂದ (ಗಡಿಮಿತಿಯಿಲ್ಲದ) ವೈಶಾಲ್ಯವಾದರು.- (೭)

"ಅವರಿಂದ ಹುಟ್ಟಿದ ಓ ಬಲ ರಭಸ ಪುತ್ರನೇ, ನಿನ್ನ ಆನಂದಾವೇಶದ ಶುಭ್ರ ಶರೀರಗಳಿಂದ ನೀನು ಭುಗ್ಗೆಂದು ಉರಿದೆ. ಮಧುರ ರಸವಾಹಿನಿಗಳು ಹೊರ ಹೊಮ್ಮುತ್ತಿವೆ - ಅಲ್ಲಿಯೇ ಸಂಪದ್‌ಬಾಹುಳ್ಯದ ವೃಷಭನು ತನ್ನ ದಿವ್ಯ ವಿವೇಕದಿಂದ ಬೆಳೆದು ನಿಂತಿದ್ದಾನೆ - (೮)

"ಹುಟ್ಟುವಾಗಲೇ ಅವನು ತಂದೆಯ ಸಂಪದ್‌ಬಾಹುಳ್ಯದ ಮೂಲವನ್ನು ಹುಡುಕಿ ತೆಗೆದನು ; ಮತ್ತು ಅವನು ತನ್ನ ಧಾರೆಗಳನ್ನೂ ವಾಹಿನಿಗಳನ್ನೂ ಸಡಿಲಿಸಿ ವಿಶಾಲವಾಗಿ ಹರಿಬಿಟ್ಟನು. ತನ್ನ ನೆರವಿಗೆ ಜೊತೆಗಾರರಿಂದ ಮತ್ತು ಸ್ವರ್ಗೀಯ ಬಲಿಷ್ಠ ಪದಗಳಿಂದ ಅಸ್ತಿತ್ವದ ಗುಪ್ತ ಸ್ಥಳಗಳೆಲ್ಲವುಗಳಲ್ಲಿಯೂ ಸಂಚರಿಸುವುದನ್ನವನು ನೋಡಿದನು; ಆದರೂ ಅವನು ಅವರ ಗೌಪ್ಯದಲ್ಲಿ ಕಳೆದು ಹೋಗಲಿಲ್ಲ. (೯)

"ತಂದೆಯ ಮಗುವನ್ನವನು ಹೊತ್ತನು, ತನ್ನ ಹಡೆದಾತನ ಮಗುವನ್ನು ಹೊತ್ತನು. ಬೆಳೆಯುತ್ತಿದ್ದ ತನ್ನ ಬಹುಮಾತೃಗಳಿಂದ ಅವನು (ಹಾಲನ್ನು) ಉಂಡನು. ಈ ಶುದ್ಧ ಗಂಡಿನಲ್ಲಿ ಮಾನವನಲ್ಲಿಯ ಭೂಮಿ ಸ್ವರ್ಗ ಶಕ್ತಿಗಳೆರಡೂ ತಮ್ಮ ಉಭಯಸಮಾನನಾದ ಒಡೆಯನನ್ನೂ ಪ್ರೇಮಿಯನ್ನೂ ಉಳ್ಳವರಾದರು ; ಅವರಿಬ್ಬರನ್ನೂ ನೀನು ರಕ್ಷಿಸು. (೧೦)

"ಅವನು ಅವಿಚ್ಛಿನ್ನತವಾದ ನಿರತಿಶಯ ವೈಶಾಲ್ಯದಲ್ಲಿ ಮಹಾತ್ಮನಾಗಿ ವಿಜೃಂಭಿಸಿದನು ; ಹೌದು ನೋಡಿರಿ - ಬಹುಜಲಗಳು ಜಯಪ್ರದವಾಗಿ ಅಗ್ನಿಯನ್ನು ಅಭಿವರ್ಧಿಸಿದವು. ಪರಮಸತ್ಯದ ಮೂಲದಲ್ಲಿ ಅವನು ಮಲಗಿದನು. ಅಲ್ಲೇ ಅವನು ಮನೆ ಮಾಡಿಕೊಂಡನು - ಆ ಅವಿಭಕ್ತ ಸೋದರಿಯರ ಆ ಕಾರ್ಯಸ್ಥಲದಲ್ಲಿ ನೆಲೆಸಿದನು - (೧೧)

"ದ್ರಷ್ಟನೂ ಬಲಿಷ್ಠನೂ ಜಲದೇವತಾಪುತ್ರನೂ ಪ್ರಸೃತಕಿರಣಗಳ ತಂದೆಯೂ ಆದ ಅಗ್ನಿಯು ಸರ್ವಾಂತಶ್ಚರ, ಸರ್ವಸ್ಥಿತಿ ಭಾರವಹ, ಮಹಾಪದ ಸಂಗಮಸ್ಥ, ದಿವ್ಯದರ್ಶನಾಕಾಂಕ್ಷಿ ;ಸೋಮರಸ ಹಿಂಡುವವನಿಗೆ ಸ್ವಭಾಸಗಳಿಂದ ನೇರವಾಗಿ ಎದುರು ನಿಲ್ಲುವ ಆತನು ಅವರಿಗೆ ಈಗ ಅವರ ಉಚ್ಚತರ ಹುಟ್ಟನ್ನು ಕೊಟ್ಟನು - (೧೨)

"ಪರಿಪೂರ್ಣ ಪರಮಸುಖಮಯಿಯಾದ ದಿವ್ಯ ಸಂತೋಷದ ಅಧಿಷ್ಠಾನ ದೇವಿಯು ಜಲಗಳ ದೃಶ್ಯ ಜನನಕ್ಕೂ ಭೂಮ್ಯಭಿವೃದ್ಧಿಗೂ ಅನೇಕ ರೂಪಗಳಲ್ಲಿ ಕಾರಣಳಾದಳು. ದಿವ್ಯ ಮನಸ್ಸಿನಲ್ಲಿ ಆ ಜಲಗಳ ದೇವತೆಗಳೆಲ್ಲಾ ಒಟ್ಟಾದರು ಮತ್ತು ಕಷ್ಟ ಕೃಷಿಗಾಗಿ ಬಲಿಷ್ಠನಾಗಿಯೇ ಹುಟ್ಟಿದ ಆ ಮಹಾಬಲನನ್ನು ಅವನಿಗೆ ಮೀಸಲಾಗಿದ್ದ ಕೆಲಸದಲ್ಲಿ ನಿಯೋಜಿಸಿದರು. - (೧೩)

"ಆ ವಿಸ್ತಾರವಾದ ಪ್ರಕಾಶ ಧಾರೆಗಳು ಅಗ್ನಿಗಾಗಿ ತೋಡಿ ಹೊರದೆಗೆದಂಥವುಗಳು. ಅವು ಅವನ ತೇಜಸ್ಸಿನಲ್ಲೇ ಇವೆ ; ಅವು ಹೊಳೆವ ಮಿಂಚುಗಳಂತಿವೆ. ತೀರವಿಲ್ಲದ ಆ ಹೆಬ್ಬರಹಿನಲ್ಲಿ ಅವನ ಆಸನದಲ್ಲಿಯೇ ಇರುವ ಸತ್ತೆಯ ಗುಹ್ಯ ಸ್ಥಾನಗಳಲ್ಲಿ ಹೆಚ್ಚುತ್ತಿರುವ ಆ ಪ್ರಕಾಶದ ಚಿಲುಮೆಗಳನ್ನು ತೋಡಿ ತೆಗೆದದ್ದು. ಅವರು ಆ ನಿಸ್ತೀರ ಮಹಾಯಾಮದಿಂದಲೇ ಅಮೃತತ್ವವನ್ನು (ಹಾಲಿನಂತೆ) ಕರೆದದ್ದು - (೧೪).

ಈ ಉದ್ಧೃತ ಸೂಕ್ತಪಾಠಗಳ ಅರ್ಥವು ಏನೇ ಆಗಿರಲಿ, ಆದರೆ ಇದರಲ್ಲಿ ಯೌಗಿಕ ಸೂಚ್ಯಾರ್ಥವಿದೆ ಎಂಬುದಂತೂ ಅತ್ಯಂತ ಸ್ಪಷ್ಟ ; ಇದೆಂದೂ ಬರೀ ಕರ್ಮಕಾಂಡೀಯ ಬರ್ಬರರ

ಯಾಜ್ಞಿಕ ಸೂಕ್ತ ಎಂಬುದಂತೂ ಅಲ್ಲವೇ ಅಲ್ಲ. ಏಳು ದಿನಗಳು, ಜಲವಾಹಿನಿಗಳು, ಏಳು ಸೋದರಿಯರು - ಎಂಬಿವು ಎಂದೆಂದೂ ಪಂಜಾಬಿನ ಏಳು ನದಿಗಳಲ್ಲವೇ ಅಲ್ಲ. ದೇವತೆಗಳು ಪ್ರತ್ಯಕ್ಷ ಅಗ್ನಿಯನ್ನು ಹುಡುಕಿ ತೆಗೆದದ್ದಂತೂ (ಭೌತಿಕ) ಪ್ರಾಪಂಚಿಕವಾದ ನದಿಗಳಿಂದಲ್ಲವೇ ಅಲ್ಲ. ಜ್ಞಾನದಿಂದ ಅತಿಶಯಿಸುವ ಈ ಅಗ್ನಿಯು ಪರಮ ಸತ್ಯದಲ್ಲಿ ಮನೆ ಮಾಡಿಕೊಳ್ಳುವುದು ವಿಶ್ರಾಂತಿ ತೆಗೆದುಕೊಳ್ಳುವುದೂ ಇವನಿಗೆ ಸ್ವರ್ಗ-ಭೂಮಿಗಳು ಹೆಂಡತಿಯರೂ ಪ್ರೇಯಸಿಯರೂ ಆಗಿರುವುದೂ ಅವಿಚ್ಛಿನ್ನವಾದ ಅನಂತವಿಸ್ತಾರದವು ಅವನ ಮಣೆಯಾಗಿರುವುದೂ ಅಲ್ಲಿಂದಲೇ ದಿವ್ಯ ಜಲ ದೇವತೆಗಳು ಅವನನ್ನು ಪೋಷಿಸುವುದೂ ಆ ನಿಸ್ತೀರ ಅನಂತ ಬ್ರಹ್ಮಾಕಾಶದಲ್ಲಿ (ಅಮಿತ ವಿಸ್ತಾರದಲ್ಲಿ) ಅವನು ವಾಸಿಸಿರುವುದೂ ಆ ಅತಿದೇಶ ವಿಸ್ತಾರವು (ದಿಕ್ಕಾಲಾದ್ಯನವಚ್ಛಿನ್ನ ಪರಬ್ರಹ್ಮ ಪದಾರ್ಥವು) ಪ್ರಬುದ್ಧ ದೇವತೆಗಳಿಗೆ ಅಮೃತತ್ವವನ್ನು ಕೊಡುವುದೂ ಅಗ್ನಿಯು ಇಲ್ಲಿ ಭೌತಿಕ ಬೆಂಕಿ ಎಂಬ ಅರ್ಥವನ್ನು ಎಂದೆಂದೂ ಕೊಡಲಾರದು. ಮಿಕ್ಕೆಷ್ಟೋ ಉಪಚ್ಛೇದಗಳಲ್ಲಿ ಹೇಗೋ ಹಾಗೇ ಇಲ್ಲಿಯೂ ಯೌಗಿಕ, ಆಧ್ಯಾತ್ಮಿಕ, ಮಾನಸಶಾಸ್ತ್ರೀಯ ತಾತ್ವಿಕ ಲಕ್ಷಣ ಸಂಪನ್ನ ವೇದಪಲ್ಲವಿಯು ಮೇಲ್ಮುಸುಕಿನೊಳಗಿನಿಂದಲ್ಲ, ಬರೀ ಕರ್ಮದ ಪರದೆಯ ಹಿಂದಿನಿಂದಲ್ಲ - ಆದರೆ ರಾಜಾರೋಷವಾಗಿ ಮತ್ತು ಪುನಃ ಪುನಃ ಒತ್ತಿ ಒತ್ತಿ ತನ್ನನ್ನು ತಾನೇ ಅನಾವರಣ ಮಾಡಿಕೊಂಡಿದೆ. ಅದು ಛಂದಶ್ಛನ್ನವಾಗಿರುವುದೇನೋ ನಿಜ. ಆದರೆ ಆ ಪ್ರಚ್ಛನ್ನತೆಯು ಪಾರದರ್ಶಕವಾಗಿದೆ. ಅದರಿಂದ ಇಲ್ಲಿ ವೇದದ ಗೂಢಸತ್ಯವು ಹೊರಜೀಳುತ್ತದೆ - ವಿಶ್ವಾಮಿತ್ರನ ನದಿಗಳ ಹಾಗೆ ಅದು "ಸವಸ್ತ್ರವೂ ಅಲ್ಲ ನಿರ್ವಸ್ತ್ರವೂ ಅಲ್ಲ - ಮುಚ್ಚಿದ್ದೂ ಅಲ್ಲ, ಪೂರಾ ತೆರೆದದ್ದೂ ಅಲ್ಲ"[೧]

ಈ ಜಲವಾಹಿನಿಗಳು ವಾಮದೇವ ಸೂಕ್ತದಲ್ಲಿ ಹೇಳಿದವುಗಳೇ. "ಘೃತಸ್ಯಯೋನೌ ಸ್ರವತೇ ಮಧೂನಾಂ । ಶ್ಚೋತಂತಿ ಧಾರಾ ಮಧುನೋ ಘೃತಸ್ಯ" ಎಂದು ವಸಿಷ್ಠ ವರ್ಣಿಸಿದ ನಿಷ್ಕಲ್ಮಷತೆಯುಳ್ಳ ಜೇನನ್ನು ಒಳಗೊಂಡಿರುವ ಜಲಧಾರೆಗಳೂ ಅವೇ. ಅವು ನಮ್ಮನ್ನು ಸತ್ಯದತ್ತ ಒಯ್ಯುತ್ತವೆ. ಅವೇ ಸತ್ಯದ ಮೂಲ, ಅವು ನಿರಾತಂಕ ನಿಃಸ್ಸೀಮ ಆಯಾಮದಲ್ಲೂ ಹರಿಯುತ್ತವೆ ; ಈ ಭೂಮಿಯ ಮೇಲೂ ಹರಿಯುತ್ತವೆ. ಅವನ್ನು ನಮ್ಮನ್ನು ಸಾಕುವ ಗೋವುಗಳೆಂದೂ ಅಶ್ವಗಳೆಂದೂ ಕರೆಯಲಾಗಿದೆ. ಅವನ್ನು ಸಪ್ತವಾಣಿಗಳು (ಏಳು ಪದಗಳು), ಅವು ಸರ್ಜನಶೀಲವಾಕ್ಕಿನ - ವಾಗ್ದೇವತೆಯ, ಮಾತಿನ ವೈಖರಿಗಳು, ಅದಿತಿಯ ಅಭಿವ್ಯಂಜಕ ಶಕ್ತಿ, ಅತ್ಯುನ್ನತ ಪ್ರಕೃತಿಯ ಅಥವಾ ಗೋವಿನ ವಾಗ್‌ಝರಿಗಳು - ಎಂದು ಮುಂತಾಗಿ ಕರೆಯಲಾಗಿದೆ : ಈ ಪರಾ ಪ್ರಕೃತಿಯು ದನವಾದರೆ ಪುರುಷನು ಎತ್ತು. ಆದ್ದರಿಂದ ಅವು ಸಮಗ್ರ ಅಸ್ತಿತ್ವದ ಏಳು ಸ್ತರಗಳು, ಹಾಸುಗಳು - ಒಂದೇ ಒಂದಾದ ಜಾಗರಿತ ಪ್ರಜ್ಞೆಯ ಏಳು ಧಾರೆಗಳು, ಪ್ರವಾಹಗಳು ಯಾ ಚಲನರೂಪಗಳು.

ಮಧುಚ್ಛಂದೋ ಮುನಿಯ ಸೂಕ್ತಗಳು ಋಗ್ವೇದವನ್ನು ಪ್ರಾರಂಭಿಸುತ್ತವೆ. ಅವುಗಳಲ್ಲಿ ನಾವು ಕಂಡ ಕಲ್ಪನೆಗಳ ಬೆಳಕಿನಲ್ಲಿ ಮತ್ತು ನಮಗಿಗ ಸ್ಪಷ್ಟವಾಗುತ್ತಾ ಬಂದ ಅವುಗಳ ಸಾಂಕೇತಿಕ ಅರ್ಥವಿವರಣೆಯ ದೃಷ್ಟಿಯಿಂದ ತೋರಿಕೆಗೆ ಹಾಗೆ ಪ್ರತಿಮಿತವಾದ, ಅಜ್ಞೇಯವಾದ ಮತ್ತು

---

೧. "ಅರ್ಥೋಽಗಿರಾಮಪಿಹಿತಃ ಪಿಹಿತಃ ಸ ಏವ ಸೌಭಾಗ್ಯಮೇತಿ" - ಅಲಂಕಾರ ಶಾಸ್ತ್ರದ ಪ್ರಕಾರ = ಅರೆದೆರೆದಂತಿರುವ ಕವಿವಾಣಿಯೇ ಸುಂದರ. (ಅನುವಾದಕ)

ಒಡಪಿನಂತಿರುವ ವೈದಿಕ ಉಪಚ್ಛೇದಗಳು ಸಂಪೂರ್ಣ ಸಮನ್ವಿತವೂ ನೇರವಾದ ಅರ್ಥ ಉಳ್ಳವುಗಳೂ ಆಗಿರುವುದು ಗೊತ್ತಾಯಿತು. ಹಾಗೇ ಈಗ ಅರ್ಥ ಮಾಡಲು ಸಾಧ್ಯವೇ ಆಗದೆಂದು ತೋರುವ ಸೂಕ್ತಗಳಿಗೆ ಒಮ್ಮೆ ಸೂಚನೆ ದೊರೆಯಿತೆಂದು ಬಿಟ್ಟರೆ ಅವುಗಳ ಅರ್ಥವೂ ಅಷ್ಟೇ ನೇರ ಹಾಗೂ ಸಮನ್ವಿತ ಎನ್ನಿಸಿಬಿಡುತ್ತವೆ. ನಾವು ಅಗ್ನಿಯ ಮಾನಸ ಶಾಸ್ತ್ರೀಯ ಕರ್ತವ್ಯವೊಂದನ್ನೀಗ ನಿಶ್ಚಿತಗೊಳಿಸಬೇಕು ; ಆತನೋ ಪುರೋಹಿತ, ಯೋಧ, ಸತ್ಯಶೋಧಕ, ನರನಿಗೆ ಮುಕ್ತಿ ಕೊಡಿಸುವವನು. ಅಗ್ನಿಯ ಈ ಪಾತ್ರಗಳು ಮಧುಚ್ಛಂದನ ಋಗ್ವೇದೀಯ ಪ್ರಥಮ ಸೂಕ್ತದಲ್ಲಿ ಬಂದ ವರ್ಣನೆಯಲ್ಲಿಯೇ ಸ್ಥಿರೀಕೃತವಾಗಿವೆ - "ಮಹರ್ಷಿಯ ಕರ್ಮದಲ್ಲಿ ಅವನು ದಿವ್ಯ ಸಂಕಲ್ಪನು ಮತ್ತು ವೈವಿಧ್ಯಪೂರ್ಣ ಸ್ಫೂರ್ತಿಯಲ್ಲವನು ಸತ್ಯನೂ ಅತಿಶ್ರೀಮಂತನೂ ಆಗಿದ್ದಾನೆ." ಅಗ್ನಿಯು ದೇವನು, ಸರ್ವದರ್ಶಿಯು, ವ್ಯಕ್ತನಾದ ಚಿತ್+ಶಕ್ತಿ ; ಅಥವಾ ಆಧುನಿಕ ಭಾಷೆಯಲ್ಲಿ ದಿವ್ಯ ಅಥವಾ ವೈಶ್ವಿಕ ಸಂಕಲ್ಪನು ; ಮೊದಲು ಗೂಢನಾಗಿದ್ದು, ಅನಂತರ ಸಾರ್ವಕಾಲಿಕ ಲೋಕಗಳನ್ನು ರಚಿಸುವವನು; ಆಮೇಲೆ "ಹುಟ್ಟಿ" ಅಂದರೆ ಅವತರಿಸಿ (ಅಭಿವ್ಯಕ್ತನಾಗಿ) ಮಾನವನಲ್ಲಿ ಪರಮಸತ್ಯವನ್ನೂ ಅಮೃತತ್ವವನ್ನೂ ರಚಿಸುವವನು.

ದೇವತೆಗಳೂ ಮನುಷ್ಯರೂ ಈ ದಿವ್ಯ ಪ್ರಣೋದಶಕ್ತಿಯನ್ನು ಅಂತರ್ ಯಜ್ಞಾಗ್ನಿಯನ್ನು ಬೆಳಗಿಸಿ ಹೊತ್ತಿಸುತ್ತಾರೆ ಎಂಬುದು ವಿಶ್ವಾಮಿತ್ರನ ತಾತ್ಪರ್ಯ. ತಮ್ಮ ಪೂಜೆ ಶರಣಾಗತಿಗಳಿಂದ ಅವರು ಆ ಅಗ್ನಿ ಕೆಲಸ ಮಾಡುವಂತೆ ಮಾಡುತ್ತಾರೆ. ದ್ರಷ್ಟಾರರ ಸ್ವರ್ಗದಲ್ಲಿ "ದ್ಯೌಃ" ಅನ್ನು ಯಾ ಜ್ಞಾನವನ್ನು ಸಂಕೇತಿಸುವ ಶುದ್ಧ ಮನೋಧರ್ಮದಲ್ಲಿ ಅವರು ಪ್ರಕಾಶಿಸುತ್ತಾರೆ ; ಇನ್ನೊಂದು ವಿಧವಾಗಿ ಹೇಳುವುದಾದರೆ, ದಿವ್ಯ ಮನವನ್ನು ಮೀರಿಸುವ ಋಷಿದೃಷ್ಟ ಪರಮಸತ್ಯಪ್ರಜ್ಞೆಯನ್ನು ಪ್ರಕಟಿಸುತ್ತಾರೆ: ಮತ್ತು ಸರಿಯಾದ ಸ್ವಪ್ರಕಟಣೆಗೆ ಬೇಕಾದ ಪದವನ್ನು ಸದಾ ಹುಡುಕುತ್ತಿರುವ, ಹಾಗೆ ಹುಡುಕಿ ಮಾನಸೋತ್ತರ ನೆಲೆಯನ್ನು ತಲುಪಲು ಹವಣಿಸುತ್ತಿರುವ ದಿವ್ಯ ಉನ್ನೋದನ ಶಕ್ತಿಗೆ ದಾರಿ ಮಾಡಿಕೊಡಲು ಇದನ್ನವರು ಮಾಡುತ್ತಾರೆ. ತನ್ನಲ್ಲಿಯ ಈ ಸ್ವಕಾರ್ಯಗಳಲ್ಲಿ "ಕವಿಕ್ರತು"ವನ್ನು ಯಾ ದಿವ್ಯಜ್ಞಾನದ ರಹಸ್ಯವನ್ನು ಹೊತ್ತು ಈ ದಿವ್ಯ ಸಂಕಲ್ಪವು ("ದಿವಃಪೃಥಿವ್ಯಾಃ") ಮಾನವನಲ್ಲಿರುವ ಮಾನಸಿಕ ಹಾಗೂ ಭೌತಿಕ ಪ್ರಜ್ಞೆಯನ್ನು ನಿರ್ಮಿಸಿ ಯಾ ಅದರೊಡನೆ ಗೆಳೆತನ ಮಾಡಿಕೊಂಡು, ಬುದ್ಧಿಯನ್ನು ಪೂರ್ಣಗೊಳಿಸುತ್ತದೆ, ದರ್ಶನಶಕ್ತಿಯನ್ನು ಶುದ್ಧಗೊಳಿಸುತ್ತದೆ- ಅದರಿಂದ ಅವರು ದ್ರಷ್ಟದರ್ಶನವನ್ನು ಅಳವಡಿಸಿಕೊಳ್ಳಲು ಸಮರ್ಥರಾಗುತ್ತಾರೆ ; ಮತ್ತು ಹೀಗೆ ಪ್ರಜ್ಞಾವಸ್ಥೆಗೆ ರೂಪಾಂತರಿಸಲ್ಪಟ್ಟ ಅತಿಮಾನಸ ಸತ್ಯವು ನಮ್ಮಲ್ಲಿ ಪರಮಸುಖವನ್ನು ಸಂಸ್ಥಾಪಿಸುತ್ತದೆ (ಋಕ್ಕುಗಳು ೨.೩)

ಉಳಿದ ಸೂಕ್ತಭಾಗವು ದಿವ್ಯ ಜಾಗರಿತ ಉನ್ನೋದನ (ಪ್ರಣೋದನ) ಶಕ್ತಿ ಸ್ವರೂಪದ ಅಗ್ನಿಯ ಉತ್ಥಾರೋಹಣವನ್ನು ವರ್ಣಿಸುತ್ತದೆ. ಅಗ್ನಿಯು ಮರ್ತ್ಯರೊಳಗಮರ್ತ್ಯನು ; ಅವನು ಯಜ್ಞದಲ್ಲಿ ಮಾನವನ ಸಾಮಾನ್ಯ ಸಂಕಲ್ಪವನ್ನೂ ಜ್ಞಾನವನ್ನೂ, ಸ್ಥಾನತಃ ಮರ್ತ್ಯವೂ ಭೌತಿಕವೂ ಆದ ಪ್ರಜ್ಞೆಯಿಂದ ಪರಮಸತ್ಯದ ಅಮೃತತ್ವಕ್ಕೂ ಪರಮಸುಖಕ್ಕೂ ಕರೆದುಕೊಂಡು ಹೋಗುತ್ತಾನೆ. ವೈದಿಕ ಋಷಿಗಳು ಮನುಷ್ಯನಿಗೆ ಪಂಚಜನ್ಮಗಳನ್ನು ಹೇಳುತ್ತಾರೆ. (ಪಂಚಜನಾಃ ಪಂಚಕೃಷ್ಟೀಃ ಯಾ ಕ್ಷಿತೀಃ), ಪಂಚ ಪ್ರಾಣಪ್ರಪಂಚಗಳನ್ನು ಉಲ್ಲೇಖಿಸುತ್ತಾರೆ. ದ್ಯಾವಾ ಪೃಥಿವಿಗಳು ಶುದ್ಧವಾದ ಮಾನಸ ಮತ್ತು ಭೌತಿಕ (ಮನೋಮಯ ಮತ್ತು ಅನ್ನಮಯ ಕೋಶಗಳನ್ನು) ಪ್ರಜ್ಞೆಗಳನ್ನು ಪ್ರತಿನಿಧಿಸುತ್ತವೆ. ಅವುಗಳ ನಡುವೆ "ಅಂತರಿಕ್ಷ"=ಜೈವಿಕ ಯಾ ನಾಡೀಯ ಪ್ರಜ್ಞೆಯ ಮೆಟ್ಟಿಲಿದೆ.

ದ್ಯಾವಾ ಪೃಥಿವಿಗಳು ನಮ್ಮ ಅಂತರಿಕ್ಷದ್ವಯ : ಅದರಿವನ್ನು ದಾಟಬೇಕು-ಆಗ ಮಾತ್ರ ಶುದ್ಧ ಮನಸ್ಸಿನಾಚೆಗಿನ ಸ್ವರ್ಗದ ಬುನಾದಿಯಾದ[1] ಅದಿತಿಯನ್ನು, ಅನಂತವನ್ನು, ಬೃಹತ್ತಮ ಆಯಾಮವನ್ನು ನಾವು ತಲುಪುವೆವು. ಈ ಬೃಹದ್ವಿಶಾಲಧಾಮವೇ, ಅತಿ ಮೇಲಿನ ಲೋಕತ್ರಯವನ್ನು ಎತ್ತಿ ಹಿಡಿದಿರುವ ಪರಮಸತ್ಯ. ಈ ತ್ರಿಲೋಕಗಳು=ಅಗ್ನಿ, ವಿಷ್ಣು, ಲೋಕಗಳು[2] ; ಮತ್ತು ಅದಿತಿಯೆಂಬ ಅತ್ಯುನ್ನತ ಗೋನಾಮಲೋಕ. ಬೃಹಲ್ಲೋಕವು ಅಗ್ನಿಯ ಸ್ವಂತದ ವಿಶಾಲಲೋಕ, ಸ್ವಗೃಹ, ಪರಮಸತ್ಯ, ಪರಮಾಸನ ಎಂದು ಘೋಷಿಸಲಾಗಿದೆ.[3] ಈ ಸೂಕ್ತದಲ್ಲಿ ಭೂಮಿಯಿಂದ ಅಗ್ನಿಯು ಸ್ವಧಾಮಕ್ಕೆ ಏರುತ್ತಿರುವುದನ್ನು ವರ್ಣಿಸಲಾಗಿದೆ.

ಜಲಗಳಲ್ಲಿ, ಸೋದರಿಯರ ಕರ್ಮಾಚಾರದಲ್ಲಿ ತೋರುವ ಈ ದಿವ್ಯಶಕ್ತಿಯನ್ನು ದೇವತೆಗಳು ಹುಡುಕಿ ತೆಗೆದರು. ಇವೇ ಪರಮ ಸತ್ಯದ ಸಪ್ತಸಿಂಧುಗಳು. ನಮ್ಮ ಇರವಿನ ಶಿಖರಗಳಿಂದ ಇಂದ್ರನು ಇವುಗಳನ್ನು ಕೆಳಗಿಳಿಸಿ ತಂದನು. ಪರಮ ಸತ್ಯಗತ ದಿವ್ಯ ಶಕ್ತಿಯಾದ ಸಪ್ತನದೀಪಥಚರ ಅಗ್ನಿಯು ("ಓಷಧೀಃ") ಭೂಮಿಯಲ್ಲಿ ಬೆಳೆದಿದ್ದು, ಅದರ ಉಷ್ಣತೆಯನ್ನು ಹಿಡಿತದಲ್ಲಿಟ್ಟಿರುವ, ಸಸ್ಯಾದಿ ಪದಾರ್ಥಗಳಲ್ಲಿ ಗುಪ್ತವಾಗಿದ್ದನು. ಅವನನ್ನು ಹೊರತರಲು ಭೂಮಿ ಸ್ವರ್ಗಗಳೆಂಬ ಎರಡು ಅರಣಿಗಳಿಂದ ಒಂದು ವಿಧದ ಶಕ್ತಿಯನ್ನು ಪ್ರಯೋಗಿಸಬೇಕು. ಆದ್ದರಿಂದ ಅಗ್ನಿಯನ್ನು ಓಷಧೀಪುತ್ರನೆಂದೂ ಭೂಮಿ-ಸ್ವರ್ಗಗಳ ಮಗನೆಂದೂ ಕರೆಯಲಾಗುತ್ತದೆ. ತನ್ನ ಭೌತಿಕ ಸತ್ತೆಯ ಮೇಲೆ ಮಾನವನು ತನ್ನ ಶುದ್ಧ ಮನದ ಕ್ರಿಯೆಯನ್ನು ಕಷ್ಟಕಾರ್ಪಣ್ಯಗಳಿಂದ ಹಾಗೂ ನೋವುನುರಿಗಳಿಂದ ಮಾಡಿ, ತತ್ಫಲವಾಗಿ ಅವುಗಳಿಂದ ಈ ಅಮರ ಆಘಾತಬಲವನ್ನು ಉತ್ಪಾದಿಸುತ್ತಾನೆ. ಆದರೆ, ದಿವ್ಯ ಜಲಗಳಲ್ಲಿ ಅಗ್ನಿಯು ದೃಶ್ಯ ; ಅವುಗಳಲ್ಲವನು ತನ್ನ ಸರ್ವಬಲ ಸಮೇತನಾಗಿ, ಸರ್ವಜ್ಞಾನ ಸಮೇತನಾಗಿ, ಸರ್ವಭೋಗ ಪ್ರಸನ್ನತೆಯಿಂದ, ಪೂರ್ಣ ಬಿಳುಪಾಗಿಯೂ ಶುದ್ಧವಾಗಿಯೂ ಏಳುತ್ತಾ ಏಳುತ್ತಾ ಸ್ವ ಕಾರ್ಯದಿಂದ ಕಿರುಗೆಂಪಿನವನಾಗಿ ದೊರಕುತ್ತಾನೆ. (ಋಕ್ ೩). ಹುಟ್ಟಿದಂದಿನಿಂದಲೇ ಅವನಿಗೆ ದೇವತೆಗಳು ಪ್ರಣೋದನ (ಪ್ರಘಾತ) ಶಕ್ತಿಯನ್ನೂ, ಹೊಳಪನ್ನೂ, ಶರೀರವನ್ನೂ ಕೊಟ್ಟಿರುತ್ತಾರೆ ; ಸಪ್ತಸಿಂಧುಗಳು ಸಂತೋಷದಿಂದ ಅವನನ್ನು ಹಿಗ್ಗಿಸುತ್ತಾರೆ. ಹುಟ್ಟಿದ ಈ ಮಹಾ ಶಿಶುವಿನ ಸುತ್ತ ಅವು ಹರಿದಾಡುತ್ತವೆ ಮತ್ತು ಹೆಣ್ಣುದುರೆಗಳಂತೆ ("ಅಶ್ವಾಃ" ಋಕ್ ೪) ಅವನಿಗಾಗಿ ದುಡಿಯುತ್ತವೆ.

ಧೇನವಃ=ಹಸುಗಳು ಎಂದು ಸಾಮಾನ್ಯವಾಗಿ ಕರೆಯಲ್ಪಡುವ ಆ ನದಿಗಳು ಅವನ ಸಾಕುತಾಯಂದಿರು. ಅವರನ್ನಿಲ್ಲಿ ಹೆಣ್ಣು ಕುದುರೆಗಳೆಂದು ಕರೆದದ್ದೇಕೆಂದರೆ, ಹಸುವು ಜ್ಞಾನರೂಪದ ಪ್ರಜ್ಞೆಯ ಸಂಕೇತವಾದರೆ ಕುದುರೆ ಉನ್ನೋದನಬಲದ ಸಂಕೇತ. ಅಶ್ವ ಯಾ ಕುದುರೆಯು ಜೀವನದ ಕ್ರಿಯಾಶೀಲ (ಉತ್ಕ್ರಿಯ)ಶಕ್ತಿ. ಭೂಮಿಯ ಮೇಲೆ ಅಗ್ನಿಯ ಆರೈಕೆಗೆ ದುಡಿವ ನದಿಗಳು ಜೀವನದ ಜಲಗಳಾಗುತ್ತವೆ, ಜೈವಿಕ ಉತ್ಕ್ರಿಯಾ ಬಲವಾಗುತ್ತವೆ, ಪ್ರಾಣಶಕ್ತಿಯಾಗುತ್ತವೆ. ಪ್ರಾಣಚೈತನ್ಯವು ಚಲಿಸುತ್ತದೆ, ಕೆಲಸ ಮಾಡುತ್ತದೆ, ಆಶೆ ಪಡುತ್ತದೆ ಮತ್ತು ಭೋಗಿಸುತ್ತದೆ. ಅಗ್ನಿಯೇ ಸ್ವತಃ ಭೌತಿಕ ಉಷ್ಣತೆಯಾಗಿಯೂ ಶಕ್ತಿಯಾಗಿಯೂ ಎದ್ದು ಗೌಣವಾಗಿ ಕುದುರೆ ರೂಪತಾಳಿದ ಮೇಲೆಯೇ ಸ್ವರ್ಗೀಯ ಬೆಂಕಿಯಾಗುತ್ತಾನೆ. ಜಲಪುತ್ರನಾಗಿ ಅವನು ಮಾಡುವ ಮೊದಲ

೧. "ಬುಧ್ನ" = ಬುನಾದಿ, ತಳಪಾಯ, ತಳಹದಿ. - ಅನುವಾದಕ

೨. "ಪದಾನಿ, ಸದಾಂಸಿ" = ಹೆಜ್ಜೆಗಳು, ಆಸನಗಳು, ಸ್ಥಾನಗಳು, ಶಬ್ದಗಳು. - ಅನುವಾದಕ

೩. "ಸ್ವಂ ದಮಂ, ಸ್ವಂ ಸದಃ" - ಅನುವಾದಕ

ಕೆಲಸವೆಂದರೆ ಅಂತರಲಿಕ್ಷಕ್ಕೆ ಅದರ ಪೂರ್ಣ ವಿಸ್ತಾರವನ್ನೂ ಅಕಾರವನ್ನೂ ಕೊಡುವದು, ಪಾವಿತ್ರ್ಯವನ್ನೀಯುವುದು : ಅಂತರಲಿಕ್ಷವು ಜೈವಿಕ ಯಾ ಉತ್ಕ್ರಿಯಸ್ತರ "ರಜ ಆತತನ್ವಾನ್". ಆತನು ಮಾನವನ ನಾಡೀಯ (ಜೈವಿಕ) ಜೀವನದಲ್ಲಿ ತುಂಬಿಕೊಂಡು ಅದನ್ನು ಪವಿತ್ರೀಕರಿಸುತ್ತಾನೆ; ತನ್ನ ಶುದ್ಧವೂ ಪ್ರಕಾಶಮಾನವೂ ಆದ ಅವಯವಗಳಿಂದ ಅವನದರಲ್ಲಿ ತುಂಬಿಕೊಳ್ಳುತ್ತಾನೆ ; ಅದರ ಪ್ರವೃತ್ತಿಗಳನ್ನೂ ಬಯಕೆಗಳನ್ನೂ ಅವನು ಉದಾತ್ತೀಕರಿಸುತ್ತಾನೆ. ಕ್ರತುವಿನಲ್ಲಿ, ತನ್ನ ಕೆಲಸದಲ್ಲಿ ಪ್ರಾಣಪ್ರಜ್ಞೆಯು ಪವಿತ್ರೀಕೃತವಾದ ಸಂಕಲ್ಪದಿಂದ ದುಡಿಯುತ್ತದೆ. ಆ ಪವಿತ್ರೀಕರಣಕ್ಕೆ "ಕವಿಭಿಃ ಪವಿತ್ರೈಃ" - ಅತಿಮಾನಸ ಸತ್ಯ ಮತ್ತು ವಿವೇಕಗಳೂ ಕಾರಣಗಳಾಗುತ್ತವೆ. ಆದ್ದರಿಂದ ಅಗ್ನಿಯು ತನ್ನ ಅಪಾರವಾದ ವೈಭವದಿಂದ ವಿರಾಜಮಾನನಾಗಿದ್ದಾನೆ. ಮೂಲ ಪ್ರವೃತ್ತಿ ಹಾಗೂ ಆಸೆಪಾಸೆಗಳ ಹರಕುಮುರುಕೂ ಪರಿಮಿತವೂ ಆದ ಮಟ್ಟವನ್ನು ಮೀರಿ (ಜಲಗಳ) ಸಪ್ತ ಸಿಂಧುಗಳ ಬೆಳ್ವೆಳಲಿನ ಬಾಳಿನ ಆವರಣದಲ್ಲಿ ಅಗ್ನಿ ಈಗ ಮೆರೆಯುತ್ತಾನೆ (ಋಕ್ ೪, ೫)

ಸಪ್ತ ಸಿಂಧುಗಳು ಮೇಲೆ ಮೇಲಕ್ಕೇರಿ ಶುದ್ಧ ಮನಃ ಕ್ರಿಯಾರೂಪದ ಸ್ವರ್ಗದ ಮಹಾಬಲದೇವತೆಗಳಾಗುತ್ತವೆ. ಅಲ್ಲಿ ಅವು ಮೊದಲ ಸಾರ್ವಕಾಲಿಕ ಚಿರ ಯೌವನವುಳ್ಳ ಶಕ್ತಿಗಳಾಗುತ್ತವೆ, ಶಕ್ತಿಗಳಾಗಿ ಆವಿರ್ಭವಿಸುತ್ತವೆ, ಅವು ಪ್ರತ್ಯೇಕ ವಾಹಿನಿಗಳಾದರೂ ಅವುಗಳ ಆಕರ ಒಂದೇ ಆಗಿದೆ. ಏಕೆಂದರೆ ಅವೆಲ್ಲಾ ಒಂದೇ ಒಂದಾದ ಅತಿಮಾನಸ ಸತ್ಯದ ಗರ್ಭದಿಂದ ಜನಿಸಿ ಹರಿದುಬಂದವುಗಳು. ಈ ಏಳು ಪದಗಳು ದಿವ್ಯ ಮನದ ಮೂಲಭೂತ ಸರ್ಜನಾತ್ಮಕ ಅಭಿವ್ಯಂಜನೆಗಳು- "ಸಪ್ತವಾಣೀಃ"[1] ಶುದ್ಧಮನದ ಈ ಜೀವನವು ತನ್ನ ಮರ್ತ್ಯ ಜೀವನವನ್ನು ಉಳಿಸಿಕೊಳ್ಳಲು ತನ್ನ ವಸ್ತುಗಳನ್ನು ತಿನ್ನುವ ಪ್ರಾಣೀಯ (ನಾಡೀಯ) ಚೈತನ್ಯವಲ್ಲ ; ಅದರ ಜಲಧಾರೆಗಳು (ಏನನ್ನೂ) ನುಂಗುವುದಿಲ್ಲ - ಆದರವು ಎಂದೂ ಸೋಲುವುದಿಲ್ಲ, ಸ್ವಕರ್ಮ ಪರೀಕ್ಷೆಯಲ್ಲಿ ಅನುತ್ತೀರ್ಣ-ರಾಗುವುದಿಲ್ಲ. ಆ ದಿವ್ಯಶಕ್ತಿಧಾರೆಗಳು ಮಾನಸ ಆಕಾರಗಳ ಪಾರದರ್ಶಕ ಮುಸುಕಿನ ಬಟ್ಟೆಯನ್ನು ತೊಟ್ಟ ಸಾರ್ವಕಾಲಿಕ ಸತ್ಯ. ಆದುದರಿಂದ ಅವು ವಸ್ತ್ರಾಚ್ಛನ್ನವೂ ಅಲ್ಲ, ನಗ್ನವೂ ಅಲ್ಲ (ಋಕ್ ೬).

ಆದರಿದು ಕೊನೆಯ ಹಂತವಲ್ಲ. ಈ ಸಪ್ತಸಿಂಧುಗಳ ಸಮುನ್ನೋದನ ಬಲವು ಮಾನಸ ಸ್ಪಷ್ಟತೆಯೆಂಬ ("ಋತಸ್ಯ") ವಿಶಾಲ ಸತ್ಯದ ಜನ್ಮಸ್ಥಲಕ್ಕೆ ಯಾ ಗರ್ಭಕ್ಕೆ ಏರಿ ದಿವ್ಯ ಮಾಧುರ್ಯಧಾರೆಗಳಾಗಿ ಹರಿಯುತ್ತವೆ. ("ಸ್ರವಥೇ ಮಧೂನಾಂ") ; ಅಲ್ಲಿ ಅದು ಧರಿಸುವುದು, ವಿಶ್ವರೂಪಗಳನ್ನು, ಅನಂತ ವಿಸ್ತಾರದ ಪ್ರಜ್ಞಾರಾಶಿಗಳ ಸ್ವರೂಪಗಳನ್ನು, ತತ್ಫಲವಾಗಿ, ಅವತರಿಸುವ ಉದಾತ್ತ ಮಾಧುರ್ಯದಿಂದ ಕೆಳ ಜಗತ್ತಿನ ಈ ಸಾಕುತಾಯಿ ಹೊಳೆಗಳು ಬೆಳೆಯುತ್ತವೆ. ಸರ್ವಸೃಷ್ಟಿ-ಕರ್ತೃವಾದ ದಿವ್ಯ ಸಂಕಲ್ಪಕ್ಕೆ ಮನಃಪ್ರಜ್ಞೆ ಮತ್ತು ಭೌತ ಪ್ರಜ್ಞೆಗಳು ಮೊದಲು ಮಾತೃಸ್ಥಾನದಲ್ಲಿದ್ದು ಅನಂತರ ಸ್ವ ವೈಶಾಲ್ಯದಲ್ಲಿ ಪರಮ ಸತ್ಯದ ಬೆಳಕಿನಿಂದ ತತ್ಸಮವಾಗಿ ಸಾಮಙ್ಜಸ್ಯ ಸ್ಥಿತಿಯನ್ನು ತಲುಪುತ್ತವೆ. ಹೇಗೆ? ಅನಂತಾನಂದದ ಪೋಷಣೆಯಿಂದ, ಅಪ್ರಮೇಯದ ಶಕ್ತಿದಾಯಕತೆಯಿಂದ ಅವು ಅಗ್ನಿಯ ಪೂರ್ಣ ಆಘಾತಬಲವನ್ನು[2] ತಾಳುತ್ತವೆ ; ವಿದ್ಯುಜ್ವಾಲೆ ಅವನ ಆಘಾತಬಲ ; ಅದು

---

೧. ನದಿ, ವಾಣಿ, ಪದಗಳು ದಿವ್ಯತೆಯ ದೆಸೆಯಿಂದ ಏಕಾರ್ಥಕಗಳು. ಏಕತ್ವವು ಸಂಖ್ಯಾತವಾಗಿ ಏಳೋ ಇನ್ನೆಷ್ಟೋ ಆಗುವುದು ಪರಮಸತ್ಯದ (ಸಚ್ಚಿದಾನಂದನ) ಮಹಾತ್ಮ್ಯದಿಂದ Being becomes. Becomings merge in the Being.- ಅನುವಾದಕ

೨. ಆಘಾತಬಲ = ಪ್ರಣೋದವು. - ಅನುವಾದಕ

ಅವನ ವೈಭವ ಮತ್ತು ವಿಶ್ವರೂಪಗಳ ಯೋಗಾನಂದಾವೇಶ. ಏಕೆಂದರೆ ಎಲ್ಲಿ ಅತಿಮಾನಸ ಸತ್ಯವು ತನ್ನ ವಿವೇಕದಿಂದ ಒಡೆಯ, ವೃಷಭ, ಪುರುಷ ಎನ್ನಿಸಿದ ಅಪಾರ ಸಂಪನ್ನ ದೈವೀ ಶಕ್ತಿಯನ್ನು ಸಂವರ್ಧಿಸುವುದೋ ಅಲ್ಲಿ ಯಾವಾಗಲೂ ಸ್ಪಷ್ಟತೆಯ ಮತ್ತು ಆನಂದದ ಹೊನಲುಗಳು ಹರಿಯುತ್ತಿರುತ್ತವೆ. (ಋಕ್ಕುಗಳು ೭, ೮)

ಎಲ್ಲಾ ವಸ್ತುಗಳ ತಂದೆಯಾದವನು ಒಡೆಯನು ಮತ್ತು ಗಂಡಸು (ಪುರುಷ). ಅವನು ವಸ್ತುಗಳ ಗುಪ್ತ ಆಕರದಲ್ಲಿ ಗುಪ್ತನಾಗಿರುತ್ತಾನೆ-ಆ ಆಕರವೋ ಅತಿಮಾನಸ. ಆದುದರಿಂದ ಅಗ್ನಿಯು ಸ್ವ ಸಹಚರ ದೇವತೆಗಳೊಡನೆ ಸಪ್ತಸಿಂಧು ಸಹಿತನಾಗಿ ಹೊರಗಿನಿಂದ ಅತಿಮಾನಸವನ್ನು ಹೊಕ್ಕು, ನಮ್ಮ ಜಾಗರಿತ ಅಸ್ತಿತ್ವದಿಂದ (ಐಂದ್ರಿಯ ಪ್ರತ್ಯಕ್ಷದಿಂದ) ಅದೃಶ್ಯನಾಗಿ ಸರ್ವವಸ್ತು ಪಿತೃವಿನ ಮಾಧುರ್ಯ ರಾಶಿಯ ಮೂಲವನ್ನು ಹುಡುಕಿ ತೆಗೆದು, ಆ ಮಾಧುರ್ಯವನ್ನು ಅವನು ನಮ್ಮ ಬಾಳಿನ ಮೇಲೆ ಹೊಯ್ಯುವನು, ಸುರಿಯುವನು. ಅವನೇ ಧರಿಸಿ ಶುದ್ಧ ಕುಮಾರ ಸ್ವರೂಪದ ಸೂರ್ಯನಾಗುವನು, ಏಕ ಮೇವಾದ್ವಿತೀಯ ಪುರುಷನಾಗುವನು, ಮಾನವನಲ್ಲಿ ವಿಶ್ವವ್ಯಾಪಕತ್ವದಿಂದ ಆವಿರ್ಭವಿಸುವ ಜೀವಾತ್ಮನಾಗುವನು. ಮಾನವನಲ್ಲಿಯ ಮಾನಸ ಮತ್ತು ಭೌತ ಪ್ರಜ್ಞೆಗಳು ಅವನನ್ನು ಒಡೆಯನೆಂದೂ ಪ್ರಿಯಕರನೆಂದೂ ಸ್ವೀಕರಿಸುವುವು. ಆದರೆ ಆತನೊಬ್ಬನೇ ಆದರೂ ನದಿಗಳ ಬಹುಮುಖ ಚಲನವನ್ನು ಅನುಭವಿಸುವನು-ಆ ನದಿಗಳೇ ಗುಣಿತ ಸಂಖ್ಯೆಯಲ್ಲಿರುವ ವಿಶ್ವಜನೀನ ಶಕ್ತಿಗಳು (ಋಕ್ಕುಗಳು ೯, ೧೦)

ಅನಂತರ ವೇದವು ಸ್ಪಷ್ಟವಾಗಿ ಹೇಳಿದ ಅಗ್ನಿಚರಿತವಿಂತಿದೆ: ಅಗ್ನಿಯು ಹಿಂದೆ ಹೇಳಿದಂತೆ ಅನಂತವನ್ನು ಹೊಕ್ಕನು ; ಅದರಲ್ಲಿ ಬೆಳೆದನು ; ಅದರಲ್ಲಿ ಯಶಸ್ವಿನಿಯರಾಗಿ ತಮ್ಮ ಗುರಿಯನ್ನು ಮುಟ್ಟಿದ ಬಹುನದಿಗಳು ಅವನನ್ನು ಸಂವರ್ಧಿಸುತ್ತವೆ. ಈ ಅನಂತವೆಂಬುದೇ ಅವಿಘ್ನಬಾಧಿತ ಮಹಾವೈಶಾಲ್ಯ (ಬ್ರಹ್ಮಾಕಾಶ) ಅಸೀಮ, ಅಪ್ರಮೇಯ, ಅಲ್ಲೇ ಪರಮಸತ್ಯ ಹುಟ್ಟುವುದು ; ಆ ಅನಂತವು ಅಪಾರ. ಅದು ಅಗ್ನಿಯ ಸ್ವಾಭಾವಿಕವಾದ ಆಸನ. ಅದನ್ನೀಗ ಅವನು ಸ್ವಗೃಹವನ್ನಾಗಿ ಮಾಡಿಕೊಳ್ಳುತ್ತಾನೆ. ಅಲ್ಲಿ ಸಪ್ತಸಿಂಧುಗಳು ಸೋದರಿಯರು, ಮರ್ತ್ಯಲೋಕದಲ್ಲಿ ಒಂದೆಡೆಗೇ ಹುಟ್ಟಿದರೂ ಏಳಾಗಿ ಹರಿದಂತೆ ಹರಿಯದೆ ಅವಿಭಕ್ತವಾಗಿ ಕೆಲಸ ಮಾಡುತ್ತವೆ. ("ಜಾಮೀನಾಂ ಅಪಸಿ ಸ್ವಸೃಣಾಂ"). ಈ ಮಹಾ ಮಹಿಮರ ಆ ಸಮಗ್ರ ಸಂಗಮದಲ್ಲಿ ಅಗ್ನಿಯು ಸರ್ವಾಂತರ್‌ಯಾಮಿಯೂ ಸರ್ವಧಾರಿಯೂ ಆಗಿರುವುದಲ್ಲದೆ ಅವನ ದರ್ಶನದ ಕಿರಣಗಳು ಸಂಪೂರ್ಣ ನೇರ- ಅಧೋಲೋಕದ ವಕ್ರತೆ ಅವುಗಳಿಗೆ ಸೋಂಕದು. ಹೊಳೆ ಹೊಳೆವ ಗೋಗಣದಂಥ ಜ್ಞಾನ ಪ್ರಕಾಶಗಳು ಹುಟ್ಟಿ, ಅಗ್ನಿಯಿಂದ ಈ ಪ್ರಕಾರ ಉನ್ನತ ಜನ್ಮವನ್ನು ಪಡೆದ ಅವು ಅವನಿಂದ ದಿವ್ಯಜ್ಞಾನರೂಪಕ್ಕೆ ಪರಿವರ್ತನ ಹೊಂದುತ್ತವೆ, ಅಮೃತ ಪ್ರಜ್ಞೆಗಳಾಗಿ ಪರಿಣಮಿಸುತ್ತವೆ. (ಋಕ್ಕುಗಳು ೧೧, ೧೨).

ಇದೋ ಅಗ್ನಿಯ ಹೊಸ ಹಾಗೂ ಕೊನೆಯ ಜನನ. ಭೂಮಿಯ ಓಷಧಿಗಳಲ್ಲಿ ಯಾರು ಪ್ರಣೋದನ ಬಲದಿಂದ ಅದರ ಮಗನಾಗಿ ಹುಟ್ಟಿದನೋ ಯಾರು ಜಲಪುತ್ರನಾಗಿ ಜನಿಸಿದನೋ ಅವನು ಈಗ ಬಹುರೂಪಗಳಿಂದ ಆನಂದಸುತನಾಗಿ ಹುಟ್ಟಿದ್ದಾನೆ. ಆನಂದ ದೇವಿಯು ಸಮಗ್ರ ಪರಮಸುಖಸಂಪನ್ನೆ. ಅಪಾರ ಅನಂತದಲ್ಲಾಕೆ ದಿವ್ಯ ಸ್ವರೂಪದ ಮುಕ್ತಿಗೆ ಉನ್ಮುಖಿಯಾಗಿದ್ದಾಳೆ. ದೇವತೆಗಳು ಮಾನವನಲ್ಲಿಯ ದಿವ್ಯಶಕ್ತಿಗಳು, ಮನಃ ಸಾಧನದ ಮೂಲಕ ಅವರು ಅವನ ಸುತ್ತಲೂ ಒಂದಾಗುವವರು. ಈ ಹೊಸ ಬಲಿಷ್ಠ, ಪರಿಣಾಮಕರ ಜನ್ಮದಲ್ಲಿ ಜಗತ್ತಿನ ಮಹಾಕಾರ್ಯಗಳಲ್ಲಿ

ಅವರು ಅವನನ್ನು ತೊಡಗಿಸುವರು. ಅವರು ವಿಶ್ವವಿಶಾಲಪ್ರಜ್ಞೆಯಿಂದ ಹೊರ ಹೊಮ್ಮಿದ ಬೆಳಕುಗಳು ; ಆ ಬೆಳಕುಗಳು ಈ ದಿವ್ಯ ಪ್ರಣೋದ ಶಕ್ತಿಗಂಟಿಕೊಂಡು ಅದರ ಉಜ್ವಲ ವಿದ್ಯುಲ್ಲೇಖೆಗಳಾಗುತ್ತವೆ : ಅತಿ ಮಾನಸದಲ್ಲಿರುವ ಆ ಅಗ್ನಿಯ ಮನೆಯು ಅದೇ ಅಪಾರ ಆಯಾಮ. ಆ ವಿದ್ಯುತ್‌ಸದೃಶ ಜ್ಞಾನಲೇಖೆಗಳು ಮಾನವನಿಗೆ (ಅಗ್ನಿಯ ಮೂಲಕ) ಅಮೃತತ್ವವನ್ನು ಕೊಡುವುವು.

ವೈದಿಕ ಸಪ್ತಸಿಂಧುಗಳ ಸಂಕೇತದ ಅರ್ಥ ಇಂಥದು. ಅದು ಇಷ್ಟು ಆಳವಾಗಿದೆ, ಸುಸಮ್ವನಿತವಾಗಿದೆ, ಕಾವ್ಯಾಲಂಕಾರಗಳ ಮುಸುಕಿನೊಳಗೆ ಪ್ರಕಾಶಮಾನವಾಗಿದೆ. ಏಳು ಹೊಳೆಗಳು=ಏಳು ಜಲಗಳು= ಪಂಚಲೋಕದವುಗಳು= ಅಗ್ನಿಯ ಹುಟ್ಟು ಹಾಗೂ ಊರ್ಧ್ವಗತಿ=ಮಾನವನ ಊರ್ಧ್ವಗತಿ=ದೇವತೆಗಳ ಊರ್ಧ್ವಗಮನ. ಮಾನವನು ದೇವತೆಗಳ ಆಕಾರಗಳನ್ನು ತನ್ನಲ್ಲಿ ಮೂಡಿಸಿಕೊಳ್ಳುವನು. ಹೇಗೆ? ಅಸ್ತಿತ್ವ ಯಾ ಸತ್ತೆ ಎಂಬುದೊಂದು ಮಹಾಪರ್ವತ ("ಸಾನೋಃ ಸಾನುಂ") ಆ ಪರ್ವತದ ತಪ್ಪಲಿನ ಸೋಪಾನ ಪಂಕ್ತಿಗಳಲ್ಲಿ ಅವನು ದೇವರುಗಳ ಮೇಲು-ಕೆಳಗಿನ ನೆಲೆಗಳಲ್ಲಿ ದೇವತಾಪ್ರತಿಮೆಗಳನ್ನು ಸ್ಥಾಪಿಸಿಕೊಳ್ಳುತ್ತಾನೆ. ಒಮ್ಮೆ ನಾವು ಈ ನಕ್ಷೆಯನ್ನನ್ವಯಿಸಿ ಗೋವಿನ ಮತ್ತು ಸೋಮದ ಸಂಕೇತಗಳ ನ್ಯಾಯವಾದ ಕಲ್ಪನೆಗಳನ್ನು ಗ್ರಹಿಸಿದೆವಾದರೆ-ದೇವತೆಗಳ - ಈ ಪ್ರಾಚೀನ ಸೂಕ್ತಗಳಲ್ಲಿಯ ಆಭಾಸಿಕ ಅಸಮನ್ವಿತತೆಗಳೂ ಅಸ್ಪಷ್ಟತೆಗಳೂ ದೂರಾನ್ವಯದ ಅಸ್ತವ್ಯಸ್ತ ಗೊಂದಲ-ಗಲಿಬಿಲಿಗಳೂ ಒಂದು ಕ್ಷಣದಲ್ಲಿ ಅದೃಶ್ಯವಾಗಿ ಹೋಗುವುವು. ಆಗ ಸರಳವಾಗಿ, ಸುಲಭವಾಗಿ, ಕಷ್ಟಪಡದೆ ಆ ಪ್ರಾಚೀನ ಯೋಗಿಗಳ ಗಂಭೀರವೂ ಪ್ರಕಾಶಮಯವೂ ಆದ ಸಿದ್ಧಾಂತವು-ಅರ್ಥಾತ್-ವೇದರಹಸ್ಯವು ತಾನೇ ತಾನಾಗಿ ಹೊರಬೀಳುವುದು.



## ಅಧ್ಯಾಯ-೧೨

# ಉಷೋವ್ರಜಗಳು

ವೇದದ ಸಪ್ತಸಿಂಧುಗಳು, ಸಪ್ತಜಲಗಳು ("ಆಪಃ") ಅದರ ಕಾವ್ಯಾಲಂಕಾರ ಭಾಷೆಯಲ್ಲಿ ಏಳು ತಾಯಂದಿರೆಂದು ('ಸಪ್ತಧೇನವಃ') ವರ್ಣಿಸಲಾಗಿದೆ. "ಆಪಃ" ಎಂಬ ಪದಕ್ಕೆ ಕೂಡಾ ಒಳ ಅರ್ಥವೊಂದಿದೆ ; ಅದೊಂದು ಶ್ಲೇಷಾರ್ಥಕ ಪದ. ಅಪ್ ಎಂಬ ಧಾತುವಿಗೆ ಮೂಲತಃ "ಚಲಿಸು" ಎಂಬ ಅರ್ಥವಲ್ಲದೆ, ಇರು, ಅಸ್ತಿತ್ವಕ್ಕೆ ತರು ಎಂಬ ಅರ್ಥವೂ ಉಂಟು. ಚಲಿಸು ಎಂಬ ಅರ್ಥದಿಂದಲೇ ಅದಕ್ಕೆ ನೀರೆಂಬ ಅರ್ಥ ಬಂದಿರಬೇಕು. ಅಸ್ತಿತ್ವಕ್ಕೆ ಬರುವ ಯಾ ಹುಟ್ಟಿಸುವ ಅರ್ಥವು "ಅಪತ್ಯ" ಎಂಬುದರಲ್ಲಿ ಯಾ ದಕ್ಷಿಣ ಭಾರತದ ಅಪ್ಪ (ತಂದೆ) ಎಂಬುದರಲ್ಲಿ ಉಳಿದಿದೆ. ಸಪ್ತಜಲಗಳು (ಏಳುನೀರು) ಅಸ್ತಿತ್ವದ ಜಲಗಳು, ಸತ್ತಾ ಸ್ವರೂಪಗಳು. ಇರವಿನ ಎಲ್ಲ ಬಗೆಗಳೂ ಈ ತಾಯಂದಿರಿಂದಲೇ ಹುಟ್ಟಿ ಬಂದಿವೆ. ಆದರೆ "ಸಪ್ತಗಾವಃ" ಏಳು ಹಸುಗಳು-ಎಂಬ ಇನ್ನೊಂದು ಪದವೂ ನಮಗೆದುರಾಗುತ್ತದೆ. ಅದಕ್ಕೆ "ಬೆಳಕುಗಳು"(ಏಳ್ಬೆಳಕು) ಎಂಬ ಅರ್ಥವೂ ಇದೆ. "ಸಪ್ತಗು"=ಏಳ್ಬೆಳಕುಳ್ಳದ್ದು.' "ಗು, ಗ್ವಃ ಮತ್ತು ಗೋ" ಎಂಬ ಪದಗಳನ್ನು ವೇದದುದ್ದಕ್ಕೂ ಗೋವು ಮತ್ತು ಕಿರಣ ಎಂಬ ಎರಡರ್ಥಗಳಲ್ಲೂ ಬಳಸಲಾಗಿದೆ. ಪ್ರಾಚೀನ ಭಾರತೀಯ ವಿಚಾರ ಪದ್ಧತಿಯಲ್ಲಿ ಸತ್ತೆ ಹಾಗೂ ಪ್ರಜ್ಞೆಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ ; ಮತ್ತು ಅದಿತಿಯು ಅನಂತ ಸತ್ತೆ[೧]. ಅದರಿಂದ ದೇವತೆಗಳು ಹುಟ್ಟುತ್ತಾರೆ. ಅದರಿಂದಲೇ ಅದಿತಿಯು ಅವರ ತಾಯಿ. ಅವಳಿಗೆ ಏಳು ಹೆಸರುಗಳು ಮತ್ತು ಏಳು ಸ್ಥಾನಗಳು ("ಧಾಮಾನಿ"). ಅವಳು ಅನಂತ ಪ್ರಜ್ಞೆಯೂ ಹೌದು ; ಅದರಿಂದಲೇ ಅವಳು ಗೋ (ಗೌಃ) = ಏಳು ಕಿರಣಗಳಿಂದ[೨] ಹೊರ ಹೊಮ್ಮಿದ ಪ್ರಾಥಮಿಕ ಬೆಳಕು ("ಸಪ್ತಗಾವಃ"). ಸತ್ತೆಯ ಏಳು ನೆಲೆಯ ತತ್ತ್ವವು ನದಿಗಳ ಪ್ರತಿಮಾಲಂಕಾರದಲ್ಲಿ ಅಡಗಿದೆ. ಆ ನದಿಗಳು ಸಮುದ್ರಜಾತ ("ಸಪ್ತ ಧೇನವಃ") ; ಕಿರಣಗಳ ಪ್ರತಿಮಾ ಪ್ರಯೋಗದಲ್ಲಿ ಅವು (ಆ ಸಮುದ್ರ=ಸರ್ವಪಿತೃ) ಸೂರ್ಯ ಸವಿತೃ- "ಸಪ್ತಗಾವಃ"[೩] ಎಂಬುದಾಗಿ ವರ್ಣಿಸಲ್ಪಟ್ಟ ಆ ಸೂರ್ಯಸಮುದ್ರಜಾತವಾದ ಏಳು ಪ್ರಜ್ಞಾಕಿರಣಗಳು.

---

೧. ಅದಿತಿ = ಅನಂತಸತ್ತೆ=ಅನಂತಪ್ರಜ್ಞೆ=ಅನಂತಸೂರ್ಯ ಸವಿತೃ ಅಸೀಮ ಜ್ಞಾನ ರಾಶಿ=ಸಮುದ್ರ.

೨. ತಜ್ಜಾತರು=ಏಳು ಕಿರಣಗಳು = ಏಳು ಜ್ಞಾನ ರೇಖೆಗಳು = ಏಳು ಗೋವುಗಳು= ಏಳು ನದಿಗಳು - ಅನಂತರ ಸರ್ವ ದೇವತೆಗಳು = ವಿವಿಧ ಚೈತನ್ಯಶಕ್ತಿಗಳ ಅಧಿಷ್ಠಾತೃಗಳು. -ಅನುವಾದಕ

೩. ಒಂದು ಆಧ್ಯಾತ್ಮಿಕ, ಇನ್ನೊಂದು ಆಧಿದೈವಿಕ, ಮತ್ತೊಂದು ಆದಿಭೌತಿಕ-ಹೀಗೆ ಒಂದು ಪದಕ್ಕೆ ಮೂರು ಸಂಕೇತಾರ್ಥಗಳಿರಬಹುದು. -ಅನುವಾದಕ

ವೈದಿಕ ಸಂಕೇತಗಳಲ್ಲೆಲ್ಲಾ ಗೋವು ಅತಿ ಪ್ರಮುಖವಾದುದು. ಕರ್ಮಕಾಂಡದ ಅನುಯಾಯಿಗೆ ಗೋವು ಸಾಮಾನ್ಯವಾದ ಎತ್ತು ಅಥವಾ ಆಕಳು ಮತ್ತೇನೂ ಅಲ್ಲ. ಅದರಂತೆಯೇ ಅಶ್ವವೆಂದರೆ ಭೌತಿಕವಾದ ನಾವು ಸಾಕುವ ಕುದುರೆ ; ಅವನಿಗೆ ಅಶ್ವ ಬರಿ ಅಶ್ವ - ಇನ್ನಾವ ಅರ್ಥವೂ ಆಗದು ; ಹಾಗೇ ಘೃತವು ಕೇವಲ ನೀರು ಯಾ ಸ್ವಚ್ಛಗೊಳಿಸಿದ ಬೆಣ್ಣೆ ; ವೀರನು ಬರಿ ಮಗ, ರಕ್ಷಕ ಯಾ ಆಳು. ಉಷೋ ದೇವಿಯನ್ನು ಋಷಿ ಪ್ರಾರ್ಥಿಸುವಾಗ :ಗೋಮದ್ ವೀರವದ್ ದೇಹಿರತ್ನಂ ಉಷೋ ಅಶ್ವಾವತ್" ಎಂದರೆ ಯಾಜ್ಞಿಕ ಅರ್ಥಗಾರನು, ಆಹ್ಲಾದಕರ ಐಶ್ವರ್ಯ (ಅದಕ್ಕೆ ಸೇರಿದ ಗೋಗಳು, ಮನುಷ್ಯರು (ಮಗ) ಮತ್ತು ಕುದುರೆ, ಎಂದೇ ತಿಳಿದುಕೊಳ್ಳುತ್ತಾನೆ. ತದ್ವಿರುದ್ಧವಾಗಿ ಈ ಪದಗಳನ್ನು ಸಂಕೇತಗಳೆಂದು ತಿಳಿದರೆ, "ಜ್ಯೋತಿರ್ಮಯ ಆನಂದವನ್ನೂ ಜಯಪ್ರದ ಶಕ್ತಿಯನ್ನೂ ಜೈವಿಕ ಪ್ರಣೋದ ಬಲವನ್ನೂ" ಕೊಡೆಂದು ಅರ್ಥವಾಗುತ್ತದೆ. ಆದ್ದರಿಂದ ವೇದೋಕ್ತ ಗೋ ಪದಧ ಅರ್ಥವನ್ನು ಕೊನೆಯದಾಗಿ ನಿಷ್ಕರಿಸಬೇಕಾಗಿದೆ. ಅದು ಸಾಂಕೇತಿಕವೆಂದು ಸಿದ್ಧವಾದರೆ, "ಅಶ್ವ"(ಕುಧುರೆ), "ವೀರ" (ಮಾನವ ಯಾ ಧೀರ), "ಅಪತ್ಯ ಯಾ ಪ್ರಜೆ", ಸಂತತಿ, "ಹಿರಣ್ಯ" ಬಂಗಾರ, "ವಾಜ" ಅನ್ನ (ಸಾಯಣನಂತೆ) ಎಂದು ಪದೇ ಪದೇ ಬಳಸಲಾದ ಪದಗಳಿಗೆ ಸಂಕೇತಾರ್ಥಗಳೂ ಇರಲೇಬೇಕಾಗುತ್ತದೆ.

ಗೋಪ್ರತಿಮೆಯು ವೇದ ಸೂಕ್ತಗಳಲ್ಲಿ ಯಾವಾಗಲೂ ಉಷಸ್ಸು ಮತ್ತು ಸೂರ್ಯರಿಗೆ ಸಂಬಂಧಿಸಿದೆ. ಸರಮೆಯೆಂಬ ಹೆಣ್ ನಾಯಿಯ ಹಾಗೂ ಅಂಗಿರಸ ಋಷಿಗಳ ನೆರವಿನಿಂದ ಇಂದ್ರನೂ ಬೃಹಸ್ಪತಿಯೂ ಪಣಿಗಳ ಗವಿಗಳಲ್ಲಿದ್ದ ಕಳೆದು ಹೋದ ಆಕಳುಗಳನ್ನು ಪುನಃ ಹುಡುಕಿ ತರುವ ಕಥೆ ಮತ್ತೆ ಮತ್ತೆ ವೇದದಲ್ಲಿ ಬರುತ್ತದೆ. ಉಷಃ ಕಲ್ಪನೆ, ಅಂಗಿರಸ ಕಥೆಗಳು ವೈದಿಕ ಆರಾಧನಾ ಪದ್ಧತಿ ಹೃದಯ ;. ಅವನ್ನು ವೇದಾರ್ಥದ ಬೀಗ ಮುದ್ರೆಯನ್ನು ತೆಗೆವ ಕೀಲಿಕೈ ಎಂದು ಕೂಡಾ ಹೇಳಬಹುದು. ಆದ್ದರಿಂದ ನಮ್ಮ ಪರಿಶೀಲನೆಗಾಗಿ ಈ ಎರಡನ್ನು ತೆಗೆದುಕೊಂಡರೆ, ನಮ್ಮ ಶೋಧವು ದೃಢಪಡುತ್ತದೆ.

ಬಹಳ ಮೇಲಿಂದ ಮೇಲೆ ನೋಡಿದರೂ ವೇದಗತ ಉಷಃ ಸೂಕ್ತ ಉಷಸ್ಸಿನ ಹಾಗೂ ಸೂರ್ಯನ ಗೋಗಳು ಬೆಳಕಿನ ಸಂಕೇತಗಳಲ್ಲದೆ ಮತ್ತಾವುದರ ಸಂಕೇತಗಳೂ ಅಲ್ಲ ಎಂಬುದು ಸಂಪೂರ್ಣ ಸ್ಪಷ್ಟವಾಗುತ್ತದೆ. ಸಾಯಣನಿಗೇ ಇಂಥ ಸೂಕ್ತಗಳಲ್ಲಿ ಈ ಪದವನ್ನು ಗೋವೆಂದೂ, ಕಿರಣವೆಂದೂ ಎಚ್ಚರಿಕೆಯಿಲ್ಲದೆ ಅಸಮನ್ವಿತವಾಗಿ ಅರ್ಥೈಸುತ್ತಾ ಹೋಗುವ ಒತ್ತಡ ಬಂದಿದೆ. ಕೆಲವೊಮ್ಮೆ "ಗೌಃ" ಎಂದರೆ ಸತ್ಯಾರ್ಥಕವಾದ ಋತದಂತೆಯೇ ನೀರೆಂದೂ ಆತ ಹೇಳುತ್ತಾನೆ. ಇದರ ಅರ್ಥವೆಂದರೆ, ನಾವೀ ಪದವನ್ನು ಶ್ಲೇಷಾರ್ಥದಲ್ಲಿ ಗ್ರಹಿಸಬೇಕು : ಜ್ಯೋತಿಸ್ (ಬೆಳಕು)=ದಿವ್ಯ = ದೇವತಾತ್ಮಕ - ಎಂಬುದು ಉದ್ದಿಷ್ಟಾರ್ಥವೆಂದೂ ದನ ("ಗೋ") ಎಂಬುದು ಪ್ರತಿಮೆ ಯಾ ವಾಚಿಕ ಅಲಂಕಾರ ಎಂದೂ ನಾವು ತಿಳಿದುಕೊಳ್ಳಬೇಕು. "ಗೌಃ" ಸ್ಥೂಲಾರ್ಥದಲ್ಲಿ ಆಕಳು ; ಸೂಕ್ಷ್ಮಾರ್ಥದಲ್ಲಿ ಬೆಳಕು ; ಕಾರಣಾರ್ಥದಲ್ಲಿ ಸಚ್ಚಿದಾನಂದ, ಪರಬ್ರಹ್ಮ-ಎಂಬುದು ತಾತ್ಪರ್ಯ[೧]- ಬೆಳಕು ಜ್ಞಾನದ ಸಂಕೇತವೆಂಬುದು ಪ್ರಸಿದ್ಧ ; ಜ್ಞಾನವು ಸತ್ಯ ಪ್ರಜ್ಞೆ, ಅನಂತದ ಪ್ರಜ್ಞೆ ಎಂಬುದು ಸುಪ್ರಸಿದ್ಧ.

---

೧. ಗೋ - ಆಧಿಭೌತಿಕ ; ಬೆಳಕು (ದಿವ್ಯ) - ಆಧಿದೈವಿಕ ; ಜ್ಞಾನ (ಬ್ರಹ್ಮ ಜ್ಞಾನ) - ಆಧ್ಯಾತ್ಮಿಕ. ಗೋ=ಜ್ಯೋತಿ=ಆತ್ಮ (ಬ್ರಹ್ಮ) ಜ್ಞಾನ. "Double Sense" ಹೀಗೆ "Treble Sense" ಆಗುತ್ತದೆ. (ಅನುವಾದಕ).

ಕಿರಣಗಳೆಂಬರ್ಥವು ಮಧುಚ್ಛಂದನು ಇಂದ್ರನನ್ನು ಕುರಿತು ಹೇಳಿದ (೧,೭) ಸೂಕ್ತದಲ್ಲಿ ಅನಿವಾರ್ಯವಾಗುತ್ತದೆ. ಆ ಸೂಕ್ತದ ಮೂರನೆಯ ಪದ್ಯದಲ್ಲಿ "ದೂರದರ್ಶನಕ್ಕಾಗಿ ಇಂದ್ರನು ಸೂರ್ಯನನ್ನು ಸ್ವರ್ಗಕ್ಕೇರುವಂತೆ ಮಾಡಿದನು." - "ವಿಗೋಭಿರ್ ಅದ್ರಿಂ ಐರಯತ್."[೨] ಆದರೆ, ಅದೇ ಅವಧಿಯಲ್ಲಿ ಸೂರ್ಯನ ಕಿರಣಗಳು ಸೂರ್ಯನ ದನದ ವ್ರಜಗಳು (ಗೋಲಿಗಳು) ; "ಹೀಲಿಯೋಸನ ದನಕರುಗಳು ಒಡಿಸ್ಸಿಯಸ್ಸನ ಸಹಚರರಿಂದ ವಧಿಸಲ್ಪಟ್ಟವು" ಎಂದು ಒಡಿಸ್ಸಿಯಸ್ಸಿನಲ್ಲಿ ಹೇಳಿದೆ. ಹರ್ಮಿಸಿನ ಕುರಿತಾಗಿ ಹೇಳಿದ ಹೋಮರನ ಸೂಕ್ತದಲ್ಲಿ ಅಪೋಲೋವಿನ ಸೋದರನಾದ ಹರ್ಮಿಸನು ಅವುಗಳನ್ನು ಕದ್ದೊಯ್ದನೆಂದು ಹೇಳಲಾಗಿದೆ. ಅವು ಹಗೆಯಾದ ವಲನೂ ಪಣಿಗಳೂ ಮುಚ್ಚಿಟ್ಟ ದನಗಳು. ಮಧುಚ್ಛಂದಸ್ಸು ಇಂದ್ರನನ್ನು ಕುರಿತು "ದನಗಳನ್ನು ಅಡಗಿಸಿಟ್ಟಿದ್ದ ವಲನ ಗುಹೆಯನ್ನು ನೀನು ತೆರೆದೆ" ಎಂದು ಹೇಳಿದಾಗ, "ವಲನು ಮುಚ್ಚಿಟ್ಟ ಕಳ್ಳ - ಬೆಳಕನ್ನು ಹಿಡಿದಿಟ್ಟವನು ಮತ್ತು ಯಾಜಕನಿಗೆ ಇಂದ್ರ ವಾಪಸು ತಂದುಕೊಡುವುದು ಆ ಅಡಗಿಸಿಟ್ಟ ಬೆಳಕನ್ನು" ಎಂಬುದೇ ಕವಿಯ ತಾತ್ಪರ್ಯ. ಕದ್ದುಕೊಂಡು ಹೋದ ದನಗಳನ್ನು ಮತ್ತೆ ಪಡೆಯುವುದು ಯಾವಾಗಲೂ ವೇದಸೂಕ್ತೋಕ್ತ ; ಮತ್ತು ಪಣಿಗಳ ಮತ್ತು ಅಂಗಿರಸರ ಕಥೆಯನ್ನು ಪರೀಕ್ಷಿಸಿದಾಗ ಅದರ ಅರ್ಥವು ಸಾಕಷ್ಟು ಸ್ಪಷ್ಟವಾಗುತ್ತದೆ.

ಒಮ್ಮೆ ಈ ಅರ್ಥವು ಸುಪ್ರತಿಷ್ಠಿತವಾದರೆ ದನಗಳಿಗಾಗಿ ಮಾಡಿದ ವೈದಿಕ ಪ್ರಾರ್ಥನೆಯ ಬುಡವು ಅಲ್ಲಾಡುತ್ತದೆ. ಏಕೆಂದರೆ ಯಾವ ಕಳೆದು ಹೋದ ದನಗಳನ್ನು ತಂದುಕೊಡೆಂದು ಋಷಿಗಳು ಇಂದ್ರನನ್ನು ಆಮಂತ್ರಿಸುತ್ತಾರೋ ಅವು ದ್ರಾವಿಡರು ಕದ್ದೊಯ್ದ ಭೌತಿಕ ಗೋವ್ರಜಗಳಲ್ಲವೆಂದಾಯಿತೋ ಆಗ ಅವುಗಳು ಹೊಳೆ ಹೊಳೆವ ಸೂರ್ಯ ಪ್ರಕಾಶ ಕಿರಣಗಳು (ಸೂರ್ಯ = ಬೆಳಕು) ಎಂಬುದು ಸಿದ್ಧವಾಗುವುದು. ಅದರಿಂದ ಅವೇ ಕಾವ್ಯಾಲಂಕಾರಗಳು, ರೂಪಕೋಕ್ತಿಗಳು, ಋಷಿಗಳು ಸರಳವಾಗಿ ಗೋವುಗಳನ್ನು ಕೊಡೆಂದು ಬೇಡುವ ಸೂಕ್ತಗಳಿಗೂ (ವಿರುದ್ಧವಾದ ಅರ್ಥವಿವರಣೆಯು ತಲೆಹಾಕದಿರುವಾಗ) ಅನ್ವಯಿಸುತ್ತವೆ ಎಂದು ನಾವು ಅರ್ಥೈಸುವುದರ ನ್ಯಾಯಬದ್ಧತೆಯು ಸಿದ್ಧವಾಗುತ್ತದೆ. ಉದಾ I.4.1,2. ರಲ್ಲಿ ಪೂರ್ಣಾಕಾರ ನಿರ್ಮಾಪಕನೂ ಗೋದೇಹದಲ್ಲಿ ಹಾಲು ಕರೆಯುವವನೂ ಇಂದ್ರನು ; ಅವನ ಸೋಮಮದೋನ್ಮತ್ತತೆಯು "ಗೋದಾನ", "ಗೋದಾ ಇದ್ ರೇವತೋ ಮದಃ" - ಎಂದು ಹೇಳಲಾಗಿದೆ. ಈ ಪದ ಸಂಹತಿಯಿಂದ (ಮೇಳ ನುಡಿಯಿಂದ) "ಇಂದ್ರನು ಒಬ್ಬ ಐಶ್ವರ್ಯವಂತನಾದ ದೇವರು. ಅವನು ಹೆಂಡ ಕುಡಿದು ಬಿದ್ದಾಗ ಗೋದಾನ ಮಾಡುವುದರಲ್ಲಿ ಅತಿಶಯ ಉದಾರಿ" ಎಂದು ಅರ್ಥಮಾಡುವುದು ಹಾಸ್ಯಾಸ್ಪದತೆಯ ಹಾಗೂ ಅವಿವೇಕದ ಪರಾಕಾಷ್ಠೆ. ಮೊದಲ ಪದ್ಯದಲ್ಲಿ (ಋಕ್ಕಿನಲ್ಲಿ) ಗೋದೋಹವು ಒಂದು ರೂಪಕೋಕ್ತಿ ; ಹಾಗೇ ಎರಡನೆಯ ಪದ್ಯದಲ್ಲಿ ಗೋದಾನ ಮಾಡುವುದೂ ಹಾಗೇ ಒಂದು ಕಾವ್ಯಾಲಂಕಾರ - ಎಂಬುದು ಸ್ಪಷ್ಟವಾಗಿದೆ. ವೇದದ ಇತರ ಉಪಚ್ಛೇದ -ಅನುಚ್ಛೇದಾದಿ ಭಾಗಗಳಿಂದ ಗೋವು

---

೨. "ತನ್ನ ಬೆಳಕಿನೊಡನೆ ಅವನು ವಜ್ರವನ್ನು ದೂರ ಕಳುಹಿದನು." ಎಂದೂ ಅರ್ಥಮಾಡಬಹುದು ; ಆದರೆ ಇದು ಉಚಿತವೂ ಸಮನ್ವಿತವೂ ಆದ ಅರ್ಥವಾಗದು. ಅದನ್ನೇ ತೆಗೆದುಕೊಂಡರೂ "ಗೋಭಿಃ" ಎಂಬ ಪದ "ಹೊರಹೊಮ್ಮುವ ಪ್ರಕಾಶ ಕಿರಣಗಳು" ಎಂದಲ್ಲದೆ "ಆಕಳುಗಳು" ಎಂಬ ಅರ್ಥವನ್ನಿಲ್ಲಿ ಕೊಡಲಾರದು = "ಕಿರಣಗಳಿಂದ" ಎಂಬುದೇ ಇಲ್ಲಿಯ ಸಾಂದರ್ಭಿಕ ಅರ್ಥ.

ಬೆಳಕಿನ ಸಂಕೇತ ಎಂಬುದು ನಮಗೆ ಗೊತ್ತಾದರೆ ಇಲ್ಲಿಯೂ ನಾವು ಇಂದ್ರನು "ತನ್ನ ತಾನು ಮರೆಯುವಂಥ ಮದ್ಯವನ್ನು"[೧] ಕುಡಿದಾಗ, ಮದ್ಯೋನ್ಮಾದದಲ್ಲಿ, ಸೋಮರಸಪಾನದಲ್ಲಿ, ಮೈಮರೆಯಿಸುವ ಆನಂದಾವೇಶದಲ್ಲಿದ್ದಾಗ, ಖಂಡಿತವಾಗಿಯೂ ನಮಗೆ ದಿವ್ಯ ಪ್ರಕಾಶವನ್ನು (ಬೆಳಕನ್ನು) ಕೊಡುತ್ತಾನೆ.

ಉಷಃ ಸೂಕ್ತಗಳಲ್ಲಿ "ಬೆಳಕಿನ ದನಗಳ" ಸಾಂಕೇತಿಕ ಅರ್ಥವು ಮೇಲೆ ಹೇಳಿದಷ್ಟೇ ಸ್ಪಷ್ಟವಾಗಿದೆ. ಉಷಾದೇವಿಯನ್ನು ಯಾವಾಗಲೂ "ಗೋಮತಿ" ಎಂದೇ ವರ್ಣಿಸಲಾಗಿದೆ; "ಗೋಮತಿ"ಯೆಂದರೆ "ರಾಜಿಸುವ ಯಾ ಹೊಳೆವ" ಎಂದೇ ಸ್ಪಷ್ಟವಾಗಿ ಅರ್ಥವಾಗಬೇಕು. ಏಕೆಂದರೆ, ಗೋಮತಿಯನ್ನು ಗೋಮಯಿ[೨] (ಗೋವುಗಳನ್ನುಳ್ಳ) ಎಂದು ಅರ್ಥೈಸುವುದು ಅರ್ಥಹೀನ, ಅಪಾರ್ಥಕರ. ಉಷೆಗದೆಂದೂ (ಎರಡನೆಯ ಅರ್ಥದಲ್ಲಿ) ಅಕ್ಷರಾರ್ಥದಲ್ಲಿ, ರೇವಿಟ್ಟ ವಿಶೇಷಣವಾಗದು. ಆದರೆ ಈ ವಿಶೇಷಣದಲ್ಲಿ ಗೋಪ್ರತಿಮೆಯಿದೆ. ಏಕೆಂದರೆ, ಉಷೋದೇವತೆಯು "ಗೋಮತಿಯಷ್ಟೇ" ಅಲ್ಲ, "ಅಶ್ವಾವತಿಯೂ" ಹೌದು ; ಅವಳ ಹತ್ತಿರ ಯಾವಾಗಲೂ ಹಸುಗಳೂ ಹಯಗಳೂ ಇದ್ದೇ ಇರುತ್ತವೆ. ಇಡೀ ಜಗತ್ತಿಗಾಕೆ ಬೆಳಕನ್ನು ನಿರ್ಮಿಸಿಕೊಡುವಳು ಮತ್ತು ದನದ ಹಟ್ಟಿಯ ಬಾಗಿಲನ್ನು ತೆರೆದ ಹಾಗೆ ಕತ್ತಲೆಯೆಂಬ ಹಟ್ಟಿಯನ್ನು ಉದ್ಘಾಟಿಸಿ ಅವಳು ಬೆಳಕನ್ನು ಹೊರಬಿಡುವವಳು. ಇದರಲ್ಲಿ ಸ್ಥಾಲಿತ್ಯದ ಸಾಧ್ಯತೆಯೇನೂ ಇಲ್ಲದಂತೆ ಗೋವನ್ನು ಬೆಳಕಿನ (I.92.4) ಸಂಕೇತವೆಂದು ಗ್ರಹಿಸಬಹುದು. (ಋಕ್ ೧೬) ಈ ಋಕ್ಕಿನಲ್ಲಿ "ಗೋಮದ್ ಹಿರಣ್ಯವದ್" ಎಂದು ಅಶ್ವಿನೀ ದೇವತೆಗಳನ್ನು "ಬಂಗಾರದಂಥ ಮತ್ತು ಉಜ್ವಲವಾದ ದಾರಿಯಲ್ಲಿ ನಿಮ್ಮ ರಥವನ್ನು ಕೆಳಗಿಳಿಸುತ್ತಾ ಬನ್ನಿರಿ" ಎಂದು ಬೇಡಿಕೊಳ್ಳಲಾಗಿದೆ. ಇಷ್ಟೇ ಅಲ್ಲದೆ, ಉಷೆಯ ತೇರನ್ನು ಕೆಲವೊಮ್ಮೆ ಕೆಂದನಗಳೂ ಕೆಲವೊಮ್ಮೆ ಕೆಂಗುದುರೆಗಳೂ ಎಳೆದುಕೊಂಡು ಹೋಗುತ್ತಿರುವಂತೆ ವರ್ಣಿಸಲಾಗಿದೆ. "ಯುಕ್ತೇ ಗವಾಂ ಅರುಣಾನಾಂ ಅನೀಕಂ" (I.124.11) ಅವಳು ತನ್ನ ಕೆಂಬಣ್ಣದ ದನಗಳ ಗುಂಪನ್ನು (ಎತ್ತುಗಳನ್ನು) ರಥಕ್ಕೆ ಕಟ್ಟುತ್ತಾಳೆ - ಎಂಬಲ್ಲಿ ಎರಡನೆಯದಾದ "ಅವಳ ಕೆಂಬಣ್ಣದ ಎತ್ತುಗಳ ಸಮೂಹವನ್ನು" ಎಂಬ ಅರ್ಥವು ಸ್ಥೂಲ ಪ್ರತಿಮೆಯ ಹಿನ್ನೆಲೆಯಲ್ಲಿ ಸ್ಪಷ್ಟವಾಗಿ ನಿಲ್ಲುತ್ತದೆ. ಅವಳು ಗೋವುಗಳ ಯಾ ಕಿರಣಗಳ ತಾಯಿಯೆಂದು ವರ್ಣಿತೆಯಾಗಿದ್ದಾಳೆ - "ಗವಾಂ ಜನಿತ್ರೀ ಅಕೃತ ಪ್ರಕೇತುಂ" (I. 124.5), "ಗೋಗಳ ತಾಯಿಯು (ಕಿರಣಗಳ ತಾಯಿಯು) ದರ್ಶನವನ್ನು ನಿರ್ಮಿಸಿದ್ದಾಳೆ; ಮತ್ತು ಬೇರೆಯ ಕಡೆ ಅವಳ ಕಾರ್ಯವನ್ನು ಕುರಿತು "ದರ್ಶನ" ಯಾ "ಪ್ರತ್ಯಕ್ಷವು ಈಗ ಏನೂ ಇಲ್ಲದ ಸ್ಥಳದಲ್ಲಿ ಹೊಳೆಯಿತು" ; ಮತ್ತೂ ಸ್ಪಷ್ಟವಾಗಿ ಹೇಳಿದ್ದೇನೆಂದರೆ, ಗೋವುಗಳು ಹೆಬ್ಬೆಳಕಿನ ಹೊಳೆ ಹೊಳೆವ ಗೋಲೆಗಳು (ಹಿಂಡುಗಳು)- ಎಂದು. ಅವಳನ್ನು ಹೊಳೆವ ಹಿಂಡುಗಳ ನೇತ್ರಿಯೆಂದೂ ಹೊಗಳಲಾಗಿದೆ- "ನೇತ್ರೀಗವಾಂ" (VII.76.6) ಮತ್ತು ಈ ಎರಡು ಕಲ್ಪನೆಗಳನ್ನೂ ಜೋಡಿಸಿದ ಉಜ್ವಲ ಪದ್ಯಪಂಕ್ತಿಯೊಂದಿದೆ" ಹಿಂಡುಗಳ ತಾಯಿ, ದಿವಸಗಳ ಮಾರ್ಗದರ್ಶಿಕೆ - "ಗವಾಂ ಮಾತಾ

---

೧. ದ. ರಾ. ಬೇಂದ್ರೆಯವರಿಂದ (ಅನುವಾದಕ)

೨. ಗೋಮಯ ಎಂದರೆ ಸೆಗಣಿ ಎಂದೂ ಅರ್ಥವಾಗುತ್ತದೆ ! (ಅನುವಾದಕ).

ನೇತ್ರೀ ಅಹ್ನಾಂ (VII.77.2) ಕೊನೆಯದಾಗಿ, ಪ್ರತಿಮಾಚ್ಛಾದನವನ್ನು ಪೂರಾ ತೆಗೆಯಲೆಂದೋ ಏನೋ ವೇದವೇ ಸ್ವತಃ, "ಹಿಂಡುಗಳು ಹೆಬ್ಬೆಳಕಿನ ಒಂದು ಅಲಂಕಾರೋಕ್ತಿ" - "ಅವಳ ಸುಖ ಕಿರಣಗಳು ತಿರುಗಾಡಲು ಬಿಟ್ಟ ಗೋವುಗಳಂತೆ ಬರುತ್ತವೆ - ಪ್ರತಿಭದ್ರಾ ಅದೃಕ್ಷತ ಗವಾಂಸರ್ಗಾನ ರಶ್ಮಯಃ" ಹೇಳಿದೆ (IV.52.5) ಮತ್ತೂ ಹೆಚ್ಚು ನೈಗಮನಿಕ ಪದ್ಯ ಪಂಕ್ತಿ ಇದೆ. (VII.79.2) "ಗೋಗಳು (ರಶ್ಮಿಗಳು) ಕತ್ತಲನ್ನು ಓಡಿಸಿ ಬೆಳಕನ್ನು ಬಿತ್ತರಿಸುತ್ತವೆ= ಸಂ ತೇ ಗಾವಃ ತಮ ಆ ವರ್ತಯಂತಿ, ಜ್ಯೋತಿರ್ ಯಚ್ಛಂತಿ"[೧].

ಆದರೆ ಉಷೆಯು ಈ ಹೊಳೆವ ಹಿಂಡುಗಳಿಂದ ತೇರಲ್ಲಿ ಕೇವಲ ಕೊಂಡೊಯ್ಯಲ್ಪಟ್ಟಿಲ್ಲ ; ಅವಳು ಅವುಗಳನ್ನು ಯಾಜಕನಿಗೆ ವರವನ್ನಾಗಿ, ಕೊಡುತ್ತಾಳೆ. ಸೋಮೋನ್ಮತ್ತ ಇಂದ್ರನಂತಿರುವಳೀಕೆ - ಇವಳು ಹೆಬ್ಬೆಳಕನ್ನು ಕೊಡುವಾಕೆ. ವಸಿಷ್ಠನ ಒಂದು ಸೂಕ್ತದಲ್ಲಿ (VII.75.7) ಇವಳನ್ನು ದುರ್ಗಮ ಸ್ಥಳಗಳಲ್ಲಿ ಅಡಗಿಸಿಟ್ಟ ಹಿಂಡುಗಳನ್ನು ಹೊರದೆಗೆಯಲು ಆ ಸ್ಥಳವನ್ನು ಭೇದಿಸುವ ಮತ್ತು ಹಾಗೆ ಭೇದಿಸಿ ಅವುಗಳನ್ನು ಜನರಿಗೆ ಕೊಡುವ ದೇವತಾ ಕಾರ್ಯದಲ್ಲಿ ಸಹಭಾಗಿನಿಯನ್ನಾಗಿ ವರ್ಣಿಸಲಾಗಿದೆ : ಸತ್ಯವಂತರಾದ ದೇವರೊಡನೀಕೆ ಸತ್ಯವತಿ, ಮಹಾತ್ಮರಾದ ದೇವರೊಡನೀಕೆ ಮಹಾತ್ಮಿಕೆ-ದುರ್ಗಮ ಪ್ರದೇಶಗಳನ್ನೀಕೆ ಒಡೆದು ತೆರೆದು ಹೊಳೆವ ಹಿಂಡುಗಳನ್ನು ನೀಡುತ್ತಾಳೆ ; ಗೋಗಳು ಉಷೆಯತ್ತ ನೋಡಿ ಅಂಬಾ ಎಂದು ಕೂಗುತ್ತವೆ.- "ರುಜದ್ ದೃಳ್ ಹಾನಿ ದದದ್ ಉಸ್ರಿಯಾಣಾಂ ಪ್ರತಿಗಾವ ಉಷಸಂ ವಾವಶಂತ". ಮತ್ತು ಮುಂದಿನ ಋಕ್ ಪಂಕ್ತಿಯಲ್ಲಿಯೇ "ಗೋಮದ್ ರತ್ನಂ ಅಶ್ವಾವತ್ ಪುರುಭೋಜಃ" - ಇವಳನ್ನು "ನೀನು ಯಾಜಕರಿಗೆ ಬೆಳಕು ತುಂಬಿದ (ಗೋಮದ್) ಆನಂದವನ್ನೂ (ಆನಂದ ಸ್ಥಿತಿಯನ್ನೂ) ಪ್ರಾಣಬಲವನ್ನೂ (ಅಶ್ವಾವತ್) ಇನ್ನೂ ಇತರ ಭೋಗ್ಯವಸ್ತುಗಳನ್ನೂ ಕೊಡು" ಎಂದು ಪ್ರಾರ್ಥಿಸಲಾಗಿದೆ. ಆದುದರಿಂದ ಉಷೆ ನೀಡುವ ಹಿಂಡುಗಳು ಇತ್ಯಾದಿಗಳು ಎಂದರೆ - ದೇವತೆಗಳೂ ಅಂಗಿರಸ ಋಷಿಗಳೂ ವಲ ಮತ್ತು ಪಣಿಗಳು ದುರ್ಗಮ ಸ್ಥಳಗಳಲ್ಲಡಗಿಸಿಟ್ಟಿದ್ದ ಮತ್ತು ಅವರವುಗಳನ್ನು ಭೇದಿಸಿ ತಂದ ಹೆಬ್ಬೆಳಕಿನ ಹೊಳೆವ ಸೈನ್ಯವನ್ನು ಹಾಗೂ ಸದಾ ಋಷಿಗಳಿಂದ ಪ್ರಾರ್ಥಿತವಾದ ಗವಾಶ್ವಗಳ ಸಂಕೇತಗಳು ಸೂಚಿಸುವ ಇದೇ ಬೆಳಕಿನ ಐಶ್ವರ್ಯವನ್ನು-ಮತ್ತೇನನ್ನೂ ಅಲ್ಲ. ಏಕೆಂದರೆ ಏಳನೆಯ ಪದ್ಯ ಪಂಕ್ತಿಯಲ್ಲಿ ಹೇಳಿದ ಗೋಗಳು ಅದೇ ಸೂಕ್ತದ ಆ ಋಕ್ಕಿನ ಎಂಟನೆಯ ಪಂಕ್ತಿಯಲ್ಲಿ ಬೇಡಿದ ಗೋವುಗಳಿಗಿಂತ ಭಿನ್ನವೆನ್ನಲು ಸಾಧ್ಯವಿಲ್ಲ. ಹಾಗೆ ಭಿನ್ನವೆಂದದ್ದೇ ಆದರೆ ಸೂಕ್ತಕಾರನು ಮೊದಲ ಪಂಕ್ತಿಯ ಗೋಪ್ರತಿಮೆಯನ್ನು ತನ್ನ ನಾಲಿಗೆಯಿಂದ ಹೊರಬಿದ್ದೊಡನೆಯೇ ಎರಡನೆಯ ಪಂಕ್ತಿಯಲ್ಲಿ ಮರೆತನೆಂದು ಹೇಳಬೇಕಾದೀತು.

ಕೆಲವೊಮ್ಮೆ ಋಷಿಕೃತ ಪ್ರಾರ್ಥನೆಯು ಜಲಜ್ಯೋತಿಗಾಗಿಯೂ ಮಾಡಿದ್ದಲ್ಲ, ಶ್ರೇಯಸ್ಸಿನ ಜ್ವಲದ್ ವೈಶಾಲ್ಯಕ್ಕಾಗಿಯೂ ಅಲ್ಲ ; ಆದರೆ ಜ್ವಲನ್ನೋದಕ ಶಕ್ತಿಗಾಗಿಯೇ ಮಾಡಿದ್ದು ; "ಹೇ ಸ್ವರ್ಗಪುತ್ರಿಯೇ, ಸೂರ್ಯ ಕಿರಣಗಳೊಂದಿಗೆ ಜ್ವಲನ್ನೋದಕ ಶಕ್ತಿಯನ್ನು ಯಾ ಪ್ರಬೋದಕ

---

೧. "ಗಾವಃ" ಎಂದರೆ ವೇದದಲ್ಲಿ ಬೆಳಕೆಂಬುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. "ಬೆಳಕಿನಿಂದ (ಗವಾ) ವೃತ್ರನು ಕೊಲ್ಲಲ್ಪಟ್ಟ ಮೇಲೆ ಎತ್ತಿನ ಯಾ ದನದ ಪ್ರಶ್ನೆಯೇ ಏಳದು. ದ್ವಂದ್ವಾರ್ಥದ ಬಳಕೆ (ಶ್ಲೇಷಪ್ರಯೋಗ) ಮತ್ತು ಗೋವನ್ನು ಸಂಕೇತವನ್ನಾಗಿ ಮಾಡಿಕೊಂಡದ್ದು. ಈ ಎರಡೇ ಪ್ರಶ್ನಿಸಲ್ಪಟ್ಟದ್ದು.

ಶಕ್ತಿಯನ್ನು ತಾ - "ಗೋಮತೀರ್ ಇಷ್ ಆ ವಹ ದುಹಿತರ್ ದಿವಃ, ಸಾಕಂ, ಸೂರ್ಯಸ್ಯ ರಶ್ಮಿಭಿಃ" (V.79.8) ಸಾಯಣ ವಿವರಿಸುತ್ತಾನೆ: ಇದರ ಅರ್ಥವು ಹೊಳೆವ ಆಹಾರಗಳು" ಎಂದು. ಆದರೆ ಸೂರ್ಯ ಕಿರಣಗಳೊಡನೆ ಉಷೆ ಹೊಳೆವ ಆಹಾರಗಳನ್ನು ತರುತ್ತಾಳೆ ಎನ್ನುವುದು ಅರ್ಥಹೀನ. "ಇಷ್" ಎಂದರೆ ಆಹಾರವೆಂದಾದರೆ "ಗೋಮಾಂಸಾಹಾರ" ಎಂದು ನಾವು ಅರ್ಥಮಾಡ-ಬೇಕಾಗುತ್ತದೆ. ಆದರೆ ಪ್ರಾಚೀನ ಕಾಲದಲ್ಲಿ ಗೋಮಾಂಸಾಹಾರವು ನಿಷೇಧಿಸಲ್ಪಡದಿದ್ದರೂ ಬ್ರಾಹ್ಮಣಗಳಿಂದ ಅದು ಗೊತ್ತಾದರೂ ಉತ್ತರ ಕಾಲೀನ ಹಿಂದುಗಳಿಗೆ ಅತ್ಯನಿಷ್ಟಕರ ಎಂದು ಸಾಯಣನು ಬಿಟ್ಟ ಈ ಅರ್ಥವು ಉದ್ದಿಷ್ಟಾರ್ಥವಾಗಿರಲಿಲ್ಲ. ಆ ಅರ್ಥದಂತೆ ಈ ಅರ್ಥವೂ ಹಾಸ್ಯಾಸ್ಪದವೇ ಆಗಿದೆ. "ಯಾ ನಃ ಪೀಪರದ್ ಅಶಿನಾ ಜ್ಯೋತಿಷ್ಮತೀ ತಮಸ್ ತಿರಃ ತಾಂ ಅಸ್ಮೇ ರಾಸಾಥಾಂ ಇಷಂ (I. 46.6)'' ನಮ್ಮನ್ನು ಅಂಧಕಾರದಾಚೆಗೆ ಒಯ್ಯಲು ಹೊಳೆವ ಪ್ರಚೋದನೆಯನ್ನು ಅಶ್ವಿನಿಗಳು ಕೊಡಲಿ - ಎಂಬ ಅಶ್ವಿನೀ ಪ್ರಾರ್ಥನೆಯು (ಋಗ್ವೇದದ ಇನ್ನೊಂದು ಋಕ್ ಪಂಕ್ತಿಯು) ಸಾಯಣಾರ್ಥದ ಹಾಸ್ಯಾಸ್ಪದತೆಯನ್ನು ಪ್ರಮಾಣೀಕರಿಸುತ್ತದೆ.

ಈ ಮಾದರಿಯ ಉದಾಹರಣೆಗಳಿಂದ ಜ್ಯೋತಿರ್ಗೋವಿನ ಪ್ರತಿಮೆಯು ಎಷ್ಟು ವ್ಯಾಪಕವಾಗಿತ್ತೆಂಬುದನ್ನೂ ಅದು ವೇದದ ಮಾನಸ ಶಾಸ್ತ್ರೀಯ ಅರ್ಥವನ್ನು ಅನಿವಾರ್ಯವಾಗಿ ಹೇಗೆ ಎತ್ತಿ ತೋರಿಸುತ್ತದೆ ಎಂಬುದನ್ನೂ ನಾವು ನೋಡಬಹುದು. ಆದರೂ ಒಂದು ಸಂದೇಹವು ಮಧ್ಯ ತಲೆ ಹಾಕುತ್ತದೆ. ಈ ಅನಿವಾರ್ಯ ನಿಗಮವನ್ನು ಸ್ವೀಕರಿಸಿದರೂ ಗೋವು ಬೆಳಕಿನ ಸಂಕೇತವೆಂದು ಒಪ್ಪಿಕೊಂಡರೂ ವೇದದ ಭಾಷೆಯು ಉದ್ದೇಶಿಸಿರುವಂತೆ ತೋರುವ ಕೇವಲ ದಿವಸದ ಬೆಳಕು ಎಂದು ನಾವೇಕೆ ಅರ್ಥಮಾಡಬಾರದು? ಗೋವೆಂದರೆ ಉಷಃಪ್ರಕಾಶ, ಉಷಃಪ್ರಕಾಶವೆಂದರೆ ಅಂತರ್ ಜ್ಞಾನೋದಯ ಎಂದು ದ್ವಿಪ್ರತಿಮಾಕಲ್ಪನೆಯನ್ನು ಮಾಡುವ ಕಷ್ಟವನ್ನೇಕೆ ತಂದುಕೊಳ್ಳಬೇಕು? ಋಷಿಗಳು ದಿವಸದ ಬೆಳಕನ್ನೇ ಪ್ರಾರ್ಥಿಸುತ್ತಿದ್ದರಲ್ಲದೆ, ಆಧ್ಯಾತ್ಮಿಕ ಜ್ಞಾನೋದಯವನ್ನು ಪ್ರಾರ್ಥಿಸುತ್ತಿದ್ದಿಲ್ಲ ಎಂದೇಕೆ ಅರ್ಥ ಮಾಡಬಾರದು?

ಇದಕ್ಕೆ ತಕರಾರುಗಳು ಬಹಳ ; ಅವುಗಳಲ್ಲಿ ಕೆಲವು ಮೈಮೇಲೆ ಏರಿಬರುವಂಥವುಗಳಾಗಿವೆ. ಭಾರತದಲ್ಲೇ ವೈದಿಕ ಸೂಕ್ತಗಳು ರಚಿತವಾದವು ಮತ್ತು ಉಷಃ ಕಾಲವು ಭಾರತದ ಉಷಃಕಾಲ ಹಾಗೂ ಇರುಳು ಭಾರತದ ಹತ್ತು ಹನ್ನೆರಡು ಗಂಟೆಗಳ ಸಂಕ್ಷಿಪ್ತ ರಾತ್ರಿ ಎಂದು ಭಾವಿಸಿದರೆ, ವೈದಿಕ ಋಷಿಗಳು ಬರ್‌ಬರರು, ಕತ್ತಲ ಭಯದಿಂದ ನಡುಗುತ್ತಿದ್ದವರು, ಆ ಕಾಳ ರಾತ್ರಿಯಲ್ಲಿ ದೆವ್ವಗಳಿರುತ್ತವೆ ಎಂದು ನಂಬಿದವರು ರಾತ್ರಿ-ದಿನಗಳ ಚಕ್ರಾರಪಂಕ್ತಿಗತಿಯನ್ನರಿಯದವರೂ (ಅವಿನ್ನೂ ಚೆನ್ನಾಗಿ ಸೂಕ್ತೋಕ್ತವಾಗಿವೆ) ಮತ್ತು ತಮ್ಮ ಪ್ರಾರ್ಥನೆ ಹಾಗೂ ಯಜ್ಞಗಳಿಂದಲೇ ಆಕಾಶದಲ್ಲಿ ಸೂರ್ಯೋದಯವಾಗುತ್ತದೆ ಮತ್ತು ಉಷೆಯು ತನ್ನ ಸೋದರಿಯಾದ ರಾತ್ರಿಯನ್ನಾಲಿಂಗಿಸಿದ್ದರಿಂದಲೇ ಉದಯಿಸಿದಳು - ಎಂಬಂಥ ದಯಾದೃಷ್ಟಿಯ ರಿಯಾಯತಿಯ ಆಲೋಚನೆಗಳಿಂದ ನಾವು ವೇದವನ್ನು ಅರ್ಥೈಸ ಹೊರಡಬೇಕಾಗುವುದು. ಆದರೂ ಆ ಋಷಿಗಳು ದೇವತೆಗಳು ತಪ್ಪದೆ ಪಾಲಿಸುವ ಕಾರ್ಯನಿಯಮವನ್ನು ಹೇಳುತ್ತಾರೆ ಮತ್ತು ಉಷೆಯು ಯಾವಾಗಲೂ ಸತ್ಯದ ಸಾರ್ವಕಾಲಿಕ ವಿಧಿಯನ್ನು ಅನುಸರಿಸುವುದನ್ನು ಉಲ್ಲೇಖಿಸುತ್ತಾರೆ. "ನಾವೀ ಅಂಧಕಾರದ ಆಚೆಯ ದಡಕ್ಕೆ

ದಾಟಿ ಬಂದಿದ್ದೇವೆ ಎಂದು ಸಂತೋಷದಿಂದ ಉದ್ಗರಿಸಿದ್ದನ್ನು ಕೇವಲ ಸ್ವಾಭಾವಿಕವಾದ ದೈನಿಕ ಸೂರ್ಯೋದಯವನ್ನು ಕುರಿತು ಇಂಥ ಸೂಕ್ತಗಳನ್ನು ವೈದಿಕ ಋಷಿಗಳು ಆಶೆಪಟ್ಟುಕೊಂಡು ರಚಿಸಿದರು ಎಂದು ನಾವು ಊಹಿಸಬೇಕಾಗುವುದು. ವೈದಿಕ ಋಷಿಗಳು ಉಷಃ ಕಾಲದಲ್ಲಿ ಯಜ್ಞಮಾಡಲು ಕುಳಿತು ಆಗಲೇ ಬಂದ ಬೆಳಕಿಗಾಗಿ ಪ್ರಾರ್ಥಿಸಿದರು ಎಂದು ನಾವು ಕಲ್ಪಿಸಬೇಕಾಗುವುದು. ನಾವೀ ಅಸಂಭಾವ್ಯತೆಗಳೆಲ್ಲವನ್ನೂ ಒಪ್ಪಿದರೆ ಅಂಗಿರಸ ಋಷಿಗಳು ೯-೧೦ ತಿಂಗಳುಗಳವರೆಗೆ (ಯಜ್ಞ ಮಾಡುತ್ತಾ) ಕುಳಿತ ಮೇಲೆಯೇ ಕಳೆದು ಹೋದ ಬೆಳಕನ್ನೂ ಸೂರ್ಯನನ್ನೂ ಮರಳಿ ಪಡೆದರು ಎಂಬ ಹೇಳಿಕೆಯು ನಮಗೆದುರಾಗುತ್ತದೆ. "ಗೂಳ್ಹಂ ಜ್ಯೋತಿಃ ಪಿತರೋ ಅನ್ವವಿಂದನ್, ಸತ್ಯಮಂತ್ರಾ ಅಜಯನ್ ಉಷಾ ಸಂ=ನಮ್ಮ ಪಿತೃಗಳು ಗುಪ್ತ ಪ್ರಕಾಶವನ್ನು ಕಂಡುಹಿಡಿದರು ; ತಮ್ಮ ವಿಚಾರಸ್ಥ ಸತ್ಯದಿಂದ ಉಷೆ ಹುಟ್ಟುವಂತೆ ಮಾಡಿದರು (VII.76.4) ಎಂಬಲ್ಲಿ ಹೇಳಿದಂತೆ ನಮ್ಮ ಪಿತೃಗಳು ಸತತವಾಗಿ ಬೆಳಕನ್ನು ಕಂಡುಹಿಡಿದದ್ದನ್ನು ಒತ್ತಿ ಹೇಳಿದ್ದಕ್ಕೆ ನಾವು ಏನೆಂದು ಅರ್ಥ ಮಾಡಬೇಕು? ಯಾವುದಾದರೂ ವಾಙ್ಮಯದಲ್ಲಿಯ ಕವನಸಂಕಲನದಲ್ಲಿ ನಮಗಿಂಥ ಪದ್ಯಪಂಕ್ತಿ ಸಿಕ್ಕಿದರೆ, ನಾವು ಕೂಡಲೇ ಅದಕ್ಕೆ ಮಾನಸಶಾಸ್ತ್ರೀಯ ಅಥವಾ ಆಧ್ಯಾತ್ಮಿಕ ಅರ್ಥವನ್ನು ಮಾಡಿಬಿಡುತ್ತೇವೆ. ವೇದವನ್ನು ಅನ್ಯದೃಷ್ಟಿಯಿಂದ ನೋಡಲು ನ್ಯಾಯವಾದ ಕಾರಣವಿಲ್ಲ.

ಹಾಗಲ್ಲದೆ, ನಾವೇನಾದರೂ ವೈದಿಕ ಸೂಕ್ತಗಳಿಗೆ ನಿಸರ್ಗೋಪಾಸನೆಯ ಅರ್ಥವನ್ನಲ್ಲದೆ ಬೇರೆ ಯಾವ ಅರ್ಥವನ್ನೂ ಕೊಡದೆ ಹೋದರೆ ವೈದಿಕ ಉಷೆಯೂ ರಾತ್ರಿಯೂ ಭಾರತದ ಉಷೆ-ರಾತ್ರಿಗಳೆನ್ನಿಸಲಾರವು ; ಆರ್ಕ್‌ಟಿಕ್ ಪ್ರದೇಶದಲ್ಲಿ ಮಾತ್ರ ಈ ನೈಸರ್ಗಿಕ ಪರಿಸ್ಥಿತಿಗಳಿಗೆ ಮತ್ತು ಅಂಗಿರಸರ ಹೇಳಿಕೆಗಳಿಗೆ ಏನಾದರೂ ಅರ್ಥ ಹೊಳೆದೀತು. ಆದರೆ ಆರ್ಕ್‌ಟಿಕ್ ಮೂಲ ನಿವಾಸದ ಸ್ಮೃತಿಗಳು ವೇದದ ಬಾಹ್ಯಾರ್ಥದಲ್ಲಿ ಹೊಕ್ಕದ್ದು ಅತ್ಯಂತ ಸಂಭವನೀಯವೆಂದು ತಿಳಿದರೂ ಆರ್ಕ್‌ಟಿಕ್ ಸಿದ್ಧಾಂತವೂ ನಿಸರ್ಗದಿಂದ ತೆಗೆದುಕೊಂಡ ಪ್ರಾಚೀನ ಪ್ರತಿಮೆಗಳ ಹಿಂದೆ ಅಂತರರ್ಥವೊಂದಿದೆ ಎಂಬುದನ್ನು ತಳ್ಳಿ ಹಾಕುವುದೂ ಇಲ್ಲ - ಉಷೆಗರ್ಪಿಸಿದ ಸೂಕ್ತಗಳಿಗೆ ಹೆಚ್ಚು ಸಮನ್ವಿತವೂ ನೇರವಾದುದೂ ಆದ ವಿವರಣೆ ಅಗತ್ಯವೆಂಬುದನ್ನು ಅಲ್ಲಗಳೆಯುವುದೂ ಇಲ್ಲ.

ಉದಾ-ಪ್ರಸ್ಕಣ್ವ ಕಣ್ವನ ಸೂಕ್ತವನ್ನು ತೆಗೆದುಕೊಳ್ಳೋಣ - ಅದು ಅಶ್ವಿಗಳನ್ನು ಕುರಿತು ಬರೆದದ್ದು (I.46) ಅದರಲ್ಲಿ ಉಜ್ವಲಬೋದನೆ ನಮ್ಮನ್ನು ತಮಃಸಾಗರದ ಆಚೆಯ ದಡಕ್ಕೆ ಹೊತ್ತೊಯ್ದು ಸಂಗತಿಯು ಉಲ್ಲೇಖಿಸಲ್ಪಟ್ಟಿದೆ. ಈ ಸೂಕ್ತವು ವೈದಿಕ ಕಲ್ಪನೆಯಾದ ಉಷೋರಾತ್ರಿಯೊಡನೆ ನಿಕಟವಾಗಿ ಹೆಣೆದುಕೊಂಡಿದೆ. ನದೀತರಣ, ಸೂರ್ಯೋದಯ, ಉಷೋಶ್ವಿಸಂಬಂಧ, ಯೋಗ ಪರಿಣಾಮ ಮತ್ತು ಸೋಮಮಧ್ಯದ ಸಾಮುದ್ರಿಕ (ಸಮುದ್ರೀಯ) ಸಾರ-ಎಂಬಂಥ ಸೂರ್ಯಪಥಕ್ಕೊಯ್ಯುವ ಅನೇಕ ಪಟ್ಟಭದ್ರ ಪ್ರತಿಮೆಗಳಿಂದ ತುಂಬಿಹೋಗಿವೆ.

"ಅರೇ, ಉದಾತ್ತತಮಳಾದ ಉಷೆಯು ಸ್ವರ್ಗದಲ್ಲಿ ಹರ್ಷನಿರ್ಭರಳಾಗಿ ಪ್ರಕಟವಾಗಿದ್ದಾಳೆ ; ಎಲೈ ಅಶ್ವಿಗಳೇ, ನಾನು ನಿಮ್ಮ ಅನಂತ ವೈಶಾಲ್ಯವನ್ನು ಸಮರ್ಥಿಸುತ್ತೇನೆ, ದೃಢಪಡಿಸುತ್ತೇನೆ. ನಿಮ್ಮ ತಾಯಿ ಮಹೋದಧಿ, ನೀವು ಕಾರ್ಯಸಾಧಕರು, ಮಾನಸೋತ್ತರ ಪ್ರಜ್ಞಾಸ್ತರಕ್ಕೆ ಮಾನಸದ ಮೂಲಕ ನೆಗೆದು ಪರಮ ಸುಖಗಳ ನೆಲೆಯಲ್ಲಿರುವವರು ನೀವು ಮತ್ತು ನೀವು ದಿವ್ಯರು. ಆ

ಸುಖಸಾರವನ್ನು ವಿಚಾರದಿಂದ (ಚಿಂತನದಿಂದ) ಹುಡುಕಿದವರು. ಪ್ರಯಾಣದ ಒಡೆಯರೇ, ನೀವು ಪದವನ್ನು ಮಾನಸೀಕರಿಸುತ್ತೀರಿ. ಈ ಪದವು ನಿಮ್ಮ ಚಿಂತನಗಳನ್ನು ಕರಗಿಸುವ ಪದಾರ್ಥ. ನೀವು ಸೋಮವನ್ನು ರಭಸದಿಂದ ಕುಡಿಯಿರಿ. ನಮಗೆ ಆ ಪ್ರಬೋದಕ ಶಕ್ತಿಯನ್ನು ಕೊಡಿರಿ. ಎಲೈ ಅಶ್ವಿನೀ ದೇವತೆಗಳೇ, ಅದು ಪ್ರಕಾಶಮಯ ; ನಮ್ಮನ್ನು ಅಂಧಕಾರದಾಚೆಗೆ ಒಯ್ಯುತ್ತದೆ. ನಿಮ್ಮ ಹಡಗಿನಲ್ಲಿ ನಮಗಾಗಿ ಮಾನಸ ಚಿಂತನಗಳಿಂದಾಚೆಗೆ ತಲುಪಿರಿ. ನಿಮ್ಮ ರಥಕ್ಕೆ ಹೇ ಅಶ್ವಿಗಳೇ, ಕುದುರೆಗಳನ್ನು ಕಟ್ಟಿರಿ. ನಿಮ್ಮ ತೇರು ಸ್ವರ್ಗದಲ್ಲಿ ಒಂದು ಅತ್ಯಗಲ ಹಾಯಿಯುಳ್ಳ ಹಡಗಾಗುತ್ತದೆ. ಆ ಮೂಲಕ ಅದು ನದಿಗಳನ್ನು ದಾಟುತ್ತದೆ. ವಿಚಾರದಿಂದ ದಿವ್ಯ ಹರ್ಷದ ಕುದುರೆಗಳು ಕಟ್ಟಲ್ಪಟ್ಟಿವೆ. ದಿವ್ಯ ಜಲಗಳ ಸ್ಥಾನದಲ್ಲಿ ದಿವ್ಯಹರ್ಷದ ಸೋಮಶಕ್ತಿಗಳು ಸಾರಭೂತವಾಗಿ ಬಂದು ಕುಳಿತಿವೆ. ಆದರೆ ನಿಮ್ಮನ್ನು ಮುಚ್ಚಿಕೊಳ್ಳಲು ಮಾಡಿಕೊಂಡ ನಿಮ್ಮ ಮುಸುಕನ್ನು ನೀವೆಲ್ಲಿ ಬಿಸುಡುವಿರಿ? ಇಲ್ಲಿ ಸೋಮಾಹ್ಲಾದಕ್ಕಾಗಿ ದಿವ್ಯಜ್ಯೋತಿ ಹುಟ್ಟಿದೆ ; - ಕಪ್ಪಾಗಿದ್ದ ಸೂರ್ಯನು ದಿವ್ಯಸ್ವರ್ಣದತ್ತ ತನ್ನ ನಾಲಿಗೆಯನ್ನು ಬಾಣವೇಗದಿಂದ ಚಾಚಿದ್ದಾನೆ. ದಿವ್ಯಸತ್ಯದ ಮಾರ್ಗವು ಬಂದಿದೆ. ಅದರ ಮೂಲಕ ನಾವು ಆಚೆಯ ದಡವನ್ನು ತಲುಪುವೆವು. ಸ್ವರ್ಗದ ಮೂಲಕ ಎಲ್ಲಾ ವಿಧದಿಂದ ಅಗಲವಾದ ಹಾದಿಯು ಕಾಣಿಸಿತು. ಅಶ್ವಿಗಳ ಉತ್ತರೋತ್ತರಾವ ತಾರಗಳೆಡೆಗೆ (ಉತ್ತರೋತ್ತರಾವಿರ್ಭಾವಗಳೆಡೆಗೆ) ಸಾಧಕನು ಸತ್ತಾವೃದ್ಧಿ ಹೊಂದುತ್ತಾ ಹೋಗುತ್ತಾನೆ. ಸೋಮಲಬ್ಧ ಆನಂದೋದ್ರೇಕದ ತೃಪ್ತಿ ಹೆಚ್ಚುತ್ತಾ ಹೋದ ಹಾಗೆ ಅಶ್ವಿಗಳ ಉತ್ತರೋತ್ತರ (ಅಧಿಕ ಪ್ರಭಾವಕ) ಆವಿರ್ಭಾವವಾಗುತ್ತಲೇ ಹೋಗುತ್ತದೆ. ಎಲೈ ಅಶ್ವಿಗಳೇ, ಸರ್ವೋಜ್ವಲ ಸೂರ್ಯನಲ್ಲಿ ಬೆಳಗುತ್ತಿರುವ ನೀವು ಸೋಮಪಾನ ಮಾಡಿ ನಮ್ಮ ಮಂತ್ರೋಕ್ತಿಯ ದೆಸೆಯಿಂದ (ಶಬ್ದದಿಂದ, ಪದದಿಂದ) ಮಾನವಕುಲದಲ್ಲಿ ಆನಂದಜನಕರಾಗಿ ಬನ್ನಿರಿ. ನೀವು ನಮ್ಮೆಲ್ಲಾ ಲೋಕಗಳನ್ನು ವ್ಯಾಪಿಸಿದಾಗ ಉಷೆ ನಿಮ್ಮ ಕೀರ್ತಿ ವೈಭವಗಳಿಗನುಗುಣವಾಗಿ ನಮ್ಮಲ್ಲಿಗೆ ಬರುತ್ತಾಳೆ. ನೀವು ಆ ರಾತ್ರಿಗಳಿಂದ ದಿವ್ಯ ಸತ್ಯಗಳನ್ನು ಗೆಲ್ಲಿರಿ. ಓ ಅಶ್ವಿಗಳೇ, ಒಡೆಯದ ಸಮಗ್ರತೆಯುಳ್ಳ ಚಿತ್ತರಗಳಿಂದ ನೀವಿಬ್ಬರೂ ಒಟ್ಟಾಗಿ ಪ್ರಶಾಂತಿಯನ್ನು ನಮಗೆ ದಯಪಾಲಿಸಿರಿ."

ಇದು ಸೂಕ್ತದ ನೇರವೂ ಸ್ವಾಭಾವಿಕವೂ ಆದ ಅರ್ಥ. ವೈದಿಕ ಸಿದ್ಧಾಂತದ ಮುಖ್ಯ ಕಲ್ಪನೆಗಳನ್ನೂ ಪ್ರತಿಮೆಗಳನ್ನೂ ನೆನಪಿಟ್ಟುಕೊಂಡರೆ, ಈ ಸೂಕ್ತದ ಉದ್ದೇಶವೇನೆಂಬುದನ್ನು ಅರ್ಥಮಾಡಿಕೊಳ್ಳಲು ಕಷ್ಟವಾಗಲಾರದು. ರಾತ್ರಿಯು ಸ್ಪಷ್ಟವಾಗಿ ಒಳಗತ್ತಲೆಯ ಪ್ರತಿಮೆ ; ಉಷೆ ಬರುವುದರಿಂದ ರಾತ್ರಿಗಳಿಂದ ದಿವ್ಯಸತ್ಯಗಳನ್ನು ಗೆದ್ದುಕೊಳ್ಳಲು ಸಾಧ್ಯವಾಗುತ್ತದೆ. ಇದೇ ಸೂರ್ಯೋದಯ. ಅದು ಮೊದಲು ಅಸ್ಪಷ್ಟತೆಯಲ್ಲಿ ಅಡಗಿ ಹೋಗಿತ್ತು, ನಷ್ಟವಾಗಿ ಹೋಗಿತ್ತು. ಪರಮಸತ್ಯವೆಂಬ ಸೂರ್ಯನೇ ದೇವತೆಗಳೂ ಅಂಗಿರಸ ಋಷಿಗಳೂ ಕಳೆದುಕೊಂಡು ಪುನಃ ಪಡೆದದ್ದು ; ಇದನ್ನೇ ಕಳೆದು ಹೋದ ಸೂರ್ಯನೆಂಬ ಸುಪರಿಚಿತ ಪ್ರತಿಮಾಲಂಕಾರವು ಸೂಚಿಸುತ್ತದೆ. ಆ ಸೂರ್ಯನೀಗ ತನ್ನ ಅಗ್ನಿಜಿಹ್ವೆಯನ್ನು ಹಿರಣ್ಮಯ ಬೆಳಕಿನತ್ತ ಚಾಚುತ್ತಾನೆ. ಹಿರಣ್ಯ (ಬಂಗಾರ) ಮೇಲ್ಬೆಳಕಿನ ಸ್ಥೂಲ ಸಂಕೇತ ; ಅದು ಸತ್ಯಸುವರ್ಣ. ದೇವತೆಗಳನ್ನು ವೈದಿಕ ಋಷಿಗಳು ಬೇಡುವುದು ಚಿನ್ನದ ನಾಣ್ಯಕ್ಕಾಗಿ ಅಲ್ಲ. ಈ ರತ್ನದ ಕೊಪ್ಪರಿಗೆಗಾಗಿ, ರತ್ನಭಾಂಡಾಗಾರಕ್ಕಾಗಿ. ಅಶ್ವಿಗಳು ಒಳ ಅಸ್ಪಷ್ಟತೆಯಿಂದ ಬೆಳಕು ಜೀರುವವರೆಗಿನ ಮಹಾ ಪರಿವರ್ತನವನ್ನು ಮಾಡುವವರು. ಅವರು ಮಾನಸದ ಹಾಗೂ ಪ್ರಾಣದ ಹರ್ಷ ನಿರ್ಭರವಾದ

ಊರ್ಧ್ವ ಮುಖ ಕ್ರಿಯೆಗಳನ್ನು ಸುರಿದ ಆನಂದಮದ್ಯದ ಮೂಲಕ, ಆ ಮದ್ಯವನ್ನು ಕುಡಿದು, ಮಾಡುವ ಒಡೆಯರು. ಅವರು ಅಭಿವ್ಯಂಜಕ ಪದವನ್ನು ಮಾನಸೀಕರಿಸುತ್ತಾರೆ ; ಈ ಕತ್ತಲಾಚೆಗಿರುವ ಶುದ್ಧ ಮನದ ಸ್ವರ್ಗದೊಳಗೆ ನಮ್ಮನ್ನು ಅವರು ಕರೆದೊಯ್ಯುತ್ತಾರೆ ಮತ್ತು ಅಲ್ಲಿ ಅವರು ಮಹಾವಿಚಾರದ ಮೂಲಕ ಆನಂದ ಶಕ್ತಿಗಳನ್ನು ಕೆಲಸದಲ್ಲಿ ತೊಡಗಿಸುತ್ತಾರೆ. ಅವರು ಸ್ವರ್ಗೀಯ ಜಲಗಳನ್ನು ದಾಟುವಾಗ ಮನದ ಆಲೋಚನೆಗಳೆಲ್ಲವನ್ನೂ ಕರಗಿಸುತ್ತಾರೆ ; ಈ ಮುಸುಕನ್ನೂ ಅವರು ತೆಗೆದು ಬಿಸಾಡುತ್ತಾರೆ. ಅವರು ಮಹಾಮನದ ಆಚೆಗೆ ಹೋಗುತ್ತಾರೆ ; ಮತ್ತು ಕೊನೆಯ ಸಿದ್ಧಿಯನ್ನು ನದೀತರಣ ಎನ್ನಲಾಗಿದೆ. ಆ ತರಣವೇ ಶುದ್ಧ ಮನದ ಸ್ವರ್ಗದ ಮೂಲಕ ನಡೆಯುವ ಪರಮಸತ್ಯಮಾರ್ಗಕ್ರಮಣ; ಆ ಸತ್ಯವಿರುವುದು ಆಚೆಯ ದಡದಲ್ಲಿ. "ಪರಮಾ ಪರಾವತ್=ಅತ್ಯುನ್ನತ ಸರ್ವೋದಾತ್ತತೆಯನ್ನು ತಲುಪುವವರೆಗೆ ಮಾನವ್ಯ ಮಹಾಪ್ರಸ್ಥಾನದಿಂದ, ಮಹಾಭಿನಿಷ್ಕ್ರಮಣದಿಂದ, ಮಹಾಪ್ರವಾಸದಿಂದ, ಹಿಂದೆಗೆದು ವಿಶ್ರಮಿಸೆವು."

ಈ ಸೂಕ್ತದಲ್ಲಷ್ಟೇ ಅಲ್ಲ-ಎಲ್ಲೆಲ್ಲೂ ಉಷೆಯು ಸತ್ಯವಾಹಿನಿಯಾಗಿ ಬರುತ್ತಾಳೆ, ಸತ್ಯವನ್ನು ತರುವವಳಾಗಿ ಬರುತ್ತಾಳೆ. ಅವಳೇ ಸ್ವತಃ ಪರಮಸತ್ಯದ ಬಹಿಃ ಪ್ರಕಾಶ. ಅವಳು ದಿವ್ಯ ಸ್ವರೂಪದ ಉಷೆ, ಉಷಾದೇವಿ. ಭೌತಿಕ ಉಷಃಕಾಲವು ಕೇವಲ ಅವಳ ನೆರಳು ಮತ್ತು ಭೌತ ಜಗತ್ತಿನಲ್ಲಿ ಅವಳ ಸಂಕೇತ ಮಾತ್ರ.



## ಅಧ್ಯಾಯ-೧೩

# ಉಷೆ ಮತ್ತು ಸತ್ಯ

ವೇದದಲ್ಲಿ ಉಷೆಯನ್ನು ಪುನಃ ಪುನಃ ಗೋವುಗಳ ತಾಯಿಯೆಂದು ವರ್ಣಿಸಲಾಗಿದೆ. ಹಾಗಿದ್ದರೆ, ಗೋವು ಭೌತಿಕ ಬೆಳಕಿನ ಸಂಕೇತವಾಗಿರಬೇಕು ಅಥವಾ ಆಧ್ಯಾತ್ಮಿಕ ದರ್ಶನದ ಪ್ರತೀಕವಾಗಿರಬೇಕು. ಉಕ್ತ ಪದಸಂಹತಿಗೆ ಅವಳು ಭೌತಿಕ ಹಗಲಿನ ಕಿರಣಗಳ ಮೂಲ ಯಾ ತಾಯಿ ಎಂದೋ ಇಲ್ಲವಾದರೆ, ಅಂತರ್ದರ್ಶನದ ವೈಭವ-ಸ್ಪಷ್ಟತೆಗಳ ಪ್ರತಿನಿಧಿಯಾದ ಸಮುದಾತ್ತ ದಿನದ ಕಿರಣಗಳನ್ನು ಹುಟ್ಟಿಸುವವಳೆಂದೋ ಅರ್ಥ ಮಾಡಬೇಕಾಗುತ್ತದೆ. ಆದರೆ ವೇದವು ಅದಿತಿಯನ್ನು ಗೋವೆಂದೂ ಸಾರ್ವಮಾತೃಕೆಯೆಂದೂ ವರ್ಣಿಸಿರುವುದಲ್ಲದೆ, ಅವಳು ಸರ್ವ ದೇವಮಾತೆಯೆಂದೂ ಹೇಳಿದೆ. ಅವಳು ಸರ್ವೋಚ್ಚ ಬೆಳಕು ಮತ್ತು ಎಲ್ಲ ಕಿರಣಗಳೂ ಅವಳಿಂದಲೇ ಹೊರ ಹೊರಡುತ್ತವೆ. ಮಾನಸಶಾಸ್ತ್ರ ರೀತ್ಯಾ ಅದಿತಿಯು ಸರ್ವೋನ್ನತ ಯಾ ಅನಂತಪ್ರಜ್ಞೆ, ಅನಂತ್‌ಚಿತ್, ದೇವಮಾತೆ ; ತದ್ವಿರುದ್ಧೆಯಾದವಳು ದಿತಿ[೧] ಯಾ ದನು[೨]. ದಿತಿಯು ದ್ವಿದಾಭೂತ ಚಿತ್ (ಪ್ರಜ್ಞೆ) ; ವೃತ್ರ ಮತ್ತು ಇತರ ದಾನವರ ತಾಯಿ. ದಾನವರು ಮಾನವರ ಹಾಗೂ ದೇವತೆಗಳ ಪ್ರಗತಿಯ ಶತ್ರುಗಳು. ಇನ್ನೂ ಹೆಚ್ಚಿನ ಸರ್ವಸಾಮಾನ್ಯಾರ್ಥದಲ್ಲಿ ಅದಿತಿಯು ಭೌತಿಕ ಪ್ರಜ್ಞೆಯಿಂದ (ಅನ್ನಮಯಕೋಶದಿಂದ) ಹಿಡಿದು ಮೇಲಕ್ಕೇರುತ್ತಾ ಹೋಗುವ ಪ್ರಜ್ಞಾ ಸಂಕೇತಗಳಾದ ಏಳು ದನಗಳು (ಸಪ್ತಗಾವಃ), ಮತ್ತು ಅವಳಿಗೆ ಏಳು ಹೆಸರುಗಳು ಹಾಗೂ ಏಳು ನೆಲೆಗಳು (ಆಸನಗಳು) ಇವೆಯಂತೆ. ದನಗಳ ತಾಯಿಯಾದ ಉಷೆಯು ಅದಿತಿಯೆಂಬ ಪರಮ ಪ್ರಕಾಶದ, ಪರಂಜ್ಯೋತಿಯ ಒಂಧು ಶಕ್ತಿರೂಪವಷ್ಟೇ ಆಗಬಹುದು-ಆಗಬೇಕು. ಅವಳನ್ನು ಋಗ್ವೇದದಲ್ಲಿ (I.113.19) "ಮಾತಾ ದೇವಾನಾಂ ಅದಿತೇರನೀಕಂ = ಅದಿತಿಯು ದೇವಮಾತೆ, ದೇವರೂಪ ಯಾ ದೇವಶಕ್ತಿ" ಎಂದು ವಾಸ್ತವಿಕವಾಗಿ ವರ್ಣಿಸಲಾಗಿದೆ.

---

೧. ನೈರುಕ್ತವಾಗಿ ದಿತಿಯು ಅದಿತಿಯ ಎದುರಾಳೆಂದಲ್ಲ ; ಅದಿತಿಯು ಅದ್ ಧಾತುವಿನಿಂದ ಹುಟ್ಟಿದರೆ, ದಿತಿಯು ದಿಧಾತುವಿನಿಂದ ಹುಟ್ಟಿದ್ದು - ಈ ಪದಗಳ ಧಾತುಗಳೇ ಬೇರೆ ಬೇರೆ.

೨. ಅದಿತಿಯು ದಾ ಅಥವಾ ದೋ ಎಂಬ ಧಾತುವಿನಿಂದ ಹುಟ್ಟಿತೆನ್ನುತ್ತಾನೆ. ಅದ್ ಧಾತುವಿನಿಂದ ಹುಟ್ಟಿದ ಅದಿತಿಗೆ ಮಲಗುವವಳೆಂದರ್ಥವಂತೆ. ಅದಿತಿ = ಸಮಗ್ರಳು, ಮುಕ್ತಳು, ದಿತಿ = ಅಸಮಗ್ರಳು, ಅಮುಕ್ತಳು. (ಅನುವಾದಕ)

-Sir M.M. Williams-A SKT Eng Dict.

ಆದರೆ ಮನದಲ್ಲಿ ಮಿಂಚು ಸಂಚಲಿಸುವಂತೆ ಮಾಡುವ ಉದಾತ್ತ ಯಾ ಅವಿಭಕ್ತ ಪ್ರಜ್ಞೆಯು ಯಾವಾಗಲೂ ಪರಮಸತ್ಯಸ್ವರೂಪಿಣಿ. ಹಾಗಿದ್ದರೆ ಋಗ್ವೇದವು ಪರಮ ಸತ್ಯದ ಬಗೆಗೆ ಹೇಳುವಾಗಲೆಲ್ಲಾ ಈ ಉದ್ಬೋಧಕ ಉಷೆಯ ಸಂಬಂಧ ಪುನಃ ಪುನಃ ಬರಲೇಬೇಕು. ಅಂಥ ಋತದ ಸಂಬಂಧ ಬಂದಿರುವುದನ್ನು ನಾವು ಕಂಡೇ ಕಾಣುತ್ತೇವೆ. "ಸತ್ಯ ಪಥಾನುಸಾರಿಣಿ" ಎಂದು ಉಷೆಯನ್ನು ಮೊಟ್ಟಮೊದಲು ಹೇಳಲಾಗಿದೆ-ಅದರಲ್ಲೂ ಪರಿಣಾಮಕಾರಿಣಿಯಾದ ಸತ್ಯಮಾರ್ಗ ಗಾಮಿನಿ ("ಋತ ಸ್ಯ ಪಂಥಾಂ ಅನ್ವೇತಿ ಸಾಧು" (I.124.3.) ಇಲ್ಲಿ ಯಜ್ಞಾದಿಕರ್ಮೀಯ ಅಥವಾ ಪ್ರಕೃತಿ ಪೂಜಾ ಪದ್ಧತಿಯ ಋತಾರ್ಥವು ಅನ್ವಯಿಸಲಾರದು. ಅದರ ಸೂಚನೆಯೇ ಹೊಂದದು. ಉಷೆಯು ಯಜ್ಞಪಥವನ್ನೋ ಜಲಪಥವನ್ನೋ ಅನುಸರಿಸಿ ಹೋಗುತ್ತಾಳೆ ಎಂಬ ಪುನರುಕ್ತಿಗಳಿಗೆ ಇಲ್ಲಿ ಅರ್ಥವೇ ಇಲ್ಲ. "ಪಂಥಾ ಋತಸ್ಯ" - ಸತ್ಯದ ಅಲ್ಲ ಸೂರ್ಯನ ಎಂದರ್ಥ ಮಾಡಿದರೆ ಮಾತ್ರ ಉಕ್ತ ವಾಚ್ಯಾರ್ಥದಿಂದ ನಾವು ಪಾರಾಗಬಹುದು. ಆದರೆ ವೇದವು ಸೂರ್ಯನು ಉಷೆಯ ದಾರಿಯನ್ನು ಅನುಸರಿಸುವನೆಂಬ ರೂಪಕೋಕ್ತಿಯನ್ನು ಹೇಳಿದೆ. ಇದು ಭೌತಿಕ ಉಷಃ ಕಾಲವನ್ನು ಕಾಣುವ ಮನುಷ್ಯನ ಪ್ರತಿಮಾಪರ ದೃಷ್ಟಿಗೆ ಸಹಜ. ಅಲ್ಲದೆ, ಇತರ ಅವತರಣಿಕೆಗಳಲ್ಲಿ ಈ ಪದ ಸಂಹತಿಯು ಸತ್ಯಪಥವೆಂದು ಸ್ಪಷ್ಟವಾಗಿ ತೋರುವಂತಿಲ್ಲದಿದ್ದರೂ ಮಾನಸಶಾಸ್ತ್ರೀಯ ಅರ್ಥವು ತಲೆ ಹಾಕಿಯೇ ಹಾಕುತ್ತದೆ. ಹೇಗೆಂದರೆ ಉಷಸ್ಸಿನ ಜ್ಞಾನೋದಯವು ಸತ್ಯದ, ಸತ್ಯೇಶನ ಯಾ ಸೂರ್ಯ ಸವಿತೃವಿನ ಮಾರ್ಗವನ್ನು ಅನುಸರಿಸುತ್ತದೆ.

"ಋತಸ್ಯ ಪಂಥಾಂ ಅನ್ವೇತಿ ಸಾಧು ಪ್ರಜಾನತೀವ ನದಿಶೋಮಿನಾತಿ-ಅವಳು ಸತ್ಯದ ಪಥದಲ್ಲಿ ಹೋಗುತ್ತಾಳೆ ; ತಿಳಿದವಳಂತೆ ಅವಳು ಪ್ರದೇಶಗಳನ್ನು ಇತಿಮಿತಿಗೊಳ-ಪಡಿಸುವುದಿಲ್ಲ" (I.124.3) ಎಂಬ ಅದೇ ಕಲ್ಪನೆಯು ಪುನರುಕ್ತವಾದರೂ ಹೆಚ್ಚು ಸ್ಪಷ್ಟವಾಗಿ ಮತ್ತು ಹೆಚ್ಚು ಮಾನಸಶಾಸ್ತ್ರೀಯ ಸೂಚನೆಗಳೊಂದಿಗೆ ಅಚ್ಚುಕಟ್ಟಾಗಿ ವೇದವು ಹೇಳಿದೆ. "ದಿಶಃ" ಎಂಬುದಕ್ಕೆ ಎರಡರ್ಥಗಳಿರುವುದನ್ನು ನಾವು ಕಾಣಬಹುದು. ಆದರದನ್ನಿಲ್ಲಿ ಒತ್ತಾಯಿಸ-ಬೇಕಾಗಿಲ್ಲ. ಉಷೆಯು ಸತ್ಯಪಥಾನುಯಾಯಿನಿ ; ಅವಳಿಗೀ ಪ್ರತ್ಯಕ್ಷ ದರ್ಶನವಿರುವುದರಿಂದ ಅವಳು ಅನಂತವನ್ನು ಇತಿಮಿತಿಗೊಳಪಡಿಸುವುದಿಲ್ಲ. ಅನಂತವೆಂದರೆ ಬೃಹತ್ - ಅವಳು ಅದರ ಪ್ರಕಾಶ. ಇದೇ ಉಕ್ತ ಋಕ್ಪಂಕ್ತಿಯ ನಿಜವಾದ ಅರ್ಥ ಎಂಬುದನ್ನು ನಿಃಸಂದಿಗ್ಧವಾಗಿ, ಸ್ಪಷ್ಟವಾಗಿ ಅಪಾರ್ಥಕ್ಕೆಡೆಗೊಡದಂತೆ (V.80.1) ಐದನೆಯ ಮಂಡಲದ ಒಂದು ಋಕ್ಕು ಸಿದ್ಧಮಾಡಿ ತೋರಿಸುತ್ತದೆ : ಅಲ್ಲಿ ವರ್ಣಿತೆಯಾದ ಉಷೆಯು "ದ್ಯುತದ್ ಯಾಮಾನಾಂ ಬೃಹತೀಂ ಋತೇನ ಋತಾವರೀಂ ಸ್ವರ್ ಆವಹಂತೀಂ - ಲಸಚ್ಚಲನೆ, ಸಸತ್ಯ-ವಿಸ್ತಾರೆ, ಸತ್ಯದಲ್ಲಿ ಪರಮೋನ್ನತೆ ಯಾ ಸತ್ಯಸಂಪನ್ನೆ" ಮತ್ತು ತನ್ನೊಡನೆ ಸ್ವರ್ ಎಂಬುದನ್ನು ತರುವವಳು ಎಂದು ವರ್ಣಿಸಲಾಗಿದೆ. ವಿಶ್ವ-ವಿಶ್ವೋತ್ತರ ವಿಸ್ತಾರದ ಕಲ್ಪನೆ ನಮಗಿದೆ. ಶೃಂಗ ಸತ್ಯದ ಕಲ್ಪನೆ ನಮಗಾಗಿದೆ. ಸ್ವರ್ಲೋಕದ ಸೌರಪ್ರಕಾಶದ ಅರಿವಿದೆ. ಬರೀ ಭೌತಿಕ ಉಷಃ ಕಾಲಕ್ಕೆ ಈ ಕಲ್ಪನೆಗಳು ನಿಕಟವಾಗಿಯೂ ದೃಢೀಕೃತವಾಗಿಯೂ, ಖಂಡಿತವಾಗಿ ಸಂಬಂಧಿಸಿಲ್ಲ! ವೃಷಾ ಆವೋ ದಿವಿಜಾ ಋತೇನ, ಆವಿಷ್ ಕೃಣ್ವಾನಾ ಮಹಿಮಾನಂ ಆಗಾತ್ (VII. 75,1) ಸ್ವರ್ಗಜಾತೆಯಾದ ಉಷೆಯು ಪರಮಸತ್ಯದ ಮೂಲಕ ಜಗದ್ವಸ್ತುಗಳನ್ನು ತೆರೆದಿಡುತ್ತಾಳೆ, ಅವಳು ತನ್ನ ಮಹಿಮೆಯನ್ನು ಆವಿಷ್ಕರಿಸುತ್ತಾ ಬರುತ್ತಾಳೆ" ಎಂಬ ಮಾತನ್ನು ನಾವು ಹೋಲಿಸಿ ನೋಡಬಹುದು. ಪುನಃ ನಮಗಿಲ್ಲಿ ಉಷೆಯು ಪರಮಸತ್ಯಬಲದಿಂದ

ಸರ್ವವಸ್ತುಗಳನ್ನು ಪ್ರಕಟಪಡಿಸುವ (ಆವಿರ್ಭವಿಸುವಂತೆ ಮಾಡುವ) ಕೆಲಸವನ್ನೂ ತತ್ಫಲವಾಗಿ ʻಒಬ್ಬಗೆಯ ಮಹಾಯಾಮ ಅಭಿವ್ಯಕ್ತವಾಗುವುದನ್ನೂ ತಿಳಿಸಲಾಗಿದೆ. (=ಮಹಾಯಾಮವು ನಿರುಪಾಧಿಕ ಅತ್ಯಾಕಾಶ).

ಕೊನೆಯದಾಗಿ, ಋತದಂತೆ ಸಂದಿಗ್ಧತೆಗೆಡೆಗೊಡದ ಸತ್ಯವೆಂಬ ಪದದಿಂದ ಅದೇ ಅರ್ಥವನ್ನು ವರ್ಣಿಸಲಾಗಿದೆ. "ಸತ್ಯಾ ಸತ್ಯೇಭಿರ್ ಮಹತೀ ಮಹದ್ಭಿರ್ ದೇವೀ ದೇವೇಭಿಃ (VII.75.7) ಸತ್ತೆಯಲ್ಲಿ ಸತ್ಯೆಯಾದ ಉಷೆಯು ಸತ್ಯವಾದ ದೇವರುಗಳೊಡನೆ, ಬೃಹದ್ವಿಸ್ತಾರದ ದೇವತೆಗಳೊಡನೆ ಬೃಹದ್ ವಿಸ್ತೃತೆಯಾಗಿ". ವಾಮದೇವನು ತನ್ನೊಂದು ಸೂಕ್ತದಲ್ಲಿ (IV.51) ಉಷಸ್ಸುಗಳು ಕುದುರೆಗಳಿಂದ ಆಗಿಂದಾಗ ಪ್ರಪಂಚವನ್ನು ವ್ಯಾಪಿಸುವರು- ಆ ಕುದುರೆಗಳು ಪರಮಸತ್ಯದಿಂದ (ರಥಕ್ಕೆ) ಕಟ್ಟಲ್ಪಟ್ಟವುಗಳು ("ಋತಯುಗ್ಭಿರಶ್ವೈಃ" - ಹೋಲಿಸಿರಿ VI.65.2) ಎಂದಿದ್ದಾನೆ. ಆದರೆ ಅಥನು ಅವರನ್ನು "ಭದ್ರಾ ಋತಜಾತಸತ್ಯಾಃ=ಪರಮಸತ್ಯದಿಂದ ಜನಿಸಿದವರಾದುದರಿಂದ ಸುಖಿಗಳೂ ಸತ್ಯಸಂಧರೂ" ಎಂದು ವರ್ಣಿಸಿದ್ದಾನೆ. ಇನ್ನೊಂದು ಋಕ್ ಪಂಕ್ತಿಯಲ್ಲಿ ಅವರನ್ನವನು "ಪರಮಸತ್ಯಪದದಿಂದ ಎಚ್ಚೆತ್ತು ಬರುವವರು" ಎಂದು ಹೇಳಿದ್ದಾನೆ.

"ಭದ್ರ" ಮತ್ತು "ಋತಗಳ" ಸಮೀಪ ಸಂಬಂಧದಿಂದ ಮಧುಚ್ಛಂದನ ಅಗ್ನಿ ಸೂಕ್ತದಲ್ಲಿರುವ ವಿಚಾರಗಳ ಸಂಬಂಧವನ್ನೇ ವಾಮದೇವನ ಪೂರ್ವೋಕ್ತ ಪದಸಂಹತಿಯಲ್ಲಿ ನಾವು ಕಾಣುತ್ತೇವೆ. ವೇದದ ನಮ್ಮ ಮಾನಸಶಾಸ್ತ್ರೀಯ ವಿವರಣೆಯಲ್ಲಿ ಆನಂದಕ್ಕೆ ಪರಮಸತ್ಯವು ಮಾರ್ಗ-ಎಂಬ ಪ್ರಾಚೀನ ವಿಚಾರವನ್ನು ಪ್ರತಿಯೊಂದು ಸಾಲಿಯೂ ಕಾಣುತ್ತೇವೆ. ಪರಮಸತ್ಯದ ಪ್ರಕಾಶದ ಉದಯವೆಂದರೆ ಉಷೆ. ಆದ್ದರಿಂದ ಅವಶ್ಯಕವಾಗಿ ಆಕೆ ಸಂತೋಷವನ್ನೂ ಪರಮತೃಪ್ತಿಯನ್ನೂ ತರುತ್ತಾಳೆ. ವೇದದಲ್ಲಿ ಉಷೆಯ ಈ ಸ್ವರೂಪದ ವರ್ಣನೆಯನ್ನು -ಹರ್ಷಾವಹತ್ವದ ಚಿತ್ರವನ್ನು- ಪದೇ ಪದೇ ನಾವು ನೋಡುತ್ತೇವೆ ; ಮತ್ತು ವಸಿಷ್ಠನು ತನ್ನ (VII.81.3) ಸೂಕ್ತದಲ್ಲಿ ಬಹಳ ಅನುಷೇಧಿಕವಾಗಿ ಉಕ್ತ ತಾತ್ಪರ್ಯವನ್ನು ಅಭಿವ್ಯಂಜಿಸಿದ್ದಾನೆ : "ಯಾ ವಹಸಿ ಪುರುಸ್ಪಾರ್ಹಂ ರತ್ನಂ ನ ದಾಶುಷೇ ಮಯಃ = ನೀನು ದಾನಿಗೆ (ಯಾಜಕನಿಗೆ) ಬಹು ರೀತಿಗಳಿಂದ ಆನಂದೋದ್ರೇಕ ರೂಪದಲ್ಲಿ ಪರಮತೃಪ್ತಿಯನ್ನು ಕೊಡುವವಳು."

"ಸೂನೃತಾ" ಎಂಬುದೊಂದು ವೇದ ಸಾಮಾನ್ಯ ಶಬ್ದ. ಸಾಯಣನದನ್ನು "ಸಂತೋಷಕರವೂ ಸತ್ಯವೂ ಆದ ಮಾತು" ಎಂದು ಅರ್ಥಮಾಡಿದ್ದಾನೆ. ಕೆಲವೊಮ್ಮೆ ಉಷೆಯನ್ನು "ಋತಾವರೀ= ಪರಮಸತ್ಯಪೂರ್ಣೆ" ಎಂದೂ ಕೆಲವೊಮ್ಮೆ "ಸೂನೃತಾವರೀ" ಎಂದೂ ವರ್ಣಿಸಲಾಗಿದೆ. ಅವಳು ತನ್ನ ಸತ್ಯವೂ ಸುಖಕರವೂ ಆದ ಮಾತನಾಡುತ್ತಾ ಬರುತ್ತಾಳೆ = "ಸೂನೃತಾ ಈರಯಂತೀ". ಅವಳು ಪ್ರಕಾಶಮಾನ ಗೋವ್ರಜಗಳ ನೇತ್ರಿಯೆಂದು ವರ್ಣಿತೆಯಾಗಿರುವುದೂ ಹಗಲುಗಳ ನಾಯಿಕೆಯಂದು ಚಿತ್ರಿತೆಯಾಗಿರುವುದೂ ಹೇಗೋ ಹಾಗೇ ಭಾಸ್ವತೀ ನೇತ್ರೀ ಸೂನೃತಾನಾಂ (I.92.7)= ಸುಖಾವಹ ಸತ್ಯಗಳ ಜ್ಯೋತಿರ್ಮಯ ನಾಯಿಕೆ ಎಂದೂ ಬಣ್ಣಿಸಲ್ಪಟ್ಟಿದ್ದಾಳೆ. ವೈದಿಕ ಋಷಿಗಳ ಮನಸ್ಸು ಬೆಳಕು, ಗೋ ಯಾ ಕಿರಣಗಳು ಮತ್ತು ಸತ್ಯದ ಕಲ್ಪನೆಗಳನ್ನು ಒಂದುಗೂಡಿಸಿ ಕೊಂಡಿರುವುದು ಇನ್ನೊಂದು ಋಕ್ಕಿನಲ್ಲಿ (I.92.14) ಇನ್ನೂ ಹೆಚ್ಚು ಅನಪಾರ್ಥಕರವಾಗಿ ಬಂದಿದೆ :

"ಗೋಮತೀ ಅಶ್ವಾಮತೀ ವಿಭಾವರೀ...... ಸೂನೃತಾವತೀ=ಹೊಳೆವ ಹಿಂಡುಗಳಿಂದ ಕೂಡಿದ ನೀನು, ಕುದುರೆದೇರೇರಿದ ನೀನು, ಸುಖಾವಹ ಸತ್ಯಪೂರ್ಣೆಯಾದ ನೀನು ವಿಸ್ತಾರವಾಗಿ ಹೊಳೆಯುತ್ತಿರುವೆ" ಇಂಥದೇ ಆದ ಇನ್ನೊಂದು ಇದಕ್ಕೂ ಹೆಚ್ಚು ಸ್ಪಷ್ಟಾರ್ಥಕ ಪದ ಸಂಹತಿಯು (I.48.2) ಈ ವಿಶೇಷಣಗಳ ಅರ್ಥವನ್ನು ಎತ್ತಿ ತೋರಿಸುತ್ತದೆ : "ಗೋಮತೀರ್ ಅಶ್ವಾವತೀರ್ ವಿಶ್ವ ಸುವಿದಃ= ಉಷೋ ದೇವಿಯರು ತಮ್ಮ ಕಿರಣಗಳೊಡನೆ (ಹಿಂಡುಗಳೊಡನೆ) ಬರುವವರು ; ಅವರ ಕುದುರೆಗಳು ಮಹಾವೇಗವತ್ತಾದವುಗಳು ; ಅವರು ಎಲ್ಲವನ್ನೂ ಸರಿಯಾಗಿ ತಿಳಿದವರು."

ವೈದಿಕ ಉಷೆಯ ಮಾನಸಶಾಸ್ತ್ರೀಯ ಸ್ವರೂಪದ ಕುರುಹುಗಳು ವೇದದಲ್ಲಿ ಇಷ್ಟೇ ಇವೆ ಎಂದು ಯಾರೂ ತಿಳಿಯಕೂಡದು. ಉಷೆ ಯಾವಾಗಲೂ ದರ್ಶನೋನ್ಮುಖಿ, ಪ್ರತ್ಯಕ್ಷೋನ್ಮುಖಿ, ಉಚಿತ ಚಲನೋನ್ಮುಖಿ ಎಂದು ಪ್ರಾತಿನಿಧಿಕವಾಗಿ ವರ್ಣಿಸಲ್ಪಟ್ಟಿದ್ದಾಳೆ. ಗೋತಮ ರಹೂಗಣ ಹೇಳುತ್ತಾನೆ : "ದೇವಿಯು ಮುನ್ನಿಂತು ಸರ್ವಲೋಕಗಳನ್ನು ನೋಡುತ್ತಾಳೆ. ಅವಳ ದರ್ಶನಾಕ್ಷಿಯು ಸೀಮಾತೀತ ವಿಶಾಲತೆಯಿಂದ ಹೊಳೆಯುತ್ತದೆ. ಜೀವತ್ ಪದಾರ್ಥಗಳೆಲ್ಲವನ್ನು ಎಚ್ಚರಿಸಿ ಅವಳು ಚಿಂತನಬಲವುಳ್ಳವರೆಲ್ಲರಿಗೂ ವಾಕ್ಕನ್ನು ಹುಡುಕಿ ಕೊಡುತ್ತಾಳೆ. ವಿಶ್ವಸ್ಯ ವಾಚಂ ಅವಿದತ್ ಮನಾಯೋಃ (I.92.9.)" ಪ್ರಾಣಶಕ್ತಿಯನ್ನೂ ಮನಃಶಕ್ತಿಯನ್ನೂ ಪೂರ್ಣತಮ ವೈಶಾಲ್ಯದತ್ತ ಬಿಡುಗಡೆ ಮಾಡುವ ಉಷೆ ಇಲ್ಲಿದ್ದಾಳೆ. ನಾವು ಭೌತಿಕ ಉಷಃ ಕಾಲದಲ್ಲಿ ಪಾರ್ಥಿವ ಜೀವನವನ್ನು ಪುನಃ ಎಚ್ಚರಗೊಳಿಸುವಷ್ಟೇ ಅರ್ಥಕ್ಕೆ (ಚಿತ್ರಕ್ಕೆ) ಮಾತ್ರ ಮಿತಿಗೊಳಿಸಿದರೆ, ಋಷಿ ಆಯ್ದುಕೊಂಡ ಪದ-ಪದಸಂಹತಿಗಳ ಇಡೀ ರಭಸಾವೇಶವನ್ನು ತಿರಸ್ಕರಿಸಿದಂತಾಗುತ್ತದೆ. ಉಷೆ ತಂದ ದರ್ಶನವನ್ನು ಸೂಚಿಸುವ "ಚಕ್ಷುಸ್" ಎಂಬ ಶಬ್ದವನ್ನು ಕೇವಲ ಇಂದ್ರಿಯ ಪ್ರತ್ಯಕ್ಷಕ್ಕೆ[೧] ಪರಿಸೀಮಿತಗೊಳಿಸಿದರೂ ಉಳಿದ ಉಪಬ್ಬೇದಗಳಳಲ್ಲಿ ಅದು ಕೇತು=ಪ್ರಾತ್ಯಕ್ಷದರ್ಶನ ಎಲ್ಲಿ? ಮನೋಮಯ ಕೋಶದಲ್ಲಿ, ಮಾನಸಪ್ರಜ್ಞೆಯಲ್ಲಿ. ಕೇತುವೆಂದರೆ ಪ್ರತ್ಯಕ್ಷವೆಂದರ್ಥ. ಮಾನಸಪ್ರಜ್ಞಾ ದರ್ಶನವೊಂದು ಜ್ಞಾನಸಾಧನ, ಜ್ಞಾನದ ಒಂದು ಮೆಟ್ಟಿಲು, ಹಾಸು, ಸ್ತರ, ನೆಲೆ, ಮಟ್ಟ. ಅನಂತವೇ ಪರಮಸತ್ಯ ; ಸರ್ವತಂತ್ರ ಸ್ವತಂತ್ರನಿರಪೇಕ್ಷ ಪರಬ್ರಹ್ಮ - ಎಂಬುದು ತಾತ್ಪರ್ಯ. ಉಷೆಯು "ಪ್ರಚೇತಾಃ= ಈ ಪ್ರತ್ಯಕ್ಷಜ್ಞಾನವುಳ್ಳ ತತ್ವ." ಅವಳು ಪ್ರಕಾಶ ಕಿರಣಗಳ ತಾಯಿ. ಅವಳು ಈ ವಿಶಿಷ್ಟ ದೃಷ್ಟಿಕೋನದ ಮಾನಸ ಸಾಕ್ಷಾತ್ಕಾರವನ್ನು ಹುಟ್ಟಿಸಿದವಳು : "ಗವಾಂ ಜನಿತ್ರೀ ಅಕೃತ

---

೧. ಭೌತಿಕ ಪ್ರತ್ಯಕ್ಷ, ಇಂದ್ರಿಯ ಪ್ರತ್ಯಕ್ಷ, ಬಹಿರ್ಮುಖದ ನೋಟ ಎಂದರೆಲ್ಲಾ ಒಂದೇ ಅರ್ಥ. ಅಪ್ರತ್ಯಕ್ಷ, ಪರೋಕ್ಷ, ಇಂದ್ರಿಯಗಳಿಗೆ ಕಾಣದುದು, ಗೊತ್ತಾಗದುದು ಎಂದರೆಲ್ಲಾ ಒಂದೇ ಅರ್ಥ. ದರ್ಶನ, ಸಾಕ್ಷಾತ್ಕಾರ, ತಾದಾತ್ಮ್ಯಭಾವ, ಅಪರೋಕ್ಷಾನುಭೂತಿ ಎಂದರೆಲ್ಲಾ ಒಂದೇ ಅರ್ಥ. ವ್ಯವಹಾರವು ಪ್ರತ್ಯಕ್ಷ, ಪ್ರತಿಭಾಸವು ಸ್ವಪ್ನ (ಹಗಲುಗನಸು ಯಾ ಇರುಳುಗನಸು); ಪರಮಾರ್ಥವು ಅಂದರೆ ಅಪರೋಕ್ಷ ಅನುಭೂತಿ. ಪರಮಸತ್ಯದ ಬಂಧಾತೀತ ಸಾಕ್ಷಾತ್ಕಾರ, ಅಮೃತತ್ವ, ಅನಂತಾನಂದ. ಆದರೆ ಶ್ರೀ ಅರವಿಂದರ ಬರೆಹಗಳಲ್ಲಿ ಸಂದರ್ಭಾನುಸಾರವಾಗಿ ಈ ಪದಗಳ ಅರ್ಥಗುಣಬದಲಾಗಬಿದ್ದರೂ ಅರ್ಥಾತಿಶಯದಲ್ಲಿ ಸೋಪಾನಪಂಕ್ತಿ ಪದ್ಧತಿಯಿದೆ. ಉದಾ : ಭೂರ್ದರ್ಶನ, ಭುವರ್ದರ್ಶನ, ಸುವರ್‌ದರ್ಶನ. ಮಹರ್‌ದರ್ಶನ, ಜನರ್‌ದರ್ಶನ, ತಪೋದರ್ಶನ ಹಾಗೂ ಸತ್ಯದರ್ಶನ - ಎಂಬ ಉತ್ತರೋತ್ತರ ಪ್ರಜ್ಞಾಸ್ತರಗಳನ್ನು ಓದುಗ ಮರೆಯದಿರಬೇಕು. ಮಾನವನ ಮನದ ಕೆಳಗಿನ ಹಾಗೂ ಮೇಲಿನ ಭಾಗಗಳನ್ನು ಪ್ರತ್ಯೇಕಿಸಬೇಕು - ಅನುವಾದಕ.

ಪ್ರಕೇತುಂ (I.124.5) ಅವಳೇ ಆದರ್ಶನ - ಈಗ ಹಿಂದೆ ಏನೂ ಇಲ್ಲದಲ್ಲಿ ಸೋದ್ದೇಶದರ್ಶನವು ತನ್ನ ವಿಸ್ತಾರವಾದ ಉಷಃ ಸ್ವರೂಪದಲ್ಲಿ ಹೊರ ಹೊಮ್ಮಿತು ("ವಿ ನೂನಂ ಉಚ್ಛಾದ್ ಅಸತಿ ಪ್ರ ಕೇತುಃ") (I.124.11) ತನ್ನ ಇಂದ್ರಿಯಧೃತ ಸೋದ್ದೇಶ ದೃಷ್ಟಿಕೋನದ ಮಾನಸದರ್ಶನದ ದೆಸೆಯಿಂದ ಅವಳು ಸುಖಕರ ಸತ್ಯಗಳನ್ನು ಹೊಂದಿರುವಳು ("ಚಿಕಿತ್-ವಿತ್ ಸೂನೃತಾವರೀ" (IV.52.4).

ಈ ದರ್ಶನವು ಮಾನಸಾನುಭೂತಿಯ ಅಮೃತತತ್ವವೆಂದು ನಮಗೆ ಹೇಳಲಾಗಿದೆ. ಅಮೃತಸ್ಯ ಕೇತುಃ (III.61.3) ಅಂದರೆ (ಇದು ಪರಮಸತ್ಯವೇ ಅಲ್ಲ) ಇದು ಪರಮಸತ್ಯದ ಬೆಳಕು - ಅಮರತೆಯ ಬೆಳಕು-ಆನಂದದ ಹೊಳಹು. ಸತ್ಯ, ಅಮರತ್ವ, ಆನಂದ ಪದಗಳು ಈ ಬೆಳಕಿಗಿಂತ ಮೇಲಿನ ನೆಲೆಗಳಲ್ಲಿರುವಂಥವು. ಅಮರತೆ, ಆನಂದ ಮತ್ತು ಸತ್ಯಗಳು ಉತ್ತರೋತ್ತರ ಆನುಕ್ರಮಿಕತೆಯಿಂದ ಇರುವುದಿಲ್ಲಿ ಸೂಚಿತ. ವೇದದಲ್ಲಿ ರಾತ್ರಿಯು ನಮ್ಮ ಅಸ್ಪಷ್ಟ ಪ್ರಜ್ಞೆಯ ಪ್ರತೀಕ ; ಆ ಪ್ರಜ್ಞೆಯು ಜ್ಞಾನಾಂತರ್ಗತ. ಅಜ್ಞಾನ ಮತ್ತು ಸಂಕಲ್ಪದಲ್ಲೂ ಕರ್ಮದಲ್ಲೂ ಎಡಹಿಜಾರುವ ಸ್ಥಿತಿ. ಆದ್ದರಿಂದ ಅದು ಮೈತುಂಬಾ ಕೇಡು, ಪಾಪ ಹಾಗೂ ನರಳುವಿಕೆ. ಹಗಲು (ದಿವಸ) ಎಂಬುದು ಬೆಳಕು. ಅದು ಬೆಳಗಿಸಲ್ಪಟ್ಟ ಉನ್ನತತರ ಪ್ರಜ್ಞೆಯ ಪ್ರತೀಕ. ಅದು ನಮ್ಮನ್ನು ಮೇಲ್ಮಟ್ಟದ ಸತ್ಯಕ್ಕೂ ಸುಖಕ್ಕೂ ಒಯ್ಯುತ್ತದೆ. "ದುರಿತಂ, ಸುವಿತಂ" ಎಂಬೆರಡು ಶಬ್ದಗಳನ್ನು ಎದುರುಬದುರಾಗಿ ಬಳಸಿದ್ದನ್ನು ನಾವು ಪದೇ ಪದೇ ಕಾಣುತ್ತೇವೆ. "ದುರಿತಂ" ಎಂದರೆ ಅಕ್ಷರಶಃ ಎಡಹುವುದು ಯಾ ತಪ್ಪಾಗಿ ಮಾಡುವುದು ; ಅಲಂಕಾರಿಕವಾಗಿ ಅದು=ಎಲ್ಲಾ ತಪ್ಪು, ಕೇಡು, ಪಾಪ, ಸ್ಖಾಲಿತ್ಯ, ದುಃಖ. "ಸುವಿತಂ" ಎಂದರೆ, ಅಕ್ಷರಶಃ ಸರಿಯಾದುದು, ಒಳಿತಾಗಿ ಸಾಗುವುದು ; ಪ್ರಾತಿಮಿಕವಾಗಿ - ಎಲ್ಲಾ ಒಳಿತು, ಸುಖ ; ವಿಶೇಷತಃ ಸನ್ಮಾರ್ಗಗಮನದ ಫಲವಾಗಿ ದೊರಕುವ ಪ್ರಸುಖ. ಉಷಾದೇವಿಯನ್ನು ಕುರಿತು ವಸಿಷ್ಠನು ಹೇಳುತ್ತಾನೆ : "ಸರ್ವಾಂಧಕಾರ - ದೌರ್ಜನ್ಯಗಳನ್ನು ದಿವ್ಯ ಬೆಳಕಿನಿಂದ ಓಡಿಸುತ್ತಾ ಬರುತ್ತಾಳೆ ಉಷೆ" (VII.78.2) - "ವಿಶ್ವಾತಮಾಂಸಿ ದುರಿತಾ". ಅನೇಕ ಪದ್ಯಗಳಲ್ಲಿ (ಸೊಲ್ಲುಗಳಲ್ಲಿ, ನುಡಿಗಳಲ್ಲಿ) ಈ ದೇವತೆ ಎಚ್ಚರಿಸುವವಳು, ಪ್ರಚೋದಿಸುವವಳು, ನರರನ್ನು ಸನ್ಮಾರ್ಗದಲ್ಲಿ ಒಯ್ಯುವವಳು: ಎಲ್ಲಿಗೆ? "ಸುವಿತಾಯ=ಪ್ರಸುಖಕ್ಕೆ, ದಿವ್ಯಸುಖಕ್ಕೆ."

ಆದುದರಿಂದ "ಏಷಾನೇತ್ರೀ ರಾಧಸಃ ಸೂನೃತಾನಾಂ" (VII.76.7) ಉಷೆಯು ಸುಖಕರ ಸತ್ಯಗಳತ್ತ ನಮ್ಮನ್ನು ಒಯ್ಯುವವಳಷ್ಟೇ ಅಲ್ಲ - ದಿವ್ಯ ಸತ್ಯ ಮಾನವನಿಗಾಗಿ ತರುವ ಅಥವಾ ಅವನೇ ಮುಟ್ಟುವ, ಸೇರುವ ಆಧ್ಯಾತ್ಮಿಕ ಐಶ್ವರ್ಯವನ್ನು ಮತ್ತು ಆಹ್ಲಾದವನ್ನು, ಪ್ರಸುಖವನ್ನು ತರುವವಳು. ಋಷಿಗಳು ಪ್ರಾರ್ಥಿಸುವುದು ಈ ಐಶ್ವರ್ಯಕ್ಕಾಗಿ ಎಂಬುದನ್ನು ಭೌತಿಕ ಧನ, ಕನಕ, ವಸ್ತು, ವಾಹನಾದಿಗಳ ರೂಪದಲ್ಲಿ ಸಂಕೇತಿಸಲಾಗಿದೆ. ಕರ್ಮಕಾಂಡೀಯವಾದ ಈ ಪ್ರಾಪಂಚಿಕ ಐಶ್ವರ್ಯಗಳೆಂದರೆ - "ಗೋ ಮದಶ್ವಾವದ್ ವೀರವದ್" ಅಥವಾ "ಗೋಮದಶ್ವಾವದ್ ರಥವಚ್ಚ ರಾಧಃ" = ("ಶ್ರವಸ್") ಮುಂತಾದವುಗಳು. ಇವನ್ನು ವೈದಿಕ ಋಷಿಗಳು ಬೇಡುತ್ತಾರೆ ಎಂಬುದು ಯಜ್ಞ ಕರ್ಮದ ಪೂರ್ವಮೀಮಾಂಸಾರ್ಥ. ಇದಕ್ಕಿಂತ ಇನ್ನಾವುದೂ ಹೆಚ್ಚು ಪಾರ್ಥಿವ, ಭೌತಿಕ ಎನ್ನಿಸಲಾರದು. ಇದನ್ನು ಬೇಡುವವರು ಲುಬ್ಧರು, ಉದ್ರಿಕ್ತ ಬರ್ಬರಕ್ಷುಧಾರ್ತರು, ಭೌಮಾರ್ಥದಾಸರು. ಯಾರನ್ನು ಕುರಿತು? ಅವರ ಅರೆನಾಗರಿಕ ಅರೆವೊರಕ, ಅಂಟಸುಂಟಿಯ ದೇವರುಗಳನ್ನು ಕುರಿತು! "ಹಿರಣ್ಯ" ಎಂಬ ಪದವನ್ನು

ಋಷಿಗಳು ಪಾರ್ಥಿವ ಸುವರ್ಣದಿಂದ ಭಿನ್ನವಾದ ಅರ್ಥದಲ್ಲಿ ಬಳಸಿದ್ದನ್ನು ಕಂಡಿದ್ದೇವೆ. ಉಷೆಯ ಜೊತೆಗೆ ದನಗಳು, ಯಾವಾಗಲೂ ಬರುವ ಆಕಳುಗಳು, ಬೆಳಕಿನ ಸಂಕೇತ, ಬೆಳಕು ಮಾನಸಿಕ ದರ್ಶನದ ಸಂಕೇತ, ಸತ್ಯದೊಡನೆ ಅದು ಆನಂದವನ್ನು ತರುವಂಥದು-ಎಂಬುದನ್ನು ನಾವು ಕಂಡಿದ್ದೇವೆ. ಮಾನಸಶಾಸ್ತ್ರೀಯ ಸ್ಥೂಲಸೂಚಕವಾಗಿ "ಅಶ್ವ" (ಕುದುರೆ) ಯಾವಾಗಲೂ ಗೋವುಗಳ ಜೊತೆಗೆ ಬರುವುದನ್ನು ಕಂಡಿದ್ದೇವೆ. ಉಷೆಯು "ಗೋಮತೀ ಅಶ್ವಾವತೀ". ವಸಿಷ್ಠನ (VII.77.3) ಸೂಕ್ತವೊಂದರ ಋಕ್ಕಿನಲ್ಲಿ ಬಹಳ ಬಲವತ್ತರವಾಗಿಯೂ ಸ್ಪಷ್ಟತರವಾಗಿಯೂ ವೈದಿಕ ಅಶ್ವವು ಹೊರಬಂದು ನಿಲ್ಲುತ್ತದೆ:

**ದೇವಾನಾಂ ಚಕ್ಷುಃ ಸುಭಗಾ ವಹಂತೀ**
**ಶ್ವೇತಂ ನಯಂತೀ ಸುದೃಶೀಕಂ ಅಶ್ವಂ ।**
**ಉಷಾ ಅದರ್ಶಿ ರಶ್ಮಿಭಿರ್ ವ್ಯಕ್ತಾ**
**ಚಿತ್ರಾ ಮಘಾ ವಿಶ್ವಂ ಅನು ಪ್ರಭೂತಾ ॥**

"ದೇವತೆಗಳ ದಾರ್ಶನಿಕ ಕಣ್ಣನ್ನು ಕರೆ ತರುವಾಗ ಉಷೆಯು ಸುಖಿ, ಪೂರ್ಣದೃಷ್ಟಿಯುಳ್ಳ ಬೆಳ್ಳುದುರೆಯನ್ನು ತರುವಾಗ ಅವಳು ಸುಖಿ ; ಉಷೆ ಸಂಪೂರ್ಣವಾಗಿ ಕಿರಣಗಳಲ್ಲಿ ಅಭಿವ್ಯಕ್ತೆಯಾಗಿದ್ದಾಳೆ ; ಅವಳ ಐಶ್ವರ್ಯವು ವಿವಿಧ ; ಎಲ್ಲವುಗಳಲ್ಲೂ ಅವಳು ತನ್ನ ಹುಟ್ಟನ್ನು ಪ್ರಕಟಪಡಿಸುತ್ತಾ ಬರುತ್ತಿದ್ದಾಳೆ." ಇದು ಬೆಳ್ಳುದುರೆಯು (ಕವಿಕ್ರತುವಾದ = ದ್ರಷ್ಟೃಸಂಕಲ್ಪಸ್ವರೂಪದ, ದಿವ್ಯ ಸಂಕಲ್ಪವು ಕೆಲಸ ಮಾಡುತ್ತಿರುವಾಗ ಅದನ್ನು ಪೂರ್ಣ ಸಾಕ್ಷಿತ್ವದಿಂದ ನೋಡುವ ದಿವ್ಯಶಕ್ತಿಯಾದ). ಅಗ್ನಿಗೆ ಅನ್ವಿತವಾಗಿದೆ (V.11.4) ಎಂಬುದು ಸ್ಪಷ್ಟ : ಆ ಕುದುರೆಯು ಸಂಪೂರ್ಣವಾಗಿ ಸಾಂಕೇತಿಕ[೧] ಮತ್ತು ಉಷೆ ತರುವ ವಿವಿಧ ಐಶ್ವರ್ಯ ವಸ್ತುಗಳೂ ಒಂದು ರೂಪಕೋಕ್ತಿಯಲ್ಲದೆ ಖಂಡಿತವಾಗಿಯೂ ಭೌತಿಕ ಸಂಪತ್ತಲ್ಲ.

ಉಷೆಯು "ಗೋಮತೀ, ಅಶ್ವಾವತೀ, ವೀರವತೀ" ಎಂದು ವರ್ಣಿತ ; ಮತ್ತು "ಗೋಮತೀ, ಅಶ್ವವತೀ" ಎಂಬ ಅವಳ ವಿಶೇಷಣಗಳು ಗೋಮಯಿ, ಅಶ್ವಮಯಿ ಎಂದು ಯಾವಾಗ ಆಗುವುದಿಲ್ಲವೋ ಅವು ಸಾಂಕೇತಿಕವೆಂದು ಸಿದ್ಧವಾದವೋ ಆ ಸಂಕೇತಾರ್ಥವು "ಪ್ರಕಾಶಾಂಶುಗಳಿಂದ ಉಜ್ವಲ; ಪ್ರಕಾಶಾಂಶುಗಳು ಜ್ಞಾನ ಕಿರಣಗಳು; ಅವು ರಭಸವೇಗಯುಕ್ತ" ಎಂದಾದ ಮೇಲೆ, "ವೀರವತೀ" ಎಂದೂ "ಮನುಷ್ಯಸಹಿತೆ" ಎಂದಾಗಲಾರದು - ಅಥವಾ "ವೀರಸಹಿತೆ, ಸೇವಕಸಹಿತೆ ಯಾ ಅಪತ್ಯಸಹಿತೆ" ಎಂದಾಗಲಾರದು ; ಹಾಗಲ್ಲದೆ, ಉಷೆಯು "ಜಯಭೃಕ್ತಿಗಳಿಂದ" ಕೂಡಿದವಳು ಯಾ ತತ್ಸಮಾರ್ಥದಲ್ಲಿ ಪ್ರಯುಕ್ತವಾದದ್ದಾಗಿದೆ - ಎಂದು ಸಿದ್ಧವಾಗುತ್ತದೆ : ಇದು ಸಂಕೇತಾರ್ಥ. ಹೀಗಾಗಿರುವುದು (I.113.18.) "ಯಾ ಗೋಮತೀರ್ ಉಷಸಃ ಸರ್ವವೀರಾಃ..............ತಾ ಅಶ್ವದಾ ಅಶ್ನವತ್ ಸೋಮಸುತ್ವಾ" ಎಂಬ ಋಕ್ಕಿನಲ್ಲಿ ಸ್ಪಷ್ಟವಾಗುತ್ತದೆ. ಉಕ್ತ ಮಂತ್ರದ

---

೧. ಕುದುರೆಯ ಸಾಂಕೇತಿಕತೆಯು ಯಜ್ಞಾಶ್ವವನ್ನು ಕುರಿತು ದೀರ್ಘತಮಸ್ಸು ಬರೆದ ಸೂಕ್ತಗಳಲ್ಲಿ ಸುವ್ಯಕ್ತವಾಗಿದೆ. "ದಧಿಕ್ರಾವನ್" ಎಂಬ ಕುದುರೆಯನ್ನು ಕುರಿತು ವಿವಿಧ ಋಷಿಗಳು ಬರೆದ ಸೂಕ್ತಗಳಲ್ಲೂ ಉಕ್ತಾರ್ಥವು ಸುವ್ಯಕ್ತ ; ಅಷ್ಟೇ ಅಲ್ಲ ಬೃಹದಾರಣ್ಯಕ ಉಪನಿಷತ್ತಿನಲ್ಲಿಯ ಒಂದು ವಿಸ್ತಾರವಾದ ಅಲಂಕಾರದಲ್ಲಿ ಉಷೆಯು ಅಶ್ವಬಲದ ನೇತ್ರಿ ಎಂದು ಶುರುವಾಗುವಾಗಿನ ಮೊದಲ ಪದ ಸಂಹತಿಯಾಗಿರುವುದೂ ಇದಕ್ಕೆ ಪ್ರಮಾಣ.

ಅರ್ಥವು "ಉಷೆಗಳಿಗೆ ದನಗಳಿವೆ, ಅವಳಿಗೆ ಎಲ್ಲಾ ಮಾನವರಿದ್ದಾರೆ ಯಾ ಎಲ್ಲಾ ಸೇವಕರಿದ್ದಾರೆ ಸೋಮಾಹುತಿದಾತನು ಅವೆಲ್ಲವುಗಳನ್ನೂ ಭೋಗಿಸುತ್ತಾನೆ ; ಅಂಥದಾತೃವು ಅಶ್ವದಾನಿಗಳಿಗೆ ಸಮಾನ" ಎಂದಾಗದು. ಉಷೆಯು ಆಂತರಿಕ ಉಷಸ್ಸು ; ಅದು ಮಾನವನಿಗೆ ಅವನ ವಿಶಾಲತಮ ಜೀವನಕ್ಕೆ ಬೇಕಾದ ಉನ್ನೋದಕತ್ವ, ಪ್ರಜ್ಞೆ, ಸಂತೋಷ ಮುಂತಾದವುಗಳನ್ನು ವೈವಿಧ್ಯಮಯ ಪೂರ್ಣತೆಯಿಂದ ತಂದುಕೊಡುತ್ತದೆ ; ಅದು ಉಜ್ವಲ-ತನ್ನ ಪ್ರಕಾಶಾಂಶುಗಳಿಂದ; ಸಾಧ್ಯವಾದ ಎಲ್ಲಾ ಜ್ಞಾನಶಕ್ತಿ, ಕ್ರಿಯಾಶಕ್ತಿಗಳಿಂದ ಕೂಡಿ ಬರುತ್ತದೆ ; ಅದು ಮಾನವನಿಗೆ ಪ್ರಾಣಬಲದ ಪೂರ್ಣ ಪ್ರಣೋದಕತ್ವವನ್ನು ನೀಡುತ್ತದೆ. ಏಕೆ? ಆ ವಿಶಾಲತರ ಸತ್ತೆಯ (ಬಾಳಿನ) ಅನಂತಾನಂದವನ್ನು ಅವನು ಅನುಭವಿಸಲಿ - ಎಂದು.[೨]

ಆದುದರಿಂದ ನಾವಿನ್ನು "ಗೋಮದಶ್ವಾವದ್ವೀರವದ್ರಾಧಃ" ಎಂಬುದನ್ನು ಭೌತಿಕ ಅರ್ಥ ಹೇಳಿ ವಿವರಿಸಲಾರೆವು ; ವೇದದ ಭಾಷೆಯೇ ಇನ್ನೊಂದು ಬಗೆಯ ಸತ್ಯದತ್ತ ಬೊಟ್ಟು ಮಾಡಿ ತೋರಿಸುತ್ತದೆ. ಹೀಗಿರುವುದರಿಂದ ಈ ದೇವದತ್ತ ಐಶ್ವರ್ಯದ ಇತರ ಪರಿಸ್ಥಿತಿಗಳನ್ನೂ ಹಾಗೇ ಆಧ್ಯಾತ್ಮಿಕವಾಗಿ ತಿಳಿದುಕೊಳ್ಳಬೇಕು : ಮಕ್ಕಳು, ಬಂಗಾರ, ತೇರು ಮುಂತಾದವುಗಳೆಲ್ಲಾ ಸಾಂಕೇತಿಕಗಳು. "ಶ್ರವಸ್ಸು" ಯಶಸ್ಸೂ ಅಲ್ಲ, ಆಹಾರವೂ ಅಲ್ಲ-ಅದು ಗರ್ಭೀಕರಿಸಿ-ಕೊಂಡದ್ದು ಇಂದ್ರಿಯ ಬುದ್ಧಿಗಳಿಗೆ ಅತೀತವಾದ ಆದರೆ, ಪರಮಸತ್ಯದ ದಿವ್ಯಶ್ರವಣ, ದಿವ್ಯದರ್ಶನಗಳಿಂದ ಲಭ್ಯವಾದ ಉನ್ನತತರ ಜ್ಞಾನ ಎಂಬ ಮಾನಸಶಾಸ್ತ್ರೀಯ ಅರ್ಥವನ್ನು. "ರಾಧಃ, ದೀರ್ಘಶ್ರುತ್ತಮಂ" (VII.81.5) "ರಯಿಂ ಶ್ರವಸ್ಯಂ" (VII.75.2) ಅದೊಂದು ಶ್ರೀಮಂತ ಅಸ್ತಿತ್ವ (ಸತ್ತೆ) ; ಅದು ಆಧ್ಯಾತ್ಮಿಕವಾಗಿ ಸಂಪದ್ಯುಕ್ತ ಸುಖ, ಸೌಲಭ್ಯ ; ಅದು (ಶ್ರವಸ್ಯುವಿನತ್ತ) ಜ್ಞಾನದತ್ತ ತಿರುಗುತ್ತದೆ ; ಅದರ ಶಬ್ದ ಶ್ರವಣ ಶಕ್ತಿಯು ಸುದೀರ್ಘತರವಾದುದು ; ಆ ಶಬ್ದವಾದರೋ ಅನಂತ ("ದಿಶಃ") ದತ್ತಣಿಂದ,ಬರುವಂಥದು. ಈ ,ಪ್ರಕಾರವಾಗಿ ಉಷಸ್ಸಿನ ಉಜ್ವಲಾಕಾರವು ನಮ್ಮನ್ನು ವೇದದ ಭೌತಿಕ, ಕಾರ್ಮಿಕ, ಅಜ್ಞಾನಜನ್ಯ ಅಪಾರ್ಥಿಕರಣಗಳಿಂದ ಮುಕ್ತಗೊಳಿಸುವುದು. ಹಾಗೆ ಮುಕ್ತರಾಗದಿದ್ದರೆ ಹೊಂಡದಿಂದ ಹೊಂಡಕ್ಕೆ, ಗುಂಡಿಯಿಂದ ಗುಂಡಿಗೆ, ತಲೆ ಕೆಡಿಸುವ ಗೊಂದಲದ ಹಾಗೂ ಅಸ್ಪಷ್ಟತೆಯ ಕಾಳರಾತ್ರಿಯಲ್ಲಿ ನಮ್ಮನ್ನದು ನೂಕುತ್ತದೆ. ಉಷಸ್ಸಾದರೋ ವೈದಿಕ ಜ್ಞಾನ ಮಂದಿರದ ಮುಚ್ಚಿದ ಮಹಾದ್ವಾರವನ್ನು ತೆರೆದು ಅದರ ಹೃದಯಸ್ಥಾನದೊಳಗೆ ಹೊಗಲು ಬಿಡುತ್ತದೆ.



---

೨. ಸಚ್ಚಿದಾನಂದದಲ್ಲೂ ಶ್ರೇಡುಗಳಿವೆ, ತಾರತಮ್ಯಗಳಿವೆ, ವೈವಿಧ್ಯವಿದೆ ಎಂಬುದಿಲ್ಲಿ ಗೃಹೀತ; ಹೀಗಿದ್ದರೂ ಅದರ ಸಾಮಗ್ರ್ಯಕ್ಕೆ, ಪೂರ್ಣತ್ವಕ್ಕೆ, ಏಕತ್ವಕ್ಕೆ ಭಂಗವಿಲ್ಲ - ಅನುವಾದಕ

## ಅಧ್ಯಾಯ-೧೪

# ದನ ಮತ್ತು ಅಂಗಿರಸರ ಪುರಾಣ ಕಥೆ

ವೇದದ ಅರ್ಥಮಂದಿರದ ಬೀಗದ ಕೈ ಆಗಿರುವ ಗೋಪ್ರತಿಮೆಯನ್ನು ವೈದಿಕ ಪುರಾಣ ಕಥೆಗಳಲ್ಲಿ ಒಟ್ಟಿನಲ್ಲಿ ಅಗ್ರಗಣ್ಯವಾದ "ದನ ಮತ್ತು ಅಂಗಿರಸ"ರ ಸಂಕೇತ ಕಥೆಯಲ್ಲಿ ನಾವೀಗ ಶೋಧಿಸುವುದನ್ನು ಮುಂಬರಿಸಬೇಕಾಗಿದೆ. ಇದೊಂದು ಕಣ್ಸೆಳೆವ ಕಥೆ.

ವೈದಿಕ ಸೂಕ್ತಗಳು ಬೇರೆ ಯಾವ ಅರ್ಥಗಳನ್ನೇ ಗರ್ಭೀಕರಿಸಿಕೊಂಡಿರಲಿ ಉದ್ದಕ್ಕೂ ಅವು ಮಾನವನ ಸ್ನೇಹಿತರೂ ನೆರವಿಗರೂ ಆದ ಕೆಲ "ಆರ್ಯ" ದೇವತೆಗಳನ್ನು ಕುರಿತು ಮಂತ್ರಗಾಯಕರು ಅಥವಾ ದ್ರಷ್ಟಾರರು (ಕವಿ, ಋಷಿ, ವಿಪ್ರ) ಎಂದು ತಮ್ಮನ್ನು ತಾವೇ ಕರೆದುಕೊಂಡವರು ಕೊಟ್ಟ ಆಮಂತ್ರಣ ; ತಮ್ಮ ಉದ್ದೇಶಗಳನ್ನು ಈಡೇರಿಸಿಕೊಡಲು ದೇವತೆಗಳು ಬರಬೇಕೆಂಬುದು ಆ ಋಷಿಗಳ ಇಷ್ಟ-ಅವರು ಬಯಸುವುದು (ಅವರ ಪ್ರಕಾರ) ಅತಿಪ್ರೇಷ್ಠ (ವರ ಯಾ ವಾರ). ಈ ಅಪೇಕ್ಷಣೀಯ ಸಾಧ್ಯಗಳನ್ನು ಯಾ ದೇವರೀವ ಈ ವರಗಳನ್ನು "ರಯಿ, ರಾಧಸ್" ಎಂಬ ಪದಗಳಲ್ಲಿ ಸಾರವತ್ತಾಗಿ ಹೇಳಲಾಗಿದೆ. ಭೌತಿಕ ದೃಷ್ಟಿಯಲ್ಲಿ ಉಕ್ತ ಪದಗಳಿಗೆ ಆಸ್ತಿ, ಸಂಪತ್ತು ಎಂದು ಅರ್ಥ ; ಮಾನಸಶಾಸ್ತ್ರೀಯವಾಗಿ ಅವುಗಳಲ್ಲಿ ಕೆಲವು ಬಗೆಯ ಅಧ್ಯಾತ್ಮಿಕ ಐಶ್ವರ್ಯದ ಬಾಹುಳ್ಯವುಳ್ಳ ಸುಖ ಯಾ ಭೋಗ ಎಂದರ್ಥ ಎಂಬುದು ಸಂಭವನೀಯ. ಈ ಸಾಧ್ಯಗಳ ಸಾಧನೆಗೆ ಯಾ ಸಿದ್ಧಿಗೆ ದೇವತೆಗಳೊಡನೆ ನರನು ಮಾಡುವ ಸಂಯುಕ್ತ ಪ್ರಯತ್ನವೆಂದರೆ ಯಜ್ಞ=ಮಂತ್ರೋಚ್ಚಾರ, ಸೋಮಮದ್ಯಪ್ರಧಾನ ಮತ್ತು ತಿಳಿವೆಣ್ಣೆಯಾಹುತಿ (ತುಪ್ಪದ ಆಹುತಿ, ಆಜ್ಯಾಹುತಿ). ದೇವತೆಗಳು ಯಜ್ಞದಲ್ಲಿ ಹುಟ್ಟುತ್ತಾರೆ; ಮಂತ್ರದಿಂದ (ವೈದಿಕ ಶಬ್ದದಿಂದ) ಬೆಳೆಯುತ್ತಾರೆ, ಸೋಮರಸ (ಮದ್ಯ) ಹಾಗೂ ಘೃತಗಳಿಂದ ಪುಷ್ಟರಾಗುತ್ತಾರೆ. ಆ ಲಬ್ಧಬಲದಿಂದ ಮತ್ತು ಉತ್ತೇಜಕ ಆನಂದೋನ್ಮಾದದಿಂದ ದೇವತೆಗಳು ಯಾಜಕನ (ಯಜಮಾನನ) ಸಾಧ್ಯಗಳನ್ನು ಸಾಧಿಸಿಕೊಡುತ್ತಾರೆ. ಈ ಪ್ರಕಾರ ಪಡೆದ ಸಂಪತ್ತಿನಲ್ಲಿ ಗೋವೂ ಅಶ್ವವೂ ಬಹು ಮುಖ್ಯವಾದವುಗಳು. ಹಿರಣ್ಯ=ಚಿನ್ನ, ವೀರ=ಜನರು ಯಾ ವೀರರು, ರಥ=ತೇರುಗಳು, ಪ್ರಜಾ ಯಾ ಅಪತ್ಯ = ಮಕ್ಕಳು, ಎಂಬಿವು ಸಂಪತ್ತಿನ ಇತರ ಅಂಗಗಳು. ಅಗ್ನಿ, ಸೋಮ, ಘೃತಗಳು ಯಜ್ಞ ಸಾಧನಗಳು ; ಅವನ್ನು ಸಹಾ ದೇವತೆಗಳು ಕೊಡುತ್ತಾರೆ. ಆ ದೇವತೆಗಳೇ ಯಜ್ಞಕ್ಕೆ ಬಂದು ಪುರೋಹಿತರೂ, ಪವಿತ್ರೀಕಾರಕರೂ, ಉತ್ತೇಜಕರೂ, ಯುದ್ಧದ ವೀರರೂ ಆಗಿ ಕುಳಿತುಕೊಳ್ಳುತ್ತಾರೆ - ಏಕೆಂದರೆ ಯಜ್ಞದ್ವೇಷಿಗಳೂ ಮಂತ್ರ ದ್ವೇಷಿಗಳೂ ಇರುತ್ತಾರೆ ; ಅವರು ಯಾಜಕನನ್ನು ಹೊಡೆದು ಅವನ ಅಪೇಕ್ಷಿತ ಸಂಪತ್ತು, ಅವನಿಗೆ ಸಿಕ್ಕದಂತೆ

ಮಾಡುತ್ತಾರೆ. ಅಷ್ಟು ಮನಗೊಟ್ಟು ಆತಿಸಿದ ಅಭಿವೃದ್ಧಿಯ ಅಂಶಗಳೆಂದರೆ ಉಷೆ, ಸೂರ್ಯ, ಸ್ವರ್ಗದ ವೃಷ್ಟಿಪಾತ ಮತ್ತು ಸಪ್ತಸಿಂಧುಗಳ ಧಾರಾಪ್ರವಾಹಗಳು-ಇವುಗಳನ್ನು ವೇದದಲ್ಲಿ ಬಲಿಷ್ಠ ದೇವತೆಗಳೆಂದು ಕರೆಯಲಾಗಿದೆ. ಇವು ಭೌತಿಕವಾದರೂ ಸರಿಯೆ, ಯೋಗಶಾಸ್ತ್ರೀಯ-ವಾದರೂ ಸರಿಯೆ! ಈ ಸಂಪತ್ತು ಅಂದರೆ ಗೋಽಶ್ವಸುವರ್ಣರಥಾಪತ್ಯಗಳು-ಕೂಡಾ ಕಟ್ಟಕಡೆಯ ಸಿದ್ಧಿಯಲ್ಲ : ಇವೆಲ್ಲವೂ ಇತರ ಲೋಕಗಳ ಬಾಗಿಲನ್ನು ತೆರೆಯಿಸುವತ್ತ ಸಾಗುವ ಸಾಧನಗಳು. ಇತರ ಲೋಕಗಳಾವುವು? ಸ್ವರ್=ಸೌರ ಸ್ವರ್ಗಾರೋಹಣ, ಸತ್ಯಸ್ವರ್ಗಾ-ರೋಹಣ, ಜ್ಯೋತಿಃಸ್ವರ್ಗಾರೋಹಣ ಮತ್ತು ಸ್ವರ್ಗೀಯ ಆನಂದಲೋಕ ಪ್ರವೇಶ (ಇಲ್ಲಿ ಮರ್ತ್ಯನು ಅಮರ್ತ್ಯತ್ವಕ್ಕೇರುವನು.)[೧]

ವೇದದ ಖಂಡಿತಾರ್ಥವು (ನಿಶ್ಚಿತಾರ್ಥವು) ಇಂಥದು. ಯಾಜ್ಞಿಕ ಮತ್ತು ಪೌರಾಣಿಕ ಅರ್ಥವನ್ನು ವೇದಕ್ಕೆ ಬಹಳ ಹಿಂದಿನ ಕಾಲದಿಂದಲೂ ಹೇಳುತ್ತಾ ಬರಲಾಗಿದೆ ; ಅದನ್ನು ವಿಶೇಷವೆಂದು ಎತ್ತಿ ಹೇಳಬೇಕಾಗಿಲ್ಲ. ಸಾರತಃ ಹೇಳುವುದಾದರೆ, ಯಜ್ಞ ಮಾಡುವುದು ಮಾನವನ ಕರ್ತವ್ಯ ; ಇಹಾಮುತ್ರ ಸಂಪದ್ಭೋಗವು ಅದರ ಧ್ಯೇಯ. ಆಧುನಿಕ ದೃಷ್ಟಿಯಲ್ಲಿ ವೇದವೆಂದರೆ ಸೂರ್ಯ, ಚಂದ್ರ, ಉಷೆ, ವಾಯು, ವೃಷ್ಟಿ, ಅಗ್ನಿ, ಆಕಾಶ, ನದಿ ಮತ್ತು ಇತರ ಪ್ರಾಕೃತಿಕ ವಸ್ತುಗಳ ವ್ಯಕ್ತೀಕೃತ (ರೂಪೀಕೃತ) ಸ್ವರೂಪಗಳ ಪೂಜೆ ; ಸಂತುಷ್ಟೀಕರಣ ಮಾಡಲೆಂದೇ ಈ ಯಜ್ಞ ಕರ್ಮ ಇರುವುದು; ಆ ಮೂಲಕ ಈ ಬಾಳಿನಲ್ಲಿ ಆಸ್ತಿಯನ್ನು, ಮುಖ್ಯವಾಗಿ, ದ್ರಾವಿಡ ಶತ್ರುಗಳಿಂದ, ವಿರೋಧಕ ಭೂತ ಪಿಶಾಚಿಗಳಿಂದ, ರಾಕ್ಷಸರಿಂದ ಹಾಗೂ ಡಕಾಯಿತರಿಂದ ರಕ್ಷಿಸಿಕೊಳ್ಳುವುದು ; ಸತ್ತ ಮೇಲೆ ದೇವಗತೆಗಳಿರುವ ಸ್ವರ್ಗವನ್ನು ಹೋಗುವುದು. ಈ ವಿಚಾರಗಳೆಷ್ಟೇ ತರ್ಕಶುದ್ಧವಾಗಿ ಗ್ರಾಮ್ಯರಿಗೆ ಕಂಡರೂ ಋಷಿಗಳಿಗಿವು ಅಂತರರ್ಥಗಳಾಗಿರಲಿಲ್ಲವೆಂಬುದು ನಮಗೀಗ ಗೊತ್ತಾಗಿದೆ. ಋಷಿಗಳು ಕವಿಗಳು, ವಿಪ್ರರು = ಪ್ರಬುದ್ಧಮಾನಸರು, ಜ್ಯೋತಿಷ್ ಪ್ರಜ್ಞಾವಂತರು-ವೇದಕಾಲದಲ್ಲಿ. ಅವರಿಗೀ ಭೌತಿಕ ಪದಾರ್ಥಗಳು ಅಭೌತಿಕ ಪದಾರ್ಥಗಳ ಸಂಕೇತಗಳು. ಗೋವುಗಳು ದಿವ್ಯ ಉಷೆಯ ಕಿರಣಗಳು, ಪ್ರಕಾಶಾಂಶುಗಳು ; ಅಶ್ವರಥಗಳು ರಭಸದ ಬಲಿಷ್ಠ ಚಲನದ ಸಂಕೇತಗಳು ; ಬಂಗಾರವು ಬೆಳಕು ; ಅರ್ಥಾತ್ ದಿವ್ಯಸೂರ್ಯನ[೨] ಪ್ರದೀಪ್ತಿ ಸಂಪತ್ತು - ಈ ಸಂಪತ್ತೇ ನಿಜವಾದ ಬೆಳಕು ("ಋತಂಜ್ಯೋತಿಃ"). ಯಜ್ಞವೂ ಯಜ್ಞಫಲವಾಗಿ ಬರುವ ಐಶ್ವರ್ಯವೂ ಸರ್ವಾಂಗ ಸಮೇತವಾಗಿ, ಸರ್ವ ವಿವರಪೂರ್ವಕವಾಗಿ, ಮಾನವ ಯತ್ನದಿಂದ ಸಂಕೇತೀಕರಿಸಲ್ಪಟ್ಟಿವೆ ; ಇವೆಲ್ಲವೂ ಅವನ ಉನ್ನತತರ ಧ್ಯೇಯವಾದ ಅಮೃತತ್ವ (ಅಮರ್ತ್ಯತ್ವ) ಪಡೆಯುವ ಸಾಧನಗಳು. ಮಾನವನ ಸತ್ತೆಯನ್ನು ಸಮೃದ್ಧವನ್ನಾಗಿಯೂ ವಿಸ್ತೃತವನ್ನಾಗಿಯೂ ಮಾಡುವುದೇ ವೈದಿಕ ದ್ರಷ್ಟಾರನ ಅಭೀಪ್ಸೆ; ಅವನ ಜೀವನಯಜ್ಞದಲ್ಲಿ ದೇವತಾ ಪ್ರಮುಖರ ಹುಟ್ಟು ಮತ್ತು ಆಕಾರ ಗ್ರಹಣ ಮತ್ತು ಆ ದೇವತಾ ಪ್ರಮುಖರು ಅಧಿಷ್ಠಾತೃಗಳಾಗಿರುವ ಪ್ರಣೋದ, ಸತ್ಯ, ಪ್ರದೀಪ್ತಿ, ಪ್ರಹ್ಲಾದಗಳ ವೃದ್ಧಿಯಾಗುತ್ತಾ ಹೋಗುವುದು - ಅವನ ಸತ್ತೆಯಲ್ಲಿ ವಿಸ್ತೃತವೂ ನಿತ್ಯವೂ ತೆರೆಯುತ್ತಿರುವುವೂ ಆದ ಮತ್ತು ಅವನ

---

೧. ಈಶಾವಾಸ್ಯೋಪನಿಷತ್ತಿನ ಶಾಂಕರಭಾಷ್ಯದ "ಅಮೃತ"ದ ಅರ್ಥವನ್ನು ಹೋಲಿಸಿರಿ. - ಅನುವಾದಕ.

೨. "ದಿವ್ಯ" ಪದಕ್ಕೆ ಈ ಭಾಷಾಂತರದುದ್ದಕ್ಕೂ ಅತೀಂದ್ರಿಯ, ಅಪ್ರತ್ಯಕ್ಷ ಎಂದು ತಿಳಿದುಕೊಳ್ಳಬೇಕು. ಪ್ರತ್ಯಕ್ಷವು ವಾಸ್ತವ, ದಿವ್ಯವು ವಾಸ್ತವತರ ಮತ್ತು ಅತಿಮಾನಸವು ವಾಸ್ತವತಮ-ಅನುವಾದಕ.

ಕರೆಗನುಸಾರವಾಗಿ ತೆರೆವ ("ದೇವೀರ್ ದ್ವಾರಃ") ದಿವ್ಯ ದ್ವಾರಗಳ ಮೂಲಕ ಅವನು ಸ್ವರ್ಗ-ಭೂಮಿಗಳ ಆಚೆಗಿನ ದಿವ್ಯಾಸ್ತಿತ್ವದ ಅತ್ಯುದಾತ್ತ ಪ್ರಸುಖದೊಳಗೆ ಹೊಗುವವರೆಗೆ. ಈ ಉತ್ಥಾನ, ಉದ್ಗಮನ ಎಂಬುದೇ ಅಂಗಿರಸ ಋಷಿಗಳ ಪೌರಾಣಿಕ ಕಥೆಯ ಅಂತರರ್ಥ.

ಎಲ್ಲ ದೇವತೆಗಳೂ ವಿಜಯಿಗಳು, ಗೋದಾತರು, ಅಶ್ವದಾನಿಗಳು ಮತ್ತು ದಿವ್ಯೈಶ್ವರ್ಯ ಪ್ರದಾತೃಗಳು. ಆದರೆ ಅವರಲ್ಲೆಲ್ಲಾ ವಿಶೇಷತಃ ಮಹಾದೇವನಾದ ಇಂದ್ರನು ಮಹಾವೀರ, ಮಹಾಯೋಧ, ಈ ಯುದ್ಧದಲ್ಲಿ ಮಹಾಭಟ ; ಅವನು ಮಾನವನಿಗಾಗಿ ಪರಂಜ್ಯೋತಿಯನ್ನೂ ಪರಾಪ್ರಣೋದ ಶಕ್ತಿಯನ್ನೂ ಗೆದ್ದುಕೊಡುವಂಥವನು. ಆದುದರಿಂದ ಪದೇ ಪದೇ ಇಂದ್ರನನ್ನು "ಗೋಪತಿ=ಗೋಗಣಗಳ ಒಡೆಯ" ಎಂದು ಸಂಬೋಧಿಸಲಾಗಿದೆ. ಅವನನ್ನೇ ವೃಷಭನೆಂದೂ ಅಶ್ವನೆಂದೂ ಪ್ರತಿಮಿಸಿದ್ದೂ ಉಂಟು. ಯಾವನನ್ನು ಹಾಲ್ಗರೆಯಲು ಋಷಿಗಳು ಬಯಸುವರೋ ಆ ಇಂದ್ರನೇ ಸಮರ್ಥ ಹಾಲ್ಗರೆವವನು. ಅವನು ಕರೆದುಕೊಡುವುದು ಪೂರ್ಣರೂಪಗಳನ್ನು ಮತ್ತು ಆತ್ಯಂತಿಕ ವಿಚಾರಗಳನ್ನು. ಅವನೇ ಗೋ ನಾಯಕನಾದ ಎತ್ತು. ಮಾನವ ಆಶಿಸುವ ಗೋsಶ್ವ ಸಂಪತ್ತು ಅವನಿಗೆ ಸೇರಿದ್ದು. VI.28.5 ನೆಯ ಮಂತ್ರದಲ್ಲಿ "ಎಲೈ ಜನರೇ, ಈ ದನಗಳೆನ್ನಿಸುವುವೆಲ್ಲಾ ಇಂದ್ರ ; ನಾನು ನನ್ನ ಹೃದಯ-ಮನಸ್ಸುಗಳಿಂದ ಬಯಸುವುದು ಇಂದ್ರನನ್ನು" ಎಂದು ಸಹಾ ಹೇಳಲಾಗಿದೆ. ಇಂದ್ರ-ಗೋವುಗಳ ಈ ಏಕೀಕರಣವು ಮುಖ್ಯ ಮತ್ತು ನಾವಾ ವಿಷಯವನ್ನು ಪುನಃ ಎತ್ತಿಕೊಳ್ಳಬೇಕಾಗಿದೆ-ಯಾವಾಗ? ಮಧುಚ್ಛಂಧನು ಆ ದೇವತೆಯನ್ನು ಕುರಿತು ಸೂಕ್ತಗಳನ್ನು ಹೇಳುವಾಗ.

ಆದರೆ ಸಾಮಾನ್ಯವಾಗಿ ಋಷಿಗಳು ಈ ಸಂಪದರ್ಜನವನ್ನು ದಸ್ಯುಗಳೆಂಬ ಕೆಲ ದುಷ್ಟ ಶಕ್ತಿಗಳ ಮೇಲಿನ ವಿಜಯ ಎಂದು ಪ್ರತಿಮಿಸುತ್ತಾರೆ, ಅಲಂಕಾರೋಕ್ತಿಯಿಂದ ಬಣ್ಣಿಸುತ್ತಾರೆ. ಕೆಲವೊಮ್ಮೆ ಈ ಸಂಪತ್ತು ದಸ್ಯುಗಳದ್ದೆಂದೂ ಮತ್ತೆ ಕೆಲವೊಮ್ಮೆ ಆ ದಸ್ಯುಗಳು ಈ ಆರ್ಯರಿಂದ ಕದ್ದೊಯ್ದಿಟ್ಟುಕೊಂಡಂಥವುಗಳಾದ್ದರಿಂದ, ಅಂಥ ಸಂಪತ್ತುಗಳನ್ನು ಇವರು, ಅನುಕ್ರಮವಾಗಿ, ಆಕ್ರಮಣ ಮಾಡಿಯೋ ಹಿಂಸಾಪ್ರಯೋಗದಿಂದಲೋ, ಇಲ್ಲವೆ ದೇವತೆಗಳ ನೆರವಿನಿಂದ ಹುಡುಕಿ ತೆಗೆದು ಕಳೆದು ಹೋದ ಆ ಐಶ್ವರ್ಯವನ್ನು ತರಬೇಕೆಂದೋ ಚಿತ್ರಿಸಲಾಗಿದೆ. ಸಂಪತ್ತನ್ನು ಹಿಡಿದುಕೊಂಡಿರುವ ಯಾ ಕದ್ದೊಯ್ದಿರುವ ದಸ್ಯುಗಳೆಂದರೆ ಪಣಿಗಳು. ಪಣಿ=ಮಾಡುವವರು ಎಂಬುದು ಮೂಲ ಅರ್ಥ ; ವ್ಯಾಪಾರಸ್ಥರೂ ವಿಕ್ರಯಕಾರರು ಎಂದೂ ಆಗಿರಬಹುದು. ಆದರೆ "ಲುಬ್ಧ"ರೆಂಬ ಅರ್ಥದಿಂದ ಉಕ್ತಾರ್ಥಕ್ಕೆ ಬಣ್ಣ ಬಳಿಯಲಾಗಿದೆ. ಅವರ ಮುಖಂಡನು ವಲನೆಂಬ ರಾಕ್ಷಸ, ಭೂತ. ಸುತ್ತುಗಟ್ಟುವವನು, ಮುತ್ತಿಗೆ ಹಾಕುವವನು, ಒಳಗೆಳೆದುಕೊಳ್ಳುವವನು - ಎಂಬುದು "ವಲ" ಶಬ್ದದ ಅರ್ಥವಾಗಿರಬೇಕು- "ವೃತ್ರ" ಎಂದರೆ ವಿರೋಧಿ, ವಿಘ್ನಕಾರಿ, ಒಳಗೆಳೆದುಕೊಳ್ಳುವ ಪ್ರಚ್ಛಾದಕ-ಎಂಬುದು ಹೇಗೋ ಹಾಗೇ. ವೇದವು ನಾಗರಿಕತೆಯ ಅತಿ ಪ್ರಾಥಮಿಕ ಅವಸ್ಥೆಯ ಜನರ ಬರೆಹ ಎಂಬ ವಿದ್ವದ್‌ವಾದಿಗಳು ಅದರಲ್ಲಿ ಒರಟು ಸಂಸ್ಕೃತಿಯ ಇತಿಹಾಸವನ್ನು ಸಾಧ್ಯವಿದ್ದಷ್ಟು ಮಟ್ಟಿಗೆ ಸೂಚಿಸುವುದು ಸುಲಭ. ಪಣಿಗಳು ದ್ರಾವಿಡರು;ವಲನು ಅವರ ಮುಖಂಡ ಯಾ ದೇವರು. ಆದರೀ ಅರ್ಥವನ್ನು ಒಂಟಿ ಉಪಚ್ಛೇದಗಳಲ್ಲಿ ಎಲ್ಲಾದರೂ ಎತ್ತಿ ಹಿಡಿಯಬಹುದು. ಆದರೆ ಬಹುಸಂಖ್ಯಾತ ಸೂಕ್ತಗಳಲ್ಲಿ ಋಷಿಗಳ ಸಾಕ್ಷಾತ್ ಶಬ್ದಗಳೊಡನೆ ಅರ್ಥದಲ್ಲಿ ಹೊಂದುವುದೇ ಇಲ್ಲ. ದ್ರಾವಿಡ ಕಲ್ಪನೆಯ

ಅರ್ಥವನ್ನು ಅವುಗಳಿಗೆ ಹೇಳಹೋದರೆ ಅಲ್ಲಿ ಬಂದ ರೂಪಕೋಕ್ತಿಗಳೂ ಪ್ರತೀಕ ಪ್ರಯೋಗಗಳೂ ಆಡಂಬರದ ಅರ್ಥಹೀನ ಕಲಸುಮೇಲೋಗರಗಳಾಗಿ ಪರಿಣಮಿಸುವುವು. ಆಗಲೇ ನಾವಿಂಥ ಅಪಸಂಬಂಧ-ಅಪಶ್ರುತಿಗಳನ್ನು ಕಂಡಿದ್ದೇವೆ. ಕಳೆದ ಗೋವುಗಳ ಕಥಾ ಪರಿಶೀಲನವು ನಮಗೆ ಇನ್ನೂ ಚೆನ್ನಾಗಿ ಈ ಅಸಂಬದ್ಧತೆಯನ್ನು ತೋರಿಸಿಕೊಡುತ್ತದೆ.

ವಲನು ಪರ್ವತಗಳ ಒಟ್ಟೆಯಲ್ಲಿ (ತೂತಿನಲ್ಲಿ) ಯಾ ದೊಡ್ಡಿಯಲ್ಲಿ ವಸತಿ ಮಾಡಿಕೊಂಡವನು. ಅಂಗಿರಸ ಋಷಿಗಳು ಬೆನ್ನು ಹತ್ತಿ ಅಲ್ಲಿಗೆ ಹೋಗಿ ಅವನ ಗೋ ಸಂಪತ್ತನ್ನು ಕಸಿದುಕೊಳ್ಳಬೇಕು : ಏಕೆಂದರೆ ಅವನು ಗೋವಲ. "ವಲಸ್ಯ ಗೋಮತಃ" (I.11.5) ಪಣಿಗಳೂ ಹಾಗೇ ಕದ್ದೊಯ್ದ ಹಸುಗಳ ಗೋಲಿಗಳನ್ನು ತಾವು ಅಡಗಿಕೊಂಡಿರುವ ಗಿರಿಗಹ್ವರದ ಕಾರಾಗೃಹದಲ್ಲಿ ("ವಪ್ರ") ಅಥವಾ ಹಟ್ಟಿ ಕೊಟ್ಟಿಗೆಗಳಲ್ಲಿ ("ವ್ರಜ) ಅಥವಾ ಕೆಲವೊಮ್ಮೆ "ಗವ್ಯಮೂರ್ವಂ"= ಗೋಮಯ ಬಯಲಲ್ಲಿ ಯಾ ಹೊಳೆವ ಮೈದಾನದಲ್ಲಿ ಎಂಬ ಅರ್ಥಪೂರ್ಣವಾದ ಪದಸಂಹತಿಯ ಮೂಲಕ ಚಿತ್ರಿಸಲಾಗಿದೆ - ಅವರು ಪ್ರಕಾಶಾಂಶು ಗಣಗಳ ಅಪಾರ ಸಂಪತ್ತನ್ನು ಕದ್ದುಕೊಂಡು ಹೋದ ಕಳ್ಳರು. ಈ ಕಳೆದುಕೊಂಡ ಗೋ ಸಂಪತ್ತನ್ನು ಮರಳಿ ಪಡೆಯಲು ಯಜ್ಞ ಮಾಡಬೇಕು ; ಅಂಗಿರಸರೋ ಬೃಹಸ್ಪತಿಯೋ ಸತ್ಯೋಕ್ತಿ ಸ್ವರೂಪದ ಮಂತ್ರವನ್ನು ಹೇಳಬೇಕು. ಸ್ವರ್ಗೀಯ ಶ್ವಾನವಾದ ಸರಮೆಯು ಪಣಿಗುಹೆಗಳಲ್ಲಿ ಆ ಗೋಗಣಗಳನ್ನು ಹುಡುಕಬೇಕು. ದ್ರಷ್ಟಾರರಾದ ಅಂಗಿರಸರೂ ದಾರಿ ಹಿಡಿದು ಹೋಗಿ ಗವಿಯನ್ನು ಹೊಕ್ಕು ಯಾ ಗುಡ್ಡದ ದುರ್ಗಮಸ್ಥಾನಗಳನ್ನು ಕಡಿದು ಬಡಿದು ಅಗೆದು ತೆಗೆದು, ಪಣಿಗಳನ್ನು ಸೋಲಿಸಿ ಮುಕ್ತಗೊಳಿಸಲ್ಪಟ್ಟ ಗೋವ್ರಜಗಳನ್ನು ಮೇಲಕ್ಕೆ ಹೊಡೆದುಕೊಂಡು ಹೋಗಬೇಕು !

ಈ ಪುರಾಣ ಕಥೆಯನ್ನು ಯಾ ದೃಷ್ಟಾಂತ ಕಥೆಯನ್ನು ನಿಶ್ಚಯಾತ್ಮಕವಾಗಿ ಅರ್ಥೈಸುವಾಗ ನಾವು ಕೆಲವು ನಿಷ್ಪಷ್ಟ ಲಕ್ಷಣಗಳನ್ನು ಗಣನೆಗೆ ತೆಗೆದುಕೊಳ್ಳಬೇಕು, ಅವುಗಳನ್ನು ಅಲಕ್ಷಿಸಬಾರದು. ತನ್ನ ಪ್ರತಿಮಾವಳಿಯಲ್ಲಿ ಈ ಪುರಾಣ ಕಥೆಯು ಎಷ್ಟೇ ಅಚ್ಚುಕಟ್ಟತನ ಉಳ್ಳದ್ದಾಗಿದ್ದರೂ ಇದು ವೇದದ ಸರಳ ಪೌರಾಣಿಕ ಪರಂಪರೆಯ ಅಂಗ ಸ್ವರೂಪವನ್ನಿನ್ನೂ ತಾಳಿರಲಿಲ್ಲ. ಆದರಿದನ್ನು ಕೆಲಮಟ್ಟಿನ ಸ್ವಾತಂತ್ರ್ಯದಿಂದಲೂ ದ್ರವೀಕೃತ ರೂಪದಿಂದಲೂ ಬಳಸಲಾಗಿದೆ. ಈ ಬಳಕೆಯು ಪವಿತ್ರ ಪರಂಪರೆಯ ಹಿಂದೆ ಅಡಗಿರುವ ಅರ್ಥಪೂರ್ಣ ಪ್ರತಿಮೆಯನ್ನು ಬಯಲಿಗೆಳೆಯುತ್ತದೆ, ಮೋಸ ಮಾಡಿ ಹೊರದರುತ್ತದೆ. ಬಹಳ ಸಲ ಅದರ ಪೌರಾಣಿಕ ಮುಖವಾಡವನ್ನು ಕಳಚಿ ಹಾಕಿ ಗಾಯಕನ ವೈಯಕ್ತಿಕ ಅಭೀಪ್ಸೆಗೋ ಅವಶ್ಯಕತೆಗೋ ಅನ್ವಯಿಸಲಾಗುತ್ತದೆ. ಏಕೆಂದರೆ, ಈ ಗವಾಹರಣ ಕಾರ್ಯವು ಇಂದ್ರನಿಗೆ ಯಾವಾಗಲೂ ಸಾಧ್ಯ. ಒಂದೇ ಸಲ, ಕೊನೆಯದಾಗಿ, ಅವನು ಅಂಗಿರಸರ ಮೂಲಕ ಈ ಮಾದರಿಯ ಕಾರ್ಯವನ್ನು ಮಾಡಿದ್ದರೂ ಮತ್ತೆ ಮತ್ತೆ ಅವನು ಇದೇ ಮಾದರಿಯಿಂದ ಉದ್ದಕ್ಕೂ ಸತತವಾಗಿ ಗವೇಷಣನೂ=ಗೋಶೋಧಕನೂ ಚೋರಿತ ಸಂಪತ್ತಿನ ಪುನರ್ದಾತನೂ ಆಗಿ ಕೆಲಸ ಮಾಡುವುದು ವೇದ ಸೂಕ್ತಗಳಲ್ಲಿ ಉಲ್ಲಿಖಿತವಾಗಿದೆ.

ಕೆಲವು ವೇಳೆಗಳಲ್ಲಿ ಸರಮೆ, ಪಣಿ, ಅಂಗಿರಸರನ್ನು ಉಲ್ಲೇಖಿಸದೆ, "ದನಗಳನ್ನು ಕದ್ದೊಯ್ಯಲಾಯಿತು, ಇಂದ್ರ ಅವನ್ನು ತೆಗೆದುಕೊಂಡು ಬಂದ" ಎಂದು ಹೇಳುವ ಸೂಕ್ತಗಳೂ ವೇದದಲ್ಲಿವೆ. ಈ ಸಂದರ್ಭಗಳಲ್ಲಿ ಸರಮೆ-ಪಣಿಗಳ ಸುದ್ದಿಯನ್ನೇ ಎತ್ತಿಲ್ಲ. ಆದರೆ

ಯಾವಾಗಲೂ ಇಂದ್ರನೇ ಗೋವ್ರಜಗಳ್ನು ತಿರುಗಿ ತಂದುಕೊಡುವ ದೇವರಲ್ಲ. ಉದಾ : V.2. ಅಗ್ನಿಯ ಕುರಿತ ಸೂಕ್ತ. ಇದರಲ್ಲಿ ಅತ್ರಿಸ್‌ಗಾಯಕ ಋಷಿಯು ತಾನೇ ಚೋರಿತ ಗೋವ್ರಜವೆಂದು ಸ್ಪಷ್ಟವಾದ ಸಾಂಕೇತಿಕ ಭಾಷೆಯಲ್ಲಿ ಹೇಳುತ್ತಾನೆ. ಭೂಮಾತೆಯು ಬಹಳ ಕಾಲ ಅಗ್ನಿಯನ್ನು ಗರ್ಭದಲ್ಲಿ ಹಿಡಿದಿಟ್ಟುಕೊಂಡಾಗ ಅಗ್ನಿಯು ಪೇಶಿಯಾಗಿದ್ದನು ; ಅತಿ ಪರಿಮಿತ ಆಕಾರವುಳ್ಳವನಾಗಿದ್ದನು. ಅವಳು ಮಹಿಷಿಯಾದ ಮೇಲೆ ಮಹತ್ ಬೃಹತ್ ಆದ ಮೇಲೆ, ದೊಡ್ಡದಾಗಿ ವಿಸ್ತಾರ ಸ್ವರೂಪ ತಾಳಿದಾಗ, ಅಗ್ನಿಯು ಹುಟ್ಟಿ ಹೊರ ಬಿದ್ದನು. ಅಗ್ನಿ ಜನನಕ್ಕೆ ಜ್ಯೋತಿರ್ಮಯ ಗೋವ್ರಜಗಳ ಸಂಬಂಧವನ್ನು ಹೇಳಲಾಗಿದೆ ; ಆಗ ಅವುಗಳ ಪ್ರಜ್ವಲ ದರ್ಶನದ ಅಥವಾ ಅವತಾರದ, ಆವಿರ್ಭೂತಿಯ ಉಲ್ಲೇಖವನ್ನು ಮಾಡಲಾಗಿದೆ. "ದೂರದಲ್ಲಿ, ನಾನು ಒಂದು ಕ್ಷೇತ್ರದಲ್ಲಿ ಮಡಿಬೆಳಕಿನ ಬಣ್ಣವುಳ್ಳ ಸ್ವರ್ಣದಂತನು ತನ್ನ ಆಯುಧವನ್ನು ರೂಪಿಸಿಕೊಳ್ಳುವುದನ್ನು ಕಂಡೆನು. ಅವನಿಗೆ ನಾನು ಅಮರ್ತ್ಯತ್ವದ ಸಾರವಾದ ಅಮೃತವನ್ನು (ಸೋಮವನ್ನು) ಭಾಗ ಭಾಗವಾಗಿ ಕೊಡುವೆನು ; ಇಂದ್ರನೂ ಮಂತ್ರವೂ (ಶಬ್ದವೂ) ಇಲ್ಲದ ನನಗವುಗಳೇನು ಮಾಡುತ್ತವೆ? ಆ ಕ್ಷೇತ್ರದಲ್ಲಿ ಸಾಲು ಸಾಲಾಗಿ ಹೊಳೆಯುತ್ತಾ ನಿಂತಿರುವ ಸುಖವಾಗಿರುವ ವ್ರಜವೊಂದನ್ನು ನನಗೆ ಕಂಡಂತಾಯಿತು ; ಆ ವ್ರಜದಲ್ಲಿ ಬಹಳ ಗೋವುಗಳಿದ್ದಂತಿತ್ತು. ಅವರವನ್ನು ಹಿಡಿಯಲಿಲ್ಲ; ಏಕೆಂದರೆ "ಅವನು" ಜನಿಸಿದನು ; ಹಳೆಯ ದನಗಳು ಕೂಡಾ ಪುನಃ ಎಳೆಯವುಗಳಾದವು." ಆದರೆ ಇಂದ್ರನೂ ಮಂತ್ರವೂ ಇಲ್ಲದ ಈ ದಸ್ಯುಗಳೀಗ ಉಜ್ವಲ ಗೋಗಳನ್ನು ಹಿಡಿಯಲಾರದವರಾದರೆ, ಅದು ಈ ಪ್ರೋಜ್ವಲ, ಬಲಿಷ್ಠ ದೇವತೆ ಹುಟ್ಟುವುದಕ್ಕಿಂತ ಮುಂದೆ ಏತದ್ವಿರುದ್ಧವಾಗಿತ್ತು. "ದನಗಳಿಂದ ನನ್ನ ಶಕ್ತಿಯನ್ನು ವಿಸಂಗತಗೊಳಿಸಿದ ಅವರು ಯಾರು? (ಮರ್ಯಕಂ=ನನ್ನ ಜನರಾಶಿ, ನನ್ನ ವೀರರು, "ವೀರ"). ಏಕೆಂದರೆ, ಅವರು (ನನ್ನ ಜನರು) ದನಗಳ ಹಿಂಡನ್ನು ಕಾಯಲು ಯಾವ ಯೋಧನೂ ಇರಲಿಲ್ಲ. ನನ್ನಿಂದ ಅವುಗಳನ್ನು ಕಸಿದುಕೊಂಡು ಹೋದವರು ಅವುಗಳನ್ನು ಬಿಡಲಿ ; ಅವನಿಗೆ ಗೊತ್ತಿದೆ ಮತ್ತು ಅವನು ದನಕರುಗಳನ್ನು ಹೊಡೆದುಕೊಂಡು ನಮ್ಮೆಡೆಗೆ ಬರುವನು."

ಈ ಹೊಳೆವ ದನದ ಹಿಂಡುಗಳು ಯಾವುವು? ಹಳೆಯವುಗಳಾಗಿದ್ದು ಆಮೇಲೆ ಎಳೆಯವುಗಳಾದ ಈ ಹಸುಗಳ ಸಂಕೇತಾರ್ಥವೇನು? ಖಂಡಿತವಾಗಿ ಅವೆಂದೂ ಭೌತಿಕ ಗೋವ್ರಜಗಳಲ್ಲ ; ಅದೇನೂ ಯಮುನೆಯ ಯಾ ಜ್ಹೀಲಮ್ನಿನ ಸನಿಹದ ಪಾರ್ಥಿವ ಕ್ಷೇತ್ರವಲ್ಲ- ಅಂಥ ಗದ್ದೆ ಬಯಲಿನಲ್ಲಿ ಹಿರಣ್ಯದಂತದ ಯೋಧ ದೇವನ ಮತ್ತು ಪ್ರಭಾಮಯ ಗೋಗಣಗಳ ತಿರುಗಾಟದ ಸೊಗಸಾದ ದರ್ಶನದ ದೃಶ್ಯವನ್ನವನು ಕಂಡದ್ದು ಸುಳ್ಳು. ಆ ವ್ರಜಗಳು ಭೌತಿಕ ಯಾ ದಿವ್ಯ ಉಷೆ ಮತ್ತು ಸೂಕ್ತದ ಭಾಷೆಯ ಮೊದಲ ಅರ್ಥ ವಿವರಣೆಗೆ ಉಚಿತವಾಗಿಲ್ಲ ; ಈ ಯೌಗಿಕ ದರ್ಶನವು ಖಂಡಿತವಾಗಿಯೂ ದಿವ್ಯ ಬೋಧೋದಯದ ಒಂದು ಅಲಂಕಾರೋಕ್ತಿ. ಅವು ಕತ್ತಲು ಕದ್ದೊಯ್ದ ಬೆಳಕಿನ ಉತ್ಸರ್ಜನಗಳು ಮತ್ತು ಅವೀಗ - ಭೌತಿಕ ಬೆಂಕಿದೇವರಿಂದಲ್ಲ - ಭೌತಿಕ ಜೀವನದ ಅಲ್ಪತೆಯು ಅಡಗಿಸಿಟ್ಟಿದ್ದ ಮತ್ತು ಈಗ ಉದ್‌ಬುದ್ಧ ಮಾನಸಕ್ರಿಯೆಯ ಪ್ರಸಾದವು ಬಿಡಿಸಿ ಹೊರಬಿಟ್ಟ ಉಲಿವ ಪ್ರಪಾತಬಲದಿಂದ ಪ್ರಹಾರಬಲದಿಂದ, ಪುನಃ ದೊರೆತವುಗಳು.

ಈ ಅಂಶಗಳಿಂದ ತಿಳಿದುಬರುವುದೇನೆಂದರೆ - ಈ ಗವಿಗಳಿಂದ ಕಳೆದ ಪ್ರಕಾಶಾಂಶುಗಳನ್ನು ತಿರುಗಿ ಪಡೆದುಕೊಡುವ ದೇವರು ಇಂದ್ರನು ಮಾತ್ರವಲ್ಲ. ಉಳಿದ ದೇವತೆಗಳಿಗೂ ಹಲವಾರು ಸೂಕ್ತಗಳು ಈ ಮಹಾವಿಜಯ ಪಡೆವ ಶಕ್ತಿಯಿದೆ, ಅಂಥ ವಿಜಯವನ್ನು ಅವರು ಪಡೆದಿದ್ದಾರೆ ಎಂದು ಹೇಳುತ್ತವೆ. ಅಂಥ ದೇವತೆಗಳಲ್ಲಿ ದಿವ್ಯ ಉಷೆಯೊಬ್ಬಳು ; ಅವಳೀ ಪ್ರಜಗಳ ತಾಯಿ. "ಸತ್ಯವಂತ ದೇವತೆಗಳಲ್ಲೀಕೆ ಸತ್ಯವಂತಳು ; ಮಹತ್ವವುಳ್ಳ ದೇವತೆಗಳಲ್ಲಿವಳು ಮಹತ್ವ.ಸಂಪನ್ನೆ ; ಯಾಜ್ಞಿಕ ದೇವತೆಗಳಲ್ಲಿ ಯಜ್ಞ ದೇವತೆ ; ಕಲ್ಲು ಕೋಟೆಗಳನ್ನೂ ಒಡೆವಂಥ ಬಲಶಾಲಿನಿ - ಪ್ರಕಾಶಾಂಶುಪುಂಜಗಳನ್ನೀಕೆ ಕೊಡುತ್ತಾಳೆ : ದನಗಳು ಉಷೆಯತ್ತ, ಅಂಬಾ ಎಂದು ಕೂಗುತ್ತಾ ಹೋಗುವುವು" (VII.75.7) ಅಗ್ನಿಯು ಅಂಥ ಮತ್ತೊಬ್ಬ ದೇವ. ಅವನು, ನಾವು ಆಗಲೇ ಕಂಡಂತೆ, ಸ್ವತಃ ಹೋರಾಟ ಮಾಡುವವನು ; ಕೆಲವೊಮ್ಮೆ ಇಂದ್ರನೊಡನೆ ಜೊತೆಗೂಡಿ ಹೋರಾಡುತ್ತಾನೆ - ನೀವಿಬ್ಬರೂ, ಓ ಇಂದ್ರ, ಓ ಅಗ್ನಿ, ದನಗಳಿಗಾಗಿ ಹೋರಾಡಿದಿರಿ (VI.60.2) ಅಥವಾ ಸೋಮನೊಡಗೂಡಿ ಯುದ್ಧ ಮಾಡುತ್ತಾನೆ ಅಗ್ನಿ. "ಹೇ ಅಗ್ನಿ, ಹೇ ಸೋಮ, ನೀವು ಪಣಿಗಳಿಂದ ದನಗಳನ್ನು ಕಸಿದುಕೊಂಡು ಬಂದುದರಿಂದ ನಿಮ್ಮ ಆ ವೀರ ಪರಾಕ್ರಮವು ಜನಜನಿತವಾಯಿತು" ಇನ್ನೊಂದು ಅವತರಣಿಕೆಯಲ್ಲೂ ಈ ವಿಜಯದಲ್ಲಿ ಸೋಮನನ್ನು ಇಂದ್ರನ ಜೊತೆಗೆ ಸೇರಿಸಲಾಗಿದೆ: "ಪ್ರಣೋದೋದ್ಭವನಾದ ಈ ದೇವನು ಇಂದ್ರನ ಜೊತೆಗಾರನಾಗಿದ್ದನು. ಪಣಿಗಳೊಡನೆ ಹೋರಾಡಿದನು ; ಮತ್ತು ದಸ್ಯುಗಳೊಡನೆ ಯುದ್ಧ ಮಾಡುವ ಸಮಯದಲ್ಲಿ ಇತರ ದೇವತೆಗಳಂತೆಯೇ ಇವನು ತನ್ನ ಪರಾಕ್ರಮವನ್ನು ತೋರಿಸಿದನು. (VI.44.22) ಅಶ್ವಿನೀ ದೇವತೆಗಳು ಇಂಥ ಪರಾಕ್ರಮವನ್ನು ಪ್ರದರ್ಶಿಸಿದವರೆಂದು ವರ್ಣಿಸಲಾಗಿದೆ. (VI.62.11) "ನೀವಿಬ್ಬರೂ ದನಕರುಗಳಿಂದ ತುಂಬಿದ ಕೋಟೆಯಂಥ ಕೊಟ್ಟಿಗೆಯ ಬಾಗಿಲನ್ನು ತೆರೆದಿರಿ" ಮತ್ತು ಪುನಃ I.112.18ರಲ್ಲಿ "ಓ ಅಂಗಿರಸ್ (ಯಮಳರಾದ ಅಶ್ವಿಗಳನ್ನು ಒಟ್ಟಿಗೇ ಕೆಲವೊಮ್ಮೆ "ಅಂಗಿರಸ್" ಎಂದು ಕರೆಯಲಾಗುತ್ತದೆ), ನೀವಿಬ್ಬರೂ ಮನಸಾ ಆಹ್ಲಾದವನ್ನು ಹೊಂದಿ ಧೇನು ಪ್ರವಾಹದ ಬಾಗಿಲೊಳಗೆ ಮೊದಲು ಹೊಗುವಿರಿ", - ಇಲ್ಲಿ ಮುಕ್ತ ಎಂಬುದೂ ಹೆಬ್ಬೆಳಕುಗಡಲ ಹೊರ ಹರಿವ ಧಾರೆ- ಎಂಬುದೂ ಸ್ಪಷ್ಟ ತಾತ್ಪರ್ಯ.

"ಬೃಹಸ್ಪತಿಯು ಎಲ್ಲರಿಗಿಂತಲೂ ಹೆಚ್ಚು ಸಲ ಈ ಗೋಗ್ರಹಣ ಯುದ್ಧದ ವೀರನೆಂದು ವೇದ ಹೇಳುತ್ತದೆ, "ಬೃಹಸ್ಪತಿಯೇ, ನೀನು ಹೆಬ್ಬೆಳಕಿನಿಂದ ಮೊದಲು ಸರ್ವೋನ್ನತಾಕಾಶದಲ್ಲಿ ಹುಟ್ಟಿದವನು ; ನೀನು ಸಪ್ತಮುಖನು, ಗುಣಿತ ಸಂಖ್ಯೆಯ ಜನ್ಮ ತಳೆದವನು, ಸಪ್ತಲೇಖನು. ನೀನು ಕತ್ತಲನ್ನೋಡಿಸಿದೆ. ಸ್ವ ಬಲದೊಡನೆ ಸ್ತುಬ್ಬನ್ನೂ[೧] ಋಕ್ಕನ್ನೂ ಕೂಡಿಕೊಂಡು ನಿನ್ನ ಗರ್ಜನೆಯಿಂದ ವಲನನ್ನು ಬಡಿದು ನುಚ್ಚು ನೂರು ಮಾಡಿದವನು. ಬೃಹಸ್ಪತಿ, ಹೊಳೆವ ದನಗೋಲಿಗಳನ್ನು ನಿನ್ನ ಕೂಗಿನಿಂದ ಮೇಲಕ್ಕೆ ಹೊಡೆದುಕೊಂಡು (ಅಟ್ಟಿಕೊಂಡು) ಹೋದೆ. ಹವಿರ್ದಾನ ವೇಗವನ್ನು ಹೆಚ್ಚಿಸುವ ಅವು ಅಂಬಾ ಎಂದು ನಿನಗೆ ಉತ್ತರ ಕೊಟ್ಟವು" (IV.50.4,5) ಪುನಃ VI.73.1 ಮತ್ತು ೩ ರಲ್ಲಿ ಬೃಹಸ್ಪತಿಯು ಗುಡ್ಡ ಒಡೆಯುವವನು, ಮೊದಲು ಹುಟ್ಟಿದವನು, ಅಂಗಿರಸ......-ಬೃಹಸ್ಪತಿಯು ಭಂಡಾರವನ್ನೂ ("ವಸೂನಿ")

೧. ಸ್ತುಭ್ = ಸ್ತೋತ್ರ

ಹೆಗ್ಗೊಟ್ಟಿಗೆಗಳನ್ನೂ ಗೆದ್ದನು ಮತ್ತು ಆ ಹೆಬ್ಬಟ್ಟಿಗಳಲ್ಲಿ ತುಂಬಿದ ದನಗಳೆಲ್ಲವನ್ನೂ ವಶಪಡಿಸಿಕೊಂಡನು." ಮರುತ್ತುಗಳು ಸಹಾ ಬೃಹಸ್ಪತಿಯಂತೆಯೇ ಋಗ್ಗಾಯಕರು, ಅವರೂ ಅಷ್ಟು ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಈ ದಿವ್ಯ ಕ್ರಿಯೆಯಲ್ಲಿ ಸಂಪರ್ಕ ಇಟ್ಟುಕೊಂಡವರು. "ಎಲೈ ಮರುತ್ತುಗಳೇ, ಮರುತ್ತುಗಳ ದನಗಳ ಬಗೆಗೆ ಕೇಳುತ್ತೇವೆ. (I.38.2) ಪೂಷನ್ ಅಭಿವೃದ್ಧಿಕಾರಕ ದೇವತೆ, ಸೂರ್ಯದೇವರ ಒಂದು ಅವತಾರ, ಆಕಾರ ; ಅವನನ್ನೂ ಚೋರಿತಧೇನುಗಳನ್ನು ಬೆನ್ನಟ್ಟಿ ಪುನರ್ ವಶಪಡಿಸಿಕೊಳ್ಳಲು ಆಮಂತ್ರಿಸಲಾಗಿದೆ. (VI.54.5,6,10) ಪೂಷನ್ನನು ನಮ್ಮ ಹಸುಗಳನ್ನು ಬೆನ್ನಟ್ಟಿ ಹೋಗಲಿ, ಅವನು ನಮ್ಮ ಯುದ್ಧಾಶ್ವಗಳನ್ನು ರಕ್ಷಿಸಲಿ..... ಪೂಷನ್, ಆಕಳುಗಳ ಬೆನ್ನಟ್ಟಿ ಹೋಗು.... ಕಳೆದುಹೋದ ಅವುಗಳನ್ನಾತನು ನಮ್ಮೆಡೆಗೆ ಹೊಡೆದುಕೊಂಡು ಬರಲಿ." ಸರಸ್ವತಿ ಕೂಡಾ ಪಣಿಸಂಹಾರಿಣಿ-ಯಾಗುವಳು. ಮತ್ತು ಮಧುಚ್ಛಂದಸ್ಸನ I.11.5 ನೆಯ ಸೂಕ್ತದಲ್ಲಿ "ಓ ವಜ್ರಧಾರಿಯೇ, ವಜ್ರಪತಿಯೇ, ವಲನು ದನಗಳನ್ನು ಅಡಗಿಸಿಟ್ಟಿದ್ದ ಬಿಲವನ್ನು, ಗುಹೆಯನ್ನು ಹುಡುಕಿ ತೆರೆದೆ ; ಬೆದರದ, ಬೆಚ್ಚದ ದೇವತೆಗಳು (ತಮ್ಮ ಬಲನ್ನಲ್ಲಾ ಪ್ರಯೋಗಿಸಿ) ನಿನ್ನೊಳಗೆ ವೇಗವಾಗಿ ಹೊಕ್ಕರು."

ಈ ಭಿನ್ನೋಕ್ತಿಗಳಲ್ಲಿ ಭಿನ್ನಾಭಿಪ್ರಾಯಗಳನ್ನೆಲ್ಲಾ ಸಮನ್ವಯಿಸಿದ ಒಂದೇ ವಿಚಾರವೇನಾದರೂ ನಿರ್ದಿಷ್ಟವಾಗಿ ದೊರಕುತ್ತದೆಯೋ ಅಥವಾ ಋಷಿಗಳು ಒಮ್ಮೆ ಆ ದೇವತೆಯನ್ನು, ಒಮ್ಮೆ ಈ ದೇವತೆಯನ್ನು - ತಮ್ಮ ಚೋರಿತ ದನ ಕರುಗಳ ಶೋಧಕ್ಕೂ ಅವುಗಳನ್ನು ಹಿಂದರಲು ಮಾಡಬೇಕಾದ ಯುದ್ಧಕ್ಕೂ ಮನಬಂದಂತೆ ಆಮಂತ್ರಿಸಿದ್ದಾರೆಯೇ? ಪ್ರತ್ಯೇಕ ವಿವರಗಳ ಲೀಲಾ ವಿಲಾಸದಿಂದ ನಮ್ಮನ್ನು ನಾವು ಗೊಂದಲಕ್ಕೀಡುಮಾಡಿ-ಕೊಳ್ಳಹೋಗದೆ, ವೇದದ ಕಲ್ಪನೆಗಳೆಲ್ಲವನ್ನೂ ಒಂದು ಬಗೆಯ ಸಮಗ್ರತೆಯಿಂದ ಗ್ರಹಿಸಲು ನಾವು ಒಪ್ಪಿಕೊಂಡರೆ, ನಮಗೆ ಒಂದು ಸರಳವೂ ಸಮರ್ಪಕವೂ ಆದ ಉತ್ತರ ದೊರಕುತ್ತದೆ. ಈ ಚೋರಿತ ಧೇನುವ್ರಜಗಳ ವಿಷಯವು ಸುಸಂಬದ್ಧ ಪ್ರತಿಮಾ-ಪ್ರತೀಕಗಳ ಒಂದು ಸಮಗ್ರ ಪದ್ಧತಿಯ ಭಾಗ ಮಾತ್ರ. ಯಜ್ಞದ ಮೂಲಕ ಅವು ಯಜ್ಞದ ಪುರೋಹಿತನೂ ಸಾರಭೂತಬಲವೂ ಆದ ಅಗ್ನಿಯಿಂದ (ಅಗ್ನಿಯೇ ಜ್ವಾಲೆ) ಮತ್ತು ಮಂತ್ರ ಶಬ್ದದಿಂದ ತಿರುಗಿ ವಶಪಡಿಸಿಕೊಳ್ಳಲ್ಪಡುತ್ತವೆ. ಬೃಹಸ್ಪತಿಯು ಮಂತ್ರಜನಕ, ಮರುತ್ತುಗಳು ಗಾಯಕರು ಯಾ ಬ್ರಹ್ಮರು ("ಬ್ರಹ್ಮಾಣೋಮರುತಃ"), ಸರಸ್ವತಿಯು ಯಜ್ಞದ ಸ್ಫೂರ್ತಿದೇವತೆ- ದಿವ್ಯಮಧ್ಯದ ಜನಕನು ಸೋಮನು ; ಅವನು ಅದರ ಅಧಿಷ್ಠಾತೃದೇವತೆ ; ಅಶ್ವಿಗಳು ಅದನ್ನಾಶಿಸುವವರು, ಹುಡುಕುವವರು ಮತ್ತು ಕೊಡುವವರು ; ಮತ್ತು ಕುಡಿಯುವವರೂ ಹೌದು. ಗೋವ್ರಜಗಳು ಪ್ರಕಾಶಪುಂಜಗಳು, ಉಷೆಯೊಡನೆ ಹಾಗೂ ಸೂರ್ಯನೊಡನೆ ಬೆಳಕು ಬರುತ್ತದೆ ಮತ್ತು ಪೂಷನ್ನನು ಸೂರ್ಯನ ಒಂದು ವಿಶಿಷ್ಟ ರೂಪ. ಕೊನೆಯದಾಗಿ ಇಂದ್ರನು ದೇವರಾಜ, ಪ್ರಕಾಶಪತಿ, ಜ್ಯೋತಿರ್ಮಯ ಸ್ವರ್ ಎಂಬ ಸ್ವರ್ಗಲೋಕದ ಅರಸ. ಅವನು ಜ್ಯೋತಿರ್ಮನ ಅಥವಾ ದಿವ್ಯಮನ; ಎಲ್ಲ ದೇವರುಗಳೂ ಅವನನ್ನು ಹೊಕ್ಕು ಅಡಗಿಸಿಟ್ಟ ಬೆಳಕಿನ ಮಸುಕನ್ನು ತೆರೆದೊಗೆಯುವುದರಲ್ಲಿ ಭಾಗಿಗಳಾಗುತ್ತಾರೆ. ಆದ್ದರಿಂದ ಈ ಭಿನ್ನ ದೇವತೆಗಳಿಗೆ ಒಂದೇ ವಿಜಯವನ್ನು ಅನ್ವಯಿಸುವುದರಲ್ಲಿ ಸಂಪೂರ್ಣ ಔಚಿತ್ಯವಿದೆ - ಎಂದು ನಾವು ಹೇಳುತ್ತೇವೆ. ಮಧುಚ್ಛಂದನು ಹೇಳಿದ ವಲ ಸಂಹಾರಕ್ಕಾಗಿ ದೇವತೆಗಳು ಇಂದ್ರನನ್ನು ಹೊಗುವುದು ಉಚಿತ. ಇಲ್ಲಿ ಏನನ್ನೂ ಯದ್ವಾತದ್ವಾ ಮಾಡಿಲ್ಲ, ಯಾವ ವಿಚಾರವೂ ಗೊಂದಲದ ಹಳ್ಳದ ಹಾದಿ ಹಿಡಿದು

ಹೋಗಿಲ್ಲ. ವೇದವು ತನ್ನ ಸಮನ್ವಿತತೆಯಲ್ಲಿ ಮತ್ತು ಐಕ್ಯ ಸೂತ್ರದಲ್ಲಿ ಪರಿಪೂರ್ಣವೂ ಸುಂದರವೂ ಆಗಿದೆ.

ಇಷ್ಟಲ್ಲದೆ, ಮಹಾಜ್ಯೋತಿಯನ್ನು ಗೆದ್ದುಕೊಳ್ಳುವುದು ವೇದಯಜ್ಞದ ಮಹಾಕಾರ್ಯದಲ್ಲಿ ಒಂದು ಮಾತ್ರ. ಅದರಿಂದ ದೇವರುಗಳೆಲ್ಲಾ "ವಿಶ್ವಾವಾರ್ಯಾ" ಎಲ್ಲಾ ವರಗಳನ್ನೂ ಪಡೆದುಕೊಳ್ಳಬೇಕು. ಅಂಥ ವರಗಳಲ್ಲಿ ಅಮರತ್ವವನ್ನು ಗೆದ್ದುಕೊಳ್ಳುವುದೂ ಗುಪ್ತ ಪ್ರಬೋಧಗಳು ಪ್ರಕಟವಾಗುವಂತೆ ಮಾಡಿಕೊಳ್ಳುವುದೂ ಒಂದು.ಅಡಗಿದ ದಿವ್ಯ ಮಿಂಚು ಮಿಂಚುವಂತೆ ಮಾಡಬೇಕು ಎಂದು ಅರ್ಥ. ಅಶ್ವವು ಪ್ರಣೋದ (ಒತ್ತುವ, ಮುನ್ನೂಕುವ ಶಕ್ತಿ) ಎಂಬುದು ಬೆಳಕಿನಷ್ಟೇ, ಜ್ಞಾನದಷ್ಟೇ, ಅಗತ್ಯ. ಬೆಳಕಿಲ್ಲಿ ದನದಿಂದ ಸಂಕೇತಿತ - ಅದು ದಿವ್ಯದನ. ಈರ್ಷ್ಯೆಯಿಂದ ಕಟ್ಟಿಟ್ಟುಕೊಂಡ ವಲನಿಂದ ಅವನಿದ್ದೆಡೆಗೈದಿ ಬೆಳಕನ್ನು ಗೆದ್ದುಕೊಳ್ಳಬೇಕಲ್ಲದೇ ವೃತ್ರವನ್ನು ಕೊಂದು ನೀರನ್ನು ಬಿಡುಗಡೆ ಮಾಡಬೇಕು. ಪ್ರಕಾಶಮಾನವಾದ ವ್ರಜಗಳ ಆವಿರ್ಭಾವವೆಂದರೆ ಉಷೋದಯ ಮತ್ತು ಸೂರ್ಯೋದಯ ; ಯಜ್ಞವಿಲ್ಲದೆ, ಅದು ಪೂರ್ತಿಯಾಗದೆಂಬುದು ಮುಖ್ಯ = ಯಜ್ಞ+ಬೆಂಕಿ+-ಮದ್ಯ - ಮೂರೂ ಬೇಕು. ಇವೆಲ್ಲವೂ ಒಂದೇ ಕಾರ್ಯದ ವಿವಿಧ ಅಂಗಗಳು. ಕೆಲವೊಮ್ಮೆ ಇವನ್ನು ಪ್ರತ್ಯೇಕವಾಗಿ ಹೇಳಲಾಗಿದೆ - ಅಷ್ಟೇ ; ಕೆಲವೊಮ್ಮೆ ಗುಂಪುಗುಂಪಾಗಿಯೂ ಕೆಲವೊಮ್ಮೆ ಒಕ್ಕೆಲಸದಲ್ಲಿ ಇಡಿಯಾಗಿ ಒಂದಾದಂತೆಯೂ ಇವನ್ನು ವರ್ಣಿಸಲಾಗಿದೆ - ಈ ಒಟ್ಟು ಸರ್ವಗ್ರಹವಾದ ಅಂತ್ಯ ವಿಜಯ. ಇವುಗಳನ್ನೆಲ್ಲಾ ಸಂಪಾದಿಸಿ ಇಟ್ಟುಕೊಂಡದ್ದರ ಫಲವೇನು? ನಿರುಪಾಧಿಕ ಸತ್ಯದ ಆವಿರ್ಭಾವ, ಮಹಾವಿಶಾಲಭಾವದ ಆವಿಷ್ಕಾರ, ಸ್ವರಲೋಕವನ್ನು ಗೆದ್ದುಕೊಳ್ಳುವುದು, ಅದೊಂದು ಪ್ರಕಾಶಲೋಕ ("ಉರುಂ ಉಲೋಕಂ" ಯಾ ಬರಿ "ಉಲೋಕಂ".) ಮೊದಲು ನಾವು ಈ ಐಕ್ಯವನ್ನು ತಿಳಿದುಕೊಳ್ಳಬೇಕು. ಇಲ್ಲವಾದರೆ ಋಗ್ವೇದದ ವಿವಿಧ ಉಪಚ್ಛೇದ-ಅನುಚ್ಛೇದಗಳಲ್ಲಿ ವಿವಿಧವಾಗಿ ಹೇಳಿದ ಪ್ರತಿಮೆಗಳ (ರೂಪಕಗಳ) ಅರ್ಥ ನಮಗಾಗದು.

ಹೀಗೆ VI.73 ರಲ್ಲಿ (ಆಗಲೇ ಉದ್ಧರಿಸಿ ಹೇಳಲಾಗಿದೆ) ಮೂರೇ ಋಕ್ಕುಗಳ ಒಂದು ಚಿಕ್ಕ ಸೂಕ್ತವನ್ನು ಕಾಣುತ್ತೇವೆ. ಅದರಲ್ಲಿ ಈ ಮೂರು ಸಂಕೇತಗಳನ್ನೂ ಅವುಗಳ ಐಕ್ಯಭಾವದಲ್ಲಿ ಸಂಕ್ಷೇಪಿಸಿ ಹೇಳಲಾಗಿದೆ. ಇದೊಂದು ಸ್ಮರಣೀಯವಾದ ಸೂತ್ರರೂಪದ ಸರ್ವಾರ್ಥಸೂಚಕ ಸೂಕ್ತ ಎಂದೆನ್ನಬಹುದು. ಇದು ವೇದದ ಅರ್ಥೈಕ್ಯವನ್ನೂ ಸಾಂಕೇತಿಕತೆಯನ್ನೂ ಯಾವಾಗಲೂ ನಾವು ಮನಸ್ಸಿನಲ್ಲಿ ಇಟ್ಟುಕೊಳ್ಳಲು ಅನುಕೂಲ ಮಾಡಿಕೊಡುತ್ತದೆ. "ಯಾರು ಗಿರಿಬೇಧಕನೋ ಪ್ರಥಮ ಜಾತನೋ ಸತ್ಯ ಸಂಪನ್ನನೋ ಬೃಹಸ್ಪತಿಯೋ ಅಂಗಿರಸನೋ ಹವಿರ್ದಾತನೋ ದ್ವಿಲೋಕ ವ್ಯಾಪಕನೋ (ಸೂರ್ಯನ) ತಾಪ-ಪ್ರಕಾಶಗಳಲ್ಲಿ ವಾಸವಾಗಿರುವನೋ ಯಾರು ನಮ್ಮ ತಂದೆಯೋ ಅಂತರಿಕ್ಷದ್ವಯದಲ್ಲಿ ಯಾರು ಗೂಳಿಯಂತೆ ಗರ್ಜಿಸುವನೋ ಅವನೇ ಬೃಹಸ್ಪತಿತ್ವವುಳ್ಳಾತನು. ಏಕೆಂದರೆ, ಬೃಹಸ್ಪತಿಯೆಂದರೇ ಜಲಯಾನ ಮಾಡಿಸುವವನು ಮಾನವನಿಗೆ ; ದೇವತೆಗಳ ಕರೆಯಂತೆ ಪರಲೋಕವನ್ನು ನಿರ್ಮಿಸಿದವನು ; ಅವನೇ ವೃತ್ರಬಲಧ್ವಂಸಿ, ಪುರದ್ವಾರೋದ್ಘಾಟಕ, ಶತ್ರುಂಜಯ ಮತ್ತು ಯುದ್ಧಗಳಲ್ಲಿ ಅಮಿತ್ರರನ್ನು ಮರ್ದಿಸಿದವನು. ಮಾನವನಿಗಾಗಿ ಬೃಹಸ್ಪತಿಯು ಸಂಪತ್ತಿನ ಕೊಪ್ಪರಿಗೆಯನ್ನು ಗೆದ್ದುಕೊಡುತ್ತಾನೆ, ದನಗಳಿಂದ ತುಂಬಿದ ಹೆಗ್ಗೊಟ್ಟಿಗೆಗಳನ್ನು ವಶಪಡಿಸಿಕೊಡುತ್ತಾನೆ ; ಅಪ್ರತಿಭಟನೀಯನಾದ ಅವನು ಸ್ವರ್‌ಲೋಕವನ್ನು

ಗೆಲ್ಲಬಯಸುತ್ತಾನೆ ; ಬೃಹಸ್ಪತಿಯು ಅರ್ಕಗಳಿಂದ = ಪ್ರಬೋಧೋದಯದ ಸೂಕ್ತಗಳಿಂದ ಅರಿಯನ್ನು ಕೊಲ್ಲುತ್ತಾನೆ ; ಅವನು ಕೊಂದದ್ದು ಮಹಾರಿಪುವನ್ನು". ಒಮ್ಮೆಲೇ ನಾವಿಲ್ಲಿ ಈ ಬಹುಮುಖದ ಸಂಕೇತದ ಐಕ್ಯವನ್ನು ಕಾಣುತ್ತೇವೆ.

ಇನ್ನೊಂದು ಉಪಚ್ಛೇದ ; ಅದು ಅಧಿಕತರ ಯೋಗಶಾಸ್ತ್ರೀಯ (ಯೌಗಿಕ) ಭಾಷಾ ಶೈಲಿಯಲ್ಲಿದೆ : ಉಷಃ ಕಲ್ಪನೆ ; ಸೂರ್ಯನಲ್ಲಿ ಪುನಃ ಬೆಳಕು ಬರುವುದು ಯಾ ಹೊಸ ಬೆಳಕು ಹುಟ್ಟುವುದು. ಈ ವಿಷಯವನ್ನು ಬೃಹಸ್ಪತಿಯ ಸಣ್ಣ ಸೂಕ್ತದಲ್ಲಿ ಹೇಳಿಲ್ಲ. ಅದು ಸೋಮಸ್ತವ ; ಅದರ ಪ್ರಥಮ ಪದಸಂಹತಿಯನ್ನು ಆಗಲೇ ಎತ್ತಿ ಹೇಳಲಾಗಿದೆ. VI.44.22 ಪ್ರಣೋದಜಾತನಾದ ಈ ದೇವರು ಉಳಿದನು, ಇಂದ್ರ ಇವನ ಸಹಚಾರಿ. ಈ ದೇವ (ಸೋಮ) ಪಣಿಹರ. ತನ್ನ ದುರ್ದೈವಿ ತಂದೆಯಿಂದ (ತಂದೆ = ವಿಭಕ್ತ ಜೀವಿ) ಅವನ ಯುದ್ಧಾಯುಧಗಳನ್ನೂ ಅವನ ಜ್ಞಾನರೂಪಗಳನ್ನೂ ("ಮಾಯಾಃ") ಕಸಿದುಕೊಂಡಾತನಿವನೇ. ತಮ್ಮ ಒಡೆಯರಲ್ಲಿ ಉಷೆಯರನ್ನು ಕೀರ್ತಿವಂತರನ್ನಾಗಿ ಮಾಡಿದವನು ಇವನೇ. ಸೂರ್ಯನಲ್ಲಿ ಒಳಬೆಳಕನ್ನು ಹುಟ್ಟಿಸಿದವನು ಇವನೇ ; ಸ್ವರ್ಲೋಕದ ತ್ರಿಪ್ರಪಂಚವನ್ನು ಜಗಜಗಿಸುವ ತನ್ನ ಸ್ವರ್ಗದಲ್ಲಿ (ಅಮೃತತ್ವದ) ತ್ರಿಪುಟೀ ಸೂತ್ರವನ್ನು ಹುಡುಕಿ ತೆಗೆದವನು ಮತ್ತು ತ್ರಿಭಾಗ ಜಗತ್ತಿನಲ್ಲಿ ಗುಪ್ತವಾಗಿದ್ದ ಅಮೃತವನ್ನು (ಮಥಿಸಿ) ತೆಗೆದವನಿವನೇ. ಇದು ಅತ್ರಿಗಳ ಸೂಕ್ತದಲ್ಲಿ ಹೇಳಿದ ಅಗ್ನಿಯನ್ನು ಆಮಂತ್ರಿಸುವಾಗ ಮೂರು ಭಾಗ ಮಾಡಿ ಅಮೃತವನ್ನು ಅಗ್ನಿಗೆ ಕೊಡುವುದರ ಬಗ್ಗೆ ಇದೆ ; "ತ್ರಿಷು ಸಾನುಷು" ಆ ಕೊಡುಗೆ ಮೂರು ಮಟ್ಟಗಳಲ್ಲಿ - ದೇಹ, ಪ್ರಾಣ ಮತ್ತು ಮನಸ್ಸುಗಳೇ ಆ ಮಟ್ಟಗಳು. ಅವನೇ ದ್ಯಾವಾ ಪೃಥಿವಿಗಳನ್ನು ಅಗಲಿಸಿ ಹೊತ್ತುಕೊಂಡಿರುವವನು ; ಏಳುಕಿರಣಗಳಿಂದ ಅವನು ತೇರನ್ನು ನಿರ್ಮಿಸಿದವನು ; ಮಧುವನ್ನು ಅಥವಾ ಘೃತವನ್ನು (=ಪಕ್ವ-ಫಲವನ್ನು) ದನಗಳಲ್ಲಿ ತನ್ನ ನೋದನಶಕ್ತಿಯಿಂದ ಹಿಡಿದಿಟ್ಟುಕೊಂಡಾತನು ; ದಶದಿಕ್ಕುಗಳಲ್ಲಿ ಚಿಮ್ಮುವ ಚಿಲುಮೆಯನ್ನೂ ಹಾಗೇ ಅವನು ಭದ್ರಗೊಳಿಸಿಟ್ಟವನು, (VI.44.22-24) ಇಂಥ ಸೂಕ್ತಗಳನ್ನು ಎಷ್ಟೋ ತೀಕ್ಷ್ಣಮತಿಗಳೂ ಕುತೂಹಲಿಗಳೂ ಓದಿದರೂ ಇವು ಸಾಂಕೇತಿಕರ ಹಾಗೂ ಯೋಗಿಗಳ ಪವಿತ್ರ ಪದ್ಯಗಳೆಂಬುದನ್ನರಿಯದೆ, ಇವೆಲ್ಲಾ ಪ್ರಕೃತಿಪೂಜಕ ಬರ್ಬರರೋ ಯಾ ನಾಗರಿಕರೂ ವೇದಾಂತಿಗಳೂ ಆದ ದ್ರಾವಿಡರೊಡನೆ ಯುದ್ಧ ಮಾಡುತ್ತಿದ್ದ ಒರಟರಾದ ಆಕ್ರಾಮಕ ಆರ್ಯರೋ ಬರೆದ ಕಗ್ಗಗಳೆಂದು ಭಾವಿಸುತ್ತಾ ಬಂದದ್ದು ನನಗೆ ಖಂಡಿತವಾಗಿಯೂ ಆಶ್ಚರ್ಯಕರವೆನ್ನಿಸುತ್ತದೆ.

ನಾವೀಗ ಬೇಗ ಬೇಗನೆ ಕೆಲ ಉಪಚ್ಛೇದಗಳೊಳಹೊಕ್ಕು ಪರಿಶೀಲಿಸುತ್ತಾ ಹೋಗೋಣ ; ಅವುಗಳಲ್ಲಿ ಈ ಸಂಕೇತಗಳ ಹೆಚ್ಚು ಚೆಲ್ಲಾಪಿಲ್ಲಿಯಾದ ಸಂಗ್ರಹವು ಬಂದಿದೆ. ಮೊದಲು, ಗುಡ್ಡದ ಗುಹಾಗೋಶಾಲೆಗಳ ಪ್ರತಿಮಾ ಚಿತ್ರದಲ್ಲಿ - ಉಳಿದೆಡೆಗಳಲ್ಲಿರುವಂತೆಯೇ - ಗೋವೂ ಅಶ್ವವೂ ಒಟ್ಟಿಗೇ ಉಕ್ತವಾಗಿವೆ ಎಂಬುದನ್ನು ನಾವು ನೋಡುತ್ತೇವೆ. ಪೂಷನ್ನನನ್ನು ದನ ಹುಡುಕಲು ಮತ್ತು ಕುದುರೆಗಳನ್ನು ಕಾಯಲು ಆಮಂತ್ರಿಸಿದ್ದನ್ನು ಕಂಡಿದ್ದೇವೆ. ಆರ್ಯರ ಸಂಪತ್ತಿನ ಈಯೆರಡು ಬಗೆಗಳೂ ಕಳ್ಳರ ಕೈಸೇರಿಯಾವೆಂದು ಅವರು ಯಾವಾಗಲೂ ಹೆದರಿಕೊಂಡಿರಬೇಕಾಗಿತ್ತೇ? ಆದರೆ ನೋಡೋಣ. "ಸೋಮಪಾನದಿಂದ ಲಬ್ಧವಾದ ನಿನ್ನ ಆನಂದೋದ್ರೇಕದಲ್ಲಿ- ಎಲೈ ವೀರಾಧಿವೀರ ಇಂದ್ರನೇ-ಪುರದ್ವಾರವನ್ನೊಡೆದಂತೆ ನೀನು

ಗೋಽಶ್ವಗಳ ಲಾಯವನ್ನು ಮುರಿದೊಡೆದೆ" (VIII.32.5) "ನಮಗಾಗಿ ಧೇನ್ವಶ್ವ ಸಹಸ್ರಗಳನ್ನು ಬಾಗಿಲೊಡೆದು ತೆರೆದು ಹೊರಬಿಡು (VIII.34.14) "ಹೇ ಇಂದ್ರ, ನೀನಿಟ್ಟುಕೊಂಡಿರುವ ಗೋಽಶ್ವಗಳನ್ನೂ ಅವ್ಯಯ ಭೋಗವನ್ನೂ ಪಣಿಗಳಿಗೆ. ಕೊಡುವುದಿಲ್ಲ, ಯಾಜಕನಿಗೇ ಕೊಡುತ್ತೇನೆ ಎಂದು ದೃಢಪಡಿಸು, ಖಾತ್ರಿ ಮಾಡಿಕೊಡು; ತನ್ನ ಕರ್ತವ್ಯವನ್ನು ಮಾಡದೆ, ದೇವರನ್ನು ಭೇಡದೆ ಗೊರೆಯುತ್ತಾ ಬಿದ್ದಿರುವಾತ ತನ್ನ ದುಷ್ಪ್ರವೃತ್ತಿ ಪ್ರಚೋದನಗಳಿಂದಲೇ ನಾಶವಾಗಿ ಹೋಗಲಿ ; ವೃದ್ಧಿಶೀಲವೇ ಆದ ಸಂಪತ್ತನ್ನು ಆಮೇಲೆ ನೀನು ನಮಗೆಂದೇ ಖಾಯಂ ನೆಲೆನಿಲ್ಲಿಸು (VIII.97.2,3) ಇನ್ನೊಂದು ಸೂಕ್ತದಲ್ಲಿ ಹಸು-ಹಯಗಳ ಸಂಪತ್ತನ್ನು ಪಣಿಗಳು ತಡೆಹಿಡಿದಿರುವುದಾಗಿ ಹೇಳಲಾಗಿದೆ. ಯಾವಾಗಲೂ ಅವರು ಅಮೂಲ್ಯ ಸಂಪತ್ತನ್ನು ಪಡೆಯುತ್ತಾರೆ, ಆದರದನ್ನು ಬಳಸರು - ಬರಿ ನಿದ್ರೆಯಲ್ಲೇ ಅವರು ಕಾಲ ಕಳೆಯುತ್ತಾರೆ - ದೇವವ್ರತಕ್ಕವರು ಅವಕಾಶ ಕೊಡುವುದೇ ಇಲ್ಲ ; ಮತ್ತು ಆ ಶಕ್ತಿಗಳು ದುಷ್ಟ ; ಅವು ಸಾಯಬೇಕು ಯಾ ಯಾಜಕನಿಗೆ ಭದ್ರವಾಗಿಟ್ಟುಕೊಂಡಿರೆಂದು ಕೊಡಲು ಮೊದಲೇ ಅವುಗಳಿಂದ ಆ ಸಂಪತ್ತನ್ನು ಗೆದ್ದುಕೊಂಡಿರಬೇಕು : ಮತ್ತು ಸದಾ ಧೇನ್ವಶ್ವಗಳು ಮುಚ್ಚಿಟ್ಟ ಕಾರಾಗೃಹಸ್ಥ ಸಂಪತ್ತು ; ಅಲ್ಲದೆ, ದಿವ್ಯಶಕ್ತಿಯಿಂದಲೇ ಆ ಸಂಪತ್ತು ಪತ್ತೆಯಾಗಿ ಬಿಡುಗಡೆ ಹೊಂದಬೇಕು.

ಲಸದ್ವ್ರಜಗಳನ್ನು ಜಯಿಸಿಕೊಳ್ಳುವುದರ ಜೊತೆಗೆ ಪಡೆದುಕೊಳ್ಳ ಬೇಕಾಗುವ ಸಂಪತ್ತೆಂದರೆ, ಉಷೆ ಮತ್ತು ಸೂರ್ಯರ ಹುಟ್ಟು ಯಾ ಉದಯ. ಆದರೆ ಈ ಅಂಶವನ್ನು ನಾವು ಇನ್ನೊಂದು ಅಧ್ಯಾಯದಲ್ಲಿ ಅರ್ಥಪೂರ್ಣವಾಗಿ ಪರಾಮರ್ಶಿಸಬೇಕಾಗಿದೆ. ಜಲಗಳು ಸೂರ್ಯ ಮತ್ತು ಉಷೆಯರ ಜೊತೆಗೇ ಇರುತ್ತವೆ. ವೃತ್ರವಧಾನಂತರ ಜಲವಿಮೋಚನೆ ಮಾಡುವ ಮತ್ತು ವಲನನ್ನು ಜಯಿಸಿ ವ್ರಜಗಳನ್ನು ವಿಮೋಚನೆಗೈಯುವ ಕಟ್ಟುಕತೆಗಳು ಪರಸ್ಪರ ಅಸಂಬಂಧ ಹೊಂದಿರುವಂಥವುಗಳಲ್ಲ. ಕೆಲ ಉಪಚ್ಛೇದಗಳಲ್ಲಿ I.32.4 ರಲ್ಲಿರುವಂತೆ-ವೃತ್ರ ಸಂಹಾರವು ಸೂರ್ಯ ಉಷಸ್ಸು ಮತ್ತು ಗೋವ್ರಜಗಳ ಬಿಡುಗಡೆಗೆ ಪೂರ್ವಭಾವಿಯಾಗಿ ನಡೆಯಬೇಕಾದ ಕೆಲಸ ಮತ್ತು ಇತರ ಉಪಚ್ಛೇದಗಳಲ್ಲಿ ಜಲ ಹರಿದು ಬರಲು ಗುಡ್ಡ .ಒಡೆಯುವುದು ಮೊದಲಾಗಬೇಕಾದ ಕೆಲಸ ಎಂದು ಹೇಳಲಾಗಿದೆ. ಇವುಗಳ ಸಾಮಾನ್ಯ ಸಂಬಂಧವನ್ನು ಈ ಸೂಕ್ತಗಳಲ್ಲಿ ಕಾಣಬಹುದು: "ಉಷಸ್ಸುಗಳು ಅನಾವಿದ್ಧವಾಗಿಯೂ ಕಾಂತಿಯಲ್ಲಿ ಪೂರ್ಣವಾಗಿಯೂ ಒಡಮೂಡಿದವು ; ಧ್ಯಾನಸ್ಥರು (ಅಂಗೀರಸರು) ವಿಶಾಲ ಜ್ಯೋತಿಸ್ಸನ್ನು ಕಂಡರು. ಅಪೇಕ್ಷಿಸಿದವರು ದನಗಳ ಆಯಾಮವನ್ನು ತೆರೆದರು ಮತ್ತು ಸ್ವರ್ಗದಿಂದ ಅವುಗಳಿಗಾಗಿ ಜಲಧಾರೆಗಳು ಹರಿದು ಬಂದವು." I.72.8 ; ಉಚಿತ ವಿಚಾರ ಬಲದಿಂದ ಸ್ವರ್ಗದ ಏಳು ಬಲಿಷ್ಠೆಯರು (ಸಪ್ತಸಿಂಧುಗಳು) ಸತ್ಯವನ್ನೂ ಆನಂದದ್ವಾರವನ್ನೂ ತಿಳಿದಿದ್ದರು ; ಸರಮೆಯು ದನಗಳ ಬಲಿಷ್ಠ ವ್ಯಾಪಕತೆಯನ್ನು ಶೋಧಿಸಿತು ಮತ್ತು ಅದರಿಂದ ಮನುಷ್ಯ ಪ್ರಾಣಿಯು ಸುಖವನ್ನು ಪಡುತ್ತದೆ.I.100.18 (ಇಂದ್ರ-ಮರುತ್ತಗಳಿಗನ್ವಿತವಾದದ್ದು) : "ತನ್ನ ಮಿರಿಮಿರಿ ಮಿಂಚುವ ಜೊತೆಗಾರರೊಡನೆ ಅವನು ಕ್ಷೇತ್ರವನ್ನು ಗೆದ್ದನು, ಸೂರ್ಯನನ್ನು ಗೆದ್ದನು, ಜಲಗಳನ್ನು ಗೆದ್ದನು. V.14.4 (ಅಗ್ನಿಯನ್ನು ಕುರಿತದ್ದು) : "ಹುಟ್ಟಿದೊಡನೆಯೇ ಅಗ್ನಿಯು ಪಳಚ್ಚನೆ ಹೊಳೆದನು, ದಸ್ಯುಗಳನ್ನು ಕೊಂದನು, ಬೆಳಕಿನಿಂದ ಕತ್ತಲನ್ನು ಸದೆದನು ; ದನಗಳನ್ನವನು ಶೋಧಿಸಿ ತೆಗೆದನು, ಜಲಧಾರೆಗಳನ್ನೂ ಸ್ವರ್‌ಲೋಕವನ್ನೂ ಹುಡುಕಿತೆಗೆದನು."

VI.60.2 (ಇಂದ್ರನನ್ನು ಮತ್ತು ಅಗ್ನಿಯನ್ನು ಉದ್ದೇಶಿಸಿದ್ದು) : "ನೀವಿಬ್ಬರೂ ದನಗಳನ್ನು ಗೆದ್ದು ತರಲು ಯುದ್ಧ ಮಾಡಿದಿರಿ. ದನಗಳಂತೆಯೇ ದುರ್ಭೋಗಕ್ಕೀಡಾದ ಜಲಗಳನ್ನೂ ಸ್ವರ್‌ಲೋಕವನ್ನೂ ಉಷಸ್ಸುಗಳನ್ನೂ ಜಯಿಸಿಕೊಂಡು ತರಲು ಕಾಳಗ ಹೂಡಿದಿರಿ ; ಹೇ ಇಂದ್ರ, ಹೇ ಅಗ್ನಿ, ನೀವು ಪ್ರದೇಶಗಳನ್ನೂ ಸ್ವರ್ಲೋಕವನ್ನೂ, ಉಜ್ವಲ ಉಷಸ್ಸುಗಳನ್ನೂ ನಮ್ಮೊಡನೆ ಒಂದುಗೂಡಿಸಿರಿ." I.32.12. (ಇಂದ್ರನನ್ನು ಕುರಿತದ್ದು) : "ಎಲೈ ವೀರ, ನೀನು ದನವನ್ನೂ, ಜಲಗಳನ್ನೂ, ವನಗಳನ್ನೂ, ಸೋಮವನ್ನೂ ಗೆದ್ದೇ ಬಿಟ್ಟೆ ನೀನು ಸಪ್ತ ಸಿಂಧುಗಳು ಸಲೀಸಾಗಿ ಹರಿಯುವಂತೆ ಬಿಡಿಸಿಕೊಟ್ಟೆ."

ಕೊನೆಯ ಅನುಚ್ಛೇದದಲ್ಲಿ ಇಂದ್ರ ಗೆದ್ದು ತಂದವುಗಳಲ್ಲಿ ಸೋಮನನ್ನು ಗೋಗಳ ಜೊತೆಗೆ ಸೇರಿಸಲಾಗಿದೆ. ಸಾಮಾನ್ಯವಾಗಿ ಸೋಮಪಾನಮದದಿಂದ ಬಲಿಷ್ಠವಾಗಿಯೇ ಇಂದ್ರನು ದನಗಳನ್ನು ಗೆದ್ದುಕೊಂಡು ಬರುವುದು. ಉದಾ - III.43.7 : "ನೀನು ಸೋಮಮತ್ತನಾಗಿಯೇ ದನದ ಹಟ್ಟಿಗಳನ್ನು ತೆರೆದೆ" I.15.8 : "ಆತನು ಅಂಗಿರಸಸ್ತುತನಾಗಿಯೇ ವಲನನ್ನು ಮುರಿದು ಗುಡ್ಡದ ಭದ್ರವಾದ (ಗೂಢ) ಸ್ಥಳಗಳನ್ನು ಒಡೆದು ಬೀಸಾಡಿದನು ; ಅವನು ಅವರ ಕೃತಕ ಅಡ್ಡಗಟ್ಟುಗಳನ್ನು ತುಂಡು ಮಾಡಿದನು. ಇವುಗಳನ್ನೆಲ್ಲಾ ಇಂದ್ರನು ಸೋಮರಸದ ಮದೋನ್ಮಾದದಿಂದ ಮಾಡಿದನು". ಆದರೆ ಕೆಲವೊಮ್ಮೆ ಈ ಪ್ರಕ್ರಿಯೆಯನ್ನು ತಿರುವು ಮುರುವು ಮಾಡಿದಾಗ - ಸೋಮ ಮಧ್ಯದ ಆನಂದವನ್ನು ತರುವುದು ಹೆಬ್ಬೆಳಕು ಅಥವಾ I 62.5 ರಲ್ಲಿ "ಅಂಗಿರಸಸ್ತುತನಾದ ಕರ್ಮವೀರನೇ, ನೀನು ಸೂರ್ಯ, ಧೇನು, ಸೋಮರೊಂದಿಗೆ ಉಷಸ್ಸುಗಳನ್ನು ತೆರೆದೆ" ಎಂದು ಹೇಳಿದಂತೆ ಅವೆಲ್ಲಾ ಒಟ್ಟಿಗೇ ಬಂದುಬಿಡುವುವು.

ಸೋಮನಂತೆಯೇ ಅಗ್ನಿಯೂ ಯಜ್ಞದ ಒಂದು ಅನಿವಾರ್ಯ ಅಂಗ. ಆದ್ದರಿಂದ VII.99.4 ರಲ್ಲಿರುವಂತೆ, "ನೀನು ಆ ಅಗಲವಾದ ಅನ್ಯಲೋಕವನ್ನು ಯಜ್ಞಕ್ಕಾಗಿ (ಯಜ್ಞದ ಗುರಿಯನ್ನಾಗಿ) ಮಾಡಿದೆ - ಸೂರ್ಯ, ಉಷೆ, ಅಗ್ನಿಗಳನ್ನು (ಅದಕ್ಕಾಗಿ) ತಂದೆ." - ಅಗ್ನಿಯನ್ನೂ ಈ ಸಂಗತಿ ಸರಮಾಲೆಯಲ್ಲಿ ಸೇರಿಸಲಾಗುತ್ತದೆ. ಇದೇ ಸೂತ್ರವು III.31.15 ರಲ್ಲಿ "ಪಥ"ದೊಡನೆ ಬಂದರೆ, VII.44.3 ರಲ್ಲಿ ಈ ಮಾಲೆಗೆ ಹಸುವೂ ಸೇರುತ್ತದೆ.

ಈ ನಿದರ್ಶನಗಳಿಂದ ವೇದದ ವಿವಿಧ ಸಮಯ (ಕಟ್ಟುಕತೆ) ಕತೆಗಳೂ ಸಂಕೇತಗಳೂ ಪರಸ್ಪರವಾಗಿ ಎಷ್ಟು ನಿಕಟವಾಗಿ ಹೆಣೆದುಕೊಂಡಿವೆ ಎಂಬುದು ತೋರುತ್ತದೆ ; ಮತ್ತು ಅಂಗಿರಸಸ್ ಮತ್ತು ಪಣಿಗಳ ದೃಷ್ಟಾಂತ ಕಥೆಯನ್ನು ಪ್ರತ್ಯೇಕವೆಂದು ಭಾವಿಸಿ, ಅದನ್ನು ನಮ್ಮ ಮನಬಂದಂತೆ ಅರ್ಥೈಸಬಹುದೆಂದುಕೊಂಡು ಎಚ್ಚರಿಕೆಯಿಲ್ಲದೆ ವೇದದ ಸಾಮಾನ್ಯ ವಿಚಾರ ಸರಣಿಯಲ್ಲಿ (ಅದರ ಚೌಕಟ್ಟಿನಲ್ಲಿ) ಇಟ್ಟು ನೋಡದೆ ಹಾಗೂ ತನ್ನ ರೂಪಕೋಕ್ತಿಗಳ ಮೂಲಕ ಆ ಕಥೆ ಸಾಮಾನ್ಯ ವಿಚಾರದ ಮೇಲೆ ಯಾವ ಬೆಳಕನ್ನು ಬೀರುತ್ತದೆ ಎಂಬುದನ್ನು ಅಲಕ್ಷಿಸಿದರೆ ನಾವು ವೇದದ ನಿಜವಾದ ವಿವರಣ ಪರಿಭಾಷಾಪಥವನ್ನು ಕಾಣದೆ ಎತ್ತೆತ್ತಲೋ ಹೋಗುವೆವು.

❖ ❖

## ಅಧ್ಯಾಯ-೧೫

# ಕಳೆದ ಸೂರ್ಯ ಮತ್ತು ಕಳೆದ ದಿನಗಳು

ಋಗ್ವೇದ ಸೂಕ್ತಗಳಲ್ಲಿ ಸೂರ್ಯ ಮತ್ತು ದಿನಗಳನ್ನು ಗೆದ್ದು ತರುವುದು ಅಥವಾ ಮರಳಿ ಪಡೆಯುವುದು ಪದೇ ಪದೇ ಸೂಚಿಸಲಾಗುವ ಪೂರ್ವಕಥೆ. ಕೆಲವೊಮ್ಮೆ ಅದು ಸೂರ್ಯನ ಶೋಧನೆ, ಕೆಲವೊಮ್ಮೆ ಸ್ವರ್‌ಲೋಕವನ್ನು ಹುಡುಕುವುದು ಅಥವಾ ಗೆದ್ದುಕೊಳ್ಳುವುದು-ಸ್ವರ್‌ಲೋಕವು ಸೂರ್ಯಲೋಕ. ಸಾಯಣನ ಪ್ರಕಾರ ಸ್ವರ್ ಎಂದರೆ ಸೂರ್ಯ. ಹಲವಾರು ಉಪಚ್ಛೇದಗಳಿಂದ ಸ್ವರ್ ಎಂದರೆ ಸಾಮಾನ್ಯ ಸ್ವರ್ಗ-ಭೂಮಿಗಳ ಮೇಲಿರುವ ಅತ್ಯುನ್ನತ ಸ್ವರ್ಗ ಯಾ ಲೋಕ ಎಂಬುದು ಸಂಪೂರ್ಣವಾಗಿ ಸ್ಪಷ್ಟವಾಗುತ್ತದೆ. ಕೆಲವೊಮ್ಮೆ ಸೂರ್ಯಪ್ರಕಾಶಕ್ಕೂ ಅವನ ಬೆಳಕಿನಿಂದಾದ ಲೋಕಕ್ಕೂ ಅನ್ವಯಿಸಿದ್ದುಂಟು. ಇಂದ್ರನು ಗೆದ್ದುಕೊಂಡು ಭೋಗಿಸಿದ ಯಾ ಸ್ವರ್ಗದಿಂದಿಳಿದು ಬಂದ ಜಲಗಳು ಮತ್ತು ಅವನು ಒಲಿಸಿಕೊಂಡ ಮರ್ತ್ಯರು - ಇವರನ್ನು "ಸ್ವರ್ವತೀಃ ಅಪಃ" ಎಂದು ಬಣ್ಣಿಸಲಾಗಿದೆ. ಸಾಯಣನು ಈ ನೀರನ್ನು ಭೂಮಿಯ ನೀರೆಂದು ಗ್ರಹಿಸಿ "ಸ್ವರ್ವತೀಃ" ಎಂಬುದಕ್ಕೆ ಮತ್ತೊಂದು ಅರ್ಥವನ್ನು ಹುಡುಕಲೇಬೇಕಾಗಿ ಬಂದು "ಸರಣವತೀಃ=ಚಲಂತೀಃ" ಎಂದು ಘೋಷಿಸುತ್ತಾನೆ. ಆದರಿದು ಬಲಾತ್ಕಾರದಿಂದ ಮಾಡಿದ ಅರ್ಥ, ಆ ಪದ ಆ ಅರ್ಥವನ್ನು ಸೂಚಿಸದು. ಅಂಥ ಅರ್ಥವನ್ನದು ತಡೆದುಕೊಳ್ಳಲೂ ಆರದು. ಇಂದ್ರನ ವಜ್ರಾಯುಧವನ್ನು ಸ್ವರ್ಗೀಯ ಕಲ್ಲೆನ್ನಲಾಗಿದೆ. "ಸ್ವರ್ಯಂ ಅಶ್ಮಾನಂ". ಅದರ ಬೆಳಕು ಸೌರ ಪ್ರಕಾಶ ಪ್ರಪಂಚದ ಒಂದು ಬೆಳಕು. ಇಂದ್ರನೇ ಸ್ವರ್ಪತಿ, ಸ್ವರ್ಗಾಧಿಪತಿ, ಪ್ರಕಾಶ ಪ್ರಪಂಚೇಶ್ವರ.

ಅಷ್ಟೇ ಅಲ್ಲದೆ, ಹಸುಗಳನ್ನು ಹುಡುಕುವ ಮತ್ತು ಮರಳಿ ತರುವ ಕೆಲಸವು ಸಾಮಾನ್ಯವಾಗಿ ಇಂದ್ರನದೆಂದು ವರ್ಣಿಸಲಾಗಿದೆ ; ಹಲವು ಸಲ ಆ ಕೆಲಸದಲ್ಲಿ ಅವನಿಗೆ ಅಂಗಿರಸ ಋಷಿಗಳು ಸಹಾಯಕರು ; ಮತ್ತು ಮಂತ್ರ ಹಾಗೂ ಯಜ್ಞಗಳ ಬಲ ಇಂದ್ರನಿಗೆ ದೊರಕುತ್ತದೆ ; ಅಗ್ನಿ ಮತ್ತು ಸೋಮರೂ ಅವನ ಬೆನ್ನಿಗಿರುತ್ತಾರೆ. ಅದೇ ಮೇರೆಗೆ ಧೇನುಶೋಧ ಮತ್ತು ಧೇನು ಪುನರಾದಾನ. ಉಕ್ತ ಕರ್ತಾರರೇ ಇದಕ್ಕೂ ಕರ್ತಾರರು. ಅವರವುಗಳನ್ನು ಕತ್ತಲಿನಿಂದ (ಬೆಳಕಿಗೆ ತಂದು) ರಕ್ಷಿಸುವುದು ಸೂರ್ಯೋದಯವಾಗುವುದನ್ನು ಸೂಚಿಸುತ್ತದೆ ; ಸೂರ್ಯನು ಮೊದಲು ಕತ್ತಲಲ್ಲಿ ಅಡಗಿದ್ದನು. ಇದೇ ಯಾವಾಗಲೂ ಯಜ್ಞ ಸಾಧನದ ಮೂಲಕ ನಡೆಯುವಂಥ ಸ್ಥಿತಿಃ ; ಇದರ ಪರಿಸ್ಥಿತಿಗಳು ಎಂದರೆ ಇದು ದೇವತೆಗಳಿಗೆ ನೆರವಾಗುವುದು, ಸ್ವರ್‌ಸ್ಥಿತಿಃ ವಿಜಯ, ಅರ್ಥಾತ್ ಅತ್ಯುಚ್ಚ ಬೆಳಕಿನ ಪ್ರಪಂಚದ ಮೇಲೆ ಪ್ರಭುತ್ವವನ್ನು ಪಡೆಯುವುದು. ನಿಃಸಂದೇಹವಾಗಿ ಇವಿಷ್ಟು ನಡೆದೇ ನಡೆಯುತ್ತವೆ - ಎಂದು ನನಗೆ ತೋರುತ್ತದೆ. ವೇದದ ಭಾಷೆಯೇ ಇದನ್ನು ಸ್ಪಷ್ಟಪಡಿಸುತ್ತದೆ ; ಆದರೆ ಇದೇ ವೇದ ಭಾಷೆಯು ಈ ಸೂರ್ಯನೇ ದಿವ್ಯ ಪ್ರಬೋಧಕ ಮಹಾಶಕ್ತಿ ಎಂಬುದನ್ನೂ

ತೋರಿಸುತ್ತದೆ ; ಸ್ವರ್ ಎಂಬುದು ದಿವ್ಯ ಮಹಾಸತ್ಯದ ಪ್ರಪಂಚ, ದಿವ್ಯ ಮಹಾಸತ್ಯದ ಮೇಲಿನ ವಿಜಯ ಇದೇ ವೇದಋಷಿಗಳ ಧ್ಯೇಯ ಮತ್ತು ಅವರ ಸೂಕ್ತಗಳ ವಿಷಯ ಎಂಬುದನ್ನೂ ಆ ಭಾಷೆಯು ಎತ್ತಿ ತೋರಿಸುತ್ತದೆ. ಆದಷ್ಟು ಬೇಗ ನಾನೀಗ ಈ ನಿಗಮನಕ್ಕೆ ಬರಲು ಇರುವ ಸಾಕ್ಷಿಯನ್ನು ಪರೀಕ್ಷಿಸುತ್ತೇನೆ.

ಮೊಟ್ಟಮೊದಲು, ವೇದಋಷಿಗಳ ಮನಸ್ಸಿನಲ್ಲಿ ಸ್ವರ್ ಮತ್ತು ಸೂರ್ಯರು ಭಿನ್ನ ಕಲ್ಪನೆಗಳೆಂಬುದನ್ನು ನಾವು ನೋಡುತ್ತೇವೆ ; ಆದರೆ ಸದಾ ಅವೆರಡೂ ಒಟ್ಟಿಗೇ ಇರುತ್ತವೆ. ಉದಾ : ಸೋಮ ಮತ್ತು ಇಂದ್ರರನ್ನು ಕುರಿತ (VI.72.1) ಸೂಕ್ತವನ್ನು ತೆಗೆದುಕೊಳ್ಳೋಣ. "ನೀವು ಸೂರ್ಯನನ್ನು ಶೋಧಿಸಿದಿರಿ, ನೀವು ಸ್ವರ್ ಲೋಕವನ್ನು ಶೋಧಿಸಿರಿ" ಎಂದಿದೆ ; ಮತ್ತು ವಾಮದೇವನು ಇಂದ್ರನನ್ನು ಕುರಿತು ಹಾಡಿದ (IV.16.4) ಸೂಕ್ತವು ಇಂದ್ರಾಂಗಿರಸರ ಈ ಸಾಧನೆಯನ್ನು ಮೆರೆಯಿಸುತ್ತದೆ: "ಪ್ರಬೋಧಕ ಸೂಕ್ತಗಳಿಂದ ("ಅರ್ಕೈಃ") ಸ್ವರ್ ಲೋಕವು ಸಿಕ್ಕಿತು, ಚೆನ್ನಾಗಿ ಪ್ರತ್ಯಕ್ಷವಾಯಿತು ; ಯಾವಾಗ? ಅಂಗಿರಸರು ಆ ಮಹಾಜ್ಯೋತಿ ಬೆಳಗುವಂತೆ ಮಾಡಿದಾಗ ಮತ್ತು ಇಂದ್ರನು ಅಂಧಕಾರವನ್ನು, ಅಂಧಕಾರದ ಹಿಡಿತವನ್ನು ಸಡಿಲಗೊಳಿಸಿದಾಗ-ಹಾಗೆ ಅವನು ಮಾಡಿದ್ದು ಜನರಿಗೆ ದರ್ಶನ, ಸಾಕ್ಷಾತ್ಕಾರ ಆಗಲಿ ಎಂದು." ಸ್ವರ್ ಮತ್ತು ಸೂರ್ಯನು ಭಿನ್ನ ಎಂಬುದನ್ನು ಮೊದಲ ಅವತರಣಿಕೆಯಲ್ಲಿ ನೋಡುತ್ತೇವೆ ಮತ್ತು ಸ್ವರ್ ಎಂಬುದು ಸೂರ್ಯನ ಪರ್ಯಾಯನಾಮಧ್ಯೇಯವಲ್ಲ ಎಂಬುದನ್ನು ಕಾಣುತ್ತೇವೆ. ಆದರೆ ಅದೇ ಸಮಯದಲ್ಲಿ ಸ್ವರ್‌ಶೋಧ, ಸೂರ್ಯಶೋಧಗಳನ್ನು ಸಂಬಂಧಿಸಿದಂತೆ ಚಿತ್ರಿಸಲಾಗಿದೆ ಮತ್ತು ಅವೆರಡೂ ನಿಜವಾಗಿಯೂ ಒಂದೇ ಕಾರ್ಯದಲ್ಲಿ ನಡೆದಂಥವುಗಳು ಹಾಗೂ ಅವುಗಳ ಪರಿಣಾಮವು ಎಲ್ಲ ಕತ್ತಲನ್ನೂ ಇತಿಮಿತಿಕಾರಕಗಳನ್ನೂ ನಾಶಮಾಡುವುದೇ ಆಗಿದೆ. ಆದ್ದರಿಂದ ಎರಡನೆಯ ಅವತರಣಿಕೆಯಲ್ಲಿ "ಸ್ವರ್" ಶೋಧ ಮತ್ತು "ಸ್ವರ್" ಪ್ರದರ್ಶನಗಳನ್ನೂ ಕತ್ತಲಿಂದ ಹೆಬ್ಬೆಳಕೆದ್ದು ಬೆಳಗುವುದರೊಡನೆ ತಳಕು ಹಾಕಲಾಗಿದೆ. ಈ ವಿಷಯವನ್ನು ತತ್ಸಮ ಉಪಚ್ಛೇದಗಳಲ್ಲಿ ಅಂಗಿರಸರು ಕತ್ತಲೊಳಗಡಗಿದ್ದ ಸೂರ್ಯನನ್ನು ಪುನಃ ಪಡೆಯುವ ಉಲ್ಲೇಖದಲ್ಲಿ ಕಾಣಬಲ್ಲೆವು. ಸತ್ಯಮಂತ್ರಗಳಿಂದ ಯಾ ತಮ್ಮ ಸೂಕ್ತಗಳ ಮಹಿಮೆಯಿಂದ ಸೂರ್ಯನು ದೊರಕಿದನು ; "ಸ್ವರ್" ಕೂಡಾ ಅವರ ಅರ್ಕಗಳಿಂದ ಅರ್ಥಾತ್ ಸೂಕ್ತಗಳಿಂದ ಸಿಕ್ಕಿತು. ಆದುದರಿಂದ, ಸ್ವರ್‌ಲೋಕದ ಸಾರವೆಂದರೆ ಒಂದು ಮಹಾಜ್ಯೋತಿ ಮತ್ತು ಆ ಬೆಳಕೆಂದರೆ ಸೂರ್ಯನ ಬೆಳಕೇ ಎಂಬುದು ಸ್ಪಷ್ಟವಾಗುತ್ತದೆ.

ಸೂರ್ಯನ ಪರ್ಯಾಯ ನಾಮವೆಂದು ಬೇಕಾದರೂ ನಾವು "ಸ್ವರ್" ಪದವನ್ನು ತೆಗೆದುಕೊಳ್ಳಬಹುದು. ಸೂರ್ಯ=ಬೆಳಕು=ಆಕಾಶ. ಯಾವಾಗ? ಇತರ ಉಪಚ್ಛೇದಗಳಲ್ಲಿ "ಸ್ವರ್" ಎಂಬುದೊಂದು ಪ್ರತ್ಯೇಕ ಲೋಕದ ಹೆಸರೆಂಬುದು ಗೊತ್ತಾಗದಿದ್ದಾಗ. ಆದರ ವಸ್ತುಸ್ಥಿತಿ ಹಾಗಿಲ್ಲ : ಸ್ವರ್‌ಲೋಕವು (ರೋದಸೀ) ದ್ಯಾವಾ ಪೃಥಿವಿಗಳಿಗಿಂತ ಭಿನ್ನವಾದ ಲೋಕ-ಎಂದು ಪದೇ ಪದೇ ಸೂಚಿಸಲಾಗಿದೆ-ಅದನ್ನು "ಉರುಲೋಕ" ಎಂದು ಸಹಾ ಪರ್ಯಾಯವಾಗಿ ಕರೆಯಲಾಗಿದೆ : ಉರುಲೋಕ=ವಿಶಾಲವಾದ ಲೋಕ - "ಉರುಲೋಕ" ಯಾ ಬರಿದೆ, "ಉಲೋಕ"-ಉರು=-ವಿಸ್ತಾರವಾದ, ಮತ್ತು ಉ=ಅನ್ಯ. ಈ ಲೋಕವನ್ನು ಮಹಾವ್ಯಾಪ್ತಿಯುಳ್ಳ ಬೆಳಕಿನಲೋಕಗಳಲ್ಲಿ ಒಂದೆಂದೂ ವಿಸ್ತಾರವಾದ ಸ್ವಾತಂತ್ರ್ಯವುಳ್ಳ ಲೋಕಗಳಲ್ಲಿ ಒಂದೆಂದೂ ಗೋವುಗಳು(ಸೂರ್ಯ ಕಿರಣಗಳು) ಮನಬಂದಂತೆ ಕುಣಿದಾಡುತ್ತಿರುವ ಲೋಕಗಳಲ್ಲಿ ಒಂದೆಂದೂ ಬಣ್ಣಿಸಲಾಗಿದೆ. ಆದ್ದರಿಂದ VI.47.8. ನೆಯ ಋಕ್ಕಿನಲ್ಲಿ "ಸ್ವರ್‌ಜ್ಯೋತಿರಭಯಂಸ್ವಸ್ತಿ= ನಿನ್ನ ಜ್ಞಾನ ಬಲದಿಂದ

ನೀನು ನಮ್ಮನ್ನು ವಿಸ್ತಾರವಾದ ಲೋಕಕ್ಕೆ, ಸ್ವರ್‌ಲೋಕಕ್ಕೆ ಕೂಡಾ, ಅರ್ಥಾತ್, ಸುಖಾಸ್ತಿತ್ವವುಳ್ಳ ನಿರ್ಭಯ ಸ್ವಾತಂತ್ರ್ಯದ ಜ್ಯೋತಿರ್‌ಲೋಕಕ್ಕೆ ಕೂಡಾ ಕರೆದುಕೊಂಡು ಹೋಗುತ್ತೀಯೆ. III.2.7. ನೆಯ ಋಕ್ಕಿನಲ್ಲಿ ವೈಶ್ವಾನರಾಗ್ನಿಯನ್ನು ಭೂಮಿ-ಸ್ವರ್ಗ-ಸ್ವರ್ಲೋಕಗಳನ್ನು ತುಂಬಿಕೊಂಡಿರುವ-ವನೆಂದು ("ಆ ರೋದಸೀ ಅಪೃಣದ್ ಆ ಸ್ವರ್ ಮಹತ್"). ಹೀಗೇ ವಸಿಷ್ಠನು ತನ್ನ ವಿಷ್ಣು ಸೂಕ್ತದಲ್ಲಿ VII.99.3.4 "ನೀನು ದೃಢವಾಗಿ ಹೇ ವಿಷ್ಣುವೇ, ಈ ಭೂಮಿ-ಸ್ವರ್ಗಗಳನ್ನು ಸೂರ್ಯ ಕಿರಣಗಳಿಂದ ಎತ್ತಿ ಹಿಡಿದಿರುವೆ ; ಭೂಮಿಯನ್ನು ಸುತ್ತಲೂ (ಸುತ್ತಿ) ಹಿಡಿದಿರುವೆ. ಯಜ್ಞಕ್ಕಾಗಿ ನೀವು ಉರು ಉ ಲೋಕಂ=ವಿಸ್ತಾರವಾದ ಮತ್ತೊಂದು ಲೋಕವನ್ನು ನಿರ್ಮಿಸಿದಿರಿ ಯಜ್ಞ ಸಾಫಲ್ಯಕ್ಕಾಗಿ ಜೊತೆಗೇ ನೀವಿಬ್ಬರೂ ಸೂರ್ಯ, ಅಗ್ನಿ, ಉಷಸ್ಸುಗಳನ್ನೂ ಸೃಷ್ಟಿಸಿದಿರಿ. ಇಲ್ಲಿ ಪುನಃ ನಾವು ಸ್ವರ್ಲೋಕವೆಂಬ ವಿಸ್ತಾರವಾದ ಲೋಕಕ್ಕೂ ಸೂರ್ಯೋಷಸ್ಸುಗಳ ಹುಟ್ಟಿಗೂ (ತೋರಿಕೆಗೂ) ನಿಕಟ ಸಂಬಂಧವಿರುವುದನ್ನು ನೋಡುತ್ತೇವೆ. ಇದನ್ನು ಯಜ್ಞಫಲವೆಂದೂ ತೀರ್ಥಯಾತ್ರೆಯ ಕೊನೆ ಎಂದೂ ನಾವು ಸೇರುವ ವಿಶಾಲ ಸೌಧವೆಂದೂ "ಸುಕೃತಂ ಉಲೋಕಂ"=ಯಜ್ಞವನ್ನು ಚೆನ್ನಾಗಿ ಮಾಡಿದವರು ಹೋಗುವ ಲೋಕವೆಂದೂ ವರ್ಣಿಸಲಾಗಿದೆ. ಅಗ್ನಿಯು ಭೂಮಿ-ಸ್ವರ್ಗಗಳ ದೂತನಾಗಿ ಹೋಗಿ ಆಮೇಲೆ ತನ್ನ ಸತ್ತೆಯಿಂದ ಈ ವಿಶಾಲಗೃಹವನ್ನು ಮುಸುಕುತ್ತಾನೆ-"ಕ್ಷಯಂ ಬೃಹತಂ ಪರಿಭೂಷತಿ" III.3.2. ಆ ಲೋಕವು ಆನಂದಮಯ ಲೋಕ. ಅದರಲ್ಲಿ ವೈದಿಕ ಋಷಿ ಬಯಸಿದ್ದೆಲ್ಲಾ ಸಿಕ್ಕುತ್ತದೆ. "ಓ ಅಗ್ನಿ, ಓ ಜಾತವೇದಸ್, ತನ್ನ ಕೆಲಸಗಳನ್ನು ಚೆನ್ನಾಗಿ ಮಾಡಿದ್ದರಿಂದ ಅವನಿಗಾಗಿ ನೀನು ಆ ಅನ್ಯಲೋಕವಾದ ಆನಂದಮಯ ಲೋಕವನ್ನು ನಿರ್ಮಿಸಲು ಸಂಕಲ್ಪಿಸುತ್ತೀಯೆ ; ಅಶ್ವ, ಅಪತ್ಯ, ವೀರ, ದನ ಮತ್ತು ಸುಖ ಸತ್ತೆಗಳನ್ನು ಅವನು ಪಡೆಯುವಂತೆ ಮಾಡುತ್ತೀಯೆ" (V.4.11) ಈ ದಿವ್ಯ ಜ್ಯೋತಿಸ್ಸಿನಿಂದಲೇ ಈ ದಿವ್ಯಾನಂದ ಪ್ರಾಪ್ತಿ. ಸಕಾಮ ಮಾನವ ಕುಲಕ್ಕಾಗಿಯೇ ಅಂಗಿರಸರು ಸೂರ್ಯ, ಉಷೆ, ಹಗಲುಗಳನ್ನು ಹುಟ್ಟಿಸಿದರು. "ಸ್ವರ್ ಲೋಕವನ್ನು ಗೆಲ್ಲುವ ಇಂದ್ರನೂ ಹಗಲುಗಳೂ ಹುಟ್ಟುವಂತೆ ಮಾಡಿ, ಉಶಿಗ್ಗರಿಂದ ("ಉಶಿಗ್ಭಿಃ" ಎಂಬುದು ನೃಶಬ್ದದಂತೆಯೇ ಮಾನವರಿಂದ, ದೇವತೆಗಳಿಂದ ಯಾ ಅಂಗಿರಸರಿಂದ-ಎಂದು ಅರ್ಥವಾಗುತ್ತದೆ) ಅಂಗಿರಸರು ಆ ಲೋಕವನ್ನು ಪಡೆಯುತ್ತಾರೆ. ಅವರಿಗಾಗಿ ಇಂದ್ರನು ಸೈನ್ಯಗಳನ್ನು ಬಗ್ಗು ಬಡಿಯುತ್ತಾನೆ, ದಿನದರ್ಶನವು ಮಾನವರಿಗಾಗಿ ಮೂಡಿಬರುವಂತೆ ಮಾಡುತ್ತಾನೆ ("ಕೇತುಂ ಅಹ್ನಾಂ") ಮತ್ತು ಮಹಾನಂದಲಾಭಕ್ಕಾಗಿ ಮಹಾಜ್ಯೋತಿಯನ್ನು ರೂಪಿಸಿದ್ದಾನೆ - "ಅವಿಂದಜ್‌ಜ್ಯೋತಿರ್ ಬೃಹತೇ ರಣಾಯ" (III.34.4).

ಈಯೆಲ್ಲವೂ ರೆಡ್ ಇಂಡಿಯನ್ನರು ಕಲ್ಪಿಸಿಕೊಂಡ ಒಂದು ವಿಧದ ಬಾನುಬುವಿಗಳಾಚೆಗಿನ ಭೌತಿಕ ಪ್ರಪಂಚ-ಅದು ಭೂಮ್ಯಾಕಾಶಗಳಾಚೆಗಿದೆ. ಸೂರ್ಯ ಕಿರಣಗಳಿಂದ ನಿರ್ಮಿಸಲಾದ ಲೋಕವದು-ಮಾನವನು ಅಲ್ಲಿ ನಿರ್ಭಯದಿಂದ, ನಿಃಸೀಮನಾಗಿ ತಿರುಗಾಡಬಹುದು - ಅದೊಂದು ವಿಸ್ತಾರವಾದ ಜಗತ್ತು ; ಮಾನವನ ಬಯಕೆಗಳೆಲ್ಲಾ ಅಲ್ಲಿ ಪೂರಯಿಸಲ್ಪಡುವುವು-ಅವನಿಗಲ್ಲಿ ಅಸಂಖ್ಯಾತ ಕುದುರೆ, ದನ, ಮಕ್ಕಳು, ಪರಿವಾರದವರು ದೊರಕುತ್ತಾರೆ ಎಂಬ ಅರ್ಥವನ್ನು ಒಂದಕ್ಕೊಂದು ಸಂಬಂಧವಿಲ್ಲದ ಕೆಲ ಉಪಚ್ಛೇದಗಳನ್ನು ತೆಗೆದುಕೊಂಡು ವಿವರಿಸಿ ಹೇಳಬಹುದು. ಆದರೆ ನಾವಿಲ್ಲಿ ಸಿದ್ಧ ಮಾಡಲು ಹೊರಟದ್ದೇನೆಂದರೆ : ಅದು ಹಾಗಿಲ್ಲ ; ತದ್ವಿರುದ್ಧವಾಗಿ ನಾವು ತಿಳಿಯಬೇಕಾದ ವೇದೋಕ್ತವಾದ "ಬೃಹದ್ ದ್ಯೌ ಅಥವಾ ಸ್ವರ್" ಎಂಬುದು ಭೂಮಿ ಸ್ವರ್ಗಗಳನ್ನು ದಾಟಿದ ಮೇಲೆ ಲಭ್ಯ ಎಂಬುದನ್ನು. ಏಕೆಂದರೆ, ಅನೇಕ ಸಲ ಅದನ್ನಿಲ್ಲಿ ಹೇಳಲಾಗಿದೆ. ಉದಾ: I.36.8. "ಮನುಷ್ಯರು ಪ್ರಚ್ಛಾದಕನನ್ನು ಕೊಂದು ಭೂಮಿ ಸ್ವರ್ಗಗಳನ್ನು ದಾಟಿ ಹೋಗಿ ವಿಶಾಲ

ಜಗತ್ತನ್ನು ತಮ್ಮ ಮನೆಯನ್ನಾಗಿ ಮಾಡಿಕೊಂಡರು. "ಘ್ನಂತೋ ವೃತ್ರಂ ಅಂತರನ್ ರೋದಸೀ ಅಪ ಉರು ಕ್ಷಯಾಯ ಚಕ್ರಿರೇ" - ಈ ಸ್ವಗೋತ್ತರ ನಿಃಸೀಮ ಬಯಲು, ಈ ಸೀಮಾತೀತ ಬೆಳಕು ಎಂಬುದು ಮಾನಸೋತ್ತರ ಸ್ವರ್ಗ, ಅತಿಮಾನಸ ಪರಮಸತ್ಯದ ಸ್ವರ್ಗ, ಅಮರ್ತ್ಯತೆಯೆಂಬ ಮಹಾಮೋಕ್ಷ ; ಈ ಮೋಕ್ಷದ[೧] ಹೂರಣವಾದ ಬೆಳಕು ಅದರ ದ್ರವ್ಯಸಾರ ಸ್ವರೂಪದ ವಾಸ್ತವಿಕ ಪದಾರ್ಥ, ಪರಮಸತ್ಯದ ಪರಂಜ್ಯೋತಿ-ಎಂಬುದನ್ನು ಸಿದ್ಧಮಾಡ ಹೊರಟಿದ್ದೇವೆ. ಆದರೀಗಿನ ಮಟ್ಟಿಗೆ-ಅದೊಂದು ನಮ್ಮ ಕಣ್ಣಿಗೆ ಜೀಳದಂತೆ ಒಂದು ತರದ ಕತ್ತಲಲ್ಲಿ ಅಡಗಿಸಿಟ್ಟ ಸ್ವರ್ಗ, ಅದನ್ನು ಹುಡುಕಿ ತೆಗೆದು ಕಾಣಿಸುವಂತೆ ಮಾಡಬೇಕು, ಈ ಶೋಧವನ್ನು ದರ್ಶನಾರ್ಹತೆಯನ್ನೂ ಸಾಧಿಸುವುದು ಉಷೋದಯವನ್ನವಲಂಬಿಸಿದೆ ; ಸೂರ್ಯೋದಯದ ಮೇಲೆ ನಿಂತಿದೆ ; ಗುಪ್ತ ಗುಹೆಯಿಂದ ಸೌರವ್ರಜಗಳು ಮೇಲೇಳುವುದನ್ನು, ಹೊರಜೀಳುವುದನ್ನು, ಆಧರಿಸಿದೆ. ವಿಜಯಿಗಳಾದ ಯಾಜ್ಞಿಕ (ಯಜಮಾನ) ಜೀವಾತ್ಮಗಳು ಸ್ವರ್‌ದೃಶ್ ಮತ್ತು ಸ್ವರ್‌ವಿದ್ ಸ್ವರ್ ದ್ರಷ್ಟಾರರು, ಸ್ವರ್ ಶೋಧಕರು ಯಾ ಸ್ವರ್‌ವಿದರೆನ್ನಿಸುತ್ತಾರೆ ; ವಿದ್ ಧಾತುವಿಗೆ ಹುಡುಕು, ಪಡೆ, ತಿಳಿ ಎಂಬರ್ಥಗಳಲ್ಲದೆ ಕೆಲ ಉಪಚ್ಛೇದಗಳಲ್ಲಿ ಅಸಂದಿಗ್ಧವಾದ ಜ್ಞಾಧಾತುವನ್ನು ಪರ್ಯಾಯವನ್ನಾಗಿ ಬಳಸಲಾಗಿದೆ ; ಅಲ್ಲದೆ ವೇದವು ಬೆಳಕು ಕತ್ತಲೆಯೊಳಗಿಂದಲೇ ತಿಳಿದುಬರುತ್ತದೆ ಎಂದು ಹೇಳುತ್ತದೆ. ಉಳಿದವರಿಗೆ ಸ್ವರ್ ಯಾ ವಿಶಾಲಲೋಕ ಎಂಬುದು ಅತಿಮುಖ್ಯ-ಅದಿಲ್ಲದೆ ವೇದಾರ್ಥ ವಿವರಣೆ ಸಾಧ್ಯವಾಗದು. ಆ ಅಕ್ಷದ ಸುತ್ತಲೂ ವೇದವೆಂದರೆ ಬರ್ಬರರ ಸೂಕ್ತಜ್ಞಾನ ಎಂಬ ಮತ್ತು ಪ್ರಾಚೀನ ಜ್ಞಾನಭಂಡಾರ ಎಂಬ ಸಿದ್ಧಾಂತಗಳು ಸುತ್ತುತ್ತಿವೆ-ಜ್ಞಾನಭಂಡಾರ ಎಂದರೇ ನಿಜವಾದ ವೇದ. ಈ ಪ್ರಶ್ನೆಯನ್ನು ಪರಿಹರಿಸಲು ನೂರಕ್ಕೂ ಮಿಕ್ಕಿದ ವೇದಾವತರಣಿಕೆಗಳನ್ನೆತ್ತಿಕೊಂಡು ಚರ್ಚಿಸಬೇಕು-ಅವುಗಳ ವಸ್ತು ಈ ವಿಸ್ತಾರ ವೈಭವದ ಅಸೀಮ ಲೋಕವಾಗಿರಬೇಕು. ಈ ಕೆಲಸ ಈ ಅಧ್ಯಾಯಗಳ ವ್ಯಾಪ್ತಿಗೆ ಮೀರಿದ್ದು. ಅಂಗಿರಸರ ಸೂಕ್ತಗಳ ಹಾಗೂ ಅನಂತರದ ಸೂಕ್ತಗಳ ಬಗೆಗೆ ನಾವು ಚರ್ಚಿಸಬೇಕು; ಆಗ ನಾವತ್ತ ಲಕ್ಷ್ಯ ಹಾಕೋಣ.

ಆದುದರಿಂದ ಸೂರ್ಯೋಷೆಯರ ಜನನವು ಸ್ವರ್‌ಲೋಕವನ್ನು ನಾವು ನೋಡಲು ಯಾ ಹೊಗಲು ಉಪಾಧಿ ಎಂದು ತಿಳಿಯಲ್ಪಟ್ಟಿರುವುದು ಗಮನಾರ್ಹ. ವೇದದ ಈ ಪುರಾಣ ಕಥೆಗೆ ಯಾ ಪ್ರತಿಮಾ ವಿನ್ಯಾಸಕ್ಕೆ ಇಷ್ಟು ಪ್ರಾಮುಖ್ಯ ಬಂದುದೇಕೆ ಎಂಬುದನ್ನು ಇದೊಂದೇ ವಿವರಿಸಬಲ್ಲುದು. ಬೆಳಗಿಸುವ, ಹುಡುಕಿ ತೆಗೆಯುವ, ಸತ್ಯಮಂತ್ರಬಲದಿಂದ ಕತ್ತಲೆಯೊಳಗಿನಿಂದ ಬೆಳಕು ಹುಟ್ಟಿ ಬರುವಂತೆ ಮಾಡುವ ವೇದ ಪ್ರತಿಮೆಯೂ ಅಷ್ಟೇ ಮುಖ್ಯ. ಇದನ್ನು ಇಂದ್ರ ಮತ್ತು ಅಂಗಿರಸರು ಮಾಡುತ್ತಾರೆ. ಇದನ್ನು ಸೂಚಿಸುವ ಉಪಚ್ಛೇದಗಳು ಅಸಂಖ್ಯಾತ. ಇಂದ್ರನೂ ಅಂಗಿರಸರೂ ಸ್ವರ್‌ಲೋಕವನ್ನೂ ಯಾ ಸೂರ್ಯನನ್ನು "ಅವಿದತ್" ಕಂಡುಹಿಡಿದುದಾಗಿ ವರ್ಣಿಸಲಾಗಿದೆ. ಅದನ್ನವರು "ಅರೋಚಯತ್" ಹೊಳೆಯುವಂತೆ ಮಾಡಿದರು ; ಅವರದನ್ನು "ಅಜನಯತ್" ಹುಟ್ಟಿಸಿದವರು. (ವೇದದಲ್ಲಿ ದೇವತೆಗಳು ಯಜ್ಞದಲ್ಲಿ ಪ್ರತ್ಯಕ್ಷರಾಗುವುದನ್ನು ಹುಟ್ಟುವುದೆಂದು ವರ್ಣಿಸಲಾಗಿರುವುದನ್ನು ನಾವು ನೆನಪಿಟ್ಟುಕೊಳ್ಳಬೇಕು) ; ಅವರು ಅದನ್ನು "ಸನತ್" ಗೆದ್ದು ವಶಪಡಿಸಿಕೊಂಡವರೂ ಹೌದು : ಅನೇಕ ವೇಳೆ ಇಂದ್ರನೊಬ್ಬನೇ ಹಾಗೆ ಮಾಡಿದನೆಂದು ವರ್ಣಿಸಲಾಗಿರುವುದು ನಿಜ.

---

೧. ರೆಡ್ ಇಂಡಿಯನ್ನರ "ಮೋಕ್ಷವು" ಭೌತಿಕ (Physical) ; ಆದರೆ ವೇದರ್ಷಿಗಳ ಧ್ಯೇಯವು ಅಭೌತಿಕ, ಅತಿಮಾನಸ, ಸುಪ್ರಮಾನಸ, ಗಡಿಮಿತಿ ಇಲ್ಲದ ನಿರ್ವಿಕಲ್ಪವೂ ನಿತ್ಯವೂ ಆದ, ಪುನರ್ಜನ್ಮರಹಿತವಾದ, ಆನಂದಸಾಗರ, ಪರಮಾರ್ಥ, ಆತ್ಯಂತಿಕ ಸತ್‌ಚಿತ್ ಎಂಬುದು ತಾತ್ಪರ್ಯ. -ಅನುವಾದಕ

ಅವನೇ ರಾತ್ರಿಯಿಂದ ಬೆಳಕನ್ನು ಮಾಡಿದವನು. ಸೂರ್ಯನನ್ನು ಹುಟ್ಟಿಸಿದವನು - "ಕ್ಷಪಾಂವಸ್ತಾ ಜನಿತಾ ಸೂರ್ಯಸ್ಯ" (III.49.4.) ಅವನೇ ಸೂರ್ಯನನ್ನೂ ಉಷೆಯನ್ನೂ ಹುಟ್ಟಿಸಿದವನು (II.12.7) ಅಥವಾ ಇನ್ನೂ ಅಧಿಕ ಪದಸಂಹತಿಯಿಂದ ವೇದವು ಸೂರ್ಯನನ್ನೂ ಸ್ವರ್ಗವನ್ನೂ ಉಷೆಯನ್ನೂ ಒಟ್ಟಿಗೇ ಹುಟ್ಟಿಸಿದನು (VI.30.5). ತನ್ನ ಹೊಳಪಿನಿಂದ ಅವನು ಉಷೆ ಉದಯಿಸುವಂತೆ, ಸೂರ್ಯನು ಉರಿದೇಳುವಂತೆ ಮಾಡುತ್ತಾನೆ - "ಹರ್ಯನ್ ಉಷಸಂ ಅರ್ಚಯಃ ಸೂರ್ಯಂ ಹರ್ಯನ್ ಅರೋಚಯಃ" (III.44.2). ಇವೇ ಅವನ ಮಹಾಸಾಧನೆಗಳು-ಜಜಾನ ಸೂರ್ಯಂ ಉಷಸಂ ಸುದಂಸಾಃ (III.32.8) ತನ್ನ ತೇಜಸ್ವಿ ಸ್ನೇಹಿತರೊಡನೆ ಅವನು ಕ್ಷೇತ್ರವನ್ನು ಒಡೆಯತನ ನಡೆಸಲೆಂದು ಗೆಲ್ಲುತ್ತಾನೆ. (ಅತ್ರಿಯು ಹೊಳೆಯುವ ದನಗಳನ್ನು ಕಂಡದ್ದು ಇದೇ ಕ್ಷೇತ್ರದಲ್ಲಲ್ಲವೇ?). ಅಲ್ಲದೆ, ಅದೇ ಇಂದ್ರನು ಸೂರ್ಯನನ್ನೂ, ಜಲವನ್ನೂ ಗೆದ್ದು ತರುತ್ತಾನೆ- ಸನತ್ ಕ್ಷೇತ್ರಂ ಸಖಿಭಿಃ ಶ್ವಿತ್ನ್ಯೇಭಿಃ ಸನತ್ ಸೂರ್ಯಂ ಸನದ್ ಅಪಃ ಸುವಜ್ರಃ (I.100.18) ಅವನು ಸ್ವರ್ಷನೂ=ಸ್ವರ್ ಜಯಿಯೂ ಹೌದು-ನಾವು ಕಂಡಂತೆ ಹಗಲುಗಳನ್ನು ಹುಟ್ಟಿಸುವುದರಿಂದ. ದೂರ ದೂರ ಇರುವ ಒಂಟಿ ಉಪಚ್ಛೇದಗಳಲ್ಲಿ ಸೂರ್ಯನ ಈ ಹುಟ್ಟನ್ನು, ದೇವತೆಗಳು ಮೊಟ್ಟಮೊದಲು ಸೂರ್ಯನನ್ನು ಹುಟ್ಟಿಸಿದ ಸಂಗತಿಯನ್ನು ಹೇಳುತ್ತವೆ ಎಂದು ತಿಳಿದುಕೊಳ್ಳಬಹುದು ; ಆದರೆ ಇವನ್ನೂ ಇತರ ಉಪಚ್ಛೇದಗಳನ್ನೂ ಒಟ್ಟಿಗೆ ತೆಗೆದುಕೊಂಡಾಗ ಅಲ್ಲ. ಅವನ ಈ ಹುಟ್ಟು ಉಷೆಯ ಜೊತೆಗೆ ಮತ್ತು ಇರುಳಿನ ಹೊಟ್ಟೆಯಿಂದ. ಈ ಹುಟ್ಟು ಯಜ್ಞದ ಫಲವಾಗಿಯೇ- "ಇಂದ್ರಃ ಸುಯಜ್ಞಾ ಉಷಸಃ ಸ್ವರ್ ಜನತ್" (II.21.4) ಇಂದ್ರನು ಯಜ್ಞಮಾಡಿ ಉಷೆಯನ್ನೂ, ಸ್ವರ್‌ಲೋಕವನ್ನೂ ಹುಟ್ಟಿಸಿದನು. ಅದನ್ನು ಮಾಡಿದ್ದು ಮಾನವರ ನೆರವಿನಿಂದ "ಅಸ್ಮಾಕೇಭಿರ್ ನೃಭಿಃ ಸೂರ್ಯಂ ಸನತ್," ನಮ್ಮ ಜನಗಳ ನೆರವಿನಿಂದ ಅವನು ಸೂರ್ಯನನ್ನು ಗೆಲ್ಲುತ್ತಾನೆ. (I.100.6) ; ಮತ್ತು ಅನೇಕ ಸೂಕ್ತಗಳಲ್ಲಿ ಅದನ್ನು ಅಂಗಿರಸರ ಕೆಲಸದ ಫಲವೆಂದೂ ಬೆಟ್ಟ ಮುರಿದ ಅಥವಾ ದನಗಳನ್ನು ಬಿಡಿಸಿಕೊಂಡು ಬಂದ ಸಂಗತಿಯೊಡನೆ ಸಂಬಂಧಿಸಿದ್ದಾಗಿಯೂ ವರ್ಣಿಸಲಾಗಿದೆ.

ಉಳಿದವುಗಳೊಡನೆ ಈ ಸಂದರ್ಭವೂ ಸೂರ್ಯನ ಹುಟ್ಟು ಯಾ ಉಷಃಕಾಲೀನ ಶೋಧ ಎಂಬುದನ್ನು ದಿನವೂ (ಇಂದ್ರ) ಮಾಡುವ ಕೆಲಸ ಎಂದೋ ಸರಳವಾಗಿ ಇದೊಂದು ಆಕಾಶ ವರ್ಣನೆ ಎಂದೋ ತಿಳಿದುಕೊಳ್ಳಲಾರದಂತೆ ಮಾಡಿದೆ. ಕುರುಡು ಕತ್ತಲಲ್ಲೂ ಅವನು ಬೆಳಕನ್ನು ಹುಡುಕಿ ತೆಗೆಯುತ್ತಾನೆ ಎಂದು "ಸೋ ಅಂಧೇ ಚಿತ್ ತಮಸಿ ಜ್ಯೋತಿರ್ ವಿದತ್" (I.100.8) ಹೇಳಿರುವಾಗ, ಇದು ಒಂದೇ ಬೆಳಕು, ಅಗ್ನಿ ಸೋಮರು ಹುಡುಕಿ ತೆಗೆದದ್ದೇ, ಎಲ್ಲ ಪ್ರಾಣಿಗಳಿಗಾಗಿ, "ಅವಿಂದತಂ ಜ್ಯೋತಿರ್ ಏಕಂ ಬಹುಭ್ಯಃ" ; ಅವರು ದನಗಳನ್ನು ಪಣಿಗಳಿಂದ ಕದ್ದುಕೊಂಡು ಹೋದಾಗ (I.93.4) "ಜಾಗರಿತ ಜ್ಯೋತಿಯು ಸತ್ಯವರ್ಧನರು ಉದಯಿಸುವಂತೆ ಮಾಡಿದಾಗ ದೇವರಿಗೆ ಬದಲು ದೇವರು ಬಂದ" ಎಂದು ಬಣ್ಣಿಸಿದ ಗುಪ್ತಜ್ಯೋತಿಯು ("ಗೂಳ್ಹಂಜ್ಯೋತಿಃ"), ಪಿತೃಗಳಾದ ಅಂಗಿರಸರು ತಮ್ಮ ನಿಜಮಂತ್ರದಿಂದ ಉಷೆಯನ್ನು ಹುಟ್ಟಿಸಿದಾಗ ಅವರಿಗೆ ಸಿಕ್ಕಿತು. ಇದನ್ನೇ ವಿಶ್ವದೇವರಿಗೆ ಸಲ್ಲಿಸಿದ ಯೌಗಿಕ ಸೂಕ್ತದಲ್ಲಿ ಹೇಳಿದೆ, (VIII.29.10) ವೈವಸ್ವತ ಮನು ಯಾ ಕಶ್ಯಪ ಉಕ್ತ ಸೂಕ್ತಕಾರರು : ಅದರಲ್ಲಿ "ಆ ಸೂಕ್ತವನ್ನು ಹಾಡಿದ ಕೆಲವರು ಬಲಿಷ್ಠ ಸಾಮವನ್ನು ಚಿಂತನದಿಂದ ಸೃಜಿಸಿದರು ಮತ್ತು ಅದರಿಂದ ಅವರು ಸೂರ್ಯನು ಹುಟ್ಟುವಂತೆ ಮಾಡಿದರು." ಇದನ್ನು ಮನುಷ್ಯ ಹುಟ್ಟುವುದಕ್ಕಿಂತ ಮುಂಚೆ ಮಾಡಿದ್ದಾಗಿ ಹೇಳಿಲ್ಲ. VII.91.1 ರಲ್ಲಿ "ನಮ್ಮ ನಮನಗಳಿಂದ ವರ್ಧಿಸುವ ದೇವತೆಗಳು, ಹಳಬರಾದ ದೇವತೆಗಳು, ನಿಷ್ಕಲಂಕರು

(ನಿರ್ದೋಷಿಗಳು), ಮನುಷ್ಯನಿಗಾಗಿ, (ಇರುಳ ಕಸುವಿನಿಂದ) ಮನುಷ್ಯ ದಿಕ್ಕಾಣದಾದಾಗ, ಸೂರ್ಯನಿಂದ ಉಷೆ ಬೆಳಗುವಂತೆ ಮಾಡಿದರು." ತಮ್ಮ ೧೦ ತಿಂಗಳ ಯಜ್ಞದಿಂದ ಅಂಗಿರಸರು ಅಂಧಕಾರದಲ್ಲಿ ವಾಸಿಸಿದ್ದ ಸೂರ್ಯನನ್ನು ಹುಡುಕಿ ತೆಗೆದ ಪ್ರಕರಣ ಇದೇ. ಈ ಪ್ರತಿಮೆಯ ರೂಪಕೋಕ್ತಿಯ ಅಥವಾ ಪುರಾಣ ಕಥೆಯ ಮೂಲವು ಯಾವುದಾದರೂ ಆಗಿರಲಿ, ಅದಂತೂ ಹಳೆಯದೆಂಬುದು ನಿಜ ಮತ್ತು ಸರ್ವತ್ರ ಪ್ರಚುರವಾಗಿತ್ತೆಂಬುದೂ ಸತ್ಯ ; ಮನುಜನು ಬಹುಕಾಲ ಅಂಧಕಾರದಲ್ಲಿದ್ದ, ಸೂರ್ಯದರ್ಶನ ರಹಿತನಾಗಿದ್ದ ಎಂಬುದನ್ನು ಹೇಳುತ್ತದೆ. ಈ ಕಥಾ ವಿಷಯವು ಭಾರತದ ಆರ್ಯರಲ್ಲಿ ಅಷ್ಟೇ ಅಲ್ಲ, ಅಮೇರಿಕದ ಮಯರಲ್ಲಿಯೂ ರೂಢಿಯಲ್ಲಿತ್ತು ಎಂಬುದು ಗೊತ್ತಾಗಿದೆ. ಮಯನಾಗರಿಕತೆಯು ಹೆಚ್ಚು ಒರಟಾಗಿತ್ತಲ್ಲದೆ, ಈಜಿಪ್ಟಿನ (ನಾಗರಿಕತೆಯ) ಸಂಸ್ಕೃತಿಯ ಒಂದು ಪೂರ್ವಾವಸ್ಥೆಯಾಗಿರಲೂಬಹುದು. ಅಲ್ಲಿಯೂ ಇದು ಸೂರ್ಯಪುರಾಣವೇ-ಅಂಧಕಾರದಲ್ಲಿ ಸೂರ್ಯನು ಬಹುಕಾಲ ಅಡಗಿದ್ದನು ಮತ್ತು ಜ್ಞಾನಿಗಳ (ವಿವೇಕಿಗಳ) [ಅರ್ಥಾತ್ ಅವರು ಅಂಗಿರಸರೇ ಆಗಿದ್ದರೂ ಆಗಿದ್ದಾರು] ಸೂಕ್ತ ಪ್ರಾರ್ಥನೆಗಳಿಂದ ತಿರುಗಿ ಅವನನ್ನು ಪಡೆದರು. ವೇದದಲ್ಲಿ ಬೆಳಕಿನ (ಸೂರ್ಯನ) ಪುನಃ ಪ್ರಾಪ್ತಿಯು ಮೊಟ್ಟಮೊದಲು ಮಾನವರ ಪ್ರಾಚೀನ ಪಿತೃಗಳಾದ, ಸಪ್ತರ್ಷಿಗಳಾಗಿದ್ದ, ಅಂಗಿರಸರಿಂದ ಸಾಧಿಸಲ್ಪಟ್ಟದ್ದು ಮತ್ತು ಅನಂತರ ಅವರ ಮೂಲಕ ಮಾನವಾನುಭವದಲ್ಲಿ ಪುನಃ ಪುನಃ ಸಂಭವಿಸಿದ್ದು.

ಈ ವಿಶ್ಲೇಷಣೆಯಿಂದ ತಿಳಿದು ಬರುವುದೇನೆಂದರೆ, ಯಜ್ಞದಿಂದಲೂ ಮಂತ್ರದಿಂದಲೂ ಕಳೆದು ಹೋದ ಸೂರ್ಯನ ಪುನಃ ಪ್ರಾಪ್ತಿಯ ಸಮಯ ಕಥೆ ಮತ್ತು ಹಾಗೇ ಮಂತ್ರದಿಂದಲೇ ಕಳೆದು ಹೋದ ದನಗಳ ಪುನರ್ಲಾಭದ ಸಮಯಕಥೆ ಈಯೆರಡರಲ್ಲೂ ಇಂದ್ರ-ಅಂಗಿರಸರೇ ಕಾರ್ಯಕರ್ತರು ಮತ್ತು ಈಯೆರಡೂ ಭಿನ್ನ ದೃಷ್ಟಾಂತ ಕಥೆಗಳಲ್ಲ, ಇವೆರಡೂ (ನಿದರ್ಶಿಸಲು ನಿರ್ಮಿಸಿದ) ಒಂದೇ (ಸಾರವುಳ್ಳ) ಕಟ್ಟುಕಥೆ-ಎಂಬುದು. ದನ-ಉಷೆಯರ ಸಂಬಂಧವನ್ನು ಚರ್ಚಿಸುವಾಗ ನಾವು ಆಗಲೇ ಈ ಏಕತ್ವವನ್ನು ಒತ್ತಿ ಹೇಳಿದ್ದೆವು. ದನಗಳೆಂದರೆ ಉಷೆಯ ಕಿರಣಗಳು, ಸೂರ್ಯ ಕಾಯುವ ಗೋವ್ರಜಗಳು-ಅವೆಂದೂ ಭೌತಿಕ ದನಗಳಲ್ಲ. ಕಳೆದ ಗೋವುಗಳೆಲ್ಲಾ ಸೂರ್ಯನ ಕಳೆದ ಕಿರಣಗಳು. ಅವುಗಳ ಪುನಃ ಪ್ರಾಪ್ತಿಯು ಕಳೆದು ಹೋದ ಸೂರ್ಯನನ್ನು ಪುನಃ ಪಡೆಯುವುದಕ್ಕಿಂತ ಮುಂಚೆ ತತ್ಸೂಚಕವಾಗಿ ನಡೆದ ಕೆಲಸ. ಆದರೀಗ ವೇದದ ಸ್ಪಷ್ಟೋಕ್ತಿಯಿಂದಲೇ ನಿಃಸಂದೇಹವಾಗುವಂತೆ (ಊಹಿಸಲು ಸಾಧ್ಯವಾದ ಎಲ್ಲ ಸಂಶಯಗಳೂ ಪರಿಹಾರ ಹೊಂದುವಂತೆ) ಈ ಭಾವೈಕ್ಯವನ್ನು (ಅರ್ಥೈಕ್ಯವನ್ನು) ಎದುರಿಡುವುದು ಅವಶ್ಯಕವಾಗಿದೆ.

ವೇದವು, ಹಸುಗಳೇ ಬೆಳಕು, ಅವು ಗುಪ್ತವಾಗಿದ್ದ ಕೊಟ್ಟಿಗೆಯೇ ಕತ್ತಲು-ಎಂದು ಬಹಿರಂಗವಾಗಿಯೇ ಹೇಳಿದೆ. ನಾವು ಆಗಲೇ ತತ್ಸಂಬದ್ಧವಾದ ಉಪಚ್ಛೇದವನ್ನು ಎತ್ತಿಕೊಟ್ಟಿದ್ದೇವೆ (I.92.4).ಅದರಲ್ಲಿ ದನಗಳ ಶುದ್ಧ ಸಾಂಕೇತಿಕತೆ, ಹಟ್ಟಿಯ ಶುದ್ಧ ಅಲಂಕಾರಿಕತೆ ಕಂಡುಬರುತ್ತದೆ: "ಉಷೆಯು ಕತ್ತಲಿನ ಮುಸುಕನ್ನು ತೆರೆದಳು ; ಹೇಗೆ? ಅವಳು ದನಗಳ ಬಾಗಿಲ ಹಟ್ಟಿಯನ್ನು ತೆರೆದ ಹಾಗೆ", (I.93.4) ರಲ್ಲಿರುವಂತೆ ಯಾವಾಗಲೂ ಜ್ಯೋತಿಃಪ್ರಾಪ್ತಿಯೊಡನೆ ಗೋಪುನರ್ಲಾಭದ ಪ್ರತಿಮೆಯು ಸತತ ಸಂಗತವಾಗಿರುವುದನ್ನು ಕಾಣುವೆವಲ್ಲದೆ, "ನೀವಿಬ್ಬರೂ ಪಣಿಗಳಿಂದ ದನಗಳನ್ನು ಕದ್ದು ತಂದಿರಿ......ನೀವು ಬಹುಜನರಿಗಾಗಿ ಜ್ಯೋತಿಸ್ಸನ್ನು ಹುಡುಕಿ ತೆಗೆದು ತಂದುಕೊಟ್ಟಿದ್ದೀರಿ ;" ಅಥವಾ II.24.3. ರಲ್ಲಿರುವಂತೆ, "ಬಹುಸಂಖ್ಯಾತ ದೇವತೆಗಳಿಗಾಗಿಯೇ ಆ ಕೆಲಸವನ್ನು ಮಾಡಬೇಕು ; ದೃಢ ಸ್ಥಳಗಳನ್ನು ಒಡೆದುದುಳಿಸಿದಿರಿ; ದುರ್ಗಗಳನ್ನು ದುರ್ಬಲ ಮಾಡಿದಿರಿ ;

ಬೃಹಸ್ಪತಿಯು ಗೋಗಳನ್ನು (=ಕಿರಣಗಳನ್ನು) ಅಟ್ಟಿಕೊಂಡು ಹೋದನು : ಸೂಕ್ತದಿಂದ (ಬ್ರಹ್ಮಣಾ) ಅವನು ವಲನನ್ನು ಮುರಿದನು, ಕತ್ತಲನ್ನು ಅಡಗಿಸಿದನು ಮತ್ತು ಸ್ವರ್‌ಲೋಕವನ್ನು ಕಣ್ಣಿಗೆ ಕಾಣುವಂತೆ ಮಾಡಿದನು;" V.31.3. ರಲ್ಲಿ ಹಸುಗಳನ್ನು ಒಳ್ಳೆಯ ಹಾಲು ಕರೆವವರನ್ನು ಪ್ರಚೋದಿಸಿದ್ದಲ್ಲದೆ ಅವನು ಸರ್ವ ಪ್ರಬ್ಬಾಧಕ ಅಂಧಕಾರವನ್ನು ಬೆಳಕಿನಿಂದ ತೆರೆದುಬಿಟ್ಟನು" ಎಂದು ನಮಗೆ ವೇದವು ಹೇಳಿದೆ. ವೇದದಲ್ಲಿ ಒಂದು ಉಪ ವಾಕ್ಯಕ್ಕೂ ಇನ್ನೊಂದಕ್ಕೂ ಸಂಬಂಧವಿಲ್ಲವೆಂದೂ ಋಷಿಗಳು ಅರ್ಥದ ಬಂಧದಿಂದ ಸುಖವಾಗಿ ಮುಕ್ತವಾದ ಮನಸ್ಸುಗಳಿಂದ ದನಗಳಿಂದ ಸೂರ್ಯನತ್ತ ಮತ್ತು ಕತ್ತಲಿನಿಂದ ದ್ರಾವಿಡರ ಗುಹೆಗಳತ್ತ ಕುಪ್ಪಳಿಸುತ್ತಾರೆ ಎಂದು ಯಾರಾದರೂ ನಮಗೆ ಹೇಳಿದರೆ, I.33.10. ರಲ್ಲಿ ಹೇಳಿರುವ ಸಂಪೂರ್ಣ ಐಕ್ಯಭಾವದಲ್ಲಿ ನಮ್ಮ ಉತ್ತರ ಅದಕ್ಕಿದೆ : "ವೃಷಭನಾದ ಇಂದ್ರನು ವಜ್ರಾಯುಧವನ್ನು ತನ್ನ ಸಂಗಾತಿಯನ್ನಾಗಿ ಮಾಡಿಕೊಂಡನು; ಅಥವಾ ಬಹುಶಃ "ಅದನ್ನು ಅನ್ವಿತಗೊಳಿಸಿದನು (ಪ್ರಯೋಗಿಸಿದನು) = "ಯುಜಂ". "ಅವನು ಬೆಳಕಿನಿಂದ ಕಿರಣಗಳನ್ನು ಕತ್ತಲಿಂದ ಹೊರದೆಗೆದು ಕರೆದನು. (ದನಗಳ ಹಾಲನ್ನು ಕರೆದಂತೆ ಕರೆದನು)" - ವಜ್ರಾಯುಧವು "ಸ್ವರ್ಯ ಅಶ್ಮಾ" ಮತ್ತು ಅದರಲ್ಲಿ ಸ್ವರ್‌ಲೋಕದ ಬೆಳಕಿದೆ ಎಂಬುದನ್ನು ನಾವು ನೆನಪಿಟ್ಟುಕೊಳ್ಳಬೇಕು - ಮತ್ತು ಪುನಃ IV.51.2. ರಲ್ಲಿ ಪಣಿಗಳ ಪ್ರಶ್ನೆಯಿದೆ : "ಅವರು (ಉಷಸ್ಸುಗಳು) ಪವಿತ್ರರಾಗಿ, ಪವಿತ್ರಗೊಳಿಸುತ್ತಾ, ಉಷೋರೂಪಗಳಿಂದ ಅವತರಿಸಿ ಹಟ್ಟಿಯ ಬಾಗಿಲುಗಳನ್ನೂ ಅಂಧಕಾರವನ್ನೂ ತೆಗೆದೆಸೆದರು." "ವ್ರಜಸ್ಯ ತಮಸೋದ್ವಾರಾ". ಈಯೆಲ್ಲಾ ಉಪಚ್ಛೇದಗಳಿದಿರು ನಾವು ದನ-ಪಣಿಗಳ ವಿಷಯವನ್ನು ಒಂದು ಐತಿಹ್ಯವೇ ಎಂದು ಹಠದಿಂದ ಪ್ರತಿಪಾದಿಸಿದರೆ, ವೇದದ್ದೇ ಆದ ಸಾಕ್ಷಿಯನ್ನು ತುಳಿದು ಹಾಕಿ ಅದರ ಬಾಯಿಂದ ಇಂಥ ಕಥೆಯನ್ನು ಹೇಳಿಸಬೇಕೆಂದು ನಿರ್ಧಾರ ಮಾಡಿಕೊಂಡಿದ್ದೇವೆ ಎಂದಾಗುತ್ತದೆ. ಇಂಥ ನಿರ್ಧಾರ ನಮಗಿರದಿದ್ದರೆ ಪಣಿಗಳ ವಶದಲ್ಲಿದ್ದ ಅನರ್ಘ್ಯ ಸಂಪತ್ತು, "ನಿಧಿಂ ಪಣೀನಾಂ ಪರಮಂ ಗುಹಾಹಿತಂ" (II.24.6) ಭೂಮಿಯ ಗೋ ಸಂಪತ್ತಲ್ಲ-ಪುರುಚ್ಛೇಪ ದೈವೋದಸಿ (I.130.3) ಹೇಳಿದಂತೆ, "ಅನಂತಾಶ್ಮದಲ್ಲಿ ಅಡಗಿಸಿಟ್ಟ ಹಕ್ಕಿಮರಿಯಂತೆ, ಹಟ್ಟಿಯಲ್ಲಡಗಿಸಿಟ್ಟ ಹಸುಗಳಂತೆ, ಸ್ವರ್ಗೀಯ ಸಂಪತ್ತು ಗವಿಯಲ್ಲಿ ಗುಪ್ತವಾಗಿದೆ" - "ಅವಿಂದದ್ ದಿವೋನಿಹಿತಂ ಗುಹಾನಿಧಿಂ ವೇರ್ಣ ಗರ್ಭಂ ಪರಿವೀತಂ, ಅಶ್ಮನಿ ಅನಂತೇ ಅಂತರ್ ಅಶ್ಮನಿ, ವ್ರಜಂ ವಜ್ರೀ ಗವಾಂ ಇವ ಸಿಷಾಸನ್."

ಉಕ್ತ ಪುರಾಣ ಕಥೆಗಳೆರಡರ ಸಂಬಂಧ ಯಾ ಐಕ್ಯವು (ಏಕಾರ್ಥಕತೆ) ಅನೇಕಾನೇಕ ಉಪಚ್ಛೇದಗಳಲ್ಲಿ ಹೇಳಲಾಗಿದೆ. ಮಾದರಿಯಾದ ಕೆಲವನ್ನು ಮಾತ್ರ ನಾನಿಲ್ಲಿ ಎತ್ತಿ ಹೇಳುತ್ತೇನೆ. ಈ ಪುರಾಣ ಕಥೆಯನ್ನು ಸುದೀರ್ಘವಾಗಿ ಹೇಳಿದ ಒಂದು ಮಂತ್ರವು (I.62) ಹೀಗಿದೆ : "ಹೇ ಇಂದ್ರ, ಹೇ ಪ್ರಭಾವಿಯೇ, ದಶಗ್ವರೊಡನೆ (ಅಂಗಿರಸರೊಡನೆ) ನೀನು ಗರ್ಜಿಸಿ ವಲನನ್ನು ಸೀಳಿ ಒಗೆದೆ. ಅಂಗಿರಸರಿಂದ ಸೂಕ್ತನಾದ ನೀನು ಉಷಸ್ಸುಗಳನ್ನು ತೆರೆದೆ-ಅವರೊಡನೆ ಸೂರ್ಯ, ದನ, ಸೋಮ ಇವರನ್ನು ಹೊರಬರುವಂತೆ ಮಾಡಿದೆ" ಎಂದು ಹೇಳಲಾಗಿದೆ. ಹಾಗೇ VI.17.3 ರಲ್ಲಿ "ಸೂಕ್ತವನ್ನು ಕೇಳು, ಎಲೈ ಇಂದ್ರನೇ, ಮಂತ್ರಗಳಿಂದ ಪುಷ್ಟನಾಗು, ಸೂರ್ಯನನ್ನು ಹೊರದೆಗೆ, ಹಗೆಯನ್ನು ಕೊಲ್ಲು, ದನಗಳನ್ನು ಹೊರಕ್ಕೆ ಜಡಿಸಿಕೊಂಡು ಬಾ" ಎನ್ನಲಾಗಿದೆ. ಇದೇ ಪ್ರಕಾರ, VII. 98.6 ದಲ್ಲಿ "ಓ ಇಂದ್ರ, ಸೂರ್ಯಾಕ್ಷಿಯಿಂದ ನೀನು ಕಾಣುತ್ತಿರುವ ಈ ನಿನ್ನ ಸುತ್ತಲಿನ ಗೋಧನವೆಲ್ಲವೂ ನಿನ್ನದು. ನೀನೇ ದನಗಳ ಏಕೈಕ ಧನಿ- "ಗವಾಂ ಅಸಿ ಗೋಪತಿರ್ ಏಕ

ಇಂದ್ರ;" ಮತ್ತು ಇಂದ್ರನು ಎಂಥ ಗೋವುಗಳಿಗೆ ಒಡೆಯ ಎಂಬುದನ್ನು ತೋರಿಸಲು III.31.ರಲ್ಲಿ "ಸರಮೆ ಮತ್ತು ದನಗಳ ಜಯಿನಿಯರಾದ (ಉಷೆಯರು) ಅವನಿಗಂಟಿಕೊಂಡರು ಮತ್ತು ಕತ್ತಲೆಯಿಂದ ಹೊರಬಂದ ಮಹಾಜ್ಯೋತಿಯೊಂದನ್ನು ಅವರು ಬಲ್ಲರು ; ತನ್ನ ಹತ್ತಿರಕ್ಕೆ ಮೇಲೇರಿ ಬಂದ ಉಷೆಯರನ್ನು ತಿಳಿದು ಇಂದ್ರನು ದನಗಳೆಲ್ಲವುಗಳ ಏಕೈಕ ಅಧಿಪತಿಯಾದನು" - ಪತಿರ್ ಗವಾಂ ಅಭವದ್ ಏಕ ಇಂದ್ರಃ" ಮತ್ತು ಈ ಸೂಕ್ತವು ಮುಂದೆ ಮುಂದೆ ಹೋಗುತ್ತಾ ಅಂಗಿರಸರೆಂಬ ಸಪ್ತರ್ಷಿಗಳು ಮನಸ್ಸಿನಿಂದ ಹೇಗೆ ಪರಮಸತ್ಯ ಪಥವನ್ನು ಶೋಧಿಸಿ ಅವುಗಳ ಬಲವಾದ ಜೈಲಿನಿಂದ ದನಗಳನ್ನು ಮೇಲಕ್ಕೆ ಹೊಡೆದುಕೊಂಡು ಹೋದರು ಎಂದೂ ಹೇಗೆ ಜ್ಞಾನವತಿಯಾದ ಸರಮೆಯು ಗುಡ್ಡದ ಗವಿಗೆ ಬಂದು ಸಾವಿಲ್ಲದ ಆ ಹಸುಗಳ ಭಂಭಾರವವನ್ನು ಕೇಳಿದಳು ಎಂದೂ ಉಲ್ಲೇಖಿಸಲಾಗಿದೆ. VII.90.4.ರಲ್ಲಿ ಉಷೋದೇವಿಯರ ಹಾಗೂ ಸ್ವರ್‌ಲೋಕದ ವಿಶ್ವವಿಸ್ತಾರವಾದ ಸೌರ ಜ್ಯೋತಿಸ್ಸನ್ನು ಹುಡುಕಿ ಪಡೆದ ಸಂಗತಿಗಳ ಇದೇ ಸಂಬಂಧವನ್ನು ನಾವು ಕಾಣುತ್ತೇವೆ : "ಅನಾವಿದ್ಧರಾಗಿ ಉಷೆಯರು ತಮ್ಮ ಪೂರ್ಣಸ್ವರೂಪದಿಂದ ಹೊರಬಂದರು ಮತ್ತು ಅವರು (ಅಂಗಿರಸರು) ಪ್ರಣಿಧಾನದಿಂದ ಉರುಜ್ಯೋತಿಸ್ಸನ್ನು=ಹೆಬ್ಬೆಳಕನ್ನು ಕಂಡರು ; ಸಕಾಮರಾದ ಅವರು ದನಗಳ ವಿಸ್ತಾರವನ್ನು ತೆರೆದರು ; ಅವರ ಮೇಲೆ ಸ್ವರ್ಗದಿಂದ ಜಲಧಾರೆಗಳು ಹರಿದಿಳಿದವು."

ಹಾಗೇ II.19.3.ರಲ್ಲಿ ಹಗಲುಗಳು, ಸೂರ್ಯ ಮತ್ತು ದನಗಳು ವರ್ಣಿತವಾಗಿವೆ. "ಆತನು ಸೂರ್ಯನ ಹುಟ್ಟನ್ನು ಸಾಧಿಸಿದನು, ದನಗಳನ್ನು ಹುಡುಕಿ ತೆಗೆದನು, ಹಗಲುಗಳ ಆವಿರ್ಭೂತಿಯನ್ನು ರಾತ್ರಿಯಿಂದ ಆಗುವಂತೆ ಮಾಡಿದನು. IV.1.13.ರಲ್ಲಿ ಉಷಾದೇವಿಯರನ್ನೂ ದನಗಳನ್ನೂ ಏಕೀಕರಿಸಲಾಗಿದೆ : "ಒಳ್ಳೆಯ ಹಾಲು ಕರೆವವರ ಹಟ್ಟಿಯೆಂದರೆ ಬಂಡೆ ; ಅವರ ಕರೆಗೆ ಓಗೊಟ್ಟ ಉಷೆಯರು ಗೂಢ ಕಾರಾಗೃಹಸ್ಥ ಉಜ್ವಲ ಧೇನುಗಳನ್ನು ಮೇಲಕ್ಕೆ ಅಟ್ಟಿಕೊಂಡು ಹೋದರು"-ಹಿಂದಿನ ಪದ್ಯಪಂಕ್ತಿಯಲ್ಲಿ ಹೇಳಲಾದ ನಮ್ಮ ಮಾನವ ಪಿತೃಗಳಾದ ಅಂಗಿರಸರು ದನಗಳನ್ನು ಅವರಿಗಾಗಿ ಮೇಲಟ್ಟಿಕೊಂಡು ಹೋದರೆಂದು ಬೇಕಾದರೆ ಸ್ವಲ್ಪ ಬದಲಿಸಿ ಹೇಳಬಹುದು-ಅಷ್ಟೆ,. ಆಮೇಲೆ VI.17.5 ದಲ್ಲಿ ಸೂರ್ಯನು ಅಧಿಕತರವಾಗಿ ಹೊಳೆಯುವುದಕ್ಕೆ ಸಾಧನವೆಂದು ಕೊಟ್ಟಿಗೆಯನ್ನು ಒಡೆಯಲಾಯಿತು: "ನೀನು ಸೂರ್ಯ-ಉಷೆಯರು (ಹೊಳೆಯುವಂತೆ) ಬೆಳಗುವಂತೆ ಮಾಡಿದೆ ; ಅದಕ್ಕಾಗಿ ನೀನು ಸುದೃಢ ತಳಗಳನ್ನು ಒಡೆದೆ ; ನೀನು ದನಗಳನ್ನಡಗಿಸಿಡಲಾಗಿದ್ದ ಮಹಾಪರ್ವತವನ್ನು ಬುಡದಿಂದ ತಲೆವರೆಗೆ ಅಲ್ಲಾಡಿಸಿದೆ." ಕೊನೆಯದಾಗಿ, III.39.4, 5 ಗಳಲ್ಲಿ-ಅವುಗಳ ಪೌರಾಣಿಕ ಸ್ವರೂಪದಲ್ಲೇ ಈಯೆರಡು ಪ್ರತಿಮಾಲಂಕಾರಗಳನ್ನೂ ಸಂಪೂರ್ಣವಾಗಿ ಏಕೀಕರಿಸಲಾಗಿದೆ : "ಮರ್ತ್ಯರಲ್ಲಿ ಅವರನ್ನು ದೂರುವವರೂ ಇಲ್ಲ, ಯಾ, ಪಣಿಗಳ ದನಗಳಿಗಾಗಿ ಹೋರಾಡಿದ ನಮ್ಮ ನಮ್ಮ ಪಿತೃಗಳನ್ನು ಯಾವ ಮರ್ತ್ಯಶಕ್ತಿಯೂ ತಡೆಯಲಾರದು. ಅವರಿಗೆ ಅಡ್ಡಿಯನ್ನೊಡ್ಡಲಾರದು-ಎಂದು ಅರ್ಥೈಸುವುದು ಉತ್ತಮವೆಂಬುದು ನನ್ನ ಮತ. ಬಲಾಢ್ಯತೆಯ ಅವತಾರವೆನ್ನಿಸಿದ ಇಂದ್ರನು, ಶತಕ್ರತುವಾದ ಇಂದ್ರನು ಅವರಿಗಾಗಿ ಬಲವಾಗಿ ಜಾಜಿದ್ದ (ಬಾಗಿಲು ಮುಚ್ಚಿದ್ದ) ಕೊಟ್ಟಿಗೆಗಳನ್ನು ಬಿಡಿಸಿಕೊಟ್ಟನು ; ಆಗ ಇಂದ್ರ ಮಿತ್ರನೊಬ್ಬನು ತನ್ನ ಮಿತ್ರರಾದ ನವಗ್ವರೊಡನೆ ಇಂದ್ರನ ಬೆನ್ನ ಹಿಂದೆಯೇ ಹೋಗಿ ಆ ದನಗಳನ್ನು ಸಂಧಿಸಿದನು ; ಹತ್ತರ ದಶಗ್ವರೊಂದಿಗೆ ಇಂದ್ರನು ಕತ್ತಲಲ್ಲಡಗಿದ್ದ ನಿಜವಾದ ಸೂರ್ಯನನ್ನು ಶೋಧಿಸಿ ಕಂಡನು ; (ಅಥವಾ ನನ್ನ ಪ್ರಕಾರ) ಅಂಧಕಾರದಲ್ಲಿದ್ದ ಸೂರ್ಯನೆಂಬ ಪರಮಸತ್ಯವನ್ನು ಕಂಡುಹಿಡಿದನು. ಈ ಉಪಚ್ಛೇದವು ನಿರ್ಧಾರಕವಾದುದು. ದನಗಳು ಪಣಿಗಳವುಗಳು ; ಅಂಗಿರಸರು ಅವುಗಳನ್ನು ಬೆನ್ನಟ್ಟಿ ಹೋಗಿ

ಅವುಗಳು ಹೊಕ್ಕ ಗವಿಗಳಲ್ಲಿ ಕೈಕಾಲುಗಳಿಂದ (ಚತುಷ್ಪಾದಗಳಂತೆ) ನುಗ್ಗಿದರು. ಹೀಗೆ ಹುಡುಕಿದವರು ಇಂದ್ರನು ಮತ್ತು ಅಂಗಿರಸರು ಮಿಕ್ಕ ಸೂಕ್ತಗಳಲ್ಲಿ ಅವರನ್ನು ನವಗ್ವದಶಗ್ವರೆಂದು ಹೇಳಲಾಗಿದೆ. ಗುಡ್ಡಗಾಡಿನ ಪಣಿಗಳ ಗವಿಗಳ ದನದ ಕೊಟ್ಟಿಗೆಗಳನ್ನು ಹೊಕ್ಕು ಅವರು ಹಿಡಿದದ್ದು ಆರ್ಯರಿಂದ ಅವರು ಕದ್ದೊಯ್ದ ಆಸ್ತಿಯನ್ನಲ್ಲ - ಆದರೆ ಅವರು ಅಲ್ಲಿ ಹಿಡಿದದ್ದು" ಅಂಧಂತಮಸ್ಸಿನಲ್ಲಿ ಗೂಢನಾಗಿದ್ದ ಸೂರ್ಯನನ್ನು."

ಆದುದರಿಂದ ಕದ್ದೊಯ್ದ ವೇದೋಕ್ತವಾದ ಪಣಿಗಳ ದನಗಳು, ಹೋರಾಡಿ ತಂದ ಹಸುಗಳು, ಬೆನ್ನಟ್ಟಿ ಹೋಗಿ ಎಳೆದು ತಂದ ದನಗಳು, (ಆರ್ಯರು) ಮರಳಿ ಪಡೆದ ದನಗಳು, ಋಷಿಗಳಿಗೆ ಬೇಕಾದ ದನಗಳು ಯಜ್ಞಗಳಿಂದಲೂ ಸೂಕ್ತಗಳಿಂದಲೂ ಗೆದ್ದುಕೊಂಡ ಆಕಳುಗಳು ಎಂದರೆ ಸಾಂಕೇತಿಕವಾಗಿ ಜ್ವಲದಗ್ನಿ ಮತ್ತು ದೇವತಾಪೋಷಕ ಪದ್ಯ ಮತ್ತು ದೇವೋನ್ಮಾದಕ ಸೋಮ ; ಇವೆಲ್ಲಾ ಸಾಂಕೇತಿಕ ಧೇನುಗಳು, ದಿವ್ಯಜ್ಯೋತಿ ಗೋವ್ರಜಗಳು. ವೇದದ ಅಂತರರ್ಥದ ಪ್ರಕಾರ, ಬೇರೆಯ ವ್ಯಾಖ್ಯೆಯಂತೆ "ಗೋ, ಉಸ್ರಾ, ಉಸ್ರಿಯಾ"=ಜ್ವಲತ್ ಪದಾರ್ಥಗಳು, ಪ್ರಭಾವಳಿಗಳು, ಸೂರ್ಯನ ವ್ರಜಗಳು, ಉಷೆಯ ಕಾಂತಿಮಯ ಆಕಾರಗಳು. ಈ ಅವರ್ಜನೀಯ ನಿಗಮನವು ವೈದಿಕ ಅರ್ಥವಿವರಣೆಯ ಕೋನಶಿಲೆ. ಇದು ಬರ್ಬರ ಪೂಜಾವಿಧಾನದ ಸ್ಥೂಲ ಭೌತಿಕ ಸಿದ್ಧಾಂತದ ಪಾತಾಳಕ್ಕೆ ಆಕಾಶದಷ್ಟು ಎತ್ತರದಲ್ಲಿದೆ, ಸುರಕ್ಷಿತವಾಗಿ ಪ್ರತಿಷ್ಠಾಪಿಸಲ್ಪಟ್ಟಿದೆ. ವೇದವು ವ್ಯಕ್ತವಾದದ್ದು ಸಾಂಕೇತಿಕ (ಚಿತ್ರದಲ್ಲಿ) ಶ್ರುತಿಯಲ್ಲಿ, ಸೂರ್ಯಾರಾಧನೆಯ ಯಾ ಉಷಾರಾಧನೆಯ ಯಾ, ಉದಾತ್ತ ಅಂತರ್‌ಜ್ಯೋತಿರಾರಾಧನೆಯ, ಸತ್ಯಸೂರ್ಯಾರಾಧನೆಯ ("ಸತ್ಯಂ ಸೂರ್ಯಂ") ಪದ್ಧತಿಯಲ್ಲಿ-ಆ ಪರಮ ಸತ್ಯವು ನಮ್ಮ ಅಜ್ಞಾನಾಂಧಕಾರದಲ್ಲಿ ಹಕ್ಕಿಮರಿಯಂತೆ ಅಡಗಿದೆ ; ಅದು ದಿವ್ಯ ಹಂಸವಾಗಿದೆ-ಈ ಭೌತಿಕ ಅಸ್ತಿತ್ವದ ಅನಂತಾಶ್ಮದಲ್ಲಿ ಅನಂತೇ ಅಂತರ್‌ಅಶ್ಮನಿ (I.130.3).

ಈ ಅಧ್ಯಾಯದಲ್ಲಿ ಸ್ವಲ್ಪ ಅನಮ್ಯತೆಯಿಂದ ನಾನು ದನಗಳೆಂದರೆ ಕತ್ತಲಲ್ಲಿ ಅಡಗಿರುವ ಸೂರ್ಯಪ್ರಕಾಶ ಎಂಬ ಸಾಕ್ಷಿಗೆ ನನ್ನನ್ನು ಸೀಮಿತಗೊಳಿಸಿಕೊಂಡರೂ ಸತ್ಯಪ್ರಕಾಶದೊಡನೆ ಅವುಗಳಿಗಿರುವ ಸಂಬಂಧವನ್ನು, ಜ್ಞಾನ ಸೂರ್ಯನೊಡನೆ ಅವುಗಳಿಗಿರುವ ಸಂಪರ್ಕವನ್ನು ನಾನು ಎತ್ತಿ ಹೇಳಿದ ಒಂದೆರಡು ಪದ್ಯಗಳಲ್ಲಿ ವ್ಯಕ್ತಪಡಿಸಲಾಗಿದೆ. ಇವುಗಳಿಂದ ಅಭಿನ್ನವಾದ ಅಂಗಿರಸ ಋಷಿಗಳ ಸೂಕ್ತಗಳ ಇಡಿ ಇಡೀ ಉಪಚ್ಛೇದಗಳನ್ನು ಯಾ ಅನುಚ್ಛೇದಗಳನ್ನು ಪರೀಕ್ಷಿಸಿದಾಗ ಈಗ ಕೊಟ್ಟ ಸೂಚನೆಯು ಸ್ಪಷ್ಟ ಖಚಿತತೆಯಾಗಿ ಬೆಳೆದು ನಿಲ್ಲುತ್ತದೆ. ಆದರೆ ಈ ಅಂಗಿರಸ ಋಷಿಗಳತ್ತ ನಾವು ಮೊದಲ ಲಕ್ಷ್ಯ ಹಾಕಬೇಕು ; ಗುಹಾಗತ ಪ್ರಾಣಿಗಳತ್ತ ಗಮನ ಹರಿಸಬೇಕು, ಹೊಳೆವ ಗೋಗಳನ್ನೂ ಕಳೆದ ಸೂರ್ಯನನ್ನೂ ಯಾವ ಪ್ರಾಣಿಗಳ ಗವಿಯಿಂದ ಹೊರದೆಗೆಯುತ್ತಾರೋ ಆ ಸಂದಿಗ್ಧ ಪಣಿಗಳತ್ತ ಕಣ್ಣು ಹಾಯಿಸಬೇಕು.



## ಅಧ್ಯಾಯ-೧೬

# ಅಂಗಿರಸ ಋಷಿಗಳು

ವೇದದಲ್ಲಿ 'ಅಂಗಿರಸ' ಎಂಬ ಹೆಸರು ಎರಡು ರೂಪಗಳಲ್ಲಿ ಬರುತ್ತದೆ : ಒಂದು 'ಅಂಗಿರ' ಇನ್ನೊಂದು 'ಅಂಗಿರಸ'-ಎಂದು. ಎರಡನೆಯ ರೂಪವು ಹೆಚ್ಚು ಸಲ ಬರುತ್ತದೆ. 'ಅಂಗಿರಸ' ಎಂಬುದು ಅನುವಂಶಿಕ ಹೆಸರಾಗಿಯೂ ಒಂದಕ್ಕಿಂತ ಹೆಚ್ಚು ಸಲ ಬೃಹಸ್ಪತಿಗೆ ಅನ್ವಯಿಸಿ ಬಂದಿದೆ. ಬೃಹಸ್ಪತಿಯು ಅಂಗಿರಸನ ಒಬ್ಬ ಮಗ. ಬೃಹಸ್ಪತಿಯು ದೇವತೆ. ಭೃಗುವಿನಂತೆಯೇ ಆಮೇಲೆ ಅಂಗಿರಸನು ಮೂಲ ಋಷಿಗಳಲ್ಲೊಬ್ಬನೆಂದು ಅನುವಂಶಿಕ ಮೂಲ ಪುರುಷನಾಗಿ ಒಂದು ಇಡಿ ಋಷಿ ಕುಲದ ಪ್ರಥಮ ಪಿತೃವೆಂದು ಪರಿಗಣಿತನಾದದ್ದು. ಉದಾ: ಅಂಗಿರಸರು, ಅತ್ರಿಗಳು, ಭಾರ್ಗವರು. ವೇದದಲ್ಲಿ ಅತ್ರಿಗಳು, ಭೃಗುಗಳು, ಕಣ್ವರು ಇತ್ಯಾದಿ ಸಹಾ ಅಂಥ ಮೂಲ ಪಿತೃಗಳು, ವಂಶವೃಕ್ಷದ ಬೀಜ ಸ್ವರೂಪರು. ಅತ್ರಿಗಳ ಒಂದು ಸೂಕ್ತದಲ್ಲಿ (V.11.6) ಅಂಗಿರಸ ಋಷಿಗಳು ಅಗ್ನಿಯನ್ನು ಕಂಡುಹಿಡಿದವರೆಂದು ಹೇಳಲಾಗಿದೆ=ಅಗ್ನಿಯು ಪವಿತ್ರಬೆಂಕಿ. ಆದರೆ ಇನ್ನೊಂದು ಸೂಕ್ತದಲ್ಲಿ (X.46.9)[೧] ಭೃಗುಗಳು ಅಗ್ನಿಶೋಧಕರೆಂದು ಉಕ್ತವಾಗಿದೆ. ಬಹಳ ಬಾರಿ ಮೂಲ ಸಪ್ತಾಂಗಿರಸ ಋಷಿಗಳು ಮನುಷ್ಯರ ತಂದೆಯರು "ಪಿತರೋ ಮನುಷ್ಯಾಃ" ಎಂದೂ ಅವರು ಬೆಳಕನ್ನು ಕಂಡುಹಿಡಿದರು, ಸೂರ್ಯನು ಬೆಳಗುವಂತೆ ಮಾಡಿದರು, ಪರಮಸತ್ಯದ ಸ್ವರ್ಗಕ್ಕೆ ಏರಿದರು. ೧೦ ನೆಯ ಮಂಡಲದ ಕೆಲವು ಸೂಕ್ತಗಳಲ್ಲಿ ಯಮಸಹಿತರಾದ ಪಿತೃಗಳೆಂದು ಅವರನ್ನು ವರ್ಣಿಸಲಾಗಿದೆ. ಯಮನೊಬ್ಬ ದೇವತೆ. ಅವನು ಅನಂತರದ ಸೂಕ್ತಗಳಲ್ಲಿ ಮಾತ್ರ ಪ್ರಾಮುಖ್ಯ ಪಡೆಯುತ್ತಾನೆ. ಬರ್ಹಿಸ್ ಅಥವಾ ದರ್ಭಾಸನದ ಮೇಲೆ ಅಂಗಿರಸರು ದೇವತೆಗಳೊಡನೆ ಯಜ್ಞವೇದಿಕೆಯಲ್ಲಿ ಕುಳಿತುಕೊಂಡು ತಮ್ಮ ಹವಿರ್ಭಾಗಗಳನ್ನು ತೆಗೆದುಕೊಳ್ಳುತ್ತಾರೆ.

ಅಂಗಿರಸರ ಪಾತ್ರ ಇಷ್ಟೇ ಆದರೆ-ಅಂದರೆ ದನಗಳನ್ನು ಹುಡುಕಿ ಕೊಡುವುದು, ಇತ್ಯಾದಿಯಷ್ಟೇ ಆದರೆ-ಅವರ ಬಗೆಗಿನ ಅರ್ಥವಿವರಣೆಯು ಬಹಳ ಸರಳವೂ ಮೇಲುಮೇಲಿನದೂ ಆಗುತ್ತದೆ. ಅವರಾಗ ವಂಶಪರಂಪರೆಯ ಮೂಲ ಪುರುಷರು, ವೈದಿಕ ಮತಧರ್ಮದ ಸಂಸ್ಥಾಪಕರು ; ಅವರ ವಂಶಜರು ಅವರನ್ನು ಪಾಕ್ಷಿಕವಾಗಿ ದೇವತ್ವಕ್ಕೆ ಏರಿಸಿದರು ಮತ್ತು ಸತತವಾಗಿ ಅವರು ದೇವತೆಗಳ ಒಡನಾಡಿಗಳಾಗಿದ್ದರು-ಉಷಸ್ಸನ್ನು ಗೆದ್ದು ತರುವಾಗ ಮತ್ತು ಸುದೀರ್ಘವಾದ ಆರ್ಕ್‌ಟಿಕ್ ರಾತ್ರಿಯಿಂದ ಉಷಸ್ಸಿನೊಡನೆ ಸೂರ್ಯನನ್ನೂ ದೇವತೆಗಳು ಗೆದ್ದು ತರುವಾಗ ಅವರ ನೆರವಿಗರಾಗಿದ್ದರು ಅಥವಾ ಬೆಳಕನ್ನೂ ಸತ್ಯವನ್ನೂ ಜಯಿಸಿ ತರುವಾಗ ಆ

೧. ಅಂಗಿರಸ ಋಷಿಗಳು ಅಗ್ನಿಯ ಜ್ವಾಲಾಶಕ್ತಿಗಳೂ ಭೃಗುಗಳು ಸೂರ್ಯನ ಸೌರಶಕ್ತಿಗಳೂ ಆಗಿರುವ ಸಂಭವ ಹೆಚ್ಚು.

ದೇವತೆಗಳ ಜೊತೆಗೆ ಇವರೂ ಇದ್ದರು-ಎಂದಿಷ್ಟೇ ಅವರ ಕಥೆಯಾಗಿ ಉಳಿಯುತ್ತಿತ್ತು. ಆದರೆ ಇದಿಷ್ಟೇ ಅವರ ವೃತ್ತಾಂತವಲ್ಲ, ವೈದಿಕ ಸಮಯಕಥೆಗೆ ಇನ್ನೂ ಗಭೀರತರವಾದ ಅರ್ಥವಿದೆ, ಆಳವಾದ (ಸೂಕ್ಷ್ಮ) ವಿವರಗಳಿವೆ. ಮೊಟ್ಟಮೊದಲು, ಅಂಗಿರಸರು ದೇವತ್ವಕ್ಕೇರಿಸಲ್ಪಟ್ಟ ಬರಿ ಮಾನುಷ ಪಿತೃಗಳಲ್ಲ. ಅವರನ್ನು ಸರ್ವಜ್ಞೇಯರಾದ ದ್ರಷ್ಟಾರರೆಂದೂ ಸ್ವರ್ಗಪುತ್ರರೆಂದೂ ವೀರರೆಂದೂ ಅಥವಾ ಮಹಾಬಲಿಷ್ಠ ಅಸುರನ ಶಕ್ತಿಗಳೆಂದೂ "ದಿವಸ್ ಪುತ್ರಾಸೋ ಅಸುರಸ್ಯ[1] ವೀರಾಃ" (III.53.7) ಎಂದೂ ವೇದವು ಅವರು ಏಳು ಜನ ಋಷಿಗಳಾಗಿದ್ದುದರಿಂದ, ನಮಗೆ ಕೇವಲ ಅಕಸ್ಮಾತ್ತಾಗಿ, ಪಾರಸೀಕರ (ಇರಾನಿಯನ್ನರ) ವೇದಕ್ಕೆ ಸಂಬಂಧಿಸಿದಂತಿರುವ (ಅವೆಸ್ತದ) ಪುರಾಣಕಥೆಯಲ್ಲಿ ಬಂದ ಅಸುರನಾದ ಅಹುರಮಜ್ದನನ್ನು ನೆನಪು ಮಾಡಿಕೊಡುತ್ತದೆ. ಅಷ್ಟೇ ಅಲ್ಲದೆ, ಅವರು ಕೇವಲ ಸಾಂಕೇತಿಕರೆಂದು ಭಾವಿಸುವಂತೆ ಮಾಡುವ ಉಪಚ್ಛೇದಗಳೂ ಇವೆ. ಅವುಗಳ ಪ್ರಕಾರ ಅವರು ಮೂಲ ಅಂಗಿರಸನಾದ ಅಗ್ನಿಯ ಮಕ್ಕಳೆಂದೂ ಸಾಂಕೇತಿಕವಾಗಿ ಪ್ರಕಾಶಶಕ್ತಿ-ಜ್ವಾಲಾಶಕ್ತಿಗಳೆಂದೂ ತಿಳಿದು ಬರುತ್ತದೆ. ಅವರ ಚಿತ್ರಣವು ಸಪ್ತಮುಖದ (ಅಗ್ನಿಯ) ಅಂಗಿರಸನ ಪಾತ್ರದೊಡನೆ ಐಕ್ಯವಾಗಿ ಬಿಡುತ್ತದೆ. ಆ ಸಪ್ತಮುಖನಿಗೆ ೯ ಮತ್ತು ೧೦ ಬೆಳಕಿನ ಕಿರಣಗಳು (ನವಗ್ವೇ ಅಂಗಿರೇದಶಗ್ವೇ ಸಪ್ತಾಸ್ಯೇ). ಆ ಸಪ್ತಾಸ್ಯನಿಂದಲೇ ಉಷೆಯು ತನ್ನ ಸರ್ವಸಂತೋಷಗಳಿಂದಲೂ ಐಶ್ವರ್ಯಗಳಿಂದಲೂ ಮೂಡಿಬರುತ್ತಾಳೆ. ಆದರೂ ಈ ಮೂರೂ ಚಿತ್ರಗಳು ಅದೇ ಅಂಗಿರಸರ ಬಗೆಗಿನವುಗಳಾಗಿಯೇ ತೋರುತ್ತವೆ; ಏಕೆಂದರೆ, ಈ ಮೂರು ಚಿತ್ರಗಳಲ್ಲಿಯೂ ಅವರ ಲಕ್ಷಣಗಳೂ ಕಾರ್ಯವೂ ಒಂದೇ ತರಹದವುಗಳಾಗಿವೆ, ಒಂದೇ ಎಂದೂ ಹೇಳಬಹುದು.

ಈ ದ್ರಷ್ಟಾರರಾದ ದಿವ್ಯ ಮಾನವರಿಗೆ ಎರಡು ಸಂಪೂರ್ಣ ವಿರುದ್ಧ ವಿವರಣೆಗಳನ್ನು ಕೊಡಬಹುದು. ಇವರು ಮೂಲತಃ ಮಾನುಷ ಋಷಿಗಳಾಗಿದ್ದು ಅವರ ವಂಶಜರಿಂದ ದಿವ್ಯೀಕರಿಸಲ್ಪಟ್ಟು ಆ ದಿವ್ಯೀಕರಣದಲ್ಲಿ ಅವರಿಗೆ ದಿವ್ಯ ಮಾತಾಪಿತೃಗಳನ್ನು ಕಲ್ಪಿಸಿರಬಹುದು ಮತ್ತು ದಿವ್ಯ ಕಾರ್ಯವನ್ನು ಅವರಿಗೆ ವಹಿಸಿಕೊಟ್ಟಿರಬಹುದು ಅಥವಾ ಅವರು ಮೂಲತಃ ಅರೆ ದೇವತೆಗಳಾಗಿರಬಹುದು - ಬೆಳಕಿನ ಮತ್ತು ಜ್ವಾಲೆಯ ಶಕ್ತಿಗಳಾಗಿರಬಹುದು-ಅನಂತರ ಅವರು ಮಾನುಷೀಕೃತರಾಗಿ ಕುಲಪಿತಾಮಹರೂ ಅದರ ವಿವೇಕವನ್ನು ಅನಾವರಣಗೊಳಿಸಿದವರೂ ಆಗಿ ಪರಿವರ್ತನ ಹೊಂದಿರಬಹುದು. ಪ್ರಾಚೀನ ಪುರಾಣ ಕಥೆಯಲ್ಲಿ ಈಯೆರಡೂ ಪ್ರಕ್ರಿಯೆಗಳು ಕಂಡುಬರುತ್ತವೆ. ಗ್ರೀಕ್ ಐತಿಹ್ಯದಲ್ಲಿ ಕ್ಯಾಸ್ಟರ್ ಮತ್ತು ಪಾಲಿಡ್ಯೂಸೆಸ್ ಹಾಗೂ ಅವರ ಸೋದರಿ ಹೆಲೆನ್ ಮಾನವರು-ಅವರು ಸ್ಯೂಸನ ಮಕ್ಕಳಾದರೂ ಮಾನವರೆಂದೇ ಚಿತ್ರಿತರು. ಅವರು ಸತ್ತ ಮೇಲೆ ಮಾತ್ರ ಅವರನ್ನು ದೇವರನ್ನಾಗಿ ಮಾಡಲಾಯಿತು ಎಂಬುದೊಂದು ಉದಾಹರಣೆ. ಆದರೆ ಮೂಲತಃ ಈ ಮೂವರೂ ದೇವತೆಗಳೇ ಆಗಿದ್ದ ಸಂಭವ ಹೆಚ್ಚು. ಕ್ಯಾಸ್ಟರ್ ಮತ್ತು ಪಾಲಿಡ್ಯೂಸೆಸ್ ಎಂಬೀ ಯಮಳರು ಕುದುರೆ ಸವಾರರು, ಕಡಲಲ್ಲಿ ನಾವಿಕರ ರಕ್ಷಕರು. ಅವರು ವೇದದ ಅಶ್ವಿನೀ ದೇವತೆಗಳಿಗೆ ನೂರಕ್ಕೆ ೯೦ ರಷ್ಟು ಸಮಾನರು; ಅಶ್ವಿನಿಗಳು ಹಯಾರೂಢರು-ಅವರ ಹೆಸರೇ ಅವನ್ನು ಸೂಚಿಸುತ್ತದೆ-ಅದ್ಭುತ ರಥದಲ್ಲಿ ಹತ್ತಿ ಕುಳಿತವರು, ಯಮಳರು, ಕಡಲಲ್ಲಿ ಮುಳುಗುತ್ತಿದ್ದ ಭುಜ್ಯುವನ್ನು ಕಾಯ್ದವರು, ಮಹಾಜಲಾಶಯಗಳಲ್ಲಿ ದೋಣಿ ದಾಟಿಸುವವರು, ಉಷಾ ಸೋದರರು; ಬಹುಶಃ ಹೆಲೆನ್ ಅವರ ಸಹೋದರಿಯಾದ ಉಷೆ ಅಥವಾ ಸರಮೆಯೇ

೧. ಅಸೂನ್ ರಾತೀತ್ಯಸುರಃ=ಪ್ರಾಣಶಕ್ತಿದಾತನು -ಅನುವಾದಕ

ಆಗಿದ್ದರೂ ಆಗಿರಬಹುದು. ಸರಮೆಯು ಸ್ವರ್ಗಶುನಿ ; ಅವಳು ದಕ್ಷಿಣೆಯಂತೆ ಉಷೆಯ ಶಕ್ತಿ ಯಾ ಪ್ರತಿಕೃತಿ ಎಂದೇ ಹೇಳಬಹುದು. ಆದರೆ ಅಶ್ವಿನೀ ದೇವತೆಗಳ ವಿಷಯದಲ್ಲಿ ಒಂದು ಭೇದವಿದೆ : ಅವರ ಪಾತ್ರಗಳ ಬೆಳವಣಿಗೆಯಲ್ಲಿ ಆ ದೇವತೆಗಳು ಯಾ ಅರೆ ದೇವತೆಗಳು ಮಾನಸಶಾಸ್ತ್ರೀಯ ಕರ್ತವ್ಯಗಳಿಂದ ಆಧ್ಯಾರೋಪಿತರಾದರು- ಇದೂ ಗ್ರೀಕ್ ಪ್ರಕ್ರಿಯೆಯಂತೆಯೇ ಇರಬಹುದು. ಗ್ರೀಕ್ ಮತಧರ್ಮದಲ್ಲಿ ಉಷಾರ್ಥಕ ಅಥೀನೆಯನ್ನು ಜ್ಞಾನದೇವಿಯನ್ನಾಗಿಯೂ ಸೂರ್ಯನಾದ ಅಪೋಲೋವನ್ನು ದಿವ್ಯ ದ್ರಷ್ಟಾರರನ್ನಾಗಿಯೂ ದಿವ್ಯ ಗಾಯಕನನ್ನಾಗಿಯೂ ಪರಿವರ್ತಿಸ-ಲಾಯಿತು, ಪ್ರವಾದಿತ್ವದ ಮತ್ತು ಕವಿತ್ವದ ಸ್ಫೂರ್ತಿಯನ್ನಾಗಿಯೂ ಬದಲಾಯಿಸಲಾಯಿತು.

ವೇದದಲ್ಲಿ ಇನ್ನೊಂದು ಪ್ರವೃತ್ತಿಯು ಕಾರ್ಯಪ್ರವೃತ್ತವಾದ ಸಂಭಾವ್ಯತೆ ಇದೆ. ಈ ಪ್ರಾಚೀನ ಯೋಗಿಗಳ ಮನಗಳಲ್ಲಿ ಒತ್ತೊತ್ತಿಕೊಂಡು ಬರುವ ಮತ್ತು ಸರ್ವವ್ಯಾಪಕವಾದ ಸಾಂಕೇತಿ-ಕಾಭ್ಯಾಸವು ಪ್ರಧಾನವಾಗಿತ್ತು. ಅವರ ಹೆಸರುಗಳನ್ನು ಹಿಡಿದು, ರಾಜರ ಹೆಸರುಗಳು, ಯಾಜಕರ ಹೆಸರುಗಳು, ತಮ್ಮ ಸಾಮಾನ್ಯ ಜೀವನದ ಪರಿಸ್ಥಿತಿಗಳು-ಈಯೆಲ್ಲವನ್ನೂ ಅವರು ಸಂಕೇತಗಳನ್ನಾಗಿ ಮಾಡಿ ತಮ್ಮ ಗುಪ್ತಾರ್ಥವನ್ನು ಗೋಪನ ಮಾಡಲು ಬಳಸುತ್ತಿದ್ದರು. ಗೋವಿನ ಸಂದಿಗ್ಧಾರ್ಥವನ್ನು (ಕಿರಣ ಮತ್ತು ದನ ಎಂಬ ಅರ್ಥವನ್ನು) ತಮ್ಮ ಪಶುಪಾಲ ಜೀವನದ ಮುಖ್ಯ ಸಂಪತ್ತಾಗಿದ್ದುದರಿಂದ ಅದನ್ನು ಸ್ಥೂಲ ಸಂಕೇತವನ್ನಾಗಿ ಹೇಗೆ ಬಳಸಿಕೊಂಡು ಅದರ ಗುಪ್ತಾರ್ಥವಾದ ಕಿರಣವನ್ನು - ಅರ್ಥಾತ್-ದೇವತೆಗಳಿಂದ ಅವರು ಹೆಚ್ಚಾಗಿ ಬಯಸುತ್ತಿದ್ದ ಆಧ್ಯಾತ್ಮಿಕ ಐಶ್ವರ್ಯವನ್ನು ಗೋಪನ ಮಾಡಿದರೋ ಹಾಗೇ ತಮ್ಮ ಗೋತಮ=ಜ್ಯೋತಿರ್ಮಯ, ಗವಿಷ್ಠಿರ=ಜ್ಯೋತಿಷ್ಠಿರ ಎಂಬಂಥ ಹೆಸರುಗಳನ್ನು ತಮ್ಮ ವೈಯಕ್ತಿಕ ಆಸೆಯನ್ನೋ ಹಕ್ಕನ್ನೋ ಮುಚ್ಚುವುದಕ್ಕಾಗಿ ಇಟ್ಟುಕೊಂಡಿರುತ್ತಿದ್ದರೂ ಆ ಹೆಸರುಗಳ ವಾಚ್ಯಾರ್ಥವು ವಿಶಾಲವೂ ಸಾಮಾನ್ಯವೂ ಆಗಿರುತ್ತಿದ್ದವು. ಹೀಗೂ ಅವರು ತಮ್ಮ ಅಥವಾ ಇತರ ಋಷಿಗಳ ಬಹಿರಂತರನುಭವಗಳನ್ನು ಬಳಸುತ್ತಿದ್ದರು. ಯಜ್ಞವೇದಿಕೆಯ ಮೇಲೆ (ಯೂಪಸ್ತಂಭಕ್ಕೆ) ಶುನಃಶೇಪನನ್ನು ಕಟ್ಟಿದ ಕಥೆಯಲ್ಲಿ ಸತ್ಯಾಂಶವೇನಾದರೂ ಇದ್ದರೆ ಅದು ಇದು: ಮಾನವಾತ್ಮವನ್ನು ಮೂರು ಪಾಪದ ಹಗ್ಗಗಳು ಜಿಗಿದಿರುತ್ತವೆ. ಅವುಗಳನ್ನು ಅಗ್ನಿ, ಸೂರ್ಯ, ವರುಣರ ದಿವ್ಯಶಕ್ತಿಗಳು ಜಿಡಿಸುತ್ತವೆ. ಈ ಕಥೆ ಋಗ್ವೇದದ್ದು. ಇದು ಈ ಅರ್ಥಕ್ಕೊಂದು ಸಂಕೇತ. ಇದೇ ಮೇರೆಗೆ ಋಷಿಗಳಾದ ಕುತ್ಸ, ಕಣ್ವ, ಉಶನಸ್, ಕಾವ್ಯರೂ ಕೆಲವು ಆಧ್ಯಾತಿಕ ಅನುಭೂತಿಗಳ ಮತ್ತು ವಿಜಯಗಳ ಮಾದರಿಗಳೂ ಸಂಕೇತಗಳೂ ಆದರು ; ಮತ್ತು ಅವರ ಆ ಯೋಗ್ಯತೆಗನುಗುಣವಾಗಿ ದೇವತೆಗಳಿಗೆ ಸರಿಸಮಾನರೆಂದು ಗಣಿತರಾದರು. ಆದುದರಿಂದ ತಮ್ಮ ಪಾರಂಪರಿಕ ಯಾ ಐತಿಹಾಸಿಕ ಸ್ವರೂಪವನ್ನು ಪೂರ್ಣವಾಗಿ ಕಳೆದುಕೊಳ್ಳದೆ, ಈ ಯೌಗಿಕ ಸಾಂಕೇತಿಕತೆಯ ಸಪ್ತಾಂಗಿರಸ ಋಷಿಗಳು ಆಧ್ಯಾತ್ಮಿಕ ಜೀವನದ ದಿವ್ಯ ಶಕ್ತಿಗಳೂ ಜೀವಂತ ಉನ್ನೋದಕಗಳೂ ಆದದ್ದು ಆಶ್ಚರ್ಯಕರವೇನೂ ಅಲ್ಲ. ಈ ಊಹೆಗಳನ್ನೂ ತರ್ಕಗಳನ್ನೂ ಈಗ ಬದಿಗೆ ಸರಿಸಿ, ಅದರ ಬದಲು, ಈ ಮೂರು ಭೂತಗಳು, ಜೀವತ್ ಪದಾರ್ಥಗಳು, ತಮ್ಮ ವ್ಯಕ್ತಿತ್ವದ ಮುಖಗಳನ್ನು ಯಾ ಲಕ್ಷಣಗಳನ್ನು ಧೇನುಪ್ರತಿಮೆಯಲ್ಲಿ ಮತ್ತು ಕತ್ತಲೆಯಿಂದ ಉಷಃಸೂರ್ಯರನ್ನು ಪುನಃ ಪಡೆವ ಪ್ರತಿಮೆಯಲ್ಲಿ ಅವು ನಿರ್ವಹಿಸಿದ ಪಾತ್ರಗಳ ಮೂಲಕ - ಪರೀಕ್ಷಿಸೋಣ.

ಅನೇಕ ವೇಳೆ, ವೇದದಲ್ಲಿ ಅಂಗಿರಃ ಪದವನ್ನು ಉಷಾಧೇನುಪ್ರತಿಮೆಯಲ್ಲಿ (ಉಷೆ ಮತ್ತು ದನಗಳ ರೂಪಕದಲ್ಲಿ) ವಿಶೇಷಣವನ್ನಾಗಿ ಬಳಸಲಾಗಿದೆ. ಎರಡನೆಯದಾಗಿ, ಅಗ್ನಿಯ ಹೆಸರು

ಅಂಗಿರಸನೆಂದೂ ಇಂದ್ರನು ಅಂಗಿರಸನಾದನೆಂದೂ ಬೃಹಸ್ಪತಿಯನ್ನು ಅಂಗಿರಸ್ ಯಾ ಅಂಗಿರಸನೆಂಬ ಹೆಸರಿನವನೆಂದೂ ಹೇಳಲಾಗಿದೆ. "ಅಂಗಿರಸ್" ಎಂಬುದು ಅಂಗಿರಸನ ಪರ್ಯಾಯ. ಇವು ಕೇವಲ ಕಾವ್ಯಶೋಭಾಕರ ಶಬ್ದಗಳಲ್ಲವೆಂಬುದು ಸ್ಪಷ್ಟ ; ಕೇವಲ ಪೌರಾಣಿಕ ಕಲ್ಪನಾ ಕಥೆಗಳಲ್ಲಿ ಬರುವ ಹೆಸರುಗಳೂ ಅಲ್ಲ. ಇವುಗಳಿಗೆ ಮಾನಸಶಾಸ್ತ್ರೀಯ ಅರ್ಥಗಳಿವೆ ; ಅನ್ಯಸೂಚಕತೆಯಿದೆ. ಅಶ್ವಿಗಳನ್ನೂ ಒಟ್ಟಾಗಿ ಅಂಗಿರಸ ಎಂದು ಕರೆಯಲಾಗಿದೆ. ಆದುದರಿಂದ ವೇದದಲ್ಲಿ ಅಂಗಿರಸಪದವು ಕೇವಲ ಒಂದು ಋಷಿಕುಲವಾಚಕವಾಗಿಲ್ಲ. ಅದಕ್ಕೆ ಒಂದು ವಿಶಿಷ್ಟಾರ್ಥವಿದೆ. ಅದನ್ನು ಬರಿ ಹೆಸರನ್ನಾಗಿ ಬಳಸಿದಾಗಲೂ ಅದಕ್ಕೊಂದು ಅನ್ವರ್ಥವಿದೆ ಎಂದು ಹೇಳಬಹುದು. ದೇವರುಗಳ, ರಾಜರ ಮತ್ತು ಋಷಿಗಳ ಹೆಸರುಗಳಿಗೆ ವಿಶೇಷವಾಗಿಯೂ ಇತರ ಹೆಸರುಗಳಿಗೆ ಸಾಮಾನ್ಯವಾಗಿಯೂ ವೇದವು ಅಂಥ ಅಂತರರ್ಥವನ್ನು ಇಟ್ಟುಕೊಂಡೇ ಇರುತ್ತದೆ. ಆ ಅಂತರರ್ಥ ಆ ಪದಕ್ಕೆ ಧಾತುಜವಾಗಿರುತ್ತದೆ, ಮೂಲ ಪ್ರಾವರ್ತಿಕವಾಗಿರುತ್ತದೆ, ಸಹಜವಾಗಿರುತ್ತದೆ. ಇಂದ್ರ ನೊಂದು ಸಾಮಾನ್ಯ ಹೆಸರು. ಆದರೂ ಅರ್ಥಪೂರ್ಣವಾಗಿ ಅವುಗಳನ್ನು ಬಳಸುವುದು ವೇದದಲ್ಲಿದೆ. ಈ ರೂಢಿಗೆ ಉದಾಹರಣೆಯಾಗಿ ಉಷೆಯನ್ನು : "ಇಂದ್ರತಮಾ ಅಂಗಿರಸ್ತಮಾ" ಎಂಬುದಾಗಿ ವರ್ಣಿಸಿದ್ದುಂಟು. ಇಂದ್ರತ್ವಗರ್ಭಿತ, ಅಂಗಿರಸ್ತ್ವ ಗರ್ಭಿತ - ಎಂಬುದು ಈ ಪದಗಳ ಅರ್ಥಗಳಾದರೆ, ಪಣಿಗಳನ್ನು ಅನಿಂದ್ರಾ=ಇಂದ್ರತ್ವರಹಿತರು ಎಂದು ಹೇಳಲಾಗಿದೆ ಆದುದರಿಂದ ಇಂದ್ರಾಂಗಿರಸಾದಿ- ನಾಮಗಳಿಗೆ ವಿಶೇಷಣಾರ್ಥಗಳಿರುವುದು ವೇದಪದ್ಧತಿಗೆ ಸಹಜ ಎಂಬುದು ಸ್ಪಷ್ಟ.[೧] ಈ ಮೂಲಕ ಒಂದು ದ್ರವ್ಯಕ್ಕೆ ಯಾವುದಾದರೊಂದು ಗುಣ ಇದೆ ಅಥವಾ ಇಲ್ಲ ಎಂಬುದನ್ನು ಸೂಚಿಸಲಾಗುತ್ತದೆ. ಶಕ್ತಿಗಳು=ಗುಣಗಳು=ಕರ್ತವ್ಯಗಳು ಇಂದ್ರಾದಿನಾಮಗಳಲ್ಲಿ ಪ್ರತಿನಿಹಿತವಾಗಿವೆ. ಆದುದರಿಂದ ಇಂದ್ರಾಂಗಿರಸ ಪದಗಳ ಅರ್ಥಗಳನ್ನು ಶೋಧಿಸಿ ಅವು ಅವರ ಸ್ವಭಾವ ಅಥವಾ ಕರ್ತವ್ಯ ಏನೆಂಬುದರ ಬಗೆಗೆ ಯಾವ ವಿವರಣೆಯನ್ನು ಕೊಡಬಲ್ಲವು ಎಂಬುದನ್ನು ಪರಿಶೀಲಿಸೋಣ.

ಅಂಗಿರಸ ಶಬ್ದವು ಅಗ್ನಿ ಶಬ್ದಕ್ಕೆ ನಿಕಟವರ್ತಿ. ಅದರ್ ಧಾತು. ಅಂಗ್, ಅದು ಅಗ್ ಧಾತುವಿನ ನಾಸಿಕ್ಯರೂಪ ಮಾತ್ರ. ಅಗ್ ಅಗ್ನಿಪದದ ಮೂಲಧಾತು. ಪ್ರಮುಖ; ಪ್ರಣೋದನಕರಸ್ಥಿತಿ, ಭಾವನೆ, ಚಲನೆ, ಕಾರ್ಯ ಎಂಬೀ ಅರ್ಥಗಳಲ್ಲದೆ ಅದಕ್ಕೆ 'ಬೆಳಕು'[೨] ಎಂಬ ಅರ್ಥವೂ ಇದೆ. ಈ ಕೊನೆಯ ಜ್ಯೋತಿರರ್ಥಕ ಯಾ ಭಾ ಸಾರ್ಥಕ ವಿವರಣೆ ಅಗ್ನಿ ಪದೋತ್ಪತ್ತಿಗೆ ಕಾರಣ-ಬೆಂಕಿ ; ಅಂಗತಿ[೩]=ಕಿಚ್ಚು ; ಅಂಗಾರ=ಉರಿಗೆಂಡ ; ಅಂಗಿರಸ್=ಜ್ವಲನವೆಂದಾಗಿರಬೇಕು ಅಥವಾ ಮಂದವಾಗಿ ಸ್ತಿಮಿತ ಸ್ವರೂಪದಲ್ಲಿ ಉರಿಯುತ್ತಿರುವ ಪದಾರ್ಥ ಎಂಬರ್ಥವಿರಬೇಕು. ವೇದದಲ್ಲೂ

---

೧. ಭಾವನಾಮಗಳಾಗಿ ಅಂಕಿತಗಳು ಬಳಸಲ್ಪಟ್ಟಾಗ ಭಾವನಾಮದ ಕಾರ್ಯನಾಮ Action noun. Quality Noun ಗುಣನಾಮ(ಕಾರ್ಯತ್ವ,ಗುಣತ್ವ)ಗಳು ಸೂಚಿತವಾಗುತ್ತವೆ. Adjectives ಗುಣವಾಚಕಗಳು ಕ್ರಿಯಾವಿಶೇಷಣಗಳಾಗುವುದು Adverbs ಮುಂದಿನ ಮಜಲು. "ನಾಮ ಚಧಾತುಜಮಾಹ ನಿರುಕ್ತೆ" ಎಂಬುದು ಇಲ್ಲಿ ಗಣ್ಯ. (ಅನುವಾದಕ)

೨. ಸ್ಥಿತಿಗೆ "ಅಗ್ರ" = ಪ್ರಥಮ, ಶಿಖರ ಮತ್ತು ಗ್ರೀಕ್ "ಅಗನ್" ಅತಿಶಯವಾಗಿ; ಭಾವನೆಗೆ ಗ್ರೀಕ್‌ನ "ಅಗಪೆ" ಪ್ರೇಮ, -ಸಂಸ್ಕೃತದ "ಅಂಗನಾ" ಬಹುಶಃ ತತ್‌ಸಂಬಂಧಿ; ಚಲನೆ-ಕಾರ್ಯಗಳಿಗೆ ತದ್ಧಾತುಜನ್ಯವಾದ ಅನೇಕ ಸಂಸ್ಕೃತ, ಗ್ರೀಕ್, ಲ್ಯಾಟಿನ್ ಭಾಷೆಗಳಲ್ಲಿಯ ಪದಗಳು ಉದಾಹರಣೆಗಳಾಗಿವೆ.

೩. "ಅಂಗತಿಗಚ್ಛತೀತಿಧಾತುಃ" (ಅನುವಾದಕ).

ಬ್ರಾಹ್ಮಣಗಳಲ್ಲೂ ಪರಂಪರಾನುಗತವಾಗಿ ಮೂಲತಃ ಅಂಗಿರಸರು ಅಗ್ನಿ ಸಂಬಂಧಿಕರು. ಬ್ರಾಹ್ಮಣಗಳಲ್ಲಿ ಅಗ್ನಿಯು ಬೆಂಕಿ ಮತ್ತು ಅಂಗಿರಸರು ಉರಿಗೆಂಡಗಳು ಎಂದು ಹೇಳಲಾಗಿದೆ - "ಅಂಗಾರಾಃ" ; ಆದರೆ ವೇದದಲ್ಲಿಯೇ ಅಂಗಿರಸರೆಂದರೆ ಅಗ್ನಿಜ್ವಾಲೆಗಳು ಅಥವಾ ಅಗ್ನಿ ಪ್ರಭೆಗಳು ಎಂಬ ಅರ್ಥ ಸೂಚಿತವಾಗಿರುವಂತೆ ತೋರುತ್ತದೆ. X.62 ದಲ್ಲಿ ಅಂಗಿರಸಋಷಿಗಳಿಗೆ ಹೇಳಿದ ಸೂಕ್ತವೊಂದರಲ್ಲಿ ಅವರು ಅಗ್ನಿಪುತ್ರರೆಂದೂ ಸ್ವರ್ಗದಲ್ಲಿ ಹುಟ್ಟಿದ ಅವರು ಅವನ ಸುತ್ತೆಲ್ಲಾ ಹರಡಿಕೊಂಡಿರುವರೆಂದೂ ನಾನಾರೂಪಿಗಳಾಗಿರುವರೆಂದೂ, ಮುಂದಿನ ಉಪವಾಕ್ಯದಲ್ಲಿ ಅವರನ್ನೆಲ್ಲಾ ಒಟ್ಟುಗೂಡಿಸಿ ಸಮೂಹವಾಚಕದಿಂದ "ನವಗ್ವೋನು ದಶಗ್ವೋ ಅಂಗಿರಸ್ತಮಃ ಸಚಾ ದೇವೇಷು ಮಂಹತೇ=ನವಾಂಶು, ದಶಾಂಶು, ಅತ್ಯಂಗಿರಸ ಎನ್ನಿಸಿದ ಈ ಅಂಗಿರಸ ಕುಲವು ಸಂಹತಿಯಿಂದ ದೇವತೆಗಳಲ್ಲಿ ಯಾ ದೇವತೆಗಳೊಡನೆ ಸುಸಮೃದ್ಧವಾಗುತ್ತದೆ ; ಇಂದ್ರಸಾಹಾಯ್ಯ-ದಿಂದ ಅವರು ಆಕಳುಗಳನ್ನೂ ಅಶ್ವಗಳನ್ನೂ ಬಂಧಮುಕ್ತಗೊಳಿಸುವರು. ಯಜಮಾನನಿಗೆ-(ಯಾಜ್ಞಕನಿಗೆ) ಅವರು ಯೋಗಶಕ್ತಿ ಸಂಪನ್ನ ಅಷ್ಟಕರ್ಣಧೇನುಗಳನ್ನು ಕೊಟ್ಟು, ಆ ಮೂಲಕ ದೇವತೆಗಳಿಗೆ "ಶ್ರವಸ್"=ದಿವ್ಯಶ್ರವಣಶಕ್ತಿಯನ್ನು ಅವರಲ್ಲೇ ಹುಟ್ಟುವಂತೆ ಮಾಡುವರು. ದಿವ್ಯಶ್ರವಣಶಕ್ತಿ ಎಂದರೆ ಪರಮಸತ್ಯೋನ್ಮುಖವಾದ ದಿವ್ಯಸ್ಫೂರ್ತಿ ಎಂದರ್ಥ. ಅಂಗಿರಸ ಋಷಿಗಳಲ್ಲಿ ಪ್ರಕಾಶಮಾನವಾದ ಕಾಂತಿಗಳು-ಪ್ರಸರಣಶೀಲ ಪ್ರಭೆಗಳು - ಎಂಬುದು ಚೆನ್ನಾಗಿ ಸ್ಪಷ್ಟವಾಗುತ್ತದೆ. ಅವರು ಸ್ವರ್ಗಜಾತರು; ಆದ್ದರಿಂದ ಅವರು ದಿವ್ಯ ಜ್ವಾಲೆಗಳು, ಬುವಿಯುರಿಗಳಲ್ಲ. ಅವರು ನವಗ್ವದಶಗ್ವರಾಗುವದು ಅಗ್ನಿಯಿಂದ-ಅಗ್ನಿಯು ದಿವ್ಯಜ್ವಾಲೆ, ಮರ್ತ್ಯಲೋಕದ ಜ್ವಾಲೆಯಲ್ಲ. ಆದ್ದರಿಂದಲೇ ಅವರು ಬಂಧಿತ ದಿವ್ಯಜ್ಯೋತಿಯನ್ನೂ ದಿವ್ಯ ಪ್ರಣೋದನ ಶಕ್ತಿಯನ್ನೂ ಅರ್ಥಾತ್ ಅತಿಮಾನಸ ಜ್ಞಾನವನ್ನು ಬಿಡುಗಡೆ ಮಾಡುತ್ತಾರೆ.

ಈ ವ್ಯಾಖ್ಯಾನವನ್ನು, ಸಾಂಕೇತಿಕತೆಯ ವಿವರಣೆಯನ್ನು, ಯಾರಾದರೂ ಒಪ್ಪದಿದ್ದರೂ ಇದರಲ್ಲೊಂದು ಸಾಂಕೇತಿಕತೆಯಿದೆ ಎಂಬುದಷ್ಟನ್ನಾದರೂ ಒಪ್ಪಲೇಬೇಕು. ಈ ಅಂಗಿರಸರು ಮಾನವ ಜಾತಿಯ ಯಾಜಕರಲ್ಲ. ಇವರು ಅಗ್ನಿಸುತರು, ಸ್ವರ್ಗಜರು. ಅವರ ಕಾರ್ಯವೇನೋ ಸರಿಯಾಗಿ ಮಾನವ್ಯ ಅಂಗಿರಸರ ಕಾರ್ಯದಂತಿದೆ ಎಂಬುದು ನಿಜವಾದರೂ ಅವರ ಸ್ವರ್ಗಜಾತತೆಯನ್ನು ನಾವು ಮರೆಯಲಾರೆವು. ಭೌಮ ಅಂಗಿರಸರು ಪಿತೃಗಳು - "ಪಿತರೋ ಮನುಷ್ಯಾಃ". ಅವರು ಬೇರೆ ಬೇರೆ ರೂಪಗಳಿಂದ ಹುಟ್ಟಿದವರು - "ವಿರೂಪಾಸಃ" ಇಷ್ಟೆಲ್ಲಾ ಹೇಳಿದ್ದರ ತಾತ್ಪರ್ಯವೆಂದರೆ ಅವರು ಅಗ್ನಿಶಕ್ತಿಯ ವಿವಿಧ ರೂಪಗಳು ಎಂದು. ಇಲ್ಲಿಯ ಪ್ರಶ್ನೆಯೊಂದೇ : ಅಗ್ನಿಯು ಯಾಜ್ಞಿಕ ಅಗ್ನಿಯ ಜ್ವಾಲೆಯೇ? ಸಾಮಾನ್ಯವಾದ ಅಗ್ನಿಯೇ? ಪಂಚಭೂತಗಳಲ್ಲಿ ಒಂದಾದ ಅಗ್ನಿಯೇ? ದ್ರಷ್ಟೃ ಸಂಕಲ್ಪವುಳ್ಳವನೆಂದು ಬಣ್ಣಿಸಲಾದ ಪವಿತ್ರ ಜ್ವಾಲೆಯೇ? ಅಥವಾ ದ್ರಷ್ಟೃ ಕರ್ಮಕರನೂ ಸತ್ಯನೂ ಸ್ಫೂರ್ತಿಯ ವಿವಿಧ ಬೆಳಕನ್ನುಳ್ಳವನೂ ಆದ ಅಗ್ನಿಯೇ?-"ಅಗ್ನಿರ್ಹೋತಾ ಕವಿಕ್ರತುಃ ಸತ್ಯಶ್ಚಿತ್ರಶ್ರವಸ್ತಮಃ" ಅವನು ಪಾಂಚಭೌತಿಕ ಅಗ್ನಿಯಾದರೆ, ಅಂಗಿರಸರು ಪ್ರತಿನಿಧಿಸುವ ಭುಗ್ಗೆಂದುರಿವ ಜ್ವಾಲೆಗಳ ಹೊಳಪು ಖಂಡಿತವಾಗಿ ಸೂರ್ಯನೇ ಆಗಿರಬೇಕು. ಅಗ್ನಿಯ ಬೆಂಕಿಯು ಪಸರಿಸಿದ ಸೌರ ಕಿರಣಗಳಾಗಿರಬೇಕು ; ಮತ್ತು ಇಂದ್ರನೊಡನಿದ್ದು ಆಕಾಶರೂಪದಿಂದ ಉಷೆಯನ್ನು ಹುಟ್ಟಿಸುವ ಶಕ್ತಿಯಾಗಿರಬೇಕು. ಅಂಗಿರಸರ ಐತಿಹ್ಯಕ್ಕೆ ಬೇರೆ ಯಾವ ಭೌತಿಕ ವಿವರಣೆಯೂ ಅದರ ಪರಿಸ್ಥಿತಿಗಳ ವಿವರಗಳೊಡನೆ ಹೊಂದಿಕೊಳ್ಳಲಾರದು. ಆದರೆ ಅಂಗಿರಸ ಋಷಿಗಳು ದ್ರಷ್ಟಾರರು, ಸೂಕ್ತ ಗಾಯಕರು, ಬೃಹಸ್ಪತಿಯ ಶಕ್ತಿಗಳು ಮತ್ತು ಸೂರ್ಯ - ಉಷೆಯರ

ಪ್ರಭಾವಗಳು ಎಂಬ ಅವರ ಮುಂದಿನ ವರ್ಣನೆಗೆ ಈ ವಿವರಣೆಯೆಂದೂ ಸಮರ್ಥನೆಯನ್ನು ನೀಡಲಾರದು.

ವೇದದ ಇನ್ನೊಂದು ಉಪಚ್ಛೇದವಿದೆ. (VI.6.3-5) ಅದರಲ್ಲಿ ಈ ದಿವ್ಯ ಅಂಗಿರಸರನ್ನು ಅಗ್ನಿಯ ಜ್ವಲತ್ತೇಜಸ್ಸಿನೊಡನೆ ಏಕೀಕರಿಸಿದುದು ಅಪಾರ್ಥಕ್ಕೆಡೆಗೊಡದಷ್ಟು ಸ್ಪಷ್ಟವಾಗಿ ಹೊರಗೆಡಹಲಾಗಿದೆ. "ಓ ಶುದ್ಧವಾಗಿ ಹೊಳೆವ ಅಗ್ನಿಯೇ, ವಾಯುವಿನಿಂದ ಬೀಸಲ್ಪಟ್ಟ ನೀನು ನಿನ್ನ ಶುದ್ಧ ಲಸದ್ ಭಾಸಗಳನ್ನು ("ಭಾಮಾಸಃ") ಎತ್ತೆತ್ತಲೂ ವಿಸ್ತಾರವಾಗಿ ಹರಡು ; ಸ್ವರ್ಗೀಯ ನವಕಿರಣರನ್ನು ("ದಿವ್ಯಾನವಗ್ವಾಃ) ಬಲಾತ್ಕಾರದಿಂದ ಜಯಿಸು ; ಸಮಿತ್ತುಗಳನ್ನು[೧] ಭೋಗಿಸು. ("ವನಾ ವನಂತಿ, ಅರ್ಥಪೂರ್ಣವಾಗಿ-ಇಂದ್ರಿಯ ವಿಷಯಗಳನ್ನು ಭೋಗಿಸಿ" - ಎಂಬ ಅಂತರರ್ಥವನ್ನು ಸೂಚಿಸುತ್ತದೆ). -ಬಿರುಸಿನಿಂದ ಅವುಗಳನ್ನು ಒಡೆದು ಭೋಗಿಸು. ಹೇ ಶುದ್ಧ ತೇಜೋಮಯನೇ, ಹೊಳೆವ ಪವಿತ್ರ ತೇಜೋಂಶಗಳು ಯಾ ಜ್ವಾಲೆಗಳು ಅವು ಇಡೀ ಭೂಮಿಯನ್ನು ಮುಸುಕುತ್ತವೆ.[೨] ಅವು ದಶ ದಿಕ್ಕುಗಳತ್ತ ಓಡಬಲ್ಲ ನಿನ್ನ ಕುದುರೆಗಳು. ಅನಂತರ ನಿನ್ನ ತಿರುಗಾಟವು ಸುತ್ತಲೂ ವಿಸ್ತಾರವಾಗಿ ಬೆಳಗುತ್ತದೆ ; ಆಗ ಭಿನ್ನ ವರ್ಣಗಳುಳ್ಳವುಗಳ (ದನ, ಪೃಶ್ನಿ = ಮರುತ್ತುಗಳ ತಾಯಿ) ಉನ್ನತತರ ಮಟ್ಟಕ್ಕೆ ಆ ಜ್ವಾಲೆಗಳು ನೀನು ಏರುವಂತೆ ಮಾಡುತ್ತವೆ. ಆ ಬಳಿಕ ನಿನ್ನ ಜ್ವಾಲಾಜಿಹ್ವೆಯು ದ್ವಿಧಾ (ಭೂಮಿಯಲ್ಲಿ ಮತ್ತು ಸ್ವರ್ಗದಲ್ಲಿ?) ಮುಂದಕ್ಕೆ ಕುಪ್ಪಳಿಸಿ - ಇಗ್ಗುಪ್ಪಳ ಹಾಕಿ-ಹಾರುತ್ತದೆ ; ಆಗ ನಿನ್ನ ಜ್ವಾಲಾ ಜಿಹ್ವೆ, ದನಗಳಿಗಾಗಿ ಯುದ್ಧ ಮಾಡಿದ ಎತ್ತು ದಾಬು ಬಿಚ್ಚಿ ಹೊರಡಿಸಿದ ವಿದ್ಯುತ್ತಿನಂತೆ ತೋರುತ್ತದೆ. ಸಾಯಣನು ಇಲ್ಲಿ ಎದುರಿಗೇ ಕಾಣಿಸುವಂತೆ ಋಷಿಗಳ ಜ್ವಾಲೈಕ್ಯವನ್ನು ತಪ್ಪಿಸಲೆಂದು "ನವಗ್ವ" ಎಂದರೆ ಹೊಸದಾಗಿ ಹುಟ್ಟಿದ ಕಿರಣಗಳೆಂದು ಅರ್ಥ ಮಾಡಿದ್ದಾನೆ. ಆದರೆ ಸ್ಪಷ್ಟವಾಗಿ "ದಿವ್ಯಾನವಗ್ವಾಃ" ಎಂದರಿಲ್ಲಿ ಸ್ವರ್ಗದಲ್ಲಿ ಜನಿಸಿದ ಅಗ್ನಿ ಪುತ್ರರೇ. (X. 62) ಇವರೆಂದೂ ಅವರಿಂದ ಭಿನ್ನರಾಗಲಾರರು ; ಮತ್ತು ಈ ಅಭೇದವನ್ನು-ಸಮರ್ಥನೆಯೇ ಬೇಕಾದರೆ, ಸಮರ್ಥಿಸಲು - ನವಗ್ವ ಕೃತವಾದ ಈ ಅಗ್ನಿ ಪ್ರಸಾರದಲ್ಲಿ ಅಗ್ನಿಯ ನಾಲಗೆಯು - ನಿರ್ವಿವಾದವಾಗಿ ಸ್ವರ್ಗದ ಗುಡ್ಡದಲ್ಲಿಯ ಕತ್ತಲಿನ ಶಕ್ತಿಗಳನ್ನು ಸೋಲಿಸಲು ಮತ್ತು ಹಾಗೆ ಸೋಲಿಸಿ ತನ್ನ ಕೈಬಿಟ್ಟು ಹೋದ ಹಸುಗಳನ್ನು ತಿರುಗಿ ತರಲೆಂದು ಹೋರಾಡಿದ ವೃಷಭನಾದ ಇಂದ್ರನ ವಜ್ರಾಯುಧದಂತೆ ತೋರುತ್ತದೆ ; ಅದರ ಇದರ ಕುಪ್ಪಳ, ಮುನ್ನೆಗೆತ ಒಂದೇ ಬಗೆಯವು. ಏಕೆಂದರೆ, ಅಗ್ನಿ-ನವಗ್ವರ ದೌಡನ್ನು ("ಸಾನುಪೃಶ್ನೇಃ") ಭೂಮಿಯನ್ನು ಆವರಿಸಿದ ಬಳಿಕ ಗುಡ್ಡವನ್ನು ಹತ್ತುವಂತೆ ವರ್ಣಿಸಲಾಗಿದೆ.

ಸ್ಪಷ್ಟವಾಗಿಯೂ ಇಲ್ಲಿ ಜ್ವಾಲೆಯ ಹಾಗೂ ಪ್ರಕಾಶದ ಒಂದು ಸಾಂಕೇತಿಕತೆಯಿದೆ. ದಿವ್ಯ ಜ್ವಾಲೆಗಳು ಭೂಮಿಯನ್ನು ನುಂಗಿ, ಸ್ವರ್ಗದ ಮಿಂಚಾಗಿ, ಬಳಿಕ ಸೌರಶಕ್ತಿಗಳ ಹೊಳಪಾಗುತ್ತವೆ. ವೇದದಲ್ಲಿ ಸೂರ್ಯನ ಬೆಳಕು, ಮಿಂಚು, ಜಲಗತ ಜ್ವಾಲೆ ಮತ್ತು ಭೂಮಿಯ ಹೊಳಪು - ಇವೆಲ್ಲಾ ಅಗ್ನಿಯೇ. ಅಂಗಿರಸರು ಅಗ್ನಿಶಕ್ತಿಗಳು. ಆದುದರಿಂದ ಅಗ್ನಿಯ ವಿವಿಧ ಕಾರ್ಯಗಳಲ್ಲೆಲ್ಲಾ ಪಾಲುಗೊಳ್ಳುತ್ತಾರೆ. ಯಜ್ಞ ಹೊತ್ತಿಸಿದ ದಿವ್ಯ ಜ್ವಾಲೆಯು ಇಂದ್ರನಿಗೆ ಮಿಂಚಿನ ಉಪಾದಾನವನ್ನು,

---

೧. ಯಜ್ಞಾಗ್ನಿಗೆ ಹಾಕಿದ (ಸಮಿತ್ತುಗಳು) ಸೌದೆ ತುಂಡುಗಳು - ಸಾಯಣನ ಪ್ರಕಾರ

೨. ಭೂಮಿಯ ಕೂದಲನ್ನು ಬೋಳಿಸು - ಸಾಯಣನ ಪ್ರಕಾರ

ಆಯುಧವನ್ನು, ಸ್ವರ್ಗೀಯ ಕಲ್ಲಾದ ("ಸ್ವರ್ಯ ಅಶ್ಮಾ") ಅಶ್ಮವನ್ನು ಒದಗಿಸುತ್ತದೆ. ಅವನದರಿಂದ ಅಂಧಕಾರದ ಶಕ್ತಿಗಳನ್ನು ನಾಶಮಾಡಿ, ಸೌರಗೋಗಳಾದ ಜ್ಯೋತಿರ್ಲೇಖೆಗಳನ್ನು ಗೆಲ್ಲುತ್ತಾನೆ.

ಅಂಗಿರಸರ ಅಪ್ಪನಾದ ಅಗ್ನಿಯು ಈ ದಿವ್ಯ ಜ್ವಾಲೆಗಳ ಮೂಲ ಚಿಲುಮೆಯಲ್ಲದೆ, ಅವನೇ ಮೊದಲ ಅಂಗಿರಸ "ಪ್ರಥಮೋ ಅಂಗಿರಾಃ" - ಮೊದಲ ಸರ್ವೋಚ್ಚ ಅಂಗಿರಸ-ಎಂದು ವೇದ ಹೇಳಿದೆ. ಈ ವರ್ಣನೆಯಿಂದ ನಾವೇನನ್ನು ತಿಳಿದುಕೊಳ್ಳಬೇಕೆಂದು ವೇದರ್ಷಿಗಳ ಅಪೇಕ್ಷೆ? ವೇದಕವಿಗಳ ಬಯಕೆ? ಈ ವಿಶೇಷಣವನ್ನು ಬಳಸಿದ ಕೆಲ ಉಪಚ್ಛೇದಗಳಲ್ಲಿ ಪ್ರಕಾಶಮಾನವೂ ಜ್ವಲಂತವೂ ಆದ ದೇವತೆಗೆ ಅನ್ವಯಿಸಿದ್ದನ್ನು ಕಂಡು ಅವರ ಅಪೇಕ್ಷೆಯನ್ನು ಬಹಳ ಚೆನ್ನಾಗಿ ನಾವು ಅರ್ಥಮಾಡಿಕೊಳ್ಳಬಹುದು. ಮೊದಲನೆಯದಾಗಿ, ಅದನ್ನು ಅಗ್ನಿಯ ಇನ್ನೊಂದು ಸ್ಥಿರ ವಿಶೇಷಣವಾದ ಪ್ರಣೋದಸುತ ಯಾ ಬಲಸೂನು "ಸಹಸಃಸೂನುಃ ಉರ್ಜೋರ್ ನಪಾತ್" ಎಂಬುದರೊಡನೆ ಎರಡು ಸಲ ಜೊತೆಗಿಡಲಾಗಿದೆ. ಇಲ್ಲಿ ನೋಡಿರಿ : VIII.60.2. ರಲ್ಲಿ ಅಗ್ನಿಯನ್ನು "ಸಹಸಃ ಸೂನೋ ಅಂಗಿರಃ" = ಎಲೈ ಅಂಗಿರಸಾಗ್ನಿಯೇ ನೀನು ಶಕ್ತಿಸುತನು, "ಅಗ್ನೇ ಅಂಗಿರ ಊರ್ಜೋರ್ನಪಾತ್" ಮತ್ತು V.11.6. ರಲ್ಲಿ ಓ ಅಗ್ನಿ, ಅಂಗಿರಸನ್, ನೀನು "ಗುಹಾಹಿತಂ"=ಗುಪ್ತಸ್ಥಳದಲ್ಲಿ ಸಂಸ್ಥಾಪಿತನಾಗಿ ಕಾಣಿಸಿದೆ ; "ವನೇವನೇ" = ಕಾಡು ಕಾಡಿನಲ್ಲಿ ಗೂಢನಾಗಿ ಕಾಣಿಸಿದೆ ಎಂದು ಸಂಬೋಧಿಸಲಾಗಿದೆ : ಅಥವಾ ಅದರ ಗೂಡಾರ್ಥವನ್ನು ನಾವು ಸ್ವೀಕರಿಸಿದರೆ, "ವನಾವನಂತಿ"=ಪ್ರತಿಯೊಂದು ಭೋಗ್ಯ ವಿಷಯದಲ್ಲೂ ಎಂಬ ಪದ ಸಂಹತಿಯಲ್ಲಿ ಸ್ಪಷ್ಟವಾಗುತ್ತದೆ. ಹಿಂಡಿದ್ದರಿಂದ ನೀನು ಹೀಗೆ ಹುಟ್ಟಿದೆ= "ಮಥ್ಯ ಮಾನಃ" - ನೀನೊಂದು ಮಹಾಬಲಶಾಲಿಯಾದ ಉನ್ನೋದಕ, ಒತ್ತಡ ತರುವವನು; ನಿನ್ನನ್ನೇ ಅವರು ಪ್ರಣೋದ ಪುತ್ರನೆಂದು ಕರೆಯುತ್ತಾರೆ - ಗೊತ್ತಾಯಿತೇ ಎಲೈ ಅಗ್ನಿಯೇ, ಅಂಗಿರಸ ಸ್ವರೂಪನೇ ("ಸ ಜಾಯಸೇ ಮಥ್ಯಮಾನಃ ಸಹೋ ಮಹತ್ ತ್ವಾಮಾಹುಃ ಸಹಸಃ ಪುತ್ರಂ ಅಂಗಿರಃ")! ಆದ್ದರಿಂದ ಇಲ್ಲಿ ಯಾವ ಸಂದೇಹವೂ ಇಲ್ಲ- ಅಂಗಿರಸನೆಂಬ ವೈದಿಕ ಕಲ್ಪನೆಯಲ್ಲಿ ಪ್ರಣೋದಾರ್ಥವು ಸೂಚಿತವಾಗಿದೆ, ಪ್ರಚೋದನಾರ್ಥವು ಸಂಕೇತಿತವಾಗಿದೆ. ನಾವು ಕಂಡಂತೆ ಅದು ಆ ಪದದ ಅಂಗವೇ ಆಗಿದೆ, ಪಾರ್ಕ್ಷಿಕಾರ್ಥವೇ ಆಗಿದೆ. "ಅಗ್ನಿ" ಮತ್ತು "ಅಂಗಿರಃ" ಎಂಬಿವುಗಳು "ಅಗ್" ಧಾತುಜ, ಅಂಗ್ ಧಾತುಜ. ಅದರ ಹುಟ್ಟುಗುಣವೆಂದರೆ ಸ್ಥಾನಗತ ಪ್ರಣೋದಬಲ, ಕಾರ್ಯಗತ ಪ್ರಣೋದ ಬಲ, ಚಲನಗತ ಪ್ರಣೋದಬಲ, ಪ್ರಕಾಶಗತ ಪ್ರಣೋದಬಲ, ಭಾವನಾಂತಃಸ್ಥಬಲ - ಎಂಬುದೇ ಆಗಿದೆ. ಪ್ರಣೋದಬಲ ಅದರದೇನೋ ನಿಜಾರ್ಥ - ಆದರದು ಬೆಳಕು. ಪವಿತ್ರ ಜ್ವಾಲೆಯಾದ ಅಗ್ನಿಯು ಬೆಳಕಿನ ಸುಡುವ ಶಕ್ತಿ ; ಅಂಗಿರಸರು ಕೂಡಾ ಬೆಳಕಿನ ಸುಡುವ ಶಕ್ತಿ.

ಆದರೆ ಯಾವ ಬೆಳಕು? ಭೌತಿಕವೋ ಸಾಂಕೇತಿಕವೋ ಅಥವಾ ರೂಪಕ ಪ್ರತಿಮಾಸ್ವರೂಪದ್ದೋ? ವೇದದ ಕವಿಗಳು ಒರಟರು, ಕಾಡಾಡಿ ಬುದ್ಧಿಯವರು, ರೂಪಕೋಕ್ತಿಯನ್ನು ಬಲ್ಲವರಲ್ಲ - ಎದ್ದುಕಾಣುವಂಥ ಅರ್ಥವನ್ನೂ ಪ್ರತಿಮಾನದಿಂದ ಹೇಳುವ ಪ್ರತಿಭೆಯುಳ್ಳವರಲ್ಲ- ಎಲ್ಲ ಭಾಷೆಗಳಿಗೂ ಸಾಧಾರಣವಾದ ಈ ಚಿತ್ರೋಕ್ತಿ ಚಾತುರ್ಯ ಅವರಿಗಿರಲಿಲ್ಲ. ಭೌತಿಕ ಬೆಳಕನ್ನು ಮಾನಸಿಕ, ಆಧ್ಯಾತ್ಮಿಕ, ಬ್ರಾಹ್ಮಿಕ, (ಜ್ಞಾನಿಕ) ಇಲ್ಲವೆ ಅಂತರ್‌ಜ್ಞಾನೋದಯಾತ್ಮಕ ರೀತಿಯಿಂದ ರೂಪಿಸಿ ಹೇಳಲಾರದಷ್ಟು ದಡ್ಡರು ಎಂದು ನಾವು ಊಹಿಸುವುದು ತಪ್ಪು. ಅತಿಸ್ಪಷ್ಟವಾಗಿ ವೇದವು "ಪ್ರಕಾಶಾತ್ಮಕ ಋಷಿಗಳು" ಎಂದು ಹೇಳುತ್ತದೆ. "ದ್ಯುಮಂತೋ ವಿಪ್ರಾನ್" = ದ್ಯುತಿಮಂತರಾದ ಋಷಿಗಳನ್ನು; "ಸೂರಿ"=ದ್ರಷ್ಟಾರ ಎಂಬುದಕ್ಕೂ ಸೂರ್ಯಪದಕ್ಕೂ ನಂಟಿದೆ. ಮೂಲತಃ ಸೂರ್ಯಪದಕ್ಕೆ ನೈರುಕ್ತಕವಾಗಿ "ದ್ಯುತಿಮಾನ್"

ಎಂದೇ ಅರ್ಥವಿದ್ದಿರಬೇಕು.[೧] I.31.1. ರಲ್ಲಿ ಈ ಜ್ವಾಲಾದೇವನನ್ನು ಕುರಿತು "ಹೇ ಅಗ್ನಿ, ನೀನು ಪ್ರಥಮಾಂಗಿರಸ, ದ್ರಷ್ಟಾರ, ಮಂಗಲಸಖ, ದೇವರುಗಳ ದೇವ ; ನಿನ್ನ ಕರ್ಮಾನುಷ್ಠಾನದ ನಿಯಮಾನುಸಾರವಾಗಿ ತಮ್ಮ ಹೊಳೆವ ಈಟಿಗಳೊಡನೆ ಮರುತ್ತುಗಳು ಜನಿಸಿದರು- ಅವರು ದ್ರಷ್ಟಾರರು, ತಮ್ಮ ಜ್ಞಾನಾನುಸಾರವಾಗಿ ಕೆಲಸ ಮಾಡುವವರು," ಹೇಳಲಾಗಿದೆ. ಅಗ್ನಿ ಅಂಗಿರಸನ ಕಲ್ಪನೆಯಲ್ಲಿ ಸ್ಪಷ್ಟವಾಗಿ ಎರಡು ವಿಚಾರಗಳಿವೆ ಎಂಬುದು ಸ್ಪಷ್ಟ : ಜ್ಞಾನ·ಮತ್ತು ಕ್ರಿಯೆ. ಜ್ಯೋತಿರ್ಮಯ ಅಗ್ನಿಯೂ ಜ್ಯೋತಿರ್ಮಯ ಮರುತ್ತುಗಳೂ ತಮ್ಮ ಬೆಳಕಿನ ದೆಸೆಯಿಂದ ಜ್ಞಾನದ್ರಷ್ಟಾರರು ("ಋಷಿ ಕವಿ") ; ಜ್ಞಾನಪ್ರಕಾಶದ ದೆಸೆಯಿಂದ ಪ್ರಣೋದಭರ ಮರುತ್ತುಗಳು ಕೆಲಸ ಮಾಡುತ್ತಾರೆ. ಏಕೆಂದರೆ, ಅವರು ಅಗ್ನಿಯ ವ್ರತ (ಕೆಲಸ) ಲಕ್ಷಣದಿಂದ ಹುಟ್ಟಿದವರು ಅಥವಾ ವ್ಯಕ್ತರಾದವರು. ಅಗ್ನಿಯನ್ನೇ ದ್ರಷ್ಟಸಂಕಲ್ಪವುಳ್ಳವನೆಂದು (ಕವಿಕ್ರತುವೆಂದು) ಅಥವಾ ಸ್ಫೂರ್ತ ಯಾ ಅತಿಮಾನಸ ಜ್ಞಾನ ("ಶ್ರವಸ್") ದಂತೆ ಕೆಲಸ ಮಾಡುವ ಕರ್ಮಶಕ್ತಿಯೆಂದು ಬಣ್ಣಿಸಲಾಗಿದೆ. ಏಕೆಂದರೆ, ಕವಿಶಬ್ದೋಕ್ತವಾದ ಜ್ಞಾನವು ಬೌದ್ಧಿಕತೆಯದಲ್ಲ, ಸುಪ್ರಮಾನಸದ್ದು (ಅತಿಮಾನಸದ್ದು) ಅಗ್ನ್ಯಂಗಿರಸ ಎಂಬ ಈ ಮಹಾಪ್ರಣೋದ ಶಕ್ತಿಯು ("ಸಹೋಮಹತ್") ಕವಯೋವಿದ್ಮನಾ ಅಪಸಃ= ಜ್ಞಾನಬಲದಿಂದ ಕೆಲಸ ಮಾಡುವವರೆಂದು ಮರುತ್ತುಗಳನ್ನು ವರ್ಣಿಸಿದಂತೆಯೇ ಪೂರ್ಣ ಸಾಮಶ್ರುತ್ಯದಿಂದ ಕೆಲಸ ಮಾಡುವ ತನ್ನ ಯಮಳ ಜ್ವಲದ್ ದಿವ್ಯ ಪ್ರಜ್ಞೆಯಿಂದೊಡಗೂಡಿದ ಶಕ್ತಿಯಲ್ಲದೆ ಇನ್ನಾವುದು? ಉಷೆಯು ದಿವ್ಯ ಉಷಃಕಾಲ, ಅವಳು ಕೇವಲ ಭೌತಿಕೆಯಲ್ಲ, ಅವಳ ದನಗಳು ಯಾ ಕಿರಣಗಳು ಮತ್ತು ಸೂರ್ಯನು ಮೂಡುತ್ತಿರುವ ದಿವ್ಯ ಪ್ರಜ್ಞೆ; ಆದ್ದರಿಂದ ಸೂರ್ಯನು ಸ್ವರ್ಲೋಕದ ಮತ್ತು ಜ್ಞಾನದ ದೊರೆ ಎಂಬರ್ಥದಲ್ಲಿ ಪ್ರದ್ಯೋತಕನು ; ಅವನು ಬೆಳಗುವುದು (ಪ್ರದ್ಯೋತಿಸುವುದು) ಭೂಮಿ ಸ್ವರ್ಗಗಳಾಚೆಯ ಸೌರ ಪ್ರಪಂಚವನ್ನು, ಎಂದರೆ, ದಿವ್ಯಸತ್ಯ ಮತ್ತು ದಿವ್ಯಾನಂದಗಳ ಪ್ರಪಂಚವನ್ನು - ಒಂದೇ ಮಾತಿನಲ್ಲಿ ಹೇಳುವುದಾದರೆ - ವೇದದಲ್ಲಿ ಬೆಳಕೆಂದರೆ ಜ್ಞಾನ, ದಿವ್ಯಸತ್ಯದ ಪ್ರದ್ಯೋತನ, ಪ್ರಕಾಶನ ಎಂದು ನಿರ್ಣಯಿಸಲು ನಮಗೆ ಸಾಕಷ್ಟು ಕಾರಣಗಳು ಸಿಕ್ಕಿದವು. ಬೆಳಕಿನ ಬಳಿ ಇನ್ನೊಂದು ಲಕ್ಷಣವಾದ ಜ್ವಾಲೆಯು ವೇದದಲ್ಲಿ ದಿವ್ಯ ಪ್ರಜ್ಞೆಯ ಅತಿಮಾನಸ ಸತ್ಯದ, ಸಂಕೇತ ಎಂದು ನಿಗಮನಿಸಲು ನಮಗೀಗ ಕಾರಣವು ದೊರಕಲಾರಂಭಿಸಿದೆ.

ಇನ್ನೊಂದು ಉಪಚ್ಛೇದದಲ್ಲಿ (VI.11.3) "ವೇಪಿಷ್ಠೋ ಅಂಗಿರಸಾಂ ವಿಪ್ರಃ" = ಅಂಗಿರಸರಲ್ಲಿ ಅತಿ ಹೆಚ್ಚಿನ ಪ್ರಬುದ್ಧ ದ್ರಷ್ಟಾರನೊಬ್ಬನ ಉಲ್ಲೇಖವಿದೆ - ಇಲ್ಲಿಯ ವಿಷಯಾನ್ವಯವು ಸ್ಪಷ್ಟವಾಗಿಲ್ಲವೇ ಇಲ್ಲ. "ವೇಪಿಷ್ಠೋ ವಿಪ್ರಃ" ಎಂಬೆರಡು ಪದಗಳ ಸಹಯೋಗವನ್ನು ಅಲಕ್ಷಿಸಿ ಸಾಯಣನು ವೇಪಿಷ್ಠ ಅಂದರೆ ಅಧಿಕತಮ, ವೇಪಿಷ್ಠ ವಿಪ್ರ = ಅಧಿಕತಮ ವಿಪ್ರ, ಅಧಿಕತಮ ದ್ರಷ್ಟಾರ, ಅಧಿಕತಮ ಪ್ರಬುದ್ಧ ಎಂದು ಅರ್ಥ ಹೇಳಿ ಪಾರಂಪರಿಕ ಋಷಿಯಾದ ಭಾರದ್ವಾಜನಿಲ್ಲಿ ಅಧಿಕತಮ ದೇವತಾಸ್ತೋತ್ರಕಾರನೆಂದು ತನ್ನನ್ನೇ ಹೊಗಳಿಕೊಂಡಿದ್ದಾನೆ ಎಂದು ವಿವರಿಸುತ್ತಾನೆ; ಆದರೆ ಇದೊಂದು ಶ್ಲೇಷೋಕ್ತಿ. ಇಲ್ಲಿ ಯಜ್ಞ ಮಾಡುತ್ತಿರುವವನು - ತನ್ನದೇ ಸಾಕಾರಕ್ಕೆ ("ತನ್ವಂ ತವಸ್ವಾಂ" VI.11.2) ಮರುತ್ತುಗಳಿಗೆ, ಮಿತ್ರನಿಗೆ, ವರುಣನಿಗೆ ಮತ್ತು ದ್ಯಾವಾ ಪೃಥಿವಿಯರಿಗೆ ಅವನಿಲ್ಲಿ ಹೋತೃ, ಏಕೆಂದರೆ, "ಅಧಿಕತಮ ಪ್ರಬುದ್ಧನಾದ ಅಂಗಿರಸ ಋಷಿಯು ಯಜ್ಞದಲ್ಲಿ

---

೧. ಸುರ್= (ಸುರತಿ) ಆಳು, ಅತಿಮಾನುಷ ಶಕ್ತಿಮಂತನಾಗಿರು, ಹೊಳೆಯು-ಧಾತುಪಾಠ XXVIII. 50 (ಅನುವಾದಕ)

ಮಾಧುರ್ಯದ ಲಯವನ್ನು ಉಚ್ಚರಿಸಿದಾಗ - ಸಂಪನ್ನಮಯ ವಿಚಾರ ನಿನ್ನಲ್ಲಿದ್ದರೂ ದೇವತೆಗಳನ್ನು, ದಿವ್ಯಜನ್ಮಗಳನ್ನು ಸೂಕ್ತಗಾಯಕನಿಗಾಗಿ (ಅವನು ಅವರಿಗೆ ಯಜ್ಞ ಮಾಡಲೆಂದು) ಬಯಸುತ್ತಾನೆ" - ಎಂಬುದು ಸೂಕ್ತದ ಸರಿಯಾದ ಅರ್ಥ. ಅಂಗಿರಸರಲ್ಲಿ ಅತ್ಯಂತ ಪ್ರಬುದ್ಧನಾದ ಋಷಿ ಎಂದರೆ ಅಗ್ನಿಯೇ ಸರಿ ಎಂದು ತೋರುತ್ತದೆ. ಹಾಗಲ್ಲದೆ ಉಕ್ತ ವರ್ಣನೆಯು ಬೃಹಸ್ಪತಿಗೆ ಹೆಚ್ಚು ಚೆನ್ನಾಗಿ ಅನ್ವಯಿಸುತ್ತದೆ.

ಏಕೆಂದರೆ, ಬೃಹಸ್ಪತಿಯು ಸಹಾ ಒಬ್ಬ ಅಂಗಿರಸ ಮತ್ತು ಒಬ್ಬ ಅಂಗಿರಸನಾದವನು. ಹೊಳೆವ ದನಗಳನ್ನು ಗೆದ್ದು ತರುವುದರಲ್ಲಿ ಅಂಗಿರಸ ಋಷಿಗಳೊಡನೆ ಅವನ ನಿಕಟ ಸಂಪರ್ಕವಿದ್ದುದನ್ನು ನಾವು ಕಂಡಿದ್ದೇವೆ ಮತ್ತು ಅವನ ಸಂಪರ್ಕನಾಮವು ಬ್ರಹ್ಮಣಸ್ಪತಿ = ಪವಿತ್ರವಾದ ಯಾ ಸ್ಫೂರ್ತವಾದ ವಾಣಿಯ, ಮಂತ್ರದ ("ಬ್ರಹ್ಮನ್") ಪಂಡಿತ. ಅವನ ಗರ್ಜನೆಯಿಂದಲೇ ವಲನು ಸಿಡಿದು ಚೂರು ಚೂರಾದನು ಮತ್ತು ಅವನ ಆಹ್ವಾನಕ್ಕೆ ಪ್ರತಿಯಾಗಿ ದನಗಳು ಅವನತ್ತ ಹೋಗುವ ಬಯಕೆಯಿಂದ 'ಅಂಬಾ' ಎಂದು ಕೂಗಿದವು. ಅಗ್ನಿಯ ಶಕ್ತಿಗಳಾದ ಈ ಅಂಗಿರಸರು ಅವನಂತೆಯೇ ಕವಿಕ್ರತುಗಳು=ಅವರ ಹತ್ತಿರ ದಿವ್ಯಪ್ರಕಾಶವಿದೆ - ಅದರ ಪ್ರಕಾರ ಅವರು ದಿವ್ಯ ಪ್ರಣೋದಬಲದಿಂದ ಕೆಲಸ ಮಾಡುತ್ತಾರೆ. ಅವರು ಋಷಿಗಳು ಮಾತ್ರವಲ್ಲದೆ ವೈದಿಕ ರಣಕಣದ ವೀರರು ; "ದಿವಸ್‌ಪುತ್ರಾಸೋ ಅಸುರಸ್ಯವೀರಾಃ" (III.53.7) ಅವರು ಸ್ವರ್ಗಸುತರು, ಬಲಿಷ್ಠ ಅಧಿಪತಿಯ ವೀರರು, ಅವರು VI.75.9 ರಲ್ಲಿ ವರ್ಣಿಸಿದಂತೆ "ಮಾಧುರ್ಯ (ಆನಂದಪ್ರಪಂಚ) ದಲ್ಲಿ ವಾಸಿಸುವವರು, ವಿಶಾಲ ಜನ್ಮ ಸಂಸ್ಥಾಪಕರು, ದುರ್ಗಮಸ್ಥಲಚಾರಿಗಳು, ಪ್ರಣೋದಬಲಸಂಪನ್ನರು, ಆಳವಾದ ಪಾಂಡಿತ್ಯವುಳ್ಳವರು.[೧] ಅವರು ಝುಗಝಗಿಸುವ ಸೈನ್ಯವುಳ್ಳವರು, ಅವರು ಬಲಿಷ್ಠ ಬಾಣಗಳನ್ನು ಉಳ್ಳವರು, ಹುಟ್ಟುತ್ತಲೇ ಅವರು ಅಜಯ್ಯ ವೀರರು, ಗುಂಪು ಗುಂಪಾಗಿ ಬಂದ ಹಗೆಗಳನ್ನು ಕೈಚೀಸಿ ಗೆದ್ದವರು. ಅಲ್ಲದೆ, ಅಂಗಿರಸರು (ಮುಂದಿನ ಪದ್ಯವು ಹೇಳಿರುವಂತೆ) "ಬ್ರಾಹ್ಮಣಾಸಃ ಪಿತರಃ ಸೋಮ್ಯಾಸಃ = ದಿವ್ಯ ಮಂತ್ರ ಸಂಪನ್ನರು-ಆ ಮಂತ್ರದಲ್ಲಿ ದಿವ್ಯಜ್ಞಾನವು ತುಂಬಿರುತ್ತದೆ.[೨] ಈ ದಿವ್ಯಶಬ್ದವೇ ಮಂತ್ರ. ಅದೊಂದು ವಿಚಾರ, ಆಲೋಚನೆ - ಅದರಿಂದಲೇ, ಅದರ ಸತ್ಯದಿಂದಲೇ ಅಂಗಿರಸರು ಉಷಾಜನನಕ್ಕೆ ಕಾರಣರಾಗುತ್ತಾರೆ ಮತ್ತು ಕಳೆದ ಸೂರ್ಯನು ಸ್ವರ್ಗದಲ್ಲಿ ಉದಯಿಸುವಂತೆ ಮಾಡುತ್ತಾರೆ. ಈ ಶಬ್ದವನ್ನು "ಅರ್ಕ" ಎಂದೂ ಹೇಳಲಾಗಿದೆ. "ಅರ್ಕ" ಕೆಲವೆಡೆ ಸೂಕ್ತ ಮತ್ತು ಬೆಳಕು ಎಂದಾಗುತ್ತದೆ; ಕೆಲವೆಡೆ ಅರ್ಕ=ಸೂರ್ಯ. ಆದುದರಿಂದ ಅದು ಪ್ರಬೋಧಕಾರಕ ಶಬ್ದ, ತಿಳಿವನ್ನು ಪಳಚ್ಚನೆ ಹೊಳೆಯಿಸುವ ಶಬ್ದ. ಅದು ಸೂರ್ಯಾಧಿಷ್ಠಾನದಲ್ಲಿರುವ ಸತ್ಯವನ್ನು ಹೇಳುತ್ತದೆ ಮತ್ತು ಆ ಶಬ್ದವು ತನ್ನ ಸತ್ಯದ ಗುಪ್ತಾಸನದಿಂದ ಆವಿರ್ಭವಿಸುವುದೂ ಸೂರ್ಯನು ತನ್ನ ಕಿರಣವ್ರಜಗಳನ್ನು ಹೊರಚಿಡುವುದೂ ಸುಸಂಪೃಕ್ತ, ಸುಸಂಬದ್ಧ. ಆದ್ದರಿಂದ VII.36.1 ರಲ್ಲಿ "ಶಬ್ದವು ತನ್ನ ಸತ್ಯಾಸನದಿಂದ ಎದ್ದು ಬರಲಿ ; ಸೂರ್ಯನು ತನ್ನ

---

೧. ಹೋಲಿಸಿರಿ. X.62.5 ರ ಅಂಗಿರಸರು ಅಗ್ನಿಪುತ್ರರೆಂದೂ ವಿವಿಧಾಕಾರವುಳ್ಳವರೆಂದೂ ಆದರೆ ಎಲ್ಲರೂ ಗಭೀರ ಪಾಂಡಿತ್ಯ ಸಂಪನ್ನರೆಂದೂ - "ಗಂಭೀರವೇಪಸಃ" ಎಂಬ ಮಾತಿನಲ್ಲಿ ಮಾಡಿದ ವರ್ಣನೆಯನ್ನು

೨. ವೇದದಲ್ಲಿ ಬ್ರಹ್ಮಾರ್ಥವಿದೇ ಎಂದು ತೋರುತ್ತದೆ. ಅದೆಂದೂ ಬ್ರಾಹ್ಮಣ ಜಾತಿಯ ಅರ್ಚಕವೃತ್ತಿಯವರಿಗೆ ಅನ್ವಯಿಸದು. ಪಿತೃಗಳಲ್ಲಿ ಯುದ್ಧವೀರರೂ ಹೌದು, ಋಷಿಗಳೂ ಹೌದು ಋಗ್ವೇದದಲ್ಲಿ ಒಂದೇ ಒಂದು ಸಲ ಚಾತುರ್ವಣ್ಯದ ಉಲ್ಲೇಖವಿದೆ. ಅದೆಲ್ಲೆಂದರೆ, ಅತಿಗಂಭೀರಾರ್ಥವುಳ್ಳ ಆದರೆ ಉತ್ತರಕಾಲೀನವಾದ ೧೦ ನೆಯ ಮಂಡಲದಲ್ಲಿ. - ಪುರುಷಸೂಕ್ತದಲ್ಲಿ .

ಗೋರೂಪದ ಕಿರಣಗಳನ್ನು ಬಿಡುಗಡೆ ಬಿಟ್ಟು ಬಿಟ್ಟಿದ್ದಾನೆ - "ಪ್ರಬ್ರಹ್ಮೈತು ಸದನಾದ್ ಋತಸ್ಯ, ವಿ ರಶ್ಮಿಭಿಃ ಸಸೃಜೇ ಸೂರ್ಯೋ ಗಾಃ". ಈ "ಅರ್ಕಸ್ಯ ಸಾತೌ, ಸೂರ್ಯಸ್ಯ ಸಾತೌ, ಸ್ವರ್ ಸಾತೌ" - ಸೂರ್ಯನನ್ನೆಂತೋ ಅಂತೆಯೇ ಅದನ್ನೂ ಗೆದ್ದು ವಶಪಡಿಸಿಕೊಳ್ಳಬೇಕು-ಆ ಗೆಲುವಿಗೆ, ಅರ್ಜನಕ್ಕೆ ದೇವತೆಗಳು ಸಹಾಯ ಮಾಡಬೇಕು. ಸೂರ್ಯನನ್ನೂ ಸ್ವರ್‌ಲೋಕವನ್ನೂ ವಶಪಡಿಸಿಕೊಳ್ಳಲು ಸಹಾ ದೇವತೆಗಳ ನೆರವು ಬೇಕು.

ಆದುದರಿಂದ ಅಂಗಿರಸನು ಅಗ್ನಿಶಕ್ತಿಯಷ್ಟೇ ಅಲ್ಲದೆ, ಅವನು ಬೃಹಸ್ಪತಿಯ ಶಕ್ತಿಯೂ ಹೌದು. VI.73.1 ರಲ್ಲಿರುವಂತೆ ಬೃಹಸ್ಪತಿಯನ್ನು ಅನೇಕ ಸಾರಿ ಆಮಂತ್ರಿಸಲಾಗಿದೆ. "ಯೋ ಅದ್ರಿಭಿತ್ ಪ್ರಥಮಜಾ ಋತಾವಾ ಬೃಹಸ್ಪತಿರ್ ಅಂಗಿರಸೋ ಹವಿಷ್ಮಾನ್= ಗುಡ್ಡವೊಡೆವ ಬೃಹಸ್ಪತಿಯು (ಪಣಿಗಳ ಗವಿ) ಪ್ರಥಮಜಾತನು, ಸತ್ಯವನ್ನುಳ್ಳವನು, ಅಂಗಿರಸ ಮತ್ತು ಹವಿಸ್ಸನ್ನು ಹೊಂದಿದವನು". ಮತ್ತು X.47.6 ರಲ್ಲಿ ಬೃಹಸ್ಪತಿಯ ಅಂಗಿರಸತ್ವದ ಇನ್ನೂ ಹೆಚ್ಚಿನ ವರ್ಣನೆಯಿದೆ. "ಪ್ರಸಪ್ತಗುಂ ಋತಧೀತಿಂ ಸುಮೇಧಾಂ ಬೃಹಸ್ಪತಿಂ ಮತಿರ್ ಅಚ್ಛಾಜಿಗಾತಿ! ಯ ಆಂಗಿರಸೋ ನಮಸಾ ಉಪಸದ್ಯಃ = ಸಪ್ತ ಕಿರಣನೂ ಸತ್ಯ ಚಿಂತಕನೂ ಪೂರ್ಣಮೇಧಾವಂತನೂ (ಮೇಧಾಸ್ವರೂಪನೂ) ಆಂಗಿರಸನೂ ಆದ ಬೃಹಸ್ಪತಿಯತ್ತ ಅಲೋಚನೆಯು ಹೋಗುತ್ತದೆ" - ಏಕೆ? "ನಮನದಿಂದ ಅವನ ಸನ್ನಿಧಾನವನ್ನು ಪಡೆಯಲು". II.23.18 ರಲ್ಲಿಯೂ ದನ-ಜಲಗಳನ್ನು ಬಿಡಿಸಿಕೊಳ್ಳುವ ಸಂದರ್ಭದಲ್ಲಿ ಬೃಹಸ್ಪತಿಯನ್ನು ಅಂಗಿರಸ ಎಂದು ಸಂಬೋಧಿಸಲಾಗಿದೆ. "ನೀನು ದನಗಳ ಹಟ್ಟಿಯನ್ನು ಮೇಲಕ್ಕೆ ತೆರೆದು ಬಿಟ್ಟಾಗ ನಿನ್ನ ಕೀರ್ತಿಗೆ (ಅಂಜಿ) ಗುಡ್ಡವು ಒಡೆದು ಹೋಳಾಯಿತು. ಹೇ ಬೃಹಸ್ಪತಿ, ಇಂದ್ರನ ಸಹಾಯದಿಂದ ನೀನು ಕತ್ತಲು ಅಡಗಿಸಿ ಇಟ್ಟುಕೊಂಡಿದ್ದ ಜಲಪ್ರವಾಹಗಳನ್ನು ಹೊರ ಸೆಳೆದಾಗ ಅದು ನಿನ್ನ ಕೀರ್ತಿಯನ್ನು ಹೆಚ್ಚಿಸಿತು." ವೃತ್ರ ಕಥೆಯ (ಗಾಥೆಯ) ಜಲವಿಮೋಚನೆಯ ವಿಷಯವು ಅಂಗಿರಸ ಋಷಿ ಮತ್ತು ಪಣಿಗಳ ಕಥೆಯ ವಿಷಯದೊಡನೆ ಎಷ್ಟು ನಿಕಟವಾಗಿ ಹೊಂದುತ್ತದೆ ಎಂಬುದನ್ನು ನಾವು ಆನುಷಂಗಿಕವಾಗಿ ನೋಡಿದರೆ ವೃತ್ರ ಮತ್ತು ಪಣಿಗಳು ಎಂಬ ಇಬ್ಬರೂ ತಮಃಶಕ್ತಿಗಳೆಂಬುದು ಸ್ಪಷ್ಟವಾಗುವುದು. ದನಗಳು ದಿವ್ಯಸತ್ಯದ ಬೆಳಕು-ದಿವ್ಯಸತ್ಯವು ನಿಜವಾಗಿ ಉದ್ಬೋಧಕವಾದ ಸತ್ಯವು "ಸತ್ಯಂ ತತ್.....ಸೂರ್ಯಂ" ; ಸುತ್ತಲೂ ಮುತ್ತಿರುವ ವೃತ್ರನ ಕತ್ತಲಿನಿಂದ ಮುಕ್ತಗೊಳಿಸಲ್ಪಟ್ಟ ಜಲಗಳು ದಿವ್ಯಸತ್ಯದ ನದಿಗಳೆಂದು ಕೆಲವೆಡೆ ಕಂಡುಬಂದಿದೆ "ಋತಸ್ಯಧಾರಾಃ" ; "ಸ್ವರ್ವತೀರ್ ಆಪಃ" = ಮಿಂಚುವ ಸ್ವರ್ ಲೋಕದ ಸೌರ ಜಲಗಳೆಂದೂ ಕೆಲವೆಡೆ ಅರ್ಥವಾಗುತ್ತದೆ.

ಈ ಮೇಲಿನ ವಿವರಗಳಿಂದ "ಅಂಗಿರಸ" ಮೊಟ್ಟಮೊದಲನೆಯದಾಗಿ, ದ್ರಷ್ಟೃಸಂಕಲ್ಪರೂಪದ ಅಗ್ನಿಯ ಶಕ್ತಿ ಎಂಬುದನ್ನು ನಾವು ನೋಡುತ್ತೇವೆ. ಜ್ಞಾನರೂಪದ ಬೆಳಕಿನ ಮೂಲಕ ಅಂಗಿರಸನು ಕೆಲಸ ಮಾಡುತ್ತಾನೆ. ಅವನು ಅಗ್ನಿಯ ಶಕ್ತಿಜ್ವಾಲೆ; ಆ ಜ್ವಾಲೆಯು ಭೂಮಿಯಲ್ಲವತರಿಸಿ ಯಜ್ಞ ಪುರೋಹಿತನಾಗಿ ಕೆಲಸ ಮಾಡುವ ಒಂದು ಮಹಾ ಉನ್ನೋದನ ಪ್ರಭಾವವು ಮತ್ತು ಅವನು ಪ್ರಯಾಣದ ನಾಯಕ, ವಾಮದೇವೋಕ್ತಿಯಂತೆ (IV.1.1) ಇಲ್ಲಿ ಮರ್ತ್ಯರ ನಡುವೆ ಅಮರ್ತ್ಯನಾಗಿ ನೆಲೆಸಲು ಬಂದ ದೇವತಾ ಸಾಮರ್ಥ್ಯ, ಆ ಮಹಾಕಾರ್ಯವನ್ನು ಮಾಡುವ ("ಅರತಿ") ಶಕ್ತಿ. ಎರಡನೆಯದಾಗಿ, ಅವನೇ ಒಂದು ಶಕ್ತಿ ಅಥವಾ ಕೊನೆಯ ಪಕ್ಷ ಬೃಹಸ್ಪತಿಯ ಶಕ್ತಿ. ಆ ಶಕ್ತಿಯು ಪರಮಸತ್ಯ ಚಿಂತಕ, ಸಪ್ತಾಂಶು, ಬೆಳಕಿನ ಆ ಸಪ್ತಾಂಶುಗಳು ಪರಮ ಸತ್ಯದ

ಚಿಂತನವನ್ನು ಧಾರಣೆ ಮಾಡುತ್ತವೆ. ("ಋತಧೀತಿಂ") ; ಅವನ ಸಪ್ತ ಮುಖಗಳು ಸತ್ಯವಾಚಕ ಶಬ್ದವನ್ನು (ಮಂತ್ರವನ್ನು) ಪುನರುಚ್ಚಾರ ಮಾಡುತ್ತವೆ. ಆ ಸತ್ಯ ಅವನ ಉಪಾಸ್ಯದೇವತೆ (IV.50.4.5) "ಅತ್ಯುನ್ನತ ಸ್ವರ್ಗದಲ್ಲಿರುವ ಆ ಹೆಚ್ಚಿನ ಬೆಳಕಿನಿಂದ ಬೃಹಸ್ಪತಿಯು ಮೊಟ್ಟಮೊದಲು ಹುಟ್ಟಿ ಬಹುರೂಪಗಳನ್ನು ತಾಳಿ, ತನ್ನ ಸಪ್ತಮುಖಗಳಿಂದ, ಸಪ್ತ ಕಿರಣಗಳಿಂದ ("ಸಪ್ತಾಸ್ಯಃ ಸಪ್ತರಶ್ಮಿಃ), ತನ್ನ ಗರ್ಜನೆಯ ಮೂಲಕ ಅಂಧಂತಮಸ್ಸನ್ನು ಓಡಿಸಿಬಿಟ್ಟನು. ಅವನು ತನ್ನ ಋಕ್-ಸ್ತುಭ್ ಎಂಬ ಆತಿಥೇಯ ಗಣಗಳಿಂದ, ಸೈನಿಕ ಸಮೂಹದಿಂದ, ಅನುಯಾಯಿಗಳ ಬಣಗಳಿಂದ (ಋಕ್-ಸ್ತುಭ್=ಪ್ರಬೋಧಕ ಸೂಕ್ತಗಳಿಂದ ಮತ್ತು ದೇವತಾ ಸಮರ್ಥನ ಸೂಕ್ತಗಳಿಂದ) ವಲಚ್ಛೇದ ಮಾಡಿದನು." "ಸುಷ್ಟುಭಾ ಋಕ್ವತಾ ಗಣೇನ" ಎಂದರೆ ಆ ಮಹಾ ವಿಜಯದಲ್ಲಿ ತಮ್ಮ ನಿಜಮಂತ್ರದಿಂದ ಬೃಹಸ್ಪತಿಗೆ ಸಹಾಯ ಮಾಡಿದ ಅಂಗಿರಸ ಋಷಿಗಳ ಸೈನ್ಯ ಯಾ ಆತಿಥೇಯ ಸಮೂಹ ಎಂಬುದರಲ್ಲಿ ಸಂದೇಹವೇ ಇಲ್ಲ.

ಇಂದ್ರನೂ ಒಬ್ಬ ಅಂಗಿರಸನಾದನೆಂದು ಯಾ ಅಂಗಿರಸ ಗುಣಗಳನ್ನು ಪಡೆದವನಾದನೆಂದು ವರ್ಣಿಸಲಾಗಿದೆ ; "ಅವನು ಅಂಗಿರಸರಲ್ಲಿ ಅತಿ ಹೆಚ್ಚಿನ ಅಂಗಿರಸನಾಗಲಿ ; ಎತ್ತುಗಳಲ್ಲಿ ಬಲಿಷ್ಠ ಎತ್ತಾಗಲಿ, (ಎತ್ತು ಪುರುಷನ ಗಂಡುಶಕ್ತಿ, ಅವನು "ನೃ"-ಕಿರಣ ಹಾಗೂ ಜಲಗಳ ಸಂಬಂಧದಲ್ಲಿ - ಜಲಗಳೇ ದನಗಳು - "ಗಾವಃ, ಧೇನವಃ") ; ಸ್ನೇಹಿತರಲ್ಲಿ ಮಹಾಸ್ನೇಹಿತನಾಗಲಿ ; "ಋಗ್ಮಿಭಿರ್ ಋಗ್ಮೀ"-ಋಗ್ಯುಕ್ತರಲ್ಲಿ ದೊಡ್ಡ ಋಗ್ಯುಕ್ತನಾಗಲಿ ; ಪ್ರಯಾಣಿಕರಲ್ಲಿ ("ಗಾತುಭಿಃ") ಅವನು ಮಹಾಪ್ರಯಾಣಿಕನಾಗಲಿ ; ಅಪಾರ ವಿಸ್ತಾರ ಮತ್ತು ಅಸೀಮ ಸತ್ಯಗಳತ್ತ ಕರೆದೊಯ್ಯುವ ದಾರಿಗಳಲ್ಲಿ ಹೋಗುವ ಜೀವಾತ್ಮಗಳಲ್ಲಿ ಅತ್ಯುನ್ನತ ಜೀವಾತ್ಮನಾಗಲಿ. ಇಂದ್ರನು ನಮ್ಮ ಉತ್ಕರ್ಷಕ್ಕಾಗಿ ಮರುತ್ತುಗಳೊಡಗೂಡಲಿ ("ಮರುತ್ವಾನ್"). ಇಲ್ಲಿ ಕೊಟ್ಟ (I.100.4) ವಿಶೇಷಣಗಳೆಲ್ಲಾ ಅಂಗಿರಸ ಋಷಿಗಳಿಗೆ ತಕ್ಕಂಥವು ; ಮತ್ತು ಇಂದ್ರನು ಅಂಗಿರಸ ಗುಣಗಳನ್ನು ಯಾ ಸಂಬಂಧಗಳನ್ನು ತನ್ನಲ್ಲಿ ಆವಿಷ್ಟಗೊಳಿಸಿಕೊಂಡು ಅಂಗಿರಸತ್ವವನ್ನು ಪಡೆಯುವನೆಂದು ನಂಬಲಾಗಿದೆ. ಆದ್ದರಿಂದ III.31.7 ರಲ್ಲಿ "ಜ್ಞಾನದಿಂದ ಅತ್ಯಂತ ಪ್ರಬುದ್ಧನಾಗಿ ("ವಿಪ್ರತಮಃ=ವೇಪಿಷ್ಠೋ ಅಂಗಿರಸಾಂ ವಿಪ್ರಃ-VI.11.3), ಸ್ನೇಹಿತನಾಗಿ ("ಸಖೀಯನ್"=ಮಹಾಯುದ್ಧದಲ್ಲಿ ಇಂದ್ರನ ಸ್ನೇಹಿತರು, ಸಹಭಟರು) ಇಂದ್ರನು ಹೋದನು. ("ಅಗಚ್ಛತ್" ದಾರಿಯ ಮೇಲೆ ; ಹೋಲಿಸಿರಿ "ಗಾತುಭಿಃ"- ಸರಮೆಯಿಂದ ಕಂಡುಹಿಡಿಯಲ್ಪಟ್ಟಂಥ) ಒಳ್ಳೆಲಸ ಮಾಡಿದವನಿಗಾಗಿ ಬೆಟ್ಟವು (ಗುಡ್ಡವು) ಸ್ವಗರ್ಭದಲ್ಲಿರುವ ತಿರುಳ್ಳಳನ್ನು ವೇಗವಾಗಿ ಹೊರಹಾಕಿತು ; ಪುರುಷತ್ವದಲ್ಲಿ ಬಲಿಷ್ಠನಾಗಿದ್ದ ಇಂದ್ರನೆನ್ನುವಲ್ಲಿ ಜವ್ವನಿಗರೊಡನೆ ಎಂದು ಹೇಳಿರುವುದರಿಂದ - "ಮರ್ಯೋಯುವಭಿಃ"- ಅವನು ನಿರ್ಜರನೂ ಅಕ್ಷಯನೂ ಆಗಿದ್ದನೆಂದು ಸೂಚಿತನಾಗುತ್ತಾನೆ. ಆತನು ಸಂಪತ್ತುಗಳ ಪೂರ್ಣತೆಯನ್ನು ಬಯಸಿ ಪಡೆದನು. ("ಸಸಾನ ಮಖಸ್ಯನ್") : ಆದ್ದರಿಂದ ಒಮ್ಮೆಲೇ ಸೂಕ್ತಪಠನ ಮಾಡಿ ("ಅರ್ಚನ್") ಅವನು ಅಂಗಿರಸನಾದನು. ನಾವು ನೆನಪಿಟ್ಟುಕೊಳ್ಳಬೇಕಾದುದೇನೆಂದರೆ - ಅಂಗಿರಸನ ಎಲ್ಲ ಗುಣಗಳನ್ನೂ ಅಳವಡಿಸಿಕೊಂಡ ಈ ಇಂದ್ರನು ಸ್ವರ್‌ಲೋಕದ ಒಡೆಯ - ಸ್ವರ್‌ಲೋಕವು ಸೂರ್ಯನ ಅಥವಾ ಪರಮ ಸತ್ಯದ ವಿಶಾಲವಾದ ಜಗತ್ತು. ಅವನು ತನ್ನ ಹೊಳೆವ ಎರಡು ಹಯಗಳನ್ನೇರಿ ("ಹರೀ") - ಅವು ಒಂದು ಉಪಚ್ಛೇದದ ಪ್ರಕಾರ "ಸೂರ್ಯಸ್ಯಕೇತೂ"= ಸೂರ್ಯನ ಎರಡು ಜ್ಞಾನಗತವಾದ ಪ್ರತ್ಯಕ್ಷ ಯಾ ದರ್ಶನ ಶಕ್ತಿಗಳು - ಕೆಳಗಿಳಿದು ತಮಃ ಪುತ್ರರೊಡನೆ

ಯುದ್ಧ ಮಾಡಿ ನಮ್ಮ ಮಹಾಭಿಯಾನಕ್ಕೆ ನೆರವೀಯುತ್ತಾನೆ. ವೇದದ ಯೌಗಿಕ ರಹಸ್ಯಾರ್ಥದ ಬಗೆಗೆ ನಾವು ನಿಗಮನಿಸಿದ್ದೆಲ್ಲವೂ ಸರಿಯಾದದ್ದೇ ಆದರೆ, ಇಂದ್ರನೊಂದು ಶಕ್ತಿ[೧] ; ಅವನು ಮಾನವನಲ್ಲಿ ಜನಿಸಿ ಮಂತ್ರದಿಂದಲೂ ಸೋಮದಿಂದಲೂ ತನ್ನ ಪೂರ್ಣ ದಿವ್ಯತೆಯನ್ನು ಪುಷ್ಟ-ಪುಷ್ಟತರನಾಗುತ್ತಾ ಮುಟ್ಟುತ್ತಾನೆ. ಸತತವಾದ ಈ ಬೆಳವಣಿಗೆಯು ಗೆದ್ದ ಬೆಳಕಿನ ಬೆಳವಣಿಗೆಯಿಂದ ಸಂಭವಿಸುತ್ತದೆ. ಆಮೇಲೆ ಇಂದ್ರನು ಸೂರ್ಯಾಕ್ಷಿಯಿಂದ ಕಂಡ ಜ್ಯೋತಿರ್ಮಯ ವ್ರಜಗಳ ಒಡೆಯನಾಗಿ ತನ್ನ ಪೂರ್ಣತೆಯಿಂದ ತೋರಿಸಿಕೊಳ್ಳುತ್ತಾನೆ-ಆಗ ಆತನು ದಿವ್ಯಮಾನಸಾಧಿಪತಿ, ಜ್ಞಾನದ ಸರ್ವ ಪ್ರಬೋಧಗಳ ಒಡೆಯ.

ಅಂಗಿರಸನಾಗುವುದರಲ್ಲಿ ಇಂದ್ರನು "ಮರುತ್ವಾನ್" ಮರುತ್ತುಗಳ ಒಡೆಯನಾಗಿ ಅಥವಾ ಅವರ ನೇತಾರನಾಗುವುದಲ್ಲದೆ, ಈ ಮರುತ್ತುಗಳು ತೇಜಃಪುಂಜ ಮತ್ತು ಹಿಂಸೋನ್ಮುಖ ಮೇಘವಿದ್ಯುದ್ವಹ ವಾಯುಗಳಾಗಿ ಸೇರಿ ವಾಯುದೇವತೆ ಎನ್ನಿಸಿ ಜೀವನದ ಒಡೆಯನಾದ ಪ್ರಾಣ ಪ್ರಜ್ಞೆಯ ಸ್ಥಾನಪಡೆದು ಅಗ್ನಿ ಪ್ರಣೋದರಾಗಿ ಅರ್ಥಾತ್ ದ್ರಷ್ಟ್ರ ಸಂಕಲ್ಪರಾಗಿ ಜ್ಞಾನದ ಮೂಲಕ ಕೆಲಸ ಮಾಡುವ ದ್ರಷ್ಟಾರರೇ ಆಗುತ್ತಾರೆ ("ಕವಯೋ ವಿದ್ಮನಾ-ಅಪಸಃ); ಇಷ್ಟೇ ಅಲ್ಲ- ಅವರು ಯುದ್ಧಶಕ್ತಿಗಳೂ ಆಗಿ, ತಮ್ಮ ಸ್ವರ್ಗೀಯ ಪ್ರಾಣ ಮತ್ತು ವಿದ್ಯುತ್ತುಗಳ ಬಲದಿಂದ ಬೇರೂರಿನಿಂತ ದುಷ್ಪದ್ಧತಿಗಳೆಲ್ಲವನ್ನೂ ಬುಡಮೇಲು ಮಾಡಿ "ಕೃತ್ರಿಮಾಣಿ ರೋಧಾಂಸಿ'=ಕೃತಕ ಅಡೆತಡೆಗಳೆಲ್ಲವನ್ನೂ ಕಿತ್ತು ಹಾಕುತ್ತಾರೆ. ಏಕೆಂದರೆ, ತಮಃಪುತ್ರರು ಗಟ್ಟಿಯಾಗಿ ಅವುಗಳಲ್ಲಿ ತಳವೂರಿದ್ದಾರೆ ; ಮತ್ತು ವೃತ್ರನನ್ನೂ ದಸ್ಯುಗಳನ್ನೂ ಗೆಲ್ಲುವುದರಲ್ಲಿ ಇಂದ್ರನಿಗೆ ನೆರವೀಯುತ್ತಾರೆ. ವೇದದ ಯೋಗಾಂತರರ್ಥದಲ್ಲಿ, ಮರುತ್ತುಗಳು, ಮರ್ತಪ್ರಜ್ಞೆಯು ಪರಮಸತ್ಯ ಮತ್ತು ಪರಮಾನಂದಗಳ ಅಮರ ಸ್ವರೂಪವಾಗಿ ಬೆಳೆಯಲು ಯಾ ವಿಸ್ತಾರ ಹೊಂದಲು ಮಾಡುವ ಪ್ರಯತ್ನದಲ್ಲಿಯ ವಿಚಾರ ಕಾರ್ಯವನ್ನು ತಮ್ಮ ನಾಡೀಯ ಯಾ ಜೈವಿಕ ಶಕ್ತಿಗಳ ಮೂಲಕ ಬೆಂಬಲಿಸುವ ಪ್ರಾಣಶಕ್ತಿಗಳೆಂದು ತೋರುತ್ತದೆ. ಹೇಗೇ ಆಗಲಿ, VI.49.11 ರಲ್ಲಿ ಅಂಗಿರಸರ ಗುಣಗಳಿಂದ ಅವರು ಕೆಲಸ ಮಾಡುವರೆಂದು ವರ್ಣಿಸಲಾಗಿದೆ ("ಅಂಗಿರಸವತ್"): "ಓ ಜವ್ವನಿಗರಾದ ಮರುತ್ತುಗಳೇ, ದ್ರಷ್ಟಾರರೇ, ಯಜ್ಞಶಕ್ತಿಗಳೇ ಮಂತ್ರೋಚ್ಚಾರ ಮಾಡುತ್ತಾ ವೇದಿಕೆಗೆ (ಎತ್ತರದ ಸ್ಥಳಕ್ಕೆ) ಬನ್ನಿರಿ (ಅಥವಾ ಅಪೇಕ್ಷಣೀಯ ಭೂಸ್ತರಕ್ಕೆ ಯಾ ಗುಡ್ಡಕ್ಕೆ- "ಅಧಿಸಾನು ಪೃಶ್ನೇಃ" VI. 6.4. ಬನ್ನಿರಿ : "ವರಸ್ಯಾಂ" ಎಂಬುದರ ಅರ್ಥ ಇದೆ ಆಗಿದ್ದೀತು) ; ವರ್ಧಮಾನ ಶಕ್ತಿಯುಳ್ಳವರಾಗಿ, ಸರಿಯಾಗಿ ಚಲಿಸುತ್ತ (ದಾರಿಯ ಮೇಲೆ "ಗಾತು") ಅಂಗಿರಸನಂತೆ[೨] ಉಷೆಯ ವೈವಿಧ್ಯಮಯ ಬೆಳಕನ್ನು ಕಾಣದಿರುವ ವಸ್ತುವಿಗೂ ಸಂತೋಷವನ್ನು ಕೊಡಿರಿ - ಅಚಿತ್ರ=ನಮ್ಮ ಸಾಮಾನ್ಯರಾತ್ರಿ." ಇಲ್ಲಿ ಅಂಗಿರಸ ಕಾರ್ಯದ ಲಕ್ಷಣಗಳನ್ನೇ ಕಾಣುವೆವು : ಅಗ್ನಿಯ ನಿತ್ಯ ಯೌವನ ಮತ್ತು ನಿತ್ಯವಾದ

---

೧. ಆದರೆ ಬಹುಶಃ "ಹೊಳೆಯುವ" ಎಂಬರ್ಥವೂ ಹೊಂದೀತು. ಹೋಲಿಸಿರಿ : "ಇಂದು"= ಚಂದ್ರ ; "ಇನ" =ವೈಭವಪೂರ್ಣ, ಸೂರ್ಯ ; "ಇಂಧ್"-ಬೆಂಕಿ ಹೊತ್ತಿಸು.

೨. "ಅಂಗಿರಸ" ಎಂದರಿಲ್ಲಿ "ಚಲತ್ತಿರಣ" (ಅಂಗ್=ಚಲಿಸು) ಎಂಬ ಅರ್ಥವನ್ನು ಸಾಯಣನು ಮುಂದಿಡುತ್ತಾನೆ ಯಾ ಅಂಗಿರಸ ಋಷಿಗಳೇ ಎನ್ನುತ್ತಾನೆ. ಅಪಾಯವನ್ನು ಚಿಂತಿಸದೆ ಈ ಅರ್ಥವನ್ನು ಹೇಳುವ ಆ ಮಹಾವಿದ್ವಾಂಸನು ಇನ್ನೂ ಹೆಚ್ಚು ಧೈರ್ಯದಿಂದ ಈ ಅರ್ಥವನ್ನು ಅದರ ತಾರ್ಕಿಕ ಅಂತ್ಯದಶೆಯವರೆಗೆ ಒಯ್ದು ನಿಗಮಿಸಿದ್ದರೆ ಇಂದಿನ ಸಿದ್ಧಾಂತದಲ್ಲಿ ಬರುವ ಸಾರಭೂತ ಅಂಶಗಳನ್ನು ನಿರೀಕ್ಷಿಸಬಹುದಾಗಿತ್ತು.

ಉನ್ನೋದನ ಶಕ್ತಿ ("ಅಗ್ನೇ ಯವಿಷ್ಠ"), ವಶ್ಯಮಂತ್ರತ್ವ, ಋಷಿತ್ವ, ಯಜ್ಞಕರ್ಮ ಮಾಡುವುದು, ನಾವು ಮುಂದೆ ನೋಡುವಂತೆ, ಪರಮಸತ್ಯದ ಕಡೆಗೆ ಕರೆದೊಯ್ಯುವ ಮಹಾಮಾರ್ಗದ ಮೇಲೆ ಸರಿಯಾಗಿ ಚಲಿಸುವುದು, ಅರ್ಥಾತ್ ಸೀಮಾತೀತ ವಿಶಾಲತೆಯುಳ್ಳ, ಲಸತ್ ಪರಮಾನಂದದೆಡೆಗೆ ಸರಿಯಾಗಿ ದಾರಿ ಹಿಡಿದು ಹೋಗುವುದು - ಇವೇ ಆ ಲಕ್ಷಣಗಳು. ಮರುತ್ತರನ್ನು ಹೀಗೂ ಬಣ್ಣಿಸಲಾಗಿದೆ X.78.5) : ಮರುತ್ತುಗಳು ಸಾಮಸೂಕ್ತಗಳಿಂದೊಡಗೂಡಿದ ಅಂಗಿರಸರಂತೆ ಸರ್ವರೂಪಧಾರಣ ಮಾಡಬಲ್ಲವರು - "ವಿಶ್ವರೂಪಾ ಅಂಗಿರಸೋ ನ ಸಾಮಭಿಃ".

ಉಷೆಯ ಬರವಿನಿಂದ ಈಯೆಲ್ಲಾ ಕಾರ್ಯ, ಆಂದೋಲನ, ಚಟುವಟಿಕೆ ಸಾಧ್ಯವಾದವು. ಉಷೆಯನ್ನೂ "ಅಂಗಿರಸ್ತಮಾ" ಮತ್ತು "ಇಂದ್ರತಮಾ" ಎಂದು ವರ್ಣಿಸಲಾಗಿದೆ. ಅಗ್ನಿಯ ಅಂಗಿರಸ ಶಕ್ತಿಯು ಇಂದ್ರನ ಮಿಂಚಿನಲ್ಲೂ ಉಷಾಕಿರಣಗಳಲ್ಲೂ ತಾನೇ ಪ್ರಕಟವಾಗುತ್ತದೆ. ಈ ಅಂಗಿರಸ ಪ್ರಣೋದನೆಗೆ ಎರಡು ಉಪಭೇದಗಳನ್ನು ಉದಾಹರಿಸಬಹುದು. ಮೊದಲನೆಯದು VII.79.2,3. "ಸ್ವರ್ಗದ ತುದಿಗಳಲ್ಲಿ ಉಷಸ್ಸುಗಳು ತಮ್ಮ ಕಿರಣಗಳನ್ನು ಹೊಳೆಯಿಸುವುವು ; ಆ ದೇವತೆಗಳು ಕಾರ್ಯೋನ್ಮುಖರಾದ ಮಾನವರಂತೆ ದುಡಿಯುತ್ತಾರೆ. ಕಿರಣಗಳಿಂದ ಕತ್ತಲನ್ನು ಓಡಿಸುತ್ತಾರೆ. ಸೂರ್ಯನು ತನ್ನೆರಡು ಕೈಗಳನ್ನು ಚಾಚುವಂತೆ ಅವರು ಬೆಳಕನ್ನು ಬಿತ್ತರಿಸುತ್ತಾರೆ. ಉಷೆಯು ಇಂದ್ರಶಕ್ತಿ ಪರಿಪೂರ್ಣೆಯಾಗುತ್ತಾಳೆ-ಇಂದ್ರಬಲವತಿಯಾಗಿ ಹುಟ್ಟುತ್ತಾಳೆ ("ಇಂದ್ರತಮಾ") ಅವಳು ಐಶ್ವರ್ಯಸಂಪನ್ನೆ ; ನಮ್ಮ ಸುಖ-ಸಂತೋಷಗಳಿಗಾಗಿ-ಅವಳು ಜ್ಞಾನಸ್ಫೂರ್ತಿಗಳಿಗೆ ಜನ್ಮವೀಯುತ್ತಾಳೆ (ಯಾ ನಮ್ಮ ಒಳಿತು-ಆನಂದಗಳಿಗಾಗಿ ಜ್ಞಾನಸ್ಫೂರ್ತಿಯನ್ನು ನೀಡುತ್ತಾಳೆ). ಆಕೆ ಸ್ವರ್ಗಸುತೆಯಾದ ದೇವತೆ ಮತ್ತು "ಅಂಗಿರಸ್ತಮೆ"=ಅಂಗಿರಸಬಲ ಸಂಪನ್ನೆ ; ಸತ್ಕಾರ್ಯಮಾಡುವವರ ಬಳಿಗೆ ಹೋಗೆಂದು ಅವಳು ತನ್ನ ಸಂಪತ್ತುಗಳಿಗೆ ಆಜ್ಞೆ ಕೊಡುತ್ತಾಳೆ. "ಉಷೆ ಸಂಪನ್ನೆಯಾಗಿರುವ ಐಶ್ವರ್ಯವು ಬೆಳಕಿನದಲ್ಲದೆ ಇನ್ನಾವುದರದೂ ಆಗದು, ಪರಮ ಸತ್ಯದ ಶಕ್ತಿಯದಲ್ಲದೆ ಇನ್ನಾವುದರದ್ದೂ ಆಗದು. ಅವಳ ಇಂದ್ರತಮತ್ವವಿರುವುದು ದಿವ್ಯವಾದ ಜ್ಯೋತಿರ್ಮಯ (ಪ್ರಬುದ್ಧ) ಮಾನಸದಲ್ಲಿ. ಅವಳು ಮನಃಸ್ಫೂರ್ತಿದಾತ್ರಿ-("ಶ್ರವಾಂಸಿ") ಆ ಸ್ಫೂರ್ತಿಯು ನಮ್ಮನ್ನು ಆನಂದದೆಡೆಗೆ ಒಯ್ಯುವುದು ಮತ್ತು ತನ್ನ ಪ್ರಜ್ವಲ, ವಿಸ್ತೃತ್ವರ ಅಂಗಿರಸಶಕ್ತಿಯಿಂದ ಅವಳು, "ಇತ್ಥಾನಕ್ಷಂತೋ ಅಂಗಿರಸ್ವತ್ "VI.49.11) ಮಹಾಕಾರ್ಯವನ್ನು ಚೆನ್ನಾಗಿ ಮಾಡಿ ಸರಿಯಾದ ಮಾರ್ಗದಲ್ಲಿ ಹೋಗುವವರಿಗೆ ತನ್ನ ಸಂಪತ್ತನ್ನು ಕೊಡುತ್ತಾಳೆ ಮತ್ತು ಭಂಡಾರವನ್ನು ವ್ಯವಸ್ಥೆಗೊಳಿಸುತ್ತಾಳೆ.

ಎರಡನೆಯ ಉಪಭೇದವೆಂದರೆ VII. 75 "ಸತ್ಯದ ಮೂಲಕ ಉಷೆಯು (ಅಂಧಕಾರದ ಮುಸುಕು ಸೆರಗನ್ನು) ತೆರೆದಿದ್ದಾಳೆ ; ಆ ಮೂಲಕ ಅವಳು ("ಮಹಿಮಾನಂ") ಪರಮಸತ್ಯದ ವಿಸ್ತಾರವನ್ನು, ಹರಹನ್ನು, ಆವಿರ್ಭವಿಸುವಂತೆ ಮಾಡಿದ್ದಾಳೆ. ಅವಳು ("ಧ್ರುಹಸ್ ತಮಃ") ತಮಸ್ಸಿನ ಹಾನಿಕರ ಬುರುಕಿಯನ್ನು ತೆಗೆದೆಸೆಯುತ್ತಾಳೆ ; ಅಪ್ರಿಯವಾದುದೆಲ್ಲವನ್ನೂ ಹಾಗೇ ಕಿತ್ತೆಸೆದಿದ್ದಾಳೆ-ಅಂಗಿರಸ್ತಮೆಯಾಗಿ ಆಕೆ (ಮಹಾಪ್ರಯಾಣದ) ಮಾರ್ಗಗಳನ್ನು ಪ್ರಕಟಿಸುತ್ತಾಳೆ. ಎಲೈ ಉಷೆಯೇ, ಇಂದು ಮಹೇ ಸುವಿತಾಯ=ವ್ಯಾಪಕ ಆನಂದದತ್ತ ಹೋಗಲೆಂದು ನಮಗಾಗಿ ಜಾಗರಿತೆಯಾಗು, (ನಿನ್ನ ಸಂಪತ್ತುಗಳನ್ನು) ವಿಸ್ತೃತಭೋಗ ಸ್ಥಿತಿಗಾಗಿ ಹಸರಿಸು ಹಬ್ಬಿಸು. ವಿವಿಧ ಪ್ರಕಾಶಮಾನತೆಯುಳ್ಳ ("ಚಿತ್ರಂ") ಒಂದು ಸಂಪತ್ತನ್ನು ಮರ್ತ್ಯರಾದ ನಮ್ಮಲ್ಲಿ ನೆಲೆನಿಲ್ಲಿಸು. ಆ ಸಂಪತ್ತು ("ಶ್ರವಸ್ಯಂ") ಸ್ಫೂರ್ತಜ್ಞಾನಭರಿತವಾಗಿರಲಿ, ಅಮರ್ತ್ಯವಾದುದಾಗಿರಲಿ. ಓ ಮಾನವ್ಯೆ, ಅತಿಮಾನವ್ಯೆ (ದಿವ್ಯೆ)! ಇವೆಲ್ಲಾ ದೃಶ್ಯೆಯಾದ ಉಷೆಯ ಹೊಳಪುಗಳು ; ಅಮರ್ತ್ಯವಾದ ಇವು ವಿವಿಧವಾದ ("ಚಿತ್ರಾಃ")

ಶುಭ್ರತೆಯಿಂದ ಬಂದಂಥವುಗಳು. "ಜನಯಂತೋ ದೈವ್ಯಾನಿ ವ್ರತಾನಿ, ಆ ಪೃಣಂತೋ ಅಂತರಿಕ್ಷಾ ವ್ಯಸ್ಥುಃ" (ಋಕ್ಕು ೧-೩) = ದಿವ್ಯಕರ್ಮಗಳನ್ನು ಅಸ್ತಿತ್ವಕ್ಕೆ ತಂದು ಉಷಸ್ಸುಗಳು ಎತ್ತೆತ್ತಲೂ ಹರಡಿಕೊಳ್ಳುತ್ತಾರೆ - ಭೂಮ್ಯಾಕಾಶಗಳ ನಡುವಿನ ಸ್ಥಳವಾದ ಅಂತರಿಕ್ಷವನ್ನು ತುಂಬಿಕೊಳ್ಳುತ್ತಾರೆ. ಪುನಃ ಅಂಗಿರಸಶಕ್ತಿಯ ಸಂಯೋಗವು ಪ್ರಯಾಣಕ್ಕಿದೆಯೆನ್ನಲಾಗಿದೆ ; ಪ್ರಯಾಣದ ಅಂಗಗಳು : ಅದರ ದಾರಿಗಳ ಪ್ರಕಟನೆ, ತಮೋವಿನಾಶ ಮಾಡಿದ ಮೇಲೆ; ಮತ್ತು ಉಷೆಯ ವಿಕಿರಣಗಳ ಆನಯನ ; ಪಣಿಗಳು "ಧ್ರುಹಃ" = ಹಾನಿಗಳನ್ನು ಪ್ರತಿನಿಧಿಸುತ್ತಾರೆ (=ಹಾನಿಗಳು ಅಥವಾ ಹಾನಿಕಾರರು) - ಆ ಹಾನಿಗಳನ್ನು ಮಾಡುವವು ದುಷ್ಟ ಶಕ್ತಿಗಳು - ಕತ್ತಲೆಯೇ ಅವುಗಳ ಗವಿ. ಪ್ರಯಾಣವು ಎಲ್ಲಿಗೆ? ನಮ್ಮ ವರ್ಧಮಾನ ಜ್ಯೋತಿಃಸಂಪತ್ತು ಮತ್ತು ಶಕ್ತಿ ಹಾಗೂ ಜ್ಞಾನಗಳ ಮೂಲಕ ದಿವ್ಯಸುಖ ಮತ್ತು ಅಮರ್ತ್ಯ ಆನಂದಗಳತ್ತ; ನಮ್ಮನ್ನು ಉಷೆಯು ಅಂಗಿರಸಬಲದಿಂದ ಅಮರತ್ವಕ್ಕೆ ಒಯ್ಯುವುದೇ ನಮ್ಮ ಪ್ರಯಾಣ ಎಂಬುದು ತಾತ್ಪರ್ಯ. ಉಷೆಯ ಅಮರ ಹೊಳಪುಗಳು ಮಾನವನಲ್ಲಿ ಸ್ವರ್ಗೀಯ ಕ್ರಿಯೆಗಳತ್ತ (ಫಲವನ್ನು ಹುಟ್ಟಿಸಿ) ಹೋಗಲು ಬೇಕಾದ ಕೆಲಸಗಳನ್ನು ಮಾಡಿಸಿ, ಆ ಮೂಲಕ ಭೂಮ್ಯಾಕಾಶಗಳ ನಡುವಿನ ಸ್ಥಳವನ್ನು ತುಂಬಿಕೊಳ್ಳುವಳು - ಅರ್ಥಾಥ್ - ಅಂಗಿರಸ ಶಕ್ತಿಗಳೆನ್ನಬಹುದಾದ, ನಮ್ಮ ಭೌತಿಕ ಮತ್ತು ಶುದ್ಧ ಜೈವಿಕ ಸತ್ತೆಗಳನ್ನು ಜೋಡಿಸುವ ವಾಯುವಿನಿಂದ ನಿಯಂತ್ರಿಸಲ್ಪಟ್ಟ ಪ್ರಜ್ಞಾಸ್ತರಗಳ ಕರ್ತವ್ಯ ನಿರ್ವಹಣಕ್ಕೆ ಕಾರಣಳಾಗುವಳು. ಏಕೆಂದರೆ ಆ ಅಂಗಿರಸ ಸ್ತರಗಳು ("ಅಮರ್ಧಂತೋ ದೈವ್ಯಾ ವ್ರತಾನಿ") ದಿವ್ಯ ಕಾರ್ಯಗಳನ್ನು ಹಾನಿಗೆಡೆಗೊಡದೆ ಇಟ್ಟುಕೊಂಡು ಸತ್ಯವನ್ನು ಗೆದ್ದು ತಮ್ಮಲ್ಲಿ ಸುರಕ್ಷಿತವಾಗಿ ಇಟ್ಟುಕೊಂಡಿರುತ್ತವೆ. ಅಂಗಿರಸರ ಕರ್ತವ್ಯವೇ ಇದು - "ದೇವಿ ಮರ್ತೇಷು ಮಾನುಷಿ" ಮರ್ತ್ಯರಲ್ಲಿರುವ ಮಾನವೀಯ ದೇವತೆ, ಒಂದೇ ಬಾರಿಗೆ ದಿವ್ಯಳೂ ಮಾನವೀಯೂ ಆದ ದೇವತೆ, ತನ್ನ ಐಶ್ವರ್ಯವನ್ನು ಹೊರಸುರಿವ ದೃಶ್ಯದೇವತೆ ಎನ್ನಿಸಿದ ದಿವ್ಯ ಉಷಾ ದೇವತೆಯನ್ನು ಮರ್ತ್ಯಸ್ವಭಾವಕ್ಕಿಳಿಸಿ ತರುವುದೇ ಆಗಿದೆ.



## ಅಧ್ಯಾಯ-೧೭

# ಸಪ್ತಶೀರ್ಷ ವಿಚಾರ, ಸ್ವರ್ ಮತ್ತು ದಶಗ್ವರು

ವೇದದ ಭಾಷೆಯು "ಅಂಗಿರಸ ಋಷಿಗಳು" ಎರಡು ಮುಖಗಳನ್ನು (ಲಕ್ಷಣಗಳನ್ನು) ಉಳ್ಳವರು ಎಂಬುದನ್ನು ಸಿದ್ಧ ಮಾಡುತ್ತದೆ : ಒಂದು ವೇದದ ಹೊರ ವೇಷಕ್ಕೆ ಸಂಬಂಧಿಸಿದ್ದು ; ಇನ್ನೊಂದು ಒಳ ಸ್ವರೂಪಕ್ಕೆ ಸಂಬಂಧಿಸಿದ್ದು. (ಮೊದಲನೆಯದು ಭೌತಿಕ, ಎರಡನೆಯದು ಮಾನಸಶಾಸ್ತ್ರೀಯ ಎಂದು ತಾತ್ಪರ್ಯ.) ಮೊದಲು ಅವರು ನಿಸರ್ಗಾರಾಧನೆಯ ಪ್ರತಿಮಾವಳಿಯಿಂದ ಪ್ರತೀತರು. ಆ ಪ್ರತಿಮಾವಳಿಯ ಹೆಣಿಗೆಯಲ್ಲಿ ಸೂರ್ಯ, ಜ್ವಾಲೆ, ಉಷೆ, ಗೋವು, ಕುದುರೆ, ಸೋಮ (ಮದ್ಯ), ಯಾಜ್ಞಿಕ ಸೂಕ್ತ (ಮಂತ್ರ) ಗಳು ಬರುತ್ತವೆ ; ಎರಡನೆಯದರಲ್ಲಿ ಅಂತರರ್ಥ ಪ್ರಕಟವಾಗುತ್ತದೆ. ಅಂಗಿರಸರು ಜ್ವಾಲಾಪುತ್ರರು, ಉಷೆಯ ಮಿಂಚುಗಳು, ಮದ್ಯಪಾಯಿಗಳು ಮತ್ತು ಮದ್ಯದಾಯಿಗಳು, ಸೂಕ್ತಗಾಯಕರು ; ನಮಗಾಗಿ ಸೂರ್ಯ, ಗೋವು, ಕುದುರೆ ಮತ್ತು ಸಕಲ ಭಂಡಾರಗಳನ್ನು ತಮಃಪುತ್ರರಿಂದ ಗೆದ್ದುಕೊಡುವ ಅಮರ ಯುವಕರು ಮತ್ತು ವೀರರು. ಆದರೆ ಅವರು ಸತ್ಯದರ್ಶಿಗಳೂ ಸತ್ಯದ ಮಂತ್ರವನ್ನು (ಶಬ್ದವನ್ನು) ಹುಡುಕಿ ಹೇಳುವವರೂ ಮತ್ತು ಸತ್ಯಬಲದಿಂದ ನಮಗಾಗಿ ಬೆಳಕಿನ ವಿಶಾಲ ಜಗತ್ತನ್ನೂ ಮತ್ತು ಅಮರತ್ವವನ್ನು ಗೆದ್ದು ತಂದುಕೊಡುವವರೂ ಆಗಿದ್ದಾರೆ : ಆ ಅಮರಲೋಕವನ್ನು ವಿಶಾಲ, ಸತ್ಯ, ಋತ (ಸರಿ) ಮತ್ತು ಅವರು ಜನಿಸಿದ ಜ್ವಾಲಾಭವನ (ಅವರು ಜ್ವಾಲಾ ಪುತ್ರರಾದ್ದರಿಂದ) ; ಅವರದರ ಮಕ್ಕಳು ಎಂಬುದಾಗಿಯೂ ವೇದವು ವರ್ಣಿಸಿದೆ. ಈ ಭೌತಿಕ ಪ್ರತಿಮಾವಳಿ ಮತ್ತು ಈ ಮಾನಸ ಶಾಸ್ತ್ರೀಯ ಸೂಚನೆಗಳು ಪರಸ್ಪರ ಓತಪ್ರೋತವಾಗಿವೆ ಮತ್ತು ಅವನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಆದುದರಿಂದ, ನಾವು ಸಾಮಾನ್ಯ ವಿವೇಕಬಲದಿಂದ, "ಋತ-ಸತ್ಯಗಳು ಜ್ವಾಲಾಗೃಹ" ಎಂದರೇನೇ ಋತ-ಸತ್ಯಸ್ವರೂಪದ ಒಂದು ಜ್ವಾಲೆ ; ಸತ್ಯಜಿತವಾದ ಬೆಳಕು, ನಿಜವಿಚಾರ ಪ್ರಣೋದಜಿತವಾದ ಜ್ಯೋತಿಸ್ಸು, ಬರೀ ಭೌತಿಕ ಬೆಳಕಲ್ಲ-ಸರಮೆಯು ಸತ್ಯದ ಹಾದಿಯಲ್ಲಿ ಹುಡುಕಿ ಪಡೆದ ಗೋವುಗಳು ಬರೀ ಭೌತಿಕ ದನಗಳ ಗೋಲೆಗಳಲ್ಲ ; ಕುದುರೆಗಳು ಬರೀ ಆಕ್ರಾಮಕ ಆರ್ಯರು ದ್ರಾವಿಡರಿಂದ ಕಸಿದುಕೊಂಡ ಸಂಪತ್ತಲ್ಲ - ಭೌತಿಕ ಉಷೆಯ ಪ್ರತಿಮಾನಗಳಷ್ಟೇ ಅಲ್ಲ. ಹಾಗೇ ಆ ಉಷೆಯ ಬೆಳಕೆಂಬುದೂ ಅದರ ವೇಗವಾಗಿ ಓಡುವ ಕಿರಣಗಳೂ ಕೇವಲ ಭೌತಿಕವಲ್ಲ; ಪಣಿಗಳೂ ವೃತ್ರನೂ ಕಾಯ್ದಿಟ್ಟುಕೊಂಡ ಕತ್ತಲೆಂಬುದು ಬರೀ ಭಾರತದ ಯಾ ಆರ್ಕಟಿಕ್ ವಲಯದ ಇರುಳಲ್ಲ - ಎಂಬುದನ್ನು ತಿಳಿದುಕೊಳ್ಳಬೇಕಾಗಿದೆ. ನ್ಯಾಯವಾದ ತಾತ್ಕಾಲಿಕ ಸಿದ್ಧಾಂತವೊಂದನ್ನು ನಾವೀಗ ಅಪಾಯ-ವಿಮುಖರಾಗಿ ಮುಂದಿಟ್ಟಿದ್ದೇವೆ. ಅದರ ಬಲದಿಂದ ಪ್ರತಿಮಾಮಾಲೆಯ (ಅಲಂಕಾರೋಕ್ತಿಗಳ) ನಿಜವಾದ ಅರ್ಥವನ್ನು ಬೇರ್ಪಡಿಸಿ ಈ ಮಿಂಚುವ ದೇವತೆಗಳನ್ನು ಮತ್ತು ಈ ದಿವ್ಯ ಜ್ಯೋತಿರ್ಮಯ ಋಷಿಗಳನ್ನು ಹುಡುಕಿ ತೆಗೆಯಬಲ್ಲೆವು.

ಅಂಗಿರಸ ಋಷಿಗಳು ಒಂದೇ ಉಸಿರಿನಲ್ಲಿ ದೇವತಾತ್ಮಕ ಹಾಗೂ ಮಾನವ್ಯ ದ್ರಷ್ಟಾರರು. ವೇದದಲ್ಲಿ ಈ ಋಷಿಗಳಿಗೆ ಈ ದ್ವಿಲಕ್ಷಣವು ಅಷ್ಟರಿಂದಲೇ ಅಸಾಧಾರಣ ಲಕ್ಷಣ ಯಾ ವಿಶಿಷ್ಟ ಲಕ್ಷಣ ಎನ್ನಿಸುವುದಿಲ್ಲ. ವೈದಿಕ ದೇವತೆಗಳಿಗೂ ದ್ವಿಲಕ್ಷಣ ಕರ್ಮವಿದೆ. ಅವರು ದಿವ್ಯರು ಮತ್ತು ಹಿಂದಿನಿಂದಲೂ ಇದ್ದವರು ; ಅವರು ಮಾನವನಲ್ಲಿ ಅತ್ಯುನ್ನತ ಪ್ರಜ್ಞಾಸ್ತರದತ್ತ ಏರುತ್ತಾ ಬೆಳೆಯುವಾಗ, ಆ ಸ್ತರದಲ್ಲವರು ಮಾಡುವ ಕಾರ್ಯಗಳಲ್ಲಿ ಅವರು ಮಾನವ್ಯರು. ಉಷಾಸೂಕ್ತದಲ್ಲಿ ಈ ಅಂಶವನ್ನು ಹೊಡೆದೆಬ್ಬಿಸುವಂತೆ ಹೇಳಲಾಗಿದೆ - ಅವಳು ಮರ್ತ್ಯರಲ್ಲಿಯ ದೇವತೆ (ದೇವಿ) - "ದೇವೀ ಮರ್ತೇಷು ಮಾನುಷೀ" VII.75.2 ಆದರೆ ಅಂಗಿರಸ ಋಷಿಗಳಿಗನ್ವಯಿಸಿದ ರೂಪಕೋಕ್ತಿಗಳಲ್ಲಿ ಅವರನ್ನು ಮಾನವ ಕುಲದ ತಂದೆಯರೆಂದು ಪರಂಪರಾನುಸಾರವಾಗಿ ಕರೆದು ಅವರ ದ್ವಿಲಕ್ಷಣ ಸಂಪನ್ನತೆಯನ್ನು ಬಹುದೂರದವರೆಗೆ ಜಟಿಲಗೊಳಿಸಲಾಗಿದೆ - ಬೆಳಕು, ಮಾರ್ಗ, ಧ್ಯೇಯಗಳನ್ನು ಹುಡುಕಿ ತೆಗೆದವರೆಂದು ಹೇಳಿದ್ದು ಆ ಜಟಿಲತೆಗೆ ಕಾರಣ. ಈ ಜಟಿಲೀಕರಣವು ಹೇಗೆ ವೈದಿಕಾರಾಧನೆ ಮತ್ತು ವೈದಿಕ ಸಾಂಕೇತಿಕತೆಗಳ ಬಗೆಗಿನ ನಮ್ಮ ಸಿದ್ಧಾಂತಕ್ಕೆ ಎಡರನ್ನೊಡ್ಡುತ್ತದೆ? ಎಂಬುದನ್ನೀಗ ನೋಡೋಣ-ಅದಕ್ಕೆ ಏನು ಮಾಡುತ್ತದೆ? ಎಂಬುದನ್ನು ಪರೀಕ್ಷಿಸೋಣ.

ಅಂಗಿರಸ ಋಷಿಗಳ ಸಂಖ್ಯೆ ಏಳೆಂದು ಸಾಮಾನ್ಯವಾಗಿ ಹೇಳಲಾಗಿದೆ. ಅವರು "ಸಪ್ತವಿಪ್ರರು", ಸಪ್ತಋಷಿಗಳು. ಅವರು ಪುರಾಣ ಪರಂಪರೆಯಿಂದ ಬಂದವರು. "ಸಪ್ತರ್ಷಿಮಂಡಲ"[೧] ಎಂದು, ಏಳು ನಕ್ಷತ್ರಗಳ ಗುಂಪಿಗೆ ಭಾರತೀಯ ಖಗೋಲಶಾಸ್ತ್ರವು ಅವರ ಸ್ಥಾನವನ್ನೇರಿಸಿ ಇಟ್ಟಿದೆ. ಆದರೆ ಅವರನ್ನು ನವಗ್ವರೆಂದೂ ದಶಗ್ವರೆಂದೂ ವರ್ಣಿಸಲಾಗಿದೆ. VI.22.2 ರಲ್ಲಿರುವಂತೆ ನವಗ್ವರೆಂಬವರು ನಮ್ಮ ವಂಶದ ಮೂಲ ಪುರುಷರೆಂದಾದಾರು.- "ಪೂರ್ವೇ ಪಿತರೋ ನವಗ್ವಾಃಸಪ್ತ ವಿಪ್ರಾಸಃ" ; ಇನ್ನೂ ಇದೆ- III/39.5, ನವಗ್ವ-ದಶಗ್ವರೆಂಬ ಎರಡು ವರ್ಗಗಳನ್ನು ನಮ್ಮೆದುರಿಡಲಾಗಿದೆ; ಮೊದಲಿನವರು (ಸ್ಪಷ್ಟವಾಗಿ ಅಲ್ಲದಿದ್ದರೂ) ೯ ಎಂದೂ ಎರಡನೆಯವರು ೧೦ ಜನರೆಂದೂ ನಮಗೆ ಹೇಳಲಾಗಿದೆ. "ಸಖಾಹ ಯತ್ರ ಸಖಿಭಿರ್ ನವಗ್ವೈರ್ ಅಭಿಜ್ಞ್ವಾ ಸತ್ವಭಿರ್‌ಗಾ ಅನುಗ್ಮನ್ ; ಸತ್ಯಂ ತದಿಂದ್ರೋ ದಶಭಿರ್ ದಶಗ್ವೈಃ ಸೂರ್ಯಂ ವಿವೇದ ತಮಸಿ ಕ್ಷಿಯಂತಂ=ಎಲ್ಲಿ ಒಬ್ಬ ಸ್ನೇಹಿತನಾದ ಇಂದ್ರನು ನವಗ್ವರೆಂಬ ತನ್ನ ಸ್ನೇಹಿತರೊಡನೆ ಹಾಗೂ ಗೆಳೆಯರಾದ ೧೦ ದಶಗ್ವರೊಡನೆ ದನಗಳ ಬೆನ್ನು ಹತ್ತಿ ಹೋಗಿ ಆ ಸತ್ಯವನ್ನು ಕಂಡು ಹಿಡಿದನು, ಕತ್ತಲಲ್ಲಿ ಇದ್ದ ಸೂರ್ಯನನ್ನೂ ಹುಡುಕಿ ತೆಗೆದನು." ಹಾಗಲ್ಲದೆ, IV.51.4 ರಲ್ಲಿ "ನವಗ್ವೇ ಅಂಗಿರೇ ದಶಗ್ವೇ ಸಪ್ತಾಸ್ಯೇ = ಸಪ್ತಮುಖದ ಯಾ ಸಪ್ತಬಾಯಿಯ ೯ ಕಿರಣಗಳ ಯಾ ೧೦ ಕಿರಣಗಳ ಎಂಬ ಸಾಮೂಹಿಕ ವರ್ಣನೆ ಇದೆ. X.108.8 ದಲ್ಲಿ ಅಯಸ್ಯನೆಂಬ ಮತ್ತೊಬ್ಬ ಋಷಿಯ ಹೆಸರು ಬಂದಿದೆ. ಅವನು ನಮ್ಮ ವಂಶದ ಮೂಲ ಪುರುಷ ಎಂದೆನ್ನಲಾಗಿದೆ ; ನವಗ್ವ ಅಂಗಿರಸರೊಡನೆ ಅವನು ಸಂಬಂಧವುಳ್ಳವನು (X.67.1)- ಈ ಮೂಲಪಿತೃವು ವಿಶಾಲವಾದ ಸಪ್ತಶೀರ್ಷದ ತತ್ವವಿಚಾರವನ್ನು ಕಂಡುಹಿಡಿದನು ; ಈ ವಿಚಾರವು ಪರಮಸತ್ಯಜಾತ ಮತ್ತು ಈ ಅಯಸ್ಯಪಿತನು

---

೧. ಪುರಾಣವು ಹೇಳಿದ ಏಳು ಋಷಿಗಳ ಹೆಸರುಗಳೇ ಇವರ ಹೆಸರುಗಳಾಗಬೇಕೆಂಬ ವೈದಿಕ ನಿಯಮವೇನೂ ಇಲ್ಲ (ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠ ಎಂಬಿವು ಪುರಾಣೋಕ್ತ ಸಪ್ತರ್ಷಿನಾಮಗಳು - ಈ ಹೆಸರುಗಳಿಗಿಲ್ಲಿ ಪ್ರಾಮುಖ್ಯ ಕೊಡಬೇಕಾಗಿಲ್ಲ ಎಂಬುದು ತಾತ್ಪರ್ಯ.

ಇಂದ್ರಸೂಕ್ತವನ್ನು ಹಾಡಿದನು. ನವಗ್ವರು ಏಳು ಯಾ ಒಂಭತ್ತು ಜನರಾದರೆ ಅದರ ಪ್ರಕಾರ ಅಯಸ್ಯನು ಎಂಟನೆಯ ಯಾ ಹತ್ತನೆಯ ಋಷಿಯಾಗುವನು.

ಪರಂಪರೆಯು ಅಂಗಿರಸ ಋಷಿಗಳ ವರ್ಗ ಎರಡೆನ್ನುತ್ತದೆ : ೯ ತಿಂಗಳು ಯಜ್ಞ ಮಾಡಿದವರದ್ದೊಂದು ವರ್ಗ, ೧೦ ತಿಂಗಳು ಯಜ್ಞ ಮಾಡಿದವರದ್ದಿನ್ನೊಂದು - "ನವಗ್ವರು ಮತ್ತು ದಶಗ್ವರು." ಈ ವ್ಯಾಖ್ಯೆಯ ಪ್ರಕಾರ, ನವಗ್ವ-ದಶಗ್ವರನ್ನು - ನವಗೋಧನರು, ದಶಗೋಧನರು- ಎಂದು ತಿಳಿದುಕೊಳ್ಳಬೇಕಾಗುತ್ತದೆ. ಪ್ರತಿಯೊಂದು ಗೋವೂ ಒಟ್ಟಿನಲ್ಲಿ ೩೦ ಉಷೆಯರನ್ನು ಕೂಡಿಸಿದ ಒಂದು ಯಾಜ್ಞಿಕ ತಿಂಗಳಾಗುತ್ತದೆ. ಆದರೆ ಒಂದು ಉಪಚ್ಛೇದದಲ್ಲಿ ಈ ಪರಂಪರಾಭಿಪ್ರಾಯವನ್ನು ವಿರೋಧಿಸಲಾಗಿದೆ. V.45.7 ರಲ್ಲಿ ಮತ್ತು 11ರಲ್ಲಿ "೧೦ ತಿಂಗಳುಗಳವರೆಗೆ ಸೂಕ್ತ ಜಪ ಮಾಡಿದವರು ನವಗ್ವರಲ್ಲ, ದಶಗ್ವರು" ಎಂದು ಹೇಳಲಾಗಿದೆ. ೬ ನೆಯ ಋಕ್ ಸಾಗುತ್ತದೆ : "ಅನೂನೋದ್ ಅತ್ರ ಹಸ್ತಯತೋ ಅದ್ರಿರಾರ್ಚನ್ ಯೇನ ದಶಮಾಸೋ ನವಗ್ವಾ: ಋತಂ ಯತೀ ಸರಮಾ ಗಾ ಅವಿಂದದ್, ವಿಶ್ವಾನಿ ಸತ್ಯಾ ಅಂಗಿರಾಶ್ಚಕಾರ = ಇಲ್ಲಿ ಕೈಯಿಂದ ಕಲ್ಲನ್ನಲ್ಲಾಡಿಸಿ (ಕೂಗಿ) ನವಗ್ವರು ೧೦ ತಿಂಗಳುಗಳವರೆಗೆ ಸೂಕ್ತ ಪಠನ ಮಾಡಿದರು ; ಸರಮೆಯು ಪರಸತ್ಯದತ್ತ ಪ್ರವಾಸ ಮಾಡಿ ದನಗಳನ್ನು ಕಂಡು ಹಿಡಿದಳು. ಈಯೆಲ್ಲವನ್ನೂ ಅಂಗಿರಸರು ನಿಜವನ್ನಾಗಿ ಮಾಡಿದರು." ಮತ್ತು ೧೧ ನೆಯ ಋಕ್ಕಿನಲ್ಲಿ ಈ ಹೇಳಿಕೆಯನ್ನು ಪುನರುಚ್ಚರಿಸಲಾಗಿದೆ : "ಧಿಯಂ ವೋ ಅಪ್ಸು ದಧಿಷೇ ಸ್ವರ್ಷಾಂ, ಯಯಾತರನ್ ದಶಮಾಸೋ ನವಗ್ವಾಃ ; ಅಯಾಧಿಯಾ ಸ್ಯಾಮ ದೇವ ಗೋಪಾಃ, ಅಯಾಧಿಯಾ ತುತುರ್ಯಾಮ ಅತಿ ಅಂಹಃ=ನಾನು ನಿನಗಾಗಿ ನೀರಿನಲ್ಲಿ (ಅಂದರೆ ಸಪ್ತಸಿಂಧುಗಳಲ್ಲಿ) ಸ್ವರ್ಗದ[೧] ಒಡೆಯತನವನ್ನು ಗೆದ್ದುಕೊಡುವ ಆಲೋಚನೆಯನ್ನು (ವಿಚಾರವನ್ನು) ಹಿಡಿದಿರುತ್ತೇನೆ. (ಇದು ಮತ್ತೊಮ್ಮೆ ಸಪ್ತ ಶಿರೋ ವಿಚಾರ, ಸತ್ಯಜ, ಅಯಸ್ಯ ಸಂಶೋಧಿತ ಎನ್ನಿಸಿದಂಥದು) - ಇದರ ಮೂಲಕ ೧೦ ತಿಂಗಳುಗಳನ್ನು ಕಳೆದರು ; ಈ ವಿಚಾರದಿಂದ (ಆಲೋಚನೆಯಿಂದ) ದೇವತೆಗಳು ನಮ್ಮ ರಕ್ಷಕರಾಗಲಿ ; ಇದೇ ವಿಚಾರದಿಂದ ನಾವು ದುಷ್ಟ ಶಕ್ತಿಯಿಂದಾಚೆಗೆ ಹೋಗುವಂತಾಗಲಿ." ಈ ಹೇಳಿಕೆ ಸ್ಪಷ್ಟವಾಗಿದೆ. ಸಾಯಣನು ಹೆದರಿ ಹೆದರಿಕೊಂಡವನಂತೆ "ದಶಮಾಸಃ" (V.45.7) ಎಂಬ ಪದವನ್ನು ಹತ್ತು ತಿಂಗಳುಗಳೆಂದು ಅರ್ಥಮಾಡದೆ, ಹತ್ತು ತಿಂಗಳುಗಳು ಯಾರಿಗೋ ಅವರು ಅಂದರೆ ದಶಗರು-ಎಂದು ಬಹುವ್ರೀಹಿ ಸಮಾಸವನ್ನಾಗಿ ಗ್ರಹಿಸಿ ವ್ಯಾಖ್ಯಾನಿಸಿದ್ದಾನೆ. ಆದರೆ ಅವನು ಈ ಅಸಂಭಾವ್ಯ ಅರ್ಥವನ್ನು ಒಂದು ವೈಕಲ್ಪಿಕ ಅರ್ಥವೆಂದು ಹೇಳಿದ್ದಾನೆ; ಆದ್ದರಿಂದ ಈ ಪದಕ್ಕೆ ಈ ಬಹುವ್ರೀಹಿ ಸಮಾಸದ ಅರ್ಥವನ್ನು ೧೧ ನೆಯ ಋಕ್ಕಿಗೆ ಅರ್ಥ ಹೇಳುವಾಗ ಬಿಟ್ಟುಬಿಟ್ಟಿದ್ದಾನೆ.

ಈ ಸೂಕ್ತದ ಕವಿಯು ಪರಂಪರೆಯನ್ನು ಮರೆತು ಗಲಿಬಿಲಿಗೊಳಗಾಗಿ ದಶಗ್ವ-ನವಗ್ವರ ಬೇಧವನ್ನು ಮಾಡಲಾರದಾದನೆಂದು ನಾವು ಊಹಿಸಬೇಕೇ? ಹೀಗೆ ಊಹಿಸುವುದು

---

೧. ಸಾಯಣನು, "ನಾನು ನೀರನ್ನುದ್ದೇಶಿಸಿ ಸೂಕ್ತವನ್ನು ಪಠಿಸುತ್ತೇನೆ. ಅಂದರೆ, ಮಳೆಯನ್ನು ಪಡೆಯಲೆಂದು -ಎಂದು ವಿವರಿಸುತ್ತಾನೆ. ಆದರೆ ಇಲ್ಲಿರುವುದು ಸಪ್ತಮೀ ಬಹುವಚನ ಮತ್ತು "ದಧಿಷ್ವೇ" ಎಂದರೆ "ನಾನು ಇಡುತ್ತೇನೆ ಯಾ ಹಿಡಿದುಕೊಂಡಿರುತ್ತೇನೆ" ಯಾ ಮಾನಸಶಾಸ್ತ್ರೀಯವಾಗಿ, "ಆಲೋಚಿಸು, ವಿಚಾರಗತ ಮಾಡಿಕೋ ; ಧ್ಯಾನಿಸು" ಎಂದರ್ಥ. ಧಿಷಣೆಯು ಧೀಯಂತೆ ವಿಚಾರ, ಆಲೋಚನೆ -"ಧಿಯಂದಧಿಷೇ = ನಾನು ಆಲೋಚಿಸುತ್ತೇನೆ ಅಥವಾ ನಾನು ಧ್ಯಾನ ಮಾಡುತ್ತೇನೆ"-ಎಂದರ್ಥವಾಗುತ್ತದೆ.

ಅಸಮರ್ಥನೀಯ. ತೊಂದರೆಯೇಕೆ ಉಂಟಾಗುತ್ತದೆಯೆಂದರೆ, ವೇದದ ಋಷಿಗಳು ನವಗ್ವ-ದಶಗ್ವರೆಂಬ ಎರಡು ವರ್ಗಗಳನ್ನು ಅಂಗಿರಸ ಋಷಿಗಳಲ್ಲಿ ಮಾಡಿಕೊಂಡಿದ್ದರೆಂದು ಭಾವಿಸಿಕೊಂಡುದರಿಂದ. ಆದರೆ ಈ ಎರಡು ಹೆಸರುಗಳು ಅಂಗಿರಸತ್ವದ ಎರಡು ಶಕ್ತಿಗಳೆಂದು ಭಾವಿಸಿಕೊಂಡರೆ, ೯ ರಿಂದ ೧೦ ನೆಯ ತಿಂಗಳಿನವರೆಗೂ ತಮ್ಮ ಯಜ್ಞವನ್ನು ನವಗ್ವರು (ಅಂಗಿರಸರು) ಮುಂಬರಿಸಿಕೊಂಡು ಹೋದರೆಂದು ಭಾವಿಸಿದರೆ, ಉಕ್ತ ತೊಂದರೆ ಸಂಭವಿಸುವುದಿಲ್ಲ. "ದಶಮಾಸೋ ಅತರನ್" ಎಂಬ ಪದಸಂಹತಿಯು ಹತ್ತು ತಿಂಗಳುಗಳ ಪೂರ್ಣಾವಧಿಯನ್ನು ಮುಟ್ಟಲು ಏನೋ ತೊಂದರೆಯಾಗಿರಬೇಕು ಎಂದೆನ್ನಿಸುತ್ತದೆ. ಬಹುಶಃ ಈ ಅವಧಿಯಲ್ಲೇ ತಮಃಶಕ್ತಿಗಳು ಯಜ್ಞಭಂಗ ಮಾಡಲು ಸಮರ್ಥವಾಗಿದ್ದಿರಬೇಕು. ಏಕೆಂದರೆ, ಸೌರ ಜಗತ್ತೆನ್ನಿಸಿದ ಸ್ವರ್‌ಲೋಕವನ್ನು ಗೆಲ್ಲುವ ವಿಚಾರವನ್ನು ದೃಢಪಡಿಸುವುದರಿಂದಲೇ ಋಷಿಗಳು ಹತ್ತು ತಿಂಗಳುಗಳ ಕಾಲ ಯಜ್ಞ ಮಾಡಬಲ್ಲವರಾಗಿದ್ದರು ಎಂಬುದಿಲ್ಲಿ ಸೂಚಿತವಾಗಿದೆ. ಈ ವಿಚಾರದ ದೃಢೀಕರಣವಾದ ಮರುಕ್ಷಣದಲ್ಲೇ ಅವರಿಗೆ ದೇವತೆಗಳ ರಕ್ಷಣೆ (ಸಹಾಯವು) ಖಚಿತವಾಗುತ್ತದೆ ಮತ್ತು ಅವರು ದುಷ್ಟ ಶಕ್ತಿಯ ಹಿಡಿತದಿಂದ ಪಾರಾಗುತ್ತಾರೆ ಅರ್ಥಾತ್, ಪಣಿಗಳ ಹಾಗೂ ವೃತ್ರರ ಕಾಟದಿಂದ ಮುಕ್ತರಾಗುತ್ತಾರೆ. ಈ ಸ್ವರ್ ವಿಜಯದ ವಿಚಾರವೂ, ನವಗ್ವರ ಗೆಳೆಯನಾದ ಅಯಸ್ಯನು ಹುಡುಕಿ ತೆಗೆದ ಸತ್ಯಜಾತವಾದ ಸಪ್ತಶೀರ್ಷದ ವಿಚಾರವೂ ಒಂದೇ ; ಏಕೆಂದರೆ, ಅಯಸ್ಯನು ವಿಶ್ವ ವ್ಯಾಪಕನಾದನೆಂದೂ ಸರ್ವಲೋಕಗಳ ಜನ್ಮಗಳನ್ನೂ ಆವರಿಸಿಕೊಂಡನೆಂದೂ ನಾಲ್ಕನೆಯ ಲೋಕವೊಂದನ್ನು ನಿರ್ಮಿಸಿದನೆಂದೂ ಹೇಳಲಾಗಿದೆ. ಈ ನಾಲ್ಕನೆಯ ಲೋಕವು ಅಥವಾ ಚತುರ್ಮುಖ ಲೋಕವು "ದ್ಯೌ, ಅಂತರಿಕ್ಷ, ಪೃಥ್ವೀ" ಎಂಬ ಲೋಕತ್ರಯದ ಆಚೆಗಿನದು ; ಘೋರನ ಮಗ ಕಣ್ವನ ಪ್ರಕಾರ ವೃತ್ರನನ್ನು ಕೊಂದ ಬಳಿಕ ದ್ಯಾವಾ ಪೃಥಿವಿಗಳನ್ನು ದಾಟಿ ಮನುಷ್ಯರು ನಿರ್ಮಿಸುವ ಅಥವಾ ತಲುಪುವ ವಿಶಾಲವಾದ ಲೋಕ. ಈ ನಾಲ್ಕನೆಯ ಲೋಕವೇ "ಸ್ವರ್" ಆಗಿರಬೇಕು. ಅಯಸ್ಯನ ಸಪ್ತ ಶಿರಸ್ಕ ವಿಚಾರವು ಅವನನ್ನು "ವಿಶ್ವಜನ್ಯನನ್ನಾಗಿ" ಮಾಡಬಲ್ಲುದು ; ಅಂದರೆ, ಆತ್ಮನ ಎಲ್ಲ ಲೋಕಗಳನ್ನೂ ಅವನು ತುಂಬಿಕೊಳ್ಳುತ್ತಾನೆ ಯಾ ವಶಪಡಿಸಿಕೊಳ್ಳುತ್ತಾನೆ ಎಂದು ಅರ್ಥವಾಗಬಹುದು : ಅಥವಾ ಅವನು ಹುಟ್ಟಿದ ಎಲ್ಲ ಪದಾರ್ಥಗಳೊಳಗೆ ಒಂದಾಗಿ ಅವೇ ತಾನಾಗಿ ಸರ್ವೈಕ್ಯ ಭಾವ(ಸತ್ತೆ) ವನ್ನು ಸಾಧಿಸಿ ವಿಶ್ವಾತ್ಮನಾಗುವನು ಎಂದಾಗಬಹುದು - ಮತ್ತು ಯಾವುದೋ ಒಂದು ಚತುರ್ಥ ಲೋಕಕ್ಕೆ ಅಸ್ತಿತ್ವವನ್ನು ಕೊಡುತ್ತಾನೆ ಯಾ ಅದು ಪ್ರಕಟವಾಗುವಂತೆ ಮಾಡುತ್ತಾನೆ ("ಸ್ವರ್"), "ತುರೀಯಂ ಸ್ವಿಜ್ ಜನಯದ್ ವಿಶ್ವಜನ್ಯಃ" (X.67.1) ಮತ್ತು ಜಲಗಳಲ್ಲಿ ಪ್ರತಿಷ್ಠಿಸಿದ ವಿಚಾರವು ನವಗ್ವ ಋಷಿಗಳಿಗೆ ಹತ್ತು ತಿಂಗಳುಗಳನ್ನು ಕಳೆಯಲು ಸಾಮರ್ಥ್ಯ ಕೊಟ್ಟದ್ದೇ ಆಗಿದೆ; ಅದು "ಸ್ವರ್ಷಾಃ= ಸ್ವರ್‌ಲೋಕದ ಮೇಲಿನ ಅಧಿಪತ್ಯವನ್ನು ಸಿಕ್ಕುವಂತೆ ಮಾಡಿದ ವಿಚಾರ (ದಿವ್ಯವಿಚಾರ). "ಜಲಗಳು" ಸ್ಪಷ್ಟವಾಗಿ ಸಪ್ತಸಿಂಧು (ನದಿ)ಗಳು ; ಮತ್ತು ಈಯೆರಡು ವಿಚಾರಗಳೂ ಒಂದೇ. ನವಗ್ವರ ಸಂಖ್ಯೆಯನ್ನು ಹತ್ತಕ್ಕೇರಿಸಿ ಸಪ್ತಮಸ್ತಕದ ಸ್ವರ್‌ಜಯದಾಯಕ ವಿಚಾರವನ್ನು ಗೆಲ್ಲಲು ಅವರಿಗೆ ೯ ತಿಂಗಳ ಯಜ್ಞವನ್ನು ಹತ್ತು ತಿಂಗಳವರೆಗೆ ಮಾಡಿ ಮುಗಿಸಲು ಶಕ್ತಿಯನ್ನಿತ್ತ ಅಯಸ್ಯನು ಸೇರಿಸಿದ ಹೊಸ ಅಂಶ ಎಂದು ನಾವೀಗ ನಿಗಮನಿಸದಿರಲು ಸಾಧ್ಯವೇ? ಹಾಗೆ ನಿಗಮನಿಸಲೇಬೇಕಲ್ಲವೇ? ಹೀಗೆ ಅವರು ದಶಗ್ವರಾದದ್ದು. ಈ ಸಂದರ್ಭದಲ್ಲಿ "ಇಂದ್ರನು ಸ್ವರ್‌ಬಲವನ್ನು ಪ್ರಕಟಿಸಲು ಯಾ ವೃದ್ಧಿಗೊಳಿಸಲು ಅಗತ್ಯವಾದ ಸೋಮಮಧ್ಯವನ್ನು ಅಥವಾ ("ಸ್ವರ್ಣರ") ಸ್ವರ್‌ಪುರುಷನನ್ನು ಬಲಪಡಿಸಲು ಬೇಕಾದ ರಸಾವೇಶವನ್ನು" ದಶಕಿರಣನೆಂದು

ಮತ್ತು ಪ್ರಕಾಶಪಡಿಸುವ "ದಶಗ್ವಂ ವೇಪಯಂತಂ" (VIII.12.2) ಎಂದು ವರ್ಣಿಸಿದ್ದನ್ನಿಲ್ಲಿ ನಾವು ಗಮನಿಸಬಹುದು.

ಈ ನಿಗಮನವನ್ನು ಸಂಪೂರ್ಣವಾಗಿ ನಾವು ಆಗಲೇ ಹೇಳಿದ III.39.5 ಋಕ್ಕು ದೃಢಪಡಿಸಿಬಿಟ್ಟಿದೆ. ಏಕೆಂದರೆ, ಅದರಲ್ಲಿ ನವಗ್ವರ ನೆರವಿನಿಂದಲೇ ಇಂದ್ರನು ಕಳೆದು ಹೋದ ದನಗಳ ಹಿಂಡನ್ನು ಗುರುತಿಸುತ್ತಾನೆ ; ಆದರೆ ಹತ್ತು ಜನ ದಶಗ್ವರಿಂದಲೇ ಅವನು ಆ ಸಾಧನೆಯಲ್ಲಿ ಸಂಪೂರ್ಣ ಯಶಸ್ವಿಯಾದದ್ದು ಮತ್ತು ದಶಗ್ವರಿಂದಲೇ ಸತ್ಯಂ ತತ್ = ಕತ್ತಲಲ್ಲಿ ಇದ್ದ ಸೂರ್ಯನನ್ನು ಜಯಪ್ರದವಾಗಿ ಆಕ್ರಮಿಸಿದ್ದು. ಇನ್ನೊಂದು ವಿಧವಾಗಿ ಹೇಳುವುದಾದರೆ, ಒಂಭತ್ತು ತಿಂಗಳ ಯಜ್ಞವನ್ನು ಹತ್ತು ತಿಂಗಳಿಗೆ ಲಂಬಿಸಿದ ಮೇಲೆಯೇ ಅರ್ಥಾತ್ ೧೦ ನೆಯ ಋಷಿಯಾದ ಅಯಸ್ಯನ ಸಪ್ತಶೀರ್ಷವಿಚಾರದಿಂದ ನವಗ್ವರು ದಶಗ್ವರಾದ ಮೇಲೆಯೇ - ಸೂರ್ಯನು ಸಿಕ್ಕಿದ್ದು ಅಥವಾ ಸತ್ಯವನ್ನು ನಾವು ಹೊಂದಿರುವ ಮಿರುಗುವ ಸ್ವರ್‌ಲೋಕ ದೊರಕಿದ್ದು ಅಥವಾ (ಸರ್ವಲೋಕಗಳಿಗೂ) ಒಬ್ಬನೇ ಒಬ್ಬನಾದ ವಿಶ್ವದೇವನನ್ನು ಹುಡುಕಿಗೆದ್ದದ್ದು. ಈ ಸ್ವರ್ ಜಯವೇ ಯಜ್ಞದ ಗುರಿ ಮತ್ತು ಅಂಗಿರಸ ಋಷಿಗಳಿಂದ ಸಾಧಿಸಲ್ಪಟ್ಟ ಮಹತ್ ಕಾರ್ಯ.

ಆದರೆ ತಿಂಗಳುಗಳು ಯಾವುದರ ಸಂಕೇತ? ಅದೊಂದು ಸಂಕೇತ, ಅಲಂಕಾರ ದೃಷ್ಟಾಂತ ಕಥೆ, ಗೂಢಾರ್ಥ ಸೂಚಕ ಕಥೆ, ಶ್ಲೇಷ ಕಥೆ - ವರ್ಷವೂ ಸಾಂಕೇತಿಕ ತಿಂಗಳುಗಳೂ ಸಾಂಕೇತಿಕ[೧] ವರುಷದ ಒಂದು ಉರುಳುವಿಕೆಯಲ್ಲೇ ಕಳೆದು ಹೋದ ಸೂರ್ಯ ಹಾಗೂ ಗೋವುಗಳನ್ನು ತಿರುಗಿ ಪಡೆಯುವುದು. ಅದರ ಸ್ಪಷ್ಟ ಹೇಳಿಕೆಯು X.62.2 ರಲ್ಲಿದೆ : "ಋತೇನಾಭಿಂದನ್ ಪರಿವತ್ಸರೇ ವಲಂ=ವರ್ಷವೊಂದರ ಪರಿವರ್ತನಾವಧಿಯಲ್ಲಿ ಸತ್ಯಬಲದಿಂದ ವಲನನ್ನು ಅವರು ಮುರಿದರು" ಅಥವಾ ಸಾಯಣ ಹೇಳಿದಂತೆ, ಒಂದು ವರ್ಷಾವಧಿಯ ಯಜ್ಞದಿಂದ. ಇಲ್ಲಿಯವರೆಗೆ ಇದು ಆರ್ಕ್‌ಟಿಕ್[೨] ಸಿದ್ಧಾಂತವನ್ನು ಬೆಂಬಲಿಸುತ್ತದೆ. ಏಕೆಂದರೆ ಇದು ದೈನಿಕ ಸೂರ್ಯೋದಯವನ್ನಲ್ಲ, ವಾರ್ಷಿಕ ಸೂರ್ಯೋದಯವನ್ನು ಹೇಳುತ್ತದೆ. ಆದರೆ ನಾವು ಹೊರ ರೂಪಕೋಕ್ತಿಯಲ್ಲಿ ಆಸಕ್ತರಲ್ಲ - ಅದರ ಸತ್ಯತೆ ಕೂಡಾ ನಮ್ಮ ಸಿದ್ಧಾಂತವನ್ನು ಅಲುಗಾಡಿಸದು. ಕಣ್ಣು ಕೋರಯಿಸುವ ಆರ್ಕ್‌ಟಿಕ್ ಪ್ರದೇಶದ ಸುದೀರ್ಘ ರಾತ್ರಿಯ ಮತ್ತು ಸತತವಾದ ಉಷಃಕಾಲಗಳ ಅನುಭವವು ಆಧ್ಯಾತ್ಮಿಕ ರಾತ್ರಿಯನ್ನು ಮತ್ತು ಅದರ ಕಷ್ಟಕರವಾದ ಬೆಳಗನ್ನು ಸೂಚಿಸಲು ಬಳಸಿಕೊಳ್ಳುವ ಪ್ರೇರಣೆಯನ್ನವರಿಗಿತ್ತಿರಬಹುದು. ಆದರೆ ಮಾಸವರ್ಷಾದಿ ಕಾಲದ ಈ ಕಲ್ಪನೆಯು ವೇದದ ಉಪಭೇದಗಳಲ್ಲಿ ಅದರಲ್ಲೂ ಗೃತ್ಸಮದನ ಬೃಹಸ್ಪತಿಯನ್ನು ಕುರಿತ II.24 ಸೂಕ್ತದಲ್ಲಿ, ಸಂಕೇತವನ್ನಾಗಿ ಬಳಸಿದ್ದು ಸ್ಪಷ್ಟವಾಗುತ್ತದೆ.

ಈ ಸೂಕ್ತದಲ್ಲಿ ಬೃಹಸ್ಪತಿಯನ್ನು ದನಗಳನ್ನಟ್ಟಿಕೊಂಡು ಹೋಗುವವನನ್ನಾಗಿಯೂ "ಬೃಹ್ಮಣಾ" = ಮಂತ್ರದಿಂದ ವಲನನ್ನು ಮುರಿಯುವವನನ್ನಾಗಿಯೂ ಕತ್ತಲೆಯನ್ನು ಮುಚ್ಚಿ ಹಾಕಿ ಸ್ವರ್‌ಲೋಕವನ್ನು ಕಾಣುವಂತೆ ಮಾಡುವವನನ್ನಾಗಿಯೂ ಸಂಕೇತದ ಮೂಲಕ

---

೧. ಪುರಾಣಗಳಲ್ಲಿ ಯುಗ, ಕ್ಷಣ, ತಿಂಗಳು ಮುಂತಾದವುಗಳೆಲ್ಲಾ ಸಾಂಕೇತಿಕ ಮತ್ತು ಮಾನವನ ಶರೀರವೇ ಒಂದು ವರುಷ ಎನ್ನಲಾಗಿದೆ.

೨. ಬಿ.ಬಾಲಗಂಗಾಧರ ತಿಲಕರ "The Arctic Home of the Aryans" ಎಂಬ ಗ್ರಂಥ = ಆರ್ಕ್‌ಟಿಕ್ ಸಿದ್ಧಾಂತ - ಅನುವಾದಕ.

ಬಣ್ಣಿಸಲಾಗಿದೆ (ಋಕ್ ೩). ಮೊದಲನೆಯದಾಗಿ, ಬಾವಿಯೊಂದನ್ನು ಬಲಾತ್ಕಾರದಿಂದ ಒಡೆದು ತೆರೆಯುವುದು. ಹಾಸುಗಲ್ಲೇ ಆ ಬಾವಿಯ ಬಾಯನ್ನು ಮುಚ್ಚಿಕೊಂಡಿದ್ದ ಮುಚ್ಚಳ. ಅದರ ಜಲಧಾರೆಗಳೇ ಜೇನುತುಪ್ಪ ("ಮಧು") = ಸೋಮರಸದ ಮಾಧುರ್ಯ - "ಅಶ್ಮಾಸ್ಯಂ ಅವತಂ ಮಧುಧಾರಂ" (ಋಕ್ ೪). ಶಿಲಾಚ್ಛನ್ನವಾದ ಈ ಜೇನುತುಪ್ಪದ ಬಾವಿಯೇ ಆನಂದ = ಅತ್ಯುನ್ನತ ತ್ರಿಪುಟ ಪ್ರಪಂಚದ ದಿವ್ಯ ಮೋಕ್ಷ. ಆ ಲೋಕದ ತ್ರಿಪುಟಗಳು = ಸತ್ಯ, ತಪಸ್ ಮತ್ತು ಜನಲೋಕಗಳು (ಇವು ಪುರಾಣೋಕ್ತ) = ಸತ್, ಚಿತ್ತಪಸ್ ಮತ್ತು ಆನಂದ. ಅವುಗಳಿಗೆ "ಸ್ವರ್" ನೆಲಗಟ್ಟು ಎಂಬುದು ವೇದ ಪರಿಭಾಷೆ. ಮಹರ್ ಎಂಬುದು ಉಪನಿಷತ್ತು ಪುರಾಣಗಳ ಪರಿಭಾಷೆ - ಅರ್ಥಾತ್- ಸತ್ಯಲೋಕ[೧]. ಈ ನಾಲ್ಕೂ ಒಟ್ಟಾಗಿ ಚತುರ್ಲೋಕ (ಲೋಕಚತುಷ್ಟಯ) ಎನ್ನಿಸಿವೆ ; ಈ ಒಟ್ಟೇ ಚತುರ್ಥಲೋಕ. ಋಗ್ವೇದದಲ್ಲಿ ಈ ನಾಲ್ಕು ಲೋಕಗಳನ್ನು ಅತ್ಯುನ್ನತವೂ ಗೂಢವೂ ಆದ ಆಸನಗಳೆಂದು ವರ್ಣಿಸಲಾಗಿದೆ ; ಇವನ್ನು "ಮೇಲಿನ ನಾಲ್ಕು ನದಿಗಳ ಆಕರ" ಎಂದೂ ಕರೆಯಲಾಗಿದೆ. ಕೆಲವೊಮ್ಮೆ ಈ ಉತ್ತರ ಪ್ರಪಂಚವನ್ನು ಎರಡಾಗಿ ವಿಭಜಿಸಲಾಗಿದೆ. "ಸ್ವರ್" ಎಂಬುದು ತಳಹದಿ ಮತ್ತು "ಮಯಸ್" ಎಂಬುದು ಸರ್ವೋಚ್ಚ ದಿವ್ಯ ಮೋಕ್ಷ - ಆದ್ದರಿಂದ ಲೋಕಗಳು ಐದಾಗುತ್ತವೆ. ಲೋಕ = ಜನ್ಮ. ಯಾರದ್ದು? ಮೇಲೇರುತ್ತಿರುವ ಜೀವಾತ್ಮನದು. ಉಳಿದ ಮೂರು ನದಿಗಳು ಅಧಃಶಕ್ತಿಗಳು, ಅಸ್ತಿತ್ವದ ಕೆಳಮಟ್ಟಗಳು - ಅವು ಕೆಳಗಿನ ಮೂರು ಲೋಕಗಳಿಗೆ ಬೇಕಾದ ಸಾಮಗ್ರಿಗಳನ್ನು ಒದಗಿಸುವುವು.

ಈ ಗೂಢ ಮಧುಕೂಪದಲ್ಲಿರುವ ಜೇನನ್ನು ಸ್ವರ್‌ದ್ರಷ್ಟಾರರೆಲ್ಲರೂ ಕುಡಿಯುತ್ತಾರೆ; ಮತ್ತು ಅದರ ತರಂಗಿತ ಉತ್ಸದ (ಬುಗ್ಗೆಯ) ಮಾಧುರ್ಯವನ್ನು ಒಂದೇ ಸಲ ಬಹುಧಾರೆಯಿಂದ ಹೊರ ಸುರಿಯುತ್ತಾರೆ - "ತಮೇವ ವಿಶ್ವೇ ಪಪಿರೇ ಸ್ವರ್‌ದೃಶೋ ಬಹುಸಾಕಂ ಸಿಸಿಚುರ್ ಉತ್ಸಂ ಉದ್ರಿಣಂ (II.24.4)" ಒಟ್ಟಿಗೇ ಸುರಿಯಲಾದ ಈ ಬಹುಪ್ರವಾಹಗಳೇ ಇಂದ್ರನು ವೃತ್ರನನ್ನು ಕೊಂದ ಬಳಿಕ ಗುಡ್ಡದಿಂದ ಕೆಳಗಿಳಿದು ಬಂದ ನದಿಗಳು - "ಋತಸ್ಯಧಾರಾಃ" = ಪರಮಸತ್ಯದ ಧಾರೆಗಳು. ನಮ್ಮ ಸಿದ್ಧಾಂತದ ಪ್ರಕಾರ ಅವು ಪರಮಸತ್ಯಾನಂದದಲ್ಲಿರುವ ಸಚೇತನ ವ್ಯಕ್ತಿಯ ದಿವ್ಯ ಸಮಾಧಿಯ ಸಪ್ತ ತತ್ವಗಳು. ಇದರಿಂದಲೇ ಸಪ್ತಶೀರ್ಷ ವಿಚಾರವು ಅಥವಾ ಏಳ್ತಲೆಯಿಂದೊಡಗೂಡಿದ ದಿವ್ಯ ಸತ್ತೆಯ ಏಳು ರೂಪಗಳು ಎನ್ನಿಸಿವೆ. ಈ ಏಳು ತಲೆಗಳು = ಏಳು ತತ್ವಗಳು ಯಾ ಶಕ್ತಿಗಳು = ಬೃಹಸ್ಪತಿಯ ಸಪ್ತಾಂಶುಜ್ಞಾನ ("ಸಪ್ತಗುಂ"). ಇವುಗಳನ್ನು ಸಪ್ತಸಿಂಧುಗಳ ಜಲಗಳಲ್ಲಿ ದೃಢಪಡಿಸಬೇಕು ಯಾ ವಿಚಾರದಲ್ಲಿ ಹಿಡಿದಿಡಬೇಕು. -ಅರ್ಥಾತ್ - ಸಪ್ತರೂಪದ ದಿವ್ಯ ಪ್ರಜ್ಞೆಯು ದಿವ್ಯ ಸತ್ತೆಯ ಸಪ್ತರೂಪದ ಚಲನಗಳಲ್ಲಿ ಹಿಡಿದಿಡಲ್ಪಡಬೇಕು : ಧಿಯಂವೋ ಅಪ್ಸುದಿಧಿಷೇ ಸ್ವರ್ಷಾಂ=ನಾನು ಸ್ವರ್‌ಜಯವಿಚಾರವನ್ನು ಜಲಗಳಲ್ಲಿ ಹಿಡಿದಿಟ್ಟಿಹೆ"

ಸ್ವರ್ ದ್ರಷ್ಟಾರರಿಗೆ (ಸ್ವರ್‌ದ್ರಷ್ಟೃಗಳಿಗೆ)-ಅವರ ಕಂಗಳಿಗೆ - ಸ್ವರ್ ಲೋಕವನ್ನು ದೃಶ್ಯವನ್ನಾಗಿ ಮಾಡುವುದು ("ಸ್ವರ್ ದೃಶಃ"). ಅವರ ಮಧುಕೂಪ ಮತ್ತು ದಿವ್ಯಜಲಗಳ ಬಹಿಸ್ಪ್ರವಹಣ (ಹೊರ ಚಿಮ್ಮುವಿಕೆ) - ಇವೆಲ್ಲವೂ ಸೂಚಿಸುವುದೇನೆಂದರೆ, ಮುಂದಿನ ಋಕ್ಕಿನಲ್ಲಿ (II.24.5.) ಸ್ಪಷ್ಟವಾಗಿ

---

೧. ಉಪನಿಷತ್ತು ಮತ್ತು ಪುರಾಣಗಳಲ್ಲಿ "ಸ್ವರ್" ಮತ್ತು "ದ್ಯೌ" ಗಳಲ್ಲಿ ಭೇದವಿಲ್ಲ. ಆದ್ದರಿಂದ ಸತ್ಯಲೋಕಕ್ಕೆ ಇನ್ನೊಂದು ಹೆಸರನ್ನು ಹುಡುಕಬೇಕಾಯಿತು. ನಾಲ್ಕನೆಯ ವ್ಯಾಹೃತಿಯಾದ ಮಹರನ್ನು ಮಹಾಚಮಸ್ಯ ಋಷಿಯು ಕಂಡು ಹಿಡಿದನು. ಇತರ ಮೂರು ವ್ಯಾಹೃತಿಗಳು ಯಾವುವೆಂದರೆ - "ವರ್, ಭುವರ್, ಭೂರ್"= "ದ್ಯೌ ಅಂತರಿಕ್ಷ ಮತ್ತು ಪೃಥಿವಿ" (ವೇದೋಕ್ತ).

ಹೇಳಿದಂತೆ ಮನುಷ್ಯನಿಗೆ ಹೊಸ ಜಗಗಳು, ಹೊಸ ಸತ್ತೆಗಳು ಹೊಳೆಯುವಂತೆ ಮಾಡುವುದೇ ಆಗಿದೆ- "ಸನಾತಾಕಾ ಚಿದ್ ಭುವನಾ ಭವಿತ್ವಾ ಮಾದ್ಭಿ : ಶರದ್ಭಿಃ ದುರೋವರಂತ ವಃ ; "ಅಯತಂತಾ ಚರತೋ ಅನ್ಯದ್ ಅನ್ಯದ್ ಇದ್, ಯಾಚಕಾರ ವಯುನಾ ಬ್ರಹ್ಮಣಸ್ಪತಿಃ = ಕೆಲವು ನಿತ್ಯ ಪ್ರಪಂಚಗಳು (ಸತ್ತಾಸ್ಥಿತಿಗಳು) ಇವೇ ಆಗಿವೆ ; ಇವು ಹೊಸದಾಗಿ ಹುಟ್ಟಬೇಕಾಗಿವೆ. ಇವುಗಳ ಬಾಗಿಲುಗಳು ತಿಂಗಳು - ವರುಷಗಳಿಂದ ನಿಮಗೆ ಕಾಣದಂತೆ ಮುಚ್ಚಲ್ಪಟ್ಟಿವೆ.[೧] ಯತ್ನರಹಿತವಾಗಿ ಒಂದು ಲೋಕ ಇನ್ನೊಂದರೊಳಹೊಗುತ್ತದೆ. ಇದನ್ನೇ ಬ್ರಹ್ಮಣ ಸ್ಪತಿಯು ನಮ್ಮ ಜ್ಞಾನದಲ್ಲಿ ಮೂಡುವಂತೆ ಮಾಡಿದುದು." ಗುಹೆಯಲ್ಲಡಗಿದ ನಾಲ್ಕು ಸಾರ್ವಕಾಲಿಕ ಜಗಗಳು - ಇವು ಗುಪ್ತ, ಅಪ್ರಕಟಿತ- ಸಾಮಾನ್ಯ ಮನುಷ್ಯ ಬುದ್ಧಿಗೆ, ಇವು ಇರವಿನ ಅತಿಮಾನಸ ಅಂಶಗಳು; ಇವೇ "ವಯುನಾ" = ಜ್ಞಾನ. ಬ್ರಹ್ಮಣಸ್ಪತಿ ನಿರ್ಮಿಸಿದ ಭೂ-ಸ್ವರ್ಗಗಳಿಂದ ಇದು ವಿಭಕ್ತವಾಗಿದೆ. ಈ ಜ್ಞಾನ ಭಾಗಗಳು ("ಸನಾಭುವನಾ") ತಮ್ಮಷ್ಟಕ್ಕೆ ಸಾರ್ವಕಾಲಿಕವಾದರೂ ನಮಗೆ ಮಾತ್ರ ಅಭಾವಾತ್ಮಕ ಮತ್ತು ಮುಂದೆ ಭಾವಿತವಾಗ ಬಲ್ಲಂಥವುಗಳು. ಅವನ್ನು ಅಸ್ತಿತ್ವಕ್ಕೆ ಮುಂದೆ ನಾವು ತಂದುಕೊಳ್ಳಬೇಕಾಗಿದೆ ("ಭವಿತ್ವಾ"). ಅವನ್ನಿನ್ನೂ ಸೃಜಿಸಬೇಕಾಗಿದೆ. ಆದುದರಿಂದಲೇ ವೇದವು ಕೆಲವು ಸಲ ಇಂಥ ಸತ್ತಾಲೋಕವನ್ನು ಇಲ್ಲಿ ಹೇಳಿದಂತೆ ("ವ್ಯಚಕ್ಷಯತ್ ಸ್ವಃ - II.24.3) "ಸ್ವರ್ ಸ್ಥಿತಿಯನ್ನು ದರ್ಶನಾರ್ಹವನ್ನಾಗಿ ಮಾಡಲಾಯಿತು ; ಅಥವಾ "ಹುಡುಕಿ ತೆಗೆದು ವಶಪಡಿಸಿಕೊಳ್ಳಲಾಯಿತು- ಅವಿದತ್, ಅಸನತ್ -ಕೆಲವೆಡೆ, "ಇದನ್ನು ಸೃಷ್ಟಿಸಲಾಯಿತು, ಮಾಡಲಾಯಿತು - ("ಭೂ, ಕೃ") - ಎಂದು ಮುಂತಾಗಿ ವೇದವು ಹೇಳುತ್ತದೆ. ಈ ಗುಪ್ತ ನಿತ್ಯಲೋಕಗಳು ನಮ್ಮ ಕಣ್ಮರೆಯಾಗಿವೆ. -ಋಷಿ ಹೇಳುತ್ತಾನೆ - ಕಾಲವೇ ಅದಕ್ಕೆ ಕಾರಣವೆನ್ನುತ್ತಾನೆ; ಕಾಲವು ತಿಂಗಳು, ವರ್ಷ ಮುಂತಾಗಿ ವಿಭಕ್ತವಾಗಿದೆ. ಆದುದರಿಂದ ಸ್ವಾಭಾವಿಕವಾಗಿ ನಾವವುಗಳನ್ನು ಹುಡುಕಿ ತೆಗೆಯಬೇಕು, ಆವಿರ್‌ಭವಿಸುವಂತೆ ಮಾಡಬೇಕು, ಗೆಲ್ಲಬೇಕು, ಸೃಜಿಸಬೇಕು. ಯಾರಲ್ಲಿ? ನಮ್ಮೊಳಗಿನೊಳಗೇ ! ಕಾಲದ ಚಲನದ ಮೂಲಕವಾಗಿಯೇ! ಒಂದು ದೃಷ್ಟಿಯಿಂದ ಕಾಲದ ವಿರುದ್ಧವಾಗಿ ಎನ್ನಬೇಕಾಗುತ್ತದೆ. ಯಾಜ್ಞಿಕ ವರ್ಷದಿಂದಲೂ ಹತ್ತು ತಿಂಗಳುಗಳಿಂದಲೂ "ಬ್ರಹ್ಮ" (ಆತ್ಮ) ಸೂಕ್ತದ ಶಕ್ತಿಯು ಅವುಗಳನ್ನು ತೋರಿಸುವ ಮೊದಲು ನಮ್ಮಲ್ಲಿ ಆಗಬೇಕಾದ ವಿಕಾಸವನ್ನೇ, ಮಾನಸ ಶಾಸ್ತ್ರೀಯ ಕಾಲಗಣನೆಯಂತೆ ನಡೆಯಬೇಕಾದ ಸ್ವಪರಿವರ್ತನವನ್ನೇ ಯಾಜ್ಞಿಕ ಕಾಲಮಾನವು ಸಂಕೇತಿಸುತ್ತದೆ ಎಂದು ನನಗೆ ತೋರುತ್ತದೆ. ಅನಂತರ (ಯಜ್ಞದ ಅಂತ್ಯದೆಶೆಯಲ್ಲಿ) ಸಪ್ತ ಶಿರಸ್ಸುಗಳನ್ನುಳ್ಳ ಸ್ವರ್ಗಜಯಿಯಾದ ವಿಚಾರಸ್ತರವನ್ನು (ಪ್ರಜ್ಞಾಸ್ತರವನ್ನು) ನಾವು ಮುಟ್ಟಿ ಕೊನೆಯದಾಗಿ ವೃತ್ರ-ಪಣಿಗಳಿಂದ ಸದಾ ಸಂಭವಿಸುವ ತೊಂದರೆಗಳಿಂದ ಮುಕ್ತರಾಗುತ್ತೇವೆ.

I.62.4. ರಲ್ಲಿ ನದಿಗಳಿಗೂ ಲೋಕಗಳಿಗೂ ಇರುವ ಸಂಬಂಧವನ್ನು ಸ್ಪಷ್ಟವಾಗಿ ಕಾಣುತ್ತೇವೆ. ಅದರಲ್ಲಿ ಇಂದ್ರನು ಬೆಟ್ಟವನ್ನು ಒಡೆದು (ಅದರಲ್ಲಿ ನವಗ್ವರ ನೆರವನ್ನು ಪಡೆದು) ಅನಂತರ ದಶಗ್ವರ ನೆರವಿನಿಂದ ವಲನನ್ನು ಭೇದಿಸಿ, ಅಂಗಿರಸ ಋಷಿಗಳ ಸೂಕ್ತಗಾನದಿಂದ ಉತ್ತೇಜಿತನಾಗಿ ಉಷೆ, ಸೂರ್ಯ, ಧೇನುಗಳನ್ನು ತೆರೆದು ಹೊರಬಿಟ್ಟನು; ಅವನು ಭೌಮ ಅಧಿತ್ಯಕೆಯನ್ನು (ತಪ್ಪಲುಗಳನ್ನು)

೧. ಸಾಯಣಾನುಸಾರ ಬಾಗಿಲುಗಳು ತೆರೆದಿವೆ. ಆದರೆ "ವೃ" ಎಂದರೆ ಸಾಮಾನ್ಯವಾಗಿ ಮುಚ್ಚು ಎಂದರ್ಥ. ಅದರಲ್ಲೂ ಬಾಗಿಲುಗಳಿಗೆ ಅನ್ವಯಿಸಿದಾಗ ವಿವರಣ - ಅಪವರಣಗಳೆಂದರೆ ಮಾತ್ರ ತೆರೆ ಎಂದರ್ಥ. ಗುಡ್ಡದ ಬಾಗಿಲು ಮುಚ್ಚಿತ್ತು ಮತ್ತು ಅದನ್ನು ತೆರೆದಾಗ ನದಿಗಳೂ ಗೋಗಳೂ ಹೊರಬರುತ್ತವೆ. ಹೀಗಿದ್ದರೂ "ವೃ" ಎಂದರೆ "ತೆರೆ" ಎಂಬುದೇ ನಿಜವಾದರೆ ನಮ್ಮ ಅರ್ಥವಿವರಣೆ ಮತ್ತಷ್ಟು (ಈ ಸಂದರ್ಭದಲ್ಲಿ) ದೃಢಪಡುತ್ತದೆ.

ಅಗಲ ಮಾಡಿ ಹಬ್ಬಿಸಿ ಉಚ್ಚ ಸ್ವರ್ಗಲೋಕವನ್ನು ಎತ್ತಿ ಹಿಡಿದನು. ಇದರ ಅರ್ಥವೇನೆಂದರೆ, ಇಂದ್ರನು ಪ್ರಜ್ಞೆಯ ಉತ್ತರೋತ್ತರ ಸ್ತರಗಳನ್ನು ಜಾಗರಿತಗೊಳಿಸಿ ಅರ್ಥಾತ್ ಭೌತ ಪ್ರಜ್ಞೆಯನ್ನು (ಅನ್ನಮಯಕೋಶವನ್ನು) ಇನ್ನೂ ಹೆಚ್ಚಾಗಿ ವಿಸ್ತರಿಸಿದನು. ಅದರ ಪರಿಣಾಮವೆಂದರೆ, ಆ ಪ್ರಜ್ಞೆಯನ್ನು ಮಾನಸದ ಎತ್ತರಕ್ಕೆ (ಮನೋಮಯಕೋಶಕ್ಕೆ) ಏರಿಸಿದನು. ನೋಧ ಋಷಿಯು ಹೇಳಿದನು : "ಇದು ನಿಜವಾಗಿ ಇಂದ್ರನ ಬಲಿಷ್ಠ ಕಾರ್ಯ, ಸಾಧಕನ ಅತ್ಯಂತ ನ್ಯಾಯವಾದ ಸಾಧನೆ=ದಸ್ಮಸ್ಯ ಚಾರುತಮಂ ಅಸ್ತಿದಂಸಃ :" ಎಂದೂ ಮೇಲಿನ ನಾಲ್ಕು ನದಿಗಳು ಮಧುವನ್ನು ಸುರಿಸುತ್ತಾ ವಕ್ರವಾದ ಇಜ್ಜಗವನ್ನು ಪೋಷಿಸಿದವು - ಉಪಹ್ವರೇ ಯದ್ ಉಪರಾ ಅಪಿನ್ವನ್ ಮಧ್ವರ್ಣಸೋ ನದ್ಯಃ ಚತಸ್ರಃ (I.62.6) ಇದೇ ಕೆಳ ಮುಖವಾಗಿ ಜೇನು ಸುರಿಸುವ ಸಮಗ್ರಧಾರಾ ಪ್ರವಾಹದ ಕೂಪ (ಬಾವಿ). ಇದರ ತಾತ್ಪರ್ಯವೆಂದರೆ ದಿವ್ಯ ಸತ್ತೆಯ ಮೇಲಿನ ನಾಲ್ಕು ನದಿಗಳು= ದಿವ್ಯ ಪ್ರಜ್ಞಾ ಪ್ರಮೋದ, ದಿವ್ಯ ಆನಂದ, ದಿವ್ಯ ಸತ್ಯ ಎಂಬುದು ಎರಡು ಜಗಗಳನ್ನು ಪೋಷಿಸಿತೆಂದರೆ ಮನ-ದೇಹಗಳನ್ನು ಹೊರೆಯಿತು ಎಂದರ್ಥ. ಹೇಗೆ? ಅವುಗಳೊಳಗೆ ತಮ್ಮ ಮಾಧುರ್ಯ ಪ್ರವಾಹಗಳಿಂದ ಹೊಕ್ಕು. ಮನೋದೇಹಗಳು ದ್ಯಾವಾ ಮತ್ತು ಪೃಥಿವಿಗಳಿಂದ ಸಂಕೇತಿತ. ಈ (ರೋದಸೀ) ಇಜ್ಜಗಗಳು ಸಾಮಾನ್ಯವಾಗಿ ವಕ್ರತ್ವಲಾಂಛಿತ=ಅಸತ್ಯ-ಋತಂ=ಸತ್ಯ ಎಂಬುದು ಋಜು (ನೇರ) : ಅನೃತಂ=ವಕ್ರವಾದ ಸುಳ್ಳು. ಏಕೆಂದರೆ ಈ ಎರಡು ಲೋಕಗಳು ಅದಿವ್ಯ ಶಕ್ತಿಗಳಾದ ವೃತ್ರ-ಪಣಿಗಳ ಹಾನಿಕಾರಕತೆಗೆ ಪಾತ್ರವಾದಂಥವುಗಳು ; ವೃತ್ರ ಪಣಿಗಳು ಅಂಧಕಾರದ ಮಕ್ಕಳು. ಅವೀಗ ಸತ್ಯದ ಸ್ವರೂಪವನ್ನು ತಾಳುವುವು - ಸತ್ಯವಾಗಿ ಮಾರ್ಪಡುವುವು ; ಸತ್ಯವು ಜ್ಞಾನ= "ವಯುನಾ". ಆದ್ದರಿಂದ ಅದು ಇತರ ಕಾರ್ಯಗಳೊಡನೆ ಹೊಂದಿಕೊಳ್ಳುತ್ತದೆ. ಇದೇ ಗೃತ್ಸಮದನ, "ಚರತೋ ಅನ್ಯದ್" ಮತ್ತು "ಯಾ ಚಕಾರ ವಯುನಾ ಬ್ರಹ್ಮಣ ಸ್ಪತಿಃ" ಮಾತಿನ ಸಾರಾಂಶ. ಆಮೇಲೆ ಋಷಿಯು ಅಯಸ್ಯನ ಕಾರ್ಯದ ಪರಿಣಾಮವನ್ನು ನಿಷ್ಕರ್ಷಿಸುತ್ತಾನೆ, ಅದರ ಲಕ್ಷಣವನ್ನು ಹೇಳುತ್ತಾನೆ - ಆ ಲಕ್ಷಣವಾದರೋ ಭೂ-ಸ್ವರ್ಗಲೋಕಗಳ ನಿಜವಾದ ನಿತ್ಯ ಐಕ್ಯವನ್ನು ಆಶ್ಚರ್ಯಕರವಾಗಿ ಹೊರಗೆಡಹುವುದೇ ಆಗಿದೆ. "ಅವುಗಳ ದ್ವಿಮುಖದಲ್ಲಿ (ದಿವ್ಯ ಮತ್ತು ಮಾನುಷ?) ಅಯಸ್ಯನು ತನ್ನ ಸೂಕ್ತಗಳಿಂದ ಒಂದೇ ಗೂಡಿನಲ್ಲಿರುವ ಎರಡು ನಿತ್ಯ ಪದಾರ್ಥಗಳನ್ನು ಬಹಿರಂಗಪಡಿಸಿದನು, ಬುರುಕಿ ತೆಗೆದು ತೋರಿಸಿದನು. ಇದನ್ನು ಪೂರ್ಣವಾಗಿ ಸಾಧಿಸಿದ ಮೇಲೆ ಆತನು (ಪರಮವ್ಯೋಮ ಸ್ವರೂಪದ ಅತಿಮಾನಸದ) ಭೂಮಿ-ಸ್ವರ್ಗಗಳನ್ನು ಆಕಾಶದಲ್ಲಿ ಎತ್ತಿ ಹಿಡಿದನು. ಆಗ ಅವನು ಪತ್ನೀದ್ವಯವುಳ್ಳವನ ಭೋಗ ಸುಖವನ್ನು ಅನುಭವಿಸಿದವನಂತಾದ (I.62.7) ಜೀವಾತ್ಮನು ಆಧ್ಯಾತ್ಮಿಕ ಸತ್ತೆಯ ನಿತ್ಯಸಂತೋಷದಲ್ಲಿ ಅವನ ದಿವ್ಯೀಕೃತ ಮಾನಸಿಕ ಹಾಗೂ ದೈಹಿಕ ಅಸ್ತಿತ್ವವು ಉನ್ನತೀಕರಿಸಲ್ಪಟ್ಟದ್ದನ್ನು ಅನುಭವಿಸುವ ವಿಧವನ್ನು ಇದಕ್ಕಿಂತ ಹೆಚ್ಚು ಚೆನ್ನಾದ ರೂಪಕೋಕ್ತಿಯಿಂದ (ಪ್ರತಿಮೋಕ್ತಿಯಿಂದ) ಯಾರೂ ಇನ್ನೂ ಸ್ಪಷ್ಟವಾಗಿ ಹೇಳಲಾರರು.

ಈ ಕಲ್ಪನೆಗಳೂ ಇತರ ಹಲವಾರು ಅಭಿವ್ಯಕ್ತಿಗಳೂ (ಹೇಳಿಕೆಗಳೂ) ಗೃತ್ಸಮದನ ಸೂಕ್ತೋಕ್ತಿಗಿಂತ ಭಿನ್ನವಲ್ಲವೇ ಅಲ್ಲ ; ತತ್ಸಮವೇ ಆಗಿವೆ. ನೋಧನು ಈ ಕೆಳಗಿನಂತೆ ಹೇಳಿದ್ದಾನೆ : ರಾತ್ರಿ -ದಿವಸಗಳೆಂದರೆ ಕಪ್ಪಾದ ಭೌತಪ್ರಜ್ಞೆ ಮತ್ತು ಜ್ಯೋತಿಃಪ್ರಕಾಶಿತ ಮಾನಸಪ್ರಜ್ಞೆ, ಅವು "ಪುನರ್ಭುವಾ" - ಹೊಸದಾಗಿ ಹುಟ್ಟಿದಂಥವು. - ಸ್ವರ್ಗ ಮತ್ತು ಭೂಮಿಗಳ ನಡುವೆ. ಅವು ಪರಸ್ಪರ ಒಳಹೊಗುತ್ತವೆ. ಅವುಗಳಿಗೆ ತಕ್ಕ ಚಲನ ಅವುಗಳಿಗಿವೆ.- "ಸ್ವೇಭಿರ್ ಏವೈಃ..............

ಚರತೋ ಅನ್ಯಾನ್ಯಾ (I.62.8.)[೧] ಅವರ ಮಗ ಸಾಧಿಸಿದ ಮಹತ್ಕಾರ್ಯ ಆ ಚಲನಕ್ಕಾಧಾರ. ಅವನು ಅವರನ್ನು ಎತ್ತಿ ಹಿಡಿಯುವುದು ಹೀಗೇ- "ಸನೇಮಿ ಸಖ್ಯಂ ಸ್ವಪಸ್ಯಮಾನಾಃ ಸೂನುರ್ ದಾಧಾರ ಶವಸಾ ಸುದಂ ಸಾಃ (I.62.9) ನೋಧನ ಸೂಕ್ತದಲ್ಲಿರುವಂತೆಯೇ ಗೃತ್ಸಮದನ ಸೂಕ್ತದಲ್ಲಿಯೂ ಅಂಗಿರಸರು ಸ್ವರ್‌ಲೋಕಕ್ಕೆ ಹೋದವರು. ಸ್ವರ್ = ಅವರು ಮೊದಲು ಎಲ್ಲಿಂದ ಬಂದರೋ ಆ ಪರಮಸತ್ಯ=ಅವರ ಮನೆ - ದಿವ್ಯ ಪುರುಷರೆಲ್ಲರ ಮನೆ. ಅಲ್ಲಿಗೆ ಹೋಗಲು ಅವರು ಮಾಡುವುದು ಸತ್ಯಸಾಧನೆಯನ್ನು ಮತ್ತು ಅಸತ್ಯ ಸಂಶೋಧನವನ್ನು. "ಯಾರು ಗುರಿಯತ್ತ ಪಯಣಿಸುವರೋ ಮತ್ತು ಪಣಿಗಳ ಗೂಢ ಗುಹೆಯಲ್ಲಿ ಅವಿತಿದ್ದ ಸಂಪತ್ತನ್ನು ಪಡೆಯುವರೋ - ಆ ಸಂಪತ್ತು ಅತಿ ಹೆಚ್ಚಿನದಾದ್ದರಿಂದ ಮತ್ತು ಗುಪ್ತ ಗುಹೆಯಲ್ಲಿ ಅವಿತಿಡಲ್ಪಟ್ಟದ್ದರಿಂದ - ಅವರು ಜ್ಞಾನಿಗಳಾಗಿ ಅಸತ್ಯವನ್ನು ಕಂಡುಹಿಡಿದು, ಮತ್ತೆ ತಾವು ಮೊದಲು ಎಲ್ಲಿಂದ ಇಲ್ಲಿಗೆ ಬಂದರೋ, ಈ ಪ್ರಪಂಚದೊಳಹೊಗುತ್ತಾರೆ, ಆ ಮೂಲಸ್ಥಳಕ್ಕೆ ಏರುತ್ತಾರೆ. ಸತ್ಯವಂತರಾದ ಅವರು, ಅಸತ್ಯವನ್ನು ನೋಡಿದ ಅವರು ಋಷಿಗಳು, ದ್ರಷ್ಟಾರರು, ಮತ್ತೆ ಆ ಮಹಾಯಾನಕ್ಕೆ ಏರುತ್ತಾರೆ - ಮಹಸ್‌ಪಥಃ (II.24.6,7) ಅದು ಸತ್ಯಪಥ ಯಾ ಮಹತ್ತಾದ ಹಾಗೂ ವಿಶಾಲವಾದ ರಾಜ್ಯ- ಉಪನಿಷತ್ತಿನ ಮಹರ್‌ಲೋಕ.

ವೇದದ ಈ ರೂಪಕ ಮಾಲೆಯ ಯಾ ಪ್ರತಿಮಾವಳಿಯ ಮುಸುಕಿನಿಂದ ಹೊರಬರೋಣ. ಸಪ್ತಾಂಶುವಾದ ಚಿಂತಕನೆಂದರೆ ಬೃಹಸ್ಪತಿ - ಸಪ್ತಗುಃ, ಸಪ್ತರಶ್ಮಿಃ-ಅವನೇ ಸಪ್ತಮುಖದ ಯಾ ಏಳುಬಾಯಿಗಳನ್ನುಳ್ಳ ಅಂಗಿರಸ - ಬಹುರೂಪ ಕಿರಣಗಳನ್ನುಳ್ಳವನು. ಆ ಏಳು ಮುಖಗಳು ಏಳು ಜನ ಅಂಗಿರಸರು, ದಿವ್ಯಶಬ್ದವನ್ನು (ಮಂತ್ರವನ್ನು, ಬ್ರಹ್ಮಾವನ್ನು) ಪುನಃ ಪುನಃ ಉಚ್ಚರಿಸುವವರು- ಆ ಶಬ್ದವೋ ಪರಮಸತ್ಯದ ಪದದಿಂದ ಬರುತ್ತದೆ, ಸ್ವರ್‌ನಿಂದ ಬರುತ್ತದೆ ; ಆ ಮಂತ್ರಶಬ್ದಕ್ಕೆ ಬ್ರಹ್ಮಣಸ್ಪತಿಯು ಒಡೆಯನು : ಬಹ್ಮಣಸ್ಪತಿ=ಬ್ರಹ್ಮಕ್ಕೆ, ಮಂತ್ರಕ್ಕೆ, ಒಡೆಯ. ಪ್ರತಿಯೊಬ್ಬ ಅಂಗಿರಸನೂ ಬೃಹಸ್ಪತಿಯ ಏಳು ಕಿರಣಗಳಿಗೆ ಒಬ್ಬೊಬ್ಬನಂತೆ ಹೊಂದುತ್ತಾನೆ. ಆದ್ದರಿಂದ ಅವರು "ಸಪ್ತವಿಪ್ರಾಃ=ಸಪ್ತದ್ರಷ್ಟಾರರು, ಸಪ್ತಋಷಿಗಳು (ಸಪ್ತರ್ಷಯಃ)". ಅವರಲ್ಲಿ ಪ್ರತಿಯೊಬ್ಬನೂ ಬೃಹಸ್ಪತಿಯ ಸಪ್ತಕಿರಣಗಳ ಮೂರ್ತೀಕರಣದಿಂದಾದವನು. ಅನಂತರ ಈ ಕಿರಣಗಳು ಸೂರ್ಯನ ಸಪ್ತಾಶ್ವಗಳು. ("ಸಪ್ತಹರಿತ":). ಅವುಗಳ ಪೂರ್ಣ ಸಾತ್ತ್ವಭಾವವು ಕಳೆದು ಹೋಗಿದ್ದ ಸತ್ಯ ಸೂರ್ಯನ ಪುನರ್ಲಾಭಕ್ಕೆ ಕಾರಣವಾದ ಅಯಸ್ಯೋಕ್ತ ಸಪ್ತಶೀರ್ಷವಿಚಾರ (ಸ್ಥಳ, ನೆಲೆ, ಸ್ತರ, ಹಂತ). ಆ ವಿಚಾರವು ಪುನಃ ಸಪ್ತ ನದಿಗಳಲ್ಲಿ ಸಂಸ್ಥಾಪಿತವಾಗಿದೆ. ಈ ಸಪ್ತ ನದಿಗಳು ಬಾಳಿನ ಸಪ್ತತತ್ವಗಳು, ದಿವ್ಯ-ಮಾನವ್ಯ ಜೀವನದ (ಇರುವಿಕೆಯ) ನಿಯಮಗಳು. ಅವುಗಳ ಮೊತ್ತವು ಪೂರ್ಣ ಆಧ್ಯಾತ್ಮಿಕ ಸತ್ತೆಯನ್ನು ಪ್ರತಿಷ್ಠಾಪಿಸುತ್ತವೆ. ನಮ್ಮಲ್ಲಿರುವ ದಿವ್ಯ ಮೂಲದ್ರವ್ಯಗಳಿಂದ-ವೃತ್ರಾಕ್ರಾಂತ ಸಪ್ತ ಸಿಂಧುಗಳನ್ನು ಗೆದ್ದುಕೊಳ್ಳುವುದು, ವಲಮುಷ್ಟಿಬದ್ಧ ಏಳು ಕಿರಣಗಳನ್ನು ಬಿಡಿಸಿಕೊಂಡು ಬರುವುದು, ಸತ್ಯದ ಮುಕ್ತಾವತಾರದಿಂದ ಅನೃತ ಮುಕ್ತವಾದ (ಅಸತ್ಯ ಮುಕ್ತವಾದ) ಪರಿಪೂರ್ಣ ದಿವ್ಯಪ್ರಜ್ಞೆಯನ್ನು

---

೧. ಹೋಲಿಸಿರಿ. ಗೃತ್ಸಮದನ "ಅಯತಂತಾ ಚರತೋ ಅನ್ಯದ್ ಅನ್ಯದ್ = ಸ್ವೇಚಿರೇವೈಃ= ಸ್ವಯಂಸ್ಫೂರ್ತಿಯಿಂದ."

ಈ ಮತ್ತು ಇತರ ಉಪಚ್ಛೇದಗಳು ನನಗೆ ತೋರುವಂತೆ ಸ್ಪಷ್ಟವಾಗಿಯೂ ನಿರ್ಣಾಯಕವಾಗಿಯೂ "ಅನ್ಯದನ್ಯದ್" ಎಂದಾಗ ಅವುಗಳು ಯಾವಾಗಲೂ ಭೂಮಿ ಮತ್ತು ಸ್ವರ್ಗಗಳು ಮಾನವ ಪ್ರಜ್ಞಾಸ್ತರಗಳ ಪ್ರಕಾರ ಭೌತಪ್ರಜ್ಞೆ ಮತ್ತು ಭೌತೋತ್ತರ ಸ್ವರ್ಗವನ್ನಾಧರಿಸಿದ ದೇವತೆ.

ಪಡೆಯುವುದು, ಅದರಿಂದ ನಾವು ಸ್ವರ್ಲೋಕದ ಮೇಲಿನ ಸುರಕ್ಷಿತ ಪ್ರಭುತ್ವವನ್ನು ಹೊಂದುವುದು ಮತ್ತು ಅಂಧಕಾರದ ಮೇಲಿನ ದೇವತ್ವಕ್ಕೆ ಎತ್ತಿ ನಿಲ್ಲಿಸಲಾದ ನಮ್ಮ ಮನೋದೈಹಿಕ ಅಸ್ತಿತ್ವವನ್ನು ಸುಖದಿಂದ ಅನುಭವಿಸುವುದು-ಇವೇ ಆನುಕ್ರಮಿಕ ಸಿದ್ಧಿಸೋಪಾನಗಳು. ಯಾಜ್ಞಿಕ ವರ್ಷದ ೧೨ ತಿಂಗಳುಗಳ ಅವಧಿಯಲ್ಲಿ ಈ ಜಯವನ್ನು ಸಂಪಾದಿಸಲಾಯಿತು. ವಿಸ್ತೃತ ವಿಸ್ತೃತತರವಾದ ೧೨ ತಿಂಗಳುಗಳ ಚಕ್ರಗತಿಯ ಪ್ರಾತಿನಿಧ್ಯದಲ್ಲಿ ಒಂದಾದ ಮೇಲೊಂದನ್ನೇರಿ ಊರ್ಧ್ವ ಮಾರ್ಗಗಾಮಿಗಳಾದ ನಾವು ೧೨ ನೆಯ ತಿಂಗಳ ಅಂತ್ಯದಲ್ಲಿ ಸ್ವರ್‌ಪ್ರಭುಗಳಾಗುವೆವು. ಈ ೧೨ ತಿಂಗಳುಗಳು ವಿಸ್ತೃತ ವಿಸ್ತೃತತರವಾಗುತ್ತಾ ಹೋಗುವ ಸತ್ಯದ ಉತ್ತರೋತ್ತರೋದಯದ ಉಷಃ ಕಾಲಗಳಲ್ಲಿಯ ೧೦ ನೆಯ ಉಷೋದಯಕ್ಕೆ ಸಮಾನ ; ೧೦ ನೆಯ ಉಷಾಂತದಲ್ಲಿ ನಮಗೆ ಸ್ವರ್ಲೋಕದ ಮೇಲಿನ ಪ್ರಭುತ್ವವು ಲಭ್ಯ. ೯ ಮತ್ತು ೧೦ ಕಿರಣಗಳ ತಥಾಗತಾರ್ಥವು ಏನೆಂದು ಹೇಳುವುದು ಈಗ ಕಷ್ಟವಾದರೂ ನಾವೀಗಾಗಲೇ ಕಂಡ ಬೆಳಕು ಋಗ್ವೇದದ ಎಲ್ಲಾ ಮುಖ್ಯ (ಪ್ರತಿಮಾಪಕ) ಪ್ರತಿಮಾವಳಿಯ ಮೇಲೂ ಬೆಳಕು ಬೀರಬಲ್ಲುದು.

ವೇದದ ಸಾಂಕೇತಿಕತೆಯು ಮಾನವ ಜೀವನವೊಂದು ಯಜ್ಞ, ಪ್ರವಾಸ ಅಥವಾ ಯುದ್ಧ ಎಂಬ ಪ್ರತಿಮಾನದ (ಪ್ರತಿಮೆಯ) ಮೇಲೆ ನಿಂತಿದೆ. ಮಾನವ ಜೀವನವನ್ನು ಪ್ರಾಚೀನ ಯೋಗಿಗಳು ತಮ್ಮ ಮಂತ್ರದ ಕಥಾವಸ್ತುವನ್ನಾಗಿ ತೆಗೆದುಕೊಂಡರು. ಆದರೆ ತಮಗದನ್ನು ಸ್ಥೂಲ ವಾಸ್ತವಿಕ ಪದಾರ್ಥವನ್ನಾಗಿ ಮಾಡಿಕೊಳ್ಳಲೆಂದೂ ಅಪಾತ್ರರಿಗೆ ಗೊತ್ತಾಗಬಾರದೆಂದೂ ಅದಕ್ಕೆ ಪ್ರಚ್ಛನ್ನರೂಪವನ್ನು ಕೊಡ ಹೊರಟು ತಮ್ಮ ಕಾಲದ ಬಾಹ್ಯ ಜೀವನದಿಂದ ಎತ್ತಿಕೊಂಡ ಕಾವ್ಯ ಪ್ರತಿಮೆಗಳನ್ನು - ಉಪಮಾದ್ಯಲಂಕಾರಗಳನ್ನು ಬಳಸಿ ಅಭಿವ್ಯಂಜಿಸಿದರು. ಜನಸ್ತೋಮದ ಜೀವನವು ಅಂದು ಕೃಷಿಗೋರಕ್ಷೆ (ವಾಣಿಜ್ಯ)ಗಳಿಂದಲೇ ಹೆಚ್ಚಾಗಿ ನಡೆಯುತ್ತಿತ್ತು. ಅದು ಯುದ್ಧಗಳಿಂದಲೂ ಬೇರೆ ಬೇರೆ ಅರಸರ ಆಡಳಿತದಲ್ಲಿಯೂ ವಿವಿಧ ಕುಲಗಳ ಜನ ವಲಸೆ ಬರುವುದರಿಂದಲೂ ಆಗಾಗ ವೈವಿಧ್ಯವನ್ನು ತಾಳುತ್ತಿತ್ತು. ಈಯೆಲ್ಲವುಗಳನ್ನು ಒಗ್ಗಂಟಾಗಿ ಹಿಡಿದಿಟ್ಟದ್ದು ಯಾಜ್ಞಿಕ ದೇವತಾರಾಧನೆ ; ಅದು ಅತ್ಯಂತ ಗಂಭೀರವೂ ವೈಭವೋಪೇತವೂ ಆಗಿತ್ತು. ಏಕೆಂದರೆ, ಯಜ್ಞದಿಂದ - ಅಂದಿನ ಸಂಘಟನೆಯಲ್ಲಿ ಶಿಥಿಲವಾದ ಅಂತಃಕುಲೀನ ಜೀವನದಲ್ಲಿ - ನೆಲವನ್ನು ಫಲವತ್ತನ್ನಾಗಿ ಮಾಡುವ ಮಳೆಯನ್ನು, ಯುದ್ಧ-ಶಾಂತಿಕಾಲಗಳೆರಡರಲ್ಲೂ ಜನರಿಗೆ ಅಗತ್ಯವಾಗಿದ್ದ ದನಕರುಗಳನ್ನೂ, ಕುದುರೆಗಳನ್ನೂ, ಚಿನ್ನದ ಸಂಪತ್ತನ್ನು, ಗದ್ದೆಗಳನ್ನು ("ಕ್ಷೇತ್ರ") ಪರಿವಾರದವರನ್ನು, ಯೋಧರನ್ನು, ಅವರಿಂದ ಲಭಿಸುವ ದೊಡ್ಡಸ್ತಿಕೆ ಮತ್ತು ಪ್ರಭುತ್ವಗಳನ್ನು, ಯುದ್ಧವಿಜಯವನ್ನು, ಸಂಪರ್ಕಸಾಧನಗಳು ಬಹಳ ಬಡವಾಗಿದ್ದ ಅಂದಿನ ಕಾಲದಲ್ಲಿ ಅಪಾಯಕರ ಹಾಗೂ ಕಷ್ಟಕರ ಜಲಯಾನ ಭೂಯಾನಗಳಲ್ಲಿಯ ಸುರಕ್ಷಿತತೆಯನ್ನು ಪಡೆಯಬಹುದೆಂಬುದು ನಂಬಿಕೆಯಾಗಿತ್ತು. ಆ ಬಾಹ್ಯಜೀವನದ ಎಲ್ಲ ಮುಖ್ಯ ನಿಯಮಗಳನ್ನು ತಮ್ಮ ಸುತ್ತಲೂ ಕಂಡ ಯೋಗಿಗಳು, ವೇದಕವಿಗಳು, ಗ್ರಹಿಸಿಕೊಂಡು ಆ ಮುಖ್ಯ ಲಕ್ಷಣಗಳನ್ನು ಮಾನವನ ಅಂತರ್ಜೀವನದ ಅರ್ಥಪೂರ್ಣ ಪ್ರತಿಮೆಗಳನ್ನಾಗಿ, ಪ್ರತೀಕಗಳನ್ನಾಗಿ ಬಳಸಿಕೊಂಡರು. ಮಾನವ ಜೀವನವೊಂದು ದೇವತಾರ್ಥಕ ಯಜ್ಞ ; ಪ್ರಯಾಣವು ಕೆಲವು ಸಲ ಅಪಾಯಕರ ಜಲಾಶಯಗಳನ್ನು ದಾಟುವುದರಿಂದ ಪ್ರತಿಮಾಪಿತ ; ಮತ್ತೆ ಕೆಲವು ಸಲ ಅದು ಸತ್ತಾಪರ್ವತವನ್ನು ಹಂತಹಂತವಾಗಿ ಏರುವುದಕ್ಕೆ ಸಂಕೇತ ; ಮೂರನೆಯದಾಗಿ, ಶತ್ರುರಾಷ್ಟ್ರಗಳ ವಿರುದ್ಧವಾಗಿ ಮಾಡುವ ಯುದ್ಧವನ್ನೂ ಅದು ಸೂಚಿಸುತ್ತದೆ. ಆದರೆ ಈ ಮೂರು ಪ್ರತಿಮೆಗಳು (ಸಂಕೇತಗಳು) ಎಂದೂ ಪ್ರತ್ಯೇಕವಾಗಿಯೇ ಉಳಿಯುವಂತೆ ಮಾಡಿಲ್ಲ. ಯಜ್ಞವೂ ಒಂದು ಪ್ರಯಾಣ ; ಯಜ್ಞವೇ ಪ್ರವಾಸ ಮಾಡುತ್ತಿದೆ

ಎಂದು ಕೂಡಾ ವರ್ಣಿಸಲಾಗಿದೆ. ಅದು ಮುಟ್ಟುವುದು ಯೋಗಿಗಳ ದಿವ್ಯಧ್ಯೇಯವನ್ನು ; ಮತ್ತು ಪ್ರಯಾಣವನ್ನೂ ಯಜ್ಞವನ್ನೂ ಸತತವಾಗಿ ತಮಃಶಕ್ತಿಗಳ ವಿರುದ್ಧವಾಗಿ ನಡೆಸುವ ಕಾಳಗವೆಂದೂ ವರ್ಣಿಸಲಾಗಿದೆ.

ಅಂಗಿರಸರ ಪುರಾಣ ಕಥೆಯು ವೈದಿಕ ಅಲಂಕಾರೋಕ್ತಿಯ ಈ ಮೂರು ಮುಖ್ಯ ಲಕ್ಷಣಗಳನ್ನೂ ಒಟ್ಟುಗೂಡಿಸಿ ಬಂಧಿಸುತ್ತದೆ. ಅಂಗಿರಸರು ಬೆಳಕಿನ ಯಾತ್ರಿಕರು. "ನಕ್ಷಂತಃ" ಅಥವಾ "ಅಭಿನಕ್ಷಂತಃ" ಎಂಬ ಪದಸಂಹತಿಯು ಯಾವಾಗಲೂ (ಪದೇ ಪದೇ) ಅವರ ಸ್ವರೂಪ ಸಹಜ ಚಟುವಟಿಕೆಯನ್ನು ಬಣ್ಣಿಸಲು ಬಳಸಲ್ಪಡುತ್ತದೆ. ಧ್ಯೇಯೋನ್ಮುಖರಾಗಿ ಪಯಣಿಸಿ ಅತ್ಯುನ್ನತ ದಶೆಯನ್ನು ತಲುಪುವವರು ಅವರು (ಅಂಗಿರಸರು) - "ಅಭಿನಕ್ಷಂತೋ ಅಭಿಯೇ ತಂ ಆನಶುರ್ ನಿಧಿಂ ಪರಮಂ = ಪ್ರಯಾಣ ಮಾಡಿ ಆ ಅತಿ ಹೆಚ್ಚಿನ ಸಂಪತ್ತನ್ನು ಪಡೆದವರು ಅವರು (II.24.6.) ಅವರ ಕಾರ್ಯವು ಅತಿದೂರಸ್ಥ ಮಾನವ ಜೀವನ ಧ್ಯೇಯದತ್ತ ಕೊಂಡೊಯ್ಯಲು ಆಮಂತ್ರಿತವಾದದ್ದು- "ಸಹಸ್ರಸಾವೇ ಪ್ರತಿರಂತ ಆಯುಃ (III.53.7)" ಆದರೆ, ಈ ಪ್ರಯಾಣವು ಮುಖ್ಯವಾಗಿ ಶೋಧಶೀಲವಾದುದಷ್ಟೇ ಆದರೆ, ಗುಪ್ತಜ್ಯೋತಿಯ ಶೋಧವು ಕತ್ತಲಿನ ಶಕ್ತಿಗಳ ವಿರೋಧದಿಂದ ಒಂದು ದಂಡಯಾತ್ರೆಯೂ ಯುದ್ಧವೂ ಆಗಿ ಬಿಡುತ್ತದೆ. ಅಂಗಿರಸರು ವೀರರು, ಯುದ್ಧದ ಯೋಧರು - "ಗೋಷು ಯೋಧಾಃ" = ದನಗಳಿಗಾಗಿ ಅಥವಾ ಕಿರಣಗಳಿಗಾಗಿ ಯುದ್ಧ ಮಾಡುವವರು. ಇಂದ್ರನು ಅವರೊಡನೆ ಹೋಗುತ್ತಾನೆ "ಸರಣ್ಯುಭಿಃ", ಹಾದಿ ಹಿಡಿದು ಹೋಗುವ ಪ್ರಯಾಣಿಕರಾಗಿ "ಸಖಿಭಿಃ" ಜೊತೆಗಾರರೊಡನೆ "ಋಗ್ಮಿಭಿಃ" ಮತ್ತು "ಕವಿಭಿಃ" ಮಂತ್ರದ ದ್ರಷ್ಟಾರರು ಮತ್ತು ಕವಿಗಳು ಮತ್ತು "ಸತ್ವಭಿಃ" ಕಾಳೆಗದಲ್ಲಿ ಯುದ್ಧ ಮಾಡುವವರು - ಇವರೊಡನೆ ಇಂದ್ರ ಹೋಗುವುದು. ಇವರನ್ನು ಪದೇ ಪದೇ "ನೃ" ಎಂದೂ ವೀರರೆಂದೂ - "ಅಸ್ಮಾಕೇಭಿಃನೃಭಿಃ" = ನಮ್ಮ ಜನರೊಡನೆ ಎಂದು ಇಂದ್ರನು ಹೊಳೆವ ವ್ರಜಗಳನ್ನು ಗೆಲ್ಲುವಾಗ ಹೇಳಲಾಗಿದೆ. ಅವರಿಂದ ಬಲ ಪಡೆದು ಅವನು ಪ್ರಯಾಣದಲ್ಲಿ ವಿಜಯಿಯಾಗಿ ಧ್ಯೇಯಪದವನ್ನು ತಲುಪುವನು - 'ನಕ್ಷದ್ದಾಭಂ ತತುರಿಂ". ಈ ಪ್ರಯಾಣ ಯಾ ದಂಡಯಾತ್ರೆಯು ಸರಮೆ ಕಂಡು ಹಿಡಿದ ಮಾರ್ಗದಲ್ಲಿಯೇ ಸಾಗುವುದು. ಸರಮೆಯು ಸ್ವರ್ಗದ ನಾಯಿ ; ಮಾರ್ಗವು ಪರಮ ಸತ್ಯದ್ದು - "ಋತಸ್ಯಪಂಥಾಃ" - ಮಹಾಮಾರ್ಗ= "ಮಹಸ್‌ಪಥಃ" ; ಈ ಮಾರ್ಗವು ಪರಮಸತ್ಯದ ರಾಜ್ಯಗಳಿಗೆ ಒಯ್ಯುತ್ತದೆ. ಇದು ಯಜ್ಞಪ್ರಯಾಣವೂ ಹೌದು. ಏಕೆಂದರೆ ಇದರ ಮಜಲುಗಳು ನವಗ್ವರು ಮಾಡಿದ ಯಜ್ಞದ ಅವಧಿಗಳಿಗೆ ಅನುಗುಣವಾಗಿ ಇವೆ. ಇದನ್ನು ಕಾರ್ಯಕರವನ್ನಾಗಿ ಮಾಡಿದ್ದು ಸೋಮಮದ್ಯ ಮತ್ತು ಪವಿತ್ರಶಬ್ದ (ಮಂತ್ರ).

ಬಲವರ್ಧಕವೆಂದು ಜಯದಾಯಕವೆಂದು ಹಾಗೂ ಸಿದ್ಧಿದವೆಂದು ಸೋಮ ಮದ್ಯವನ್ನು ಕುಡಿಯುವುದು ವೇದದ ಉದ್ದಕ್ಕೂ ಬರುವ ಅಲಂಕಾರೋಕ್ತಿ. ಇಂದ್ರನೂ ಅಶ್ವಿಗಳೂ ಮಹಾಮದ್ಯಪಾಯಿಗಳಾದರೂ ಎಲ್ಲ ದೇವತೆಗಳಿಗೂ ಆ ಮದ್ಯದಲ್ಲಿ ಅವರವರ ಪಾಲು ಇದೆ. ಮದ್ಯದ ಗುಟುಕು ಯಾರಿಗೂ ಇಲ್ಲದೆ ಇಲ್ಲ, ಅಂಗಿರಸರೂ ಮದ್ಯಬಲದಿಂದಲೇ ಗೆಲ್ಲುತ್ತಾರೆ. ಅಯಸ್ಯನೂ ನವಗ್ವ ಅಂಗಿರಸರೂ ಬರುವರೆಂದು ಸರಮೆಯು ಪಣಿಗಳನ್ನು ಹೆದರಿಸುವಾಗ ಅವರು ಸೋಮ ಮದೋನ್ಮತ್ತರಾಗಿ ಬರುವರೆಂದು ಹೇಳುತ್ತಾಳೆ-ಏಹಗಮನ್ ಋಷಯಃ ಸೋಮಶಿತಾ ಅಯಾಸೋ ಅಂಗಿರಸೋ ನವಗ್ವಾಃ (X.108.8) ಪರಮಸತ್ಯದ ಮಾರ್ಗವನ್ನು ಅನುಸರಿಸಿ ಹೋಗುವಾಗ ಮನುಷ್ಯರಿಗೆ ಬಲವನ್ನು ಕೊಡುವ ಪ್ರಣೋದರಸವೆಂದರೆ ಅದೇ ಮದ್ಯ.

"ಹೇ ಇಂದ್ರನೇ, ನೀನು ಸ್ವರ್‌ಲೋಕದ ಬಲಿಷ್ಠನನ್ನು (ಸ್ವರಾತ್ಮನನ್ನು, ಸ್ವರ್ಣದನನ್ನು) ವೃದ್ಧಿಯಾಗುವಂತೆ ಯಾವುದರಿಂದ ಮಾಡಿದೆಯೋ ಆ ಸೋಮಪಾನ ಮದದಿಂದ[೧] ನೀನು ಜ್ಞಾನವನ್ನು ಬೆಳಕನ್ನಾಗಿ ಮಾಡಿದೆಯೋ ಅಥವಾ ಯಾವುದರಿಂದ ನೀನು ಸಾಗರವನ್ನು ಸಂವರ್ಧಿಸಿದೆಯೋ ಮಹಾಜಲವಾದ ಸಪ್ತಸಿಂಧುಗಳನ್ನು ಯಾವ ಸೋಮೋನ್ಮಾದದಿಂದ ರಥಗಳನ್ನು ಅವುಗಳ ಸಮುದ್ರಕ್ಕೆ ಎಳೆದೊಯ್ಯುವಂತೆ ಮುಂದಟ್ಟಿಕೊಂಡು ಹೋದೆಯೋ ಅಂಥ ಸತ್ಯಪಥದಲ್ಲಿ ಹೋಗುವ ಶಕ್ತಿ ನಮಗೆ ಬರಲಿ ಎಂದು ಆ ಸೋಮವನ್ನು ನಾವು ಬಯಸುತ್ತೇವೆ." - "ಪಂಥಾಂ ಋತಸ್ಯ ಯಾತವೇ ತಂ ಈಮಹೇ (VIII.12.2,3) ಸೋಮಬಲದಿಂದಲೇ ಪರ್ವತವನ್ನು ಒಡೆದು ತೆರೆದದ್ದು, ಅದರಿಂದಲೇ ತಮಃ ಪುತ್ರರನ್ನು ಸೋಲಿಸಿದ್ದು. ಈ ಸೋಮಮದ್ಯವೆಂಬುದು ಮೇಲಿನ ಅದೃಶ್ಯಲೋಕದಿಂದ ಪ್ರವಾಹವಾಗಿ ಹರಿದು ಬಂದ ಮಾಧುರ್ಯ ; ಸಪ್ತಸಿಂಧುಗಳಲ್ಲಿ ಹರಿಯುವುದೂ ಇದೇ. ಇದೇ ಘೃತ ಅಥವಾ ತಿಳಿಗೊಳಿಸಲಾದ ಬೆಣ್ಣೆ ಅರ್ಥಾತ್ ಯೌಗಿಕ ಯಜ್ಞಕ್ಕೆ ಸುರಿಯುವ ಆಹುತಿ ಅಂದರೆ ಮೂಲ ಪ್ರವೃತ್ತಿ. ಇದೇ ಮಧುಮಯ ತರಂಗ - ಇದು ಜೀವನ ಸಾಗರದಿಂದ ಏಳುವಂಥದು. ಇಂಥ ರೂಪಕೋಕ್ತಿಗಳಿಗೆಲ್ಲಾ ಒಂದೇ ಒಂದು ಅರ್ಥ - ಅದೆಂದರೆ, ಎಲ್ಲ ಸತ್ತೆಯಲ್ಲೂ ಅಡಗಿರುವ ದಿವ್ಯಾನಂದ ; ಒಮ್ಮೆ ಅದು ಹೊರಹರಿದರೆ ಜೀವನದ ಉನ್ನತ ಚಟುವಟಿಕೆಗಳನ್ನೆಲ್ಲಾ ಬೆಂಬಲಿಸುತ್ತದೆ ಮತ್ತು ಅದೇ ಪ್ರಣೋದನ ಶಕ್ತಿಯು ಮರ್ತ್ಯನನ್ನು ಅಮರ್ತ್ಯತೆಗೇರಿಸುತ್ತದೆ-ಅದೇ "ಅಮೃತಂ" ಅಥವಾ ದೇವತೆಗಳು ಕುಡಿಯುವ ಮಧುರತಮ ಪಾನೀಯ.

ಆದರೆ ಅಂಗಿರಸರ ಹತ್ತಿರ ಇರುವುದು ಶಬ್ದ (ಮಂತ್ರ). ಅವರ ದ್ರಷ್ಟೃತ್ವವೇ ಅವರ ಅವಚ್ಛೇದಕ ಧರ್ಮ (ಪ್ರತ್ಯೇಕಿಸುವ ಗುಣ, ಲಕ್ಷಣ). ಅವರು ಬ್ರಾಹ್ಮಣಾ : ಪಿತರಃ : ಸೋಮ್ಯಾಸಃ ......ಋತಾವೃಧಃ (VI.75.10) ಸೋಮಪೂರ್ಣರೂ ಮಂತ್ರದ್ರಷ್ಟೃಗಳೂ ಆದ್ದರಿಂದಲೇ ಪರಮಸತ್ಯೋತ್ಕರ್ಷಕಾರಕರೂ ಆದ ಪಿತೃಗಳು (ವಂಶಮೂಲ ಪುರುಷರು). ಅವರನ್ನು ಆ ಹಾದಿಯಲ್ಲಿ ಪ್ರೇರಿಸಲು ಇಂದ್ರನು ತಾನೇ ಅವರು ಹಾಡಿದ ಅಭಿವ್ಯಂಜಕ ಪದ್ಯದಲ್ಲಿ ಸೇರಿಕೊಳ್ಳುತ್ತಾನೆ ಮತ್ತು ಅವರ ಆತ್ಮದ ಶಬ್ದಗಳಿಗೆ (ನುಡಿಗಳಿಗೆ) ಪೂರ್ಣತೆಯನ್ನೂ ಪ್ರಣೋದಬಲವನ್ನೂ (ಪ್ರಾಭಾವಿಕತ್ವವನ್ನೂ) ಕೊಡುತ್ತಾನೆ. - "ಅಂಗಿರಸಾಂ ಉಚಥಾ ಜುಜುಷ್ವಾನ್ ಬ್ರಹ್ಮ ತೂತೋದ್ ಗಾತುಂ ಇಷ್ಣನ್ (II.20.5) ವಿಚಾರದ ಜ್ಯೋತಿಯಲ್ಲೂ ಪ್ರಣೋದದಲ್ಲೂ ಅಂಗಿರಸರಿಂದ ಸಮೃದ್ಧನಾದ ಮೇಲೆಯೇ ಇಂದ್ರನು ತನ್ನ ಜಯಪ್ರದ ಪ್ರಯಾಣವನ್ನು ಮುಗಿಸಿ ಪರ್ವತದ ಮೇಲಿನ ಧ್ಯೇಯಸ್ಥಲವನ್ನು ಸೇರುತ್ತಾನೆ- "ಅವನಲ್ಲಿಯೇ ನವಗ್ವರೆನ್ನಿಸಿದ ನಮ್ಮ ಆದ್ಯ ಪೂರ್ವಜರೆನ್ನಿಸಿದ ಸಪ್ತ ಋಷಿಗಳು ತಮ್ಮ ಐಶ್ವರ್ಯವನ್ನೂ ಜಯಶೀಲನಾದ ಅವನ ದಂಡಯಾತ್ರೆಯನ್ನು ಅಡ್ಡಿ-ಅಡಚಣೆಗಳನ್ನು ಸದೆಬಡಿದು (ಧ್ಯೇಯೋನ್ಮುಖನಾಗುವುದನ್ನೂ) ಪರ್ವತದ ಮೇಲೆ ನಿಂತು ಮಾತಿನಲ್ಲಿ ಅಸ್ಖಲಿತನಾಗುವಂತೆ ಅಥವಾ ವಚನಭಂಗ ಮಾಡದಂತೆ ತನ್ನ ಚಿಂತನಗಳಿಂದ ಅತ್ಯಂತ ಜ್ಯೋತಿಷ್ಮತ್ತಾದ ಪ್ರಣೋದನನಾಗುವುದನ್ನೂ ಅಭಿವೃದ್ಧಿ ಪಡಿಸುತ್ತಾರೆ, ಕಣ್ಣು ಕುಕ್ಕುವಂಥ ಕಾಂತಿಯುಳ್ಳ ಮಹಾಶಕ್ತಿಸಂಪನ್ನನನ್ನಾಗಿ ಮಾಡುತ್ತಾರೆ. "ನಕ್ಷದ್ದಾಭಂ ತತುರಿಂ ಪರ್ವತೇಷ್ಠಾಂ ಅದ್ರೋಘವಾಚಂ ಮತಿಭಿಃ ಶವಿಷ್ಠಂ (VI.22.2)" ಪ್ರಬೋಧಕವಾಗಿ ಹೊಳೆಯುವ ಋಕ್ಕನ್ನು

೧. ಆ ದಶಕಿರಣದ ಆನಂದೋನ್ಮಾದದಿಂದ, ಜ್ಞಾನವನ್ನು ಬೆಳಕನ್ನಾಗಿ ಮಾಡುವ ಶಕ್ತಿಯಿಂದ ಅಥವಾ ಇಡೀ ಮೈಯನ್ನು ನಡುಗಿಸುವ ಪ್ರಣೋದದಿಂದ (ದಶಗ್ವಂ ವೇಪಯಂತಂ) - ಅನುವಾದಕ

ಹಾಡುವುದರಿಂದ ನಮ್ಮ ಸತ್ತೆಯ ಗುಹೆಯಲ್ಲಿ ಸೌರಪ್ರಬೋದಕ ಹೊಳೆಹನ್ನು ಅವರು ಪಡೆಯುತ್ತಾರೆ : "ಅರ್ಚಂತೋ[೧] ಗಾ ಅವಿಂದನ್ (I.62.2) ಏಕೆಂದರೆ, ಸಪ್ತರ್ಷಿಗಳ "ಸ್ತುಭ್" ಅಥವಾ ಸರ್ವಧಾರಕ ಸೂಕ್ತಲಯದಿಂದ, ನವಗ್ವರ ಸ್ಪಂದಕ ಸ್ವರದಿಂದ ಇಂದ್ರನು ಸ್ವರ್‌ಶಕ್ತಿಯಿಂದ ಪರಿಪೂರ್ಣನಾಗುವುದು - "ಸ್ವರೇಣ ಸ್ವರ್ಯ:" ಮತ್ತು ದಶಗ್ವರ ಕರೆಯಿಂದ ಅವನು ವಲನನ್ನೊಡೆದು ಚೂರು ಚೂರು ಮಾಡುವನು. (I.62.4) ಈ ಕರೆಯು ಮೇಲಿನ ಸ್ವರ್ಗದ ಸ್ವರ, ಇಂದ್ರನ ಮಿಂಚು ಹೊಳೆಹಿನ ಗುಡುಗು. ಅಂಗಿರಸರು ತಮ್ಮ ದಾರಿಯಲ್ಲಿ ಮುಂಬರಿಯುವುದು ಸ್ವರ್ಗಾಮಂತ್ರಣದ (ಸ್ವರ್ಗಗಳ ಕರೆಯ) ಮುಂಚಲನೆಯೇ "ಪ್ರಬ್ರಹ್ಮಾಣೋ ಅಂಗಿರಸೋ ನಕ್ಷಂತ, ಪ್ರಕ್ರಂದನುರ್ ನಭನ್ಯಸ್ಯವೇತು" (VIII.42.1) ಏಕೆಂದರೆ, ಸೂರ್ಯ, ಉಷೆ, ಧೇನು, ಮಂತ್ರ, ಜ್ಯೋತಿಸ್ಸುಗಳು ಅಂಗಿರಸ ಬೃಹಸ್ಪತಿಯು ಅವುಗಳ ಶೋಧ ಕಾಲದಲ್ಲಿ ಮಾಡಿದ ಗರ್ಜನೆ, ಅರ್ಥಾತ್, ಗುಡುಗು ಎಂದು ಹೇಳಲಾಗಿದೆ. "ಬೃಹಸ್ಪತಿರ್ ಉಷಸಂ ಸೂರ್ಯಂ ಗಾಂ ಅಕ್ರಂ ವಿವೇದ ಸ್ತನಯನ್ ಇವದ್ಯೌ: (X.67.5) "ಸತ್ಯ ಮಂತ್ರದಿಂದಲೇ ಸತ್ಯಲಯದಲ್ಲಿ ಸತ್ಯ ವಿಚಾರವು ಹೇಳಲ್ಪಟ್ಟದ್ದು ; ಅದರಿಂದಲೇ ಗೂಢಜ್ಯೋತಿಯನ್ನು ಹುಡುಕಿ ತೆಗೆದದ್ದು ಮತ್ತು ಉಷೆಯನ್ನು ಹುಟ್ಟಿಸಿದ್ದು - "ಗೂಳ್ಹಂ ಜ್ಯೋತಿ: ಪಿತರೋ ಅನ್ವವಿಂದನ್, ಸತ್ಯ ಮಂತ್ರಾ ಅಜನಯನ್ ಉಷಾಸಂ (ಉಷಸಂ) (VII.76.4) - ಈ ಅಂಗಿರಸರೇ ಸರಿಯಾಗಿ ಮಾತಾಡುವವರು - "ಇತ್ಥಾ ವದದ್ಭಿ: ಅಂಗಿರೋಭಿ: (IV.18.5.) ಅವರು ಋಕ್‌ಪ್ರಭುಗಳು, ತಮ್ಮ ಆಲೋಚನೆಗಳನ್ನು ಪೂರ್ಣರೂಪದಲ್ಲಿ ಇಟ್ಟುಕೊಂಡವರು, "ಸ್ವಾಧೀಭಿರ್ ಋಕ್ವಭಿ: (VI.32.2.). ಅವರು ಸರ್ಗಸೂನುಗಳು, ಮಹಾಪ್ರಭುವಿನ ವೀರ ಯೋಧರು, ಸತ್ಯಸಂಧರೂ ಋಜು ವಿಚಾರಿಗಳೂ ಅದರಿಂದಲೇ ಜ್ಯೋತಿರ್ಮಯ ಜ್ಞಾನವನ್ನು ಧಾರಣೆ ಮಾಡಿದವರು ಮತ್ತು ಯಜ್ಞದ ಸರ್ವೋಚ್ಚ ನಿವಾಸವನ್ನು ಮಾನಸಿಕರಿಸಿಕೊಂಡವರು-ಋತಂ ಶಂಸಂತ ಋಜು ದಿಧ್ಯಾನಾ ದಿವಸ್ ಪುತ್ರಾಸೋ ಅಸುರಸ್ಯವೀರಾ: ವಿಪ್ರಂಪದಂ ಅಂಗಿರಸೋ ದಧಾನಾ ಯಜ್ಞಸ್ಯ ಧಾಮ ಪ್ರಥಮಂ ಮನಂತ (X.67.2.)

ಇಂಥ ಹೇಳಿಕೆಗಳು ದ್ರಾವಿಡ ಗುಹಾನಿವಾಸಿಗಳು ಕದ್ದುಕೊಂಡು ಹೋದ ಧೇನುಗಳನ್ನು ದೇವನ ಹಾಗೂ ದೇವಋಷಿಯ ನೇತೃತ್ವದಲ್ಲಿ ಕೆಲವು ಆರ್ಯಋಷಿಗಳು ಪುನರ್‌ಲಭಿಸಿಕೊಂಡರೆಂಬುದನ್ನೋ ಅಥವಾ ರಾತ್ರಿಯ ಕತ್ತಲೆಯ ಅನಂತರ ಉಷೆಯ ಪುನರುದಯವಾಗುವುದನ್ನೋ ಪ್ರಕಟಪಡಿಸುವುದಲ್ಲದೆ ಇನ್ನಾವ ಹೆಚ್ಚಿನ ಸಂಗತಿಯನ್ನೂ ವ್ಯಕ್ತಮಾಡವು ಎಂದು ನಂಬುವುದು ಅಸಾಧ್ಯ. ಯಾವಾಗಲೂ ನಮಗೆ ಸೂಕ್ತ ಆರ್ಕ್‌ಟಿಕ್ ಉಷ:ಕಾಲದ ಆಶ್ಚರ್ಯಕರ ದೃಶ್ಯಗಳಷ್ಟೇ ಪ್ರತಿಮಾ ಸಂಯೋಜನೆಯನ್ನು ವಿವರಿಸಲು ಸಾಕಾಗುವುದಿಲ್ಲ. ಮಂತ್ರದ ಕಲ್ಪನೆಯ, ವಿಚಾರದ, ಸತ್ಯದ ಮತ್ತು ಪ್ರಯಾಣ ಮತ್ತು ಅನೃತವನ್ನು ಜಯಿಸುವ (ಸೋಲಿಸುವ) ಕಾರ್ಯದ ಮೇಲಿನ ಒತ್ತಡದ ಸಾತತ್ಯವನ್ನೂ ವಿವರಿಸಲು ಸಾಕಾಗುವುದಿಲ್ಲ. ಅದಕ್ಕೆ ಮಂತ್ರಶಬ್ದದ ಕಲ್ಪನೆ, (ದಿವ್ಯ) ವಿಚಾರ, ದಿವ್ಯಸತ್ಯ, ಪ್ರವಾಸ ಮತ್ತು ಅನೃತವನ್ನು ಸೋಲಿಸುವುದು (ಅದರ ಮೇಲೆ ಜಯಪಡೆಯುವುದು)-ಈಯೆಲ್ಲವೂ, ಸೂಕ್ತಗಳಲ್ಲಿ ಬಂದಿರುವಂತೆ, ಉಕ್ತ ಸಂಯೋಜನೆಯನ್ನು ಅರ್ಥೈಸಲು ಅಗತ್ಯ. ಈ ತೋರಿಕೆಯ ವಿಕಟ ಸಂಯೋಗದ ಪರಿಹಾರಕ್ಕೆ ಹೊರಗಿನಿಂದ

---

೧. ಋಚ್-ಅರ್ಚಂತ: = ಹೊಳೆಯು ಮತ್ತು ಹಾಡು ಎಂಬುದು ವೇದಾರ್ಥ. ಅರ್ಕ=ಸೂರ್ಯ ಮತ್ತು ಬೆಳಕು ಹಾಗೂ ವೈದಿಕ ಸೂಕ್ತ.

ಏನನ್ನೂ ತೆಗೆದುಕೊಳ್ಳದೆ ಸೂಕ್ತಗಳ ಭಾಷೆ ಮತ್ತು ಸೂಚನೆಗಳಿಂದಲೇ ಇವುಗಳಲ್ಲಿಯ ವೈವಿಧ್ಯಮಯ ಪ್ರತಿಮಾವಳಿಯಲ್ಲಿ ಸುಲಭ ಸ್ಪಷ್ಟತೆಯನ್ನು ಕಂಡು ಸಮನ್ವಯದ ಮೂಲಕ ಅರ್ಥೈಕ್ಯವನ್ನು ರೂಪಿಸುವ ನಮ್ಮ ಸಿದ್ಧಾಂತವೊಂದೇ ಇಲ್ಲಿ ತಾರಕ. ನಿಜವಾಗಿ ನೋಡಿದರೆ, ಒಮ್ಮೆ ನಮಗೆ ವೇದದ ಕೇಂದ್ರ ಕಲ್ಪನೆ ತಿಳಿದರೆ, ವೈದಿಕ ಋಷಿಗಳ ಮನೋಧರ್ಮ ಗೊತ್ತಾದರೆ, ಅವರ ಸಾಂಕೇತಿಕತೆಯ ತತ್ವ ಅರ್ಥವಾದರೆ - ವಿಸಂಗತಿ, ವ್ಯಪಕ್ರಮಗಳಲ್ಲಿ ಯಾವುದೂ ಉಳಿಯದು. ಕೆಲ ಉತ್ತರಕಾಲೀನ ಸೂಕ್ತಗಳನ್ನುಳಿದರೆ, ಸಂಕೇತಗಳದೊಂದು ಸಿದ್ಧ ಪದ್ಧತಿ ಅಲ್ಲದೆ ; ಅದು ಯಾವ ಗಣ್ಯ ಬದಲಾವಣೆಗೂ ಆಸ್ಪದ ಕೊಡದು. ಅದರ ಬೆಳಕಿನಲ್ಲಿ ವೇದದ ಅಂತರರ್ಥವು ಕೂಡಲೇ ಎಲ್ಲೆಲ್ಲೂ ತನ್ನಿಂದ ತಾನೇ ಹೊರಪಡುವುದು. ಯಾವುದೇ ಸಿದ್ಧ ಸಂಕೇತ ಪದ್ಧತಿಯನ್ನು ಹಿಡಿದ ರಚನೆಯಲ್ಲಿರುವಂತೆ, ಸಂಕೇತಗಳ ಸಂಯೋಜನೆಯಲ್ಲಿ ನಿಜವಾಗಿಯೂ ಒಂದು ಬಗೆಯ ನಿಯಮಬದ್ಧ ಸ್ವಾತಂತ್ರ್ಯವಿರುವುದನ್ನು ನಾವು ವೇದದಲ್ಲಿ ಕಾಣಬಹುದು - ವೈಷ್ಣವರ ಪವಿತ್ರ ಪದಗಳಿದಕ್ಕೆ ಉದಾಹರಣೆ. ಆದರೆ ಈ ಸಿದ್ಧ ಸಂಕೇತ ರಚನೆಯ ವೇದ ಸೂಕ್ತಗಳ ಅಂತರ್ಗತ ವಿಚಾರದ ಸಾರವು ಯಾವಾಗಲೂ ಒಂದೇ, ಸಮನ್ವಿತ ಮತ್ತು ಅಪರಿವರ್ತನೀಯ.



ಅಧ್ಯಾಯ-೧೮

# ಮಾನವ್ಯ ಪೂರ್ವಜರು

ಅಂಗಿರಸ ಋಷಿಗಳ ಈ ಲಕ್ಷಣಗಳಿಂದ ಅವರು ಮೊದಲ ನೋಟಕ್ಕೆ ವೈದಿಕ ಪದ್ಧತಿಯಲ್ಲಿರುವ ಒಂದು ವರ್ಗದ ಅರೆದೇವತೆಗಳಾಗಿ ತೋರುತ್ತಾರೆ. ಹೊರಮುಖದಲ್ಲಿ ಅವರು ಮೂರ್ತಿಮತ್ತಾದ ಯಾ ಅವತಾರ ತಾಳಿದ ಜ್ಯೋತಿಗಳು, ಸ್ವರಗಳು ಮತ್ತು ಜ್ವಾಲೆಗಳು, ಆದರೆ ಅವರ ಒಳಮುಖದಲ್ಲಿ ಅವರು ಯುದ್ಧಗಳಲ್ಲಿ ದೇವತೆಗಳಿಗೆ ಬೆಂಬಲ ನೀಡುವ ಪರಮ ಸತ್ಯ ಶಕ್ತಿಗಳು. ಆದರೆ ದಿವ್ಯ ದ್ರಷ್ಟಾರರಾಗಿಯೂ ಸ್ವರ್ಗಪುತ್ರರಾಗಿಯೂ ಈಶ್ವರನ ವೀರ ಬಂಟರಾಗಿಯೂ ಈ ಋಷಿಗಳು ಧ್ಯೇಯಸಾಧನಾಕಾಂಕ್ಷಿಗಳಾದ ಮಾನವ ಕುಲವನ್ನು ಪ್ರತಿನಿಧಿಸುತ್ತಾರೆ. ನಿಜ-ಮೂಲತಃ ಅವರು ದೇವಪುತ್ರರು - "ದೇವಪುತ್ರಾಃ" - ಅವರು ಅಗ್ನಿಸುತರು, ಬಹುವಾಗಿ ಹುಟ್ಟಿದ ಬೃಹಸ್ಪತಿಯ ರೂಪಗಳು ; ಮತ್ತು ಪರಮಸತ್ಯಲೋಕದ ಕಡೆಗಿನ ಅವರ ಉತ್ತರಣದಲ್ಲಿ, ಉದ್ಗಮನದಲ್ಲಿ, ಅವರನ್ನು ತಾವು ಮೊದಲು ಎಲ್ಲಿಂದ ಬಂದರೋ ಅಲ್ಲಿಗೆ ಹಿಂದಿರುಗುವವರು ಎಂದು ವರ್ಣಿಸಲಾಗಿದೆ ; ಆದರೆ ಈ ಲಕ್ಷಣಗಳಲ್ಲಿಯೂ ಅವರು ಮಾನವ ಜೀವಾತ್ಮದ ಪ್ರತಿನಿಧಿಗಳಾದಾರು ; ಏಕೆಂದರೆ ಜೀವಾತ್ಮ ಅಲ್ಲಿಂದಲೇ ಬಂದದ್ದು ಮತ್ತು ಅಲ್ಲಿಗೇ ಹಿಂದಿರುಗಬೇಕಾದದ್ದು ; ಅದು ಮೂಲತಃ ಮಾನಸ ಸತ್ತೆ, ಮನಃಪದಾರ್ಥ, ಅಮರ್ತ್ಯತ್ವದ ಪುತ್ರ, ಅಮೃತ ಪುತ್ರ ("ಅಮೃತಸ್ಯಪುತ್ರಾಃ") - ಸ್ವರ್ಗಾಪತ್ಯ, ಸ್ವರ್ಗದಲ್ಲಿ ಹುಟ್ಟಿದ ವಸ್ತು ಮತ್ತು ತಾನು ಧರಿಸಿದ ದೇಹ ಕವಚದಲ್ಲಷ್ಟೇ ಅದು ಮರ್ತ್ಯ. ಯಜ್ಞದಲ್ಲಿ ಅಂಗಿರಸರ ಪಾತ್ರವು ಮಾನುಷ್ಯ : ಶಬ್ದ (ಮಂತ್ರ) ಶೋಧ, ಜೀವಾತ್ಮ ಸೂಕ್ತದ ಗಾಯನ, ಸ್ತೋತ್ರದಿಂದ ಹಾಗೂ ಹವಿಸ್ಸಿನಿಂದ ಮತ್ತು ಸೋಮರಸದಿಂದ ದಿವ್ಯ ಶಕ್ತಿಗಳನ್ನು ಉಳಿಸಿ ಬೆಳೆಸುವುದು, ಅವರ ನೆರವಿನಿಂದ ದಿವ್ಯ ಉಷೆ ಹುಟ್ಟುವಂತೆ ಮಾಡುವುದು, ಸರ್ವತ್ರ ವಿಕಿರಣವಾಗುವ ಪರಮಸತ್ಯದ ಲಸದ್ರೂಪವನ್ನು ಪಡೆಯುವುದು ಮತ್ತು ಅದರ ಸುದೂರಸ್ಥ, ಉನ್ನತಾಸನಯುಕ್ತ ಮನೆಯ ಗೂಢ ಸ್ಥಳವನ್ನು ಮೇಲೇರಿ ತಲುಪುವುದು ಅಂಗಿರಸರು ವಹಿಸುವ ಪಾತ್ರವಾಗಿದೆ.

ಈ ಯಜ್ಞಕಾರ್ಯದಲ್ಲಿ ಅಂಗಿರಸರು ದ್ವಿರೂಪದಲ್ಲಿ[೧] ಕಾಣಿಸಿಕೊಳ್ಳುತ್ತಾರೆ - "ಋಷಯೋ ದಿವ್ಯಾಃ" - ಇವರು ಸಂಕೇತಿತರಾಗಿ ಕೆಲ ಮಾನಸಶಾಸ್ತ್ರೀಯ ಶಕ್ತಿಗಳ ಹಾಗೂ ಕಾರ್ಯಜಾಲಗಳ

೧. ಪುರಾಣಗಳು ಎರಡು ಬಗೆಯ ಪಿತೃಗಳನ್ನು ವಿಶೇಷತಃ ಬೇರ್ಪಡಿಸಿ ಹೇಳಿರುವುದು ಗಮನಾರ್ಹ-ದಿವ್ಯಪಿತೃಗಳು ಒಂದು ದೇವತಾವರ್ಗ ; ಮಾನುಷ ಪೂರ್ವಜರದು ಇನ್ನೊಂದು ವರ್ಗ. ಈ ಬಗೆಯ ಪಿತೃಗಳಿಗೂ ಪಿಂಡ ಪ್ರಧಾನವಿದೆ. ಸ್ಪಷ್ಟವಾಗಿ ತೋರುವಂತೆ ಪುರಾಣಗಳು ಈ ವಿಷಯದಲ್ಲಿ ಮೂಲ ವೈದಿಕ ಪರಂಪರೆಯನ್ನು ಮುಂಬರಿಸಿಕೊಂಡು ಹೋಗಿವೆ.

ಅಧ್ಯಕ್ಷತೆ ವಹಿಸುತ್ತಾರೆ. ಆಗ ಇವರು ದೇವತೆಗಳು, ಮಾನವ್ಯಪಿತೃಗಳು - "ಪಿತರೋ ಮನುಷ್ಯಾಃ" - ಋಭುಗಳಂತೆ ಮನುಷ್ಯರಾಗಿ ವರ್ಣಿತರು, ತಮ್ಮ ಯಜ್ಞಾದಿಕರ್ಮಗಳಿಂದ ಅಮೃತತ್ವವನ್ನು ಸಂಪಾದಿಸಿದವರು, ಸಿದ್ಧಧ್ಯೇಯರು, ಮುಂದಿನ ಮಾನವ ಕುಲಕ್ಕೆ ನೆರವೀಯಲು ಆಮಂತ್ರಿತರು-ಅದೇ ದಿವ್ಯ ಸಿದ್ಧಿಗಾಗಿ. ಉತ್ತರ ಕಾಲೀನ ೧೦ ನೆಯ ಮಂಡಲದ ಯಮಸೂಕ್ತಗಳಿಂದ ಪ್ರತ್ಯೇಕವಾಗಿ ಉಳಿದ ವೇದ ಭಾಗಗಳಲ್ಲಿ ಅವರನ್ನು ಅಷ್ಟು ಲಕ್ಷಣಬದ್ಧವಲ್ಲದ ಆದರೆ ಹೆಚ್ಚು ವಿಸ್ತಾರವಾದ ಮತ್ತು ಹೆಚ್ಚು ಅರ್ಥಗರ್ಭಿತವಾದ ಪ್ರತಿಮಾ ಸಂಹತಿಯಿಂದ ಆಹ್ವಾನಿಸಲಾಗಿದೆ. ಯಮಸೂಕ್ತಗಳಲ್ಲಿ ಅಂಗಿರಸರನ್ನು ಭೃಗು-ಅಥರ್ವಣರೊಡನೆ "ಬರ್ಹಿಷದ್ (ದರ್ಭಾಸನಾಸೀನರಾದ) ಪಿತೃಗಳೆಂದು "ಕರೆದು ಅವರಿಗೆ ಅವರವೇ ಆದ ವಿಶಿಷ್ಟ ಹವಿರ್‌ಭಾಗಗಳನ್ನು ಕೊಡಲಾಗುವ ವಿವರ ಬಂದಿದೆ. ಮಾನವ್ಯ ಮಹಾ ಪ್ರವಾಸಕ್ಕಾಗಿ ಅವರನ್ನು ಆಹ್ವಾನಿಸಲಾಗುವುದು ; ಆ ಮಹಾಭಿನಿಷ್ಕ್ರಮಣವು ಮಾನವನು ಮರ್ತ್ಯತೆಯಿಂದ ಅಮರ್ತ್ಯತೆಗೆ ಹೋಗುವ ಪ್ರವಾಸ, ಅನೃತದಿಂದ ಸತ್ಯಕ್ಕೆ ತೆರಳುವ ಪ್ರಯಾಣ-ಇದನ್ನು ಆ ಹಿರಿಯರು ಸಾಧಿಸಿದವರು ಮತ್ತು ಅವರ ಸಂತತಿಗೆ ಅವರು ಆ ಮಾರ್ಗವನ್ನು ತೆರೆದಿಟ್ಟಿದ್ದಾರೆ.

ಅವರ ಕಾರ್ಯದ ಈ ಲಕ್ಷಣವನ್ನು VII.42 ಮತ್ತು VII.52 ನೆಯ ಸೂಕ್ತಗಳಲ್ಲಿ ನಾವು ನೋಡುತ್ತೇವೆ. ವಸಿಷ್ಠೋಕ್ತವಾದ ಇವುಗಳಲ್ಲಿಯ ಮೊದಲನೆಯ ಈ ಮಹಾಯಾನಕ್ಕಾಗಿಯೇ ದೇವತೆಗಳನ್ನು ಆಹ್ವಾನಿಸಲಾಗಿದೆ. "ಅಧ್ವರ ಯಜ್ಞ"[೧] ಪಯಣಿಸುವ ಯಜ್ಞ ಯಾ ದೇವತಾಸ್ಥಾನಗಳಿಗೆ ಮಾಡುವ ಪ್ರಯಾಣ ಮತ್ತು ಯುದ್ಧ ಎಂಬ ಅರ್ಥಗಳಾಗುತ್ತವೆ : ಅದನ್ನು ಹಾಡಿದ್ದೇ ಹೀಗೆ : "ಎಲೈ ಅಗ್ನಿಯೇ ದಾರಿಯಲ್ಲಿ ನಿನ್ನ ಪ್ರಯಾಣ ಸುಲಭ-ಇದು ನಿನ್ನ ಸುಲಭ ಪ್ರಯಾಣದ ದಾರಿ. ಇದು ನಿನಗೆ ಹಳಬರಿಂದ ಗೊತ್ತಾದದ್ದೇ ಆಗಿದೆ. ಸೋಮಯಾಗದಲ್ಲಿ ನಿನ್ನ ಕೆಂಗುದುರೆಗಳನ್ನು (ಯಾ ಚುರುಕಾದ ಕುದುರೆಗಳನ್ನು) ನೊಗಕ್ಕೆ ಕಟ್ಟು ಅದರ ಮೇಲೆ (ನಿನ್ನ ರಥದ ಮೇಲೆ) ಕುಳಿತು ನಾನು ದಿವ್ಯಜನ್ಮಿಗಳನ್ನು ಆಮಂತ್ರಿಸುತ್ತೇನೆ (ಎರಡನೆಯ ಋಕ್). ಈ ದಾರಿ ಯಾವುದು? ಈ ದಾರಿ ಇರುವುದು ದೇವತಾ ಸ್ಥಾನಗಳಿಗೂ ನಮ್ಮ ಮರ್ತ್ಯಲೋಕಕ್ಕೂ ನಡುವೆ: ದೇವಲೋಕದ ಕೆಳಗಿರುವ ಈ ನಮ್ಮ ಲೋಕಕ್ಕೆ ಅಂತರಿಕ್ಷದ ಮೂಲಕ ದೇವತೆಗಳು ಇಳಿದು ಬರುತ್ತಾರೆ. ನಮ್ಮ ನಡುವಿನದೋ ಜೈವಿಕ ಪ್ರದೇಶ, ಅರ್ಥಾತ್ ಅಂತರಿಕ್ಷ. ಆ ಮೂಲಕ ಅವರು ಬರುವುದು ನಮ್ಮ ಭೂಲೋಕದ ಯಾಗಕ್ಕೆ. ಹಾಗೇ ಆ ದಾರಿಯು ಯಜ್ಞಸ್ಥಳದಿಂದ ಯಜ್ಞದ ಮೂಲಕ ಮಾನವನೊಡನೆ ದೇವಸ್ಥಾನಕ್ಕೆ (ದೇವಲೋಕಕ್ಕೆ) ಕರೆದೊಯ್ಯುತ್ತದೆ. "ದೇವಗೃಹಂ=ದೇವಸ್ಥಾನಂ= ದೇವಲೋಕ" : ಎಂದು ತಾತ್ಪರ್ಯ. ಯಜ್ಞವೇ ದಾರಿ ; ಅದರಿಂದಲೇ ಮಾನವ ದೇವಲೋಕವಾಸಿ-ಯಾಗುವನು ಎಂಬುದು ಸಾರಾಂಶ. ಅಗ್ನಿಯು ತನ್ನ ಹೆಂಗುದುರೆಗಳನ್ನು ರಥದ ನೊಗಕ್ಕೆ ಕಟ್ಟುತ್ತಾನೆ. ಅವನ

---

೧. ಸಾಯಣನು ಅಧ್ವರಯಜ್ಞವೆಂದರೆ ಅಹಿಂಸಾಮಯ ಯಜ್ಞವೆನ್ನುತ್ತಾನೆ. ಆದರೆ ಅಹಿಂಸೆ ಎಂದರೆಂದೂ ಯಜ್ಞವೆಂದಾಗಲಾರದು. ಅಧ್ವರ=ಪಯಣ, ಚಲನ. ಅದು "ಅಧ್ವನ್" ಪದಕ್ಕೆ ಸಂಬಂಧಿಸಿದುದು. ಅಧ್ವನ್=ದಾರಿ ; ಪ್ರಯಾಣ. ಅಧ್ ಎಂಬ ಕಳೆದು ಹೋದ ದಾತುವಿಗೆ ಚಲಿಸು, ವ್ಯಾಪಿಸು, ಅಗಲವಾಗು, ಅಚ್ಚುಕಟ್ಟಾಗು ಇತ್ಯಾದಿ ಅರ್ಥಗಳಿವೆ. ಅಧ್ವದಲ್ಲಿ ಈಯೆರಡು (ಅಧ್ವನ್ ಮತ್ತು ಅಧ್ವರ) ಪದಗಳ ಸಂಬಂದವನ್ನು ಕಾಣುತ್ತೇವೆ. ಅಧ್ವ (=ಆಕಾಶ, ಗಾಳಿ) ಮತ್ತು ಅಧ್ವರ ಎಂಬಿವುಗಳನ್ನು ಅದೇ ಅರ್ಥದಲ್ಲಿ ಬಳಸಲಾಗಿದೆ. ಅಧ್ವರ ಯಾ ಅಧ್ವರಯಜ್ಞಗಳಿರುವ ವೇದೋಪಚ್ಛೇದಗಳು ಪ್ರಯಾಣ ಮಾಡು, ಪ್ರವಾಸ ಮಾಡುವ ದಾರಿಯಲ್ಲಿ ಮುನ್ನಡೆ ಎಂಬ ಅರ್ಥದಲ್ಲಿ ಬಹಳ ಸಲ ಬಂದಿವೆ.

ವಿವಿಧ ವರ್ಣಗಳ ಶಕ್ತಿಗಳು ಯಾ ಜ್ವಾಲೆಗಳು, ದಿವ್ಯ ಪ್ರಣೋದಗಳು ಎಂಬಿವೇ ಆ ಕುದುರೆಗಳು - ಇವುಗಳ ಪ್ರತಿನಿಧಿ ಅವನೇ. ಆ ರಥವನ್ನು ಹತ್ತುವ ವೀರನೆಂದರೆ ದಂಡಯಾತ್ರೆಗೆ ಹೊರಟ ನಮ್ಮಲ್ಲಿರುವ ಯುದ್ಧ ಶಕ್ತಿಯು. ದಿವ್ಯ ಜನ್ಮಗಳೆಂದರೆ ದೇವತೆಗಳೂ ಹೌದು - ಅದೇ ಕಾಲಕ್ಕೆ - ವೇದದಲ್ಲಿ ದೇವತೆಗಳೆಂದು ಕರೆದಿರುವ ಮಾನವಾಂತರ್ಗತವಾದ ದಿವ್ಯ ಜೀವನದ ಅವತಾರಗಳೂ ಹೌದು. ಇದೇ ವೇದಾರ್ಥವೆನ್ನುವುದು ನಾಲ್ಕನೆಯ ಋಕ್ಕಿನಿಂದ ಗೊತ್ತಾಗುತ್ತದೆ : "ಸುಖಸಂಪನ್ನ ವೀರನ ದ್ವಾರಯುಕ್ತ ಮನೆಯಲ್ಲಿ ಆನಂದವಾಸಿಯಾದ ಅತಿಥಿಯು ಜ್ಞಾನದಲ್ಲಿ ಎಚ್ಚತ್ತಾಗ, ಅಗ್ನಿಯು ಪೂರ್ಣ ತೃಪ್ತಿ ಹೊಂದಿ ಆ ಮನೆಯಲ್ಲಿ ಸ್ಥಾಪಿತನಾದಾಗ, ಅವನು ಪ್ರಯಾಣ ಮಾಡುವ ಪ್ರಾಣಿಗೆ ತದಪೇಕ್ಷಿತವಾದ ಒಳಿತನ್ನು ದಯಪಾಲಿಸುತ್ತಾನೆ" ಅಥವಾ "ಅವನು ಪಯಣ ಮಾಡಿದ್ದಕ್ಕಾಗಿ" ಎಂದೂ ಆದೀತು.

ಆದ್ದರಿಂದ ಈ ಸೂಕ್ತವು ಅತ್ಯುನ್ನತ ಒಳಿತಿಗೆ, ದಿವ್ಯಜನ್ಮಕ್ಕೆ, ಆನಂದಕ್ಕೆ ಕರೆದೊಯ್ಯೆಂದು ಅಗ್ನಿಗೆ ಕೊಟ್ಟ ಆಹ್ವಾನ ; ಮತ್ತು ಅದರ ಪ್ರಥಮ ಋಕ್ಕೆಂಬುದು ಪ್ರಯಾಣಕ್ಕೆ ಬೇಕಾದ ಅಗತ್ಯಗಳನ್ನು ಪೂರೈಸಲು ಇಟ್ಟ ಬೇಡಿಕೆ - ಇದು ಯಾತ್ರಿಕ ಯಜ್ಞದ ಕರ್ಮಕ್ಕೆ ಅವಶ್ಯಕವಾದ ಸಾಮಗ್ರಿಗಳ ಬಗೆಗಿನದಾಗಿದೆ-"ಅಧ್ವರಸ್ಯಪೇಶಃ" ಮತ್ತು ಈ ಅವಶ್ಯಕತೆಗಳಲ್ಲಿ ಅಂಗಿರಸರ ಮುನ್ನಡೆ ಮೊದಲು ಬರುತ್ತದೆ: "ಅಂಗಿರಸರು, ಮಂತ್ರಾರ್ಚಕರು, ಮುಂದಾಗಲಿ ; ಸ್ವರ್ಗದ ಕೂಗು ಮೊದಲು ಮೊಳಗಲಿ (ಅಥವಾ ಸ್ವರ್ಗೀಯ ವಸ್ತುವಿನ ಮೋಡದ ಯಾ ಮಿಂಚಿನ) ನಮ್ಮನ್ನು ಸಾಕುವ ಹಾಗೂ ತಮ್ಮ ಜಲಗಳನ್ನು ಪಸರಿಸುವ ದನಗಳು ಮುಂದೆ ಹೋಗಲಿ, ಮತ್ತು ಅರಣಿದ್ವಯವು (ಸ್ವಕರ್ತವ್ಯದಲ್ಲಿ) ನಿಯುಕ್ತವಾಗಲಿ - ಯಾತ್ರಿಕ ಯಾಗದ ಈ ಸ್ವರೂಪವು ಮುಂದೆ ಸಾಗಲಿ"- "ಪ್ರಬ್ರಹ್ಮಾಣೋ ಅಂಗಿರಸೋನಕ್ಷಂತ, ಪ್ರಕ್ರಂದನುರ್ ನಭನ್ಯಸ್ಯ ವೇತು ; ಪ್ರಧೇನವ ಉದಪ್ರುತೋ ನವಂತ, ಯುಜ್ಯಾತಾಂ ಅದ್ರಿ ಅಧ್ವರಸ್ಯ ಪೇಶಃ ಅಧ್ವರ ಯಜ್ಞದ ಅಂಗಗಳಿವು : ಮಂತ್ರವೇತ್ತರಾದ ಅಂಗಿರಸರು; ಸ್ವರ್‌ಲೋಕದ ಧ್ವನಿಯಾದ ಸ್ವರ್ಘೋಷ ; ಸ್ವರ್‌ಲೋಕವಾದರೋ ಪ್ರಕಾಶಮಯ ಸ್ವರ್ಗ ; ಮತ್ತು ಮಂತ್ರದಿಂದ ಗುಡುಗಿ ಹೊರಡುವ ಅದರ ಮಿಂಚುಗಳು ; ಮತ್ತು ದಿವ್ಯ ಜಲಗಳು ಯಾ ಸಪ್ತ ಸಿಂಧುಗಳು - ಆ ನದಿಗಳಾದರೋ ಸ್ವರ್‌ಲೋಕದ ಒಡೆಯನಾದ ಇಂದ್ರನ ಸ್ವರ್ಗೀಯ ವಿದ್ಯುತ್ತಿನಿಂದ ಪ್ರವಹಿಸಲು ಮುಕ್ತಗೊಳಿಸಲ್ಪಟ್ಟಂಥವುಗಳು ; ಅಮೃತೀಕರಿಸುವ ಸೋಮವನ್ನು ಹಿಂಡುವುದು ಆ ದಿವ್ಯಜಲ ಧಾರಾಪ್ರವಾಹದೊಟ್ಟಿಗೇ ನಡೆಯುವುದು - ಇವು "ಅಧ್ವರ ಯಜ್ಞದ" "ಪೇಶಃ" = ಆಕಾರ, ರೂಪ, ಅವಯವ ಸಂಘಾತ. ಆ ಯಜ್ಞದ ಪ್ರದಾನ ಲಕ್ಷಣವು ಮುನ್ನಡೆ, ಪುರಶ್ಚಲನ ; ಎಲ್ಲವೂ ದಿವ್ಯ ಧ್ಯೇಯದತ್ತ ಸಾಗುವುದು. ಈ ಪುರೋಗಮನವನ್ನು ಚಲನಾರ್ಥಕವಾದ "ನಕ್ಷಂತ, ವೇತು ಮತ್ತು ನವಂತ" ಎಂಬ ಮೂರು ಕ್ರಿಯಾಪದಗಳ ಹಿಂದೆಯೂ ಬಂದಿರುವ "ಪ್ರ" ಎಂಬ ಪುರೋವಾಚಕ ಉಪಸರ್ಗವು ಪ್ರತಿ ಉಪವಾಕ್ಯವನ್ನೂ ಆರಂಭಿಸಿ ಆಯಾ ಉಪವಾಕ್ಯದ ಅರ್ಥಾವಧಾರಣಕ್ಕೆ ಸೂಚಕವಾಗಿ ನಿಂತಿದೆ.

ಆದರೆ ೫೨ನೆಯ ಸೂಕ್ತವು ಇನ್ನೂ ಹೆಚ್ಚು ಅರ್ಥಗರ್ಭಿತವೂ ಧ್ವನಿಪೂರ್ಣವೂ ಆಗಿದೆ. ಮೊದಲ ಋಕ್ ಹೀಗೆ ಸಾಗುತ್ತದೆ. "ಓ ಅನಂತ ಮಾತೃಸುತರೇ ("ಆದಿತ್ಯಾಸಃ"), ನಾವು ಅನಂತ ವಸ್ತುಗಳಾಗೋಣ ("ಅದಿತಯಃಸ್ಯಾಮ"), ದೇವತ್ವ-ಮರ್ತ್ಯತ್ವಗಳೆರಡಲ್ಲೂ ವಸುಗಳು ರಕ್ಷಿಸಲು ("ದೇವತ್ರಾ ಮರ್ತ್ಯತ್ರಾ") ; ಉಳ್ಳವರಾಗುತ್ತಿರುವ ನಿಮ್ಮನ್ನು ಅನುಸರಿಸಿ ನಾವೂ ಉಳ್ಳವರಾಗೋಣ. ಎಲೈ ಮಿತ್ರಾವರುಣರೇ, ಓ ದ್ಯಾವಾ ಪೃಥಿವಿಗಳೇ, ಆಗುತ್ತಿರುವ ನೀವೇ ಆಗೋಣ"- "ಸನೇಮ

ಮಿತ್ರಾವರುಣಾ ಸನಂತಃ, ಭವೇಮ ದ್ಯಾವಾ ಪೃಥಿವೀ ಭವಂತಃ". ನಾವು ಗ್ರಹಿಸಿಟ್ಟುಕೊಳ್ಳಬೇಕಾದ ಅರ್ಥವೇ ಇದೆಂಬುದು ಸ್ಪಷ್ಟ ಮತ್ತು ಅನಂತರಾಗಬೇಕು, ಅದಿತಿಸುತರಾಗಬೇಕು, ದೇವತ್ವವನ್ನು ಪಡೆಯಬೇಕು - "ಅದಿತಯಃ ಆದಿತ್ಯಾಸಃ". "ಮಿತ್ರಾವರುಣರು," "ಸೂರ್ಯ ಸವಿತೃ" ಎಂಬ ಬೆಳಕು ಸತ್ಯಗಳ ಮೇಲಿನ ಪ್ರಭುವಿನ ಶಕ್ತಿಗಳು ಎಂಬುದನ್ನು ನೆನಪಿಟ್ಟುಕೊಳ್ಳಬೇಕು.ಮೂರನೆಯ ಋಕ್ಕಿನಲ್ಲಿ "ಧ್ಯೇಯದತ್ತ ಧಾವಿಸುವ ಅಂಗಿರಸರು ಈ ದಿವ್ಯ ಸವಿತೃವಿನ ಆನಂದಕ್ಕೆ ತಲುಪಲೆಂದು ಪಯಣಿಸಲು ಶುರು ಮಾಡಲಿ" ಎಂದು ಉದ್ಗರಿಸಲಾಗಿದೆ ; ಮತ್ತು "ಯಜ್ಞದ ನಮ್ಮ ಮಹಾಪಿತನೂ ಎಲ್ಲ ದೇವತೆಗಳೂ ಒಂದೇ ಮನಸ್ಸಿನವರಾಗಿ ಹೃತ್‌ಪೂರ್ವಕವಾಗಿ ಆ ಆನಂದವನ್ನು ಸ್ವೀಕರಿಸಲಿ "ತುರಣ್ಯವೋ ನಕ್ಷಂತ ರತ್ನಂ ದೇವಸ್ಯ ಸವಿತುರ್ ಇಯಾನಾಃ". ಆದುದರಿಂದ ಅಂಗಿರಸರು ಪ್ರವಾಸಿಕರು. ಎಲ್ಲಿಗೆ? ಸೌರದೇವತೆಯ ಬೆಳಕಿನೆಡೆಗೆ ಮತ್ತು ಸತ್ಯದೆಡೆಗೆ ಹಾಗೂ ಆನಂದದೆಡೆಗೆ ಆ ಸೌರದೇವತೆಯಿಂದ ಹೊಳೆವ ದನಗಳು ಉದಯಿಸಿದ್ದು, ಆ ದನಗಳನ್ನೇ ಅವರು ಪಣಿಗಳಿಂದ ಗೆದ್ದು ತಂದದ್ದು ಎಂಜೀ ಅಂಶಗಳೆಲ್ಲಾ ಉಕ್ತ ಬೆಳಕು ಮತ್ತು ಸತ್ಯಗಳನ್ನಾಧರಿಸಿದ್ದು ಎಂಬುದನ್ನು ನಾವು ಯಾವಾಗಲೂ ನೋಡುತ್ತೇವೆ. ಈ ಪ್ರಯಾಣವು ಎಂದರೆ ದೇವತಾತ್ವದೆತ್ತರಕ್ಕೆ ಬೆಳೆದೆದ್ದು ನಿಲ್ಲುವುದು, ದೇವತ್ವವನ್ನು ಹೊಂದುವುದು, ಅನಂತದಲ್ಲಿ ಅಂತರ್ಗತವಾಗುವುದು - "ಅದಿತಯಃಸ್ಯಾಮ" - ಈ ಸೂಕ್ತದ ೨ ನೆಯ ಋಕ್ಕಿನಲ್ಲಿ ಹೇಳಿದ್ದಿದು - ದೇವತ್ವದಲ್ಲೂ, ಮರ್ತ್ಯತ್ವದಲ್ಲೂ, ಮನುಷ್ಯತ್ವದಲ್ಲೂ ನಮ್ಮನ್ನು ಕಾಯುವ ಮಿತ್ರ - ವರುಣ- ವಸುಗಳು ನಮ್ಮಲ್ಲಿ ನಡೆಸುವ ಕಾರ್ಯದ ಮೂಲಕ ಬರುವ ಶಾಂತ್ಯುತ್ಕರ್ಷ ಮತ್ತು ಆನಂದೋತ್ಕರ್ಷಗಳತ್ತ ಪಯಣಿಸುವುದು ಎಂಬ ಅರ್ಥವು ಸ್ಫುಟವಾಗಿ ತೋರುತ್ತದೆ.

ಈಯೆರಡು ಸೂಕ್ತಗಳಲ್ಲಿ ಅಂಗಿರಸ ಋಷಿಗಳನ್ನು ಸಾಮಾನ್ಯವಾಗಿ ಉಲ್ಲೇಖಿಸಲಾಗಿದೆ. ಆದರೆ ಇತರ ಸೂಕ್ತಗಳಲ್ಲಿ ಮಾನವ್ಯ ಪೂರ್ವಜರ ಬಗೆಗಿನ ಅನುಷೇದಿಕ ಉಲ್ಲೇಖವಿದೆ. ಆ ಪೂರ್ವಜರು ಮೊಟ್ಟಮೊದಲು ಜ್ಯೋತಿಯನ್ನು ಕಂಡು ಹಿಡಿದರು, ವಿಚಾರವನ್ನು ಪಡೆದರು ಮತ್ತು ಮಂತ್ರವನ್ನು ದೊರಕಿಸಿಕೊಂಡು ಅದರ ಪ್ರಭುತ್ವವನ್ನು ಪಡೆದುಕೊಂಡರು ; ಹಾಗೂ ಮಿರುಗುವ ಗುಪ್ತ ಆನಂದ ಪ್ರಪಂಚಗಳಿಗೆ ಪ್ರಯಾಣ ಮಾಡಿದರು. ನಾವು ಮಾಡಿದ ನಿಗಮನಗಳ ದೃಷ್ಟಿಯಿಂದ ನಾವೀಗ ಇನ್ನೂ ಹೆಚ್ಚು ಮುಖ್ಯವಾದ, ಗಭೀರವಾದ, ಸುಂದರವಾದ ಮತ್ತು ಮಿರಿಮಿರಿ ಮಿಂಚುವ ಉಪಭೇದಗಳನ್ನು ಅಭ್ಯಾಸ ಮಾಡಬಹುದು. ಅವುಗಳಲ್ಲಿ ನಮ್ಮ ಹಿರಿಯರು ಮಾಡಿದ ಮಹಾಶೋಧವನ್ನು ಸೂಕ್ತಿಸಲಾಗಿದೆ. ಅವುಗಳಲ್ಲಿ ವೈದಿಕ ಋಷಿಗಳು, ಯೋಗಿಗಳು, ನಮ್ಮೆದುರು ಹಿಡಿದ ಆ ಮಹಾಪ್ರತ್ಯಾಶೆಯ ಸಾರಾಂಶವನ್ನು ಕಾಣಬಲ್ಲೆವು. ಆ ಪ್ರಯಾಣವು, ಆ ಋಷಿಗಳನ್ನು ಅನುಸರಿಸಿ ಬಂದ ಮರ್ತ್ಯತ್ವದ ಬದಲಾಗಿ ಬರಲಿದ್ದ ಒಂದು ವಿಧದ ಪ್ರಕಾಶಾತ್ಮಕ ಮೂಲಪುರುಷರ ಒಂದು ಮಾದರಿಯ ಮೂಲ, ಪ್ರಾಚೀನ, ವಿಜಯ ಸಂಪಾದನೆಯ ರೂಪದಲ್ಲಿ ವರ್ಣಿತವಾಗಿದೆ. ಅದು ನಮ್ಮನ್ನು ಸುತ್ತುವರಿವ "ರಾತ್ರೀ ಪರಿತಕ್‌ಮ್ಯಾ" (V.30.14) ವೃತ್ರರ, ಶಂಬರರ, ವಲರ, ಅತಿಮಾನವ ಬಲಾಢ್ಯರ, ರಾಕ್ಷಸರ, ಹೆಬ್ಬಾವುಗಳ ಅರ್ಥಾತ್ ಅವಮಾನಸ ಶಕ್ತಿಗಳ ಮೇಲೆ ಗಳಿಸಿದ ಜಯವಾಗಿದೆ : ಆ ಶಕ್ತಿಗಳು ಬೆಳಕನ್ನು ಬಂಧಿಸಿಟ್ಟುಕೊಳ್ಳುವುವು; ಅವು ಪ್ರಣೋದವನ್ನು ಕಟ್ಟಿ ಹಾಕಿಟ್ಟುಕೊಂಡವುಗಳು - ಜ್ಯೋತಿಯನ್ನು ತಮ್ಮ ಕತ್ತಲಿನ ಹಾಗೂ ಮಾಯಾಮಯ ನಗರಗಳ ಕಾರಾಗೃಹಗಳಲ್ಲಿಟ್ಟುಕೊಂಡವುಗಳು. ಆದರೆ ಅವು ಆ ಬೆಳಕನ್ನೂ ಪ್ರಣೋದವನ್ನೂ ಚೆನ್ನಾಗಿ ಬಳಸಲೂ ಆರವು, ಮಾನಸ ಪ್ರಧಾನರಾದ ಮನುಜರಿಗೆ ಕೊಡಲೂ ಮನಸ್ಸು ಮಾಡಲಾರವು.

ಅವರ ಅವಿದ್ಯೆ, ಕೇಡಿಗತನ, ಪರಿಮಿತತ್ವ (ಸಣ್ಣತನ)ಗಳನ್ನು ನಮ್ಮಿಂದ ದೂರದಲ್ಲಿಡುವುದಷ್ಟೇ ಅಲ್ಲದೆ, ಅವುಗಳನ್ನು ಬಡಿದು ಒಡೆದು ಅವು ತಮ್ಮಲ್ಲಿ ಅಡಗಿಸಿ ಇಟ್ಟುಕೊಂಡಿರುವ ಗುಪ್ತಜ್ಯೋತಿಯನ್ನು ಗುಪ್ತ ಸತ್ತ್ವವನ್ನು, ಗುಪ್ತ ಅನಂತತ್ವವನ್ನು ನಮಗೆ ಬಿಟ್ಟು ಕೊಡುವಂತೆ ಮಾಡಬೇಕು. ಈ ಮರ್ತ್ಯತ್ವದಿಂದ (ಸಾವಿನಿಂದ) ಆ ಅಮೃತತ್ವವನ್ನು ಗೆದ್ದುಕೊಳ್ಳಬೇಕಾಗಿದೆ. ಈ ಅಜ್ಞಾನದ ಹಿಂದೆ ಒಂದು ಗುಪ್ತ ಜ್ಞಾನವನ್ನು, ಸತ್ಯದ ಒಂದು ಮಹಾಜ್ಯೋತಿಯನ್ನು ಹತ್ತಿಕ್ಕಿ ಇಡಲಾಗಿದೆ. ಈ ಅಸತ್ತ್ವವು (ಅಸತ್ತು, ಅಸತ್ತೆ) ಸತ್ತ್ವದ (ಸತ್ತಿನ, ಸತ್ತೆಯ) ಅನಂತವಾದ ತಿರುಳನ್ನು, ಹೂರಣವನ್ನು, ಸೆರೆವಸೆಯಲ್ಲಿಟ್ಟಿದೆ. ಸೀಮಿತಗೊಳಿಸುವ ಈ ಸಾವಿನಲ್ಲಿಯೇ ಅಪರಿಸೀಮಿತವಾದ ಅಮರ್ತ್ಯತೆಯ ಬೀಜವಿದೆ. ಉದಾ: ವಲನು ವಿಕಿರಣ ಕಾಂತಿಗಳ ವಲನು ; ವಲಸ್ಯಗೋಮತಃ (I.11.5) ಅವನು ಜ್ಯೋತಿರ್ಮಯ ಶರೀರನು ; "ಗೋವಪುಷೋ ವಲಸ್ಯ" (X.68.9) ಅವನ ಮೈಯು ಬೆಳಕಿನಿಂದ ಮಾಡಿದುದು ; ಅವನ ಗುಹೆಯೊಂದು ನಗರವು - ಅದರ ತುಂಬಾ ರತ್ನಗಳಿವೆ. ಆ ದೇಹವನ್ನು ಒಡೆಯಬೇಕು, ಆ ನಗರವನ್ನು ಒಡೆದು ತೆರೆಯಬೇಕು ; ಆ ರತ್ನಭಂಡಾರವನ್ನು ವಶಪಡಿಸಿಕೊಳ್ಳಬೇಕು. ಮಾನವಕುಲ ಮಾಡಬೇಕಾದ ಕರ್ತವ್ಯವಿದು. ಮಾನವ ಕುಲಕ್ಕಾಗಿ ನಮ್ಮ ಪೂರ್ವಿಕರು ಇದನ್ನು ಮಾಡಿದ್ದಾರೆ. ಅದೇ ಮಾರ್ಗ ಎಂಬುದು ಗೊತ್ತಾಗಲಿ, ಅದೇ ಗುರಿ ಎಂಬುದೂ ಅದನ್ನೇ ತಲುಪಬೇಕೆಂಬುದೂ - ಅದೂ ಸಹ- ಆ ಸಾಧನದ ಮೂಲಕವೇ ಅದೇ ತೇಜೋದೇವತೆಗಳ ನೆರವಿನಿಂದಲೇ ಎಂಬುದೂ ಗೊತ್ತಾಗಲಿ ಎನ್ನುವುದೇ ಅವರ ಉದ್ದೇಶ : "ದೇವತೆಗಳಾದ ನಿಮಗೂ ನಮಗೂ ಅದೇ ಹಳೆಯ ಸ್ನೇಹ ಸಂಬಂಧವು ಉಳಿಯಲಿ. ಅಂಗಿರಸರು ಸರಿಯಾಗಿ ಮಂತ್ರೋಚ್ಚಾರ ಮಾಡಿದಾಗ ಅಂದು ನೀವು ಬಿಗಿದು ಕಟ್ಟಿದ್ದನ್ನು ಬೀಳುವಂತೆ ಮಾಡಿದಿರಿ ; ಎದುರಿಸಿದ ವಲನನ್ನು ಕೊಂದಿರಿ - ಎಲೈ ಕಾರ್ಯಸಾಧಕರೇ-ಅವನ ನಗರದ ಬಾಗಿಲುಗಳೆಲ್ಲವನ್ನೂ ಬೀಸಿ ತೆಗೆದೊಗೆದಿರಿ (ಹಾಗೇ ನಮಗೀಗ ನೆರವೀಯಿರಿ) (VI.18.5) ಮಾನವ ಜಾತಿಯ ಎಲ್ಲ ಪರಂಪರೆಗಳ ಆದಿಯಲ್ಲಿಯೂ ಈ ಪ್ರಾಚೀನ ಸ್ಮೃತಿ ಇದೆ. ಇಂದ್ರ ಮತ್ತು ವೃತ್ರನೆಂಬನಾಗ, ಅಪೋಲೋ ಮತ್ತು ಹೆಬ್ಬಾವು, ಥೋರ್ ಮತ್ತು ರಾಕ್ಷಸರು, ಸಿಗುರ್ಡ್ ಮತ್ತು ಫಫನೀರ್, ಕೆಲ್ಟಿಕ್ ಪುರಾಣದ ಪರಸ್ಪರ ಎದುರಾಳುಗಳಾದ ದೇವರುಗಳು; ಆದರೆ ವೇದದಲ್ಲಿ ಮಾತ್ರ ಈ ಪ್ರತಿಮಾನಗಳ ಗೂಢಾರ್ಥದ ಬೀಗದ ಕೈ ಸಿಕ್ಕುತ್ತದೆ ; ಆ ಗೂಢಾರ್ಥವೆಂದರೆ ಇತಿಹಾಸ ಪೂರ್ವದ ಮಾನವ ಜನಾಂಗದ ಉಕ್ತ ಪ್ರತ್ಯಾಶೆ ಅಥವಾ ವಿವೇಕ (ಸಮ್ಯಗ್‌ಜ್ಞಾನ) ಎಂಬುದೇ ಆಗಿದೆ.

ಮಹರ್ಷಿ ವಿಶ್ವಾಮಿತ್ರನ III.39 ನೆಯ ಸೂಕ್ತವನ್ನು ಮೊದಲನೆಯ ಸೂಕ್ತವನ್ನಾಗಿ ಪರಿಶೀಲನೆಗೆ ತೆಗೆದುಕೊಳ್ಳೋಣ. ಅದು ನಮ್ಮ ವಿಷಯದ ಹೃದಯಕ್ಕೇ ನೇರವಾಗಿ ನಮ್ಮನ್ನು ಕರೆದೊಯ್ಯುತ್ತದೆ. ಅದು ಪೂರ್ವಜರ ವಿಚಾರವನ್ನು ವರ್ಣನೆಯೊಡನೆ ಪ್ರಾರಂಭಿಸುತ್ತದೆ - "ಪಿತ್ರ್ಯಾಧೀಃ" - ಆ ಪಿತೃಪಿತಾಮಹರುಗಳ ವಿಚಾರವೆಂದರೆ ಅತ್ರಿಗಳು ಸೂಕ್ತಿಸಿದ ಸ್ವರ್ ವಿಜಯ ವಿಚಾರ, ನವಗ್ವರಿಗಾಗಿ ಅಯಸ್ಯನು ಕಂಡುಹಿಡಿದ ಸಪ್ತಾಸ್ಯ ವಿಚಾರ-ಬೇರೆ ಯಾವ ವಿಚಾರವೂ ಅಲ್ಲ. ಏಕೆಂದರೆ, ಈ ಸೂಕ್ತದಲ್ಲಿಯೂ ಮಹರ್ಷಿಗಳು ಉಕ್ತ ವಿಚಾರವನ್ನು ಪಿತೃಗಳಾದ ಅಂಗಿರಸರ ಜೊತೆಗೇ ಹೇಳುತ್ತಾರೆ. "ಹೃದಯದಿಂದ ಹೊರ ಹೊರಟ ವಿಚಾರವು ಸ್ತೋಮರೂಪವನ್ನು ತಾಳಿ ತನ್ನ ಒಡೆಯನಾದ ಇಂದ್ರನ ಹತ್ತಿರ ಹೋಗುತ್ತದೆ (ಋಕ್-೧). ನಾವು ಊಹಿಸಿದಂತೆ ಇಂದ್ರನು ಜ್ಯೋತಿರ್ಮಯ ಮನದ ಶಕ್ತಿಯ ಅಧಿದೇವತೆ, ಜ್ಯೋತಿಷ್ ಪ್ರಪಂಚದ ಒಡೆಯ. ವಿದ್ಯುಚ್ಛಲಾಕೆಗಳ ದೊರೆ. ಶಬ್ದಗಳನ್ನು (ಮಂತ್ರಗಳನ್ನು) ಅಥವಾ ವಿಚಾರಗಳನ್ನು ಪದೇ ಪದೇ ದನಗಳೆಂದೂ

ಹೆಂಗಸರೆಂದೂ ಕರೆಯಲಾಗಿದೆ ; ಇಂದ್ರನು ವೃಷಭರೂಪದ ಗಂಡ. ಮಂತ್ರಗಳವನನ್ನು ಬಯಸಿ ಮೇಲಕ್ಕೇರಿ ಅವನನ್ನು ಸಮೀಪಿಸುತ್ತವೆ ಎಂದು ಸಹಾ ಹೇಳಲಾಗಿದೆ : ಉದಾಹರಣೆ (I.9.4.) "ಗಿರಃ ಪ್ರತಿ ತ್ವಾಂ ಉದಹಾಸತ......ವೃಷಭಂ ಪತಿಂ" - ಸ್ವರ್‌ಲೋಕದ ಜ್ಯೋತಿರ್ಮಯ ಮನವು ವೈದಿಕ ವಿಚಾರಧಾರೆಗೆ ಮುಟ್ಟತಕ್ಕ ಗುರಿಯಾಗಿತ್ತು. ಪ್ರಬೋಧದ ವಿದ್ಯುತ್ತುಗಳ ವ್ರಜಗಳನ್ನು ಜೀವಾತ್ಮನಿಂದ ಹೊರಟ ವಿಚಾರಗಳು ಮೇಲೆ ಮೇಲಕ್ಕೆ ಒತ್ತುತ್ತಾ ಹೋಗುತ್ತವೆ- ತಮ್ಮ ಗುಹೆಯಾದ ಅವಮಾನಸದಿಂದ (ಅವಚೇತನದಿಂದ), ಆ ರೂಪದ ಕೊಟ್ಟಿಗೆಗಳಿಂದ ಅವು=ಆ ಗೋವ್ರಜಗಳು ಮೇಲೇರುವುದನ್ನು ವೇದವಾಣಿಯು ಹೇಳುತ್ತದೆ. ಸ್ವರ್‌ಪತಿಯಾದ ವೃಷಭನೆಂದರೆ ಇಂದ್ರ ; ಅವನೇ "ಗೋಪತಿ"=ಈ ವ್ರಜಗಳ ಅಧಿಪತಿ.

ವಿಶ್ವಾಮಿತ್ರ ಋಷಿಯು ಉಕ್ತ ದಿವ್ಯ ವಿಚಾರವನ್ನು ವರ್ಣಿಸುವುದರಲ್ಲಿ ಮುಂದುವರಿಯುತ್ತಾನೆ : " ಜ್ಞಾನದಲ್ಲಿ ಜಾಗರಿತವಾಗಿರುವುದು ವ್ಯಕ್ತಪಡಿಸಿದ ವಿಚಾರ"-ಅದು ಪಣಿಗಳ ನಿದ್ರೆಗೆ ಮಣಿಯದು - "ಯಾಜಾಗ್ರವಿರ್ ವಿದಥೇ ಶಸ್ಯಮಾನಾ" -ನಿನ್ನಿಂದ ಹುಟ್ಟಿದ್ದು (ಯಾ ನಿನಗಾಗಿ ಹುಟ್ಟಿದ್ದು), ಓ ಇಂದ್ರನೇ, ಅದನ್ನು ನೀನು ತೆಗೆದುಕೋ-ಆ ಜ್ಞಾನದಲ್ಲಿ ಅರಳಿದ ವಿಚಾರವನ್ನು ಗ್ರಹಿಸು. ಇದು ವೇದದಲ್ಲಿ ಯಾವಾಗಲೂ ಹೇಳುತ್ತಾ ಬಂದ ಸೂತ್ರ. ಅಜ್ಞಾತ ವಿಚಾರವು ನಿರುಪಯುಕ್ತವೆಂದು ತಾತ್ಪರ್ಯ. ಅಜ್ಞಾತವು ವಿಸ್ಮೃತ, ವಿಸ್ಮೃತವು ಅಕಾರ್ಯಕಾರಕ : ವಿಚಾರವಿಲ್ಲಿ ಪರಮಸತ್ಯದ ವಿಚಾರ, ಅನುಭವ. ದಿವ್ಯದೇವತೆಯು ಮಾನವನಲ್ಲಿ ತನ್ನ ಬಗ್ಗೆ ಯಾವ ಆಲೋಚನೆ ಮಾಡುತ್ತದೆಯೋ ಅದನ್ನು ಗಮನಿಸಬೇಕು. ಹಾಗೆ ಗಮನಿಸುವುದೆಂದರೆ ನಮ್ಮಲ್ಲಿರುವ ಜ್ಞಾನದಲ್ಲಿಯೇ ದೇವತೆಯು ಜಾಗರಿತನಾಗುವುದೆಂದರ್ಥ ("ವಿದ್ಧಿ, ಚೇತಥಃ" ಇತ್ಯಾದಿ). ಇಲ್ಲವಾದರೆ ಅದು ಕೇವಲ ಮಾನವ್ಯವಾಗಿಯೇ ಉಳಿಯುತ್ತದೆ, ದಿವ್ಯವಾಗುವುದಿಲ್ಲ-ದೇವತೆಯ ಹತ್ತಿರ ಹೋಗುವುದಿಲ್ಲ ದಿವ್ಯವಾದಾಗ ಹೋಗುತ್ತದೆ ("ದೇವೇಷು ಗಚ್ಛತಿ"). ಅನಂತರ ಈ ವಿಚಾರವು ಯಮಳರ ತಾಯಿ ಎನ್ನುತ್ತಾರೆ ಋಷಿ. ಆ ತಾಯಿಯು ಇಲ್ಲಿ ಯಮಳರಿಗೆ ಜನ್ಮ ಕೊಡುತ್ತಾಳೆ ; ಅದಕ್ಕೂ ಮೊದಲೇ ಆ ವಿಚಾರವು ಪ್ರಾಚೀನ (ಯಾ ನಿತ್ಯ), ಅದು ಸ್ವರ್ಗಜ. ಅದು ವ್ಯಕ್ತವಾದಾಗ ಜ್ಞಾನದಲ್ಲಿ ಎಚ್ಚತ್ತಿರುತ್ತದೆ. ಅದಕ್ಕೆ ಬಿಳಿಯ ಸುಖಕರ ಉಡುಪಿರುತ್ತದೆ- "ಇದೇ ನಮ್ಮಲ್ಲಿರುವ ಪಿತ್ರಾರ್ಜಿತ ಪ್ರಾಚೀನ ವಿಚಾರ : "ಸೇಯಮಸ್ಮೇ ಸನಜಾ ಪಿತ್ರ್ಯಾಧೀಃ" (ಋಕ್ಷಿ), -ಋಷಿ ಹೇಳಿದ್ದಿದು. ಈ ವಿಚಾರವು ನಾಲಿಗೆಯ ತುದಿಯಿಂದ ಕೆಳಗಿಳಿದು ನಿಲ್ಲುತ್ತದೆ. ಇದರ ಎರಡು ದೇಹಗಳು ಹುಟ್ಟಿದ ಕೂಡಲೇ ಒಂದಕ್ಕೊಂದು ಅಂಟಿಕೊಳ್ಳುತ್ತವೆ ಮತ್ತು ಅಂಧಕಾರ ಮಾರಕರಾಗಿ ಉರಿಯುವ ಪ್ರಣೋದ ಶಕ್ತಿಯ ಬುಡದಲ್ಲಿ ಚಲಿಸುತ್ತಾರೆ (ಋಕ್ಷಿ). ಈ ಜ್ಯೋತಿರ್ಮಯ ಯಮಳರು ಯಾರೆಂಬುದನ್ನೀಗ ಚರ್ಚಿಸುವುದಿಲ್ಲ. ಏಕೆಂದರೆ, ಅದು ನಮ್ಮನ್ನು ಸದ್ಯದ ವಿಷಯದ ಗಡಿಗಳಿಂದ ದೂರಕ್ಕೆ ಒಯ್ಯುತ್ತದೆ. ಇಷ್ಟು ಹೇಳಿದರೀಗ ಸಾಕು : ಬೇರೆ ಕಡೆಗೆ ಅವರನ್ನು ಕುರಿತು ಅಂಗಿರಸರೊಡನೆ ಉಲ್ಲೇಖಿಸಲಾಗಿದೆ ; ಮತ್ತು ಅವರು ಅತ್ಯುಚ್ಚ ಜನ್ಮವನ್ನು (ಪರಮಸತ್ಯಸ್ತರವನ್ನು) ಸಂಸ್ಥಾಪಿಸಿದರೆನ್ನಲಾಗಿದೆ. ಹಾಗೇ ಅವರಲ್ಲಿ ಇಂದ್ರನು ವ್ಯಕ್ತ ಮಂತ್ರವನ್ನು ವಿಹಿತಗೊಳಿಸುವನು (I.83.3) ಎಂಬುದೂ "ಅವರು ಚಲಿಸುವ ಪ್ರಜ್ವಲ ಪ್ರಣೋದದ ಬುನಾದಿಯಲ್ಲಿ" ಎಂದರೆ ಅದರಲ್ಲಿ ಹೇಳಿದ ಪ್ರಣೋದ ಶಕ್ತಿ ಸೂರ್ಯನೆಂಬುದೂ ಸ್ಪಷ್ಟ: ಸೂರ್ಯನು ಅಂಧಕಾರದ ಮಾರಕ ; ಆದ್ದರಿಂದ ಈ ಬುನಾದಿಯೆಂದರೆ ಅತ್ಯುನ್ನತವಾದ ಸತ್ಯದ ಅಸ್ತಿವಾರ ("ಋತಸ್ಯ ಬುಧ್ನೇ") ಮತ್ತು ಕೊನೆಯದಾಗಿ ಅವರೆಂದೂ ಸೂರ್ಯನ ಯಮಳ

ಮಕ್ಕಳಾದ ಯಮ-ಯಮಿಯರಿಂದ ಅನ್ಯರಲ್ಲ. ಯಮನು ೧೦ ನೇಯ ಮಂಡಲದಲ್ಲಿ ಅಂಗಿರಸರೆಂಬ[೧] ಋಷಿಗಳೊಡನೆ ಉಲ್ಲಿಖಿತನಾಗಿದ್ದಾನೆ.

ಕತ್ತಲನ್ನು ಕೊಂದ ಯಮಳ ಮಕ್ಕಳೊಡನೆ ಪ್ರಾಚೀನ ವಿಚಾರವನ್ನು ವರ್ಣಿಸಿದ ಅನಂತರ ವಿಶ್ವಾಮಿತ್ರ ಋಷಿಯು ಅದನ್ನು ಮೊದಲು ರೂಪಿಸಿದ ಪ್ರಾಚೀನ ಪಿತೃಗಳ ಬಗೆಗೆ ಹೇಳುತ್ತಾನೆ ; ಮತ್ತು ಸೂರ್ಯನು ಕತ್ತಲಲ್ಲಿ ಮಲಗಿದ್ದ ಸ್ವಸ್ವರೂಪದ ಪರಮಸತ್ಯವನ್ನು ಹುಡುಕಿ ಅವರು ಗಳಿಸಿದ ಮಹಾವಿಜಯದ ಬಗೆಗೂ ಉಲ್ಲೇಖಿಸುತ್ತಾನೆ. "ಮರ್ತ್ಯರಲ್ಲಿ ಯಾರೂ ನಮ್ಮ ಪ್ರಾಚೀನ ಪಿತೃಗಳನ್ನು ದೂರಲಾರರು (ಅಥವಾ ನನಗೆ ತೋರುವಂತೆ, ಮರ್ತ್ಯತ್ವದ ಯಾವ ಶಕ್ತಿಯೂ ಹಿಡಿದಿಡಲಾರದು ಯಾ ಬಂಧಿಸಿಡಲಾರದು). ಅವರು ಗೋಗಳಿಗಾಗಿ ಯುದ್ಧ ಮಾಡಿದವರು ; ನವಗ್ವರು ; ಅವರು ಬಲಿಷ್ಠ ಇಂದ್ರನ ಮೂಲಕ ಕೋಟೆಯೊಳಗಣ ಹಟ್ಟಿಗಳಿಂದ ಅವುಗಳನ್ನು ಮೇಲ್ಗಡೆಯ ಬಿಟ್ಟು ಅವನನ್ನು ಮಹಾ ಸಾಧಕನನ್ನಾಗಿ ಮಾಡಿದವರು. ಆ ನವಗ್ವರು ಇಂದ್ರನ ಜೊತೆಗಾರರ ಜೊತೆಗಾರರಾದರು, ಯೋಧರಾದರು ; ಅವನ ಜೊತೆಗೇ ದನಗಳ ಬೆನ್ನಟ್ಟಿ ಹೋದರು ; ಇಂದ್ರನು ೧೦ ಜನ ದಶಗ್ವರೊಡನೆ ಪರಮಸತ್ಯವನ್ನು ಶೋಧಿಸಿದನು ("ಸತ್ಯಂತತ್") - ಅದೇ ಕತ್ತಲಲ್ಲಡಗಿದ ಸೂರ್ಯ (೪,೫ ನೇಯ ಋಕ್ಕುಗಳು.) ಜ್ಯೋತಿರ್ಮಯ ಧೇನುಗಳ ಹಾಗೂ ಅಡಗಿದ್ದ ಸೂರ್ಯನ ಪುನಃ ಪ್ರಾಪ್ತಿಯ ಜಯದ ಪ್ರತಿಮಾ ಚಿತ್ರಣವು ವೇದದಲ್ಲಿ ಯಾವಾಗಲೂ ಈ ವರ್ಣನೆಯಂತೆಯೇ ಇರುವುದು ಸಾಮಾನ್ಯ. ಆದರೆ ಮುಂದಿನ ಪದ್ಯದಲ್ಲಿ ಅದರೊಡನೆ ಹಾಗೇ ವೇದದ ಸೂಕ್ತಗಳಲ್ಲಿ ಪುನಃ ಪುನಃ ಬರುವ ತತ್‌ಸಂಬಂಧಿಗಳಾದ ಮತ್ತೆರಡು ಪ್ರತಿಮಾಸಂಕೇತಗಳಿವೆ : ದನಗಳ ಹುಲ್ಲುಗಾವಲು ಯಾ ಕ್ಷೇತ್ರ ಮತ್ತು ಗೋಗತವಾದ ಜೇನು. "ಪ್ರಕಾಶಮಯವಾದ ಆ ಒಂದರಲ್ಲಿ ಇಂದ್ರನು ಸಂಗೃಹಿತ ಮಧುವನ್ನು ಕಂಡನು. ಸಪಾದ, ಸಶಫ (ಐಶ್ವರ್ಯವನ್ನು) ದನಗಳ ಹುಲ್ಲುಗಾವಲಿನಲ್ಲಿ ಕಂಡುಹಿಡಿದನು.[೨] (ಋಕ್ ೬) ಪ್ರಕಾಶಮಾನವಾದ ಆವೊಂದು "ಉಸ್ರಿಯಾ" ಯಾ "ಉಸ್ರಾ" ಎಂಬುದು ಗೋ ಪದದಂತೆಯೇ ಕಿರಣ ಮತ್ತು ಹಸು ಎಂಬ ಎರಡು ಅರ್ಥಗಳನ್ನುಳ್ಳ ಪದ ; ವೇದದಲ್ಲಿ ಅದನ್ನು ಗೋಶಬ್ದಕ್ಕೆ ಪರ್ಯಾಯವನ್ನಾಗಿ ಬಳಸಲಾಗಿದೆ. ವಾಮದೇವನ ಪ್ರಕಾರ, ಪಣಿಗಳಡಗಿಸಿ ಇಟ್ಟುಕೊಂಡಿದ್ದ ಹಸುಗಳಲ್ಲಿ ಘೃತ ಅಥವಾ ಸೋಸಿದ ಬೆಣ್ಣೆ ಮೂರು ಪಾಲಾಗಿ ನಿಹಿತವಾಗಿರುವುದನ್ನು ನಾವು ಬಾರಿ ಬಾರಿಗೂ ಕೇಳುತ್ತೇವೆ. ಆದರದು ಕೆಲವು ವೇಳೆ ಮಧುಮಯ ಘೃತ, ಮತ್ತೆ ಕೆಲವು ಸಲ ಬರಿ ಮಧು-" ಮಧುಮದ್‌ಘೃತಂ (IX-86-37) ಮತ್ತು ಮಧು." ಹಸು ಕೊಡುವ ಘೃತವೂ ಸೋಮಲತೆಯು ಕೊಡುವ ರಸವೂ ಇತರ ಸೂಕ್ತಗಳಲ್ಲಿ ಸಂಬಂಧಿಸಿರುವುದನ್ನು ನಾವು ನೋಡಿದ್ದೇವೆ. ಈಗ ನಮಗೆ ಹಸು ಎಂದರೆ ಏನೆಂಬುದು ನಿಶ್ಚಿತವಾಗಿ ಗೊತ್ತಾಗಿದೆ. ಆದ್ದರಿಂದ ಘೃತ ಮತ್ತು ರಸಗಳ ಅಸಂಗತವೂ ಆಶ್ಚರ್ಯಕರವೂ

---

೧. ಈ ವಿಷಯಗಳ ಬೆಳಕಿನಲ್ಲಿ ನಾವು ಯಮ-ಯಮಿಯರ ಸಂಭಾಷಣೆಯನ್ನು ಅರ್ಥಮಾಡಿಕೊಳ್ಳಬೇಕು. ೧೦ ನೇಯ ಮಂಡಲದಲ್ಲಿ ಯಮಿ ಎಂಬ ಸೋದರಿ ಯಮನೆಂಬ ಸೋದರನೊಡನೆ ಕೂಡಲು ಬಯಸುತ್ತಾಳೆ. ಆದರೆ ಅವಳ ಬೇಡಿಕೆಯನ್ನು ಮುಂದಿನ ತಲೆಮಾರು -ಗಳಿಗೆಂದು ಯಮನು ತಳ್ಳಿ ಹಾಕುತ್ತಾನೆ. ಮುಂದಿನ ಎಂದರೆ "ಸಾಂಕೇತಿಕವಾಗಿ ಉತ್ತರ ಅಥವಾ ಮೇಲ್ಮಟ್ಟದ ಕಾಲದ" ಎಂದು ತಿಳಿದುಕೊಳ್ಳಬೇಕು.

೨. "ನಮೇಗೋಃ" - ನಮ್‌ನಿಂದ ನಮ; ನಮ್=ಚಲಿಸು, ಸಾಲಾಗಿ ಹೋಗು ; ಗ್ರೀಕ್‌ನಮೊ" "ನಮ" ಎಂದರೆ ಸಾಲಾಗಿ ಹೋಗಿ ಮೇಯುವ ಸ್ಥಳ, ಹುಲ್ಲುಗಾವಲು ; ಗ್ರೀಕ್ "ನಮೋಸ್"

ಆದ ಸಂಬಂಧವು ಸ್ಪಷ್ಟವೂ ಸಾಕಷ್ಟು ಸರಳವೂ ಆಗಿಬಿಡುತ್ತದೆ. ಘೃತವೆಂದರೂ ಹೊಳೆಯುವ ಎಂದೇ ಅರ್ಥ; ಅದು ಹೊಳೆವ ಹಸುವಿನ ಹೊಳೆವ ಉತ್ಪನ್ನ. ಮಾನವನ ಮಾನಸ ಪ್ರಜ್ಞೆಯಲ್ಲಿರುವ ಏಕ್ಷತ್ತ ತಿಳಿವಿನ ಸರೂಪಜ್ಯೋತಿ. ಅದು ಪ್ರಬುದ್ಧ ಯಾ ಜ್ಯೋತಿರ್ಮಯ ಪ್ರಜ್ಞೆಯಲ್ಲಿ ಕಲೆಹಾಕಿ ಇಟ್ಟ ಬೆಳಕು ; ಹಸುವನ್ನು ಬಿಡುಗಡೆ ಮಾಡಿದ ಕೂಡಲೇ ಅದರ ಬಿಡುಗಡೆಯೂ ಆಗುವುದು. ಸೋಮ ಎಂದರೆ ಪ್ರಬುದ್ಧಚೇತನೆಗೆ ಅವಿನಾಭಾವಿಯಾದ ಜ್ಯೋತಿರ್ಮನಕ್ಕೆ ನಿತ್ಯಸಹಚರವಾದ, ಸಂತೋಷ=ಮುಕ್ತಿ=ಆನಂದ. ಅವಿನಾಭಾವಿಯಾದ ವೇದದ ಪ್ರಕಾರವಾಗಿ ನಮ್ಮಲ್ಲಿ ಮನೋಧರ್ಮವು ತ್ರಿವಿಧ. ಆದ್ದರಿಂದ ಘೃತವನ್ನು ತ್ರಿಭಾಗ ಮಾಡಲಾಗಿದೆ. ಒಂದೊಂದು ಸ್ತರಕ್ಕೆ ಒಂದೊಂದರಂತೆ: ಸೂರ್ಯ, ಇಂದ್ರ, ಸೋಮ ಎಂಬ ಮೂರು ದೇವತೆಗಳು ಆ ಮೂರು ಪಾಲುಗಳಿಗೆ ಅಧಿಷ್ಠಾತೃಗಳು. "ತ್ರಿಷುಸಾನುಷು"= ಗುಡ್ಡದ ಮೂರು ಮಟ್ಟಗಳಲ್ಲಿ ಸೋಮರಸವನ್ನು ಆಹುತಿಯನ್ನಾಗಿ ಕೊಡಲಾಗುತ್ತದೆ. ಈಗ ನಾವು ಧೈರ್ಯವಾಗಿ ಹೇಳಬಹುದು : ಮೂವರು ದೇವತೆಗಳ ಸ್ವಭಾವಗಳು ಇಂತಿವೆ : ಸೋಮನು ಐಂದ್ರಿಯ ಮನೋಧರ್ಮದಿಂದ ದಿವ್ಯಜ್ಯೋತಿಯನ್ನು ಬಿಡುಗಡೆ ಮಾಡುತ್ತಾನೆ ; ಇಂದ್ರನು ಉತ್ಕ್ರಿಯ ಮನೋಧರ್ಮದಿಂದ ಆ ಬೆಳಕನ್ನು ಹೀರುತ್ತಾನೆ ; ಸೂರ್ಯನು ಶುದ್ಧವಾದ ಚಿಂತನಾತ್ಮಕ ಮನೋಧರ್ಮದಿಂದ ಆ ಜ್ಯೋತಿಯನ್ನು ಹೊರಬಿಡುತ್ತಾನೆ. ಹಸುಗಳ ಹುಲ್ಲುಗಾವಲಿನ ಅರ್ಥವು ನಮಗಾಗಲೇ ಚಿರಪರಿಚಿತ. ಅದು ಗದ್ದೆ ಯಾ ಕ್ಷೇತ್ರ. ಅದನ್ನು ಇಂದ್ರನು ದಸ್ಯುವಿನಿಂದ ತನ್ನ ಹೊಳೆವ ಜೊತೆಗಾರರಿಗಾಗಿ ಗೆದ್ದು ತರುತ್ತಾನೆ; ಅದರಲ್ಲಿ ಭಟನಾದ ಅಗ್ನಿಯನ್ನು ಅತ್ರಿ ನೋಡಿದ್ದನು. ಹೊಳೆವ ಹಸುಗಳೂ ಅದರಲ್ಲಿದ್ದವು; ಅವುಗಳಲ್ಲಿ ಹಳೆಯವೂ ಎಳೆಯವುಗಳಾದವು. ಈ ಗದ್ದೆ ಕ್ಷೇತ್ರ ಎಂಬುದು ಮಾನವ ಜೀವಾತ್ಮನನ್ನು ಯಜ್ಞದ ಮೂಲಕ ದೇವತೆಗಳು ಕರೆದೊಯ್ಯುವ ಮಿರುಗುವ ಮನೆಯ ರೂಪದ.ರೂಪಕ ಚಿತ್ರ. ಅನಂತರ ವಿಶ್ವಾಮಿತ್ರನು ಈಯೆಲ್ಲ ಪ್ರತಿಮಾಪದಗಳ ನಿಜವಾದ ಯೌಗಿಕ ಅರ್ಥವನ್ನು ಸೂಚಿಸಲು ಶುರು ಮಾಡುತ್ತಾನೆ : "ದಕ್ಷಿಣೆಯನ್ನು ಹೊಂದಿದ ಅವನು "ದಕ್ಷಿಣೇ ದಕ್ಷಿಣಾವಾನ್" ಗುಪ್ತ ಗವಿಯ ಜಲಗಳಲ್ಲಿ ಅಡಗಿಸಿ ಇಟ್ಟ ಗುಪ್ತ ವಸ್ತುವನ್ನು ತನ್ನ ಬಲಗೈಯಲ್ಲಿ ಹಿಡಿದನು. ಸಮಗ್ರವಾಗಿ ತಿಳಿದುಕೊಂಡ ಅವನು ಕತ್ತಲಿಂದ ಬೆಳಕನ್ನು ಬೇರ್ಪಡಿಸಲಿ - "ಜ್ಯೋತಿರ್ ವೃಣೀತ ತಮಸೋ ವಿಜಾನನ್"; ಕೇಡಿನಿಂದ ನಾವು ಬಹುದೂರ ಇರುವಂತಾಗಲಿ (ಋಕ್-೬,೨)" ಇಲ್ಲಿ ದಕ್ಷಿಣಾ ದೇವತೆಯ ಅರ್ಥದ ಬಗೆಗೆ ಸೂಚನೆ ನಮಗೆ ಸಿಕ್ಕುತ್ತದೆ. ಕೆಲವು ಉಪಚ್ಛೇದಗಳಲ್ಲಿ ದಕ್ಷಿಣೆಯು ಉಷೆಯ ವಿಶೇಷಣವಾಗಿಯೂ ಇನ್ನು ಕೆಲವುಗಳಲ್ಲಿ ಯಜ್ಞದಲ್ಲಿ ಹವಿರ್ಭಾಗಗಳನ್ನು ಹಂಚುವವಳಾಗಿಯೂ ಕಾಣುತ್ತಾಳೆ. ಉಷೆಯು ದಿವ್ಯ ಪ್ರಬೋಧ (ಪ್ರಕಾಶ) ; ದಕ್ಷಿಣೆಯು ಉಷೆಯೊಡನೆ ಬಂದು ಮನೋಗತ ಶಕ್ತಿಯಾದ ಇಂದ್ರನಿಗೆ ಸರಿಯಾಗಿ ತಿಳಿದು ತಮಸ್ಸಿನಿಂದ ತೇಜಸ್ಸನ್ನು ಬೇರ್ಪಡಿಸಲು ಅಸತ್ತಿನಿಂದ (ಅನೃತದಿಂದ) ಸತ್ತನ್ನು (ಸತ್ಯವನ್ನು) ವಿಂಗಡಿಸಲು ಮತ್ತು ಋಜುಗಳಿಂದ (ಆರ್ಜವಯುಕ್ತರಿಂದ) ಅನೃಜುಗಳನ್ನು (ವಕ್ರಮಾರ್ಗಿಗಳನ್ನು) ಪ್ರತ್ಯೇಕಿಸಲು ಸಾಧ್ಯವಾಗುವಂತೆ ಮಾಡುತ್ತಾಳೆ. ("ವೃಣೀತ ವಿಜಾನನ್"). ಇಂದ್ರನ ಎಡಬಲಗೈಗಳು ಜ್ಞಾನದಲ್ಲಿ ಅವನು ಮಾಡುವ ಕಾರ್ಯದ ಶಕ್ತಿಗಳು. ಏಕೆಂದರೆ ಅವನ ಬಾಹುಯುಗಲವನ್ನು "ಗಭಸ್ತಿ" ಎಂದು ಕರೆಯಲಾಗುತ್ತದೆ. ಗಭಸ್ತಿ=ಸಾಮಾನ್ಯಾರ್ಥದಲ್ಲಿ ಸೂರ್ಯಕಿರಣ ; ಮುಂಗೈ ಕೂಡಾ ಆಗುತ್ತದೆ ಮತ್ತು ಅವು ಅವನ ಪ್ರತ್ಯಕ್ಷ ಶಕ್ತಿಗಳಿಗೆ ಹೋಲುತ್ತವೆ ; ಅವನ ತೇಜಸ್ವಿಗಳಾದ ಎರಡು ಕುದುರೆಗಳು ("ಹರೀ") ಸೂರ್ಯನನ್ನು ಕಣ್ಣಾಗಿ ಉಳ್ಳವುಗಳು ("ಸೂರಚಕ್ಷುಷಃ") ಮತ್ತು ಅವುಗಳನ್ನು ಸೂರ್ಯನ ದರ್ಶನ ಶಕ್ತಿಗಳೆಂದೂ ("ಸೂರ್ಯಸ್ಯ ಕೇತು") ಕರೆಯಲಾಗಿದೆ. ಇಂದ್ರನ ಬಲಗೈಯ ಶಕ್ತಿಗೆ ದಕ್ಷಿಣೆಯು ಅಧ್ಯಕ್ಷೆ ("ದಕ್ಷಿಣಾ"); ಆದುದರಿಂದ "ದಕ್ಷಿಣೇ ದಕ್ಷಿಣಾವಾನ್" ಎಂದು ದಕ್ಷಿಣೆಯನ್ನು

ದಕ್ಷಿಣಾವಂತ ಎಂಬ ಪದದ ಜೊತೆಗೇ ಹೇಳಲಾಗಿದೆ. "ದಕ್ಷಿಣೆ" ಎಂದರೆ ಸೂಕ್ಷ್ಮಾವಲೋಕನ ಶಕ್ತಿ. ನ್ಯಾಯವಾದ ಯಜ್ಞಕರ್ಮಕ್ಕೆ ದಕ್ಷಿಣೆ ಅಧ್ಯಕ್ಷೆ. ಹವಿರ್ಭಾಗ ವಿತರಣೆ ಆ ದೇವತೆಯ ಎದುರಿಗೇ ಸರಿಯಾಗಿ ಆಗಬೇಕು. ಇದರಿಂದಲೇ ಇಂದ್ರನಿಗೆ ತನ್ನ ಬಲಗೈಯಲ್ಲಿ ಪಣಿಗಳ ಕೊಟ್ಟಿಗೆ ಸಂಪತ್ತನ್ನು ಸರಿಯಾಗಿ ಹಿಡಿದುಕೊಳ್ಳಲು ಸಾಧ್ಯವಾಗುತ್ತದೆ. ಕೊನೆಯದಾಗಿ ನಮಗೆ ಹೇಳಿದ್ದು ಹೀಗೆ : "ಅಪ್ಸುಧಿಯಂ ದಿಧಿಷೇ" ಎಂಬ ಮಾತಿನಲ್ಲಿ ಗವಿಯಲ್ಲಿ ನಮಗಾಗಿ ಇಟ್ಟ ಗುಪ್ತ ವಸ್ತು ಯಾವುದು? ಅಸ್ತಿತ್ವರೂಪದ ಜಲದಲ್ಲಿ ಅಡಗಿಸಿಟ್ಟದ್ದು ಯಾವುದು? ಪಿತೃಗಳ ವಿಚಾರವನ್ನು ಯಾವ ಜಲದಲ್ಲಿ ಚಲಿಸಲಿಡಬೇಕು? - ಎಂಬೀ ವಿವರಗಳನ್ನು ಕೊಟ್ಟಿದ್ದೇವೆ - ಎಂದು. ಅದೇ ಗುಪ್ತನಾದ ಸೂರ್ಯ, ನಮ್ಮ ದಿವ್ಯ ಜೀವನದ ಗೂಢಜ್ಯೋತಿ, ಆ ಜ್ಯೋತಿಯನ್ನು ಶೋಧಿಸಬೇಕು, ಕತ್ತಲಿಂದ ಹಾಗೆ ಶೋಧಿಸಿದ್ದನ್ನು ಜ್ಞಾನವು ತೆಗೆದುಕೊಳ್ಳಬೇಕು - ಆ ಕತ್ತಲಲ್ಲೇ ಆ ಜ್ಯೋತಿ ಅಡಗಿರುತ್ತದೆ. ಆ ಜ್ಯೋತಿಯು ಭೌತಿಕವಲ್ಲ. "ವಿಜಾನನ್" ಎಂಬ ಪದದಿಂದ ಈ ಅಂಶವು ಗೊತ್ತಾಗುತ್ತದೆ. ಏಕೆಂದರೆ, ಸರಿಯಾದ ಜ್ಞಾನದಿಂದಲೇ ಅದನ್ನು ಹುಡುಕತಕ್ಕದ್ದು ಮತ್ತು ಜೊತೆಗೆ ನೈತಿಕ ಪರಿಣಾಮವೂ ಇರಬೇಕು - ಎಂದರೆ ನಾವು ಕೇಡಿನಿಂದ ಬಹಳ ದೂರ ಹೋಗುತ್ತೇವೆ- "ದುರಿತಾದ್ ದೂರಂ "ಅಕ್ಷರಶಃ, ತಪ್ಪಾಗಿ ಹೋಗದಿರುವುದು-ಅಂದರೆ ತಪ್ಪು ದಾರಿ ಹಿಡಿಯದಿರುತ್ತೇವೆ ಎಂದರ್ಥ. ಸೂರ್ಯಾನ್ವೇಷಣೆ ಮುಗಿಯುವ ಮೊದಲು, ಸೂರ್ಯ ದೊರಕುವ ಪೂರ್ವದಲ್ಲಿ, ದಿವ್ಯ ಉಷೆ ಉದಯಿಸುವ ಪೂರ್ವದಲ್ಲಿ ನಮ್ಮ ಕತ್ತಲಿನ ರೂಪದ ಜೀವನದಲ್ಲಿ (ಬಾಳಿನಲ್ಲಿ, ಸತ್ತೆಯಲ್ಲಿ, ಅಸ್ತಿತ್ವದಲ್ಲಿ) ನಾವು ಅನೇಕ ಎಡರು ತೊಡರುಗಳನ್ನು ಅನುಭವಿಸ-ಬೇಕಾಗಿರುತ್ತದೆ-ಎಂಬುದು ತಾತ್ಪರ್ಯವಾಗಿದೆ.

ಒಮ್ಮೆ ನಮಗೆ ದನಗಳ, ಸೂರ್ಯನ ಮತ್ತು ಮಧುಮದ್ಯದ ಗೂಢಾರ್ಥ ಗೊತ್ತಾಯಿತೆಂದರೆ- ಅಂಗಿರಸರ ಪುರಾಣ ಕಥೆಯ ಆವರಣ, ಯಜ್ಞವಾದೀಯ ಅಥವಾ ನಿಸರ್ಗಾರಾಧನಾವಾದೀಯ ಅಸಂಗತ ತೇಪೆ, ಕೌದಿ ಮುಂತಾದವುಗಳ ದೆಸೆಯಿಂದ ಐತಿಹಾಸಿಕವಾಗಿ ನಿರಾಶಾದಾಯಕವೆನ್ನಿಸಿದ ಅಥವಾ ಆರ್ಯ ದ್ರಾವಿಡ ಕಲ್ಪನೆಯನ್ನಾಧರಿಸಿದ ಅರ್ಥ ವಿವರಣೆಯ ಅಸಂಬದ್ಧತೆಯೆಲ್ಲಾ ಮಾಯವಾಗಿ, ವೇದಾರ್ಥ ವಿವರಣೆಯು ಪೂರ್ಣಸ್ಪಷ್ಟವೂ ಸುಸಂಬದ್ಧವೂ ಆಗುವುದಲ್ಲದೆ ಪ್ರತಿಯೊಂದು ಸೂಕ್ತವೂ ಇನ್ನೊಂದರ ಮೇಲೆ ಬೆಳಕು ಬೀರುತ್ತದೆ. ಆಗ ನಾವು ಪ್ರತಿಸೂಕ್ತವನ್ನೂ ಇಡಿಯಾಗಿ ಅರ್ಥೈಸಲು ಸಮರ್ಥರಾಗುವೆವಲ್ಲದೆ, ಉಳಿದವುಗಳೊಡನೆ ಆಯಾ ಸೂಕ್ತಗಳ ಸಂಬಂಧ ಹೇಗಿದೆ ಎಂಬುದನ್ನೂ ತಿಳಿದುಕೊಳ್ಳಲು ಶಕ್ತರಾಗುತ್ತೇವೆ. ಪ್ರತಿಯೊಂದು ಬಿಡಿ ಪಂಕ್ತಿಯೂ ಪ್ರತಿಯೊಂದು ಉಪಚ್ಛೇದವೂ ವೇದದಲ್ಲಿ ಹರಡಿ ಹೋದ ಪ್ರತಿಯೊಂದು ಲಕ್ಷ್ಯ ವಿಷಯವೂ ಅನಿವಾರ್ಯವಾಗಿ ಮತ್ತು ಸಾಮಶ್ರುತ್ಯ ಪಡೆದು ಸಾಮಾನ್ಯವಾದ ಇಡಿಯ ಅಚ್ಚಿನಲ್ಲಿ ಬಿದ್ದು ಏಕಾರ್ಥಕ, ಏಕತಾತ್ಪರ್ಯವ್ಯಂಜಕ ಎನ್ನಿಸುತ್ತದೆ. ಮಧುವನ್ನು, ಆನಂದವನ್ನು, ದನದಲ್ಲಿ ಹೇಗೆ ಕೂಡಿಡಬಹುದು ; ದನವೆಂದರೆ ಹೊಳೆವ ಸತ್ಯಪ್ರಕಾಶವೆಂದು ಹೇಗೆ ಆಗುವುದು - ಎಂಬುದನ್ನಿಲ್ಲಿ ನಾವು ತಿಳಿದುಕೊಂಡೆವು. ಮಧುಮಯ ಹಸುವಿಗೂ ಸೂರ್ಯನಿಗೂ ಯಾವ ಸಂಬಂಧವಿದೆ? ಸೂರ್ಯ ಹೇಗೆ ಸತ್ಯದ ಲಸತ್ ಪ್ರಕಾಶದ ಒಡೆಯ ಮತ್ತು ಮೂಲ ಆಕರ? ತಮೋವಾಸಿಯಾದ ಸೂರ್ಯನನ್ನು ಹುಡುಕಿ ಪಡೆಯುವುದಕ್ಕೂ ಅಂಗಿರಸರು ಪಣಿಗಳ ವಶದಲ್ಲಿದ್ದ ದನಗಳನ್ನು ಗೆಲ್ಲುವುದಕ್ಕೂ ಯಾ ಮತ್ತೆ ಪಡೆಯುವುದಕ್ಕೂ ಏಕೆ ಸಂಬಂಧ ಮಾಡಲಾಗಿದೆ? ಅದನ್ನೇಕೆ ಸತ್ಯ ಶೋಧವೆನ್ನಲಾಗಿದೆ? ಸಪಾದ, ಸಶಫ, ಸಂಪತ್ತು ಮತ್ತು ದನದ ಗದ್ದೆ ಯಾ ಹುಲ್ಲುಗಾವಲು ಎಂದರೇನು? -ಎಂಬೀಯೆಲ್ಲಾ ನಮಗೀಗ ಗೊತ್ತಾಗಿದೆ. ಪಣಿಗುಹೆ ಎಂದರೇನು? ವಲನ ಕೊಟ್ಟಿಗೆಯಲ್ಲಿದ್ದದ್ದನ್ನೇ ವೃತ್ರಾಧೀನವಾಗಿದ್ದು ಇಂದ್ರನಿಂದ ಬಿಡುಗಡೆ ಮಾಡಲ್ಪಟ್ಟ ಜಲದಲ್ಲಿ

ಮುಚ್ಚಿಡಲ್ಪಟ್ಟದ್ದೆಂದು ಹೇಳಿದ್ದು ಏಕೆ? ಅಯಸ್ಯನ ಸಪ್ತಶೀರ್ಷ, ಸ್ವರ್ಗಜೇತೃತ್ವಗಳ ವಿಚಾರವು ಸಪ್ತಸಿಂಧುಗಳನ್ನು ಹೊಂದಿರುವುದೆಂದರೇನು? ಗವಿಯಿಂದ ಸೂರ್ಯನನ್ನೇಕೆ ರಕ್ಷಿಸಬೇಕು? ಸರ್ವೇಕ್ಷಕ ಜ್ಞಾನದಿಂದ (ದಕ್ಷಿಣೆಯಿಂದ) ಕತ್ತಲಿಂದ ಬೆಳಕನ್ನು ಪ್ರತ್ಯೇಕಿಸಲ್ಪಡುವ ಯಾ ಆಯಲ್ಪಡುವ ಕೆಲಸವನ್ನೇಕೆ ಮಾಡಬೇಕು? ದಕ್ಷಿಣೆ ಮತ್ತು ಸರಮೆ ಎಂದರೆ ಯಾರು? ತನ್ನ ಬಲಗೈಯಲ್ಲಿ ಇಂದ್ರನು ಸಶಫ ಸಂಪತ್ತನ್ನು ಹಿಡಿದುಕೊಂಡಿರುವುದೆಂದರೇನು? ಎಂಬ ಪ್ರತಿಮಾನ ಕಥಾರ್ಥಗಳು ನಮಗೆ ಈಗ ಸ್ಪಷ್ಟವಾದವು. ಈ ನಿಗಮನಗಳಿಗೆ ಬರುವಾಗ ಶಬ್ದಗಳ ಅರ್ಥಗಳನ್ನು ವಿಪರ್ಯಾಸಗೊಳಿಸಲಿಲ್ಲ. ಏಕಾರ್ಥಕ ಪದವನ್ನು ವೇದ ಸಂದರ್ಭ ಅದನ್ನು ನಿಷ್ಪಷ್ಟಗೊಳಿಸಿದ್ದಲ್ಲಿ - ಅನುಕೂಲ ಸಿಂಧು ನ್ಯಾಯದಿಂದ ನಾವು ಹೊತ್ತು ಹೊತ್ತಿಗೆ ಒಂದೊಂದು ಬೇರೆ ಅರ್ಥವನ್ನು ಹೇಳಿ ಅಪಾರ್ಥಕ್ಕೀಡು ಮಾಡಲಿಲ್ಲ. ಒಂದೇ ಪದಸಂಹತಿಯನ್ನೋ ಪಂಕ್ತಿಯನ್ನೋ ಬೇರೆ ಬೇರೆ ಸೂಕ್ತಗಳಲ್ಲಿ ಬೇರೆ ಬೇರೆಯಾಗಿ ಅರ್ಥ ಮಾಡಲಿಲ್ಲ. ಅಸಮನ್ವಿತತೆಯನ್ನು ಅರ್ಥವಿವರಣೆಯ ಸರಿಯಾದ ವ್ಯಾಖ್ಯಾನದ ಇಯತ್ತಾ ನೀತಿಯನ್ನಾಗಿ ಮಾಡಿಕೊಳ್ಳಲಿಲ್ಲ. ಏತದ್ವಿರುದ್ಧವಾಗಿ, ಋಕ್ಕುಗಳ ರೂಪ ಹಾಗೂ ಪದಗಳಿಗೆ ಹೆಚ್ಚು ಹೆಚ್ಚು ಪ್ರಾಮಾಣಿಕತೆಯಿಂದ ಅಂಟಿಕೊಳ್ಳುತ್ತಾ ಹೋದ ಹಾಗೆ ಹೆಚ್ಚು ಹೆಚ್ಚು ಎದ್ದು ಕಾಣುವಂತೆ, ಸತತಸ್ಪಷ್ಟತೆ ಹಾಗೂ ಸಮಗ್ರತೆಗಳಿಂದ ವೇದದ ಸಾಮಾನ್ಯವೂ ವಿಶೇಷವೂ (ವಿವರಪೂರ್ವಕವೂ) ಆದ ಅರ್ಥವು ಹೊರಜಿೀಳುತ್ತದೆ. ಎಂಬುದನ್ನು ತೋರಿಸಿಕೊಟ್ಟಿದ್ದೇವೆ.

ಆದುದರಿಂದ ನಾವು ಶೋಧಿಸಿದ ಅರ್ಥವನ್ನು ಇತರ ಉಪಚ್ಛೇದಗಳಿಗೆ ಅನ್ವಯಿಸಿ ಅರ್ಥವನ್ನು ವಿವರಿಸುವ ಹಕ್ಕನ್ನು ನಾವೀಗ ಪಡೆದೆವು. ಉದಾ : VII.76ನೆಯ ವಸಿಷ್ಠ ಸೂಕ್ತವನ್ನು ಪರಿಶೀಲಿಸುತ್ತೇನೆ ಈಗ. ಅದು ಹೊರ ನೋಟಕ್ಕೆ ಭೌತಿಕ ಉಷಃ ಕಾಲದ ಆನಂದೋನ್ಮಾದ ಪ್ರೇರಿತವಾದ ಒಂದು ಚಿತ್ರ. ನಾವು ಪರೀಕ್ಷಿಸಿದಾಗ ಈ ಭಾವನೆ ನಮ್ಮಿಂದ ಹೊರಟು ಹೋಗುತ್ತದೆ ; ಅದರಲ್ಲಿ ಒಂದು ಗಂಭೀರ ಅರ್ಥವನ್ನು ಸತತವಾಗಿ ಸೂಚಿಸುತ್ತ ಬಂದಿರುವುದನ್ನು ಕಾಣುತ್ತೇವೆ. ನಾವು ನಮ್ಮ ಬೀಗದ ಕೈಯನ್ನು ಹಾಕಿದ ಕೂಡಲೇ ನಿಜವಾದ ಅರ್ಥದ ಸಾಮಶ್ರುತ್ಯವು ತೋರುತ್ತದೆ. ದೇವತೆಗಳೂ ಅಂಗಿರಸರೂ ಉಂಟು ಮಾಡಿದಂತೆ ಸೂರ್ಯೋದಯವು ಆ ಉನ್ನತ ಉಷೆಯ ಬೆಳಕಿನಲ್ಲಿ ಆಗುವುದರ ವರ್ಣನೆಯಿಂದ ಸೂಕ್ತವು ಆರಂಭವಾಗುತ್ತದೆ. ವಿಶ್ವ ಪುರುಷನಾದ ಸೂರ್ಯದೇವನು ಅಮರ್ತ್ಯವಾದ ಎಲ್ಲ ಜನ್ಮಗಳ ಮಹಾಜ್ಯೋತಿಯೊಳಗೆ ಹೊಕ್ಕು ಏರುತ್ತಾನೆ - "ಜ್ಯೋತಿರ್ ಅಮೃತಂ ವಿಶ್ವಜನ್ಯಂ". ದೇವರ ಕಣ್ಣಿನ ಕೆಲಸ (ಯಜ್ಞ)ದಿಂದ ಉಷೆ ಹುಟ್ಟಿದ್ದಳು (ಅಥವಾ ದೇವತೆಗಳ ಸಂಕಲ್ಪ ಶಕ್ತಿಯಿಂದ ದರ್ಶನವು ಜನ್ಮ ತಾಳಿತು) ; ಉಷೆ ಇಡೀ ಜಗತ್ತನ್ನು ವ್ಯಕ್ತಗೊಳಿಸಿದಳು. (ಅಥವಾ ಅಸ್ತಿತ್ವಕ್ಕೆ ಬರುವ ಎಲ್ಲವನ್ನೂ ಸತ್ತೆಗಳನ್ನೂ-"ವಿಶ್ವಂಭುವನಂ" ಋಕ್೧) ಯಾವ ಈ ಅಮರ್ತ್ಯ ಜ್ಯೋತಿಯೊಳಗೆ ಸೂರ್ಯನು ಉದಯಿಸುತ್ತಾನೋ ಇದನ್ನು ಬೇರೆಯ ಕಡೆ ನಿಜವಾದ ಬೆಳಕು ಎನ್ನಲಾಗಿದೆ- "ಋತಂಜ್ಯೋತಿಃ". ವೇದದಲ್ಲಿ ಸತ್ಯವನ್ನೂ ಅಮೃತತ್ವವನ್ನೂ ಯಾವಾಗಲೂ ಒಟ್ಟಿಗೆ ಉಲ್ಲೇಖಿಸಲಾಗುತ್ತದೆ. ಅಯಸ್ಯನು ತನ್ನ ಸತ್ತೆಯಲ್ಲಿ ವೈಶ್ವತ್ರಿಕನಾದಾಗ ("ವಿಶ್ವಜನ್ಯ" ಎನ್ನಿಸಿದಾಗ) ಕಂಡುಹಿಡಿದ ಸಪ್ತಶೀರ್ಷ ವಿಚಾರವು ಕೊಟ್ಟ ಜ್ಞಾನದೀಪವೇ ಇದು. ಜ್ಞಾನಜ್ಯೋತಿಯೇ ಈ ಉಷೆ. ಆದ್ದರಿಂದ ಈ ಬೆಳಕನ್ನೂ ವಿಶ್ವಜನ್ಯ ಎನ್ನಲಾಗಿದೆ. ಏಕೆಂದರೆ ಇದು ಚತುರ್ಥಸ್ತರಕ್ಕೆ ಸೇರಿದ್ದು-ಅಯಸ್ಯನ "ತುರೀಯಂ ಸ್ವಿದ್" ಈ ತುರೀಯದಿಂದಲೇ ಎಲ್ಲವೂ ಹುಟ್ಟಿದ್ದು. ಇದರ ಸತ್ಯದಿಂದಲೇ ಉಳಿದ ಎಲ್ಲವೂ ತಮ್ಮ ವಿಶಾಲವಾದ ವಿಶ್ವಜನೀನತೆಯಲ್ಲಿ ಅವತರಿಸಿ ವಾಸಿಸುತ್ತಿವೆ-ಅವೆಂದೂ ಉಷೆಯಲ್ಲಿ ಅನೃತ-ವಕ್ರತೆಗಳ ಉಪಾಧಿಗಳಿಂದ ಬದ್ಧವಾಗಿರುವುದಿಲ್ಲ.

ಆದುದರಿಂದಲೇ ದಿವ್ಯ ಉಷೆಯನ್ನು ದೇವರ ಕಣ್ಣೆಂದು ಕರೆಯಲಾಗುತ್ತದೆ ಮತ್ತು ಇವಳೇ ಸಮಗ್ರ ಸತ್ತೆಯನ್ನು ಅವತರಿಸುವಂತೆ ಮಾಡುತ್ತಾಳೆ, ಅವ್ಯಕ್ತಸ್ಥಿತಿಯಿಂದ ವ್ಯಕ್ತಸ್ಥಿತಿಗೆ ತರುತ್ತಾಳೆ ಎನ್ನಲಾಗಿದೆ.

ದಿವ್ಯ ಜೀವನದ ಅನಂತ ವಿಸ್ತಾರಕ್ಕೆ ಕರೆದೊಯ್ಯುವ ದೇವತೆಗಳ ಕಡೆಗಿನ ಪ್ರಯಾಣವೋ ದೇವತೆಗಳದೇ ಪ್ರಯಾಣವೋ ಅದು ಯಾವುದೇ ಆಗಲಿ, ಆ ಮೂಲಕ ಮಾನವನ ಮಾರ್ಗವು ತಾನೇ ಪ್ರತ್ಯಕ್ಷವಾಗುವುದೇ ಈ ದಿವ್ಯ ದರ್ಶನದ ಹುಟ್ಟಿನ ಪರಿಣಾಮ-"ದೇವಯಾನಾಃ". "ನನಗಿಂತ ಹಿಂದೆಯೇ ವಸುಗಳು ರೂಪಿಸಿದ ಚಲನಶಕ್ತಿಯಿಂದ ತಪ್ಪದೆ ಸಾಗುವ ದೇವತಾ ಪ್ರಯಾಣಗಳ ದಾರಿಗಳು ಕಣ್ಣಿಗೆ ಕಾಣುವಂತಾದವುಗಳು. ಎದುರಿಗೆ ಉಷಾದೃಷ್ಟಿಯು ಇದೆ ಮತ್ತು ನಮ್ಮ ಕುದುರೆಗಳನ್ನೇರಿ ನಮ್ಮೆಡೆಗಾಕೆ ಸಪರಿವಾರವಾಗಿ ಬಂದಿದ್ದಾಳೆ"- ಋಕ್ ೩. ನಿವಾಸ ಕ್ಷೇತ್ರವು ಹೇಗೆ ಮಾನವಾತ್ಮವು ಏರುವ ಮತ್ತು ಏರಿ ವಿಶ್ರಮಿಸುವ ಪ್ರಜ್ಞಾಸ್ತರಗಳೋ ಹಾಗೇ ವೇದೋಕ್ತವಾದ "ಮನೆ" ಎಂಬುದು ಆ ಆತ್ಮದ ವಾಸಸ್ಥಳಗಳಾದ ದೇಹಗಳೇ ಎಂಬುದು ನಾವು ಯಾವಾಗಲೂ ತಿಳಿದಿರಬೇಕಾದ ಅರ್ಥ. ಮಾನವನ ಮಾರ್ಗವೆಂದರೆ ಅತ್ಯುನ್ನತ ಪ್ರಜ್ಞಾಸ್ತರಕ್ಕೇರುವ ಪ್ರಯಾಣವೆಂದು ಅರ್ಥ. ನಾವು ನೋಡುವಂತೆ ಐದನೆಯ ಋಕ್ಕಿನಲ್ಲಿ ಪುನರುಕ್ತವಾದ ಪದ ಸಂಹತಿ ಹೇಳುವಂಥ ತಪ್ಪದೆ ದೇವತೆಗಳು ಮಾಡುವ ಪ್ರಯಾಣಗಳೆಂದರೆ - ದೇವತೆಗಳು ಮಾಡುವ ಕಾರ್ಯಗಳು ಅರ್ಥಾತ್ ಜೀವಾತ್ಮವು ಯಾವುದರಂತೆ ಬೆಳೆಯಬೇಕೋ ಆ ದಿವ್ಯ ವಿಧಿ (ಕಾಯದೆ). ಅನಂತರ ಆರ್ಕ್‌ಟಿಕ್ ಸಿದ್ಧಾಂತವನ್ನು ಬೆಂಬಲಿಸುವಂತೆ ತೋರುವ ಒಂದು ಅಪೂರ್ವ ಪ್ರತಿಮಾನ ಸಂಕೇತ ನಮಗೆದುರಾಗುತ್ತದೆ. "ಸೂರ್ಯೋದಯದ ಪೂರ್ವದ ದಿನಗಳು ಬಹಳವಾಗಿದ್ದವು (ಅಥವಾ ಸೂರ್ಯೋದಯಕ್ಕಿಂತ ಹಿಂದಿನವುಗಳಾದ ಹಳೆಯ ದಿನಗಳು ಬಹಳ); ಆ ದಿನಗಳಲ್ಲಿ, ಎಲೌ ಉಷೆಯೇ, ನೀನು ನಿನ್ನ ಪ್ರಿಯಕರನನ್ನರಸಿಕೊಂಡು ತಿರುಗುವಂತೆ ತಿರುಗುವುದು ನಮಗೆ ಕಂಡಿತು - ಆಮೇಲೆ ನೀನು ಬರಲಿಲ್ಲ" - ಋಕ್೩. ಇದು ನಿಜವಾಗಿಯೂ ಸತತವಾದ ಉಷಸ್ಸುಗಳ ಚಿತ್ರ - ನಡುವೆ ಇರುಳುಗಳಿರಲಿಲ್ಲ - ಆರ್ಕ್‌ಟಿಕ್ ಪ್ರದೇಶದಲ್ಲಿರುವುದು ಈ ಬಗೆ. ಈ ಪದ್ಯದಲ್ಲಿ ವ್ಯಕ್ತವಾಗುವ ಮಾನಸಶಾಸ್ತ್ರೀಯ ಅರ್ಥವು ಸುಸ್ಪಷ್ಟವಾಗಿದೆ.

ಈ "ಉಷಸ್ಸುಗಳು" ಎಂದರೆ ಏನು? ಹಳೆಯ ಪಿತೃಗಳಾದ ಅಂಗಿರಸರು ತಮ್ಮ ಕಾರ್ಯಗಳಿಂದ ಸೃಷ್ಟಿಸಿದಂಥವುಗಳು. "ದೇವತೆಗಳೊಡನೆ[೧] ಸತ್ಯ ಸಂಪನ್ನರಾದ ಹಳೆಯ ಆ ಋಷಿಗಳೂ ಸೋಮಪಾನದ ಸುಖವನ್ನು ಅನುಭವಿಸಿದರು. ಆ ಪಿತೃಗಳು ಗೂಢವಾಗಿದ್ದ ಬೆಳಕನ್ನು ಹುಡುಕಿ ತೆಗೆದರು. ನಿಜ ವಿಚಾರಸ್ಥರಾದ ಅವರು ("ಸತ್ಯಮಂತ್ರಾಃ") ಅರ್ಥಾತ್ ಸತ್ಯವಾದ ಶಬ್ದಗಳಿಂದ ಸ್ಫೂರ್ತವಾದ ವಿಚಾರವನ್ನು ಬಲ್ಲ ಆ ಋಷಿಗಳು ಉಷೆಯನ್ನು ಅಸ್ತಿತ್ವಕ್ಕೆ ತಂದರು (ಋಕ್ ೪) ; ಮತ್ತು ದಿವ್ಯ ಪ್ರಯಾಣದ ಮಾರ್ಗವಾದ ಉಷೆ ಪಿತೃಗಳನ್ನು ಎಲ್ಲಿಗೆ ಕರೆದೊಯ್ದಳು? ವಿಶಾಲತೆಯ ಮಟ್ಟಕ್ಕೆ, ಪ್ರಜ್ಞಾಸ್ತರಕ್ಕೆ "ಸಮಾನೇ ಊರ್ವೇ"- ಬೇರೆ ಕಡೆಯಲ್ಲಿ ಅವಿಚ್ಛಿನ್ನ ವಿಸ್ತಾರಕ್ಕೆ, "ಉರೌ ಅನಿಬಾಧೇ" - ಎನ್ನಲಾಗಿದೆ. ಇದು ಸ್ಪಷ್ಟವಾಗಿ ಕಣ್ವರ್ಷಿ ಹೇಳಿದಂತೆ ಮಾನವರು ವೃತ್ರನನ್ನು ಕೊಂದ ಮೇಲೆ ಮತ್ತು ಭೂಮಿ ಸ್ವರ್ಗಗಳನ್ನು ದಾಟಿ ಮೇಲೆ ಹೋದ ಬಳಿಕ ಹುಟ್ಟಿಸುವ ವಿಶಾಲ ಸತ್ತೆ ಯಾ ವಿಸ್ತಾರ ಪ್ರಪಂಚ ; ಇದೇ ವ್ಯಾಪಕವಾದ ಪರಮಸತ್ಯ ಮತ್ತು ಅದಿತಿಯ ಅನಂತ

---

೧. ನನಗೆ ಅದೇ ಸರಿಯಾದ ಅರ್ಥವೆಂದು ಗೊತ್ತಿಲ್ಲದಿದ್ದರೂ "ಸಧಮಾದಃ" ಎಂಬ ಪದಕ್ಕೆ ಸಾಂಪ್ರದಾಯಿಕ ಅರ್ಥವನ್ನೇ ಈಗ ಸ್ವೀಕರಿಸುತ್ತೇನೆ.

ಅಸ್ತಿತ್ವ. "ಸಮತಟ್ಟಾದ ವಿಶಾಲತೆಯಲ್ಲಿ ಅವರೆಲ್ಲರು ಸಂದರ್ಶಿಸುತ್ತಾರೆ, ತಮ್ಮ ಜ್ಞಾನವನ್ನು ಐಕ್ಯಗೊಳಿಸುತ್ತಾರೆ (ಅಥವಾ ಜ್ಞಾನಪೂರ್ಣರಾಗುತ್ತಾರೆ, ಜ್ಞಾನದಲ್ಲಿ ಪೂರ್ಣತೆಯನ್ನು ಪಡೆಯುತ್ತಾರೆ) ಆ ಒಟ್ಟಿನಲ್ಲಿ ಅವರು ಹೋರಾಡರು ; ಅವರು ಕಡಿಮೆಯಾಗುವುದಲ್ಲಿ (ಪರಿಮಿತರಾಗುವುದಿಲ್ಲ, ಪರಸ್ಪರ ಹಿಂಸಾಪರರಾಗುವುದಿಲ್ಲ - ದೇವರ ಕೆಲಸಗಳನ್ನು ಹ್ರಸ್ವಗೊಳಿಸುವುದಿಲ್ಲ ; ಅವುಗಳನ್ನು ಮೀರದೆ, ವಿಘ್ನಿಸದೆ (ತಮ್ಮ ಧ್ಯೇಯವನ್ನು) ವಸುಗಳ (ಬಲದಿಂದ) ತಲುಪುತ್ತಾರೆ (ಋಕ್ ೫)". ಸಪ್ತಾಂಗಿರಸರು - ಅವರು ಮಾನವ್ಯರಾಗಿರಲಿ, ದಿವ್ಯರಾಗಿರಲಿ - ಜ್ಞಾನದ ಬೇರೆ ಬೇರೆ ತತ್ತ್ವಗಳನ್ನು ಪ್ರತಿನಿಧಿಸುತ್ತಾರೆ ಎಂಬುದು ಸ್ಪಷ್ಟ ; ಆ ಜ್ಞಾನವಾದರೋ ಬೃಹಸ್ಪತಿ ಹೇಳಿದ ಸಪ್ತಾಸ್ಯ ವಿಚಾರ, ಸಪ್ತಮುಖದ ಶಬ್ದ ಮತ್ತು ಸಮತಟ್ಟಾದ ವಿಶಾಲತೆಯಲ್ಲಿ ಇವೆಲ್ಲವೂ ವಿಶ್ವಜನೀನ ಜ್ಞಾನವಾಗಿ ಸಾಮಶ್ರುತ್ಯದ ಏಕಸ್ವರವಾಗುತ್ತವೆ, ಏಕಜ್ಞಾನವಾಗುತ್ತವೆ. ತಪ್ಪು, ವಕ್ರತೆ, ಅನೃತಗಳು ಇಲ್ಲವಾಗುತ್ತವೆ ; ಅವುಗಳಿದ್ದಾಗಲೇ ಮಾನವರು ದೇವಕಾರ್ಯಕ್ಕೆ ವಿಘ್ನ ಉಂಟು ಮಾಡುವುದು - ಅವುಗಳಿಂದಲೇ ಅವರ ತತ್ತ್ವಭೇದಗಳು ಪ್ರಜ್ಞೆಯ ಭೇದಗಳು, ಸತ್ತೆಯ ಭೇದಗಳು ಒಂದಾಗಿ ಕರಗಿ, ದಿವ್ಯ ಉಷೆಯ ದರ್ಶನದಲ್ಲಿ ಯಾ ದೃಷ್ಟಿಯಲ್ಲಿ, ಸಮರಸವಾಗಿ ಹೋಗುವುದು - ಅವರ ಅಸ್ತಿತ್ವ, ಪ್ರಜ್ಞೆ, ಜ್ಞಾನಗಳ ತತ್ತ್ವಗಳಲ್ಲಿರುವ ಭೇದಗಳೆಲ್ಲಾ ಮಾಯವಾಗಿ ಐಕಾತ್ಮ್ಯವನ್ನು ಹೊಂದುವುದು - ಎಂದು ತಾತ್ಪರ್ಯ.

ವಸಿಷ್ಠೋಕ್ತಿಯಂತೆ ಉಷೆಯು ದಿವ್ಯೆ, ಆನಂದಮಯಿ, ಗೋವ್ರಜಗಳ ನೇತ್ರಿ, ಅಪಾರ ಐಶ್ವರ್ಯದ ಒಡತಿ, ಸುಖ ಸೌಲಭ್ಯಗಳ ನಾಯಿಕೆ, ಸತ್ಯಗಳ ಯಜಮಾನಿತಿ ("ಸೂನೃತಾನಾಂ"). ವಸಿಷ್ಠರು ಪಿತೃಗಳಾದ ಆದ್ಯದ್ರಷ್ಟಾರರು ಸಾಧಿಸಿದ ಸಿದ್ಧಿಯನ್ನೇ ಸಾಧಿಸಲು ಬಯಸುತ್ತಾರೆ ಮತ್ತು ಇದರಿಂದ ಇವರು ಮಾನವ್ಯರಲ್ಲದೆ ದಿವ್ಯ ಅಂಗಿರಸರಲ್ಲವೆಂಬುದು ಗೊತ್ತಾಗುತ್ತದೆ. ಅಂಗಿರಸರ ಪುರಾಣ ಕಥೆಯಲ್ಲಿ ಬರುವ "ಅಂಗಿರಸರ" ಅರ್ಥವು ಅಂತೂ ವಿವರಪೂರ್ವಕವಾಗಿ ಸ್ಥಿರಪಟ್ಟಂತಾಯಿತು - "ಪಣಿಗಳ" ಸರಿಯಾದ ಅಭಿಜ್ಞಾನವೊಂದು ಇದಕ್ಕೆ ಅಪವಾದ. "ಸರಮೆ" ಇನ್ನೊಂದು ಅಪವಾದ. ನಾಲ್ಕನೆಯ ಮಂಡಲದ ಪ್ರಾರಂಭದ ಸೂಕ್ತಗಳ ಅನುಚ್ಛೇದಗಳನ್ನು ಮುಚ್ಚು ಮರೆಯಿಲ್ಲದೆ ಹೇಳಲಾಗಿದೆಯಲ್ಲದೆ ಅವರು ಪಡೆದ ಸಿದ್ಧಿಯನ್ನೂ ವಣಿಸಲಾಗಿದೆ. ಅಂಗಿರಸ ಕಥೆಯ ಈ ಮುಖಕ್ಕೆ ವಾಮದೇವನ ಈ ಸೂಕ್ತಗಳು ಬಹಳ ಉದ್‌ಬೋಧಕವೂ ಮುಖ್ಯವೂ ಆಗಿವೆ ಮತ್ತು ಋಗ್ವೇದದಲ್ಲಿಯೇ ಅವು ತಮ್ಮ ಸ್ವಂತಿಕೆಯಿಂದ ಅತ್ಯಂತ ಆಕರ್ಷಕಗಳಾಗಿವೆ.



ಅಧ್ಯಾಯ-೧೯

# ಪಿತೃಗಳ ವಿಜಯ

"ಅಗ್ನಿ" ಎಂಬ ಆರ್ಷ ಸಂಕಲ್ಪ ಸ್ವರೂಪದ ದಿವ್ಯ ಜ್ವಾಲೆಯನ್ನು ಕುರಿತು ವಾಮದೇವನು ಸಂಬೋಧಿಸಿದ ಸೂಕ್ತಗಳು ಋಗ್ವೇದದಲ್ಲಿಯ ಸೂಕ್ತಗಳಲ್ಲೆಲ್ಲಾ ಅತ್ಯಂತ ಯೌಗಿಕ ಅಭಿವ್ಯಕ್ತಿಗಳಾಗಿವೆ ಮತ್ತು ಋಷಿ ಪ್ರಯುಕ್ತ ಅರ್ಥಪೂರ್ಣ ವಾಗಲಂಕಾರಗಳ ಪದ್ಧತಿಯನ್ನು ನಾವು ನಮ್ಮ ಮನದಲ್ಲಿ ದೃಢವಾಗಿ ಗ್ರಹಿಸಿಟ್ಟುಕೊಂಡರೆ ತಮ್ಮ ಅರ್ಥಗಳಲ್ಲವು ಬಹಳ ಸರಳವಾಗುತ್ತವೆ ; ಹಾಗೆ ಮನದಲ್ಲಿ ಧಾರಣೆ ಮಾಡಿ ಇಟ್ಟುಕೊಳ್ಳದಿದ್ದರೆ, ಆ ಅಲಂಕಾರೋಕ್ತಿಗಳು (ಪ್ರತಿಮಾ ವಿನ್ಯಾಸಗಳು, ರೂಪಕ ರಾಜಿಗಳು, ಸಂಕೇತ ಸಾಧನಗಳು) ಬರೀ ಹೊಳೆವ ಮಂಜಿನ ಪರದೆಯಾಗಿ ತೋರುವ ಪ್ರತಿಮಾಪಕಗಳಿಂದ ನಮ್ಮ ಜಿಜ್ಞಾಸಾ ಪ್ರಯತ್ನವನ್ನು ಸೋಲಿಸಿ ಬಿಡುವುವು. ಸೂಕ್ತಾರ್ಥದ, ಅರ್ಥದ್ವಾರದ ಬೀಗದ ಕೈಯಾಗಿರುವ, ಅಚಲವಾಗಿ ನೆಲೆ ನಿಲ್ಲಿಸಿದ ಅಭಿಜ್ಞಾನ ರೇಖೆಗಳ ಸೂತ್ರವನ್ನು ಓದುಗನು ಯಾವಾಗಲೂ ಅನ್ವಯಿಸುತ್ತಲೇ ಹೋಗಬೇಕು ; ಇಲ್ಲವಾದರೆ ಅವನು ಸತತ ಬಳಕೆಯ ತತ್ವಶಾಸ್ತ್ರೀಯ ಪಾರಿಭಾಷಿಕ ಪದಗಳ ಅರ್ಥವನ್ನರಿಯದೆ ಅತಿಭೌತಶಾಸ್ತ್ರವನ್ನು ಓದಲು ಹೊರಟವನಂತೆ, ವೇದಾಂತಾಭ್ಯಾಸಿಯಂತೆ, ಅಥವಾ ವಿಲಕ್ಷಣವಾದ ಪದ್ಧತಿಯ ವೈಯಾಕರಣ ಸಂಜ್ಞೆ-ಪಾರಿಭಾಷೆಗಳ ವ್ಯಕ್ತಪಡಿಸಲಾದ ಪಾಣಿನೀಯ ವ್ಯಾಕರಣ ಸೂತ್ರಗಳನ್ನು ಉಕ್ತ ಪಾರಿಭಾಷಿಕಗಳನ್ನರಿಯದೆ ಓದ ಹೋದವನಂತೆ ವೇದಾಧ್ಯಾಯಿಯು ತನ್ನ ಅಧ್ಯಯನದಲ್ಲಿ ವಿಫಲನಾಗುತ್ತಾನೆ, ನಷ್ಟಕ್ಕೊಳಗಾಗುತ್ತಾನೆ. ಪ್ರಾಚೀನ ಮಾನವ್ಯ ಗೋತ್ರರ್ಷಿಗಳಾದ, ಮೂಲ ಪುರುಷರಾದ, ಹಿರಿಯರ ಮಹಾ ಸಿದ್ಧಿಯ ಬಗೆಗೆ ವಾಮದೇವನು ಹೇಳಬೇಕಾಗಿ ಬಂದದ್ದನ್ನು ತಿಳಿದುಕೊಳ್ಳಲು ಅಗತ್ಯವಾದ ಪ್ರತಿಮಾಪದ್ಧತಿಯ ಮೇಲೆ (ಸಂಜ್ಞೆ, ಸಂಕೇತ, ರೂಪಕ, ಪರಿಭಾಷೆಗಳ ಮೇಲೆ) ಸಾಕಷ್ಟು ಬೆಳಕು ನಮಗೆ ಆಗಲೇ ದೊರಕಿದೆ.

ಆ ಮಹಾಸಿದ್ಧಿ ಏನೆಂಬುದನ್ನು ಪ್ರಾರಂಭದಲ್ಲೇ ನಮ್ಮ ಮನಸ್ಸಿನಲ್ಲಿ ಗ್ರಹಿಸಿ ಇಟ್ಟುಕೊಳ್ಳಲು ಪರಾಶರ ಶಾಕ್ತ್ಯನು ಹೇಳಿದ ಸ್ಪಷ್ಟವೂ ಬೇಕಷ್ಟೂ ಆದ ರೇಖಾ ಸೂತ್ರಗಳು ನಮ್ಮೆದುರಿವೆ, ನಿಪಾತ ವಿನ್ಯಾಸನಗಳು ನಮಗೆ ಸಿಕ್ಕಿವೆ. "ನಮ್ಮ ಪಿತೃಗಳು ತಮ್ಮ ಪದಗಳಿಂದ (ಮಂತ್ರಶಕ್ತಿಯಿಂದ) ದೃಢವೂ ಗಟ್ಟಿಯೂ ಆದ ಸ್ಥಳಗಳನ್ನು ಒಡೆದರು-ಹೌದು ಅಂಗಿರಸರು ತಮ್ಮ ಮಹಾಧ್ವನಿಯಿಂದ ಬೆಟ್ಟವನ್ನೊಡೆದು ತೆರೆದರು. ಅವರು ನಮ್ಮಲ್ಲಿಯೇ ಮಹಾಸ್ವರ್ಗದ ದಾರಿಯನ್ನು ರಚಿಸಿದರು. ಅವರು ಹಗಲನ್ನೂ ಸ್ವರ್‌ನ್ನೂ ದರ್ಶನವನ್ನೂ ಮಿರುಗುವ ದನಗಳನ್ನೂ ಶೋಧಿಸಿದರು, ಪಡೆದರು-"ಚಕ್ರರ್ ದಿವೋ ಬೃಹತೋ ಗಾತುಂ ಅಸ್ಮೇ ಅಹಃ ಸ್ವರ್ ವಿವಿದುಃ ಕೇತುಂ ಉಸ್ರಾಃ (I.71.2) ಅವನು ಹೇಳುತ್ತಾನೆ. ಈ ದಾರಿಯೇ ಸ್ವರ್ಗಕ್ಕೆ ಒಯ್ಯುವ ದಾರಿ ಎಂದು, "ಸರ್ವಾಂತರ್ಯಾಮಿಗಳಾದ

ಅವರು, ನ್ಯಾಯವಾದ ಫಲಕೊಡುವವರು, ಅಮೃತತ್ವದತ್ತಣ ಮಾರ್ಗವೊಂದನ್ನು ರೂಪಿಸಿದವರು ; ಅವರಿಗೆ ಭೂಮಿ ಅಗಲವಾದದ್ದು ಅವರ ಮಹತ್ವದಿಂದ ಮತ್ತು ಮಹಾದೇವತೆಗಳಿಂದ-ಮಾತೃಶ್ರೀ ಅದಿತಿಯು ಸ್ವಪುತ್ರರೊಡನೆ ಅದನ್ನೆತ್ತಿ ಹಿಡಿಯಲು ಬಂದಳು (ಯಾ ತಾನೇ ಅವತರಿಸಿದಳು)" (I.72.9)[೧] ಎಂದರೆ, ಭೌತಿಕ ವಸ್ತುವು ಮೇಲಿರುವ ಅನಂತ ಪ್ರಜ್ಞಾಸ್ತರಗಳ ಮಹತ್ವದಿಂದ, ಸಂದರ್ಶಿಸಲ್ಪಟ್ಟಿತು; ಮತ್ತು ಆ ಸ್ತರಗಳನ್ನಾಳುವ ಅಧಿದೇವತೆಗಳು ಆ ವಸ್ತುವಿನ ಇತಿಮಿತಿಗಳನ್ನು (ಜೀವಾತ್ಮನ ಉಪಾಧಿಬದ್ಧತೆಯನ್ನು) ಮುರಿದೊಗೆದು ಪರಂಜ್ಯೋತಿಯೆದುರಿಡುತ್ತಾರೆ, ಅನಂತ ಪ್ರಜ್ಞೆಯಿಂದ ಅದನ್ನಲ್ಲೇ ನಿಲ್ಲಿಸುತ್ತಾರೆ. ಯಾವ ದೇವತೆಗಳವರು? ಮಾತೃಶ್ರೀ ಅದಿತಿ, ಆಕೆಯ ಮಕ್ಕಳಾದ ದಿವ್ಯಶಕ್ತಿಗಳು-ಅವೋ ಪರಮೋಚ್ಚದೇವಜಾತ. ಇದೇ ವೈದಿಕ ಅಮೃತತತ್ವ (ಅಮರ್ತ್ಯತ್ವ). ಪರಾಶರನು ಈ ಶೋಧನೆಯನ್ನು ಮತ್ತು ವಿಸ್ತರಣೆಯನ್ನು ತನ್ನ ಯೌಗಿಕ ಆದರೆ ಇನ್ನೂ ಹೆಚ್ಚು ಸ್ಪಷ್ಟವಾದ ಹಾಗೂ ಆಕರ್ಷಕವಾದ (ಅಚ್ಚುಮೆಚ್ಚಿನ) ಶೈಲಿಯಲ್ಲಿ ಅಚ್ಚುಕಟ್ಟಾಗಿ ಹೇಳಿದ್ದಾನೆ. "ಅವರು ಸತ್ಯವನ್ನು ಧಾರಣೆ ಮಾಡಿದರು, ಅದರ ವಿಚಾರವನ್ನು ಶ್ರೀಮಂತಗೊಳಿಸಿದರು, ತಮ್ಮ ಬಾಳಿನ (ಸತ್ತೆಯ) ತುಂಬಾ ಆ ಆರ್ಯರು (=ಮುಮುಕ್ಷುಗಳಾದವರು ಎಂದಿಲ್ಲಿ ತಾತ್ಪರ್ಯ) ದಯಾಶಾಲಿಗಳಾದ ಜೀವಾತ್ಮರು ಅದನ್ನು ಹರಹಿ ತುಂಬಿಕೊಂಡರು-"ದಧನ್ ಋತಂ ಧನಯನ್ ಅಸ್ಯ ಧೀತಿಂ, ಅದ್ ಇದ್ ಅರ್ಯೋ ದಿಧಿಷ್ವೋ ವಿಭೃತ್ರಾಃ-(I.71.3.)" "ವಿಭೃತ್ರಾಃ" ಎಂಬುದರಲ್ಲಿಯ ಪ್ರತಿಮೆಯು ನಮ್ಮ ಸತ್ತೆಯ ಎಲ್ಲ ತತ್ತ್ವಗಳಲ್ಲಿ (ಘಟಕಗಳಲ್ಲಿ) ಪರಮಸತ್ಯದ ವಿಚಾರವನ್ನು ಎತ್ತಿ ಹಿಡಿದು ಎಂದು ಅಥವಾ ಸಾಮಾನ್ಯ ವೈದಿಕ ವಿಚಾರ ಸರಣಿಯ ಪ್ರಕಾರ ಎಲ್ಲ ಸಪ್ತ ಜಲಗತ ಸಪ್ತಾಸ್ಯ ವಿಚಾರವನ್ನು ಎತ್ತಿ ಹಿಡಿದು ಎಂದು ಸೂಚಿಸುತ್ತದೆ. (ಅಪ್ಸುಧಿಯಂ ದಧಿಷೇ")- ಇತರೆಡೆಗಳಲ್ಲಿ ಇದೇ ರೂಪದ ಎನ್ನುವಷ್ಟರ ಮಟ್ಟಿನ ಭಾಷೆಯಲ್ಲಿ ಈ ಭಾವವನ್ನು ವ್ಯಕ್ತಪಡಿಸಿದ್ದನ್ನು ನಾವು ನೋಡಿದ್ದೇವೆ. ಈ ಸಾಲುಗಳ ಮುಂದೆಯೇ ಬರುವ ಭಾಗ ಇದನ್ನು ಪ್ರಮಾಣಿಸುತ್ತದೆ- ಕೆಲಸ ಮಾಡುವವರು ತೃಷ್ಣಾರಹಿತದ (ಜಲಗಳ) ಹತ್ತಿರ ಹೋಗಿ ಆ ಮೂಲಕ ಸಂತೋಷದ ಸಂತೃಪ್ತಿಯಿಂದ ದಿವ್ಯಜನನಗಳನ್ನು ಹೆಚ್ಚಿಸಿದರು-"ಅತೃಷ್ಯಂತೀರ್ ಅಪಸೋಯಂತಿ ಅಚ್ಛಾ, ದೇವಾನ್ ಜನ್ಮ ಪ್ರಯಸಾ ವರ್ಧಯಂತೀಃ". ಐಕ್ಯಡಿಯ ಪರಮಸತ್ಯಪ್ರಜ್ಞೆಯು ಸಂತೃಪ್ತವಾದ ಐಕ್ಯಡಿಯ ಪರಮಸತ್ಯಾಸ್ತಿತ್ವದಲ್ಲಿದ್ದು ಜೀವಾತ್ಮನ ಮುಮುಕ್ಷುತ್ವದ ತೃಪ್ತಿಯ ಬಲದಿಂದ ನಮ್ಮಲ್ಲಿರುವ ದಿವ್ಯಜನ್ಮಗಳನ್ನು ವರ್ಧಿಸುತ್ತದೆ- ಇದೇ ಅಮೃತತತ್ವದ ಬೆಳವಣಿಗೆ, ಅಭಿವೃದ್ಧಿ. ಇದೇ ಜೀವನದ ದಿವ್ಯತೆ, ಬೆಳಕು, ಆನಂದ. ಸತ್=ದಿವ್ಯಜೀವನ ; ಚಿತ್ ದಿವ್ಯಜ್ಞಾನ; ಆನಂದ=ದಿವ್ಯನಿತ್ಯಸುಖ-ಎಂಬ ತ್ರಿತ್ವದ ಅರ್ಥಸಾರ. ವೇದಾಂತಿಗಳಿದನ್ನು ಅನಂತರ ಸಚ್ಚಿದಾನಂದ ಎಂದು ಕರೆದರು-ಅದು ಮೂರಲ್ಲ, ಒಂದೇ ಒಂದು ಎಂಬುದು ಅವಿಸ್ಮರಣೀಯ.

ನಮಗೆ ಇಂದಿನ ಪರಿಮಿತ ಮರ್ತ್ಯ ಜೀವನದ ಬದಲಾಗಿ ವಿಶ್ವ ವಿಶಾಲವೂ ಅಮರವೂ ಆದ ಇರುವಿಕೆಯು ಸಿಕ್ಕುವುದೆಂದು ಆಶ್ವಾಸನ ನೀಡುವ ಸತ್ಯದ ವೈಶ್ವತ್ರಿಕ ವಿಸರಣ ಮತ್ತು ನಮ್ಮಲ್ಲಿ ಎಲ್ಲ ದೇವತೆಗಳು ಹುಟ್ಟಿ ಚಟುವಟಿಕೆ ನಡೆಸುವುದು ಎಂಬ ವಿಷಯವು ಪರಾಶರನ I.68 ನೆಯ ಸೂಕ್ತದಲ್ಲಿ ಇನ್ನೂ ಹೆಚ್ಚು ಸ್ಪಷ್ಟವಾಗಿದೆ. "ತನ್ನ ಸತ್ತೆಯ ಮಹತ್ವದಿಂದ ಅಗ್ನಿಯು ಸರ್ವದೇವತಾಗರ್ಜಿತ ಜರರನಾದಾಗ", ದಿವ್ಯ ದ್ರಷ್ಟ ಸಂಕಲ್ಪ ಸ್ವರೂಪನಾದ ಅವನು ಸ್ವರ್ಗಾರೋಹಣ

೧. ಆ ಯೇವಿಶ್ವಾ - ಸ್ವಪತ್ಯಾನಿ ತಸ್ಥು : ಕೃಣ್ವಾನಾಸೋ ಅಮೃತತ್ವಾಯ ಗಾತುಂ ; ಮಹ್ನಾ ಮಹದ್ಭಿಃ ಪೃಥಿವೀ ವಿ ತಸ್ಥೇ ಮಾತಾ ಪುತ್ರೈರ್ ಅದಿತಿರ್ ಧಾಯಸೇವೇಃ ॥

ಮಾಡಿ, ರಾತ್ರಿಗಳ ಪರದೆಯನ್ನು ತೆಗೆದೆಸೆದು, ನಿತ್ಯವೂ (ಸ್ಥಿರವೂ) ಉತ್ಕ್ರಿಯವೂ ಆದ ಪದಾರ್ಥಗಳನ್ನು ಹೊರಗೆ ಕಾಣುವಂತೆ ಮಾಡಿದನು- (ಚರಾಚರಗಳನ್ನು ನಮಗೆ ಕಾಣಿಸಿದನೆಂದೂ ಹೇಳಬಹುದು.) ಪರಮ ಸತ್ಯ ಸ್ವರೂಪದ ದಿವ್ಯ ಸಂಕಲ್ಪ ಯಾ ದಿವ್ಯಕರ್ಮ ಎಂಬುದನ್ನು ಎಲ್ಲರೂ ಸ್ವೀಕರಿಸುವರು. "ಓ ದೇವದೇವ, ನೀನು ಜೀವವಾಗಿ ಜನಿಸಿದೆ ; ಸತ್ಯಕ್ಕೆ ಬೇಡವಾದ ಮರುಸ್ಥಲದಂಥ ಜಡಸತ್ತೆಯಿಂದ, ಅದರ ನಿರ್ದ್ರವತೆಯಿಂದ, ನೀನು ಹುಟ್ಟಿದೆ. ತಮ್ಮ ಚಲನವಲನಗಳಿಂದ ಎಲ್ಲರೂ ಸತ್ಯವನ್ನು ಸಾಧಿಸಿಕೊಂಡು ದೇವತಾತ್ವದಲ್ಲಿ ನಿಂತು ಅಮರತ್ವವನ್ನು ಗಳಿಸುತ್ತಾರೆ- "ಭಜಂತ ವಿಶ್ವೇ ದೇವತ್ವಂ ನಾಮ, ಋತಂ ಸಪಂತೋ ಅಮೃತಂ ಏವೈಃ-ಸತ್ಯದ ಪ್ರೇರಣೆಯು, ಸತ್ಯದ ಚಿಂತನವು, ವಿಶ್ವಾತ್ಮಕ ಜೀವನವಾಗಿ ಪರಿಣಮಿಸುವುದು.(ಸರ್ವ ಜೀವನವ್ಯಾಪಕವಾಗುವುದು, ಸರ್ವ ಜೀವತ್ ಪದಾರ್ಥವ್ಯಾಪಕ ವಾಗುವುದು, ಸರ್ವಗ್ರಹವಾಗುವುದು) ಮತ್ತು ಅವುಗಳ ಕಾರ್ಯಗಳನ್ನು ಮುಗಿಸಿ ಕೊಡುವುದು" - ಋತಸ್ಯ ಪ್ರೇಷಾ ಋತಸ್ಯ ಧಿತಿರ್ ವಿಶ್ವಾಯುರ್ ವಿಶ್ವೇ ಅಪಾಂಸಿ ಚಕ್ರುಃ (ಋಕ್ ೧-೩).

ಮತ್ತು ಯುರೋಪೀಯ ವಿದ್ವತ್ತೆಯು ಆಧುನಿಕರ ಮನದ ಮೇಲೆ ಹೇರಿದ ವೇದದ ದುರ್ದೈವಿ ಅಪವ್ಯಾಖ್ಯಾನವು ನಮ್ಮನ್ನು ದೆವ್ವ ಹಿಡಿದಂತೆ ಹಿಡಿದುಕೊಳ್ಳದಿರಲೆಂದು, ಪಂಜಾಬಿನ ೫ ನದಿಗಳನ್ನು ಎತ್ತಿ ಸ್ವರ್ಗಕ್ಕೇರಿಸಿದ್ದು ನಮ್ಮ ಪೂರ್ವಜರ ಅತಿಭೌತಿಕ ಸಾಧನೆಯೆಂದು ತಿಳಿಯುವ ಕಲ್ಪನೆ ಅಂಟಿಕೊಳ್ಳದಿರಲೆಂದು, ಪರಾಶರನು ತನ್ನ ಸುಸ್ಪಷ್ಟವಾದ ಪ್ರಬೋಧಕ ರೀತಿಯಿಂದ ಸಪ್ತ ಸಿಂಧುಗಳ ಬಗೆಗೆ ಹೇಳುತ್ತಾನೆ. "ಸತ್ಯದ ಪೋಷಕ ಧೇನುಗಳು" ("ಧೇನವಃ" ನದಿಗಳಿಗನ್ವಯಿಸಿದ ಪ್ರತಿಮೆ. "ಗಾವಃ" ಯಾ "ಉಸ್ರಾಃ" ಎಂಬಿವು ಸೂರ್ಯನ ಪ್ರಕಾಶಮಾನದನಗಳಿಗನ್ವಯಿಸಿದ ಪ್ರತಿಮೆ) ಅವನನ್ನು ಪೋಷಿಸಿದವು ; ಅಂಬಾ ಎಂದು ಕೂಗುತ್ತಾ ಸುಪುಷ್ಟ (ಸುಖಕರ) ಕೆಚ್ಚಲುಗಳನ್ನುಳ್ಳ ಆ ಆವ್ಗಳು ಸ್ವರ್ಗದಲ್ಲಿ(ಸುಖವನ್ನು) ಭೋಗಿಸಿದವು. ಸುಪ್ರಮಾನಸ ಪ್ರಜ್ಞಾಸ್ತರದಿಂದ ಋಜುಚಿಂತನ ಶಕ್ತಿಯನ್ನು ವರವಾಗಿ ಪಡೆದ ನದಿಗಳು ಗುಡ್ಡದ ಮೇಲೆ ಅಗಲವಾಗಿ ಮತ್ತು ಸಮಮಟ್ಟದಲ್ಲಿ ಹರಿದವು - "ಋತಸ್ಯಹಿ ಧೇನವೋ ವಾವಶಾನಾಃ, ಸ್ಮದೂಧ್ನೀಃ ಪೀಪಯಂತ ದ್ಯುಭಕ್ತಾಃ ; ಪರಾವತಃ ಸುಮತಿಂ ಭಿಕ್ಷಮಾಣಾಃ, ವಿ ಸಿಂಧವಃ ಸಮಯಾ ಸಸ್ರುರ್ ಅದ್ರಿಂ (I.73.6) ಮತ್ತು I.72.8 ರಲ್ಲಿ ಇತರ ಸೂಕ್ತಗಳಲ್ಲಿ ನದಿಗಳಿಗೆ (ಸಿಂಧುಗಳಿಗೆ) ಅನ್ವಯಿಸಿದ[1] ಪದ ಸಂಹತಿಯನ್ನು ಬಳಸಿ ಧೇನುಗಳನ್ನು ಕುರಿತು, "ಸ್ವರ್ಗದ ಆ ಏಳು ಬಲವತಿಯರು ವಿಚಾರವನ್ನು ನೆಟ್ಟಗೆ ಇಟ್ಟು, ಪರಸತ್ಯವನ್ನರಿತು, ಜ್ಞಾನದಲ್ಲಿ ನಿತ್ಯ ಸುಖದ ದ್ವಾರಗಳನ್ನು ನೋಡಿ ಗುರುತಿಸಿದರು; ಆ ಹೊಳೆವ ಆವುಗಳ (ಆಕಳುಗಳ) ವೇಗವನ್ನೂ ವಿಸ್ತಾರವನ್ನೂ ನೋಡಿದಳು ; ಆದ್ದರಿಂದ ಮಾನವ ಪ್ರಾಣಿಯು ಆನಂದವನ್ನು ಅನುಭವಿಸುತ್ತಾನೆ"- "ಸ್ವಾಧ್ಯೋದಿವ ಆ ಸಪ್ತ ಯಹ್ವೀಃ, ರಾಯೋ ದುರೋ ವಿ ಋತಜ್ಞಾ ಅಜಾನನ್, ವಿದದ್ ಗವ್ಯಂ ಸರಮಾದೃಳ್ಹಂ ಊರ್ವಂ ಯೇನಾ ನು ಕಂ ಮಾನುಷೀ ಭೋಜತೇ ವಿಟ್". ಇವೆಂದೂ ಸ್ಪಷ್ಟವಾಗಿ ಪಂಜಾಬಿನ ಜಲಾಶಯಗಳಲ್ಲ; ಇವು ಸ್ವರ್ಗದ ಹೊಳೆಗಳು ಪರಮಸತ್ಯದ[1] ಧಾರೆಗಳು ; ಸರಸ್ವತಿಯಂಥ ದೇವಿಯರು ಜ್ಞಾನದಲ್ಲಿ ಪರಸತ್ಯವನ್ನು ಹೊಂದಿದವರು ಮತ್ತು ಅದರಿಂದ ಮಾನವ ಪ್ರಾಣಿಗೆ ಮೋಕ್ಷದ ಬಾಗಿಲುಗಳನ್ನು ತೆರೆಯುವವರು. ಇಲ್ಲಿಯೂ

---

೧. I.32.8 ರಲ್ಲಿ ಹಿರಣ್ಯಸ್ತೂಪ ಅಂಗಿರಸನು ವೃತ್ರ ಬಿಟ್ಟ ನೀರನ್ನು "ಮನವನ್ನೇರುವ" ಎಂದು ವರ್ಣಿಸಿದ್ದನ್ನು ಗಮನಿಸಿರಿ - "ಮನೋರುಹಾಣಾಃ" ಮತ್ತು ಇತರ ಕಡೆಗಳಲ್ಲಿ ಅದನ್ನು "ಜ್ಞಾನಯುಕ್ತ ಜಲಗಳು" ಎಂದು ಹೇಳಿದ್ದನ್ನು ಲಕ್ಷಿಸಿರಿ- "ಆಪೋವಿಚೇತಸಃ (I.83.1).

ನಾನಾಗಲೇ ಒತ್ತಿ ಹೇಳಿದಂತೆ ದೇನು ಶೋಧಕ್ಕೂ ನದಿಗಳು ಹೊರ ಹರಿಯುವುದಕ್ಕೂ ನಿಕಟ ಸಂಬಂಧವಿದೆ ; ಅವೆರಡೂ ಒಂದೇ ಕರ್ಮದ ಎರಡು ಅಂಗಗಳು. ಸತ್ಯದ ಸಿದ್ಧಿ ಮತ್ತು ಮಾನವರ ಅಮರತ್ವ - "ಋತಂ ಸಪಂತೋ ಅಮೃತಂ ಏವೈಃ". ಪರಮಸತ್ಯದ ಪ್ರೇರಣೆ, ಪರಮಸತ್ಯದ ಚಿಂತನ, ಎಂಬುದು ವಿಶ್ವಮಯ ಜೀವನ (ವಿಶ್ವವ್ಯಾಪಕ ಜೀವನ)- ಅದರಲ್ಲಿ ಅವರು ತಮ್ಮ ಕರ್ಮಫಲವೆಲ್ಲವನ್ನೂ ಪಡೆಯುತ್ತಾರೆ-ಪೂರ್ಣಸಿದ್ಧಿಯನ್ನು ಪಡೆಯುತ್ತಾರೆ"- "ಋತಸ್ಯ ಪ್ರೇಷಾ ಋತಸ್ಯ ಧೀತಿರ್ ವಿಶ್ವಾಯುರ್ ವಿಶ್ವೇ ಅಪಾಂಸಿ ಚಕ್ರುಃ(ಋಕ್೧-೩)-ಎಂಬುದನ್ನಿಲ್ಲಿ ಪುನಃ ಸ್ಮರಿಸಿಕೊಳ್ಳಬೇಕು. ಪೂರ್ಣಸಿದ್ಧಿಯೇ ಮೋಕ್ಷ, ನಿತ್ಯಾನಂದಾನುಭವ, ಸ್ವರ್ಗಾತೀತ ಪರಮಸುಖ-ಎಂಬುದು ತಾತ್ಪರ್ಯ.

ಈಗ ಚೆನ್ನಾಗಿ ಸ್ಪಷ್ಟವಾದ ಸಂಗತಿ ಇದು -ಅಂಗಿರಸರು ಸಾಧಿಸಿದ ಸಿದ್ಧಿಯೆಂದರೆ ಸತ್ಯವಿಜಯ, ಅಮರತ್ವವಿಜಯ-ಸ್ವರ್ಗಾತೀತವಾದ ಸ್ವರ್ ಎಂದರೆ ಪರಮ ಸತ್ಯ, ಅದೇ ಅಮರತ್ವ-ಅದೇ "ಬೃಹತ್ ದ್ಯೌಃ", ಪರಮ ಸತ್ಯ ಪ್ರಜ್ಞಾಸ್ತರ. ಅದು ಸಾಮಾನ್ಯ ಭೂಮಿ ಹಾಗೂ ಸ್ವರ್ಗಗಳಿಗಿಂತ ಮೇಲಿನದು-ಭೂ-ಸ್ವರ್ಗಗಳು ಸಾಮಾನ್ಯವಾದ ನಮ್ಮ ಮಾನಸ -ಭೌತಿಕ ಪ್ರಜ್ಞಾಸ್ತರಗಳು (ಭೂ=ಭೌತಿಕ, ಸ್ವರ್ಗ=ಮಾನಸಿಕ). ಪ್ರತಿಯೊಂದು ಪ್ರಜ್ಞಾಸ್ತರವೂ ಒಂದು ಇರವು, ಸತ್ತಾಸೋಪಾನ, ಜೀವನ ಸ್ವರೂಪ-ಅಂತ್ಯಸ್ತರವೊಂದೇ ಅಪರಿವರ್ತನೀಯ-ಮಿಕ್ಕೆಲ್ಲವೂ ಪರಿವರ್ತನೀಯ-ಎಂಬುದಿಲ್ಲಿ ಸ್ಮರ್ತವ್ಯ. ಮಹಾಸ್ವರ್ಗದ (ಮುಕ್ತಿಯ), ಅಂಗಿರಸರು ಕಂಡು ಹಿಡಿದ ಪರಮಸತ್ಯದ (ಮೋಕ್ಷದ) ಹಾದಿ ಎಂಬುದೂ ಸರಮಾಶುನಿ ಅನುಸರಿಸಿ ಹೋದ ಹಾದಿ ಎಂಬುದೂ ಒಂದೇ- ಅದು ಅಮೃತತ್ವಕ್ಕೆ ಒಯ್ದು ಮುಟ್ಟಿಸುವ ಹಾದಿ- "ಅಮೃತತ್ವಾಯ ಗಾತುಂ" - I.72.9 ಉಷೆಯ ದರ್ಶನ ಅಥವಾ "ಕೇತು" ಎಂಬುದು ಅಂಗಿರಸರು ಗೆದ್ದುಕೊಂಡ ಹಗಲು - ಅದೇ ಪರಸತ್ಯ ಪ್ರಜ್ಞೆಗೆ ತಕ್ಕ ದರ್ಶನ, ಸಾಕ್ಷಾತ್ಕಾರ (ಅಪರೋಕ್ಷಾನುಭೂತಿ). ಸೂರ್ಯನ ಮಿರುಗುವ ದನಗಳು ಮತ್ತು ಉಷೆ-ಇವರನ್ನು ಪಣಿಗಳಿಂದ ಗೆದ್ದು ತಂದದ್ದು ಪೂರ್ವೋಕ್ತ. ಈ ದನಗಳೆಂದರೆ ಈ ಪರಮ ಸತ್ಯ ಪ್ರಜ್ಞೆಯ ಪ್ರಕಾಶಗಳು - ಚರ್ಮ ಚಕ್ಷುಸ್ಸಿಗೆ ಅತೀತವಾದವುಗಳು-ಎಂದು ತಿಳಿಯಬೇಕು. ಈ ಪ್ರಕಾಶಗಳು ಪರಮ ಸತ್ಯದ ಆಲೋಚನೆಯನ್ನು ಕಲ್ಪಿಸಿಕೊಳ್ಳಲು ನೆರವೀಯುವಂಥವುಗಳು ("ಋತಸ್ಯಧೀತಿಃ") ಇವು ಅಯಸ್ಯನ ಸಪ್ತಶೀರ್ಷ ವಿಚಾರದಲ್ಲಿ ಪರಿಪೂರ್ಣತೆಯನ್ನು ಹೊಂದುವುವು. ವೇದವು ಹೇಳುವ ರಾತ್ರಿಯು ಮಸುಕಾದ ಪ್ರಜ್ಞೆ - ಅದು ಮಾನುಷ ಪ್ರಜ್ಞಾಸ್ತರ ; ಅದಿರುವುದು ಅವನ ಅವಪ್ರಜ್ಞೆಯಲ್ಲಿ, ಅವಚೇತನೆಯಲ್ಲಿ, ಅರ್ಧಜ್ಞಾತ ಪ್ರಜ್ಞಾಸ್ತರದಲ್ಲಿ ಅದೇ ವೇದಭಾಷೆಯಲ್ಲಿ ಗುಡ್ಡದೊಳಗಡಗಿರುವ ಗವಿಯಲ್ಲಿರುವ ಅಧ್ಯಾರೋಪ ಶಕ್ತಿ, ಆವರಣ ಶಕ್ತಿ- ಅದರಿಂದ, ಆ ಕತ್ತಲಿನಿಂದ, ಇರುಳಿನಿಂದ, ಸತ್ಯ ಸೂರ್ಯನು ನಮಗೆ ಮುಕ್ತನಾಗಬೇಕು. ನಮ್ಮ ಅವಪ್ರಜ್ಞೆಯೇ ಆ ಅವಿದ್ಯೆ ; ಅದರಿಂದ ಪರಮಸತ್ಯ ಎಂಬ (ಅವಾಙ್ಮಾನಸ ಗೋಚರ) ಸಚ್ಚಿದಾನಂದ ಸ್ಥಿತಿಯಲ್ಲಿ ಐಕ್ಯ ಹೊಂದುವುದೇ ವೇದದ ಮಹಾ ಸ್ವರ್ಗವಾಸ, ವೇದಾಂತದ ಬ್ರಹ್ಮಾತ್ಮೈಕ್ಯ ಸಿದ್ಧಿ , ಯೋಗಶಾಸ್ತ್ರದ ಅಸಂಪ್ರಜ್ಞಾತ ಸಮಾಧಿ ಎಂಬುದು ತಾತ್ಪರ್ಯ- ಸಹಜ, ನಿರ್ವಿಕಲ್ಪ ಸಮಾಧಿ ಎಂದರೂ ಅದೇ- ಇದು ತಾತ್ಪರ್ಯಸಾರ. ಭೂಮ್ಮುಖವಾಗಿ ಕೆಳಗೆ ಹರಿಯುವ ಸಪ್ತ ನದಿಗಳೆಂದರೆ ನಮ್ಮ ಇರವಿನ ಏಳ್ಮಡಿ ತತ್ವದ ಮೇರೆ ಮೀರಿದ ಹರಿದಾಟ - ಈ ಏಳುತತ್ವಗಳೂ ದಿವ್ಯದ ಅಥವಾ ಅಮರ ಅಸ್ತಿತ್ವದ ಸತ್ಯದಲ್ಲಿಯೇ ರೂಪತಾಳಿದಂಥವುಗಳು. ಹಾಗೇ ಅಜ್ಞಾನವೆಂಬ ಕತ್ತಲಿನಿಂದ ಪರಮಸತ್ಯವು (ಪರಬ್ರಹ್ಮಸತ್ಯವು) ನಮ್ಮ ಅವಪ್ರಜ್ಞೆಯಿಂದ ಹೊರಬರದಂತೆ ತಡೆಯುವ ಶಕ್ತಿಗಳನ್ನೇ ಪಣಿಗಳೆಂದು ಹೆಸರಿಸಲಾಗಿದೆ. ಸತ್ಯದ ಪ್ರಬೋಧ ಕಿರಣಗಳನ್ನು ಯಾವಾಗಲೂ ಕದ್ದೊಯ್ಯುವುದು ಪಣಿಗಳ ಕೆಲಸ ; ಹಾಗೆ

ಮಾಡಿ ಸಾಧಕರನ್ನು (ಅಜ್ಞಾನದ) ರಾತ್ರಿಯಲ್ಲಿ ತಳ್ಳುತ್ತಾರೆ ಮತ್ತು ಪರಮ ಸತ್ಯದ ಪ್ರಬೋಧಕ (ಹೊಳೆವ) ನದಿಗಳ ಮುಕ್ತ ಚಲನಕ್ಕೆ ಅಡ್ಡಿಮಾಡಿ, ನಮ್ಮಲ್ಲಿರುವ ಆ ಸತ್ಯದ ಪ್ರಚೋದನೆಯನ್ನು ತಡೆಯುವುದು ವೃತ್ರನ ಕೆಲಸ. ವೃತ್ರನೂ ಪಣಿಗಳೂ ಅಂಥ (ಮಾನಸಶಾಸ್ತ್ರೀಯ) ಶಕ್ತಿಗಳು. "ಋತಸ್ಯ ಪ್ರೇಷಾ=ಪರಮಸತ್ಯದ ಪ್ರಚೋದನೆ ; ದ್ಯುಮತೀಂ ಇಷಂ= ಜ್ಯೋತಿರ್ಮಯ ಪ್ರೇರಣೆ (VII.5.8) ಈ ಪ್ರಚೋದನೆ, ಪ್ರೇರಣೆ, ನಮ್ಮನ್ನು (ಸಾಧಕರನ್ನು) ರಾತ್ರಿಯಾಚೆಗಿನ ಅಮೃತತ್ವಕ್ಕೆ ಒಯ್ಯುವ ಸಾಧನ-ಎಂದು ನಾವು ಹೇಳಬಹುದಾಗಿದೆ. ದೇವತ್ವವೆಂದರೂ ಅಮೃತತ್ವ. ಅದಿತಿಯ ಮಕ್ಕಳೆಂದರೆ ಆದಿತ್ಯರು ದೇವತೆಗಳು ; ಅದಿತಿ ಎಂದರೆ ಅನಂತ, ಅಸೀಮ, ಪರಾಪ್ರಜ್ಞೆ, ನಮ್ಮ ಮಾನವ್ಯ ಮರ್ತ್ಯ ಅಸ್ತಿತ್ವದಲ್ಲಿ ಆ ದೇವತೆಗಳು (ರೂಪಿತರಾಗಿ) ಹುಟ್ಟಿ ಕ್ರಿಯಾಕಲಾಪಗಳನ್ನು ನಡೆಸುವುದು ನಮ್ಮನ್ನು ದೇವತ್ವಕ್ಕೆ ಒಯ್ಯಲು ಅಗತ್ಯ. ದೇವತೆಗಳು ಶಕ್ತಿಗಳು - ಅವುಗಳೆಲ್ಲಾ ಒಂದೇ ದೇವತ್ವದ ಅಂಶಗಳು ಎಂಬುದು ಗೃಹೀತ. ಅಗ್ನಿಯು ಪರಸತ್ಯಪ್ರಜ್ಞೆಯುಳ್ಳ ದ್ರಷ್ಟೃಸಂಕಲ್ಪ = ಋಷಿಯ ಇಚ್ಛಾಶಕ್ತಿ. ಅವನು ಮಹಾದೇವ, ಮುಖ್ಯದೇವ. ಅವನೇ ನಮ್ಮಲ್ಲಿ ಯಜ್ಞಮಾಡುವ ಶಕ್ತಿಯನ್ನು ಕೊಟ್ಟವನು. ಅವನು ನಮ್ಮ ಯಜ್ಞವನ್ನು ಆ ಪರಮಸತ್ಯದ ಮಾರ್ಗದಲ್ಲಿ ಕರೆದೊಯ್ಯುವವನು ; ಆತನು ಯುದ್ಧವೀರ, ಕರ್ಮಕಾರಿ ಮತ್ತು ನಮ್ಮಲ್ಲಿರುವ ಅವನ ಏಕತ್ವ ಮತ್ತು ಸರ್ವವ್ಯಾಪಕತ್ವಗಳು ಇತರ ಎಲ್ಲ ದೇವತ್ವ (ದೇವತೆ)ಗಳನ್ನೂ ತಮ್ಮಲ್ಲೇ ತುಂಬಿಕೊಂಡಿರುವುದೇ ಅಮೃತತ್ವದ ಬುನಾದಿ. ನಾವು ಕೊನೆಯಲ್ಲಿ ಹೋಗಿ ಸೇರುವ ಸತ್ಯದ ಪ್ರಜ್ಞಾಸ್ತರವೇ ಅವನ ಮನೆ- ಅದೇ ಇತರ ದೇವತೆಗಳ ಮನೆಯೂ ಹೌದು -ಹಾಗೆ ಮಾನವನ ಕೊನೆಯ ಮನೆಯೂ ಅದೇ; ಅದೇ ಪರಮಾನಂದ ಧಾಮವೆಂದು ವರ್ಣಿಸಲಾಗಿದೆ. ಅದೇ ಅನಂತ ಆಧ್ಯಾತ್ಮಿಕ ಐಶ್ವರ್ಯ ಮತ್ತು ಪೂರ್ಣತೆ (ಅಪಾರ ವೈಶಾಲ್ಯ, ಸಮಗ್ರ ಶಾಶ್ವತತೆ) "ರತ್ನ, ರಯಿ, ವಾಜ, ರಾಧಸ್" ಇತ್ಯಾದಿ ಪದಗಳಿಂದ ಉಕ್ತ ಅರ್ಥವು ಸೂಚಿತ. ನಮ್ಮ ದಿವ್ಯ ಗೃಹದ ತೆರೆವಾಗಿಲುಗಳು, ಸುಖ ಸಾಮ್ರಾಜ್ಯದ ಶಾಶ್ವತ ತವರು. - "ರಾಯೋದುರಃ= ಆ ದಿವ್ಯ ಕವಾಟ ಪುಟಗಳು, "ಋತಾವೃಧಃ"= ಯಾರು ಪರಮ ಸತ್ಯವನ್ನು ಸಂವರ್ಧಿಸುತ್ತಾರೋ ಅವರಿಗೆ ತಾವೇ ಬೀಸಾಗಿ ತೆರೆದು ನಿಲ್ಲುತ್ತವೆ ಮತ್ತು ಅವು ನಮಗಾಗಿ ಸರಸ್ವತಿ ಮತ್ತು ಅವಳ ಸೋದರಿಯರಿಂದ ಹುಡುಕಿ ಕೊಟ್ಟವುಗಳಾಗಿವೆ- ಸರಸ್ವತ್ಯಾದಿ ಸಪ್ತಸಿಂಧುಗಳೊಡನೆ ಸರಮೆ ಕೂಡಾ ಇದ್ದಳು ; ಬೃಹಸ್ಪತಿ ಮತ್ತು ಇಂದ್ರರು ಪರಮ ಸತ್ಯದ ಅವಿಚ್ಛಿತ ಮತ್ತು ಸಮಾನವಾದ ಅನಂತತೆಗಳಲ್ಲಿರುವ ಅವುಗಳತ್ತ ಮತ್ತು ಅವುಗಳ ಕ್ಷೇತ್ರಗಳತ್ತ ಹೊಳೆವ ಗೋವ್ರಜಗಳನ್ನು ಮೇಲೆ ಮೇಲಕ್ಕೆ ಒಯ್ಯುತ್ತಾರೆ.

ಈ ಕಲ್ಪನೆಗಳನ್ನು ಸ್ಪಷ್ಟವಾಗಿ ನಮ್ಮ ಮನಸ್ಸಿನಲ್ಲಿ ಖಚಿತಗೊಳಿಸಿಕೊಂಡ ಮೇಲೆ ವಾಮದೇವನ ಪದ್ಯಗಳನ್ನು ಅರ್ಥಮಾಡಿಕೊಳ್ಳಲು ಶಕ್ತರಾಗುತ್ತೇವೆ. ಪರಾಶರನು ಹೆಚ್ಚು ಮುಚ್ಚುಮರೆಯಿಲ್ಲದೆ ಹೇಳಿದ್ದನ್ನೇ ಅವು ಹೇಳಿರುವುದು ಗೊತ್ತಾಗುತ್ತದೆ. ಅವು ಹೇಳಿದ್ದು ಸಾಂಕೇತಿಕ ಭಾಷೆಯಲ್ಲಿ ಪರಾಶರೋಕ್ತಿಗಳ ಸಾರವನ್ನು. ವಾಮದೇವನ ಪ್ರಾರಂಭಿಕ ಸೂಕ್ತಗಳು ಸಂಬೋಧಿಸಲ್ಪಟ್ಟದ್ದು ಅಗ್ನಿ ಎಂಬ ಆರ್ಷ ಸಂಕಲ್ಪಕ್ಕೆ,ಋಷೀಚ್ಛೆಗೆ. ಅವನನ್ನು ಮಾನವನ ಯಜ್ಞದ ಸ್ನೇಹಿತ ಯಾ ರಚಯಿತ ಎಂದೂ ಜ್ಞಾನದರ್ಶನದತ್ತ ಮಾನವನನ್ನು ಎಚ್ಚರಿಸುವವನೆಂದೂ ಸೂಕ್ತಿಸಲಾಗಿದೆ (ಕೇತು=ಜ್ಞಾನ)- "ಸ ಚೇತಯನ್ ಮನುಷೋ ಯಜ್ಞಬಂಧುಃ (IV.1.9) ಹಾಗೆ ಮಾಡಿ "ಅವನು ಈ ಇರವಿನ ಬಾಗಿಲಿರುವ ಮನೆಗಳಲ್ಲಿ ಸಾಧಿಸುತ್ತಾ ವಾಸಿಸುತ್ತಾನೆ; ಅವನೊಬ್ಬ ದೇವರು, ಮರ್ತ್ಯನ ಧ್ಯೇಯಸಿದ್ಧಿಗಾಗಿ ಬಂದಿದ್ದಾನೆ" "ಸಕ್ಷೇತಿ ಅಸ್ಯ ದುರ್ಯಾಸು ಸಾಧನ್, ದೇವೋ ಮರ್ತ್ಯಸ್ಯ ಸಧನಿತ್ವಂ ಆಪ". ಅವನು ಸಾಧಿಸುವುದೇನನ್ನು? ಮುಂದಿನ ಋಕ್ಕು ಹೇಳುತ್ತದೆ

: "ಈ ಅಗ್ನಿ ತನ್ನ ಜ್ಞಾನದಲ್ಲಿ ನಮ್ಮನ್ನು ಸರ್ವ ದೇವತೆಗಳೂ ಅನುಭವಿಸುತ್ತಿರುವ ಅವನ ಆನಂದದತ್ತ ನಮ್ಮನ್ನು ಕರೆದೊಯ್ಯಲಿ - ಎಲ್ಲ ಅಮರ್ತ್ಯರೂ ತದ್ವಿಚಾರದಿಂದ (ಪರಬ್ರಹ್ಮಜ್ಞಾನದಿಂದ) ನಿರ್ಮಿಸಿದ ಮತ್ತು ದ್ಯೌಷ್ಪಿತ (=ಆಕಾಶವೆಂಬ ಯಾ ಸ್ವರ್ಗವೆಂಬ ತಂದೆಯು) ಪರಮಸತ್ಯವನ್ನು ಹೊರಸುರಿಯುವ ನೆಲೆಯತ್ತ ನಮ್ಮನ್ನು ನಡೆಸಿಕೊಂಡು ಹೋಗಲಿ. "ಸನೋ ಅಗ್ನಿರ್ ನಯತು ಪ್ರಜಾನನ್ ಅಚ್ಛಾ ರತ್ನಂ ದೇವಭಕ್ತಂ ಯದ್ ಅಸ್ಯ ; ಧಿಯಾ ಯದ್ ವಿಶ್ವೇ ಅಮೃತಾ ಅಕೃಣ್ವನ್, ದ್ಯೌಷ್ಪಿತಾ ಜನಿತಾ ಸತ್ಯಂ ಉಕ್ಷನ್" ಇದು ಪರಾಶರರ ಅಮೃತತ್ವದ ಆನಂದ (ಮುಕ್ತಿ). ಈ ಆನಂದವನ್ನು ಅಮರ ದೇವತಾ ಶಕ್ತಿಗಳೆಲ್ಲವೂ ಸೃಷ್ಟಿಸಿದ್ದು. ಹೇಗೆ? ಪರಮಸತ್ಯವಿಚಾರದಲ್ಲಿ ಮತ್ತು ಅದರ ಪ್ರೇರಣೆಯಲ್ಲಿ ತಮ್ಮ ಕೆಲಸವನ್ನು ಮಾಡುತ್ತಾ ಹೋದುದರಿಂದ ಮತ್ತು ಪರಮಸತ್ಯದ ಧಾರಾಸಂಪಾತವೆಂದರೆ ಸ್ಪಷ್ಟವಾಗಿಯೂ ಜಲಧಾರಾ ಪ್ರವಾಹ "ಉಕ್ಷನ್" ಎಂಬ ಪದವು ಈ ಅರ್ಥವನ್ನು ಸೂಚಿಸುತ್ತದೆ ; ಅಂದರೆ ಸತ್ಯದ ಏಳು ಹೊಳೆಗಳನ್ನು ಪರಾಶರನು ಸಮ ಪರಿಮಾಣದಿಂದ ಗುಡ್ಡದ ಮೇಲೆ ಸುತ್ತಲೂ ಹರಡಿದನೆಂದರ್ಥ- ಅಥವಾ ಗುಡ್ಡದ ಮೇಲಿನ ಸತ್ಯದ ಸಪ್ತ ಸಿಂಧುಗಳನ್ನು ಪರಾಶರನು ಸಮ ಪ್ರಮಾಣದಿಂದ ವಿಕೇಂದ್ರೀಕರಿಸಿದನೆಂದರ್ಥ.

ಅನಂತರ ವಾಮದೇವನು ಈ ಮಹಾಬಲನೂ ಮೊದಲಿನವನೂ ಅಥವಾ ಅತ್ಯುಚ್ಚ ಪ್ರಣೋದನೂ ಆದ ಅಗ್ನಿಯು ಪರಮಸತ್ಯದಲ್ಲಿ, ಜಲರಾಶಿಯಲ್ಲಿ, ತನ್ನ ಮೂಲ ಮನೆಯಲ್ಲಿ ಹುಟ್ಟಿದ್ದನ್ನು ನಮಗೆ ಹೇಳುತ್ತಾನೆ : "ಮೊಟ್ಟಮೊದಲನೆಯವನಾದ ಅವನು ನೀರಲ್ಲಿ "ಸ್ವರ್" ಎಂಬ ವಿಶಾಲ ಜಗದ್ ಬುನಾದಿಯಲ್ಲಿ ಅದರ ಗರ್ಭದಲ್ಲಿ (ಅಂದರೆ ಅದರ ಆಸನ ಮತ್ತು ಜನ್ಮಸ್ಥಳ ಅದರಮೂಲ ನಿವಾಸ) ಹುಟ್ಟಿದನು ; ಹುಟ್ಟುವಾಗ ಅವನ ತಲೆ ಕಾಲುಗಳು ಇರಲಿಲ್ಲ-ಅವುಗಳನ್ನು ಅರ್ಥಾತ್ ಅವನ ತಲೆ ಬುಡಗಳನ್ನು ಮುಚ್ಚಿಕೊಂಡಿದ್ದನು. ಎತ್ತಿನ ಕೊಟ್ಟಿಗೆಯಲ್ಲಿ ಕೆಲಸ ಮಾಡಲಾರಂಭಿಸಿದನು (ಋಕ್ ೧೧) ಆ ಎತ್ತೆಂದರೆ ದೇವ, ಪುರುಷ-ಅವನ ಕೊಟ್ಟಿಗೆಯೆಂದರೆ ಪರಮಸತ್ಯದ ಸ್ತರ ಮತ್ತು ಅಗ್ನಿ ಎಂಬ ಋಷಿ ಸಂಕಲ್ಪನು ಪರಮ ಸತ್ಯ ಪ್ರಜ್ಞೆಯಲ್ಲಿ ಕೆಲಸ ಮಾಡುತ್ತಾ ಜಗತ್ತುಗಳನ್ನು ನಿರ್ಮಿಸಿದನು ; ಆದರೆ ಅವನು ತನ್ನ ಇತ್ತುದಿಗಳನ್ನು ಅಡಗಿಸಿಟ್ಟುಕೊಂಡಿರುತ್ತಾನೆ, ತನ್ನ ತಲೆಯನ್ನೂ (ಕಾಲಿನ) ಪಾದಗಳನ್ನೂ ಮುಚ್ಚಿಟ್ಟುಕೊಂಡಿರುತ್ತಾನೆ : ಅಂದರೆ, ಅವನ ಕೆಲಸ ನಡೆಯುವುದು ಅತಿಮಾನಸ ಮತ್ತು ಅವಮಾನಸ ಪ್ರಜ್ಞೆಗಳ ನಡುವೆ ಎಂದರ್ಥ. ಅವನ ಅತ್ಯುಚ್ಚ ಮತ್ತು ಅತಿ ನೀಚ ಸ್ಥಿತಿಗಳು ಅನುಕ್ರಮವಾಗಿ ಅಜ್ಞಾತ (ಗುಪ್ತ)ವಾಗಿರುತ್ತವೆ.- ಒಂದು ಪರಿಪೂರ್ಣ ಬೆಳಕಿನಲ್ಲಿ ಇನ್ನೊಂದು ಪರಿಪೂರ್ಣ ಕತ್ತಲಿನಲ್ಲಿ. ಅಲ್ಲಿಂದ ಅವನು ಮೊದಲನೆಯವನಾಗಿ ಹೊರಡುತ್ತಾನೆ ಹೇಗೆ? ಪರಿಪೂರ್ಣ ಪ್ರಣೋದನಾಗಿ, ಉನ್ನೋದನಾಗಿ, ಪ್ರಚೋದನ ಶಕ್ತಿಯಾಗಿ. ಅನಂತರ ವೃಷಭನಿಗೆ, ಪರಮೇಶ್ವರನಿಗೆ ಆನಂದದ ಸಪ್ತ ಶಕ್ತಿಗಳ ಕಾರ್ಯದಿಂದ, ಸಪ್ತ ಪ್ರಿಯತಮಾ ಕ್ರಿಯೆಯಿಂದ, ಅವನು (ಮಗನಾಗಿ) ಜನಿಸುತ್ತಾನೆ. "ಜ್ಯೋತಿಷ್ಮಜ್ಞಾನದಿಂದ, ಪ್ರಚೋದಕ ಪ್ರಜ್ಞೆಯಿಂದ, ಆತನು ಪ್ರಥಮ ಪ್ರಣೋದನಾಗಿ ಪರಮ ಸತ್ಯದ ನೆಲೆಯಲ್ಲಿ (ಪೀಠದಲ್ಲಿ), ಬಸವನ ಹಟ್ಟಿಯಲ್ಲಿ- ತರುಣನಾಗಿ, ಪೂರ್ಣ ಶರೀರನಾಗಿ, ವಿಶಾಲ ಪ್ರಕಾಶನಾಗಿ ಮುನ್ನಡೆದನು ; ಸಪ್ತ ಪ್ರಿಯತಮೆಯರು ಪರಮೇಶ್ವರನಿಗಾಗಿ, ಒಡೆಯನಿಗಾಗಿ, ಅವನನ್ನು ಹಡೆದರು. (ಋಕ್ ೧೨).

ಅನಂತರ ಆ ಋಷಿಯು ಮಾನವ್ಯ ಪಿತೃಗಳು ಸಾಧಿಸಿದ ಸಿದ್ಧಿಗಳ ವಿವರಣೆಗೆ ಹೊರಡುತ್ತಾನೆ - "ಅಸ್ಮಾಕಂ ಅತ್ರ ಪಿತರೋ ಮನುಷ್ಯಾಃ ಅಭಿ ಪ್ರಸೇದುರ್ ಋತಂ ಆಶುಷಾಣಾಃ=ಇಲ್ಲಿ ನಮ್ಮ ಮಾನವ್ಯ ಪಿತೃಗಳು (ತಂದೆಗಳು) ಪರಮ ಸತ್ಯವನ್ನು ತಮ್ಮ ಸ್ವತ್ತನ್ನಾಗಿ ಮಾಡಿಕೊಳ್ಳಲು ಅದರತ್ತ ಮುನ್ನಡೆದರು. ಪ್ರಕಾಶಮಾನ ಧೇನುಗಳು ತಮ್ಮನ್ನು ಸುತ್ತುಗಟ್ಟಿದ ಕಾರಾಗೃಹದಲ್ಲಿರುವಾಗ ಅವುಗಳನ್ನು ಒಳ್ಳೆಯ ಹಾಲಿಗರು ಅವುಗಳ ಅಶ್ಮಗೋಷ್ಠಿಯಿಂದ (ಪರಮಸತ್ಯದತ್ತ) ಊರ್ಧ್ವಮುಖವಾಗಿ ಹೊಡೆದುಕೊಂಡು ಹೋದರು. ಉಷಸ್ಸುಗಳು ಅವುಗಳ ಕರೆಗೆ ಪ್ರತ್ಯುತ್ತರ ನೀಡಿದರು. ಅವರು ಗುಡ್ಡವನ್ನು ಒಡೆದರು, ಎರಡು ಪಾಲು ಮಾಡಿದರು ಮತ್ತು ಅವುಗಳನ್ನು ಹೊಳೆಯುವಂತೆ ಮಾಡಿದರು. ಅವುಗಳ ಸುತ್ತಲಿದ್ದ ಎಲ್ಲರೂ ತಮ್ಮ ಈ ಸತ್ಯವನ್ನು ಊರೇಕೇಳು ನೆರೆಯೇ ಕೇಳು ಎಂಬಂತೆ ಸಾರಿದರು. ವ್ರಜಪಾಲರು (ಗೋಪಾಲರು) ಕಾರ್ಯಕರ್ತನಾದ ಅಗ್ನಿಯನ್ನು ಕುರಿತು ಸೂಕ್ತವನ್ನು ಹಾಡಿದರು ; ಅವರು ಬೆಳಕನ್ನು ಕಂಡರು. ಅವರು ತಮ್ಮ ವಿಚಾರದಲ್ಲಿ ಬೆಳಗಿದರು- ಅಥವಾ ತಮ್ಮ ವಿಚಾರಗಳಿಂದ ಅವರು ತಮ್ಮ ಕಾರ್ಯವನ್ನು ನಿರ್ವಹಿಸಿದರು. ಬೆಳಕನ್ನರಸುವ ಮನಸ್ಸಿನಿಂದ ಅವರು (ಗೋವುಗಳನ್ನು "ಗವ್ಯತಾ ಮನ ಸಾ") ದೃಢವೂ ಸುಭದ್ರವೂ ಆದ ಮತ್ತು ಆ ಲಸದ್ಧೇನುಗಳನ್ನು ಸುತ್ತುವರಿದಿದ್ದ ಬೆಟ್ಟವನ್ನು (ಗುಡ್ಡವನ್ನು) ಒಡೆದರು. ಧೇನು ಪೂರ್ಣವಾದ ಸುದೃಢ ಗೋಷ್ಠಿಯನ್ನು (ಕೊಟ್ಟಿಗೆಯನ್ನು) ದಿವ್ಯವಾಕ್ಕಿನಿಂದ ("ವಚಸಾ ದೈವ್ಯೇನ") ಮುಮುಕ್ಷುಗಳು ತೆರೆದರು (ಋಕ್ ೧೩-೧೫)." ಇವು ಅಂಗಿರಸ್ ಪುರಾಣ ಕಥೆಯ ಸಾಮಾನ್ಯ ಪ್ರತಿಮೆಗಳು ; ಆದರೆ ಮುಂದಿನ ಪದ್ಯದಲ್ಲಿ ವಾಮದೇವನು ಇನ್ನೂ ಹೆಚ್ಚಿನ ಯೌಗಿಕ ಭಾಷೆಯನ್ನು ಬಳಸುತ್ತಾನೆ. "ಪೋಷಕ ದನಗಳ ಪ್ರಥಮನಾಮಗಳನ್ನು ಅವರು ಮನಸ್ಸಿನಲ್ಲಿ ಕಲ್ಪಿಸಿದರು ; ಅವರು ದಿವ್ಯಮಾತೆಯ ತ್ರಿ ಸಪ್ತಪೀಠಗಳನ್ನು (ಇಪ್ಪತ್ತೊಂದು ಆಸನಗಳನ್ನು) ಕಂಡರು ; ಗೋವ್ರಜದ ಸ್ತ್ರೀಗೋಗಳಿಗದು ಗೊತ್ತಿತ್ತು ; ಅವು ಆ ದಿಕ್ಕಿನಲ್ಲಿ ಅನುಗಮಿಸಿದವು. ಜ್ಯೋತಿರ್ಧೇನುವಿನ ಪ್ರಭಾವದಿಂದ (ಜ್ಯೋತಿರುತ್ಕರ್ಷದಿಂದ) ಕಮಲವರ್ಣನು ಮೂರ್ತಿಮತ್ತಾಗಿ ಮೂಡುವಂತೆ ಮಾಡಿದ್ದು ವಿಜಯಸಿದ್ಧಿ-ತೇ ಮನ್ವತಾ ಪ್ರಥಮಂ ನಾಮಧೇನೋಃ ತ್ರಿಃ ಸಪ್ತಮಾತುಃ ಪರಮಾಣಿ ವಿಂದನ್ ; ತಜ್ ಜಾನತೀರ್ ಅಭ್ಯನೂಷತ ವ್ರಾ, ಆವಿರ್‌ಭುವದ್ ಅರುಣೀರ್ ಯಶಸಾಗೋಃ". ಇಲ್ಲಿ ಅದಿತಿಯು ತಾಯಿ=ಅನಂತ ಪ್ರಜ್ಞಾರಾಶಿ ; ಅವಳೇ ಧೇನು ಯಾ ಪೋಷಕ ಆಕಳು - ಸಪ್ತಸಿಂಧುಗಳು ಅವಳ ದುಗ್ಧಧಾರೆಗಳು - ಅವಳು ಜ್ಯೋತಿರ್ಧೇನುವೂ ಹೌದು ; ಅವಳಿಗೆ ಉಷಸ್ಸುಗಳೇ (ಮಕ್ಕಳು ಮರಿಗಳು) ಕರುಗಳು; ಕೆಂದಾವರೆಯ ಬಣ್ಣದ್ದು ದಿವ್ಯ ಉಷೆ ಮತ್ತು ವ್ರಜ ಯಾ ಕಿರಣಗಳು ಅವಳ ಹರಿವೆಳಗಿನ ಪ್ರಕಾಶಗಳು (ಪ್ರಜ್ಞಾನ ಪ್ರಭೆಗಳು). ಮಾತೆಯ ಪ್ರಥಮ ನಾಮವನ್ನು ಕುರಿತು (ದೇವತೆಯನ್ನು ಕುರಿತು) - ಅವಳ ೨೧ ಪೀಠಗಳನ್ನೊಳಗೊಂಡು - ತಿಳಿದು ತೆರಳುವವುಗಳೆಂದರೆ ಉಷಸ್ಸುಗಳು ಯಾ ಮಾನಸ ಪ್ರಬೋಧೋದಯಗಳು. ಆ ನಾಮ ಅಥವಾ ದೇವತೆಯೇ ಮಹಾದೇವ (ಮಹೇಶ್ವರ, ಪರಮೇಶ್ವರ, ಉತ್ತಮ ಪುರುಷ, ಪರಮಾತ್ಮ) ; ಅವನು ಅನಂತ ಸತ್ತಾ ಸ್ವರೂಪನು, ಅನಂತ ಪ್ರಜ್ಞಾನ ಸ್ವರೂಪನು ಮತ್ತು ಅನಂತಾನಂದ ಸ್ವರೂಪನು. ಪೀಠಗಳೆಂದರೆ ಮೂರು ದಿವ್ಯ ಲೋಕಗಳು, ಹಿಂದೆ ಈ ಸೂಕ್ತದಲ್ಲಿ ಹೇಳಿದ ಅಗ್ನಿಯ ಮೂರು ಮಹೋನ್ನತ ಜನ್ಮಗಳ ಸ್ಥಳಗಳು, ಪುರಾಣೋಕ್ತವಾದ ಸತ್ಯ, ತಪಸ್, ಜನ ಲೋಕಗಳು. ಹೀಗೆ ಮೂರು ಸಾಲಿ ಏಳರ

ಸಾಲಿನ ಅದಿತಿ ಪೀಠಗಳು ಸತ್ಯದ[1] ಉಷೋದಯದಿಂದ ವೈಭವೋಪೇತವಾಗಿ ಅವತರಿಸಿದವುಗಳು. ಉಕ್ತಲೋಕತ್ರಯದಲ್ಲಿ ಒಂದೊಂದರಲ್ಲೂ ಏಳೇಳು ಅದಿತಿ ಪೀಠಗಳಿರುವ ಅರ್ಥ ಹೊರಡುತ್ತದೆ ಮತ್ತು ಈ ಮೂರು ಲೋಕಗಳು ದಿವ್ಯವಾದವುಗಳಾದುದರಿಂದ ಅವುಗಳಲ್ಲಿ ಒಂದೊಂದರಲ್ಲೂ ಏಳು ಅತಿಮಾನಸ ಅಥವಾ ಮಾನಸೋತ್ತರ ಅರ್ಥಾತ್ ಬುದ್ಧ್ಯುತ್ತರ ಪ್ರಜ್ಞಾಸ್ತರಗಳಿರಬಹುದು- ಎಷ್ಟಿದ್ದರೂ ಅವು ಯೋಗಿಗಮ್ಯ ಎಂಬುದು ತಾತ್ಪರ್ಯವಾಗಿ ಫಲಿಸುತ್ತದೆ. [ಇಂಗ್ಲಿಷಿನಲ್ಲಿ ಸಂಸ್ಕೃತದಲ್ಲಿರುವಂತೆ ಮನೋಬುದ್ಧಿಗಳ ಭೇದವನ್ನು ಗಣ್ಯವೆಂದು ಗಣಿಸುವುದಿಲ್ಲ. ಇಂಗ್ಲಿಷ್ ಮನಸ್ಸಿಗೆ ಬುದ್ಧಿ ಇರುತ್ತದೆ; (Mind includes intellect) ಸಂಸ್ಕೃತದಲ್ಲಿ Likes and dislikes ಸಂಕಲ್ಪ ವಿಕಲ್ಪಾತ್ಮಕಂ ಮನಃ" ಎಂಬುದು ಮನಸ್ಸಿನ ಲಕ್ಷಣ.] ಹಾಗೇ, ಇಲ್ಲಿ ಬೆಳಕು-ಸತ್ಯಗಳನ್ನು ಮಾನವ್ಯ ಪಿತೃಗಳು ಸಾಧಿಸಿದ್ದೆಂದರೂ ಅತ್ಯುನ್ನತ ದಿವ್ಯ ಅಮೃತತ್ವದ ಸ್ಥಿತಿಗೇರಿದ್ದು ; ಸರ್ವಸರ್ಜಕ ಅನಂತಮಾತೃವಿನ ಮೊದಲ ನಾಮಕ್ಕೆ ತಲುಪಿದ್ದು ; ಅವಳ ಊರ್ಧ್ವಗತಿಯ, ಮೂರು ಬಾರಿ ಏಳು, ಅತ್ಯುಚ್ಚ ಸಂಖ್ಯೆಯ ಸೋಪಾನಗಳ ವಾಸವನ್ನು[2] ಪಡೆದದ್ದು-ಎಂದೇ ಅರ್ಥ. [ಪಾತಂಜಲ ಯೋಗದ ಪ್ರಜ್ಞಾಸ್ತರ ವಿಭಾಗಗಳಿಂದ ಇವು ಭಿನ್ನವೆಂಬುದು ಸ್ಮರ್ತವ್ಯ ; ಹಾಗೇ Carl R. Jung ಎಂಬುವನ ಮಾನಸ ಶಾಸ್ತ್ರೀಯ ಸ್ತರವಿಭಾಗಗಳಿಂದಲೂ ಭಿನ್ನ-ಈ ಪರಮೋಚ್ಚಸ್ತರದ ಉಪಸ್ತರ ವಿಭಜನೆಗೆ ಗ್ರಂಥ ಕರ್ತರ ಅಪರೋಕ್ಷಾನುಭೂತಿಯೊಂದೇ ಆಧಾರ ಎಂಬುದನ್ನು ಓದುಗ ಮರೆಯಕೂಡದು. ಅತಿಮಾನಸ (ಸುಪ್ರಮಾನಸ) ಮನಃಶಾಸ್ತ್ರವು ಕೇವಲ ಅರವಿಂದೀಯ; ಅವಮಾನಸ ಸ್ತರ ವಿಭಜನೆಯೂ ಅರವಿಂದೀಯವೇ. ವೇದೋಕ್ತ ಅತಿಮಾನಸ ಪ್ರಜ್ಞಾಸ್ತರಗಳೆಲ್ಲವನ್ನೂ ಅಲ್ಲದಿದ್ದರೂ ಅವುಗಳಲ್ಲಿಯ ಹಲವಾರನ್ನು ಗ್ರಂಥಕರ್ತರ "ದಿವ್ಯಜೀವನ" ಎಂಬ ಮೇರುಕೃತಿಯಲ್ಲಿ ಕಾಣಬಹುದು-ಅರ್ಥಾತ್-ಸುಮಾರು ೧೪ ಸ್ತರಗಳು ಅತ್ಯಜ್ಞಾನ ಸ್ತರದಿಂದ ಅತಿಜ್ಞಾನ (ಸಮಗ್ರಾದ್ವೈತ) ಸ್ತರ ಸ್ವರೂಪದ ಸಚ್ಚಿದಾನಂದದವರೆಗೆ - ಅನುವಾದಕ] ನಿತ್ಯ ಪರ್ವತದ ("ಸಾನು, ಅದ್ರಿ") ಅತ್ಯುನ್ನತ ಪ್ರಜ್ಞಾಸ್ತರಗಳನ್ನೇರುವುದು ವೇದೋಕ್ತ. [ಜ್ಞಾನವು ಸಂಸ್ಕೃತದಲ್ಲಿ ಪ್ರಜ್ಞೆಯನ್ನೂ ಜಾಗರವನ್ನೂ ಒಳಗೊಳ್ಳುತ್ತದೆ. ಇಲ್ಲಿ ಅವೆರಡನ್ನೂ ಪ್ರತ್ಯೇಕಿಸಿ ವಿವರಿಸುತ್ತಾ ಹೋಗಲಾಗಿದೆ-ಜ್ಞಾನವಿಲ್ಲಿ Knowledge ಪ್ರಜ್ಞೆಯಿಲ್ಲಿ Consciousness.]

ವಾಮದೇವನು ಆಗಲೇ ಹೇಳಿದಂತೆ ಈ ಅಮರತ್ವವು ದೇವತೆಗಳಿಗೆ ಅನುಭವಗಮ್ಯ; ಅಗ್ನಿಯು ಇದನ್ನು ಯಜ್ಞದ ಮೂಲಕ ಸಾಧಿಸಿಕೊಡಬೇಕು - ಇದು ಪರಮಾನಂದ; ಇದಕ್ಕೆ ಮೂರು ಸಾರಿ ಏಳರ ಉದ್ರಿಕ್ತ ಸ್ಥಿತಿಗಳಿರುತ್ತವೆ. (I.20.7) ಏಕೆಂದರೆ, ಮುಂದೆ ಅವನು ಹೇಳುತ್ತಾ ಹೋಗುತ್ತಾನೆ :- "ಕತ್ತಲೆ ಮಾಯವಾಯಿತು ಏಕೆ? ಅದರ ಬುಡವನ್ನೇ ಅಲ್ಲಾಡಿಸಿದ್ದರಿಂದ ಸ್ವರ್ಗವು ಬಗ್ಗನೆ ಪ್ರಕಾಶಿಸಿತು (ರೋಚತ ದ್ಯೌಃ") - ಇದರಿಂದ ಸ್ವರ್‌ಸತ್ಯದ ಮೂರು ದಿವ್ಯ ಲೋಕಗಳು ವ್ಯಕ್ತವಾದವು- "ದಿವೋ ರೋಚನಾನಿ" ಎಂಬುದು ಧ್ವನಿತವಾಗುತ್ತದೆ. ದಿವ್ಯ ಉಷೆಯ

---

೧. ಮೇಧಾತಿಥಿ ಕಣ್ವನು ಇದೇ ಭಾವವನ್ನು ಪರಮಾನಂದದ ತ್ರಿಸಪ್ತ ಉದ್ರೇಕಗಳು- ರತ್ನಾನಿ ತ್ರಿಃ ಸಪ್ತಾನಿ ಅಥವಾ ಇನ್ನೂ ಅಕ್ಷರಶಃ ಹೇಳಹೋದರೆ ಆನಂದೋದ್ರೇಕದ ಏಳರ ಮೂರು ಸಾಲುಗಳು-ಅವುಗಳಲ್ಲಿಯ ಪ್ರತಿಯೊಂದನ್ನೂ ಋಭುಗಳು ಪ್ರತ್ಯೇಕ ಮತ್ತು ಪೂರ್ಣ ಅಭಿವ್ಯಕ್ತಿಗಳನ್ನಾಗಿ ಹೊರತರುತ್ತಾರೆ- "ಏಕಂ ಏಕಂ ಸುಶಸ್ತಿಭಿಃ"

೨. ಶ್ರೀ ಅರವಿಂದರ "ದಿವ್ಯ ಜೀವನ" ದ ಪ್ರಕಾರ ಇವೆಲ್ಲಾ ಸಚ್ಚಿದಾನಂದದ ನಿತ್ಯವಾಗಿರುವ ಬುದ್ಧ್ಯತೀತ ಪ್ರಜ್ಞೆಯಲ್ಲಿ ಕೊನೆಯವಾಗಿ ನಿಲ್ಲುವ ಸಮಾನ Poises ನಿಲುಮೆಗಳು. -ಅನುವಾದಕ.

ಬೆಳಕು ಮೇಲೇರಿತು. ಸೂರ್ಯನು ಸತ್ಯದ ಮಹಾಕ್ಷೇತ್ರವನ್ನು ಹೊಕ್ಕನು. ಮರ್ತ್ಯರಲ್ಲಿಯ ಋಜು ಅನೃಜು ಮನಃ ಪ್ರವೃತ್ತಿಗಳನ್ನವನು ನೋಡಿದನು. ಅನಂತರ ಅವರು ಎದ್ದೇ ಬಿಟ್ಟರು. ಎದ್ದ ಮೇಲೆ ಆ ಮಾನವರು (ಸೂರ್ಯನು ಋಜ್ವನೃಜುಗಳಲ್ಲಿ ಮತ್ತು ಸತ್ಯಾಸತ್ಯಗಳಲ್ಲಿ ಇರುವ ಭೇದವನ್ನು ತೋರಿಸಿದ ಮೇಲೆ) ಸಂಪೂರ್ಣವಾಗಿ (ಜಗತ್ತನ್ನು) ನೋಡಿದರು. ಆಮೇಲೆ ಅವರು ಸ್ವರ್ಗದಲ್ಲಿ ಅನುಭವಿಸಿದ ಪರಮಾನಂದವನ್ನು ತಮ್ಮಲ್ಲಿ ಇಟ್ಟುಕೊಂಡರು - "ರತ್ನಂ ಧಾರಯಂತ ದ್ಯುಭಕ್ತಂ". ಎಲ್ಲ ದೇವರುಗಳೂ ನಮ್ಮ ಮನೆಯಲ್ಲಿರಲಿ ; ನಮ್ಮ ವಿಚಾರಕ್ಕೆ ಸತ್ಯವಿರಲಿ ; ಎಲೈ ಮಿತ್ರ ಓ ವರುಣ! -ವಿಶ್ವೇ ವಿಶ್ವಾಸು ದುರ್ಯಾಸು ದೇವಾ ಮಿತ್ರ ಧಿಯೇ ವರುಣ ಸತ್ಯಂ ಅಸ್ತು (ಋಕ್ ೧೭, ೧೮). ಇದು ಸ್ಪಷ್ಟವಾಗಿ ಪರಾಶರ ಶಾಕ್ತ್ಯನು ಹೇಳಿದ ಭಾವವನ್ನೇ ಬೇರೆ ಮಾತಿನಲ್ಲಿ ಹೇಳಿದ್ದು- ಪರಮ ಸತ್ಯದ ವಿಚಾರದಿಂದಲೂ ಪ್ರೇರಣೆಯಿಂದಲೂ ಇಡೀ ಬಾಳು ವ್ಯಾಪ್ತವಾಗುವುದು ಮತ್ತು ಆನಂದವನ್ನೂ ಅಮರತ್ವವನ್ನೂ ನಮ್ಮ ಇರವಿನ ಎಲ್ಲ ಭಾಗಗಳಲ್ಲೂ ಹುಟ್ಟಿಸಲು ಆ ವಿಚಾರ ಮತ್ತು ಪ್ರೇರಣೆಗಳಿಂದ ಎಲ್ಲ ದೇವತೆಗಳೂ ಕೆಲಸ ಮಾಡುವುದು.

ಸೂಕ್ತ ಹೀಗೆ ಮುಕ್ತಾಯವಾಗುತ್ತದೆ :- "ಶುದ್ಧವಾಗಿ ಹೊಳೆವ ಆಹುತಿಯ ಅಧ್ವರ್ಯುವಾದ, ಯಜ್ಞದಲ್ಲಿ ಮಹತ್ತಮನಾದ, ಎಲ್ಲವನ್ನೂ ನಮಗೆ ತಂದುಕೊಡುವ ಅಗ್ನಿಯನ್ನು ಕುರಿತು ನಾನು ಶಬ್ದವನ್ನು (ಮಂತ್ರವನ್ನು) ಹೇಳಬಹುದಲ್ಲವೇ? ಪ್ರಭಾಧೇನುಗಳ ಮಡಿಗೆಚ್ಚಲನ್ನೂ ಎಲ್ಲೆಡೆಯಲ್ಲೂ ಸುರಿವ ಸಂತೋಷ ಸಸ್ಯದ ಶುದ್ಧೀಕೃತ ಆಹಾರವನ್ನು ಅವನು ಹಿಂಡಿ ಹೊರ ಹರಿಸಲಿ. ಆತನು ಯಜ್ಞದ ಎಲ್ಲ (ದೇವತೆಗಳ) ಒಡೆಯರ ಅನಂತ ಸತ್ತಾಸ್ವರೂಪನು ಮತ್ತು ಎಲ್ಲ ಮಾನವರ ಅತಿಥಿ. ಜನ್ಮಗಳನ್ನು ಬಲ್ಲ, ದೇವತೆಗಳ ವರ್ಧಮಾನ ಅಭಿವ್ಯಕ್ತಿಯನ್ನು, ಆವಿರ್ಭೂತಿಯನ್ನು ಸ್ವೀಕರಿಸುತ್ತಾ, ಅಗ್ನಿಯು ಸುಖದಾಯಕನಾಗಲಿ (ಋಕ್ ೧೯,೨೦).

ನಾಲ್ಕನೆಯ ಮಂಡಲದ ಎರಡನೆಯ ಸೂಕ್ತದಲ್ಲಿ ಮಾನವ್ಯ ವಂಶದ ಮೂಲ ಪುರುಷರೂ ದಿವ್ಯ ಅಂಗಿರಸರೂ ಸಪ್ತರ್ಷಿಗಳೂ ಎನ್ನಿಸಿದವರ ಸಮಾಂತರ ರೇಖಾ ಸಾದೃಶ್ಯವನ್ನು ಸ್ಪಷ್ಟವಾಗಿಯೂ ಸೂಚಕವಾಗಿಯೂ ಕಾಣುತ್ತೇವೆ. ಈ ಉಪಚ್ಛೇದದ ಹಿಂದೆ ನಾಲ್ಕು ಪದ್ಯಗಳಿವೆ, IV. 2. 11-14, ಮಾನವನು ಸತ್ಯ ಪರಮಾನಂದಗಳನ್ನು ಹುಡುಕಿಕೊಂಡು ಹೋಗುವ ಕಲ್ಪನೆ ಉಕ್ತವಾಗಿದೆ : "ಜ್ಞಾತೃವಾದ ಅವನು ಜ್ಞಾನಾಜ್ಞಾನಗಳನ್ನು ಪೂರ್ಣವಾಗಿ ನೋಡಲಿ ; ಮರ್ತ್ಯರಲ್ಲಡಗಿದ ವಿಶಾಲ ಪ್ರಜ್ಞಾಸ್ತರಗಳನ್ನೂ ವಕ್ರಪ್ರಜ್ಞಾಸ್ತರಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸಲಿ ; ಮತ್ತು ಹೇ ದೇವರೇ, ಅಪತ್ಯಗಳಲ್ಲಿ ಫಲದಾಯಕವಾದ ಆನಂದಕ್ಕಾಗಿ ನಮ್ಮ ಮೇಲೆ ದಿತಿಯನ್ನು ಸುರಿ ಅದಿತಿಯನ್ನು ಕಾಪಾಡು." ೧೧ನೆಯ ಪದ್ಯವು ತನ್ನ ಅರ್ಥದಲ್ಲಿ ಚಮತ್ಕಾರವುಳ್ಳದ್ದಾಗಿದೆ. ಜ್ಞಾನಾಜ್ಞಾನಗಳ ವಿರೋಧವನ್ನದರಲ್ಲಿ ನಮಗೆ ಸುಪರಿಚಿತವಾದ ವೇದಾಂತದಲ್ಲಿ ಹೇಳಿರುವಂತೆಯೇ ಹೇಳಿದೆ. ವೇದದಲ್ಲಿ ಪದೇ ಪದೇ ಇದನ್ನು ಹೇಳಲಾಗಿದೆ. ಅವುಗಳು ವಿಸ್ತಾರವಾದ ಪ್ರಜ್ಞಾಸ್ತರಗಳು ; ಯಜ್ಞದಲ್ಲಿ ದುಡಿಯುವವರು ಅವುಗಳನ್ನೇರುತ್ತಾರೆ ಮತ್ತು ಅಲ್ಲಿ ಅವರು ಅಗ್ನಿಯು ಸ್ವಯಂ ಪರಿಪೂರ್ಣ ಆನಂದಲ್ಲಿರುವುದನ್ನು ಕಾಣುತ್ತಾರೆ (V 7.5); ತನ್ನ ಶರೀರಕ್ಕಾಗಿ ಆ ಅಗಲವಾದ ಅಸ್ತಿತ್ವವನ್ನವನು ವಿಶಾಲಪ್ರಜ್ಞಾಸ್ತರಗಳನ್ನಾಗಿ ಮಾಡಿಕೊಂಡಿದ್ದಾನೆ (V. 4.6) ; ಅವುಗಳ ಸ್ತರವಿಸ್ತಾರ ಮತ್ತು ಅನಾತಂಕ ವೈಶಾಲ್ಯಗಳು ಅಗ್ನಿಸತ್ತಾ ಲಕ್ಷಣಗಳು. ಪರಮಸತ್ಯಸ್ತರಕ್ಕೆ ನಾವು ಸೇರುವುದು ಎಂದರೆ ಆ ಅಗ್ನಿದೇವರ ಸತ್ತೆಯಲ್ಲಿ ಲೀನರಾಗುವುದು. ಮಾತೃಶ್ರೀ ಅದಿತಿಯ ಮೂರ್ಮಡಿ ಏಳು ಸಮುನ್ನತ ಪೀಠಗಳಿರುವುದು ಅದರಲ್ಲೇ - "ಅನಂತೇ ಅಂತಃ" (IV 1. 7) ಅಜ್ಞಾನವಾದರೋ ವಕ್ರ ಅಥವಾ ವಿಷಮ

ಪ್ರಜ್ಞಾಸ್ತರಗಳೊಂದಿಗೆ[೧] ಏಕೀಕರಿಸಲ್ಪಟ್ಟಿದೆ. ಈ ವಿಷಮ ಸ್ತರಗಳು ಮರ್ತ್ಯರಲ್ಲಿ ಅಗುಳಿ ಹಾಕಿಕೊಂಡು ಒಳಗೆ ಕುಳಿತಿವೆ. ಆದುದರಿಂದಲೇ ಮರ್ತ್ಯರ ಬಾಳು ಪರಿಮಿತ, ವಿಭಕ್ತ ಎನ್ನಿಸಿದೆ. ಅಷ್ಟೇ ಅಲ್ಲದೆ ದಿತಿಯೇ ಅಜ್ಞಾನ-ಅದು ಮುಂದಿನ ಅರ್ಧ ಋಕ್ಕಿನಲ್ಲಿದೆ- "ದಿತಿಂಚರಾಸ್ವ ಅದಿತಿಂ ಉರುಷ್ಯ" ಮತ್ತು ಜ್ಞಾನವು ಅದಿತಿ. ದಿತಿಯನ್ನು ದನುವೆಂದೂ ಕರೆಯಲಾಗುತ್ತದೆ. ದನುವೆಂದರೆ ವಿಭಕ್ತ ವಿಭಜನೆ ಮತ್ತು ಆತಂಕಕಾರಿಗಳಾದ ಶಕ್ತಿಗಳೆಂದರೆ ವೃತ್ರರು. ಈ ವೃತ್ರರು ದಿತಿಜರು, ದಾನವರು, ದೈತ್ಯರು, ದನಗಳು. ಅದಿತಿಯು ಸತ್ತೆಯ ಅನಂತತೆ. ಅವಳು ದೇವತೆಗಳ ತಾಯಿ. ಋಷಿಯು ಅಪತ್ಯ ಸಫಲವಾದ ಆನಂದವನ್ನು ಬಯಸುತ್ತಾನೆ. ಅಪತ್ಯಸಾಫಲ್ಯವೆಂದರೆ ದಿವ್ಯ ಕರ್ಮ ಸಾಫಲ್ಯ ; [ದಿವ್ಯ ಕರ್ಮವೆಂದರೆ ತಾನೂ ಇತರರೂ ಪರಮಸತ್ಯ (ಅದಕ್ಕಿಂತ ಹಿಂದೆ ಮುಂದೆ ಆಚೆ ಇಚೆ ಏನೂ ಇಲ್ಲ-ಅದು ಬುದ್ಧ್ಯತೀತ) ಎಂಬುದರತ್ತ ಕ್ರಮವಾಗಿ ಸಾಗುವ ಮಾನಸಿಕ ನಿಷ್ಠೆಯ ಅವ್ಯಾಹತ ಪ್ರಯತ್ನ ರೂಪದ ತ್ಯಾಗಬುದ್ಧಿ ಪ್ರಧಾನವಾದ ಯಜ್ಞ-ಆತ್ಮಯಜ್ಞ= ಅಹಂಕಾರತ್ಯಾಗ ಪ್ರಜ್ಞಾಸಾತತ್ಯದಿಂದ ಜೀವಿಸುವ "ಜ್ಞಾನಕರ್ಮಯೋಗ"] ದಿವ್ಯ ಕರ್ಮಫಲಗಳನ್ನೂ ಋಷಿ ಅಪೇಕ್ಷಿಸುತ್ತಾನೆ. ಆ ಫಲ? ಆನಂದಾನುಭೂತಿ.[೨] ಈ ಸಿದ್ಧಿಗೆ ನಮ್ಮ ವಿಭಕ್ತ ಮರ್ತ್ಯ ಸತ್ತೆಯು ಹೊಂದಿರುವ, ಆದರೆ ವೃತ್ರರೂ ಪಣಿಗಳೂ ನಮ್ಮಿಂದ ಬಚ್ಚಿಟ್ಟುಕೊಂಡಿರುವ, ಎಲ್ಲ ಐಶ್ವರ್ಯಗಳನ್ನೂ ಗೆದ್ದುಕೊಂಡು, ಅವನ್ನೆಲ್ಲಾ ಅನಂತ ದಿವ್ಯ ಸತ್ತೆಯಲ್ಲಿ ಧಾರಣೆ ಮಾಡುವುದೇ ಸಾಧನ. ದಿವ್ಯ ಕರ್ಮಗಳ ಫಲಗಳನ್ನು ನಮ್ಮ ಸಾಮಾನ್ಯ ಮಾನವ್ಯ ಪ್ರವೃತ್ತಿಯು ಹಾಳು ಮಾಡದಂತೆ ಕಾಯ್ದುಕೊಳ್ಳಬೇಕು - ಅಂದರೆ - ದಿತಿಯ ದನು ಎಂಬವಳ ಮಕ್ಕಳ ವಶಕ್ಕೆ ಹೋಗದಂತೆ ನೋಡಿಕೊಳ್ಳಬೇಕು. ಈ ಕಲ್ಪನೆಯು, ಈಶೋಪನಿಷತ್ತಿನಲ್ಲಿ ಹೇಳಿದಂತೆ, ಜ್ಞಾನಾಜ್ಞಾನಗಳನ್ನು, ಏಕತ್ವ ಮತ್ತು ನಾನಾತ್ವಗಳನ್ನು, ಒಬ್ಬನೇ ಆದ ಪರಬ್ರಹ್ಮನಲ್ಲಿ ಪಡೆದುಕೊಂಡಿರುವುದೇ ಅಮೃತತ್ವ ಸಿದ್ಧಿಗಿರುವ ಉಪಾಧಿ, ಶರ್ತ.

ಆಮೇಲೆ ನಾವು ಏಳು ದಿವ್ಯ ನದಿಗಳೆಡೆಗೆ ಬರುತ್ತೇವೆ. "ಅಜಿತರಾದ ದ್ರಷ್ಟಾರರು ಮಾನವನ ಮನೆಯಲ್ಲಿ ಹಿಡಿದಿಟ್ಟುಕೊಂಡು ದ್ರಷ್ಟಾರನಾದ ಅಗ್ನಿದೇವನ ಬಗ್ಗೆ ಸಾರಿ ಹೇಳುತ್ತಾರೆ ; ಅಲ್ಲಿಂದ ಈ ಸದೇಹ ಮಾನವನನಿಂದು ನೀನು, ಹೇ ಅಗ್ನಿ, ಕರ್ಮದಿಂದ ಬಯಸುವ ("ಅರ್ಯಃ") ಮತ್ತು ಪ್ರಗತಿಪರ ಚಲನದಿಂದ ಸಾಗುವ ಈ ದೇವನ ಬಹಿರ್‌ವ್ಯಾಪಿಯಾದ ದೇವತೆಗಳನ್ನು ಕಂಡಿರಲೇಬೇಕು" - "ಕವಿಂ ಶಶಾಸುಃ ಕವಯೋಽದಬ್ಧಾಃ, ನಿಧಾರಯಂತೋ ದುರ್ಯಾ ಸು ಆಯೋಃ ; ಅತಸ್ ತ್ವಂ ದೃಶ್ಯಾನ್ ಅಗ್ನ ಏತಾನ್, ಪದಭ್ಧಿಃ ಪಶ್ಯೇರ್ ಅದ್ಭುತನ್ ಅರ್ಯ ಏವೈಃ (ಋಕ್ ೧೨). ಇದು ಮತ್ತೆ ದೇವತ್ವದ ದರ್ಶನಕ್ಕೆ ಹೋಗುವ ಪ್ರಯಾಣ. "ಓ ಅಗ್ನಿಯೇ, ನೀನು ಅತಿ ತರುಣ ಶಕ್ತಿ ; ಯಾರು ಮಂತ್ರವನ್ನು ಹಾಡುತ್ತಾರೋ ಸೋಮಸವನ ಮಾಡುತ್ತಾರೋ ಯಜ್ಞವನ್ನು ಕರ್ಮಬದ್ಧಗೊಳಿಸುತ್ತಾರೋ

---

೧. ಚಿತ್ತಿಂ ಅಚಿತ್ತಿಂ ಚಿನವದ್ ವಿ ವಿದ್ವಾನ್, ಪೃಷ್ಠೇವ ವೀತಾ ವೃಜಿನಾ ಚ ಮರ್ತಾನ್. ವೃಜಿನಾ ಎಂದರೆ ವಕ್ರ ಮತ್ತು ವೇದದಲ್ಲಿ ಆ ಪದವನ್ನು ಪರಸತ್ಯದ ವಿರುದ್ಧವಾಗಿರುವ ಅನೃತದ ಸೊಟ್ಟಪಟ್ಟತನವನ್ನು ಹೇಳಲು ಬಳಸಲಾಗಿದೆ. ಆದರೆ ಕವಿಯ ಮನದಲ್ಲಿ ಸ್ಪಷ್ಟವಾಗಿಯೂ ವೃಜ್‌ಧಾತುವಿನ ಶಾಬ್ದಿಕವಾದ ಪ್ರತ್ಯೇಕಿಸು, ಮುಸುಕಿನೊಳಗೆ ಎಳೆ ಎಂಬರ್ಥವಿದೆ. "ಮರ್ತಾನ್" ಎಂಬ ಪದವನ್ನು ಈ ಶಾಬ್ದಿಕ ಗುಣವಾಚಕಾರ್ಥದಲ್ಲಿ ಅವನು ಇಲ್ಲಿ ಬಳಸಿದ್ದಾನೆ.

೨. ಶ್ರೀ ಅರವಿಂದರು ಅನಂತತೆಗಳು, ಸತ್ಯಗಳು ದಿವ್ಯ ಎಂದು ಹೇಳುತ್ತಾ ಬಂದುದರಿಂದ ಈ ಆನಂದವೂ ದಿವ್ಯ, ಹಾಗೇ ಅನೇಕ, ಅಸಂಖ್ಯೆಯ ಪ್ರತಿಯೊಂದು ಅತಿಮಾನಸ ಪ್ರಜ್ಞಾಸ್ತರವೂ ದಿವ್ಯ ಮತ್ತು ಅನೇಕ. ಇದರಿಂದಲೇ ಅವರ ಅದ್ವೈತಕ್ಕೆ "ಸಮಗ್ರವು" ವಿಶೇಷಣವಾಯಿತು-ಅ.ಭಾ ೫೨ ನೆಯ ತತ್ವಜ್ಞಾನ ಸಂಮೇಳನದ ವರದಿಯನ್ನು ನೋಡಿರಿ-ಅನುವಾದಕ.

ಅವರಿಗೆ ನೀನು ಮಾರ್ಗದರ್ಶಕ ; ನೀನು ಕಾರ್ಯ ಪೂರೈಸಿದ ಪ್ರಬುದ್ಧರಿಗೆ ನೀನು ಯಜ್ಞಕಾರ್ಯಕರ್ತನನ್ನು (ಅಥವಾ ಮಾನವನನ್ನು= 'ಚರ್ಷಣಿಪ್ರಾಃ') ತೃಪ್ತಿಪಡಿಸಿ ಅವನ ಅಭಿವೃದ್ಧಿಯ ವಿಸ್ತರಣೆಯೊಂದಿಗೆ ಆನಂದವನ್ನು ಅವನಿಗೆ ತರುತ್ತೀಯೆ. ಈಗ ಹೇ ಅಗ್ನಿಯೇ ನ್ಯಾಯವಾದ ಚಿಂತಕರಾದ ಅಂಗಿರಸರೆಂಬ ನಾವು ನಮ್ಮ ಕೈಕಾಲು ದೇಹಗಳಿಂದ ಮಾಡಿದ ಎಲ್ಲವನ್ನೂ ನಿನ್ನ ಸ್ವರ್ಗ ಮತ್ತು ಭೂಮಿ (ಭುವಿ-ಜೋಃ") ಎಂಬ ತೋಳುಗಳಿಂದ ಸ್ವರಥದಂತೆ ಮಾಡಿಕೋ. ಪರಸತ್ಯವನ್ನು ಪಡೆದುಕೊಳ್ಳಲು ಅವರು ಅದಕ್ಕಾಗಿ ದುಡಿದಿದ್ದಾರೆ- ಋತಂ ಯೇಮುಃ ಸುಧ್ಯಾ ಆಶುಷಾಣಾಃ (ಋಕ್ ೧೩, ೧೪)". "ಈಗ ಮಾತೃಶ್ರೀ ಉಷೆಯ ಸಪ್ತದರ್ಶಕರಾದ ಅತ್ಯುನ್ನತ ಯಜ್ಞ ವಿತರಣಕಾರರಿಂದ ನಾವು ದೇವತೆಗಳನ್ನು ಮಕ್ಕಳನ್ನಾಗಿ ಪಡೆಯುವಂತಾಗಲಿ; ನಾವು ಅಂಗಿರಸರಾಗಲಿ, ಸ್ವರ್ಗದ ಮಕ್ಕಳಾಗಲಿ ; ಪಾವಿತ್ರ್ಯದಲ್ಲಿ ಬೆಳಗುವಂತಾಗಲಿ ; ಹೇಗೆ? ಐಶ್ವರ್ಯ ತುಂಬಿದ ಗುಡ್ಡವನ್ನು ಒಡೆದು ತೆರೆದು (ಋಕ್ ೧೫). ಇಲ್ಲಿ ವಿಶ್ವಯಜ್ಞವನ್ನು ಆಜ್ಞಾಪಿಸುವ ಸಪ್ತರ್ಷಿಗಳನ್ನು ನಾವು ಸ್ಪಷ್ಟವಾಗಿ ಕಾಣುತ್ತೇವೆ ಮತ್ತು ಮಾನವನು ಈ "ಸಪ್ತರ್ಷಿಗಳಾಗುವ ಕಲ್ಪನೆಯನ್ನು" ಅಂದರೆ-ತನ್ನಲ್ಲಿಯೇ ಅವರನ್ನು ಹುಟ್ಟಿಸಿಕೊಂಡು ಮತ್ತು ಅವರಿಷ್ಟದಂತೆ ಬೆಳೆದು, ತಾನೇ ಸ್ವರ್ಗ-ಭೂಮಿಗಳಾಗುವಂತೆ ಹಾಗೂ ಇತರ ದೇವತೆಗಳಾಗುವಂತೆ ಅಥವಾ ಬೇರೆ ತರಹದಲ್ಲಿ ಹೇಳಿದಂತೆ, ತನ್ನ ಸತ್ತೆಯಲ್ಲಿಯೇ ದಿವ್ಯಜನ್ಮಗಳನ್ನು ("ಜನ್, ಕೃ ತನ್") ಹುಟ್ಟಿಸುತ್ತಾನೆ ಯಾ ಮಾಡುತ್ತಾನೆ ಯಾ ರೂಪಿಸುತ್ತಾನೆ.

ಮುಂದೆ ಮಹಾ ಸಂಭೂತಿಯ ಮತ್ತು ಸಿದ್ಧಿಯ ಮೂಲ ಮಾದರಿಯನ್ನಾಗಿ ಮಾನವ ಪಿತೃಗಳ ಉದಾಹರಣೆಯನ್ನು ಕೊಡಲಾಗಿದೆ. "ಈಗ ಕೂಡಾ, ಹೇ ಅಗ್ನಿಯೇ, ನಮ್ಮ ಅತಿಶ್ರೇಷ್ಠ ಪೂರ್ವಜರು ಪರಮಸತ್ಯವನ್ನು ಹೊಂದಲು ಹೊರಟು ಮಂತ್ರ ಹೇಳಿ, ಪಾವಿತ್ರ್ಯವನ್ನೂ, ಬೆಳಕನ್ನೂ ಮುಟ್ಟಲೆಂದು ಪ್ರಯಾಣ ಮಾಡಿದರು. ಭೂಮಿಯನ್ನು ಒಡೆದು ಅವರು ಕಮಲಾರುಣ ವರ್ಣದ ಗೋ ಸ್ವರೂಪದ ಉಷಸ್ಸುಗಳನ್ನು ಮುಸುಕಿನಿಂದ ಹೊರ ತೆಗೆದರು. ಅವರು ಕರ್ಮಗಳಲ್ಲಿಯೂ ಬೆಳಕಿನಲ್ಲಿಯೂ ಪೂರ್ಣತೆಯನ್ನು ಹೊಂದಿ ದೇವತ್ವಗಳನ್ನು, ದೇವತೆಗಳನ್ನು ಹುಡುಕಿ, ಹುಟ್ಟುಗಳನ್ನು ಕಬ್ಬಿಣದಂತೆ ಬಡಿದು ರೂಪಿಸಿ (ಅಥವಾ ದಿವ್ಯಜನ್ಮಗಳನ್ನು ಕಬ್ಬಿಣದಂತೆ ಬಡಿದು ರೂಪಿಸಿ), ಅಗ್ನಿಯನ್ನು ಶುದ್ಧಜ್ವಾಲೆಯನ್ನಾಗಿ ಮಾಡಿ ಮತ್ತು ಇಂದ್ರನನ್ನು ವರ್ಧಿಸಿ, ಮಹಾಜ್ಯೋತಿಯ ವಿಸ್ತಾರವನ್ನು ಸಾಧಿಸಿ ತಲುಪಿದರು. (ದಿವ್ಯ ಧೇನುಗಳನ್ನು, "ಗವ್ಯಂ ಊರ್ವಂ"). "ಹೇ ಬಲಿಷ್ಠನೇ, ಐಶ್ವರ್ಯಕ್ಷೇತ್ರದ ದಿವ್ಯ ಹಸುಗಳ ಗೋಲಿಗಳಂತೆ, ದೇವರುಗಳ ಅಂತರ್ಗತ ಹುಟ್ಟುಗಳು ಎನ್ನಿಸಿದ ದರ್ಶನ ಸ್ವರೂಪದಲ್ಲಿ ವ್ಯಕ್ತವಾದ ಬೆಳಕಿನ ಅಗಲವನ್ನವರು ಹೊಂದಿದರು. ಆ ಇಬ್ಬರೂ ಮಾನವರ ಸುಖ ಸಂತೋಷಗಳನ್ನು (ಆಶಾಪೂರ್ತಿಯನ್ನು) ಕೈಗೂಡಿಸಿಕೊಂಡು ಉದಾತ್ತತರ ಸತ್ತೆಗಾಗಿ (ಜೀವನಕ್ಕಾಗಿ, ಅಸ್ತಿತ್ವಕ್ಕಾಗಿ), ಅದರ ಸಂವರ್ಧನೆಗಾಗಿ, ಮುಮುಕ್ಷುಗಳಾಗಿ ಕೆಲಸ ಮಾಡಿದರು"- "ಆಯಾಥೇವ ಕ್ಷುಮತಿ ಪಶ್ವೋ ಅಖ್ಯದ್ ದೇವಾನಾಂ ಯಜ್ ಜನಿಮ ಅಂತಿ ಉಗ್ರ ; ಮರ್ತಾನಾಂ ಚಿದ್ ಉರ್ವಶೀರ್ ಅಕೃಪ್ರನ್ ವೃಧೆ ಚಿದ್ ಅರ್ಯ ಉಪರಸ್ಯ ಆಯೋಃ (ಋಕ್ ೧೬-೧೮). ದಿತಿಯ ಐಶ್ವರ್ಯವನ್ನೂ ಪಡೆದು, ಅದಿತಿಯನ್ನೂ ಕಾಯ್ದುಕೊಂಡು-ಎಂಬ ದ್ವಿ ಕಲ್ಪನೆಯ ಭಾಷಾಂತರ (ಬೇರೆ ಮಾತಿನಲ್ಲಿ ಹೇಳಿದ) ಪುನರುಕ್ತಿ ಎಂಬುದು ಸ್ಪಷ್ಟ. "ನಾವು ನಿನಗಾಗಿ ದುಡಿದಿದ್ದೇವೆ ; ನಮ್ಮ ಕರ್ಮಗಳಲ್ಲಿ ನಾವು ಪೂರ್ಣರಾಗಿದ್ದೇವೆ ; ವಿಸ್ತಾರವಾಗಿ ಹೊಳೆವ ಉಷಸ್ಸುಗಳು ಪರಸತ್ಯದಲ್ಲಿ ತಾವು ಮನೆ ಮಾಡಿಕೊಂಡರು (ಯಾ ಪರಮಸತ್ಯದ ಉಡುಪನ್ನು ಧರಿಸಿದರು) ; ಅವರು ಹಾಗೆ ಮಾಡಿದ್ದು ಅಗ್ನಿಯ ಪೂರ್ಣತೆಯಲ್ಲಿ, ಅವನ ಬಹುಮುಖ ಪ್ರಮೋದದಲ್ಲಿ ಮತ್ತು ದೇವತೆಯ ಸರ್ವಪ್ರಕಾಶದಲ್ಲಿ (ಋಕ್ ೧೯)."

IV. 3. 11 ರಲ್ಲಿ ಮತ್ತೆ ಅಂಗಿರಸರ ಉಲ್ಲೇಖವಿದೆ. ಆ ಪದ್ಯದತ್ತ ನಮ್ಮನ್ನೊಯ್ಯುವ ಕೆಲ ಉಕ್ತಿಗಳು ಗಮನಾರ್ಹವಾಗಿವೆ. ಏಕೆಂದರೆ, ಈ ಒಂದು ಮಾತನ್ನು ಬಹಳ ಸಲ ಹೇಳಲು ಸಾಧ್ಯವಿಲ್ಲ-ವೇದದ ಯಾವ ಪದ್ಯವನ್ನೂ ಅದರ ಸಂದರ್ಭವನ್ನೂ ಸೂಕ್ತದಲ್ಲಿಯ ಅದರ ಸ್ಥಾನವನ್ನೂ ಅದರ ಹಿನ್ನೆಲೆ-ಮುನ್ನೆಲೆಗಳನ್ನೂ ಗಮನಿಸದೆ ಸರಿಯಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಅಗ್ನಿಯನ್ನು ಸತ್ಯದಲ್ಲಿ ಹುಟ್ಟಿಸಿರಿ ಎಂದೂ ಅವನನ್ನು ಅವನ ಬಂಗಾರದ ಬೆಳಕಿನಲ್ಲಿ ಮಾಡಿಸಿರಿ ಎಂದೂ ಜನರಿಗೆ ಕರೆಕೊಡುವುದರಿಂದ ಸೂಕ್ತವು ಆರಂಭವಾಗುತ್ತದೆ (ಹಿರಣ್ಯರೂಪಂ" ಬಂಗಾರವು ಯಾವಾಗಲೂ ಪರಮಸತ್ಯದ ಸೌರ ಬೆಳಕಿನ ಸಂಕೇತ, "ಋತಂ ಜ್ಯೋತಿಃ") ; ಅವರೀ ಕರೆಯನ್ನು ಅಜ್ಞಾನವು ರೂಪಿತವಾಗುವ ಮೊದಲೇ - "ಪುರಾತನ ಁಯಿ ತ್ನೋರ್ ಅಚಿತ್ತಾತ್" (IV. 3.1) ಕೊಡಬೇಕು. ಮಾನವನ ಕಾರ್ಯದತ್ತ ಲಕ್ಷ್ಯ ಹಾಕಬೇಕೆಂದು ದೇವತೆಯನ್ನು ಕೇಳಲಾಗಿದೆ ; ಮಾನವನನ್ನು ಅವನ ಅಂತರ್ಗತ ಸತ್ಯದಿಂದ ಅಭಿನ್ನವೆಂದು ತಿಳಿದುಕೊಳ್ಳಬೇಕೆಂದು ವಿನಂತಿಸಲಾಗಿದೆ- "ವಿಚಾರವನ್ನು ಸರಿಯಾಗಿ ಇಡುವ ಮನುಷ್ಯನು ಪರಮಸತ್ಯ ಪ್ರಜ್ಞೆಯುಳ್ಳವನು - ಋತಸ್ಯ ಬೋಧಿ ಋತಚಿತ್ ಸ್ವಾಧೀಃ" (IV 3.4.) ಏಕೆಂದರೆ ಎಲ್ಲ ಸುಳ್ಳೂ (=ಅನೃತಗಳೂ) ಪರಮ ಸತ್ಯದ ಅಪವಿನ್ಯಾಸ. ಅನಂತ (=ಅಸೀಮ) ಮಾತೃವಿನೆದುರು ಮನುಷ್ಯನು ದೋಷರಹಿತನು ಎಂದು ಘೋಷಿಸಲ್ಪಡುವುದಕ್ಕೆ ತಕ್ಕಂತೆ ಅವರ ದೋಷ, ಪಾಪ, ಕೊರತೆಗಳೆಲ್ಲವನ್ನೂ ಪರಿಹರಿಸುವುದಕ್ಕಾಗಿ ವಿವಿಧ ದೇವತೆಗಳನ್ನು ಕೇಳಿಕೊಳ್ಳೆಂದು ಅಗ್ನಿಯನ್ನು ಪ್ರಾರ್ಥಿಸಲಾಗುತ್ತದೆ - "ಅದಿತಯೇ ಅನಾಗಸಃ" (I.24.15)ಅಥವಾ ಇತರ ಕಡೆಗಳಲ್ಲಿ ಹೇಳಿದಂತೆ ಮಾನವನನ್ನು ಅನಂತ (=ಅಪ್ರಮೇಯ) ಸತ್ತೆಯತ್ತ ಒಯ್ಯಲೆಂದು ಕೇಳಿಕೊಳ್ಳಲಾಗುತ್ತದೆ.

ಅನಂತರ ೯ನೆಯ ಮತ್ತು ೧೦ನೆಯ ಪದ್ಯಗಳಲ್ಲಿ ನಾವು ವಿವಿಧ ನಿಪಾತ ಸೂತ್ರಗಳಲ್ಲಿ, ಅನುಪಾತ ವಿನ್ಯಾಸಗಳಲ್ಲಿ ಮಾನವ್ಯ ಹಾಗೂ ದಿವ್ಯ ಸತ್ತೆಗಳ ಏಕೀಕೃತ ಅಸ್ತಿತ್ವದ ಕಲ್ಪನೆಯ ಬಗೆಗೆ ಹೇಳಿದ್ದೇವೆ : ಆ ಅಸ್ತಿತ್ವಗಳೆಂದರೆ ದಿತಿ ಮತ್ತು ಅದಿತಿ ; ಅದಿತಿಯು ದಿತಿಯನ್ನು ಸ್ಥಾಪಿಸುತ್ತಾಳೆ, ನಿಯಂತ್ರಿಸುತ್ತಾಳೆ ಮತ್ತು ನೆರೆಯಿಂದ ಮುಳುಗಿಸಿ ಬಿಡುತ್ತಾಳೆ. ಪರಮಸತ್ಯವನ್ನು ಪರಮಸತ್ಯವು ನಿಯಂತ್ರಿಸಿಕೊಂಡಿರುವುದನ್ನು ನಾನು ಬಯಸುತ್ತೇನೆ. (ದಿವ್ಯ ಸತ್ಯದಿಂದ ಮಾನವ್ಯ ಸತ್ಯವು ನಿಯಂತ್ರಿತವಾಗಿರುವುದು ಅಪೇಕ್ಷಿತ) : ಧೇನುವಿನ ಅಪಕ್ವಾಂಶಗಳನ್ನೂ ಅವಳ ಪಕ್ವ, ಮಧುಮಯ ಫಲಿತವನ್ನೂ (ಹಾಲನ್ನೂ) ಒಟ್ಟಿಗೇ ಪರಮಸತ್ಯವು ಅಂಕೆಯಲ್ಲಿಟ್ಟುಕೊಂಡಿರುವುದನ್ನು ನಾನು ಬಯಸುತ್ತೇನೆ-ಅರ್ಥಾತ್ ಅಪೂರ್ಣ ಮಾನವ್ಯ ಪ್ರಜ್ಞೆಯನ್ನೂ ವೈಶ್ವತ್ರಿಕ ಚಿತ್ತಿನ ಸತ್ತೆಯ ಆನಂದಮಯ ದಿವ್ಯ ಫಲಗಳನ್ನೂ ಒಳಗೊಂಡು ಆ ಪ್ರಕಾರ ಒಟ್ಟಿಗೇ ಅಂಕೆಯಲ್ಲಿಟ್ಟು-ಕೊಂಡಿರುವುದನ್ನು ಆಶಿಸುತ್ತೇನೆ. ಅವಳು (ಧೇನು) ಕಪ್ಪಾಗಿರುವುದರಿಂದ (=ಕೃಷ್ಣವೂ ವಿಭಕ್ತವೂ ಆದ ಬಾಳು), ದಿತಿಸ್ವರೂಪ ತಾಳಿರುವುದರಿಂದ, "ಜಾಮರ್ಯೇಣ ಪಯಸಾ" ಜೊತೆಯ ನದಿಗಳ ನೀರಿನಿಂದ ಆ ಹೊಳೆವ ಜಲದ ಆಧಾರದಿಂದ- ಅದೂ ಹಾಗೇ ಅದಿತಿಯಿಂದ ನಿಯಂತ್ರಿತವಾಗಲಿ. ಪರಮಸತ್ಯದಿಂದ ಅಗ್ನಿ ವೃಷಭನು ಅದರ ಮಟ್ಟದ ನೀರಿನಿಂದ ಅದನ್ನು ಚಿಮುಕಿಸಿ ಅಲುಗಾಡದಂತೆ ನಿಲ್ಲಿಸಿ ವಿಸ್ತಾರವನ್ನು ಸ್ಥಾಪಿಸುವುದು (ಅಥವಾ ವಿಶಾಲ ದೇಶವನ್ನು, ಸ್ಥಲವನ್ನು, ಆಕಾಶವನ್ನು ವ್ಯಕ್ತ ಮಾಡುತ್ತದೆ) ; ಪವಿತ್ರವೂ ಕಾಂತವೂ ಆದ ಮೇಲೆ ಚೊಟ್ಟನ್ನು ಚಿತ್ರವಣ್ಣದ ಬಸವನು ಹಿಂಡುತ್ತಾನೆ. ಒಂದರ ಹೊಳೆವ ಜಿಳಿಯ ಶುದ್ಧತೆಯನ್ನೂ, (ಅದು ಆಕರ, ಪೀಠ, ಬುನಾದಿ) ತ್ರಿಲೋಕಗಳಲ್ಲಿ ವ್ಯಕ್ತವಾದ ಚಿತ್ರವರ್ಣದ ಬಾಳನ್ನೂ ಪರಸ್ಪರ ವಿರುದ್ಧವಾಗಿ ತೋರುವಂತೆ ಸಂಕೇತಿಸಿ ಹೇಳುವುದು ವೇದದ ಅಭ್ಯಾಸ. ಆದ್ದರಿಂದ ಇತರ ಪ್ರತಿಮೆಗಳಂತೆ ಚಿತ್ರವರ್ಣದ ಈ ಬಸವನೂ

ಶುದ್ಧಶ್ವೇತ ಜಲಮೂಲವಾದ ಕೆಚ್ಚಲೂ ಪರಸತ್ಯದ ಮತ್ತು ಅನಂತದ ಜಲದಿಂದ ಪುಷ್ಟವಾದ ಮತ್ತು ತನ್ನ ಚಟುವಟಿಕೆಗಳಲ್ಲಿ ಶಾಂತಗೊಳಿಸಲ್ಪಟ್ಟ ಹಾಗೂ ಶುದ್ಧೀಕರಿಸಲ್ಪಟ್ಟ ಜೀವನದ ಗುಣಿತ ಅಭಿವ್ಯಕ್ತಿಗಳ ಕಲ್ಪನೆಯನ್ನು ಪುನಃ ಪುನಃ ವೇದವು ಹೇಳುತ್ತದೆ.

ಕೊನೆಯದಾಗಿ, ನಾವು ಹಲವು ಸಲ ಕಂಡ ಹೊಳೆವ ದಿವ್ಯ ಜಲಗಳನ್ನು ಮತ್ತು ಹೊಳೆವ ದಿವ್ಯ ದನಗಳನ್ನೂ ಋಷಿಯಿಲ್ಲಿ ಜೊತೆಗೂಡಿಸಿದ್ದಾನೆ. "ಮಹಾಸತ್ಯದಿಂದ ಗುಡ್ಡವನ್ನೊಡೆದು ತೆರೆದು ಅಂಗಿರಸರು ದಿವ್ಯದನಗಳನ್ನು ಕೂಡಿಕೊಂಡರು ; ಮಾನವ್ಯ ಜೀವಾತ್ಮಗಳು ಬಿನ್ನಿಸಿದ ಆ ಅಂಗಿರಸರು ಆನಂದಮಯ ಮಹೋಷೆಯಲ್ಲಿ ವಾಸಿಸತೊಡಗಿದರು; ಅಗ್ನಿ ಹುಟ್ಟಿದ ಕೂಡಲೇ ಸ್ವರ್ ಅವತರಿಸಿತು ಅಭಿವ್ಯಕ್ತವಾಯಿತು. ಹೇ ಅಗ್ನಿಯೇ, ತನ್ನ ಎದೆಯನ್ನು ಚಾಚಿ ನಾಗಾಲೋಟ-ದಿಂದ ಓಡುವ ಕುದುರೆಯಂತೆ ಪರಮಸತ್ಯದಿಂದ ದಿವ್ಯಾಮೃತ ಜಲಗಳು ತುಳಿತಕ್ಕೊಳಗಾಗದೆ ತಮ್ಮ ಮಧುಮಯವಾದ ನಿತ್ಯ ಪ್ರವಾಹ ಸ್ವರೂಪದಿಂದ ಹರಿದವು- (ಋಕ್ ೧೧, ೧೨)." ವಸ್ತುತಃ ಈ ನಾಲ್ಕು ಪದ್ಯಗಳು ಅಮೃತತ್ವಸಿದ್ಧಿಗೆ ಬೇಕಾದ ಪೂರ್ವೋಪಾದಿಗಳನ್ನು, ಪೂರ್ವ ಸಿದ್ಧತೆಗಳನ್ನು ಹೇಳುತ್ತವೆ. ಅವು ಭವ್ಯವಾದ ಮಹಾಯೋಗದ ಗುರುತುಗಳು ; ಮಹಾಯೋಗಿಗಳ ಯೋಗ-ಅದರಲ್ಲವರು ತಮ್ಮ ಅತ್ಯುನ್ನತ ಆಧ್ಯಾತ್ಮಿಕ ಅನುಭವವನ್ನು ಅಶುಚಿಮಂತರಿಂದ ಅಡಗಿಸಿ ಇಟ್ಟರು ಮತ್ತು ಅಯ್ಯೋ! ಅವರದನ್ನು ಎಷ್ಟು ಪರಿಣಾಮಕರವಾಗಿ ಅಡಗಿಸಿ ಇಟ್ಟರೆಂದರೆ ಅವರ ಮುಂದಿನ ತಲೆಮಾರುಗಳಿಗೆ ಅದು ತಿಳಿಯದೆಯೇ ಹೋಯಿತು ! ಅವು ಗುಪ್ತ ಸಂಕೇತಗಳು ; ಅವು ಪ್ರತಿಮಾ ಚಿಹ್ನೆಗಳು ; ಅವರು ರಕ್ಷಿಸಿಕೊಂಡ ಸತ್ಯದ ಆವಿಷ್ಕಾರಕ್ಕಾಗಿಯೇ ಅವು ಇವೆ ; ಯಾರಿಗಾಗಿ? ಉಪನೀತರಿಗಾಗಿ-ಉಪನೀತನು ಜ್ಞಾನಿ, ಋಷಿ, ಎಂದರು ಆ ಋಷಿಗಳು. ವಾಮದೇವನೇ ಹೇಳುತ್ತಾನೆ ; ಅವನ ಭಾಷೆ ಸರಳವೂ ಖಂಡಿತ ಶೈಲಿಯದೂ ಆಗಿದೆ : ಅವನ ಸೂಕ್ತದ ಕೊನೆಯ ಪದ್ಯವಿದು; "ಈಯೆಲ್ಲವೂ, ಹೇ ಅಗ್ನಿಯೇ, ನಿನಗಾಗಿ ನಾನು ಹೇಳಿದ ಗುಪ್ತ ಶಬ್ದಗಳು (ಗುಪ್ತಾರ್ಥವುಳ್ಳ ಮಂತ್ರಗಳು) ; ಏಕೆಂದರೆ ನೀನು ತಿಳಿದವನು ನೀನು ಹಂಚಿ ಹಾಕುವವನು. ಯಾವುವನ್ನು? ಮಾರ್ಗದರ್ಶಕ ಮಾತುಗಳನ್ನು ಮತ್ತು ಋಷಿಗೆ ತಮ್ಮ ಅರ್ಥ ಹೇಳುವ ದ್ರಷ್ಟಜ್ಞಾನವುಳ್ಳವನ್ನು ; ನನ್ನ ಚಿಂತನಗಳಿಂದಲೂ ಪ್ರಕಾಶಮಯ ಪದಗಳಿಂದಲೂ ಆ ಮಾತುಗಳನ್ನು ನಾನು ಹೇಳಿದ್ದೇನೆ-ಏತಾ ವಿಶ್ವಾ ವಿದುಷೇ ತುಭ್ಯಂ ವೇದೋ ನೀಥಾನಿ ಅಗ್ನೇ ನಿಣ್ಯಾ ವಚಾಂಸಿ ; ನಿವಚನಾ ಕವಯೇ ಕಾವ್ಯಾನಿ ಅಶಂಸಿಷಂ ಮತಿಭಿರ್ ವಿಪ್ರ ಉಕ್ಥೈಃ (IV.3.16) : ಇವೇನೋ ಗುಪ್ತವಾಣಿಗಳೆಂಬುದು ನಿಜ ; ಅವು ತಮ್ಮ ಗುಪ್ತತೆಯನ್ನು ಕಾಯ್ದುಕೊಂಡಿವೆ. ಹಾಗೆ ಕಾಯ್ದುಕೊಂಡದ್ದು ಯಾರ ಮೂಲಕ? ಮತ್ತು ಯಾವ ರೀತಿಯಿಂದ? ಅರ್ಚಕನಿಂದ, ಅಧ್ವರ್ಯುವಿನಿಂದ, ವೈಯಾಕರಣದಿಂದ, ಪಂಡಿತನಿಂದ, ಐತಿಹಾಸಿಕನಿಂದ, ಪೌರಾಣಿಕನಿಂದ ತಿರಸ್ಕೃತವಾಗಿ! ಅವರೆಲ್ಲರಿಗೂ ಅವೆಲ್ಲಾ ತಮೋವಾಣಿಗಳೆನ್ನಿಸಿದವು, ಮೊಹರು ಹೊಡೆದಿಟ್ಟ ಅಸಂಬದ್ಧ ಪ್ರಲಾಪಗಳೆನ್ನಿಸಿದವು ; ಅವರಿಗೆಂದೂ ಅವು ನಮ್ಮ ಅತಿಶ್ರೇಷ್ಠ ಪ್ರಪಿತಾಮಹರಿಗೆ ಎಂಥವುಗಳೆನ್ನಿಸಿದ್ದವೋ ಅಂಥವುಗಳೆನ್ನಿಸಲಿಲ್ಲ-ಅವರ ಪ್ರಬುದ್ಧ ಉತ್ತರಸಂತಾನಕ್ಕೆನ್ನಿಸಿದಂತೆಯೂ ಅನ್ನಿಸಲಿಲ್ಲ. (ಉತ್ತರ ಕಾಲೀನರಾದ ಅರವಿಂದರಿಗೂ ಪೂರ್ವಕಾಲೀನರಾದ ವೇದ ಋಷಿಗಳಿಗೂ ಮಾತ್ರ ಉಕ್ತವಾಣಿಗಳ ಗುಪ್ತಾರ್ಥಗೊತ್ತು-ಮತ್ತಾರಿಗೂ ಅಲ್ಲ-ಎಂದು ತಾತ್ಪರ್ಯ-ಅನುವಾದಕ) : "ನಿಣ್ಯಾ ವಚಾಂಸಿ ನೀಥಾನಿ ನಿವಚನಾ ಕಾವ್ಯಾನಿ."

❖ ❖

## ಅಧ್ಯಾಯ-೨೦

# ಸ್ವರ್ಗಶುನಿ

ಸತ್ಯದ ಈ ವೈದಿಕ ಕಲ್ಪನೆಯನ್ನು ನಮ್ಮ ಪ್ರಾಚೀನತಮ ಗೋತ್ರರ್ಷಿಗಳು ಸಂಪೂರ್ಣವಾಗಿ ಅರಗಿಸಿಕೊಳ್ಳಲು ಹಾಗೂ ಉಷೆಯ ಪ್ರಬೋಧೋದಯದ ಕಿರಣಗಳನ್ನು ಹುಡುಕಿದ್ದನ್ನು ತಿಳಿದುಕೊಳ್ಳಲು ಅಂಗೀರಸ ಪುರಾಣ ಕಥೆಯ ಇನ್ನೂ ಸ್ವಲ್ಪ ಮಾಹಿತ್ಯವನ್ನು ಮಾಡಿಕೊಳ್ಳಬೇಕಾಗಿದೆ. ಪಣಿಗಳ ನಿಷ್ಕೃಷ್ಟ ಕೆಲಸವೇನೆಂಬುದನ್ನು ಗುರುತಿಸಬೇಕು, ಸರಮೆಯನ್ನು ದೃಢವಾಗಿ ಯಾವುದೆಂದು ಗುರುತಿಸಬೇಕು - ಈಯೆರಡು ವೇದವ್ಯಾಖ್ಯಾಸಮಸ್ಯೆಗಳು ಪರಸ್ಪರ ನಿಕಟ ಸಂಬಂಧವುಳ್ಳವುಗಳು. ಸರಮೆಯು ಬೆಳಕಿನ ಯಾವುದಾದರೊಂದು ಶಕ್ತಿಯಾಗಿರಬೇಕು - ಬಹುಶಃ ಉಷಾಶಕ್ತಿಯಾಗಿರಬೇಕೆಂಬುದು ಸ್ಪಷ್ಟ : ಹೇಗೆಂದರೆ, ಇಂದ್ರ ಹಾಗೂ ಮೂಲ ಆರ್ಯಋಷಿಗಳಿಗೂ ಗುಹಾಪುತ್ರರಿಗೂ ನಡೆದ ಘರ್ಷಣೆಯು ಭಾರತೀಯ ನಾಗರಿಕತೆಯ ಶೈಶವೇತಿಹಾಸದ ವಿರೂಪಿಕರಣವಲ್ಲವೆಂಬುದು ಒಮ್ಮೆ ಗೊತ್ತಾಂಬತೆಂದರೆ - ಅದು ಹಾಗಲ್ಲ - ಅದು ಬೆಳಕಿನ ಹಾಗೂ ಕತ್ತಲೆಗಳ ಶಕ್ತಿಗಳ ನಡುವಣ ಹೋರಾಟ ಎಂದು ತಿಳಿದು ಬಿಟ್ಟಿತೆಂದರೆ, ಸ್ವಯಂಪ್ರಭ ಧೇನುವಜ್ರಗಳನ್ನು ಹುಡುಕುವುದರಲ್ಲಿ ಮುಂದಾಳ್ತನವಹಿಸುವ ಸರಮೆ, ಅವುಗಳ ಮಾರ್ಗವನ್ನೂ ಪರ್ವತಗತ ಗುಪ್ತ ಸೆರೆವನೆಯನ್ನು ಶೋಧಿಸುವುದರಲ್ಲಿ ಮುಂದಾದ ಸರಮೆ, ಮಾನವ ಮನದಲ್ಲಿ ಪರಮಸತ್ಯಪ್ರಕಾಶ ಉಂಟಾಗುವುದರ ಮೊದಲಿನ ಮುಂಗುರುಹಾಗಿರಬೇಕು. ಆ ಸರಮೆಯು ನಮ್ಮ ಅಜ್ಞಾತ ಸತ್ತೆಯ ತಮದೊಳಗೆ ಸತ್ಯಶೋಧ ಮಾಡುವ ಚೇತನಶಾಖೆಯ ಯಾವ ಶಕ್ತಿಯಾಗಿರಬಹುದು? ಎಂದು ಕೇಳಿದೊಡನೆಯೇ ನಮಗೆ ಕೂಡಲೆ "ಪ್ರತಿಭೆ" ಎಂಬ ಆಲೋಚನೆ ಉತ್ತರ ರೂಪದಿಂದ ಸಿಕ್ಕುತ್ತದೆ. ಏಕೆಂದರೆ ಸರಮೆಯು ಸರಸ್ವತಿಯಲ್ಲ. ಅವಳು ಸ್ಫೂರ್ತಿಯಲ್ಲ - ಸರಮೆ, ಸರಸ್ವತಿಯರಲ್ಲಿ "ಸರ" ಎಂಬುದಷ್ಟೇ ಸಾಧಾರಣ. ಸರಸ್ವತಿಯು ಜ್ಞಾನದ ಪೂರ್ಣ ಮಹಾಪೂರವನ್ನು ಕೊಡುತ್ತಾಳೆ; ಅವಳು ಮಹೋ ಅರ್ಣ:- ಮಹಾಪ್ರವಾಹವನ್ನೇ ನೀಡುತ್ತಾಳೆ ಮತ್ತು ಅಪಾರತೆಯಿಂದ ಅಸೀಮತೆಯಿಂದ, ಎಲ್ಲ ವಿಚಾರಗಳನ್ನೂ ಬೆಳಗಿಸುತ್ತಾಳೆ "ವಿಶ್ವಾಧಿಯೋ ವಿರಾಜತಿ" ಸರಸ್ವತಿಯ ಹತ್ತಿರ ಏನೆಲ್ಲಾ ಇದೆ. ಅವಳೇ ಪರಮಸತ್ಯ ಪುರುಷನ ಆಹಾರ; ಸರಮೆಯು ಪ್ರಯಾಣಿಕೆಯು, ಶೋಧಿಕೆಯು, ಹಾದಿ ಹಿಡಿದು ಹೋಗಿ ಕಳೆದದ್ದನ್ನು ಹುಡುಕಿಕೊಡುವವಳು- ಆದರೆ ಅವಳ ಹತ್ತಿರ ಸ್ವಂತದ ಆಸ್ತಿ ಏನೂಇಲ್ಲ. ಅವಳು ಶ್ರುತಿ ಸರ್ವಾರ್ಥ ಗ್ರಾಹಕ ಪದವೂ ಅಲ್ಲ. ಅವಳು ಇಳಾದೇವಿಯಂತೆಯೇ ಒಬ್ಬಳು ; ಮಾನವರ ಶಿಕ್ಷಿಕೆ. ಏಕೆಂದರೆ ಅವಳು ಹುಡುಕಿದ್ದು ಸಿಕ್ಕಿದ ಮೇಲೂ ಅವಳದನ್ನು ತನ್ನ ವಶಕ್ಕೆ ತೆಗೆದುಕೊಳ್ಳುವುದಿಲ್ಲ. ದ್ರಷ್ಟಾರರಿಗೆ ಮತ್ತು ಅವರ ದಿವ್ಯ ಸಹಾಯಕರಿಗೆ ಬರಿ ಸುದ್ದಿಯನ್ನು ಮುಟ್ಟಿಸುತ್ತಾಳೆ-ಆಗ ಅವರು ಅವಳು ಹುಡುಕಿ ತೆಗೆದ ಬೆಳಕನ್ನು ಹೋರಾಟ ಮಾಡಿ ವಶಪಡಿಸಿಕೊಳ್ಳುವ ಕೆಲಸ ಉಳಿದೇ ಇರುತ್ತದೆ.

ಸರಮೆಯ ಬಗೆಗೆ ವೇದವೇ ಸ್ವತಃ ಏನು ಹೇಳುತ್ತದೆ ಎಂಬುದನ್ನು ಈಗ ನೋಡೋಣ. I. 104 ರಲ್ಲಿಯ ೫ನೆಯ ಪದ್ಯವನ್ನು ಗಮನಿಸಿದರೆ, ಅದರಲ್ಲಿ ಸರಮೆಯ ಹೆಸರೂ ಇಲ್ಲ. ಆ ಸೂಕ್ತವು ಅಂಗಿರಸ-ಪಣಿಗಳಿಗೆ ಸಂಬಂಧಿಸಿಯೂ ಇಲ್ಲ ಆದರೂ ಆ ಪಂಕ್ತಿಯು ವೇದವು ಸರಮೆಗೆ ಮೀಸಲಾಗಿಟ್ಟ ಕರ್ತವ್ಯವನ್ನು ಶುದ್ಧವಾಗಿ ಬಣ್ಣಿಸುತ್ತದೆ:- "ಮಾರ್ಗದರ್ಶಕನು ದೃಶ್ಯನಾದಾಗ ದಸ್ಯುವಿನ ಮನೆಯಂತಿದ್ದ ಆಸನಕ್ಕವಳು ತಿಳಿದು ಹೋದಳು. - ಪ್ರತಿಯತಸ್ಯಾ ನೀಥಾ ಅದರ್ಶಿ ದಸ್ಯೋರ್ ಓಕೋ ನ ಅಚ್ಛಾಸದನಂ ಜಾನತೀ ಗಾತ್". ಸರಮೆಯ ಮುಖ್ಯ ಲಕ್ಷಣಗಳಿರಡಿವು : ಅವಳಿಗೆ (ಆ ದೇವಶುನಿಗೆ) ಜ್ಞಾನವು ಮೊದಲೇ ಬರುತ್ತದೆ ; ಪ್ರತ್ಯಕ್ಷವಾಗುವುದಕ್ಕೂ ಮೊದಲೇ ಸ್ವಲ್ಪವೂ ಮುನ್-ಸೂಚನೆ ಕೊಡದೇ ಮೂಲ ಪ್ರವೃತ್ತ್ಯನುಗುಣವಾಗಿ (ವಾಸನಾನುಗುಣವಾಗಿ) ಅರಿವಿನ ಸುಳಿವು ಗೊತ್ತಾಗುತ್ತದೆ ಮತ್ತು ಆ ಅರಿವಿನಿಂದ ಅವಳು ಶೋಧಕವಾದ ಉಳಿದ ಎಲ್ಲ ಚೇತನ ಶಾಖಾ ಶಕ್ತಿಗಳಿಗೂ ಕಾರ್ಯಮಗ್ನ ದಿವ್ಯಶಕ್ತಿಗಳಿಗೂ ಮಾರ್ಗದರ್ಶನ ಮಾಡುತ್ತಾಳೆ. ವಿನಾಶಕರ ಸ್ಥಾನಕ್ಕೆ, ಮನೆಗೆ, ಅವಳು ಕರೆದೊಯ್ಯುತ್ತಾಳೆ. ("ಸದನಂ")- ಅದು ನಮ್ಮ ಇರವಿನ ವಿರುದ್ಧ ಧ್ರುವ. ಒಂದು ಕತ್ತಲೆ, ಇನ್ನೊಂದು ಬೆಳಕು ; ಆದರೆ ಎರಡೂ ನಮ್ಮಿಂದ ಗೂಢವಾಗಿವೆ. "ಸದನಂ ಋತಸ್ಯ"= ಅತಿಮಾನಸ, ಅತಿಚೇತನ, ಸುಪ್ರಮಾನಸ "ಗುಹಾಯಾಂ=ಕತ್ತಲ ಗುಹೆ". ದೇವತೆಗಳದು ಬೆಳಕಿನ ಗುಹೆ, ಅದೇವತೆಗಳಾದ ದೈತ್ಯರದು ಕತ್ತಲ ಗುಹೆ. ನಾವಿರುವುದು ಈಯೆರಡರ ನಡುವೆ. ಎಂದರೆ ಸರಮೆಯು ಅತಿಮಾನಸ ಸತ್ಯದಿಂದ ಬೆಳಕಿನಕಡೆಗೂ ಒಯ್ಯುತ್ತದೆ. ಈ ಅತಿಮಾನಸದ ಮಗುವು ನಮ್ಮಲ್ಲಡಗಿ ಇರುವ ಬೆಳಕಿನತ್ತ ನಮ್ಮನ್ನು ಒಯ್ಯುವುದು-ಅದೇ ಅವಚೇತನ : ಅರ್ಥಾತ್ ಅವಮಾನಸದ ಕತ್ತಲೆಯ ಗುಹೆಯಲ್ಲೂ ಅದನ್ನೋಡಿಸಲು ಬೇಕಾದ ಸುಪ್ರಮಾನಸ ಜಾತವಾದ ಬೆಳಕು ಹೊಕ್ಕಾಗ ಆ ಗುಹೆ ಬೆಳಕಿನ ಗುಹೆಯಾಗುವುದು ಎಂದರ್ಥ. ಈ ಲಕ್ಷಣಗಳೆಲ್ಲಾ ಪ್ರತಿಭೆಗೆ ಸರಿಯಾಗಿ ಅನ್ವಯಿಸುತ್ತವೆ.

ವೇದದ ಕೆಲವೇ ಸೂಕ್ತಗಳಲ್ಲಿ ಸರಮೆಯನ್ನು ಹೆಸರಿಸಲಾಗಿದೆ. ಅದರಲ್ಲೂ ಅಂಗಿರಸರ ಸಾಧನೆಗಳನ್ನು ಹೇಳುವಾಗಲೇ ಸರಮೆಯ ಹೆಸರು ಹೆಚ್ಚಾಗಿ ಬರುತ್ತದೆ; ಅಲ್ಲದೆ, ಸತ್ತೆಯ ಅತ್ಯುನ್ನತ ಪ್ರಜ್ಞಾಸ್ತರಗಳನ್ನು ಗೆಲ್ಲುವಾಗಲೂ ಸರಮೆ ಉಲ್ಲೇಖಿತೆ. ಅತ್ರಿಗಳ ಸೂಕ್ತ ಅವುಗಳಲ್ಲಿ ಬಹಳ ಮುಖ್ಯ. ನವಗ್ವ-ದಶಗ್ವ ಅಂಗಿರಸರ ವಿಷಯದಲ್ಲಿ (V.45) ವ್ಯಾಖ್ಯೆಯನ್ನು ಸೂಕ್ಷ್ಮವಾಗಿ ಮಾಡುವಾಗ ನಾವು ಆಗಲೇ ಅವುಗಳನ್ನು ಗಮನಕ್ಕೆ ತಂದುಕೊಂಡಿದ್ದೇವೆ. ಮೊದಲ ಮೂರು ಪದ್ಯಗಳು ಒಂದು ದೊಡ್ಡ ಸಾಧನೆಯನ್ನು ಸಂಕ್ಷೇಪಿಸುತ್ತವೆ : "ಸ್ವರ್ಗದ ಗುಡ್ಡವನ್ನು ಮಂತ್ರಗಳಿಂದ ಕಡಿದು ಅವುಗಳನ್ನು ಅವನು ಕಂಡನು. ಹೌದು-ಆಗಮಿಸುತ್ತಲಿದ್ದ ಉಷೆಯ ಪ್ರಕಾಶಾಂಶುಗಳು ಜೀಸಾಗಿ ಹೊರ ಹೊರಟವು. ಹಟ್ಟಿಯಲ್ಲಿದ್ದವುಗಳನ್ನು ಅವನು ಹೊರ ತೆಗೆದನು; ಸ್ವರ್ ಮೇಲೆದ್ದಿತು; ಒಬ್ಬ ದೇವತೆ ಮಾನವ್ಯ ಬಾಗಿಲುಗಳನ್ನು ತೆರೆದಳು. ಸೂರ್ಯನು ವಿಶಾಲವಾಗಿ ತನ್ನ ಶಕ್ತಿಯನ್ನು ಸಂಗ್ರಹಿಸಿಕೊಂಡು ವೈಭವವನ್ನು ತಲುಪಿದನು. ಗೋಗಳ ತಾಯಿಯು (ಉಷಾದೇವಿ) ಇದನ್ನು ತಿಳಿದು ವಿಸ್ತಾರದಿಂದ ಇತ್ತಬಂದಳು; ನದಿಗಳೆಲ್ಲಾ ಮುನ್ನುಗ್ಗುವ ಓಘಗಳಾದವು-ಅವು ತಮ್ಮ (ತೋಡುಗಳನ್ನು) ತಾವೇ ತೋಡಿಕೊಂಡವು. ತಮ್ಮ ಪಾತ್ರಗಳನ್ನು ತಾವೇ ಮಾಡಿಕೊಂಡವು ; ಚೆನ್ನಾಗಿ ಕೆತ್ತಿ ನಿಲ್ಲಿಸಿದ ಕಲ್ಲು ಕಂಬದಂತೆ ಸ್ವರ್ಗವು ಭದ್ರಗೊಳಿಸಲ್ಪಟ್ಟಿತು. ಈ ಮಂತ್ರಕ್ಕೆ, ಇದು ಸಗರ್ಭಪರ್ವತವಾಗಿದ್ದುದರಿಂದ, ಮಹಾದೇವತೆಗಳ ಸಮುನ್ನತ ಜನ್ಮವು ಸಂಭವಿಸಿತು. (ಮಹಾದೇವತೆಗಳಲ್ಲಿ ನದಿಗಳು ಅಥವಾ, ಸ್ವಲ್ಪ ಕಡಿಮೆ ಸಂಭಾವ್ಯವಾಗಿ, ಉಷಸ್ಸುಗಳು); ಗುಡ್ಡವು

ಎರಡಾಗಿ ಒಡೆಯಿತು ; ಸ್ವರ್ಗವನ್ನು ಪರಿಪೂರ್ಣಗೊಳಿಸಲಾಯಿತು (ಯಾ ತಾನೆ ಸ್ವರೂಪ ತಾಳಿತು) ; ಅವರು (ಭೂಮಿಯ ಮೇಲೆ) ಇಳಿದು ವಿಸ್ತಾರವನ್ನು, ವೈಶಾಲ್ಯವನ್ನು, ಔದಾರ್ಯವನ್ನು ಹಂಚಿದರು." ಸೂಕ್ತದ ಇತರಭಾಗಗಳು ತೋರಿಸುವಂತೆ ಋಷಿ ಹೇಳುತ್ತಿರುವುದು ಇಂದ್ರಾಂಗಿರಸರ ಬಗೆಗೆ ಮತ್ತು ಈ ಅಂಶವು ಅವನು ಬಳಸಿದ ಮಾತುಗಳಿಂದ ನಿಜವಾಗಿ ಸ್ಪಷ್ಟವಾಗುತ್ತದೆ. ಇವೇ ಅಂಗಿರಸ ಪುರಾಣ ಕಥೆಯ ಸಾಮಾನ್ಯ ರೂಢಿಬದ್ಧ ಅನುಪಾತ ಸೂತ್ರಗಳು, ಸಮ ಪ್ರಮಾಣ ವಿನ್ಯಾಸಗಳು ಮತ್ತು ಉಷಾಜನನದ ಹಾಗೂ ಧೇನು ಸೂರ್ಯರ ಜನನದ ಸೂಕ್ತಗಳಲ್ಲಿ ಯಾವಾಗಲೂ ಬಳಸುವ ಪದಸಂಹತಿಗಳನ್ನೇ ಇಲ್ಲಿ ಪುನಃ ಬಳಸಲಾಗಿದೆ. ಅವುಗಳ ತಾತ್ಪರ್ಯವೇನೆಂಬುದು ನಮಗೆ ಆಗಲೇ ಗೊತ್ತಿದೆ. ಆಗಲೇ ರಚಿತವಾದ ನಮ್ಮ ತ್ರಿಪುಟಾಸ್ತಿತ್ವವು ಸ್ವರ್ಗದ ಶಿಖರಕ್ಕೆ ಏರುತ್ತದೆ- ಅದನ್ನು ಇಂದ್ರನು ಇಬ್ಭಾಗ ಮಾಡುತ್ತಾನೆ ಮತ್ತು ಗುಪ್ತ ಪ್ರಬೋಧಾಂಶುಗಳು ಹೊರ ಹರಿದು ಹೋಗುತ್ತವೆ. ಮೇಲುಕ್ಕಿ ಹರಿವ ಪ್ರಜ್ವಲ ವ್ರಜಗಳಿಂದ ಅತಿಮಾನಸದ ಉನ್ನತತರವಾದ ಸ್ವರ್ಗವೆನ್ನಿಸಿದ ಸ್ವರ್ ಪ್ರತ್ಯಕ್ಷವಾಗುತ್ತದೆ-ಅದಕ್ಕೆ ಜ್ವಲದ್ವಜಗಳ ಮೇಲ್ವರಿತವೇ ಕಾರಣ. ಪರಮಸತ್ಯದ ಸೂರ್ಯನು ತನ್ನ ಬೆಳಕಿನ ಎಲ್ಲ ಶಕ್ತಿಯನ್ನೂ, ವೈಭವವನ್ನೂ ಸುತ್ತ ಹರಹುತ್ತಾನೆ ; ಜ್ಞಾನದೊಳಗಿನ ಮೂಲ ಪ್ರವೃತ್ತಿಯ ರೂಪದಲ್ಲಿದ್ದ (ಬೀಜರೂಪದಲ್ಲಿದ್ದ) ಲಸದ್ ವೈಪುಲ್ಯದಿಂದ ಆಂತರಿಕ ಉಷೆ ಬರುತ್ತಾಳೆ, - "ಜಾನತೀ ಗಾತ್", ದಸ್ಯುವಿನ ಮನೆಗೆ (I.104.5) ರಲ್ಲಿ ಅವಳು ಒಯ್ಯುವಾಗ ಯಾವ ಪದಸಂಹತಿಯಿತ್ತೋ ಅದನ್ನೇ ಇಲ್ಲಿ ಬಳಸಲಾಗಿದೆ ; ಮತ್ತು (III.31.6) ರಲ್ಲಿ ಬಳಸಿದ ಪದಸಂಹತಿಯನ್ನಿಲ್ಲಿ ಸರಮೆಗೆ ಬಳಸಲಾಗಿದೆ. ಪರಮಸತ್ಯದ ನದಿಗಳು, ಅದರ ಹೊರಹರಿವನ್ನು ಪ್ರತಿನಿಧಿಸಿ ("ಋತಸ್ಯಪ್ರೇಷಾ") ಹೊರನುಗ್ಗುತ್ತಿರುವ ತಮ್ಮ ಹೊನಲುಗಳ ಮೂಲಕ ಕೆಳಗಿಳಿಯುತ್ತವೆ ಮತ್ತು ತಮ್ಮ ನೀರಿಗೆ ಅವುಗಳಲ್ಲಿ ಒಂದು ಕಾಲುವೆಯನ್ನು ಮಾಡುತ್ತವೆ ; ಮಾನಸ ಸತ್ತಾ ಸ್ವರೂಪದ ಸ್ವರ್ಗವು ಪೂರ್ಣೀಕೃತವಾಗಿ ಸುರೂಪಿತ ಸ್ತಂಭದಂತೆ ದೃಢಗೊಳಿಸಲ್ಪಟ್ಟಿತು. ಅದು ಮೇಲ್ತರಗತಿಯ ವಿಶಾಲ ಸತ್ಯವನ್ನು ಎತ್ತಿ ಹಿಡಿಯುತ್ತದೆ. ಆ ವಿಶಾಲ ಸತ್ಯವು ಉನ್ನತತರ ಯಾ ಅಮೃತತರ ಜೀವನ. ಆ ಜೀವನವೀಗ ವ್ಯಕ್ತಗೊಳಿಸಲ್ಪಟ್ಟಿದೆ ಮತ್ತು ಇಡಿ ಭೌತಿಕ ಸತ್ತೆಯಲ್ಲೆಲ್ಲಾ ಆ ಪರಮ ಸತ್ಯದ ದೊಡ್ಡಸ್ತಿಕೆಯನ್ನು ಇಲ್ಲಿ ನೆಲೆಗೊಳಿಸಲಾಯಿತು. ಪರ್ವತಗರ್ಭಧೃತ ವಸ್ತುಗಳ ಪ್ರಸವ ("ಪರ್ವತಸ್ಯ ಗರ್ಭಃ:") ಎಂದರೆ ಸಪ್ತಶೀರ್ಷ ವಿಚಾರವನ್ನೊಳಗೊಂಡ ಪ್ರಬೋಧಗಳು, ಪ್ರಕಾಶಗಳು - "ಋತಸ್ಯಧೀತಿಃ" -ಅವು ಸ್ಫೂರ್ತಪದಕ್ಕೆ (ಮಂತ್ರಾಮಂತ್ರಣಕ್ಕೆ) ಉತ್ತರವಾಗಿ ಬರುತ್ತವೆ ಹಾಗೂ ಸಪ್ತಮಹಾಸಿಂಧುಗಳ ಉದಾತ್ತ ಜನನಕ್ಕೆ ದಾರಿ ಮಾಡಿಕೊಡುವುದು ; ಆ ನದಿಗಳೋ ಪರಮಸತ್ಯದ ಸಾರವು ತನ್ನ ಚಟುವಟಿಕೆಯಲ್ಲಿ ತೊಡಗಿರುವಾಗ ಲಕ್ಷ್ಯವಾದದ್ದು ("ಋತಸ್ಯ ಪ್ರೇಷಾ").

ಇಂದ್ರಾಗ್ನಿಗಳನ್ನಾಮಂತ್ರಿಸಿದ ಮೇಲೆ, "ದೇವತಾಪ್ರಿಯವಾದ ಪೂರ್ಣವಾಕ್ಕಿನಿಂದ ಬರಹೇಳಿದ ಮೇಲೆ, "(ಏಕೆಂದರೆ ಆ ಮಂತ್ರಗಳನ್ನಾಧರಿಸಿಯೇ ಮರುತ್ತುಗಳು[೧] ಋಷಿಗಳಾಗಿ ಯಜ್ಞ ಮಾಡುತ್ತಾರೆ ; ತಮ್ಮ ಆರ್ಷಜ್ಞಾನದಿಂದ ಯಜ್ಞಕರ್ಮವನ್ನು ಚೆನ್ನಾಗಿ ಮಾಡುತ್ತಾರೆ ಋಕ್ ೪- "ಉಕ್ಥೇಬಿರ್ ಹಿ ಷ್ಮಾ ಕವಯಃ ಸುಯಜ್ಞಾಃ... ಮರುತೋ ಯಜಂತೆ") ಋಷಿಯು ಮನುಷ್ಯರ ಬಾಯಲ್ಲಿ ಪಿತಾಮಹರಂತೆಯೇ ಯಜ್ಞ ಫಲ ಪ್ರಾಪ್ತಿಗಾಗಿ, ದೇವೋದ್ದೀಪನದ ಹಾಗೂ ದೇವ

---

೧. ಇನ್ನು ಮುಂದೆ ತೋರುವ ಹಾಗೆ ಜೀವನದ ವಿಚಾರಸಿದ್ಧಿಯ (ವಿಚಾರವನ್ನು ಸಾಧಿಸಿಕೊಂಬ) ಶಕ್ತಿಗಳು.

ಪ್ರೋತ್ಸಾಹನದ ಮಾತುಗಳನ್ನು ಆಡಿಸುತ್ತಾನೆ : "ಇಂದು ಬನ್ನಿರಿ ; ನಾವು ವಿಚಾರದಲ್ಲಿ ಪೂರ್ಣರಾಗೋಣ ; ನರಳಿಕೆಯನ್ನೂ ಅಸುಖವನ್ನೂ ನಾಶಮಾಡೋಣ ; ನಾವು ಉದಾತ್ತ ಸತ್ವವನ್ನಪ್ಪಿಕೊಳ್ಳೋಣ ; "ಏತೋನು ಅದ್ಯ ಸುಧ್ಯೋ ಭವಾಮ ಪ್ರದುಚ್ಛುನಾ ಮಿನವಾಮಾ ಪರೀಯಃ." "ಎಲ್ಲ ವಿರುದ್ಧ ವಸ್ತುಗಳನ್ನು ದೂರವಿರಿಸೋಣ (=ದ್ವೇಷಾಂಸಿ=ಬಡಿದು ವಿಭಜಿಸುವ, ಬೇದಮಾಡುವ) ; ಯಜ್ಞದ ಒಡೆಯನತ್ತ ಮುನ್ನುಗ್ಗೋಣ. ಬನ್ನಿರಿ. ನಾವು ವಿಚಾರವನ್ನು ನಿರ್ಮಿಸೋಣ-ಗೆಳೆಯರೇ,- (ಸ್ಪಷ್ಟವಾಗಿ ಸಪ್ತಶೀರ್ಷ ಅಂಗಿರಸವಿಚಾರವು)- ಆ ವಿಚಾರವೇ ಅದಿತಿಯ ಯಾ ಉಷೆಯ ರೂಪದ ತಾಯಿ ; ಮತ್ತು ಅದು ದನಗಳನ್ನು ಅಡಗಿಸಿಟ್ಟಿರುವ ಕೊಟ್ಟಿಗೆಯನ್ನು ಕೆಡೆದೂಗೆಯುತ್ತದೆ - ಋಕ್ ೫, ೬." ಅರ್ಥವು ಸ್ಪಷ್ಟವೇ ಇದೆ ; ಇಂಥ ಉಪಚ್ಛೇದಗಳಲ್ಲಿಯೇ ವೇದದ ಅಂತರರ್ಥವು ಸಂಕೇತದ ಮುಸುಕಿನಿಂದ ಅರೆಮರೆಯಾಗಿ ಹೊರ ನಿಲ್ಲುತ್ತದೆ.

ಅನಂತರ ಋಷಿಯು, ಅಂಗಿರಸರು ಹಿಂದಿನ ಕಾಲದಲ್ಲಿ ಮಹತ್ವದ್ದಾಗಿ ಉದಾಹರಿಸಿದ ಸರಮಾಸಿದ್ಧಿಯನ್ನು ಮನುಷ್ಯರು ಪುರುಜ್ಜಲಿಸಬೇಕೆನ್ನುತ್ತಾನೆ. "ಇಲ್ಲಿ ಅಶ್ಮಚಾಲನೆ ನಡೆಯಿತು ಅರ್ಥಾತ್ ಅರಣಿ ನಿರ್ಮಂಥನವಾಯಿತು, ಯಜ್ಞಾಗ್ನ್ಯುದ್ಯುತ್ಪಾದನೆಗಾಗಿ-ನವಗ್ವರು ಮಂತ್ರ ಹೇಳಿದರು. ಹತ್ತು ತಿಂಗಳ ಕಾಲ ಹಾಗೆ ಹೇಳಿಯೇ ಹೇಳಿದರು ; ಪರಸತ್ಯದತ್ತ ಹೋಗಿ ಸರಮೆ ದನಗಳನ್ನು ಹುಡುಕಿ ತೆಗೆದಳು ; ಅಂಗಿರಸರು ಎಲ್ಲವನ್ನೂ ಸತ್ಯವನ್ನಾಗಿ ಮಾಡಿದರು. ಈ ವಿಶಾಲಿನಿಯ ಉದಯ ಕಾಲದಲ್ಲಿ (ಉಷೆ=ಅನಂತಾದಿತಿ ಪ್ರತೀಕ- "ಮಾತಾ ದೇವಾನಾಂ ಅದಿತೇರನೀಕಂ") ದನಗಳೊಡನೆ ಅಥವಾ ಬಹುಶಃ ಪ್ರಬೋಧ ಕಿರಣಗಳೊಡನೆ-ಗೋಸೂಚಿತಪ್ರಭೆಗಳೊಡನೆ-ಎಲ್ಲ ಅಂಗಿರಸರೂ ಒಟ್ಟಾಗಿ ಬಂದರು. ಉನ್ನತ (ಉದಾತ್ತತಮ) ಜಗತ್ತಿನಲ್ಲಿ ಆಗ ಈ ಪ್ರಬೋಧ ಪ್ರಭಾವಳಿಯ ಒಂದು ಬುಗ್ಗೆಯೇ ನಿರ್ಮಿತವಾಯಿತು. ಆ ಸತ್ಯದ ದಾರಿಯಲ್ಲಿ ಹೋಗಿ ಸರಮೆಯು ದನಗಳನ್ನು ಕಂಡಳು (ಋಕ್ ೭,೮). ಸತ್ಯಪಥದಿಂದ ಸತ್ಯದತ್ತ ಸರಮೆಯು ನೇರವಾಗಿ ಚಲಿಸುವುದನ್ನು ನಾವಿಲ್ಲಿ ಕಾಣುತ್ತೇವೆ. ಈ ಚಲನದ ಮೂಲಕವೇ ಅಯಸ್ಯ-ಬೃಹಸ್ಪತಿಗಳ ಸಪ್ತರಶ್ಮಿ ವಿಚಾರವು ಯಾ ಸಪ್ತಶಿರೋ ವಿಚಾರವು ಅಡಗಿದ್ದ ಎಲ್ಲ ಗುಪ್ತ ಪ್ರಬೋಧಗಳನ್ನೂ ಕಾಣುತ್ತಾರೆ ಮತ್ತು ಈ ಪ್ರಬೋಧಗಳ ಪ್ರಣೋದದಿಂದ ಅವರೆಲ್ಲಾ ಒಟ್ಟಾಗುತ್ತಾರೆ. ಅರಿವಿನೊಡನೆ ಉಷೆ ಅವತರಿಸಿದ "ಊರ್ವಾದ್ ಜಾನತೀ ಗಾತ್ (ಋಕ್ ೨)" "ಸಮಾನೇ ಊರ್ವೇ" = ಸಮತಲ ಪ್ರಜ್ಞಾ ವೈಶಾಲ್ಯದಿಂದ ಎಂದು ವಸಿಷ್ಠ ಹೇಳಿದ್ದನೋ - ಈ ಮಹಾಘಟಕದ ಉದಯದಲ್ಲಿ, ಇಲ್ಲಿ ಹೇಳಿದಂತೆ, ಅವರು ಐಕ್ಯರಾದರು, ಜ್ಞಾನೈಕಮತ್ಯ ಪಡೆದರು ಮತ್ತು ಒಟ್ಟಾಗಿ ಅವರು ಹೋರಾಡರು "ಸಂಗತಾಸಃ ಸಂಜಾನತೇ ನಯತಂತೇ ಮಿಥಸ್ ತೇ (VII.76.5) ಅಂದರೆ ಇನ್ನೊಂದು ಸೂಕ್ತವು ಲಕ್ಷಿಸಿದಂತೆ ಆ ಏಳ್ವರೂ ಒಂದಾದರು-ಎಂದು ಹೇಳಿದ್ದನ್ನೋ (ಈ ಸರಮಾ ಪ್ರಕರಣದೊಡನೆ) ಇಟ್ಟು ನೋಡತಕ್ಕ ಅಂಶವಾಗಿದೆ. ಸರಮಾಚಲನ ಪ್ರೇರಿತರಾದ ಅಂಗಿರಸರ ಐಕ್ಯವಿಲ್ಲಿ ಉದ್ದಿಷ್ಟಾರ್ಥ; ಅವರೆಲ್ಲಾ ಏಳ್ವಾಯ ಒಬ್ಬನೇ ಒಬ್ಬ ಅಂಗಿರಸನಾಗುವರು - ಸೂಕ್ತವೇ ಇದನ್ನು ಸೂಚಿಸುತ್ತದೆ. ಈ ಪ್ರತಿಮೆಯು ಸಪ್ತಾಸ್ಯ ವಿಚಾರದ ಪ್ರತಿಮೆಗೆ ಸರಿಸಮವಾದುದು. ಈ ಏಕೀಭೂತನಾದ ಅಂಗಿರಸನೇ ಎಲ್ಲವನ್ನೂ ನಿಜಗೊಳಿಸುವನು. ಅದಕ್ಕೆ ಸರಮೆ ಮಾಡಿದ ಶೋಧ ಆಧಾರ (ಋಕ್೭). ಸಮಶ್ರುತಿ ಪಾತಿತ, ಏಕೀಭೂತವಾದ, ಪೂಣೀಕೃತವಾದ, ಆರ್ಷ ಸಂಕಲ್ಪವು ಎಲ್ಲ ಅನ್ಯತಗಳನ್ನೂ ವಕ್ರತೆಗಳನ್ನೂ ತಿದ್ದುತ್ತದೆ ಮತ್ತು ಎಲ್ಲ ವಿಚಾರ, ಜೀವನ ಮತ್ತು ಕರ್ಮಗಳನ್ನು ಪರಸತ್ಯದ ಸ್ಥಿತಿಗೆ ತಿರುಗಿಸುತ್ತದೆ. ಈ ಸೂಕ್ತದಲ್ಲಿಯೂ ಪರಮೆಯ ಕ್ರಿಯೆಯು ಪ್ರತಿಭೆಯದು -ಆ ಪ್ರತಿಭೆಯು ನೇರವಾಗಿ ಪರಸತ್ಯದೆಡೆ (ಹಸಿಗೋಡೆಗೆ ಹರಳನ್ನಿಟ್ಟಂತೆ) ಗೈದುವುದು, ಪರಸತ್ಯದ

ನೇರ ಮಾರ್ಗವನ್ನೇ ಹಿಡಿದು ಹೋಗುವುದು-ಸಂದೇಹ, ತಪ್ಪುಗಳ ವಕ್ರ ಮಾರ್ಗ ಹಿಡಿದು ಹೋಗದು. ಆ ನೇರ್ನಡೆಯಿಂದ ಅದು ಪರಸತ್ಯವನ್ನು ಕತ್ತಲ ಬುರುಕಿಯಿಂದ ಮತ್ತು ಅಪರೂಪಾವಿಷ್ಕಾರಗಳಿಂದ ಬಿಡುಗಡೆ ಮಾಡುವುದು. ಸರಮೆ ಹುಡುಕಿ ತೆಗೆದ ಪ್ರಬೋಧಾಂಶುಗಳಿಂದಲೇ ಆರ್ಷ ಮನವು ಪರಮಸತ್ಯದ ಪೂರ್ಣ ಸಾಕ್ಷಾತ್ಕಾರವನ್ನು ಪಡೆಯಬಲ್ಲುದು. ಸೂಕ್ತದ ಮಿಕ್ಕ ಭಾಗವು ಸಪ್ತಾಶ್ವನಾಗಿ ಸೂರ್ಯನು, "ದೂರ ಪ್ರಯಾಣದ ಅಂತವಾದ ವಿಶಾಲ ಕ್ಷೇತ್ರದತ್ತ" ಉದಯಿಸುತ್ತಾ ಹೋಗುವುದನ್ನು ಹೇಳುತ್ತದೆ = ವೇಗಗಾಮಿಯಾದ ಹಕ್ಕಿಯು ಸೋಮಸಿದ್ಧಿ ಹೊಂದುವುದು ಮತ್ತು ತರುಣ ದ್ರಷ್ಟಾರನು ಜ್ಯೋತಿರ್ಮಯ ಧೇನುಗಳ ಕ್ಷೇತ್ರವನ್ನು ಸೇರುವನು ಎಂಬುದಕ್ಕೆ ಸರಿಸಮ. "ಜ್ಯೋತಿರ್ಮಯ ಸಾಗರಕ್ಕೆ" ಸೂರ್ಯನೇರುವುದು ಎಂದರೆ ಅದನ್ನವನು ದಾಟುವುದು ಹೇಗೆ? "ಚಿಂತಕರ ಮಾರ್ಗದರ್ಶನಕ್ಕೊಳಪಟ್ಟ ಹಡಗಿನಂತೆ." ಆಮೇಲೆ ಆ ಲಸತ್ ಸಾಗರದ ನೀರು ಮನುಷ್ಯರ ಬೇಡಿಕೆಯಂತೆ ಅವರಲ್ಲಿ ಬಂದಿಳಿಯುವುದು. ಆ ಜಲದಲ್ಲಿ ಮಾನವ ದ್ರಷ್ಟಾರನಿಂದ ಅಂಗಿರಸನ ಏಳುಮಡಿ ವಿಚಾರವು ಪ್ರತಿಷ್ಠಾಪಿಸಲ್ಪಡುತ್ತದೆ. ಸೂರ್ಯನು ಅತಿಮಾನಸದ ಯಾ ಸತ್ಯಪ್ರಜ್ಞೆಯ ಜ್ಞಾನವನ್ನು ಪ್ರತಿನಿಧಿಸುತ್ತಾನೆಂಬುದನ್ನು ಜ್ವಲತ್ಸಾಗರವು ಅತಿಮಾನಸದ ರಾಜ್ಯವನ್ನು ಅದರ ಮೂರೇಳ್‌ಮಣಿಯ ಮಾತೃಶ್ರೀ ಅದಿತಿ ಪೀಠವನ್ನು ಒಳಗೊಂಡು ಪ್ರತಿನಿಧಿಸುತ್ತದೆಯೆಂಬುದನ್ನೂ ನಾವು ಮರೆಯದೆ ಹೋದರೆ ಈ ಸಾಂಕೇತಿಕ ವಾಣಿಗಳನ್ನು[೧] ತಿಳಿದುಕೊಳ್ಳುವುದು ಕಷ್ಟವಾಗದು. ಸರಮೆಯು ವ್ರಜಗಳ ಶೋಧನೆ ಮಾಡಿ ಮುಗಿಸಿದೊಡನೆಯೇ ಅಂಗಿರಸರು ಸಂಯುಕ್ತರಾಗಿ ಪರಮಸತ್ಯ ಸ್ತರಕ್ಕೆ ಏರುವುದನ್ನು ಮುಗಿಸುವುದು ಕ್ರಮಾಗತ; ಆಮೇಲೆ ಅದೇ ಪರಮೋಚ್ಚ ಧ್ಯೇಯದ ಪರಮೋಚ್ಚ ಸಿದ್ಧಿ ಎಂಬುದು ತಿಳಿದು ಬರುತ್ತದೆ.

ಈ ಸಂದರ್ಭದಲ್ಲಿ ಮತ್ತೊಂದು ಅತಿ ಪ್ರಮುಖವಾದ ಸೂಕ್ತವಾವುದೆಂದರೆ, ವಿಶ್ವಾಮಿತ್ರನು ಕಂಡ ತೃತೀಯಮಂಡಲಸ್ಥ ಏಕತ್ರಿಂಶ ಸೂಕ್ತವು : "(ದಿವ್ಯ ಪ್ರಣೋದನಾದ) ಅಗ್ನಿಯು ಪ್ರಜ್ವಲದ್‌ರುದ್ರದೇವನ ಮಹಾಪುತ್ರರಿಗಾಗಿ ಮಾಡಿದ ಯಜ್ಞಕ್ಕೆ ಹಾಕಿದ ಆಹುತಿಯ ಸ್ವಜ್ವಾಲೆಯೊಡನೆ ಝಳಪಿಸುತ್ತಾ ಹುಟ್ಟಿದನು, ಬಳುಕುತ್ತಾ ಜನಿಸಿದನು. ರುದ್ರನು ಮಹಾಪುತ್ರರ ಪುತ್ರನು, ಮಹಾತ್ಮನು ; ಅವನ ಹುಟ್ಟೇ ವಿಸ್ತಾರವಾದುದು. ಯಜ್ಞದ ಸಮೀಪದಲ್ಲಿ ಉಜ್ವಲಾಶ್ವಗಳ ಸಾರಥಿಯ (=ಇಂದ್ರನ, ದಿವ್ಯಮಾನಸದ) ಮಹಾಚಲನವಲನವಿದೆ. ಜಿಷ್ಣುಗಳಾದ ಉಷಸ್ಸುಗಳು ಇಂದ್ರನ ಹೋರಾಟದಲ್ಲಿ ಅವನನ್ನು ಹಿಂಬಾಲಿಸುವರು ; ಕತ್ತಲಿನಿಂದ ಅವರು ಜ್ಞಾನದ ಒಂದು ಮಹಾದೀಪಿಕೆಯನ್ನು ಎತ್ತಿ ತೆಗೆದು ಕೊಡುತ್ತಾರೆ. ತನ್ನೆಡೆಗೆ ಉಷಸ್ಸುಗಳೆದ್ದು ಬಂದುದನ್ನು ನೋಡಿ ಇಂದ್ರನು ಮಿಂಚುವ ಧೇನುಗಳ ಏಕೈಕ ಪತಿಯಾದನು. ಪಣಿಗಳ ಭದ್ರ ಕೋಟೆಯಲ್ಲಿದ್ದ ದನಗಳು ಚಿಂತಕರಿಂದ ಹೊರಡಿಸಲ್ಪಟ್ಟವು ; ಮನೋಬಲದಿಂದ ಸಪ್ತ ಋಷಿಗಳು ಅವುಗಳನ್ನು ಮುನ್ನಡೆಸಿದರು. (ಮಹೋನ್ನತ ಸತ್ಯದತ್ತ ಮೇಲ್ನಡೆಸಿದರು). ಅವರು ಪೂರ್ಣಪಥವನ್ನು ಕಂಡರು. (ಧ್ಯೇಯ, ಯಾ ಪ್ರಯಾಣ ಕ್ಷೇತ್ರ). ಯಾವುದದು? ಪರಮಸತ್ಯದ ಪೂರ್ಣಪಥ. ಪರಮಸತ್ಯದ ಅತ್ಯುದಾತ್ತ ಪೀಠಗಳನ್ನು ತಿಳಿದು ಇಂದ್ರನು ನಮಿಸಿ ಅವುಗಳೊಳ ಹೊಕ್ಕನು" - "ವೀಳೌ ಸತೀರ್ ಅಭಿಧೀರಾ ಅತೃನ್‌ದನ್,

---

೧. ಈ ಅರ್ಥದಲ್ಲಿ ನಾವು ಅಸ್ಪಷ್ಟವೆಂದೀಗ ತೋರುವ ವೇದೋಕ್ತಿಗಳನ್ನು (ಉದಾ: VIII 68.9 ನೆರವಿನಿಂದ ನಾವು ಯುದ್ಧಗಳಲ್ಲಿ ಸೂರ್ಯನಲ್ಲೂ ಜಲಗಳಲ್ಲೂ ಇರುವ ಐಶ್ವರ್ಯವನ್ನು ಗೆದ್ದುಕೊಂಬಂತಾಗಲಿ-"ಅಪ್ಸು ಸೂರ್ಯೇ ಮಹದ್ಧನಂ") ಸುಲಭವಾಗಿ ತಿಳಿದುಕೊಳ್ಳಬಹುದು.

ಪ್ರಾಚಾ ಅಭಿನ್ವನ್ ಮನಸಾ ಸಪ್ತ ವಿಪ್ರಾಃ ವಿಶ್ವಾಂ ಅವಿಂದನ್ ಪಥ್ಯಾಂ ಋತಸ್ಯ ಪ್ರಜಾನನ್ ಇತ್ ತಾ ನಮಸಾ ವಿವೇಶ (ಋಕ್ ೩-೫)." ಇದು, ಯಥಾ ಪ್ರಕಾರ, ಮಹಾಜನನ-ಹೆಬ್ಬೆಳಕು-ಧ್ಯೇಯ ಸಿದ್ಧಿಯಿಂದ ಲಬ್ಧವಾದ ಪರಮಸತ್ಯಜ್ಞಾನದ ಮಹಾದಿವ್ಯ ಚಳವಳ ಮತ್ತು ದೇವತೆಗಳೂ ದ್ರಷ್ಟಾರರೂ ಮೇಲಿನ ಅತ್ಯುನ್ನತ ಪ್ರಜ್ಞಾಸ್ತರಗಳನ್ನು ಪ್ರವೇಶಿಸುವುದು. ಈ ಕಾರ್ಯದಲ್ಲಿ ಮುಂದೆ ಸರಮೆಯ ಕೆಲಸವನ್ನು ಹೇಳಲಾಗಿದೆ. "ಬೆಟ್ಟದ ಬಿರುಕು ತಳಗಳನ್ನು ಕಂಡ ಕೂಡಲೇ ಸರಮೆಯು ಮಹೋದಾತ್ತವಾದ ಆ ಧ್ಯೇಯವನ್ನು ಸತತಗೊಳಿಸಿದಳು. ರಮ್ಯಪದಿಯಾದ ಸರಮೆಯು ಇಂದ್ರನನ್ನು ಅವಿನಾಶಿಗಳೆದುರು (ಉಷೆಯ ಅವಧ್ಯವಾದ ಧೇನುಗಳೆದುರು) ಒಯ್ದಳು ; ಮೊದಲು ಅವಳು ತಿಳಿದುಕೊಂಡು ಅವುಗಳ ಕೂಗಿಗನುಗುಣವಾಗಿ ಹೊಕ್ಕಳು (ಋಕ್ ೬)." ಪುನಃ ಪ್ರತಿಭೆಯೇ ನಾಯಿಕೆ ; ತಿಳಿದೇ ಅವಳು ವೇಗವಾಗಿ ಕೂಡಲೇ ಧಾವಿಸುತ್ತಾಳೆ - ಅದೂ ಎಲ್ಲರೆದುರಿಗೂ- ಗುಪ್ತಗೋ (ರಶ್ಮಿ ಜ್ಞಾನ)ಗಳ ಸ್ವರವನ್ನು ಕೇಳಿ! ಎಲ್ಲಿಗೆ? ತೋರಿಕೆಗೆ ದುರ್ಭೇದ್ಯವಾಗಿ ರೂಪಿತವಾದ ಪರ್ವತಕ್ಕೆ ! - "ವೀಳು, ದೃಳ್ಹ" - ಪರ್ವತದ ಬಿರುಕುಗಳಿಗೆ ದ್ರಷ್ಟಾರರನ್ನು ಒಳಗೆ ಬಿಡುವುದಕ್ಕಾಗಿ!

ಸೂಕ್ತದ ಉಳಿದ ಭಾಗವು ಅಂಗಿರಸರ ಹಾಗೂ ಇಂದ್ರನ ಸಿದ್ಧಿಗಳನ್ನು ಹೇಳುವುದರಲ್ಲಿ ಮುಂಬರಿಯುತ್ತದೆ. "ಅವನು ಹೋದನು, ಅವರಲ್ಲೆಲ್ಲಾ ಶ್ರೇಷ್ಠ ದ್ರಷ್ಟಾರನಾತನು, ಅವನವರ ಮಿತ್ರನಾಗಿದ್ದನು ; ಪರಿಪೂರ್ಣ ಕಾರ್ಯಕರ್ತನಿಗಾಗಿ ಸಗರ್ಭ ಪರ್ವತವು ತನ್ನಲ್ಲಿದ್ದುದನ್ನೆಲ್ಲಾ ಕಳುಹಿಕೊಟ್ಟಿತು ; ಗಂಡಸುತನದ ಸಾಮರ್ಥ್ಯದಲ್ಲಿ ತರುಣ ಅಂಗಿರಸರೊಡನೆ ಆತನು ಐಶ್ವರ್ಯದ ಅಪಾರತೆಯನ್ನು ಬಯಸಿ ಅದನ್ನು ಪಡೆದನು. ಅನಂತರ ಬೆಳಕಿನ ಗೀತವನ್ನು ಹಾಡುತ್ತಾ, ಅವನು ಒಮ್ಮೆಲೇ ಅಂಗಿರಸನಾದನು. ನಮ್ಮೆದುರಿಗೇ (ಜಗದ) ಪ್ರತಿಯೊಂದು ಇರುವ ವಸ್ತುವಿನ ಆಕಾರವನ್ನೂ, ಅಳತೆಯನ್ನೂ ತಳೆದುದರಿಂದ ಅವನು ಎಲ್ಲ ಜನ್ಮಗಳನ್ನೂ ಬಲ್ಲವನಾಗಿ ಶುಷ್ಣನನ್ನು ಕೊಲ್ಲುತ್ತಾನೆ." ; ಅಂದರೆ, ದಿವ್ಯಮನವು ಜಗತ್ತಿನಲ್ಲಿರುವ ಪ್ರತಿಯೊಂದು ಆಕಾರಕ್ಕೂ ಹೊಂದುವಂಥ ಆಕಾರವೊಂದನ್ನು ತಾಳಿ ತನ್ನ ದಿವ್ಯ ಬಿಂಬವನ್ನೂ ಅರ್ಥವನ್ನೂ ಅನಾವರಣ ಮಾಡುತ್ತಾನೆ, ಅಭಿವ್ಯಕ್ತಗೊಳಿಸುತ್ತಾನೆ ಮತ್ತು ಜ್ಞಾನವನ್ನೂ ಕರ್ಮವನ್ನೂ ವಿಕಟಗೊಳಿಸುವ ಅನೃತ ಪ್ರಣೋದವನ್ನು ಸಂಹರಿಸುತ್ತಾನೆ. "ಧೇನುಶೋಧಕನೂ ಸ್ವರ್ಗದ ಪೀಠಕ್ಕೆ ಪ್ರಯಾಣಿಕನೂ ಸೂಕ್ತಗಾಯಕನೂ ಸ್ನೇಹಿತನೂ ಆದ ಅವನು ತನ್ನ ಸ್ನೇಹಿತರನ್ನು ಸರ್ವ ನ್ಯೂನತೆಗಳಿಂದಲೂ ಮುಕ್ತಗೊಳಿಸುತ್ತಾನೆ, ಸರಿಯಾದ ಸ್ವಾಭಿವ್ಯಕ್ತಿಗೆ ಅವಕಾಶ ಮಾಡಿಕೊಡುತ್ತಾನೆ. ಬೆಳಕನ್ನು (ಗೋವನ್ನು) ಬಯಸಿದ ಮನಸ್ಸಿನಿಂದ ಅವರು ತಮ್ಮ ಆಸನಗಳನ್ನು ಏರಿದರು ; ಪ್ರಬೋಧಕ ಮಂತ್ರಗಳಿಂದ ಅವರು ಅಮೃತತ್ವದೆಡೆಗೈದುವ ಮಾರ್ಗವನ್ನು ರಚಿಸಿದರು. (ನಿಗವ್ಯತಾ ಮನಸಾ ಸೇದುರ್ ಅರ್ಕೈಃ ಕೃಣ್ವಾನಾಸೋ ಅಮೃತತ್ವಾಯ ಗಾತುಂ)." ಇದೇ ಅವರ ದೊಡ್ಡ ಸ್ಥಾನ, ಪೀಠ, ಆಸನ - ತಿಂಗಳುಗಳನ್ನು ಯಾವ ಸತ್ಯದಿಂದ ವಶಪಡಿಸಿಕೊಂಡರೋ ಆ ಸತ್ಯ (ದಶಗ್ವರ ೧೦ ತಿಂಗಳುಗಳು) ಎಂಬುದೇ ಅವರ ಮಹಾಪೀಠ. ದರ್ಶನದಲ್ಲಿ ಸಾಮಶ್ರುತ್ಯ ಹೊಂದಿ (ಅಥವಾ ಪೂರ್ಣದೃಷ್ಟಿ ಶಕ್ತಿಯುಳ್ಳವರಾಗಿ ನೋಡುತ್ತಾ) ಅವರು ತಮ್ಮದೇ ಮನೆ ಆದ ಸ್ವರ್‌ಲೋಕವನ್ನು ಸವಿದರು ; ವಸ್ತುಗಳ ಹಳೆಯ ಬೀಜದ ಹಾಲನ್ನೆಲ್ಲಾ ಕರೆಯುತ್ತ ಕುಳಿತರು. ಅವರ ಮಂತ್ರೋದ್ಗಾರವು ಭೂಮಿ ಸ್ವರ್ಗಗಳೆಲ್ಲವನ್ನೂ ಬಿಸಿ ಮಾಡಿತು ಅರ್ಥಾತ್-ನಿರ್ಮಿಸಿದುದು-ಎಂದರೆ "ಘರ್ಮ, ತಪ್ತಂ, ಘೃತಂ" ಸೌರ ಧೇನುಗಳ ಉರಿವ ಸ್ಪಷ್ಟತೆಯನ್ನು ಕರೆದರೆಂದು ತಾತ್ಪರ್ಯ. ಅವರು ಅದರಲ್ಲಿ ದೃಢಗೃಹವನ್ನು ನಿರ್ಮಿಸಿದರು, ದನಗಳಲ್ಲಿ ವೀರರನ್ನು ಸೃಷ್ಟಿಸಿದರು - ಅರ್ಥಾತ್ ಜ್ಞಾನದ ಬೆಳಕಿನಲ್ಲಿ ಹೋರಾಟದ ಸೈನ್ಯವನ್ನು, ಪ್ರಣೋದವನ್ನು, ನಿರ್ಮಿಸಿದರೆಂದರ್ಥ.

"ಹುಟ್ಟಿದವರಿಂದ (ಯಜ್ಞಸೂನುಗಳಿಂದ), ಆಹುತಿಗಳಿಂದ, ಪ್ರಬೋಧಕ ಸೂಕ್ತಗಳಿಂದ ಹೊಳೆವವುಗಳನ್ನು ಮೇಲೆ ಹೋಗಲು ವೃತ್ರಹಂತಕನಾದ ಇಂದ್ರನು ಮುಕ್ತಗೊಳಿಸಿದನು. ವ್ಯಾಪಿಕೆಯಾದ ಪ್ರಮೋದಮಯಿ ಧೇನುವು (ಅದಿತಿ ಎಂಬ ದನ, ವಿಶಾಲವೂ ಆನಂದಮಯವೂ ಆದ ಮಾನಸೋತ್ತರ ಪ್ರಜ್ಞೆ) ಅವನಿಗೆ ಮಧುರಾಹಾರ ತರುತ್ತಾ ತನ್ನ ಹಾಲನ್ನಾಗಿ ಮಧುಮಿಶ್ರಿತ ಘೃತವನ್ನು ಕರೆದಳು. ಈ ತಂದೆಗಾಗಿಯೂ (ಸ್ವರ್ಗಕ್ಕಾಗಿಯೂ) ಅವರು -ಅರ್ಥಾತ್ -ಯಜ್ಞ ಪುತ್ರರು ವಿಶಾಲವೂ ರಾಜಮಾನವೂ ಆದ ವಾಸಸ್ಥಾನವನ್ನು ರಚಿಸಿದರು. ಅನ್ಯೂನಕಲಾಕುಶಲರಾದ ಅವರಿಗೆ, ಅದರ ಇಡೀ ದರ್ಶನವು ಮೊದಲೇ ಆಗಿತ್ತು. ಹರಹಿ ಎತ್ತಿ ಹಿಡಿದ ಅವರ ಬಲದಿಂದ ಮಾತಾಪಿತೃಗಳು (ದ್ಯಾವಾ ಪೃಥಿವಿಯರು) ನೆರವಿತ್ತುದ್ದರಿಂದ, ಆ ಯಜ್ಞಸೂನುಗಳು ಉನ್ನತಲೋಕದಲ್ಲಿ ಕುಳಿತು ಅದರ ಆನಂದೋದ್ರೇಕವೆಲ್ಲವನ್ನೂ ಹೀರಿದರು. (ಕೇಡು ಮತ್ತು ಸುಳ್ಳು) ಕಳಚಿಕೊಳ್ಳುವ ಹಾಗೆ ಮಾಡಲು ಆ ಅಪಾರ ವಿಚಾರವು ಇಂದ್ರನು ಭೂಮ್ಯಾಕಾಶಗಳನ್ನು ಆವರಿಸುತ್ತಿರುವಾಗಲೇ ಅವನಲ್ಲಿ ಅಪ್ರತಿಹತ ಶಕ್ತಿಗಳಾದ ಸಮಾನ ಬಲದ ಅಸ್ಖಲಿತ ಮಂತ್ರ ಶಬ್ದಗಳು ಮೂಡಿದವು. ಇಂದ್ರನು ಆ ಬಹುಗುಣ ಆನಂದಮಯ ಕ್ಷೇತ್ರವನ್ನು (=ಸ್ವರ್ ಎಂಬ ವಿಶಾಲವಾದ ಗೋಕ್ಷೇತ್ರ. ಹುಲ್ಲುಗಾವಲನ್ನು) ಕಂಡುಹಿಡಿದನು. ತನ್ನ ಗೆಳೆಯರಿಗಾಗಿ ಅವನು ಅಲೆವ ಗೋವ್ರಜಗಳೆಲ್ಲವನ್ನೂ ಒಟ್ಟಿಗೇ ಕಳುಹಿದ್ದಾನೆ. ಮಾನವರ ಜೀವಾತ್ಮಗಳಾದ ಅಂಗಿರಸರಿಂದ ಹೊಳೆವ ಇಂದ್ರನು ಸೂರ್ಯ, ಉಷೆ, ಮಾರ್ಗ, ಜ್ವಾಲೆಗಳೆಲ್ಲವನ್ನೂ ಒಟ್ಟಿಗೇ ಅಸ್ತಿತ್ವಕ್ಕೆ ತಂದಿದ್ದಾನೆ. (ಋಕ್ ೭-೧೬)

ಉಳಿದ ಪದ್ಯಗಳಲ್ಲಿ ಬಹಳ ಅಪಾರ್ಥಕ್ಕೊಳಗಾದ ಪ್ರಸಿದ್ಧ ವೃಷ್ಟಿ ಪ್ರತಿಮೆಯೊಡನೆ ಅದೇ ಅಲಂಕಾರೋಕ್ತಿಗಳು ಮುಂಬರಿಯುತ್ತವೆ. "ಹಳಬನಾಗಿ ಹುಟ್ಟಿದ ನಾನು ಗೆಲ್ಲಲೆಂದು ಹೊಸಬನಾಗುತ್ತೇವೆ. ನಮ್ಮ ಅದಿವ್ಯರಾದ ಘಾತಕರನ್ನು ನೀನು ಕಿತ್ತೆಸೆ. ಸ್ವರನ್ನು ನಮ್ಮಂಕೆಗೊಳಪಡಿಸು. ಪವಿತ್ರೀಕರಿಸುವ ಮಳೆ ನಮ್ಮೆದುರು ಹಬ್ಬುತ್ತಿದೆ-ನೀರಾಗಿ ಹರಹುತ್ತಿದೆ. ಅವುಗಳ ಇನ್ನೊಂದು ತೀರವಾದ ಆನಂದಕ್ಕೆ ನಮ್ಮನ್ನು ಕರೆದುಕೊಂಡು ಹೋಗು. ತೇರಲ್ಲಿ ಕುಳಿತು ಯುದ್ಧಮಾಡಿ ಹಗೆಯಿಂದ ನಮ್ಮನ್ನು ರಕ್ಷಿಸು. ಬೇಗ-ಬೇಗ, ನಮ್ಮನ್ನು ಗೋಜಯಿಗಳನ್ನಾಗಿ ಮಾಡು. ವೃತ್ರಘ್ನನೂ ಗೋಪತಿಯೂ ಆದ ಇಂದ್ರನು (ಜನರಿಗೆ) ದನಗಳನ್ನು ತೋರಿಸಿದನು. ಅವನು ತನ್ನ ರಾಜದ್ವಿಧಿಗಳಿಂದ (ಯಾ ಕಿರಣಗಳಿಂದ) ಕಪ್ಪಾದವುಗಳೊಳಹೊಕ್ಕನು. (ನಿಷ್ಪ್ರಕಾಶ=ಕಪ್ಪಾದವುಗಳು -ಪಣಿಗಳಂತೆ). ಅವನು ಪರಮ ಸತ್ಯದ ಬಲದಿಂದ ಸತ್ಯ ಸ್ವರೂಪದ ಗೋವುಗಳನ್ನು ತೋರಿಸಿ ತನ್ನೆಲ್ಲಾ ಬಾಗಿಲುಗಳನ್ನೂ ತೆರೆದಿದ್ದಾನೆ. ಪ್ರಸೂನೃತಾ ದಿಶಮಾನಾ ಋತೇನ ದುರಶ್ ಚ ವಿಶ್ವಾ ಅವೃಣೋದ್ ಅಪ ಸ್ವಾಃ (ಋಕ್ ೧೯-೨೧)". ಅಂದರೆ ಇಂದ್ರನು ತನ್ನ ಪ್ರಪಂಚವಾದ ಸ್ವರಿನ ಬಾಗಿಲುಗಳನ್ನು, ನಮ್ಮ ಅಂಧಕಾರವನ್ನೊಡೆದು ಒಳಹೊಕ್ಕ ಬಳಿಕ, ತೆರೆದನು - ಪಣಿಗಳು ಮುಚ್ಚಿಟ್ಟ ಆ ಕತ್ತಲೆಗವಿಯ ಬಾಗಿಲುಗಳೇ "ಮಾನವ್ಯ ದ್ವಾರಗಳು."

ಈ ಗಮನಾರ್ಹ ಸೂಕ್ತವು ಹೀಗಿದೆ. ಅವುಗಳ ಬಹುಭಾಗವನ್ನು ನಾನು ಭಾಷಾಂತರಿಸಿದ್ದೇಕೆಂದರೆ, ಅದು ವೈದಿಕ ಪದ್ಯ ಕಾವ್ಯದ ಮಾನಸಶಾಸ್ತ್ರೀಯ ಸ್ವರೂಪವನ್ನೂ ಯೌಗಿಕ ಸ್ವರೂಪವನ್ನೂ ಬಯಲಿಗೆಳೆಯುತ್ತದೆ. ಹಾಗೆ ಮಾಡುವುದರಿಂದ ಸರಮೆ ಬರುವ ಅಲಂಕಾರೋಕ್ತಿಗಳ ಆವರಣದ ಸ್ವರೂಪವು ಸ್ಪಷ್ಟವಾಗುತ್ತದೆ. ಋಗ್ವೇದದಲ್ಲಿ ಬರುವ ಇತರ ಸರಮೋಲ್ಲೇಖವಾದ ಉಪಬ್ಬೇದಗಳು ಅವಳ ಕಲ್ಪನೆಗೆ ಅಗತ್ಯವಾದ ಏನನ್ನೂ ಇದಕ್ಕಿಂತ ಹೆಚ್ಚಾಗಿ ಹೇಳುವುದಿಲ್ಲ. IV 16.8 ರಲ್ಲಿ ತತ್ಸೂಚಕ ಸಂಗತಿಯು ಸಂಕ್ಷಿಪ್ತವಾಗಿ ಬಂದಿದೆ. "ಗುಡ್ಡದಿಂದ ನೀನು ನೀರನ್ನು ಒಡೆದು ಸೀಳಿ

ಹೊರ ಬಿಟ್ಟಾಗ ಸರಮೆಯು ನಿನ್ನೆದುರು ಪ್ರತ್ಯಕ್ಷಳಾದಳು. ಹಾಗೇ ನಮ್ಮ ಮುಖಂಡನಾದ ನೀನು ಅಂಗಿರಸ ಸೂಕ್ತಗಳಿಂದ ಉತ್ಸಾಹ ತಾಳಿ ಹಟ್ಟಿಗಳನ್ನೊಡೆದು ಬಹುಧನವನ್ನು ನಮಗೆ ನೀನು ಕಿತ್ತುಕೊಟ್ಟೆ." ಸರಮೆಯು ದಿವ್ಯ ಮಾನಸದ ಹರಿಕಾರ ಸ್ವರೂಪದಿಂದ ಮುನ್ನಡೆದು ಬರುವ ಪ್ರತಿಭೆ-ಹಾಗೆ ಆಕೆ ಬರುವುದು ಜಲಧಾರೆಗಳುದ್ಭುದ್ಧವಾದಾಗ. ಈ ಜಲಧಾರೆಗಳು ವೃತ್ರನು ಹಿಡಿದು ಗುಡ್ಡದ ಒಳಗೆ ಅಡಗಿಸಿಟ್ಟಿದ್ದ (ಋಕ್ ೭) ಪ್ರವಾಹಗತಿಗಳು ಹೊರಬೀಳುವುದನ್ನು ಪ್ರತಿನಿಧಿಸುತ್ತದೆ. ಈ ಪ್ರತಿಭೆಯ ಮೂಲಕವೇ ನಮಗೆ ಇಂದ್ರನು ಮುಖಂಡನಾಗುವುದು ಮತ್ತು ಪರಂಜ್ಯೋತಿಯನ್ನು ಸಂರಕ್ಷಿಸುವುದು ಹಾಗೂ ಪಣಿಗಳ ಕಲ್ಲುಕೋಟೆಯ ಹಿಂದೆ ಅಡಗಿಸಿಟ್ಟಿದ್ದ ಬಹುಧನವನ್ನು ಗೆದ್ದು ತರುವುದು.

ಪರಾಶರ ಶಾಕ್ತ್ಯನ (I.72) ಇನ್ನೊಂದು ಸೂಕ್ತದಲ್ಲಿ ನಾವು ಸರಮಾ ವಿಷಯಕ್ಕೆ ಸಂಬಂಧಿಸಿದ ಅಂಶಗಳನ್ನು ಕಾಣುತ್ತೇವೆ. ಪರಾಶರನು ಪ್ರತಿಭಾನ್ವಿತ ಕವಿ, ವರಕವಿ. ಯೋಗಿಯ ಆಚ್ಛಾದನದ ತುದಿಯೊಂದಕ್ಕಿಂತ ಹೆಚ್ಚಿನ ವಸ್ತ್ರಭಾಗವನ್ನು ತೆರೆದು ತೋರಿಸುವುದವನಿಗೆ ಇಷ್ಟ. ಅವನ ಸೂಕ್ತಗಳೆಲ್ಲಾ ಹೀಗೇ ಇವೆ. ಮೇಲೆ ಹೇಳಿದ ಅವನ ಸೂಕ್ತವು ವೈದಿಕ ರೂಪಕ ಕಲ್ಪನಾ ಚಿತ್ರಗಳ, ಪ್ರತಿಮಾ ವಿಧಾನಗಳ, ಅರ್ಥವನ್ನು ಸ್ಪಷ್ಟವಾಗಿ ಹೊರಗೆಡಹುತ್ತದೆ. ಅದು ಸಂಕ್ಷಿಪ್ತವಾಗಿದೆ. ಆದ್ದರಿಂದ ಅದನ್ನಿಲ್ಲಿ ಪೂರ್ಣವಾಗಿ ಭಾಷಾಂತರಿಸುತ್ತೇನೆ. "ಆತನು ತನ್ನ ಕೈಯಲ್ಲಿ ಅನೇಕ ಶಕ್ತಿಗಳನ್ನು ಹಿಡಿದಿಟ್ಟುಕೊಂಡು (ದಿವ್ಯ ಪುರುಷರ ಶಕ್ತಿಗಳನ್ನು= "ನರ್ಯಾಪುರೂಣಿ") ವಸ್ತುಗಳ ಶಾಶ್ವತ ವಿತರಣಾಕಾರನಾದ (ದೇವಾಧಿದೇವನ) ದ್ರಷ್ಟೃಜ್ಞಾನವನ್ನು (ತದಂಶಗಳನ್ನು) ತನ್ನೊಳಗೇ ಸೃಷ್ಟಿಸಿದ್ದಾನೆ; ಎಲ್ಲ ಅಮೃತತ್ವಗಳನ್ನೂ ನಿರ್ಮಿಸಿದ ಅಗ್ನಿಯು (ದಿವ್ಯ) ವಿಭೂತಿಗಳಿಗೆ ಒಡೆಯನಾಗುತ್ತಾನೆ. ಅಜ್ಞಾನೋಪಾಧಿಬದ್ಧರಲ್ಲದ ಅಮರರೆಲ್ಲರೂ ಬಯಸುತ್ತಾ, ಎಲ್ಲೆಲ್ಲಿಯೂ ಅದಿತಿಯ ಕರುವಿರುವಂತೆ, ನಮ್ಮಲ್ಲಿ ಅವನನ್ನು (ಅಗ್ನಿಯನ್ನು) ಕಂಡರು. ದುಡಿಯುತ್ತಾ, ಪೀಠದೆಡೆಗೆ ಪ್ರವಾಸಿಸುತ್ತಾ, ಮಹಾವಿಚಾರವನ್ನು ಹಿಡಿದು ಅವರು (ಅಮರರು, ದೇವತೆಗಳು) ಆ ಅತ್ಯುನ್ನತ ಪೀಠದಲ್ಲಿ, ಅಗ್ನಿಯ ರಾಜದ್ವೈಭವದಲ್ಲಿ, ಸೇರಿಹೋದರು. ಹೇ ಅಗ್ನಿಯೇ, ಮೂರು ವರ್ಷಗಳ ಮೂಲಕ (=ಸಾಂಕೇತಿಕವಾದ ಮೂರು ಋತುಗಳು ಯಾ ವರ್ಷಗಳು: ಬಹುಶಃ ಮೂರು ಮಾನಸಮಾರ್ಗ ಸ್ವರೂಪದ ಸ್ವರ್ಗಗಳನ್ನು ದಾಟಿ ಹೋಗುವುದರ ಮೂಲಕ) ಶುದ್ಧರಾದ ಅವರು ಶುದ್ಧನಾದ ನಿನ್ನನ್ನು ಘೃತದಿಂದ ಸೇವಿಸಿದಾಗ ಅವರು ಯಾಜ್ಞಿಕ ಅಭಿಧಾನಗಳನ್ನು ಹಿಡಿದು ಸುಸ್ಪಷ್ಟ, ಸುಜಾತ, ಚಲದಾಕೃತಿಗಳನ್ನು ಉಚ್ಚತಮ ಸ್ವರ್ಗದತ್ತ ಹೋಗುವಂತೆ ಮಾಡಿದರು. ರುದ್ರನ ಮಕ್ಕಳೂ ಯಜ್ಞಾಧೀಶ್ವರರೂ ಆದ ಆ ಅವರು ವಿಶಾಲ ಭೂಮ್ಯಾಕಾಶಗಳ (ಪೃಥಿವೀ ಸ್ವರ್ಗಗಳ) ಜ್ಞಾನವುಳ್ಳವರಾಗಿ ಅವನ್ನು ಹೆತ್ತರು. ಮರ್ತ್ಯರು ಆ ದರ್ಶನ ಪಡೆದೆಚ್ಚತ್ತರು ಮತ್ತು ಅಗ್ನಿಯು ಅತ್ಯುನ್ನತ ಪೀಠದಲ್ಲಿ ನಿಂತದ್ದನ್ನು ಕಂಡರು ; ಪೂರ್ಣವಾಗಿ ಯಾ ಸಮಶ್ರುತಿಯಿಂದ, ಸಾಮರಸ್ಯದಿಂದ ತಿಳಿದು (ತಾದಾತ್ಮ್ಯದಿಂದ ಅರಿತು) ಅವನೆದುರು ಮೊಣಕಾಲೂರಿ (ಸಾಷ್ಟಾಂಗ) ನಮಸ್ಕಾರ ಮಾಡಿದರು. ತಮ್ಮ ಪತ್ನಿಯರೊಡನೆ ಅವರು (ಪತ್ನಿಯರು=ದೇವತೆಗಳ ಸ್ತ್ರೀ ಶಕ್ತಿಗಳು) ವಂದ್ಯನಾದ ಅವನಿಗೆ ನಮಿಸಿದರು - ತಮ್ಮನ್ನು ತಾವೇ ಶುದ್ಧೀಕರಿಸಿಕೊಂಡು ಅವರು (ಅಥವಾ ಭೂಮ್ಯಾಕಾಶಗಳ ಗಡಿಗಳನ್ನು ದಾಟಿ) ತಮಗೆ ತಕ್ಕ ದಿವ್ಯ ರೂಪಗಳನ್ನು ಸೃಜಿಸಿಕೊಂಡರು. ಅಗ್ನಿಯ ಇದಿರಿಗೇ ತಮ್ಮ ಗೆಳೆಯನಾದ ಅವನನ್ನವರು ನೆಟ್ಟಗೆ ನೋಡಿದರು. ನಿನ್ನಲ್ಲಿಯೇ ಯಜ್ಞದೇವತೆಗಳು

ಮೂರೇಳು[೧] ಗುಪ್ತ ಪೀಠಗಳನ್ನು ಕಂಡರು. ಆ ದೇವತೆಗಳೆಲ್ಲರ ಹೃದಯವೂ ಒಂದೇ ಆದುದರಿಂದ ಅಮರತ್ವವನ್ನು ತಾವೇ ಕಾಪಾಡುತ್ತಾರೆ. ಚರಾಚರ ಪ್ರಜಗಳನ್ನು ನೀನು ರಕ್ಷಿಸು. ಎಲೈ ಅಗ್ನಿಯೇ, ಸರ್ವಜನ್ಮಜ್ಞನಾದುದರಿಂದ, ಸರ್ವಾವತಾರಜ್ಞನಾದುದರಿಂದ, ಜಾತವೇದನಾದುದರಿಂದ, ಯಾ ಈ ಜಗತ್ತುಗಳಲ್ಲಿಯ ಎಲ್ಲ ಅರಿವನ್ನೂ ಬಲ್ಲವನಾದುದರಿಂದ, ನೀನು ನಿನ್ನ ಪ್ರಣೋದನಗಳನ್ನು, ಸೇನೆಗಳನ್ನು ಜೀವಿತಕ್ಕಾಗಿ ಸತತ ಸಂಸ್ಥಾಪಿಸು, ಜೀವಾವಧಿ ನೆಲೆ ನಿಲ್ಲಿಸು. ಒಳಗಿಂದೊಳಗೇ ದೇವತೆಗಳು ಪಯಣಿಸುವ ಪಥಗಳನ್ನು ಬಲ್ಲವನಾಗಿ, ನೀನವರ ಅನಿಮಿಷ, ನಿರ್ನಿದ್ರ, ದೂತನಾದೆ ಮತ್ತು ಹವಿರ್‌ವಾಹಕನಾದೆ, ಹುತವಹನಾದೆ. ಸ್ವರ್ಗದ ಸಪ್ತ ಬಲಿಷ್ಠರು (ನದಿಗಳು) ಸರಿಯಾಗಿ ವಿಚಾರವನ್ನು ನೆಲೆ ನಿಲ್ಲಿಸಿಕೊಂಡು, ಪರಮ ಸತ್ಯವನ್ನು ತಿಳಿದು ಸೌಲಭ್ಯದ ದಿವ್ಯ ಸುಖದ ದ್ವಾರಗಳನ್ನು ಕಂಡರು. ದನಗಳ ವೇಗವನ್ನೂ, ವೈಶಾಲ್ಯವನ್ನೂ ಸರಮೆ ಕಂಡಳು. ಅದರಿಂದ ಮಾನವ ಪ್ರಾಣಿಯು ಅತಿ ಹೆಚ್ಚಿನ ಸಿರಿಯನ್ನು ಅನುಭವಿಸುತ್ತಿದ್ದಾನೆ. ಧರ್ಮ್ಯ ಫಲ ಪ್ರಸವಿತೃಗಳಾದ ವಸ್ತುಗಳನ್ನು ಹೊಕ್ಕವರು ಅಮರತ್ವಕ್ಕೆ ಹಾದಿ ಮಾಡಿದರು. ಆ ಬಲಿಷ್ಠರಿಂದ, ಅವರ ಮಹತ್ವದಿಂದ, ಇಳೆ ವಿಸ್ತಾರವಾಗಿ ನಿಂತಿದೆ. ಸ್ವಪುತ್ರರೊಡನೆ ಮಾತೃಶ್ರೀ ಅದಿತಿಯು ಅದನ್ನೆತ್ತಿ ಹಿಡಿಯಲು ಬಂದಳು. ಅಮರರು ಅವನಲ್ಲಿ ಪ್ರಭಾಮಯ ವೈಭವವನ್ನು ಸ್ಥಾಪಿಸಿದರು - ಅವನಿಗೆರಡು ಕಂಗಳನ್ನಿತ್ತರು (ಬಹುಶಃ ಈ ಕಣ್ಣುಗಳು ಸೂರ್ಯನ ಎರಡು ದೃಷ್ಟಿ ಶಕ್ತಿಗಳಾಗಿರಬೇಕು) : ನದಿಗಳು ಬಿಡುಗಡೆ ಮಾಡಲ್ಪಟ್ಟಂತೆ ಹರಿದಿಳಿಯುತ್ತವೆ. ಅಗ್ನಿಯೇ, (ಇದನ್ನೆಲ್ಲಾ) ಇಲ್ಲಿರುವ ಹೊಳೆವವುಗಳು (ಗೋವುಗಳು) ತಿಳಿದಿದ್ದವು."

ಇಂಗ್ಲಿಷಿನಲ್ಲಿ ಉದ್ಭವಿಸುವ ಕುರೂಪವನ್ನು ಗಣಿಸದೆಯೇ ಕೈಯಲ್ಲಾದಷ್ಟು ಪ್ರಯತ್ನದಿಂದ ಮೇಲ್ಕಂಡ ಸೂಕ್ತವನ್ನು ಅತ್ಯಂತ ಅಕ್ಷರಾರ್ಥಾನುಗುಣವಾಗಿ ಭಾಷಾಂತರಿಸಿದ್ದೇನೆ-ಅದು (ಆ ಸ್ವರೂಪದಲ್ಲಿ) ಹಾಗೆ ಓಡುತ್ತದೆ, ಸಾಗುತ್ತದೆ, ನೋಡಿದೊಡನೆಯೇ ನಮಗೆ ಸ್ಪಷ್ಟವಾಗುವ ಅಂಶವಿದು: ಉದ್ದಕ್ಕೂ ಅದೊಂದು ಜ್ಞಾನಸೂಕ್ತ, ಸತ್ಯಸೂಕ್ತ, ಅತ್ಯುತ್ತುಂಗ ದೈವದಿಂದ ಪ್ರತ್ಯೇಕಿಸ-ಲಾಗದಂಥ ದಿವ್ಯಜ್ವಾಲೆಯ ಸೂಕ್ತ, ಅಮೃತತ್ವದ ಸೂಕ್ತ - ದಿವ್ಯ ಶಕ್ತಿಗಳಾದ ದೇವತೆಗಳ ಆರೋಹಣ ಸೂಕ್ತ- ಆರೋಹಿಸುವುದು ಯಜ್ಞವನ್ನು-ಅದನ್ನಾರೋಹಿಸಿ ದೇವತೆಗಳು ದೇವತ್ವಕ್ಕೇರುತ್ತಾರೆ, ಅವರ ಉತ್ತುಂಗನಾಮವನ್ನೂ ಯುಕ್ತ ರೂಪವನ್ನೂ ಹೊಂದುತ್ತಾರೆ - ಅಂದರೆ - ಮೂರೇಳು ಪೀಠದ ಮಹಾದೇವತ್ವದ ಜ್ಯೋತಿರ್ಮಯ ವೈಭವದ ಉಚ್ಚ ಸ್ಥಾನಕ್ಕೆ ಏರುತ್ತಾರೆ. ಇದರ ತಾತ್ಪರ್ಯ ಇಷ್ಟೇ ಅಲ್ಲದೆ ಮತ್ತೇನೂ ಅಲ್ಲ ; ಮಾನವನಲ್ಲಿ ದಿವ್ಯ ಶಕ್ತಿಗಳಿವೆ. ಅವನಲ್ಲಿ ಅವುಗಳಿರುವುದು ಸಾಮಾನ್ಯ ವೈಶ್ವತ್ರಿಕ ಸ್ವರೂಪಗಳಲ್ಲಿ. ಆ ಸ್ವರೂಪಗಳನ್ನು ತ್ಯಜಿಸಿ ಅವು (ಆಭಾಸಿಕತೆಯಿಂದ ಮುಕ್ತವಾಗಿ) ಅತಿಮಾನುಷ ಪರಂಜ್ಯೋತಿಃ ಸ್ವರೂಪದ ಸತ್ಯತೆಗೇರುವುದು ಯಜ್ಞಪ್ರವಾಸ. ದೇವತೆಗಳು ಹೀಗೆ ಮಾಡುವುದರಿಂದ, ಪರಾಶರನ ಪ್ರಕಾರ, ಮರ್ತ್ಯ ಮಾನವನು ಜ್ಞಾನೋನ್ಮುಖನಾಗುತ್ತಾನೆ, ಅಗ್ನಿಯು ಧ್ಯೇಯವಾದ ಅತ್ಯುಚ್ಚ ಪದದಲ್ಲಿ ನಿಂತಿರುವುದನ್ನು ನೋಡುತ್ತಾನೆ : "ವಿದನ್ ಮರ್ತೋ ನೇಮ ಧಿತಾ ಚಿಕಿತ್ವಾನ್, ಅಗ್ನಿಂ ಪದೇ ಪರಮೇ ತಸ್ಥಿವಾಂಸಂ." ತಾನು ಸತ್ಯದ ಒಂದು ಶಕ್ತಿಯಲ್ಲವಾದರೆ, ಅವಳ ಹಸುಗಳು ಬೆಳಗುವ ಪ್ರಬೋಧಕ ದಿವ್ಯ ಉಷಃ ಕಿರಣಗಳಲ್ಲವಾದರೆ ಇಂಥ ಸೂಕ್ತದಲ್ಲಿ

---

೧. ಮೂರೇಳು=೨೧ ; ಇವು ಬಹುಶಃ ಸಪ್ತ ನರಕ (ಪಾತಾಳಗಳು), ಸಪ್ತ ಸ್ವರ್ಗ (ಭೂರಾದಿ ಸತ್ಯಾಂತ ಲೋಕಗಳು)ಮತ್ತು ಸಪ್ತ ಮುಕ್ತಿ ಸೋಪಾನಗಳು=ಸಾಲೋಕ್ಯ, ಸಾಮೀಪ್ಯ,ಸಾಯುಜ್ಯ, ಸಾರ್ಷ್ಟ್ಯ ಸಾರೂಪ್ಯ, ಸಾಯುಜ್ಯ ಮುಂತಾದ ಸಪ್ತ ಸಮಾಧಿ ಸ್ತರಗಳು - ಅನುವಾದಕ.

ಸರಮೆಗೇನು ಕೆಲಸ? ಪ್ರಾಚೀನ ಕಲಹಪ್ರಿಯ ಕುಲಗಳ ಹಸುಗಳಿಗೂ ಸರಮೆಯ ಹಸುಗಳಿಗೂ ಏನು ಸಂಬಂಧ? ನಮ್ಮ ಆರ್ಯ-ದ್ರಾವಿಡ ಪಿತೃಪಿತಾಮಹರು ರಕ್ತತೃಷ್ಣೆಯಿಂದ ಪರಸ್ಪರರ ಸ್ವತ್ತುಗಳನ್ನು ಅಪಹರಿಸಿಕೊಂಡು ಹೋಗಿ ಜಗಳ ಮಾಡುತ್ತಿದ್ದುದಕ್ಕೂ ಇದಕ್ಕೂ ಯಾವ ಸಂಬಂಧ? ಅವರ ಪರಸ್ಪರ ಗೋಗ್ರಹಣಗಳ ಉಲ್ಲೇಖ ಇಲ್ಲೇಕೆ ಬರುತ್ತದೆ? ಇದಕ್ಕೂ ತೇಜಃಪುಂಜ ಭವಿಷ್ಯದ್ದರ್ಶನ ಸ್ವರೂಪದ ಅಮರತ್ವಕ್ಕೂ ಏನು ಗಂಟು? ಯಾವ ನಂಟು? ಈ ದೇವತೆಗಳಿಗೂ ಆ ಮನುಷ್ಯರಿಗೂ ನಡುವೆ ಎಲ್ಲಿಯ ವ್ಯವಹಾರ? ಪರ ಸತ್ಯವನ್ನು ಚಿಂತನ ಮಾಡುವ, ತಿಳಿಯುವ, ಗುಪ್ತದ್ವಾರಗಳನ್ನು ಕಂಡು ಹಿಡಿಯುವ ಈ ಸಪ್ತಸಿಂಧುಗಳು ಆರ್ಯ-ದ್ರಾವಿಡ ಪ್ರಪಂಚಕ್ಕೆ ಸೇರಿದವುಗಳೇ? ಭೌತಿಕವಾದ ನದಿಗಳೇ? ಈಗಲೂ ನಾವು ಅವು ಪಂಜಾಬಿನಲ್ಲಿ ಬರಹಿಡಿದು ಹರಿಯಲಾರದೆ ಹರಿಯುತ್ತಿರುವ ನದಿಗಳೆಂದು ಹೇಳಬೇಕೆ? ದ್ರಾವಿಡರು ಬಂದು ಬತ್ತಿಸಿದ ಹೊಳೆಗಳೆನ್ನಬೇಕೆ? ಮತ್ತು ಸರಮೆಯು ಆರ್ಯರ ರಾಯಭಾರಿ ಕಛೇರಿಯ ಪೌರಾಣಿಕ ದೂತಿ ಅಥವಾ ಭೌತಿಕವಾದ ಉಷಃಕಾಲ ಎಂದು ಗುರುತಿಸಬೇಕೇ?

೧೦ನೆಯ ಮಂಡಲದ ಒಂದು ಇಡೀ ಸೂಕ್ತವು ಸರಮೆಯ ಈ "ದೌತ್ಯಕ್ಕೆ" ಮೀಸಲಾಗಿದೆ. ಅದು ಸರಮಾಪಣಿಗಳ ಸಂವಾದ. ಆದರೆ ಅದು ಅವಳ ಬಗ್ಗೆ ನಮಗೆ ಆಗಲೇ ತಿಳಿದ ಸಂಗತಿಗಳಿಗೆ ಹೊಸದೇನನ್ನೂ ಸೇರಿಸುವುದಿಲ್ಲ. ಅದು ನಮಗೆ ಗುಹಾಭಾಂಡಾರಿಗಳ ಬಗೆಗೆ ನಾವು ಯಾವ ಕಲ್ಪನೆಯನ್ನು ಮಾಡಿಕೊಳ್ಳಬಹುದೆಂಬುದರ ಬಗೆಗೆ ನೆರವೀಯುತ್ತದೆ. ಈ ಸೂಕ್ತದಲ್ಲಾಗಲಿ, ಇತರ ಸೂಕ್ತಗಳಲ್ಲಾಗಲಿ ಸರಮೆಗೆ ದೇವಶುನೀತ್ವವನ್ನು ಆರೋಪಿಸಿದ್ದು ಕಂಡುಬರುವುದಿಲ್ಲ. ವೈದಿಕ ಪ್ರತಿಮಾಲಂಕಾರದ ಉತ್ತರಕಾಲೀನ ಬೆಳವಣಿಗೆಯಲ್ಲಿ ಎಲ್ಲಿಯೋ ಸರಮೆಗೆ ದೇವಶುನೀತ್ವವನ್ನು ಅಂಟಿಸಿರಬೇಕು. ಅವಳು ನಿಜವಾಗಿಯೂ ಚೆಲುವಾದ ಪಾದಗಳನ್ನುಳ್ಳ ಒಬ್ಬ ದೇವತೆ. ಪಣಿಗಳು ಆಕೃಷ್ಟರಾಗಿ ಅವಳು ತಮ್ಮ ತಂಗಿಯಾಗಬೇಕೆಂದು ಬಯಸುತ್ತಾರೆ - ತಮ್ಮ ದನಕರುಗಳನ್ನು ಕಾಯುವ ನಾಯಿಯಾಗಬೇಕೆಂದಲ್ಲ - ತಮ್ಮ ಐಶ್ವರ್ಯದಲ್ಲವಳು ಪಾಲುಗಾರ್ತಿಯಾಗಬೇಕೆಂದು ಅಪೇಕ್ಷಿಸುತ್ತಾರೆ. ಸ್ವರ್ಗದ ನಾಯಿಯ ಪ್ರತಿಮೆಯೇನೋ ಯುಕ್ತ ಮತ್ತು ಚಮತ್ಕಾರಕ. ಪುರಾಣ ಕಥೆಯಿಂದ ಸಹಜವಾಗಿಯೇ ಅವಳಿಗೆ ಆ ಪಟ್ಟ ದೊರಕಿತು ಎಂದು ಹೇಳಬಹುದು. ಹಿಂದಿನ (I.62) ಒಂದು ಸೂಕ್ತದಲ್ಲಿ ಸರಮೆ ತನ್ನ ಮಗನಿಗಾಗಿ ಆಹಾರವನ್ನು ಪಡೆದ ಉಲ್ಲೇಖವಿದೆ. ಅದೊಂದು ಹಳೆಯ ಅರ್ಥವಿವರಣೆ. ಅದರ ಪ್ರಕಾರ, ಕಳೆದ ದನಗಳನ್ನು ಹುಡುಕಿ ಕೊಡಲು ಆ ಶುನಿಯಾದ ಸರಮೆ ತನ್ನ ಮಗನಿಗೆ ಆಹಾರ ಕೊಡಬೇಕೆಂಬ ಶರ್ತವನ್ನು ಹಾಕಿದಳಂತೆ. ಇದು ವಿವರಣಕಾರನ ಕಲ್ಪನೆಯಷ್ಟೇ ಅಲ್ಲದೆ ಋಗ್ವೇದದಲ್ಲಿ ಇದಕ್ಕೆ ಸ್ಥಾನವೇ ಇಲ್ಲ. ವೇದ ಹೇಳುತ್ತದೆ : "ಯಜ್ಞದಲ್ಲಿ" ಅಥವಾ (ಹೆಚ್ಚು ಸಂಭಾವ್ಯವಾಗಿ) ಇಂದ್ರಾಂಗಿರಸರ ಗೋಶೋಧ ಕಾರ್ಯದಲ್ಲಿ ಸರಮೆಯು ಮಗನಿಗೊಂದು ಮೂಲವನ್ನು ಕಂಡುಹಿಡಿದಳು- ವಿದತ ಸರಮಾ ತನಯಾಯ ಧಾಸಿಂ (I.62.3) ಇದೇ "ಧಾಸಿಂ" ಎಂಬ ಪದದ ನಿಜವಾದ ಅರ್ಥವಾದೀತು. ಅವಳ ಮಗ ಯಾರಪ್ಪಾ ಎಂದು ಕೇಳಿದರೆ ವೈದಿಕ ಪ್ರತಿಮಾವಳಿಯಲ್ಲಿ ಸತತವಾಗಿ ಬರುವ ಯಜ್ಞಪುತ್ರನಲ್ಲದೆ ಸರಮೆಯಿಂದ ಪ್ರಾರಂಭವಾಗಿ ಜನಿಸಿದ ನಾಯಿಗಳ ಕುಲವಲ್ಲ. I.96.4 ರಲ್ಲಿರುವಂತೆ ಇಂಥ ಪದಸಂಹತಿಗಳು ವೇದದಲ್ಲಿ ಬೇಕಾದಷ್ಟಿವೆ : "ಮಾತರಿಶ್ವಾ ಪುರುವಾರ ಪುಷ್ಟಿರ್ ವಿದದ್ ಗಾತುಂ ತನಯಾಯ ಸ್ವರ್‌ವಿತ್=ಪ್ರಾಣದೇವನಾದ ವಾಯುವು (ಜೀವನದ ಉನ್ನತ ಮೌಲ್ಯಗಳನ್ನು) ಅಪೇಕ್ಷಣೀಯ ವಸ್ತುಗಳನ್ನು ಹೆಚ್ಚಿಸುತ್ತಾ ಹೋಗುವಾಗ ಮಗನಿಗೆ ಮಾರ್ಗವನ್ನು ಹುಡುಕಿ ಕೊಟ್ಟನು ಮತ್ತು

ಸ್ವರನ್ನು ಕಂಡುಹಿಡಿದನು. ಇಲ್ಲಿ ವಿಷಯವೇನೋ ಅದೇ, ಆದರೆ "ಮಗ" ಎಂಬುದಕ್ಕೆ ನಾಯಿಮರಿಗಳ ಕುಲದ ಸಂಬಂಧವಿಲ್ಲ.

ಯಮದೂತರಾದ ಎಡು ಸಾರಮೇಯಗಳನ್ನು ೧೦ನೆಯ ಮಂಡಲದ ಬಹಳ ಇತ್ತೀಚಿನ ಸೂಕ್ತವೊಂದರಲ್ಲಿ ಹೇಳಲಾಗಿದೆ. ಆದರೆ ಅವುಗಳಿಗೂ ಸರಮೆಗೂ ಯಾವ ಸಂಬಂಧವೂ ಇಲ್ಲ ; ಅವಳು ಅವುಗಳ ತಾಯಿಯೆಂದು ಅದರಲ್ಲಿ ಹೇಳಿಲ್ಲ. ಈ ಉಲ್ಲೇಖವು ಪ್ರಸಿದ್ಧವಾದ ಸ್ಮಶಾನ ಯಾತ್ರೆಯ (X.14) ಸೂಕ್ತದಲ್ಲಿ ಬಂದಿಧೆ. ಋಗ್ವೇದದಲ್ಲಿರುವ ಯಮನ ಹಾಗೂ ಅವನ ಎರಡು ನಾಯಿಗಳ ಸ್ವರೂಪವನ್ನು ತಿಳಿದುಕೊಳ್ಳುವುದು ಪ್ರಯೋಜನಕರ. ಅನಂತರದ ಕಾಲದ ಕಲ್ಪನೆಗಳ ಪ್ರಕಾರ ಯಮನು ಮೃತ್ಯುದೇವತೆ ಮತ್ತು ಅವನದೇ ಆದ ಪ್ರಪಂಚವೊಂದು ಅವನಿಗಿದೆ. ಆದರೆ ಋಗ್ವೇದದಲ್ಲಿ ಅವನೊಬ್ಬ ಸೂರ್ಯಾವತಾರ. ಉಪನಿಷತ್ತಿನಷ್ಟು ಅನಂತರದ ಅವಧಿಯಲ್ಲೂ ಯಮನು ಸೂರ್ಯನ ಒಂದು ವಿಶೇಷಣ- ಆಮೇಲೆ ಆ ಸತ್ಯಸೂರ್ಯನ ಯಮಳಾಪತ್ಯಗಳಲ್ಲಿ ಅವನು ಒಬ್ಬ. ಅವನು ಧರ್ಮ ರಕ್ಷಕ, ಪರಸತ್ಯದ ನಿಯಮ, ವಿಧಿ, "ಸತ್ಯಧರ್ಮ"- ಅದು ಅಮೃತತ್ವದ ಒಂದು ಉಪಾಧಿ, ಶರ್ತ ; ಆದುದರಿಂದ ಅವನೇ ಅಮೃತತ್ವದ ಪಾಲಕ. ಸ್ವರ್ ಅವನ ಪ್ರಪಂಚ, ಅದು ಅಮರತ್ವ- "ಅಮೃತೇ ಲೋಕೇ ಅಕ್ಷಿತೇ" ; ಅದರಲ್ಲಿ, (IX.113.7) ಹೇಳಿದಂತೆ ಅವಿನಾಶಿಯಾದ ಬೆಳಕಿರುತ್ತದೆ ; ಸ್ವರ್ ಅಲ್ಲಿ ಪ್ರತಿಷ್ಠಿತ, "ಯತ್ರ ಜ್ಯೋತಿರಜಸ್ರಂ ಯಸ್ಮಿನ್ 'ಲೋಕೇ ಸ್ವರ್ ಹಿತಂ." (X.14) ಸೂಕ್ತವು ನಿಜವಾಗಿ ಮೃತ್ಯು ಸೂಕ್ತವಲ್ಲ-ಅದು ಜೀವನದ ಮತ್ತು ಅಮರ್ತ್ಯತೆಯ ಸೂಕ್ತ. ಯಮನೂ ಪ್ರಾಚೀನ ಪ್ರಪಿತಾಮಹರೂ ಆ ಅಮೃತಲೋಕದ ಮಾರ್ಗವನ್ನು ಕಂಡುಹಿಡಿದರು ; ಅದೋ ದನಗಳ ಹುಲ್ಲುಗಾವಲಿರುವ ಊರು ; ಅಲ್ಲಿಂದ ಹಗೆಯು ಕಾಂತಿಮಯ ಧೇನುಗಳನ್ನು ಕಸಿದೊಯ್ಯಲಾರನು, "ಯಮೋನೋ ಗಾತುಂ ಪ್ರಥಮೋ ವಿವೇದ, ನೈಷಾಗವ್ಯೂತಿರ್ ಅಪಭರ್ತವಾ ಉ, ಯತ್ರಾ ನಃ ಪೂರ್ವೇ ಪಿತರಃ ಪರೇಯುಃ (ಋಕ್ ೨). ಮಾನವನ ಸ್ವರ್ಗಾರೋಹಕ ಜೀವಾತ್ಮವು "ನಾಲ್ಕು ಕಣ್ಣುಗಳನ್ನುಳ್ಳ, ಚಿತ್ರವರ್ಣದ ಸಾರಮೇಯ ನಾಯಿಗಳನ್ನು ಒಳ್ಳೆಯ ದಾರಿಯಲ್ಲಿ (ಪರಿಣಾಮಕರ ದಾರಿಯಲ್ಲಿ) ಹಿಂದಕ್ಕಟ್ಟಿ ಹೋಗಬೇಕು" ಎಂದು ಹೇಳಲಾಗಿದೆ. ಸ್ವರ್ಗದ ಆ ಹಾದಿಗೆ ಆ ಚತುರಕ್ಷಗಳು ರಕ್ಷಕಗಳು ; ತಮ್ಮ ದಿವ್ಯದರ್ಶನದಿಂದ ಅವು ಮಾನವನನ್ನು ರಕ್ಷಿಸುತ್ತವೆ. - "ಯೌ ತೇ ಶ್ವಾನೌ ಯಮ ರಕ್ಷಿತಾರೌ ಚತುರಕ್ಷೌ ಪಥಿರಕ್ಷೀ ನೃಚಕ್ಷುಷೌ (ಋಕ್ ೧೧)" ಮತ್ತು ಜೀವಾತ್ಮನಿಗೆ ರಕ್ಷಕಗಳನ್ನಾಗಿ ಅವುಗಳನ್ನು ಕಳುಹಬೇಕೆಂದು ಯಮನನ್ನು ಕೇಳಿಕೊಳ್ಳಲಾಗಿದೆ. ಈ ನಾಯಿಗಳು "ವ್ಯಾಪಕ ಸ್ಥಲಚರಗಳು, ಸುಲಭವಾಗಿ ತೃಪ್ತವಾಗುವಂಥವುಗಳಲ್ಲ ಹಾಗೂ ಮಾನವರಲ್ಲಿ ಅವು ವಿಧಿಪತಿಯ ಆಳುಗಳಾಗಿ ಬರುತ್ತವೆ. ಸೂಕ್ತವು ಪ್ರಾರ್ಥಿಸುತ್ತದೆ: "ಅವು ಈ ದುಃಖಮಯ ಪ್ರಪಂಚದಲ್ಲಿ ನಮಗೆ ಸೂರ್ಯನ ಸಾಕ್ಷಾತ್ಕಾರಕ್ಕಾಗಿ ಬೇಕಾದ ಆನಂದವನ್ನು ಹಿಂದಿರುಗಿ ಕೊಡಲಿ (ಋಕ್ ೧೨). ನಾವಿನ್ನೂ ಹಳೆಯ ವೈದಿಕ ಆವರಣದಲ್ಲೇ ಇದ್ದೇವೆ. ಬೆಳಕೂ ಆನಂದವೂ ಅಮೃತತ್ವವೂ ಈ ಸಾರಮೇಯ ನಾಯಿಗಳೂ ಸರಮೆಯ ಸಾರಭೂತ ಲಕ್ಷಣಗಳನ್ನು ಹೊಂದಿವೆ ; ಸರಮೆ= ದರ್ಶನ, ವಿಶಾಲ ಸ್ಥಲಚಲನ, ಧ್ಯೇಯ ಸಿದ್ಧಿಯ ಮಾರ್ಗದಲ್ಲಿ ನಡೆಯಲು ಬೇಕಾದ ಶಕ್ತಿ. ಸರಮೆಯು ದನಗಳ ಬಯಲಿಗೆ ಕರೆದೊಯ್ಯುವಳು. ಈ ನಾಯಿಗಳು ಜೀವಾತ್ಮನು ಅನುಲ್ಲಂಘನೀಯ ಹುಲ್ಲುಗಾವಲಿಗೆ, ಶಷ್ಪಕ್ಷೇತ್ರಕ್ಕೆ ಹೋಗುವಾಗ ಅವನನ್ನು ರಕ್ಷಿಸುತ್ತವೆ - ಆ ಹುಲ್ಲುಗಾವಲು ಜ್ಯೋತಿರ್ಮಯ ಹಾಗೂ ಅವಿನಾಶಿ ಗೋವ್ರಜಗಳಿಗೆ ಸೇರಿದುದು. ಸರಮೆಯು ಸತ್ಯದೆಡೆಗೆ ನಮ್ಮನ್ನು ತರುವಳು - ಸೂರ್ಯದರ್ಶನಕ್ಕೆ ತಂದು ಮುಟ್ಟಿಸುವಳು - ಆ ಸೂರ್ಯ ದರ್ಶನವೇ ಆನಂದ ಮಾರ್ಗ. ಈ ನಾಯಿಗಳು ಮನುಜರು

ಸೂರ್ಯದರ್ಶನ ಪಡೆಯಲೆಂದೇ ಈ ಜಗದ ಮಾನವನಿಗೆ ದುಃಖಗಳನ್ನು ತರುವುದು, ಅವರು ನರಳುವಂತೆ ಮಾಡುವುದು. ಸರಮೆ ಈ ನಾಯಿಗಳ ತಾಯಿ ಎಂಬುದನ್ನೊಪ್ಪಿಕೊಂಡರೂ·ಈ ನಾಯಿಗಳು ಸೂರ್ಯೋನ್ಮುಖವಾಗಿ ಹೋಗುವ ವಿಶಲವಾದ ಹಾದಿಯಲ್ಲಿ ಮಾನವಾತ್ಮದ ರಕ್ಷಕಗಳು - ಇವುಗಳ ತಾಯಿ ಸರಮೆಯು ಚೆಲುವಾದ ಪಾದವುಳ್ಳ ದೇವತೆ, ಸ್ವರ್ಗೀಯ ಶ್ವಾನ ಮಾರ್ಗದಲ್ಲಿ ವೇಗವಾಗಿ ಹೋಗುವವಳು - ಅಂದರೇನಾಯಿತು? ಎಲ್ಲಾ ಒಂದೇ ತಾತ್ಪರ್ಯವಾಗಲಿಲ್ಲವೇ? ಅರ್ಥಾತ್ ಸರಮೆಯು ಪರಸತ್ಯದ ಒಂದು ಶಕ್ತಿ ; ಆ ಶಕ್ತಿಯು ಒಂದು ದಿವ್ಯ ಮೇಧಾವಿಭಾಗದ ಒಳನೋಟದ ಬಲದಿಂದ ಗುಪ್ತ ಬೆಳಕನ್ನು ಕಾಣುತ್ತದೆ, ಜೀವಾತ್ಮಾನಿಗಿಲ್ಲದಂತೆ ಮಾಡಿದ ಅಮೃತತತ್ವವನ್ನು ಅವನಿಗೆ ತೋರಿಸುತ್ತದೆ. ಆದರೆ ಹೀಗೆ ಹುಡುಕಿ ಕಂಡುಹಿಡಿಯುವುದಕ್ಕಷ್ಟೇ ಅವಳ ಕರ್ತವ್ಯವು ಸೀಮಿತವಾಗಿದೆ.



## ಅಧ್ಯಾಯ-೨೧

# ಅಂಧಕಾರದ ಪುತ್ರರು

ಆಕ್ರಾಮಕ ಆರ್ಯರಿಗೂ ಗುಹಾನಿವಾಸಿಗಳಾದ ಆಕ್ರಾಂತ ದ್ರಾವಿಡರಿಗೂ ನಡುವೆ ನಡೆದಿರಬಹುದಾಗಿದ್ದ[1] ರಾಜಕೀಯ ಹಾಗೂ ಸೈನಿಕ ಹೋರಾಟದ ಕತೆಗೆ ಇಲ್ಲಿ ಜಾಗವೇ ಇಲ್ಲ. ಅದೇ ಬೇರೆ- ಈ ಅಂಗಿರಸ, ಇಂದ್ರ, ಸರಮೆಯರ ಹಾಗೂ ಪಣಿಗುಹೆ, ಉಷಾವಿಜಯ, ದಿವ್ಯಸೂರ್ಯ ಮತ್ತು ದಿವ್ಯ ಧೇನುಗಳ ಕತೆಯೇ ಬೇರೆ. ಅದಕ್ಕೂ ಇದಕ್ಕೂ ಯಾವ ಸಂಬಂಧವೂ ಇಲ್ಲ. ಆ ಕತೆಯನ್ನು ಈ ಕಥೆಯಲ್ಲಿ ತುರುಕಲು ಸಾಧ್ಯವಿಲ್ಲ. ಇದು ಜ್ಯೋತಿರ್ಶ್ಯೋದಕರಿಗೂ ತಮಃಶಕ್ತಿಗಳಿಗೂ ನಡುವಿನ ಹೋರಾಟ ; ಧೇನುಗಳು ಉಷೆ ಮತ್ತು ಸೂರ್ಯರ ಕಿರಣಗಳು-ಅವೆಂದೂ ಪಾಂಚಭೌತಿಕ ದನಗಳಾಗಬಾರವು. ಆರ್ಯರಿಗಾಗಿ ಇಂದ್ರನು ಗೆದ್ದ ವಿಶಾಲವೂ ನಿರ್ಭಯವೂ ಆದ ಗೋಚರಾವೆಂದರೆ "ಸ್ವರ್" ಎಂಬ ವಿಸ್ತಾರವಾದ ಲೋಕ : ಅದು ಸೌರಪ್ರಕಾಶದ ಪ್ರಪಂಚ, ಸ್ವರ್ಗದ ತ್ರಿಪುಟದ ದ್ಯುಮತ್ ಪ್ರದೇಶಗಳು. ಆದುದರಿಂದ ಅದಕ್ಕೆ ಸರಿಯಾಗಿ ಪಣಿಗಳನ್ನು ಅಂಧಕಾರದ ಗುಹೆಯ ಶಕ್ತಿಗಳೆಂದೇ ಗ್ರಹಿಸಬೇಕು. ಪಣಿಗಳು ದಸ್ಯುಗಳು[2] ಅಥವಾ ದಾಸರು ಎಂಬುದು ನಿಜ. ಅವರನ್ನು ಹೆಸರೆತ್ತಿಯೇ ಹೇಳುತ್ತಾ ಹೋಗಲಾಗಿದೆ-ಅವರನ್ನು ದಾಸವರ್ಣದವರು, ಎನ್ನಲಾಗಿದೆ. ದಾಸವರ್ಣವು ಆರ್ಯವರ್ಣಕ್ಕೆ ವಿರುದ್ಧ-ಎಂಬುದೂ ಸ್ಪಷ್ಟ. ಬ್ರಾಹ್ಮಣ ಗ್ರಂಥಗಳಲ್ಲಿ ಹಾಗೂ ಮುಂದೆ ಬಂದ ಬರೆಹಗಳಲ್ಲಿ ಜಾತಿ, ವರ್ಗ ಎಂಬರ್ಥಗಳಲ್ಲಿ "ದಾಸ" (=ವರ್ಣ, ಬಣ್ಣ) ಎಂಬುದನ್ನು ಬಳಸಿದ್ದರೂ ಋಗ್ವೇದದಲ್ಲಿ ಅದೇ ಅರ್ಥದಲ್ಲಿ ಆ ಪದವನ್ನು ಬಳಸಿದ್ದರೆನ್ನಲು ಆಧಾರವಿಲ್ಲ. ದಸ್ಯುಗಳು ಪವಿತ್ರ ಪದಗಳ, ಮಂತ್ರಗಳ, ಹಗೆಗಳು, ಅವರು ದೇವತೆಗಳಿಗೆ ದಾನ ಕೊಡುವವರಲ್ಲ, ಮದ್ಯ ಕೊಡುವವರಲ್ಲ. ಅವರು ತಮ್ಮ ಹಸು, ಕುದುರೆ ಮುಂತಾದ ಸಂಪತ್ತನ್ನೆಲ್ಲಾ ತಮಗಾಗಿಯೇ ಇಟ್ಟುಕೊಂಡಿರುತ್ತಾರಲ್ಲದೆ ಋಷಿಗಳಿಗೆ, ದ್ರಷ್ಟಾರರಿಗೆ ಕೊಡುವುದಿಲ್ಲ. ಅವರು ಯಜ್ಞ ಮಾಡರು. ಅಂದಿನ ಭಾರತದ ಋಷಿಗಳಿದ್ದ ಪರಿಸರದಲ್ಲಿ ಆರಾಧನಾ ಪದ್ಧತಿಯ ಭೇದವುಳ್ಳ ಇಬ್ಬಗೆಯ

---

೧. ಪ್ರೊ. ನೀಲಕಂಠ ಶಾಸ್ತ್ರಿಗಳಿತ್ತ ಮಾನವ ಕುಲ-ವೃಕ್ಷದಲ್ಲಿ "ದ್ರಾವಿಡ" ಎಂಬುದು ಬಂದಿಲ್ಲ. ಡಾ.ಎಸ್.ಆರ್. ರಾಯರು (Director of Oceanography-Goa) ತಮ್ಮ ಇತ್ತೀಚಿನ ಸಂಶೋಧನೋಕ್ತಿಯಲ್ಲಿ ಮೊಹೆಂಜೊದಾರೋ ಹರಪ್ಪಗಳ ನಾಗರಿಕತೆಯು ವೈದಿಕ ನಾಗರಿಕತೆಯ ಪೂರ್ವದ ಒಂದು ಉನ್ನತದಶೆ ಎಂಬ ತಾತ್ಪರ್ಯ ಬರುವಂತೆ ಪತ್ರಿಕೆಗಳಿಗೆ ಹೇಳಿಕೆ ನೀಡಿದ್ದಾರೆ ಅವರ ಗುರು ಬಿ.ಶ್ರೀಕಂಠಶಾಸ್ತ್ರಿಗಳು ಅದು ಸಂಪೂರ್ಣ ಆರ್ಯ ಎಂದು ಹಿಂದೆಯೇ ಸಾರಿದ್ದರು. - ಅನುವಾದಕ.

೨. ದಸ್=ಸುಸ್ತಾಗು, ದಾರಿದ್ರ್ಯವನ್ನನುಭವಿಸು ಎಂದರ್ಥ. (ಎಂ.ಎಂ.ವಿಲಿಯಮ್ಸ್ - ಪುಟ ೪೭೩) - ಅನುವಾದಕ.

ಜನರಿದ್ದರೆಂದು ಬೇಕಾದರೆ ಒಪ್ಪಿಕೊಂಡರೆ ಆಗ ಆ ಋಷಿಗಳು ಉಕ್ತ ಪದ್ಧತಿಯನ್ನು-ಅಂದರೆ-ಆ ಈ ಮಾನವ್ಯ ಗುಂಪುಗಳ ಘರ್ಷಣೆಯನ್ನು ಆಧ್ಯಾತ್ಮಿಕ ಘರ್ಷಣೆಗೆ ಸಂಕೇತವನ್ನಾಗಿ ಬಳಸಿಕೊಂಡಿರಬಹುದೆನ್ನುವುದು ಸಾಧ್ಯ. ಏಕೆಂದರೆ ಅವರು ತಮ್ಮ ಜೀವನದ ಇತರ ವಿವರಗಳನ್ನೂ ಹಾಗೇ ಭೌತಿಕರಿಂದ ಆಧ್ಯಾತ್ಮಿಕಕ್ಕೆ ತೆಗೆದುಕೊಂಡದ್ದುಂಟು. ಭೌತಿಕ ಯಜ್ಞವು, ಆ ಪ್ರಕಾರ ಆಧ್ಯಾತ್ಮಿಕ ಯಜ್ಞವಾಯಿತು, ಭೌತಿಕ ಸಂಪತ್ತು ಆಧ್ಯಾತ್ಮಿಕ ಸಂಪತ್ತಾಯಿತು ; ಭೌತಿಕ ಯುದ್ಧವು ಹಾಗೇ ಸಾಂಕೇತಿಕವಾಗಿ ಆಧ್ಯಾತ್ಮಿಕ ಯುದ್ಧವಾಯಿತು-ದಂಡಯಾತ್ರೆಯು ಸತ್ಯಾನ್ವೇಷಣ ಯಾತ್ರೆ ಎನ್ನಿಸಿತು. ಆದರೆ ಸಂಪೂರ್ಣ ಖಚಿತವಾದ ಅಂಶವೆಂದರೆ, ಕೊನೆಯ ಪಕ್ಷ, ಋಗ್ವೇದದಲ್ಲಿ ಹೇಳಿರುವುದು ಆಧ್ಯಾತ್ಮಿಕ ಘರ್ಷಣೆ ಮತ್ತು ವಿಜಯಗಳನ್ನಲ್ಲದೆ ಭೌತಿಕವಾದ ಯುದ್ಧ ಮತ್ತು ಲೂಟಿಗಳನ್ನು ಅಲ್ಲ.

ಅಸಂಗತ ಉಪಚ್ಛೇದಗಳನ್ನು ತೆಗೆದುಕೊಂಡು ಅವುಗಳಿಗೆ ಆ ಸಂದರ್ಭದ ಮಟ್ಟಿಗೆ ಸರಿಯೆನ್ನಿಸುವ ಅರ್ಥವನ್ನು ಹೇಳಿ ಆ ಅರ್ಥವು ಮಿಕ್ಕ ಅನೇಕಾನೇಕ ಉಪಚ್ಛೇದಗಳಿಗೆ ಏನು ಮಾಡಿದರೂ ಅನ್ವಯಿಸದಿದ್ದಾಗ ಅವುಗಳೆಲ್ಲವನ್ನೂ ಕಡೆಗಣಿಸಿ ಬಿಡುವುದು ಅವಿಮರ್ಶಾತ್ಮಕ ಅಥವಾ ತಲೆಯಿಲ್ಲದೆ ಅನುಸರಿಸುವ ಪದ್ಧತಿ ಎನ್ನಿಸುತ್ತದೆ. ವೇದದಲ್ಲಿ ಎಲ್ಲೆಲ್ಲಿ ಪಣಿಗಳು, ಅವರ ಸಂಪತ್ತು, ಅವರ ಲಕ್ಷಣಗಳು, ದೇವತೆಗಳ ಜಯ, ದ್ರಷ್ಟಾರರು, ಆಮೇಲೆ ಆರ್ಯರು ಎಂಬವುಗಳೆಲ್ಲಾ ಬರುತ್ತವೆಯೋ ಅಲ್ಲೆಲ್ಲಾ ಇವುಗಳೆಲ್ಲವನ್ನೂ ಒಂದೇ ಸಮನಾಗಿ ನೋಡಿ, ಆಯಾ (ಒಂದೇ ಅರ್ಥವನ್ನು) ಅರ್ಥವನ್ನು ಹಾಗೇ ಅನ್ವಯಿಸಿ ಆ ಮೂಲಕ ಅವೆಲ್ಲಾ ಉಪಚ್ಛೇದಗಳ ಸಮಷ್ಟಿಯ ತಾತ್ಪರ್ಯದ ದೃಷ್ಟಿಯಿಂದ ನಿಗಮನಿಸಿ, ಆ ನಿಗಮನಗಳನ್ನು ಸ್ವೀಕರಿಸಬೇಕು. ಈ ಪದ್ಧತಿಯನ್ನು ನಾನು ಅನುಸರಿಸಿದಾಗ, ವೇದದ ಅನೇಕ ಉಪಚ್ಛೇದಗಳಲ್ಲಿ ಪಣಿಗಳ ಕಲ್ಪನೆಯು ಅವರು ಮನುಷ್ಯರೆಂದು ತಿಳಿದುಕೊಳ್ಳಲು ಅಸಾಧ್ಯವಾಗಿಯೇ ಪರಿಣಮಿಸುವುದು ಮತ್ತು ಅವು ಭೌತಿಕ ಅಥವಾ ಆಧ್ಯಾತ್ಮಿಕ ಅಂಧಕಾರದ ಶಕ್ತಿಗಳು ಎಂಬುದು ನಮಗೆ ಗೊತ್ತಾಗುತ್ತದೆ. ಆದರೆ ಆ ಪಣಿಗಳು ದೇವತಾನ್ವೇಷಕರ ಹಾಗೂ ಯಾಜ್ಞಕರ ಮಾನವ್ಯ ಶತ್ರುಗಳಾಗಿದ್ದರೂ ಆಗಿದ್ದಾರು ಅಥವಾ ಆಧ್ಯಾತ್ಮಿಕ ಬೆಳಕಿನ ವೈರಿಗಳಾಗಿದ್ದರೂ ಆಗಿರಬಹುದು. ಇನ್ನೂ ಕೆಲವು ಸೂಕ್ತಗಳಲ್ಲಿ ಅವರು ಮಾನವ್ಯ ಶತ್ರುಗಳು ಅಥವಾ ಭೌತಿಕ ಬೆಳಕಿನ ಹಗೆಗಳು ಎನ್ನಿಸಲೇ ಆರರು-ಆದರೆ ಖಂಡಿತವಾಗಿಯೂ ಅವರು ಆಧ್ಯಾತ್ಮಿಕ ಬೆಳಕಿನ, ಆಧ್ಯಾತ್ಮಿಕ ಸತ್ಯದ, ಆಧ್ಯಾತ್ಮಿಕ ವಿಚಾರದ ಹಗೆಗಳಷ್ಟೇ ಆಗಿ ತೋರುತ್ತಾರೆ. ಈ ಸಂಗತಿಗಳಿಂದ ಒಂದೇ ಒಂದು ನಿಗಮನವು ಸಾಧ್ಯ-ಅದೇನೆಂದರೆ-ಅವರು ಯಾವಾಗಲೂ ಮತ್ತು ಕೇವಲ ಆಧ್ಯಾತ್ಮಿಕ ಬೆಳಕಿನ ರಿಪುಗಳು ಎಂಬುದೇ ಆಗಿದೆ.

V.14.4 ನೆಯ ಋಕ್ಕನ್ನು ಈ ದಸ್ಯುಗಳ ಸಾಮಾನ್ಯ ಲಕ್ಷಣಗಳಿಗೆ ಯಜಮಾನ ಜೀಗದ ಕೈಯನ್ನಾಗಿ ತೆಗೆದುಕೊಳ್ಳಬಹುದು : "ಜಾತನಾದ ಅಗ್ನಿಯು ಬೆಳಕಿನಿಂದ ಅಂದುಂತಮಃಸ್ವರೂಪರಾದ ದಸ್ಯುಗಳನ್ನು ಕೊಂದನು. ಅವನು ದನಗಳನ್ನು ಶೋಧಿಸಿದನು, ಜಲಗಳನ್ನು ಹುಡುಕಿ ತೆಗೆದನು, ಸ್ವರನ್ನು ನಿರಾವರಣ ಮಾಡಿದನು "ಅಗ್ನಿರ್ಜಾತೋ ಅರೋಚತ, ಘನ್ ದಸ್ಯೂನ್ ಜ್ಯೋತಿಷಾ ತಮಃ ಅವಿಂದದ್ ದಸ್ಯುಗಳಲ್ಲಿ ಎರಡು ಮಹಾ ವಿಭಾಗಗಳಿವೆ : ದನಗಳನ್ನೂ ನೀರನ್ನೂ ತಡೆದರೂ (ಕದ್ದೊಯ್ದರೂ) ಹೆಚ್ಚಾಗಿ ಅವರ ಸಂಬಂಧ ಬರುವುದು ದನಗಳನ್ನು ಹಿಂದಿರುಗಿ ಕೊಡೆವು ಎಂಬುದರಲ್ಲಿ. ಜಲವನ್ನೂ ಬೆಳಕನ್ನೂ ತಡೆಯುವ (ಅಡಗಿಸಿಡುವ) ವೃತ್ರರು ಜಲಬಂಧ ಮಾಡುವುದಕ್ಕೇ

ಹೆಚ್ಚು ಹೆಸರಾಂತವರು. ಅನಪವಾದವಾಗಿ ಎಲ್ಲ ದಸ್ಯುಗಳೂ ಸ್ವರಾರೋಹಣಕ್ಕೆ ವಿರುದ್ಧವಾಗಿ ದಾಲಿಗಡ್ಡ ನಿಲ್ಲುತ್ತಾರೆ ಮತ್ತು ಆರ್ಯ ಋಷಿಗಳು ಸಂಪತ್ತನ್ನು ಪಡೆಯುವುದನ್ನು ವಿರೋಧಿಸುತ್ತಾರೆ. ಬೆಳಕನ್ನು ಕೊಡುವುದಿಲ್ಲವೆನ್ನುವುದು ("ಸ್ವರ್‌ದೃಶ್") ಋಷಿಗಳ ಸ್ವರ್ ದರ್ಶನಕ್ಕೆ ವೃತ್ರರು ತೋರುವ ವಿರೋಧ, ಸೂರ್ಯದರ್ಶನವನ್ನು ವಿರೋಧಿಸುವುದು ಸೂರ್ಯದರ್ಶನಕ್ಕೆ ಆ ವೃತ್ರರ ಆತಂಕ ; ಸೂರ್ಯದರ್ಶನವು "ಉಪಮಾಕೇತುಃ" = ಅತ್ಯುನ್ನತ ಜ್ಞಾನದರ್ಶನ (V.34.9) ; ಜಲಪ್ರಧಾನ ನಿಷೇಧವು ಬೇಕಾದ ಹಾಗೆ ಸ್ವರ್‌ಲೋಕವು ಅಡ್ಡಾಡದಂತೆ ತಡೆಯುವುದಕ್ಕಾಗಿ ("ಸ್ವರ್ವತೀರ್ ಅಪಃ"=ಪರಸತ್ಯದ ಧಾರಾ ಪ್ರವಾಹಗಳು ಅಥವಾ ಚಲನಗಳು)- "ಋತಸ್ಯ ಪ್ರೇಷಾ ಋತಸ್ಯ ಧಾರಾ;" ; ಸಂಪದರ್ಜನೆಗೆ ದಸ್ಯುಗಳು ವಿರೋಧಿಸುವುದೆಂದರೆ ಬೇಕಾದಷ್ಟಿರುವ ಸ್ವರ್‌ಸಾರವಾದ - ವಸು, ಧನ, ವಾಜ, ಹಿರಣ್ಯ ಅರ್ಥಾತ್-ಸೂರ್ಯನಲ್ಲೂ ಜಲಗಳಲ್ಲೂ ಇರುವ ಮಹದೈಶ್ವರ್ಯವನ್ನು ಋಷಿಗಳು ಒಯ್ಯದಂತೆ ತಡೆಯುವುದು- "ಅಪ್ಸು ಸೂರ್ಯೇ ಮಹದ್ ಧನಂ" (VIII.68.9) ಇಷ್ಟಾದರೂ ಇಡೀ ಹೋರಾಟವು ಬೆಳಕು-ಕತ್ತಲೆಗಳ ನಡುವಣದ್ದಾದುದರಿಂದ, ಸತ್ಯಾಸತ್ಯಗಳ ಅಥವಾ ದಿವ್ಯ-ದಿವ್ಯೇತರ ಮಾಯೆಗಳ ನಡುವಿನದಾದುದರಿಂದ ಎಲ್ಲ ದಸ್ಯುಗಳನ್ನೂ ತಮಸ್ಸಿನೊಡನೆ ಇಲ್ಲಿ ಐಕ್ಯಗೊಳಿಸಲಾಗಿದೆ ಮತ್ತು ಅಗ್ನಿಯ ಹುಟ್ಟಿನಿಂದಲೂ ಅವನ ಹೊಳೆತದಿಂದಲೂ ಬೆಳಕು ಸ್ಪಷ್ಟವಾಗುತ್ತದೆ ; ಆ ಬೆಳಕಿನಿಂದ ಅವನು ದಸ್ಯುಗಳನ್ನೂ ಕತ್ತಲನ್ನೂ ಸಂಹರಿಸುತ್ತಾನೆ. ಕೇವಲ ಐತಿಹಾಸಿಕ ಅರ್ಥವಿವರಣೆ ಇಲ್ಲಿ ಸಾಕಾಗದು, ಹೊಂದದು. ನಾವು ಈ ಉಪಚ್ಛೇದವನ್ನು ಪ್ರತ್ಯೇಕಿಸಿ ಪ್ರತಿದಿನದ ಸೂರ್ಯೋದಯಕ್ಕೆ ಯಜ್ಞಾಗ್ನಿಯ ಮಿಂಚುಗಳು ಕಾರಣವೆಂದು ಹೇಳಿದರೆ ನಿಸರ್ಗಾರಾಧನಾವಾದದ ಪ್ರಕಾರ ಸರಿಯಾದೀತು. ಆದರೆ ನಾವು ತೀರ್ಮಾನಿಸಬೇಕಾದದ್ದು ಇಡಿ ವೇದದ ತುಲನಾತ್ಮಕ ಅಭ್ಯಾಸದ ಆಧಾರದ ಮೇಲೆ ಅಲ್ಲದೆ, ಅಸಂಗತ ಉಪಚ್ಛೇದಗಳ ಮೇಲಿನಿಂದಲ್ಲ.

ಮೂರನೆಯ ಮಂಡಲದ ಇನ್ನೊಂದು ಸೂಕ್ತದಲ್ಲಿ (೩೪) ಮತ್ತು III.34.ರಲ್ಲಿ "ಆರ್ಯಂ ವರ್ಣಂ" ಎಂಬ ಮಾತಿನ ಮೂಲಕ ಆರ್ಯರಿಗೂ ಪಣಿಗಳಿಗೂ ಯಾ ದಸ್ಯುಗಳಿಗೂ ನಡುವೆ ವಿರೋಧ ಉಂಟಾದುದರ ಉಲ್ಲೇಖವಿದೆ. ದಸ್ಯುಗಳೆಂದರೆ ಕತ್ತಲೆಂದು ಏಕೀಕರಿಸಿದ್ದನ್ನು ನಾವು ನೆನಪಿಟ್ಟುಕೊಳ್ಳಬೇಕು ; ಆದುದರಿಂದ ಆರ್ಯರನ್ನು ನಾವು ಬೆಳಕೆಂದು ತಿಳಿಯಬೇಕು. ಬೆಳಕಿನೊಡನೆ ಸಂಬಂಧಿಸಿಕೊಳ್ಳಬೇಕು. ಇದು ನ್ಯಾಯ. ಏಕೆಂದರೆ, ವೇದದಲ್ಲಿ ಸೂರ್ಯನ ಬೆಳಕನ್ನು ಸಾಕ್ಷಾತ್ತಾಗಿ "ಆರ್ಯಪ್ರಕಾಶ" ಎಂದು ಕರೆಯಲಾಗಿದೆ; ತದ್ವಿರುದ್ಧವಾದುದನ್ನು "ದಾಸತಮಸ್" ಎಂದು ಹೆಸರಿಸಲಾಗಿದೆ. ವಸಿಷ್ಠನು ಕೂಡಾ "ಜ್ಯೋತಿರಗ್ರರಾದ", ಬೆಳಕಿನಿಂದ ಒಯ್ಯಲ್ಪಡುವ ಮೂರು ಆರ್ಯ ಜನಾಂಗಗಳನ್ನು ಹೇಳುತ್ತಾನೆ- ಎದುರಿಗೆ ಬೆಳಕನ್ನಿಟ್ಟುಕೊಂಡವರು (VII.33.7). ಸಂಬಂಧಿಸಿದ ಸರ್ವೋಪಚ್ಛೇದಗಳನ್ನೂ ಪರಿಶೀಲಿಸಿ, ವಿಸ್ತಾರವಾಗಿ ಚರ್ಚಿಸಿ, ಕಾಠಿನ್ಯಗಳನ್ನು ಎದುರಿಸಿದಾಗ ಆರ್ಯ-ದಸ್ಯು ಪ್ರಶ್ನೆಯನ್ನು ಪರಿಪೂರ್ಣವಾಗಿ ಬಗೆಹರಿಸಬಹುದು. ಆದರೆ ನನ್ನ ಸದ್ಯದ ಉದ್ದೇಶಕ್ಕೆ ಇದು ಸಾಕಷ್ಟು ಆರಂಭ ಸಾಮಗ್ರಿಯನ್ನು ಒದಗಿಸುತ್ತದೆ. ವೇದದಲ್ಲಿ "ಋತಂ ಜ್ಯೋತಿಃ, ಹಿರಣ್ಯಂ ಜ್ಯೋತಿಃ" - ನಿಜವಾದ ಬೆಳಕು, ಬಂಗಾರದ ಬೆಳಕು ಎಂಬ ಪದಸಂಹತಿಗಳು ಇನ್ನೂ ಹೆಚ್ಚಿನ ಸೂಚನೆಗಳನ್ನು ಕೊಡುತ್ತವೆ. ಸೂರ್ಯನು ಪರಮಸತ್ಯದ ಒಡೆಯ, ಆದುದರಿಂದ ಅವನ ಬೆಳಕು ಋತ ಜ್ಯೋತಿಸ್ಸು.[೧] ಈ ಸತ್ಯ ಪ್ರಕಾಶವನ್ನೇ ಆರ್ಯನಾದ ದೇವ ಅಥವಾ ಮಾನವ

---

೧. ಆರ್ಯ, ಋತ, ಹಿರಣ್ಯ ಎಂಬೀ ಮೂರು ವಿಶೇಷಣಗಳೂ ಸಾಮಾನ್ಯವಾಗಿ ಸಮಾನಾರ್ಥಕಗಳೂ ಸೂರ್ಯನ ಬೆಳಕಿಗೆ ಅನ್ವಯಿಸಿದವುಗಳೂ ಆಗಿರುವುದರಿಂದ ಪರಸ್ಪರ ಅರ್ಥಪ್ರಕಾಶಕಗಳಾಗಿವೆ. - ಅನುವಾದಕ.

ಹೊಂದಿರುವುದು ; ಅದೇ ಅವನ (ಆರ್ಯತ್ವಕ್ಕೆ ನಿಕಷ) ಆರ್ಯತ್ವದ ತಿರುಳು. ಏಕೆಂದರೆ ಆ ತಿರುಳೆಂದರೆ ಸೂರ್ಯನಲ್ಲಿ ಇರುವ ಬೆಳಕೆಂಬ ಬಂಗಾರದ ಸಂಪತ್ತು, ಸ್ವರ್‌ನ ನೀರಿನಲ್ಲಿರುವ ಐಶ್ವರ್ಯ- "ಅಪ್ಸು ಸೂರ್ಯೇ". ಆದುದರಿಂದ "ಹಿರಣ್ಯಂ ಜ್ಯೋತಿಃ" ಎಂಬ ಪದಸಂಹತಿ ಇದೆ. ಈ ಸುವರ್ಣ ವರ್ಣದ ಅಥವಾ ಹೊಳೆಹೊಳೆವ ಬೆಳಕೇ ಬಣ್ಣ "ವರ್ಣ", ಸತ್ಯದ ವರ್ಣ. ಆರ್ಯನು ಗೆದ್ದುಕೊಂಡ ಆ ಹೊಳಪಿನ ವಿಚಾರಗಳ ಬಣ್ಣವೂ ಅದೇ ; ಬಣ್ಣದಲ್ಲಿ ಹೊಳೆವ ದನಗಳು ಶುಕ್ರ, ಶ್ವೇತ=ಬೆಳಕಿನ ಬಣ್ಣ. ತದ್ವಿರುದ್ಧವಾಗಿ, ದಸ್ಯುವು ಕತ್ತಲಿನ ಶಕ್ತಿಯಾದುದರಿಂದ ಬಣ್ಣದಲ್ಲಿ ಕಪ್ಪು. ಸತ್ಯದ ಬೆಳಕಿನ ಹೊಳಪು "ಜ್ಯೋತಿಃ ಆರ್ಯಂ" (X.43.4) ಎಂಬುದು ಆರ್ಯವರ್ಣ. ಈ ಆರ್ಯರ ಬಣ್ಣವು "ಜ್ಯೋತಿರಗ್ರಾಃ" ಬೆಳಕಿನದೆಂದು ನನ್ನ ಸೂಚನೆ. ಅಜ್ಞಾನದ ರಾತ್ರಿಯ ಕತ್ತಲೆಯ ಬಣ್ಣವೇ ಪಣಿಗಳ ಬಣ್ಣ, "ದಾಸವರ್ಣ". ಹೀಗೆ ವರ್ಣವು ಆ ಬಗೆಯ ಒಂದು ನಿಸರ್ಗ ಅಥವಾ ಅಂಥ ನಿಸರ್ಗದ (ಪ್ರಕೃತಿಯ) ಸಂಕೇತ ; ಹಳೆಯ ಆರ್ಯರಲ್ಲಿ ಈ ಭಾವವು ರೂಢಿಯಲ್ಲಿತ್ತು ಎಂಬುದನ್ನು ಉತ್ತರಕಾಲೀನವಾದ ಜಾತಿಗಳನ್ನು ವಿಂಗಡಿಸಲು ಬಳಸಲಾದ ಬಿಳುಪು, ಕೆಂಪು, ಹಳದಿ ಮತ್ತು ಕಪ್ಪು ಎಂಬ ವರ್ಣನಾಮಗಳು ಉದಾಹರಿಸುತ್ತವೆ ಎಂದು ನನಗೆ ತೋರುತ್ತದೆ.

V.34 ರಲ್ಲಿರುವ ಉಪಚ್ಛೇದವು ಹೀಗಿದೆ : "ಆತನು (ಇಂದ್ರನು) ಐದರಿಂದ ಯಾ ಹತ್ತರಿಂದ ಹತ್ತಲು ಬಯಸನು. ತಾನು ಬೆಳೆದು ಬಲಿಷ್ಠನಾದ ಮೇಲೂ ಯಾರು ಇಂದ್ರನಿಗೆ ಸೋಮವನ್ನು ಕೊಡುವುದಿಲ್ಲವೋ ಅವನನ್ನು ಇಂದ್ರನು ಹಚ್ಚಿಕೊಳ್ಳುವುದಿಲ್ಲ ; ಅಂಥವನನ್ನು ಇಂದ್ರನು ಸೋಲಿಸುತ್ತಾನೆ ಅಥವಾ ಉದ್ರಿಕ್ತಭಾವವಿದ್ದಾಗ ಕೊಂದೇ ಹಾಕುತ್ತಾನೆ. ದೇವಶೋಧಕನಿಗೆ ಅವನು ದನಗಳಿಂದ ತುಂಬಿದ ಹಟ್ಟಿಯನ್ನು ಸುಖಪಡಲಿ ಎಂದು ಕೊಡುತ್ತಾನೆ. ಇಂದ್ರನು ಯುದ್ಧದ ಹೊಡೆತದಲ್ಲಿ ಶತ್ರುವನ್ನು ಭೇದಿಸುತ್ತಾನೆ ; ಚಕ್ರಾಯುಧವನ್ನವನು ಗಟ್ಟಿಯಾಗಿ ಹಿಡಿದಿದ್ದಾನೆ ; ಸೋಮದಾನ ಮಾಡದವನ ಬಗೆಗೆ ತಿರಸ್ಕಾರ ತಾಳುತ್ತಾನೆ ; ಸೋಮದಾನಿಯನ್ನು ವೃದ್ಧಿಗೊಳಿಸುತ್ತಾನೆ- ಇಂದ್ರನು ಭಯಂಕರನು-ಎಲ್ಲರನ್ನೂ ಅವನು ಪಳಗಿಸುತ್ತಾನೆ, ವಿಧೇಯರನ್ನಾಗಿ ಮಾಡುತ್ತಾನೆ ; ಆರ್ಯನಾದ ಅವನು ದಸ್ಯುವನ್ನು ಸಂಪೂರ್ಣ ದಾಸ್ಯಕ್ಕೆ ತರುತ್ತಾನೆ, ಸೇವಕತ್ವಕ್ಕೆ ಇಳಿಸುತ್ತಾನೆ. ಅವನು ರಥಾರೂಢನಾಗಿ ಬಂದು ಪಣಿಯಿಂದ ಪಣಿಯು ಅನುಭವಿಸುತ್ತಿದ್ದ ಸಂಪತ್ತನ್ನು ಕಸಿದುಕೊಂಡು, ಕದ್ದುಕೊಂಡು ಬಂದು, (ಸೋಮ) ದಾತನಿಗೆ ವೀರಶಕ್ತಿಯುಕ್ತವಾದ ಅದೆಲ್ಲವನ್ನೂ ಕೊಟ್ಟು ಬಿಡುತ್ತಾನೆ-ಸೋಮದಾತನು ಅದೆಲ್ಲವನ್ನೂ ಅನುಭವಿಸಿ ಸುಖಪಡಲಿ ಎಂದು. ಅಕ್ಷರಶಃ ಆ ಸಂಪತ್ತೆಂದರೆ, ಮಾನವರಲ್ಲಿ "ಸೂನರಂ ವಸು, ವೀರಾಃ" ಮತ್ತು "ನೃ" ಎಂಬುದನ್ನು ಪದೇಪದೇ ಪರ್ಯಾಯವಾಗಿ ಬಳಸಲಾಗಿದೆ. ಇಂದ್ರನ ಬಲಕ್ಕೆ ಸಿಟ್ಟು ಬರುವಂತೆ ಮಾಡಿದವನನ್ನು ಕಷ್ಟಕರ ಪ್ರಯಾಣದಿಂದ ("ದುರ್ಗೇಚನ[೧] ಧ್ರಿಯತೇ ಆ ಪುರು") ಬಹುವಿಧವಾಗಿ ತಡೆ ಹಿಡಿಯಲಾಗುತ್ತದೆ. ಇಬ್ಬರು ಹೊಳೆವ ದನಗಳಿಂದ ಐಶ್ವರ್ಯವಂತರಾಗಿರುವುದೂ ಸೇನಾಯುಕ್ತರಾಗಿರುವುದೂ ಗೊತ್ತಾದ ಕೂಡಲೇ, ಮಘವಂತನಾದ ಇಂದ್ರನು ಮೂರನೆಯವನನ್ನು ತನ್ನ ನೆರವಿಗೆ ಕರೆದುಕೊಂಡು ಉದ್ವಿಗ್ನ ಉನ್ಮಾದದಿಂದ ಧಾವಿಸಿ ತನ್ನ ಯೋಧರ ಸಹಾಯದಿಂದ ಆ ದನದ ಗೋಲೆಗಳನ್ನು ದಾಬುಬಿಡಿಸಿ ("ಗವ್ಯಂ") ಮೇಲಕ್ಕೆ ಅಟ್ಟಿ ಬಿಡುತ್ತಾನೆ." ಮತ್ತು ಸೂಕ್ತದ ಕೊನೆಯ ಋಕ್ಕು ಆರ್ಯನು

---

೧. ಅತ್ಯುನ್ನತ ಆನಂದಕ್ಕೆ ಏರುವ ತಮ್ಮ ದಾರಿಯನ್ನು ನಿಷ್ಕಂಟಕವೂ ಸುಗಮವೂ ಆಗುವಂತೆ ಮಾಡಲು ಋಷಿಗಳು ("ದುರ್ಗದ" ವಿರುದ್ಧವಾಗಿ 'ಸುಗ'ಗೊಳಿಸಲು) ದೇವತೆಗಳನ್ನು ಯಾವಾಗಲೂ ಪ್ರಾರ್ಥಿಸುತ್ತಾರೆ. "ಪುರು"-ಬಹಳ ಅಪಾಯಗಳಿಂದ ಕೂಡಿದುದು. ಮತ್ತು ನರಳಾಟ ಹಾಗೂ ತೊಂದರೆಗಳಿಂದ ಕೂಡಿದುದು "ದುರ್ಗ."

(ಆರ್ಯ ದೇವ ಯಾ ಆರ್ಯಮಾನವ) ಅತ್ಯುತ್ತುಂಗ ಜ್ಞಾನ(ಶಿಖರ)ದ ದರ್ಶನವನ್ನು ಪಡೆಯುತ್ತಾನೆ ("ಉಪಮಾಂ ಕೇತುಂ ಆರ್ಯಃ") ಎಂದು ಹೇಳುತ್ತದೆ - ಆಗ ಅವನನ್ನು ಜಲಗಳು ತಮ್ಮ ಸಂಗಮದಲ್ಲಿ ಹೊರೆಯುತ್ತವೆ ಮತ್ತು ಬಲಿಷ್ಠವೂ ಪ್ರಜ್ವಲವೂ ಆದ ಯುದ್ಧಬಲವನ್ನು ಅವನು ಇಟ್ಟುಕೊಂಡಿರುತ್ತಾನೆ- "ಕ್ಷೇತ್ರಂ ಅಮವತ್ ತ್ವೇಷಂ" (ಋಕ್ ೫-೯)

ಈ ಸಂಕೇತಗಳ ಬಗೆಗೆ ನಮಗೆ ಆಗಲೇ ತಿಳಿದ ಸಂಗತಿಗಳ ಮೇಲಿನಿಂದ ಸೂಕ್ತದ ಒಳ ಅರ್ಥವನ್ನು ನಾವು ಸುಲಭವಾಗಿ ಗ್ರಹಿಸಬಹುದು. ದಿವ್ಯ ಮನಃಶಕ್ತಿಯಾದ ಇಂದ್ರನು ಪಣಿ-ವೃತ್ರರು ಶ್ರೀಮಂತರೂ ಅಭಿವೃದ್ಧಿ ಹೊಂದಿದವರೂ ಆದರೂ ಅವರ ಮಿತ್ರನಾಗುವುದಿಲ್ಲ - ಏಕೆಂದರೆ, ಅವರು ಅಜ್ಞಾನದ ಶಕ್ತಿಗಳು ; ಆದ್ದರಿಂದ ಅವರ ಗುಪ್ತ ಆಸ್ತಿಯನ್ನು ಅವನು ಕಸಿದುಕೊಳ್ಳುತ್ತಾನೆ ; ಕಾರಾಗೃಹೀತ ಗೋವ್ರಜಗಳನ್ನು ಅವನು ಬಿಡಿಸುತ್ತಾನೆ. ಆ ಗೋಗಳು ಪ್ರತಿಭಾಸಿತ ಉಷೆಗೆ ಸೇರಿದವುಗಳು. ದೇವತೆಗಳನ್ನು ಬಯಸುವ ಯಾಜ್ಞಿಕನಿಗೆ ಅವುಗಳನ್ನವನು ಕೊಡುತ್ತಾನೆ. ಅಜ್ಞಾನದ ಜೀವನವನ್ನು ಸಂಪೂರ್ಣವಾಗಿ ವಶಪಡಿಸಿಕೊಂಡು ಅವನು ಅದರ ವಶದಲ್ಲಿದ್ದ ಎಲ್ಲ ಸಂಪತ್ತನ್ನು ಸುಜ್ಞಾನ ಜೀವನ ನಡೆಸುವವರಿಗೆ ಕೊಡುತ್ತಾನೆ ಎಂಬುದು ತಾತ್ಪರ್ಯ. "ಆರ್ಯ" ಮತ್ತು "ಅರ್ಯ" ಎಂಬ ಪದಗಳನ್ನು ದೇವತೆಗಳಿಗೆ ಅನ್ವಯಿಸಿ ಬಳಸಿರುವುದರಿಂದ_ಅಂಥ ಪ್ರಯೋಗವು ಆ ಅರ್ಥದಲ್ಲಿ ಇಲ್ಲಷ್ಟೇ ಅಲ್ಲದೆ ಇತರ ಎಲ್ಲ ಉಪಭೇದಗಳಲ್ಲೂ ಹಾಗೇ ಬಳಸಿರುವುದರಿಂದ-ಆರ್ಯ ಮತ್ತು ದಸ್ಯು ಎಂಬ ಪದಗಳು ರಾಷ್ಟ್ರೀಯತೆಯ ಅಥವಾ ಕುಲೀನತೆಯ ವಾಚಕಗಳೇ ಅಲ್ಲ - ಅದಕ್ಕೂ ಹೆಚ್ಚು ಆಳವಾದ ಅರ್ಥ ಆ ಪದಗಳಿಗಿವೆ ಎಂಬುದು ತೋರಿಬರುವ ಲಕ್ಷಣ ಕಾಣುತ್ತದೆ. ಯೋಧರು ಖಂಡಿತವಾಗಿಯೂ ಏಳು ಜನ ಅಂಗಿರಸರೇ. ಏಕೆಂದರೆ "ಸತ್ವಭಿಃ" ಎಂದು ಸಾಯಣನು ಇಂದ್ರ ಸಹಾಯಕರನ್ನು ಹೇಳುವುದು ಅವರನ್ನು ಕುರಿತಲ್ಲದೆ ಮರುತ್ತುಗಳ ಕುರಿತು ಅಲ್ಲವೇ ಅಲ್ಲ. ಅವರೇ ದನಗಳನ್ನು ಬಿಡಿಸಿಕೊಂಡು ಬರುವುದರಲ್ಲಿ ಇಂದ್ರನಿಗೆ ನೆರವೀಯುವವರು. ಆದರೆ ಶುಭ್ರ ಗೋಗಳ ನಡುವೆ ಹೊಕ್ಕಾಗ ಇಂದ್ರನು ಕಾಣುವ ಮೂವರನ್ನು ಮಾತ್ರ ಗುರುತಿಸುವುದು ಕಷ್ಟ. ಬಹುಶಃ ಈ ಮೂವರಿಂದಲೇ ಅಂಗಿರಸಜ್ಞಾನದ ಏಳು ಕಿರಣಗಳು ಹತ್ತಕ್ಕೆ ಏರಿಸಲ್ಪಟ್ಟಿರಬೇಕು. ಅದರಿಂದಲೇ ಅವರು ಜಯಪ್ರದವಾಗಿ ಹತ್ತು ತಿಂಗಳುಗಳನ್ನು ಮುಗಿಸಿ ಸೂರ್ಯನನ್ನೂ, ಹಸುಗಳನ್ನೂ ಪಣಿಗಳಿಂದ ಬಿಡಿಸಿಕೊಳ್ಳಲು ಶಕ್ತರಾಗುತ್ತಾರೆ. ಏಕೆಂದರೆ, ಆ ಇಬ್ಬರನ್ನು ತಿಳಿದು ಮೂರನೆಯವನ ನೆರವು ಪಡೆದ ಬಳಿಕ ಇಂದ್ರನು ಪಣಿಗಳ ಕೈಯಿಂದ ದನಗಳನ್ನು ಬಿಡಿಸಿಕೊಳ್ಳುತ್ತಾನೆ. ಆ ಮೂವರು ಆರ್ಯರ ಮೂರು ಜನಾಂಗಗಳನ್ನು ಸಂಕೇತಿಸಲೂಬಹುದು. ಈ ಮೂರು ಆರ್ಯಜನಾಂಗದವರು ಬೆಳಕಿನ ಮಾರ್ಗದರ್ಶನದಲ್ಲಿ ಮೂರು ಸ್ವರ್‌ಲೋಕಗಳತ್ತ ಹೋಗುವವರಾಗಿರಬಹುದು. ಏಕೆಂದರೆ, "ಉಪಮಾಕೇತುಃ" - ಅತ್ಯುಚ್ಚ ದರ್ಶನವನ್ನು ಪಡೆಯುವುದೇ ಅವರ ಕರ್ಮದ ಆತ್ಯಂತಿಕ ಫಲ ಮತ್ತು ಈ ಅತ್ಯುಚ್ಚ ಜ್ಞಾನ ದರ್ಶನವು ಸ್ವರ್‌ದರ್ಶನವುಳ್ಳದ್ದು, ಅಲ್ಲದೆ, ತನ್ನ ಜ್ಯೋತಿರ್ ಲೋಕತ್ರಯದಲ್ಲಿ ನಿಲ್ಲುವಂಥದು - "ರೋಚನಾನಿ"- (III.2.14) "ಸ್ವರ್‌ದೃಶಂ ಕೇತುಂ ದಿವೋ ರೋಚನಸ್ಥಾಂ ಉಷರ್‌ಬುಧಂ = ಸ್ವರ್‌ನ್ನು ನೋಡುವ ಜ್ಞಾನದರ್ಶನವು ಪ್ರಕಾಶ ಪ್ರಪಂಚದಲ್ಲಿ ನಿಂತಿರುವುದು ಮತ್ತು ಉಷಃ ಕಾಲದಲ್ಲಿ ಎಚ್ಚೆತ್ತುಕೊಳ್ಳುವುದು.

III.34 ರಲ್ಲಿ ವಿಶ್ವಾಮಿತ್ರನು "ಆರ್ಯವರ್ಣ" ಎಂಬ ಮೇಳ ನುಡಿಯನ್ನು ಬಳಸುತ್ತಾನೆ ; ಅದೇ ಕಾಲದಲ್ಲದು ಮಾನಸಶಾಸ್ತ್ರೀಯ ಅರ್ಥವನ್ನೂ ಹೊಂದಿರುತ್ತದೆ. ಸೂಕ್ತದ ಮೂರು ಪದ್ಯಗಳು (ನುಡಿಗಳು, ಸೊಲ್ಲುಗಳು) (೮-೧೦) ಈ ಕೆಳಗಿನಂತಿವೆ: "(ಅವರು) ಅತ್ಯಪೇಕ್ಷಣೀಯನೂ,

ನಿತ್ಯಜಂಯಿಯೂ ಶಕ್ತಿದಾತನೂ ಸ್ವರ್ ವಿಜಂಯಿಯೂ ದಿವ್ಯ ಜಲಗಳನ್ನು ಗೆದ್ದು ಬಿಡಿಸುವವನೂ ಆದವನನ್ನು (ಸೂಕ್ತದಿಂದ) ಸ್ತುತಿಸುತ್ತಾರೆ. ಇಂದ್ರನೆದ್ದಾಗ ಚಿಂತಕರಿಗೆ ಸಂತೋಷವಾಗುತ್ತದೆ ; ಏಕೆಂದರೆ ಅವನು ದ್ಯಾವಾಪೃಥಿವಿಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳುತ್ತಾನೆ. ಇಂದ್ರನು ಕುದುರೆಗಳನ್ನು ವಶಪಡಿಸಿಕೊಳ್ಳುತ್ತಾನೆ, ಸೂರ್ಯನನ್ನು ಗೆದ್ದುಕೊಳ್ಳುತ್ತಾನೆ, ಬಹುಸುಖದಾತ್ರಿಯಾದ ದನವನ್ನು ಜಂಯಿಸಿ ಪಡೆದುಕೊಡುತ್ತಾನೆ ; ಅವನು ಬಂಗಾರದಂಥ ಭೋಗ್ಯವನ್ನು ದೊರಕಿಸಿಕೊಡುತ್ತಾನೆ ; ದಸ್ಯುಗಳನ್ನು ಕೊಂದು ಆರ್ಯ ವರ್ಣವನ್ನು ಹೊರೆಯುತ್ತಾನೆ (ಯಾ ಕಾಯುತ್ತಾನೆ) ; ಇಂದ್ರನು ಓಷಧಿಗಳನ್ನು ಹಗಲುಗಳನ್ನೂ ಗೆಲ್ಲುತ್ತಾನೆ, ಮರಗಳನ್ನೂ ಅಂತರಿಕ್ಷವನ್ನೂ ಪಡೆಯುತ್ತಾನೆ ; ಅವನು ವಲನನ್ನು ಒತ್ತಾಯಿಸಿ ಎದುರು ಕರೆಸಿ ಚುಚ್ಚುತ್ತಾನೆ ; ಆ ಇಂದ್ರನು ಮಂತ್ರಪಾಠಕನು. ಆದುದರಿಂದ ಅವನು ತನ್ನ ವಿರುದ್ಧವಾಗಿ ("ಅಭಿಕ್ರತೂನಾಂ") ಕರ್ಮದಲ್ಲಿ ವಿರುದ್ಧ ಸಂಕಲ್ಪ ತಾಳಿದವರನ್ನು ಹದ ಮಾಡುತ್ತಾನೆ." ಆರ್ಯನಿಗಾಗಿ ಇಂದ್ರನು ಗೆದ್ದ ಎಲ್ಲ ಸಂಪತ್ತಿನ ಸಾಂಕೇತಿಕ ಅಂಶಗಳಿರುವುವಲ್ಲದೆ, ಆ ಸಂಪತ್ತಿನಲ್ಲಿ ಸೂರ್ಯ, ಹಗಲು, ಭೂಮಿಸ್ವರ್ಗಗಳು (ಆಗಸಗಳು), ಅಂತರಿಕ್ಷ, ಕುದುರೆಗಳು, ಭೂವೃದ್ಧಿಗಳೂ (ಭೂಫಲಗಳು) ಸಸ್ಯಗಳು, ಮರಗಳು, ("ವನಸ್ಪತೀನ್") - ಉಭಯಾರ್ಥಗಳಲ್ಲಿ ; ಅರ್ಥಾತ್, ಕಾಡುಗಳ ಒಡೆಯರು ಮತ್ತು ಭೋಗಗಳ ಒಡೆಯರು ಎಂದು ಮತ್ತು ವಲ-ದಸ್ಯುಗಳ ವಿರುದ್ಧವಾಗಿ "ಆರ್ಯವರ್ಣ"ವಿದೆ.

ಆದರೆ ಇದರ ಹಿಂದಿನ ಪದ್ಯಗಳಲ್ಲಿ (ಋಕ್ಕುಗಳಲ್ಲಿ) ೪, ೫, ೬ ರಲ್ಲಿ- ವರ್ಣವೆಂಬ ಪದ ಆಗಲೇ ಬಂದಿದೆ. ಅದರ ಅರ್ಥವು "ಆರ್ಯವಿಚಾರಗಳ ಬಣ್ಣ" ಎಂದು - ಅಂದರೆ, ಆರ್ಯ ವಿಚಾರಗಳು ಸತ್ಯವೂ ಜ್ಯೋತಿರ್ಮಯವೂ ಆಗಿವೆ ಎಂದರ್ಥ. "ಸ್ವರ್ಜಯಿಯಾದ ಇಂದ್ರನು, ಹಗಲ ಹಡೆವ ಇಂದ್ರನು, ಅಂಗಿರಸೇಚ್ಛಾನುಸಾರ, ದಸ್ಯು ಸೈನ್ಯವನ್ನು ಬಡಿದು ಸೋಲಿಸಿದನು (ಗೆದ್ದನು). "ಕೇತುಮಹ್ನಾಂ"= ಹಗಲುಗಳ ಜ್ಞಾನದರ್ಶನವನ್ನು ಮಾನವನಿಗಾಗಿ ಹೊಳೆಯುವಂತೆ ಮಾಡಿದನು. ಪರಂಜ್ಯೋತಿಯನ್ನು ಅವನು ವಿಸ್ತಾರ ಭೋಗಕ್ಕಾಗಿ ಕಂಡುಹಿಡಿದನು.... ಅವನು ತನ್ನ ಉಪಾಸಕನಿಗಾಗಿ ಈ ವಿಚಾರಗಳನ್ನು ಜ್ಞಾನದಲ್ಲಿ ಜಾಗರಿಸಿದನು. (ದಸ್ಯು ವಿಘ್ನಗಳನ್ನು ಮೀರಿ) ಅವನು (ವಿಚಾರಗಳ) ಈ ಉಜ್ವಲ ವರ್ಣವನ್ನು ಮುಂದಕ್ಕೆ ತಂದನು - "ಅಚೇತಯದ್ ಧಿಯಾ ಇಮಾ ಜರಿತ್ರೇ, ಪ್ರ ಇಮಂ ವರ್ಣಂ ಅತಿರಚ್ ಛುಕ್ರಮ್ ಆಸಾಮ್". ಅವರು ಇಂದ್ರನ ಅನೇಕ ಪರಿಪೂರ್ಣ ಮಹತ್ಕಾರ್ಯಗಳನ್ನು ಪ್ರಶಂಸಿಸಿದರು ಯಾ ಕಾರ್ಯರೂಪಕ್ಕಿಳಿಸಿದರು. ಅವನ ಬಲದಿಂದ ಅವನು ಬಗ್ಗು ಬಡಿಯುತ್ತಾನೆ ; ಮೇರೆ ಮೀರುವ ಶಕ್ತಿಯಿಂದ ಮತ್ತು ತನ್ನ ಜ್ಞಾನಕಾರ್ಯಗಳಿಂದ (= "ಮಾಯಾಭಿಃ") ವಕ್ರ ಸ್ವಭಾವದ ದಸ್ಯುಗಳನ್ನು ಅವನು ಹಣಿಯುತ್ತಾನೆ.:"

"ಕೇತುಮಹ್ನಾಂ"= ಹಗಲುಗಳ ಜ್ಞಾನದರ್ಶನ - ಎಂಬ ವೇದ ಪದಸಂಹತಿ ನಮಗೆ ದೊರಕುತ್ತದೆ. ವಿಸ್ತಾರವಾದ ಮೋಕ್ಷಾನಂದಕ್ಕೆ ಒಯ್ಯುವ ಸತ್ಯಸೂರ್ಯನ ಬೆಳಕೆಂದು ಅದರ ಅರ್ಥ. ಈ ಹಗಲುಗಳು ಯಾವುವು? ಇಂದ್ರನು ಮೊದಲು ಅಂಗಿರಸರ ನೆರವಿನಿಂದ ಪಣಿ ಸೇನೆಗಳನ್ನು ನಾಶ ಮಾಡಿದನು ; ಅನಂತರ ಸೂರ್ಯನು ಮೇಲೇರಿದನು ; ಆಮೇಲೆ ಹೊಳೆವ ಹಸುಗಳೂ ಹೊರಬಿದ್ದವು - ಅದಾದ ಬಳಿಕ ಮಾನವನಿಗಾಗಿ ಇಂದ್ರನು ಸ್ವರ್‌ಲೋಕವನ್ನು ಗೆದ್ದು ಆ ಮೂಲಕ ಉಕ್ತ "ದಿನಗಳನ್ನು" ಸೃಜಿಸಿದ್ದು. ದೇವತೆಗಳಿವೆಲ್ಲವನ್ನೂ ಮಾನವನ ಶಕ್ತಿಗಳ ಮೂಲಕ ಮಾನವನಿಗಾಗಿ ಮಾಡುತ್ತಾರೆ ; ಅವರು ತಮಗಾಗಿ ಮಾಡರು ; ಏಕೆಂದರೆ ಇವೆಲ್ಲವೂ ಅವರಲ್ಲಿ ಆಗಲೇ ಇದ್ದು ಬಿಟ್ಟಿವೆ- ಇಂದ್ರನು ನೃ=ದಿವ್ಯ ಮಾನವ ಯಾ ದಿವ್ಯ ಪುರುಷ, ಆ ಗಂಡಸುತನದ ವಿವಿಧ ಬಲಗಳನ್ನು ಅವನು ಪಡೆದಿದ್ದಾನೆ- "ನೃವದ್.... ನರ್ಯಾ ಪುರೂಣಿ". ಇಂದ್ರನು ಜ್ಞಾನದಲ್ಲಿ ಜಾಗರಿಸಿಕೊಳ್ಳುತ್ತಾನೆ

: ಏನನ್ನು? ಪಣಿಗಳಿಂದ ಮುಕ್ತಗೊಳಿಸಲಾದ ಹೊಳೆವ ಹಸುಗಳ ರೂಪದಲ್ಲಿ ಸಂಕೇತಿತವಾದ ವಿಚಾರಗಳನ್ನು. ಈ ವಿಚಾರಗಳ ಹೊಳೆವ ಬಣ್ಣವು, "ಶುಕ್ರಂ ವರ್ಣಂ ಆಸಾಂ" ೯ನೆಯ ಋಕ್ಕಿನಲ್ಲಿ ಹೇಳಲಾದ "ಶುಕ್ರ ಯಾ ಶ್ವೇತ" ಎಂಬ ಆರ್ಯವರ್ಣವೇ ಆಗಿದೆ. ಇಂದ್ರನು ಪಣಿಗಳ ವಿರೋಧದ ಆಚೆಗೆ ಈ ವಿಚಾರಗಳ ಬಣ್ಣವನ್ನು ಎತ್ತಿ ಒಯ್ಯುತ್ತಾನೆ - "ಪ್ರವರ್ಣಂ ಅತಿರಚ್ ಛುಕ್ರಂ" ; ಹಾಗೆ ಮಾಡುವ ಮೂಲಕ ಆತನು ದಸ್ಯುಗಳನ್ನು ಸಂಹರಿಸುತ್ತಾನೆ ಮತ್ತು "ಆರ್ಯವರ್ಣವನ್ನು" ರಕ್ಷಿಸುತ್ತಾನೆ ಯಾ ಹೊರೆಯುತ್ತಾನೆ ಮತ್ತು ಅಭಿವೃದ್ಧಿಗೊಳಿಸುತ್ತಾನೆ- "ಹತ್ವೀ ದಸ್ಯೂನ್ ಪ್ರ ಆರ್ಯಂ ವರ್ಣಂ ಆವತ್". ಇಷ್ಟೇ ಅಲ್ಲದೆ, ಈ ದಸ್ಯುಗಳು ವಕ್ರಗಳು, ಅಸಡ್ಡಾಳಗಳು, ಯದ್ವಾತದ್ವಗಳು, ಸೊಟ್ಟಂಪಟ್ಟಗಳು - "ವೃಜಿನಾನ್" - ಮತ್ತು ಇಂದ್ರನ ಕ್ರತುಗಳಿಂದಲೋ ಜ್ಞಾನಾಕೃತಿಗಳಿಂದಲೋ ಇವರು ಜಿತರು. ಅವನ ಜ್ಞಾನಾಕೃತಿಗಳನ್ನು ಮಾಯೆಗಳೆನ್ನುತ್ತಾರೆ. ಬೇರೆಯ ಕಡೆಗೆ ನಮಗೆ ಋಷಿಗಳು ದಸ್ಯು-ವೃತ್ರ-ವಲರ ಮಾಯೆಗಳನ್ನು ಇಂದ್ರನು ಸೋಲಿಸುತ್ತಾನೆ ಎಂದು ಹೇಳಿದ್ದಾರೆ. ಋಜುಗಳೂ ಅನೃಜುಗಳೂ ವೇದದಲ್ಲಿ ಅನುಕ್ರಮವಾಗಿ ಸತ್ಯಾನೃತಗಳಿಗೆ ಸಮಾನಾರ್ಥಕಗಳು. ಆದುದರಿಂದ ಈ ಪಣಿ ದಸ್ಯುಗಳು ಅನೃತ-ಅಜ್ಞಾನಗಳ ಶಕ್ತಿಗಳು, ಅವುಗಳ ಸುಳ್ಳು ಕಸುವುಗಳು, ಸುಳ್ಳು ಸಂಕಲ್ಪಗಳು, ಸುಳ್ಳುಕರ್ಮಗಳು. ಅವರವುಗಳನ್ನು ದೇವತೆಗಳ ಮತ್ತು ಆರ್ಯರ ನಿಜಜ್ಞಾನ ನಿಜಶಕ್ತಿ, ನಿಜಸಂಕಲ್ಪ ಹಾಗೂ ನಿಜಕರ್ಮಗಳ (ಯಜ್ಞಗಳ) ವಿರುದ್ಧ ಎತ್ತಿ ಕಟ್ಟುತ್ತಾರೆ. ಜ್ಯೋತಿರ್ಜಯವೆಂದರೆ ಈ ಆಸುರೀಯ ಯಾ ಅನೃತ ಜ್ಞಾನದ ಕತ್ತಲ ವಿರುದ್ಧವಾಗಿ ಪರಮಸತ್ಯದ, ದಿವ್ಯಜ್ಞಾನದ ಜಯವೆಂದರ್ಥ. ಆ ವಿಜಯವೇ ಮಹಾಸೂರ್ಯನ ಉದ್ಗಮನ, ಮಹಾದಿನಗಳ ಜನನ, ಮಹೋಷೆಯ ಆಗಮನ, ಪ್ರಕಾಶಮಾನ ಕಿರಣವ್ರಜಗಳ ಮುಕ್ತಿ ಮತ್ತು ಅವುಗಳು ಮಹಾಜ್ಯೋತಿರ್ಲೋಕಕ್ಕೆ ಮಾಡಿದ ಆರೋಹಣ.

IX.111 ಎಂಬ ಸೋಮಸೂಕ್ತದಲ್ಲಿ ದನಗಳು ಪರಮಸತ್ಯದ ವಿಚಾರಗಳು (ಆಲೋಚನೆಗಳು) ಎಂದು ಸಾಕಷ್ಟು ಸ್ಪಷ್ಟವಾಗಿ ಹೇಳಲಾಗಿದೆ : "ಮಹಾಸೂರ್ಯನು ತನ್ನ ರಥಕ್ಕೆ ತಾನೇ ಕಟ್ಟಿದ ಕುದುರೆಗಳಂತೆ, ಅವನು ಈ ಪ್ರಖರ ಬೆಳಕಿನಲ್ಲಿ ತನ್ನನ್ನು ಶುದ್ಧೀಕರಿಸಿಕೊಂಡು ತಾನೇ ತನ್ನ ತೇರಿಗೆ ಕಟ್ಟಿದ ಕುದುರೆಗಳ (ಸಾರಥಿಯಾಗಿ) ಎಲ್ಲಾ ಶತ್ರು ಸೈನ್ಯಗಳನ್ನು (ಎಲ್ಲಾ ಪ್ರಣೋದಕರನ್ನೂ) ಬದಿಗಳಿಗೆ ಸರಿಸಿ ಬರುತ್ತಾನೆ. ಆ ಸೋಮನು ಸೋಮಲತಾರಸ ಸ್ವರೂಪನಾಗಿ ಬೆಳಗುತ್ತಾನೆ ; ಸೋಮನು ಹೊರಹಿಂಡಲ್ಪಟ್ಟು ಪ್ರವಾಹವಾಗಿ ಝುಗಝುಗಿಸುತ್ತಾನೆ. ಅವನು ಕಂಚು ಮಿಂಚಾದನು, ಪ್ರಜ್ವಲಿಸಿದನು- ಋಕ್ ಪಾರಕರಾದ, ಋಗುದ್ಗಾರಿಗಳಾದ ಸಪ್ತಾಸ್ಯ ಅಂಗಿರಸ ಶಕ್ತಿಗಳೊಡನೆ ವಸ್ತುರೂಪಗಳೆಲ್ಲವನ್ನು ಆವರಿಸಿ ರಾರಾಜಿಸುತ್ತಾನೆ. ಎಲೈ ಸೋಮನೇ, ನೀನು ಪಣಿಗಳ ಆ ಐಶ್ವರ್ಯವನ್ನು ಶೋಧಿಸುತ್ತೀಯೆ ; ನಿನ್ನ ಮನೆಯಲ್ಲಿ, ಸ್ವರ್ಧಾಮದಲ್ಲಿ, ಧಾಮಗತ ಮಹಾಸತ್ಯವಿಚಾರಗಳ ಮೂಲಕ, ಮಹಾ ಮಾತೃಗಳ ಮೂಲಕ ನಿನ್ನನ್ನು ಶುಭ್ರೀಕರಿಸಿಕೊಳ್ಳುವೆ (ಪಣಿಗಳ ದನಗಳನ್ನು ಪದೇ ಪದೇ ಇತರ ಸೂಕ್ತಗಳಲ್ಲಿ ಹಾಗೆ ಚಿತ್ರಿಸಲಾಗಿದೆ)- "ಸಂಮಾತೃಭಿಃ ಮಾರ್ಜಯಸಿ ಸ್ವ ಆ ದಮೇ ಋತಸ್ಯ ಧೀತಿಭಿರ್ ದಮೇ". ಪರಮಸತ್ಯದ ವಿಚಾರಗಳು ಎಲ್ಲಿ ಸಂಮೋದ ತಾಳುವುವೋ ಆ ಸ್ವರ್ಲೋಕವು (ಪರಾವತಃ= ಮೇಲ್ಮಟ್ಟದ ಪ್ರಜ್ಞಾಪ್ರಪಂಚದ ಸ್ತರದಲ್ಲಿವೆ) ಸಮಾನ ಸಾಫಲ್ಯ ಹೊಂದಿದೆ ("ಸಮಾನೇ ಊರ್ವೇ= ಸಮತಟ್ಟಾದ ವಿಸ್ತಾರದಲ್ಲಿ, ಹರಹಿನಲ್ಲಿ, ಬಯಲಿನಲ್ಲಿ) ಎಂದು ಹೇಳಲಾದ ಸಮ, ಉನ್ನತಲೋಕದ ಸಾಮ್ಯ, ಎಂಬಂತಿದೆ. ಅವನು ಆ ತ್ರಿಪುಟ ಪ್ರಪಂಚದ (ಯಾ ತ್ರಿಗುಣೀಭೂತ ಮೂಲ ಪ್ರಕೃತಿಯ) ಅಂಶುಮಂತರಿಂದ ವಿಸ್ತಾರವಾಗಿ ಹರಹಿದ ಜ್ಞಾನವನ್ನು, ಅಭಿವ್ಯಕ್ತವಾದ ಅರಿವನ್ನು, ವಶದಲ್ಲಿಟ್ಟುಕೊಂಡಿದ್ದಾನೆ. ಹೊಳೆಯುತ್ತಾ ಅವನು

ಆ ಅಭಿವ್ಯಕ್ತಿಯನ್ನು ಹಿಡಿದಿಟ್ಟುಕೊಂಡಿದ್ದಾನೆ." ಸ್ವ ಗೃಹದಲ್ಲಿ ಸೋಮನು ತಿಳಿಯಾಗಲು ಮತ್ತು ಶುಭ್ರವಾಗಲು ಬೇಕಾದ ಪಣಿಗಳ ಈ ದನಗಳು ಇರುವ ಮನೆ ಎಂಥದು? ಅದೇ ಅಗ್ನಿ ಮತ್ತು ಇತರ ದೇವತೆಗಳು ಇರುವ ಮನೆ. ಅದೇ ಸ್ವರ್ರಿನ ವಿಶಾಲ ಸತ್ಯ- "ಋತಂ ಬೃಹತ್." ಈ ಹೊಳೆವ ದನಗಳಲ್ಲಿ ಪ್ರಕೃತಿ ತ್ರಯವುಳ್ಳ ಅತ್ಯುಚ್ಚ ಲೋಕವಿದೆ- "ತ್ರಿಧಾತುಭಿರ್ ಅರುಷೀಭಿಃ". ಮತ್ತು ಈ ದನಗಳಿಂದಲೇ ಸೋಮನು ಆ ಪರಮಸತ್ಯದ[೧] ವ್ಯಕ್ತತೆಯನ್ನು ಧರಿಸಿರುತ್ತಾನೆ ; ಉಕ್ತ ದನಗಳು ಪರಮಸತ್ಯವನ್ನು ಸಾಕ್ಷಾತ್ಕಾರ ಮಾಡುವ ವಿಚಾರಗಳು. ಈ ಸ್ವರ್ ಎಂಬುದು ತನ್ನ ತ್ರಿಪುಟ ಪ್ರಪಂಚಗಳೊಡನೆ ಕೂಡಿರುತ್ತದೆ. ಅದರ ಹರಹಿನಲ್ಲಿ ತ್ರಿಧಾತುಗಳ ಸಮಾನ ಅಳತೆಯ ಸಫಲತೆ ಇರುತ್ತದೆ, ಪೂರಣವಿರುತ್ತದೆ. ತ್ರಿಧಾತುವೆಂಬ ಪದಸಂಹತಿಯನ್ನು ಅತ್ಯುಚ್ಚ ತ್ರಿಪುಟ ಪ್ರಪಂಚದ ತ್ರಿಮುಖತತ್ವವನ್ನು ಹೇಳಲು ಬಹಳ ಸಲ ಬಳಸಲಾಗಿದೆ- "ತಿಸ್ರಃ ಪರಾವತಃ" ಎಂಬುದನ್ನು ಬೇರೆಯ ಕಡೆಗಳಲ್ಲಿ ದನಗಳು ತಮ್ಮ ಮನಸ್ಸಿಗೆ ಬಂದಂತೆ ತಿರುಗಾಡಿ ("ರಣಂತಿ") ಸಂತೋಷಪಡುವ ಅಗಲವಾದ ನಿರ್ಭಯ ಸಸ್ಯಶಾದ್ವಲ ಎಂದು ಬಣ್ಣಿಸಲಾಗಿದೆ. ಮತ್ತು ಇಲ್ಲಿಯೂ ಪರಮಸತ್ಯದ ವಿಚಾರಗಳು ಸಂತೋಷಪಡುವುದನ್ನು ಹೇಳಲಾಗಿದೆ- "ಯತ್ರ ರಣಂತಿ ಧೀ ತಯಃ" ಮತ್ತು ಮುಂದಿನ ಪದ್ಯದಲ್ಲಿ ಸೋಮನ ದಿವ್ಯರಥವು ಜ್ಞಾನವನ್ನು ಪಡೆದು ಉನ್ನತ ದಿಶೆಯಲ್ಲಿ ಹೊರಟು ಮುನ್ನುಗ್ಗಿ ದುಡಿದು ದರ್ಶನ ನಿರ್ಭರವಾಗುತ್ತದೆ- ಯಾವುದರಿಂದ? ಕಿರಣಗಳಿಂದ - ಎಂದು ಹೇಳಲಾಗಿದೆ: "ಪೂರ್ವಂ ಅನುಪ್ರದಿಶಂ ಯಾತಿ ಚೇಕಿತತ್ ಸಂ ರಶ್ಮಿಭಿರ್ ಯತತೇ ದರ್ಶತೋ ರಥೋ ದೈವ್ಯೋ ದರ್ಶತೋರಥಃ". ಈ ಉನ್ನತ ದಿಕ್ಕು ಸ್ಪಷ್ಟವಾಗಿ ದಿವ್ಯ ಯಾ ವಿಶಾಲ ಸತ್ಯದ್ದು ; ಈ ಕಿರಣಗಳು ಸ್ಪಷ್ಟವಾಗಿ ಉಷೆಯ ಅಥವಾ ಸತ್ಯಸೂರ್ಯನವು. ಅವು ಪಣಿಗಳು ಮುಚ್ಚಿಟ್ಟ ದನಗಳು = ಪ್ರಬುದ್ಧ ಯಾ ಜ್ಯೋತಿರ್ಮಯ ವಿಚಾರಗಳು - "ಧಿಯಃ" - ಅವು ಶುಭ್ರ ವರ್ಣದವುಗಳು. ಋತಸ್ಯ ಧೀತಯಃ"

ಪಣಿಗಳ, ದನಗಳ ಮತ್ತು ಅಂಗಿರಸರ ಪ್ರತಿಮೆ ವೇದದ ಆಂತರಿಕ ಸಾಕ್ಷಿಗಳಾಗಿ ಬಂದಲ್ಲೆಲ್ಲಾ ತಪ್ಪದೆಯೇ ಪೂರ್ವೋಕ್ತ ನಿಗಮನವು ದೃಢವಾಗಿ ಪ್ರತಿಷ್ಠಿತವಾಗುತ್ತದೆ. ಪಣಿಗಳು ಪರಸತ್ಯದ ವಿಚಾರಗಳನ್ನು ಬೈತಿಟ್ಟುಕೊಂಡವರು, ಜ್ಞಾನವಿಲ್ಲದೆ ಕತ್ತಲಿನಲ್ಲಿರುವವರು (ತಮಃ ಅವಯುನಂ). ಆ ಕತ್ತಲನ್ನೂ ಅವರನ್ನೂ ಇಂದ್ರನೂ ಅಂಗಿರಸರೂ ಮಂತ್ರದಿಂದಲೂ, ಸೂರ್ಯನಿಂದಲೂ ಬೆಳಕನ್ನಿಟ್ಟು, ಬೆಳಕು ಅವತರಿಸುವಂತೆ ಮಾಡಿ, ಸ್ಥಾನಚ್ಯುತಿಗೀಡು ಮಾಡುತ್ತಾರೆ, ಕತ್ತಲಿಗೆ ಬೆಳಕು ಆದೇಶ (ಪರ್ಯಾಯ) ವನ್ನಾಗಿ ಮಾಡುತ್ತಾರೆ - ಆ ಮೂಲಕ ಪರಮಸತ್ಯದ ವಿಸ್ತಾರವು ಪ್ರಕಟವಾಗುವಂತೆ ಮಾಡುತ್ತಾರೆ. ಇಂದ್ರನು ಪಣಿಗಳೊಡನೆ ಯುದ್ಧಮಾಡುವುದು ಭೌತಿಕ ಆಯುಧಗಳಿಂದಲ್ಲ- ಮಂತ್ರ ಶಬ್ದಗಳಿಂದ (VI.39.2) "ಪಣೀನ್ ವಚೋಭಿರ್ ಅಭಿಯೋಧ್ದದ್ ಇಂದ್ರಃ". ಈ ಪದಸಂಹತಿ ಬಂದಿರುವ ಸೂಕ್ತವನ್ನು ವ್ಯಾಖ್ಯೆಯಿಲ್ಲದೆ ಭಾಷಾಂತರಿಸಿದರೆ ಸಾಕು. ಅದರಿಂದ ಈ ಸಾಂಕೇತಿಕತೆಯ ಸ್ವರೂಪದ ಪರಿಚಯವನ್ನು ಕೊನೆಯದಾಗಿ ತೋರಿಸಿದಂತಾಗುತ್ತದೆ. ಈ ದಿವ್ಯೋದ್ರಿಕ್ತ ಸಮಾಧಿಯ ದ್ರಷ್ಟಾರನಾದ ಸೋಮನನ್ನು, ಪಳಚ್ಚನೆ

೧. ವಯಃ ಹೋಲಿಸಿರಿ VI.21.2, 3 ಇದರಲ್ಲಿ ನಮ್ಮ ಮಂತ್ರದ ಜ್ಞಾನವುಳ್ಳ ಮತ್ತು ಅದನ್ನು ಎತ್ತಿ ಹಿಡಿವ ಇಂದ್ರನು ಯಜ್ಞದಲ್ಲಿ ಮಂತ್ರದಿಂದ (ಶಬ್ದದಿಂದ) ಸಂವರ್ಧಿಸಲ್ಪಡುತ್ತಾನೆ. "ಇಂದ್ರಂ ಯೋ ವಿದಾನೋ ಗೀರ್ ವಾಹಸಂ ಗೀರ್ಭಿರ್ ಯಜ್ಞವೃದ್ಧಂ". ಜ್ಞಾನದ ಆವಿರ್ಭಾವಕ್ಕೆ ಆಕರವಾದ ಕತ್ತಲೆಯು ಸೂರ್ಯಕೃತ ; ಕತ್ತಲೆ ಹಬ್ಬಿರುತ್ತದೆ ; ಅದರಲ್ಲಿ ಮೊದಲು ಜ್ಞಾನವಿರಲಿಲ್ಲ.- "ಸ ಇತ್ ತಮೋ' ವಯು ನಂ ತತ್ ಸ್ವತ್ ಸೂರ್ಯೇಣ ವಯುನವಚ್ ಚಕಾರ."

ಹೊಳೆವ ವಿಚಾರವನ್ನುಳ್ಳ, ಯಜ್ಞವಾಹನನನ್ನು, ಮಂತ್ರದ ಮಧುಕ್ಷರದ್ಯೋತಾರನನ್ನು, ಅರ್ಥಾತ್ ಪ್ರಬುದ್ಧ (ತತ್‌ಕ್ಷಣದ ಹೊಳೆದ) ವಿಚಾರದವನಾದ ನಿನ್ನನ್ನು (ಬೇಡುವುದೇನೆಂದರೆ) "ಇಷೋ ಗೋ ಅಗ್ರಾಃ"= ಬೆಳಕಿನ ದನಗಳು ಕರೆದು ತಂದ ಪ್ರಚೋದನೆಗಳನ್ನು ನಮ್ಮೊಡನೆ ಹಾಗೂ ಮಂತ್ರಪಾಠಕನಾದ ಋಷಿಯೊಡನೆ ಕೂಡಿಸು." "ಉಸ್ರಾಃ". ಹೊಳೆವ ಹಸುಗಳನ್ನು ಬಯಸಿದಾತನು ಅವನು - ಆ ಸೋಮನು; ಗುಡ್ಡವನ್ನು ಸತ್ಯದ ನೊಗಕ್ಕೆ ಹೂಡಿದ (ಕುದುರೆಗಳನ್ನು) ಅರ್ಥಾತ್ ಪರಸತ್ಯದ ವಿಚಾರಗಳಿಂದ (ವಿಚಾರಗಳೆಂಬ ಅಶ್ವಗಳಿಂದ) ನೊಗ ಹೂಡಿದ ರಥವನ್ನು ಬಯಸಿದವನು ಆತನು (ಸೋಮ) - "ಋತ ಧೀತಿಭಿರ್ ಋತಯುಗ್ ಯುಜಾನಃ". (ಅನಂತರ) ಇಂದ್ರನು ವಲನ ಅಭಿನ್ನ ಪರ್ವತ ವಿತಾನವನ್ನು ಮುರಿದನು. ಯಾವುದರಿಂದ? ಪಣಿಗಳ ವಿರುದ್ಧವಾಗಿ ಉಚ್ಚರಿಸಿದ ಮಂತ್ರ ಶಬ್ದಗಳಿಂದಲೇ. ಸೋಮನು ಇಂದುಶಕ್ತಿಯಾಗಿ ಹಗಲಿರುಳೂ ವರ್ಷಗಳ ಮೂಲಕ ಬೆಳಕಿಲ್ಲದ ರಾತ್ರಿಗಳನ್ನು ಬೆಳಗುವಂತೆ ಮಾಡಿದವನು ; ಆ ರಾತ್ರಿಗಳು ಹಗಲುಗಳ ದರ್ಶನವನ್ನು ಹಿಡಿದಿಟ್ಟುಕೊಂಡವು : ಶುದ್ಧ ಜನ್ಮವುಳ್ಳ ಉಷಸ್ಸುಗಳನ್ನು ಅವನು ಸೃಜಿಸಿದನು. ಅವನೇ ಪ್ರಕಾಶಮಾನನಾಗಿ ಬೆಳಕಿಲ್ಲದವುಗಳನ್ನು ಬೆಳಕಿನಿಂದ ತುಂಬಿಸಿದನು. ಬಹು ಉಷಸ್ಸುಗಳನ್ನು ಅವನು ಪರಮವಿಚಾರದಿಂದ ಬೆಳಗುವಂತೆ ಮಾಡಿದನು ಮತ್ತು ಅವನು ಪರವಿಚಾರವು ಕಟ್ಟಿದ ಕುದುರೆಗಳನ್ನುಳ್ಳ, ಸ್ವರ್‌ನ್ನು ಹುಡುಕಿ ಬಂದ ಚಕ್ರವುಳ್ಳ ರಥವನ್ನೇರಿ, ಯಜ್ಞಗಳನ್ನು ಮಾಡಿದವನನ್ನು ತೃಪ್ತಿಪಡಿಸಿ, ಹೊರಟು ಹೋದನು." (VI.39.1-4) ಪಣಿಗಳ ದನಗಳೊಡನೆ ಸಂಬಂಧಿಸಿದ್ದುದು ಯಾವಾಗಲೂ ಆ ವಿಚಾರ, ಆ ಸತ್ಯ, ಆ ಮಂತ್ರ ಶಬ್ದ. ಇಂದ್ರನು ಹೇಳಿದ ಮಂತ್ರದಿಂದ ಗೋಗ್ರಹಣಮಾಡಿದವರನ್ನು ಗೆಲ್ಲಲಾಯಿತು. ಇಂದ್ರನೋ-ದಿವ್ಯ ಮಹಾಮನಃಶಕ್ತಿ ಸ್ವರೂಪನು. ಅವನ ಕಾರ್ಯದಿಂದ ಕತ್ತಲಾಗಿದ್ದುದ್ದು ಬೆಳಕಾಯಿತು. ಕುದುರೆಗಳಿಂದ ಎಳೆಯಲ್ಪಟ್ಟ ರಥವು ಪರಮಸತ್ಯದಿಂದ ನೊಗ ಹೂಡಲ್ಪಟ್ಟದ್ದು ; ಜ್ಞಾನದಿಂದ "ಸ್ವರ್ವಿದಾನಾಭಿನಾ" ಆ ರಥವು ಈಗ ನಮ್ಮ ದೃಷ್ಟಿಯಿಂದ ಮರೆಯಾಗಿರುವ (ಅಡಗಿಸಿ ಇಡಲ್ಪಟ್ಟ) ಸತ್ತೆ, ಪ್ರಜ್ಞೆ ಮತ್ತು ಸಂತೋಷಗಳ ಪ್ರಕಾಶಮಾನ ವಿಸ್ತಾರವನ್ನು ತೋರಿಸುತ್ತದೆ. ಬ್ರಹ್ಮನಿಂದ ಇಂದ್ರನು ವಲನನ್ನು ಚುಚ್ಚುತ್ತಾನೆ, ಕತ್ತಲನ್ನು ಅಡಗಿಸುತ್ತಾನೆ, ಸ್ವರ್‌ನ್ನು ಕಾಣಿಸುತ್ತಾನೆ. (II.24.3)'' "ಉದ್ಗಾ ಅಜದ್ ಅಭಿನದ್ ಬ್ರಹ್ಮಣ ವಲಂ ಅಗೂಹತ್ ತಮೋವ್ಯಚಕ್ಷಯತ್ ಸ್ವಃ"

ಇದೀ ಋಗ್ವೇದವು, ತಾವು ಅನೃತದ ಆಘಾತದಿಂದ ಮುಕ್ತವಾಗಿರಬಲ್ಲ ತಮ್ಮ ಆಕರದಲ್ಲಿಯೇ, ಮೂಲದಲ್ಲಿಯೇ, ಸತ್ಯದರ್ಶನ, ಸತ್ಯ ಪ್ರಣೋದನಗಳಿಂದ ಮೇಲೇರಿ ವಶಪಡಿಸಿಕೊಂಡ ಪರಂಜ್ಯೋತಿಯ ಶಕ್ತಿಗಳ ಜಯಗಾನವಾಗಿದೆ. "ಪರಸತ್ಯದಿಂದ ದನಗಳು (ಪ್ರಬುದ್ಧ ವಿಚಾರಗಳು, ಪ್ರತಿಭಾತ ವಿಚಾರಗಳು) ಪರಸತ್ಯದೊಳಗೆ ಹೊಗುತ್ತವೆ. ಪರಸತ್ಯದತ್ತ ದುಡಿಯುತ್ತಾ ಹೋಗಿ ಮಾನವನು ಪರಸತ್ಯವನ್ನು ಗೆಲ್ಲುತ್ತಾನೆ ; ಪರಸತ್ಯದ ಆಕ್ರಾಮಕ ಪ್ರಣೋದವು (ನುಗ್ಗುವಿಕೆಯು) ಬೆಳಕಿನ ಗೋಗಳನ್ನು ಹುಡುಕುತ್ತದೆ ಮತ್ತು (ಶತ್ರುವನ್ನು) ಭೇದಿಸಿ ಮುನ್ನಡೆಯುತ್ತದೆ. ಪರಮ ಸತ್ಯಕ್ಕೆ ಎರಡು ವಿಸ್ತಾರವಾದವುಗಳು (ಆಕಾಶ ಮತ್ತು ಪೃಥ್ವಿ) ಬಹಳವೂ ಅಗಾಧವೂ ಆಗುವುವು ; ಆಸತ್ಯಕ್ಕೆ ಇಬ್ಬರು ಉನ್ನತ ಮಾತೃಶ್ರೀಗಳು ತಮ್ಮ ಹಾಲನ್ನು ಕೊಡುವರು" - "ಋತೇನ ಗಾವ ಋತಂ ಆವಿವೇಶುಃ; ಋತಂ ಯೇಮಾನ ಋತಂ ಇದ್ ವನೋತಿ, ಋತಸ್ಯ ಶುಷ್ಮಸ್ತುರಯಾ ಉ ಗವ್ಯುಃ ; ಋತಾಯ ಪೃಥ್ವೀ ಬಹುಲೇ ಗಭೀರೇ, ಋತಾಯ ಧೇನೂ ಪರಮೇ ಮಹಾತೇ (IV.23.9,10)".

❖ ❖

ಅಧ್ಯಾಯ-೨೨

# ದಸ್ಯುಗಳ ಮೇಲಿನ ವಿಜಯ

ದಸ್ಯುಗಳು ಆರ್ಯರಿಗೂ ಆರ್ಯರ ದೇವತೆಗಳಿಗೂ ವಿರುದ್ಧ ಸ್ಥಾನದಲ್ಲಿದ್ದಾರೆ. ದೇವತೆಗಳು ವಸ್ತುಗಳ ಪರಮಸತ್ಯದಲ್ಲಿರುವ ಅದಿತಿಯಿಂದ ಹುಟ್ಟಿದರು ; ದಸ್ಯುಗಳು ಯಾ ದಾನವರು ಅಂಧಕಾರಮಯ ಅಧೋಲೋಕದಲ್ಲಿರುವ ದಿತಿಯಿಂದ ಜನಿಸಿದರು. ಈ ಇಬ್ಬಣಿಗರು ಅನುಕ್ರಮವಾಗಿ ಹಗಲಿರುಳುಗಳ ಒಡೆಯರು. ತ್ರಿಪುಟ ಲೋಕಗಳಾದ ಭೂಮಿ, ಸ್ವರ್ಗ, ಅಂತರಿಕ್ಷ ಅಥವಾ ಶರೀರ, ಮನ, ತತ್ಸಂಬಂಧಕ ಪ್ರಾಣಗಳಾಚೆ ಇದಿರು ಬದಿರು ನಿಂತವರವರು. X. 108 ರಲ್ಲಿ ಸರಮೆ "ಪರಾಕಾತ್" ಉನ್ನತ ರಾಜ್ಯದಿಂದ ಕೆಳಗಿಳಿದು ಬರುತ್ತಾಳೆ. ಅವಳು ರಸೆಯ ನೀರನ್ನು ದಾಟಬೇಕು. ಅವಳು ಇರುಳನ್ನು ಸಂದರ್ಶಿಸುತ್ತಾಳೆ. "ಅತಿಷ್ಕದೋಭಿಯಸಾ" ತನ್ನನ್ನಾಕೆ ದಾಟಿ ಹಾರಿಯಾಳೆಂದು ಹೆದರಿ ಇರುಳು ಅವಳಿಗೆ ಸ್ಥಳ ಮಾಡಿ ಕೊಡುತ್ತಾಳೆ. ಅವಳು ದಸ್ಯುಗಳ ಮನೆಗೆ ಬರುತ್ತಾಳೆ "ದಸ್ಯೋಋರ್ ಒಕೋ ನ ಸದನಂ." ಅದನ್ನವರೇ "ರೇಕು ಪದಂ ಅಲಕಂ" ಎಂದು ವರ್ಣಿಸುತ್ತಾರೆ- ಅಂದರೆ ವಸ್ತ್ವತೀತವಾದ ಅನೃತ ಪ್ರಪಂಚ. ಉನ್ನತ ಪ್ರಪಂಚವೂ ವಸ್ತುಗಳಿಗೆ ಅತೀತ. ಹೇಗೆ? ವಸ್ತು ಪ್ರಪಂಚವನ್ನು ಮೀರುವುದರಿಂದ ಯಾ ಮೇಲೇರಿರುವುದರಿಂದ, ಅದು ರೇಕು ಪದ ; ಆದರೆ "ಸತ್ಯಂ" ಅಲ್ಲದೆ "ಅಲಕಂ" ಅಲ್ಲ- ಸತ್ಯ ಪ್ರಪಂಚವಲ್ಲದೆ ಅಸತ್ಯ ಪ್ರಪಂಚವಲ್ಲ. ಎರಡನೆಯದು ಜ್ಞಾನರಹಿತವಾದ ಅಂಧಕಾರ- "ತಮಃ ಅವಯುನಂ ತತನ್ವತ್". ತನ್ನ ವಿಸ್ತಾರ ಹೆಚ್ಚಿದಾಗ (ರಿರಿಚೇ") ಸ್ವರ್ಗ, ಭೂಮಿ, ಈ ಮೂರು ಲೋಕಗಳನ್ನು ಮೀರುವ ಸತ್ಯ-ಜ್ಞಾನ ಪ್ರಪಂಚವನ್ನು ನಿರ್ಮಿಸುತ್ತಾನೆ. "ವಯುನವತ್" ; ಆದುದರಿಂದ ಅದು "ರೇಕುಪದಂ". ಈ ಅಂಧಕಾರ, ಈ ವಸ್ತುಗಳ ಇರವು - ಪರ್ವತ ಇದರ ಪ್ರತೀಕ. ಈ ಪರ್ವತವು ಭೂಮಿಯ ಮೂಲಾಧಾರದಿಂದ ಏಳುವುದು, ಸ್ವರ್ಗದ ಹಿಂದೆ ಇರುವುದು. ಇದನ್ನು ಕತ್ತಲ ಗುಹೆಯಾದ, ಪರ್ವತ ತಲದ ಗವಿಯಾದ, ಗುಪ್ತಾಗಾರವು ಪ್ರತಿನಿಧಿಸುತ್ತದೆ.

ಆದರೆ ಈ ಗುಹೆಯು ಕೇವಲ ಪಣಿಗಳ ಬಿಡಾರ. ಅವರ ಕಾರ್ಯಾಗಾರ, ಅರ್ಥಾತ್, ಭೂಮಿ-ಸ್ವರ್ಗ-ಅಂತರಿಕ್ಷಗಳು: ಇವೆಲ್ಲಾ ಅಜ್ಞಾತ ಪ್ರಜ್ಞೆ ಹಡೆದ ಮಕ್ಕಳು, ಅಪ್ರಜ್ಞಾನ ಪುತ್ರರು ; ಆದರೆ ಸ್ವತಃಇವು ಸಂಪೂರ್ಣವಾಗಿ ಕಾರ್ಯತಃ ಅಪ್ರಜ್ಞಾನಿಗಳಲ್ಲ. ಇವುಗಳಿಗೆ "ಮಾಯಾ ಸ್ವರೂಪದ" ಅರ್ಥಾತ್ ಆಭಾಸಿಕ ಜ್ಞಾನದ ಆಕಾರಗಳಿವೆ : ಆದರೆ ಈ ಆಕಾರಗಳೆಲ್ಲಾ ಅಜ್ಞಾನದ ರೂಪಗಳು ; ಇವುಗಳ ಸತ್ಯಗಳು ಅಜ್ಞಾತ ಪ್ರಜ್ಞೆಯಲ್ಲಿ ಅಡಗಿವೆ ಮತ್ತು ಇವುಗಳ ಮೇಲ್ಮೈಯು ಯಾ ಇದಿರು ಮೊಗವು ಸುಳ್ಳು, ಸತ್ಯವಲ್ಲ. ನಾವು ನೋಡುತ್ತಿರುವ ಪ್ರಪಂಚವು "ಅಪ್ರಕೇತಂ ಸಲಿಲಂ" (X. 129.3) ಕತ್ತಲಲ್ಲಡಗಿದ ಕತ್ತಲಿಂದ, ಎಲ್ಲ ಪದಾರ್ಥಗಳನ್ನೂ ಆವರಿಸಿದ ಆಳವೂ ನಿಸ್ತಲವೂ

ಆದ ಪ್ರವಾಹದಿಂದ, ಅಜ್ಞಾತ ಪ್ರಜ್ಞೆಯ ಸಾಗರದಿಂದ, ಹೊರಬಂದಂಥದಾಗಿದೆ. ಆ ಅನಸ್ತಿತ್ವವು ಅಸತ್ತು ; ಅಸತ್ತೆಯು, ಹೃದಯದಲ್ಲಿ ಆಸೆಯಿದ್ದ ಋಷಿಗಳಿಂದ ದೃಷ್ಟ. ಆ ಅಸತ್ತೆಯಲ್ಲಿ ಇರವನ್ನು ರಚಿಸಬಲ್ಲ ಅವರ ವಿಚಾರವು ಮನದಲ್ಲಿ ಕಂಡಂಥದು. ವಸ್ತುಗಳ ಅನಸ್ತಿತ್ವದ ಸತ್ಯವು ಅಪ್ರಜ್ಞಾತ ಸಾಗರದಿಂದೆದ್ದ ಮೊದಲ ಲಕ್ಷಣ. ಅಸತ್ತಿನ ಗಾಡಾಂಧಕಾರವು ವೈದಿಕ ರಾತ್ರಿ "ರಾತ್ರೀಂ ಜಗತೋ ನಿವೇಶನೀಂ" (I.35.1.) ; ಅದು ಜಗತ್ತನ್ನು ಆಧರಿಸಿ ಅದರ ಅಪ್ರಕಟಿತ ಗುಪ್ತ ಶಕ್ತಿಗಳೆಲ್ಲವನ್ನೂ ತನ್ನ ಅಸ್ಪಷ್ಟ ಗರ್ಭದಲ್ಲಿ ಧರಿಸಿದೆ. ರಾತ್ರಿಯು ತನ್ನ ರಾಜ್ಯವನ್ನು ಈ ನಮ್ಮ ತ್ರಿಪುಟ ಪ್ರಪಂಚದ ಮೇಲೆ ವಿಸ್ತರಿಸುತ್ತದೆ ; ತನ್ನ ಹೊರಗೆ ಸ್ವರ್ಗದಲ್ಲಿ ಅರ್ಥಾತ್ ಮಾನಸಾಸ್ತಿತ್ವದಲ್ಲಿ ಅದು ಉಷೆಯನ್ನು ಹಡೆಯುತ್ತದೆ. ಉಷೆಯು ಸೂರ್ಯನನ್ನು ಕತ್ತಲಿನಿಂದ ಮುಕ್ತಗೊಳಿಸುತ್ತಾಳೆ. ಆ ಕತ್ತಲಲ್ಲಿ ಸೂರ್ಯನು ಪ್ರಚ್ಛನ್ನನೂ ಗ್ರಹಣಗ್ರಸ್ತನೂ ಆಗಿದ್ದನು. ಹೊರಬಿದ್ದ ಅವನೀಗ ರಾತ್ರಿಯಲ್ಲಿ, ಅಸತ್ತಿನಲ್ಲಿ, ಉನ್ನತ (ಉದಾತ್ತ) ಹೆಬ್ಬಗಲ ದರ್ಶನವನ್ನು ನಿರ್ಮಿಸುತ್ತಾನೆ ("ಅಸತಿ ಪ್ರಕೇತುಃ") ಆದುದರಿಂದ ಈ ರಾಜ್ಯತ್ರಯದಲ್ಲಿ ಜ್ಯೋತಿಷ್ಪತಿಗಳಿಗೂ ಅಜ್ಞಾನೇಶ್ವರರಿಗೂ ಅದರ ಸತತ ಸನ್ನಿವೇಶಗಳಲ್ಲಿ ಕಾಳಗ ಮುಂಬರಿಯುತ್ತದೆ.

ಪಣಿ ಎಂಬ ಪದಕ್ಕೆ ವರ್ತಕ, ಮಾರಾಟಗಾರ, ಕೊಂಡು ಮಾರುವವನು ಎಂಬ ಅರ್ಥವಿದೆ. ಪಣ್ ಧಾತುವಿನಿಂದ ಅದು ನಿಷ್ಪನ್ನವಾಗಿದೆ. ಪನ್[೧](ಹೋಲಿಸಿರಿ ತಮಿಳಿನ ಪನ್ನನ್ನು ಮತ್ತು ಗ್ರೀಕ್ ಪೋನೋಸ್=ದುಡಿತ ಎಂಬುದನ್ನು) ಮತ್ತು ಪಣಿಗಳನ್ನು ನಾವು ದಿವ್ಯ ಮನದಲ್ಲಿಲ್ಲದ, ತಮೋಮಯ ಅಪಪ್ರಜ್ಞೆಯ ಭೌತಿಕ ಸತ್ತೆಯಲ್ಲಿ ತಮ್ಮ ಸದ್ಯೋ ಮೂಲವಿರುವ ಹಾಗೂ ಸಾಮಾನ್ಯ ಅಪ್ರಬುದ್ಧ ಇಂದ್ರಿಯ ಸಂವೇದನೆಗಳ ಅಧ್ಯಕ್ಷತೆ ವಹಿಸಿರುವ ತತ್ವಗಳು ಎಂದು ತಿಳಿಯಬಹುದು. ಈ ಸಂವೇದನಾ ಸ್ವರೂಪದ ಕಾರ್ಯಕ್ಕೆ ಬದಲಾಗಿ ಮಾನಸಿಕ ಸತ್ತೆಯಿಂದ ಬರುವ ಪ್ರಬುದ್ಧ ಮನಃ ಪ್ರಾಣ ಚಟುವಟಿಕೆಗಳನ್ನು ಆದೇಶವನ್ನಾಗಿ ತಂದಿಡುವುದೇ ಮಾನವನ (ಜೀವನದ) ಇಡೀ ಹೋರಾಟ. ಈ ಪ್ರಕಾರ ಯಾರು ಈ ಧ್ಯೇಯದಿಂದ ದುಡಿಯುತ್ತಾರೆಯೋ, ಹೋರಾಡುತ್ತಾರೆಯೋ, ಪಯಣಿಸುತ್ತಾರೆಯೋ ಅವರೇ ನಿತ್ಯಸತ್ತೆಯ ಬೆಟ್ಟವನ್ನು ಹತ್ತಿ ಆರ್ಯರೆನ್ನಿಸಿಕೊಳ್ಳುತ್ತಾರೆ (ಆರ್ಯ, ಅರ್ಯ; ಅರಿ=ಕಷ್ಟಪಟ್ಟು ದುಡಿ, ಯುದ್ಧ ಮಾಡು, ಹತ್ತು ಯಾ ಏರು, ಪ್ರಯಾಣ ಮಾಡು, ಯಜ್ಞವ್ಯವಸ್ಥೆ ಮಾಡು ಎಂಬೀ ವಿವಿಧಾರ್ಥಗಳ ನಾಮಪದಗಳು). ಏಕೆಂದರೆ, ಆರ್ಯನ ಕೆಲಸವೆಂದರೆ, ಯಜ್ಞ-ಅದು ಒಂದೇ ಕಾಲಕ್ಕೆ ಯುದ್ಧವೂ ಹೌದು, ಉದ್ಗಮನವೂ ಹೌದು, ಉತ್ ಪ್ರಯಾಣವೂ ಹೌದು-ಕತ್ತಲೆಯ (ಅಜ್ಞಾನದ) ಶಕ್ತಿಗಳ ವಿರುದ್ಧ ಹೂಡಿದ ಯುದ್ಧ, ಭೂಮ್ಯಾಕಾಶಗಳನ್ನು ಹತ್ತುವುದು-ಎಂದು ತಾತ್ಪರ್ಯ ; ಅದು ನದಿ-ಸಮುದ್ರಗಳ ಇನ್ನೊಂದು ಪಾರದಾಚೆಗಿರುವ ವಸ್ತುಗಳ ದೂರತಮ ಅನಂತಕ್ಕೆ ಮಾಡುವ ಪ್ರವಾಸ. ಆರ್ಯನಿಗೆ ಈ ಕೆಲಸ ಮಾಡುವ ಸಂಕಲ್ಪ ಶಕ್ತಿಯಿದೆ, ಅವನೇ ಕಾರ್ಯಕರ್ತ (ಕಾರು, ಕೀರಿ, ಇತ್ಯಾದಿ) ; ಈ ಕೆಲಸಕ್ಕೆ ತಮ್ಮ ಪ್ರಣೋದವನ್ನು ತೊಡಗಿಸುವ ದೇವತೆಗಳು ಸುಕ್ರತುಗಳು - ಯಜ್ಞೋದ್ದೇಶಕ್ಕೆ ಬೇಕಾದ ಪೂರ್ಣಶಕ್ತಿ, ಸಂಪನ್ನರು ; ದಸ್ಯು

---

೧. ಸಾಯಣನು ವೇದದಲ್ಲಿ ಪನ್ನನ್ನು ಹೊಗಳು ಎಂದು ಅರ್ಥೈಸುತ್ತಾನೆ ; ಆದರೆ ಒಂದು ಕಡೆ ವ್ಯವಹಾರವೆಂಬ (ಕೊಡು-ಕೊಳ್ಳು ಎಂಬ) ಅರ್ಥವನ್ನು ಒಪ್ಪುತ್ತಾನೆ. ಕಾರ್ಯವೆಂಬುದೇ ಬಹಳ ಉಪಭೇದಗಳಲ್ಲಿ ಅದರ ಅರ್ಥವೆಂದು ನನಗೆ ತೋರುತ್ತದೆ. ಕಾರ್ಯಾರ್ಥಕವಾದ ಪಣ್ ಧಾತುವಿನಿಂದಲೇ ಹಿಂದಿನ ರೂಪಗಳಾದ ಕರ್ಮೇಂದ್ರಿಯಗಳ ಪಾಣಿ (ಕೈ) ಪಾದ (ಕಾಲುಪಾದ) ; ಲ್ಯಾಟಿನ್ನಿನ ಪೆನಿಸ್ ಹೋಲಿಸಿರಿ. ಈ ಪಕಾರಾದಿಗಳು ಸೇ. ಸಮ-ಪೆನಿಸ್=ಪುರುಷರ ಜನನೇಂದ್ರಿಯ, ಪಾಯು=ಮಲದ್ವಾರ.

ಅಥವಾ ಪಣಿಯು ತದ್ವಿರುದ್ಧ (ದುಷ್ಕ್ರತು) ತತ್ವ ಯಾ ಸತ್ವ = "ಅಕ್ರತು". ಆರ್ಯನು "ಯಜಮಾನ", "ಯಜ್ಞ ಕರ್ತ, ಯಾಜ್ಞಿಕ, ಯಜ್ಯು" ; ಅವನ ಯಜ್ಞವನ್ನು ಸ್ವೀಕರಿಸುವ, ಎತ್ತಿ ಹಿಡಿಯುವ ಮತ್ತು ಪ್ರಣೋದಿಸುವ ದೇವತೆಗಳು ಯಜತ, ಯಜತ್ರ = ಯಜ್ಞಶಕ್ತಿಗಳು ; ಈ ಇಬ್ಬರಿಗೂ ದಸ್ಯುವು ವಿರುದ್ಧನು- ಅವನು "ಅಯಜ್ಯು". ಯಜ್ಞದಲ್ಲಿ ಆರ್ಯನು ದಿವ್ಯಶಬ್ದವಾದ "ಗೀಃ = ಮಂತ್ರ= ಬ್ರಹ್ಮ= ಉಕ್ಥವನ್ನು ಕಂಡನು ; ಅವನು "ಬ್ರಹ್ಮಾ"= ಮಂತ್ರ ಗಾಯಕನು. ದೇವತೆಗಳು ಮಂತ್ರ ಸಂತೋಷರು, ಮಂತ್ರೋತ್ಥಾಪಕರು (ಗೀರ್ವಾಹಸಃ, ಗೀರ್ವಾಣಸಃ) ದಸ್ಯುಗಳು ಮಂತ್ರದ್ವೇಷಿಗಳು, ಮಂತ್ರ ವಿನಾಶಕರು= "ಬ್ರಹ್ಮದ್ವಿಷಃ" ; ವಾಗ್ ವಿದಾರಣರು= "ಮೃಧ್ರವಚಸಃ". ದಸ್ಯುಗಳಿಗೆ ದಿವ್ಯ ಪ್ರಾಣದ ಪ್ರಣೋದವಿಲ್ಲ, ಅದನ್ನು ಹೇಳಲು ಬಾಯಿಲ್ಲ ; ಅವರು "ಅನಾಸರು" (ಅನಾಸ್ಯರು)[೨] ಅವರಿಗೆ ವಿಚಾರ ಶಕ್ತಿಯಿಲ್ಲ, ಮಂತ್ರವನ್ನೂ ತದ್ಗತ ಸತ್ಯವನ್ನೂ ಮಾನಸೀಕರಣ ಮಾಡಲು ಬರದು ; ಅವರು "ಅಮನ್ಯಮಾನಾಃ" : ಆದರೆ ಆರ್ಯರು ವಿಚಾರ ಶಕ್ತಿ ಸಂಪನ್ನರು, ಚಿಂತಕರು, ಆಲೋಚಕರು, ಮಂತ್ರವನ್ನು ಆಲೋಚಿಸಬಲ್ಲವರು (= "ಮನ್ಯಮಾನಾಃ"). ಆರ್ಯರು ವಿಚಾರಧರರು, ವಿಚಾರ ಮನಸ್ಕರು, ಆರ್ಷಜ್ಞಾನ ನಿಧಿಗಳು-ಧೀರ, ಮನೀಷೀ, ಕವಿ. ದೇವತೆಗಳೂ ಪರಮ ವಿಚಾರ ಚಿಂತಕರು- "ಪ್ರಥಮೋ ಮನೋತಾ ಧಿಯಃ, ಕವಯಃ". ಆರ್ಯರು ದೇವತಾರ್ಥಿಗಳು "ದೇವಯವಃ ಉಶಿಜಃ" ; ತಮ್ಮ ಅಸ್ತಿತ್ವವನ್ನು ಅಗಲಿಸಿಕೊಳ್ಳಲು ಮತ್ತು ತಮ್ಮಲ್ಲಿರುವ ದೇವತಾತ್ವವನ್ನು ವಿಸ್ತರಿಸಿಕೊಳ್ಳಲು, ಆರ್ಯರು ಯಜ್ಞ ಮಾಡುತ್ತಾರೆ, ಮಂತ್ರ ಹೇಳುತ್ತಾರೆ, ವಿಚಾರ ಮಾಡುತ್ತಾರೆ. ದಸ್ಯುಗಳು "ದೈವ ದ್ವೇಷಿಗಳು", ದೇವ ವಿರೋಧಿಗಳು ("ದೇವ ನಿದಃ") - ಅವರಿಗೆ ವಿಸ್ತಾರ ಬೇಡ. ("ಅವೃಧಃ"). ದೇವತೆಗಳು ಆರ್ಯನ ಮೇಲೆ ಐಶ್ವರ್ಯದ ಮಳೆಗರೆವರು ; ಆರ್ಯನು ತನ್ನ ಐಶ್ವರ್ಯವನ್ನು ದೇವರಿಗರ್ಪಿಸುವನು. ಬಲಾತ್ಕಾರದಿಂದ ಕಸಿದುಕೊಂಡು ಹೋಗುವವರೆಗೆ ದಸ್ಯುವು ಆರ್ಯನಿಗೆ ತನ್ನ ಸಂಪತ್ತನ್ನು ಕೊಡನು ಮತ್ತು ಮಾನವನಲ್ಲಿ ದೇವತೆಗಳು ಸೋಮರಸಾನಂದವನ್ನು ಬಯಸುವ ದೇವತೆಗಳಿಗೆ ಸೋಮವನ್ನು ಹಂಚಿಕೊಡನು. ಅವನು "ದೇವಾನ್" ಆಗಿದ್ದರೂ ಅವನ ಗುಹೆಯ ತುಂಬಾ ಧೇನ್ವಶ್ವ ರತ್ನಗಳು ತುಂಬಿದ್ದರೂ ("ಗೋಭಿರಶ್ವೇಭಿರ್ವಸುಭಿರ್ನ್ಯೃಷ್ಟಃ .(X. 108.7) ದಸ್ಯುವು "ಅರಾಧಸ್" ; ಏಕೆಂದರೆ ಅವನ ಐಶ್ವರ್ಯವು ಅವನಿಗಾಗಲಿ ಮನುಜನಿಗಾಗಲಿ ಉತ್ಕರ್ಷವನ್ನು ಯಾ ಸೌಖ್ಯವನ್ನು ಕೊಡದು. ಪಣಿಯು ಜೀವನದಲ್ಲಿ ಕಡುಲೋಭಿ. ಆರ್ಯ-ದಸ್ಯುಗಳ ಹೋರಾಟದಲ್ಲಿ ದಸ್ಯುವು ಯಾವಾಗಲೂ ಆರ್ಯನ ಹೊಳೆವ ದನಗಳನ್ನು ಲೂಟಿಮಾಡಲು, ನಾಶಮಾಡಲು, ಕಳಲು ಮತ್ತು ತನ್ನ ಗವಿಯ ಕತ್ತಲೆಯಲ್ಲಿ ಮತ್ತೆ ಮತ್ತೆ ಅಡಗಿಸಿಡಲು ಪ್ರಯತ್ನಿಸುತ್ತಾನೆ. "ಭಕ್ಷಕನಾದ ಪಣಿಯನ್ನು ಕೊಲ್ಲು ; ಏಕೆಂದರೆ ಅವನು ತೋಳ ("ವೃಕ"=ಹರಿದೆಸೆವವನು) VI. 51.14."

ಈ ವರ್ಣನೆಗಳು ಸುಲಭವಾಗಿ, ಆರ್ಯರ ದೇವತೆಗಳನ್ನೂ ಅವರ ಆರಾಧನಾ ಪದ್ಧತಿಯನ್ನೂ ದ್ವೇಷಿಸುವ ಮಾನವ್ಯ ಶತ್ರುಗಳಿಗೂ ಅನ್ವಯಿಸಬಹುದು. ಆದರೆ ಅಂಥ ಅರ್ಥವಿವರಣೆಯು ಸಂಪೂರ್ಣ ಅಸಾಧ್ಯವೆಂಬುದನ್ನು ನಾವೀಗ ನೋಡುವೆವು: I.33. ರಲ್ಲಿ ಈ ವ್ಯತ್ಯಾಸಗಳನ್ನು ಅತ್ಯಂತ ಸ್ಪಷ್ಟವಾಗಿ ತೋರಿಸಲಾಗಿದೆ ; ಮಾನವ್ಯ ಮಿತ್ರರೊಡನೆ ಇಂದ್ರನು ದಸ್ಯುಗಳೆದುರು ಯುದ್ಧ ಮಾಡಿದ್ದನ್ನು ವಿಸ್ತಾರವಾಗಿ ವರ್ಣಿಸಲಾಗಿದೆ. ಈ ದಸ್ಯುಗಳು, ಪಣಿಗಳು ಮತ್ತು ವೃತ್ರರು ಮಾನವ್ಯ ಯೋಧರಾಗಲಾರರು, ಮಾನವ್ಯ ಕುಲದವರೋ ದರೋಡೆಗಾರರೋ ಆಗಲಾರರು.

---

೨. ಅನಾಸ್ಯವು ಅನಾಸವಾಗುವುದು ಸತ್ಯವು ಸಚ್ ಆದಂತೆ Apocope -ಅನುವಾದಕ ಅಥವಾ ವೇದದ "ಆಸ್=ಮುಖ, ಬಾಯಿ" ಎಂಬುದರ ವಿರುದ್ಧವಾದ "ಅನಾಸ್"

ಈ ಸೂಕ್ತದಲ್ಲಿ ಋಷಿ ಹಿರಣ್ಯಸ್ತೂಪ ಅಂಗಿರಸನು ಮೊದಲ ಹತ್ತು ಪದ್ಯಗಳಲ್ಲಿ ಸ್ಪಷ್ಟವಾಗಿ ಗೋಗಳಿಗಾಗಿ ಅರ್ಥಾತ್ ಪಣಿಗಳೊಡನೆ ಯುದ್ಧ ಮಾಡಿದ್ದನ್ನು ಹೇಳುತ್ತಾನೆ. "ಬನ್ನಿರಿ, ಗೋಗಳನ್ನು ಹುಡುಕಿಕೊಂಡು ಇಂದ್ರನ ಹತ್ತಿರಕ್ಕೆ ನಾವು ಹೋಗೋಣ. ಏಕೆಂದರೆ, ಅವನೇ ನಮ್ಮಲ್ಲಿರುವ ವಿಚಾರವನ್ನು ಸಂವರ್ಧಿಸುವವನು. ಆತನು ಅಜಯ್ಯನು ಮತ್ತು ಅವನ ಸುಖಗಳು ಸಂಪೂರ್ಣ ; ಅವನು ನಮಗಾಗಿ ಹೊಳೆವ ದನಗಳ ಸಮುನ್ನತ ಜ್ಞಾನವನ್ನು ಮುಕ್ತಗೊಳಿಸುತ್ತಾನೆ (ಕತ್ತಲಿನಿಂದ ಬೇರ್ಪಡಿಸುತ್ತಾನೆ) -ಗವಾಂಕೇತಂ ಪರಂ ಆವರ್ಜತೇ ನಃ - ನಾನು ಅಭೇದ್ಯನಾದ ಸಂಪದ್‌ದಾತನತ್ತ, ಹಕ್ಕಿಯು ತನ್ನ ಪ್ರೀತಿಯ ಗೂಡಿಗೆ ಹಾರಿದಂತೆ ಅವನಿಗೆ ನಮಿಸುತ್ತಾ ಆ ಇಂದ್ರನೆಡೆಗೆ ಹಾರುತ್ತೇನೆ. ; ಹಾಗೆ ಹಾರುವಾಗ ಬೆಳಕಿನ ಸಮುದಾತ್ತ ಮಂತ್ರಸಮೇತನಾಗಿರುತ್ತೇನೆ; ತಮ್ಮ ಪ್ರಯಾಣದಲ್ಲಿ ಆ ಇಂದ್ರನನ್ನು ನಂಬಿದವರೆಲ್ಲರೂ ಅವನನ್ನು ಆಮಂತ್ರಿಸುತ್ತಾರೆ. ಅವನು ಎಲ್ಲಾ ಸೈನ್ಯಗಳೊಡನೆ ಬರುತ್ತಾನೆ ಮತ್ತು ಅವನು ತನ್ನ ಬತ್ತಳಿಕೆಗಳನ್ನು ಗಟ್ಟಿಯಾಗಿ ತಂದುಕೊಡುವನು. (ನಮ್ಮ ಮಂತ್ರದಿಂದ) ಪುಷ್ಟನಾದ ಇಂದ್ರನೇ, ನಿನ್ನ ಅಧಿಕ ಸಂತೋಷವನ್ನು ನಿನಗಾಗಿ ನೀನು ನಿನ್ನಲ್ಲೇ ಹಿಡಿದಿಟ್ಟುಕೊಳ್ಳದಿರು, ಪಣಿಯಾಗದಿರು ನಮ್ಮಲ್ಲಿ ಚೋಷ್ಕೂಯಮಾಣಃ ಇಂದ್ರ ಭೂರಿ ವಾಮಂ ಮಾಪಣಿರ್ ಭೂರ್ ಅಸ್ಮದ್ ಅಧಿಪ್ರವೃದ್ಧ". ಕೊನೆಯ ಪದಸಂಹತಿಯು ಚಮತ್ಕಾರಕ ಮತ್ತು ಸದ್ಯದ ಅರ್ಥವಿವರಣೆಯಲ್ಲಿ "ನಮ್ಮ ಬಗೆಗೆ ಲೋಭಿಯಾಗಬೇಡ" ಎಂದು ಹೇಳಿ ಅದರ ನಿಜವಾದ ಅರ್ಥ ಪ್ರಣೋದವನ್ನು ತಪ್ಪಿಸಲಾಗಿದೆ. ಆದ್ದರಿಂದ ಪಣಿಗಳು ದೇವತೆಗೂ ಮಾನವನಿಗೂ ಕೊಡದೆ, ತಮಗಾಗಿಯೇ ಸಂಪತ್ತನಿಟ್ಟುಕೊಳ್ಳುವ ವಿಷಯವನ್ನು ಮರೆಮಾಚಿದಂತಾಗುತ್ತದೆ. ಎಲ್ಲರಿಗೂ ತಿಳಿವ ಅದರ ಅರ್ಥವೆಂದರೆ - ಸಂತೋಷಾಧಿಕ್ಯದ ಸಂಪತ್ತನ್ನಿಟ್ಟುಕೊಂಡು ನೀನು, ಮಾನವನಿಗೆ ಕೊಡದೆ, ತನಗೆಂದೇ ಇಟ್ಟುಕೊಳ್ಳುವ ಪಣಿಯಾಗಬೇಡ ; ಪಣಿಗಳು ತಮ್ಮ ಅವಪ್ರಜ್ಞೆಯಲ್ಲಿ ಗುಪ್ತವಾಗಿ ಇಟ್ಟುಕೊಳ್ಳುವಂತೆ ನೀನು ನಿನ್ನ ಅತಿಪ್ರಜ್ಞೆಯಲ್ಲಿ ಸಂತೋಷವನ್ನು ನಮ್ಮಿಂದ ದೂರವಿರಿಸಿಕೊಂಡಿರಬೇಡ."

ಅನಂತರ ಉಕ್ತ ಸೂಕ್ತವು ದಸ್ಯು ಪಣಿಯನ್ನು ವರ್ಣಿಸುತ್ತದೆ ಮತ್ತು ಭೂಸ್ವರ್ಗಗಳ ಒಡೆಯತನಕ್ಕಾಗಿ ಇಂದ್ರನು ಅವನೊಡನೆ ಮಾಡುವ ಯುದ್ಧವನ್ನೂ ವರ್ಣನೆ ಮಾಡುತ್ತದೆ : "ಓ ಇಂದ್ರ, ನೀನು ಕೇವಲ ನಿನ್ನ ಸೇವೆಗೆ ನಿಂತ ಸೇನೆಗಳ ಮೂಲಕ ನಿನ್ನ ಆಯುಧದಿಂದ ಶ್ರೀಮಂತ ದಸ್ಯುವನ್ನು ಕೊಲ್ಲುತ್ತೀಯೆ ; ನಿನ್ನ ಬಿಲ್ಲಿನ ತುದಿಯಲ್ಲಿರುವ ಅವು (ಅಂಬುಗಳಾದ ನಿನ್ನಶಕ್ತಿಗಳು) ದಶ ದಿಕ್ಕುಗಳತ್ತ ವಿವಿಧವಾಗಿ ಹಾರಿ ಯಜ್ಞಕ್ಕೆ ಬಳಸದ ಧನವನ್ನಿಟ್ಟುಕೊಂಡವರನ್ನು ಸಾವಿಗೆ ತುತ್ತಾಗುವಂತೆ ಮಾಡಿದವು; ಆ ಅಯಜ್ಞರ ತಲೆಗಳು ಅವರಿಂದ ಬಹು ದೂರ ಹೋಗಿ ಚೆಲ್ಲಿ ಹರಡಿ ಹೋಗುವಂತೆ ಮಾಡಿದವು, ಉರುಳಿ ಬೀಳುವಂತೆ ಮಾಡಿದವು. ದೊರೆಯೇ, ಲಸದಶ್ವಾಧಿಪತಿಯೇ, ಬಲಿಷ್ಠನಾಗಿ ಸ್ವರ್ಗದಲ್ಲಿ ಪ್ರತಿಷ್ಠಿತನಾದವನೇ, ಯಜ್ಞ ಮಾಡದೆ ಯಾಜ್ಞಿಕರೊಡನೆ ಹೋರಾಡುವವರನ್ನು, ಅವ್ರತರನ್ನು (=ನಿನ್ನ ವ್ರತವನ್ನು ಪಾಲಿಸದವರನ್ನು ನೀನು ಸ್ವರ್ಗ-ಭೂಮಿಗಳಿಂದ ಒದ್ದೋಡಿಸಿದೆ. ಅವರು ನಿರ್ದುಷ್ಟನಾದ ಇಂದ್ರನ ಸೇನೆಯೊಡನೆ ಹೋರಾಡಿದರು ; ನವಗ್ವರು ಅವನನ್ನು ದಂಡಯಾತ್ರೆಗೆ ಅಣಿಗೊಳಿಸಿದರು. ಎತ್ತಿನೊಡನೆ ಹೋರಾಡಲಿಳಿದೆತ್ತುಗಳನ್ನು ಹೇಗೋ ಹಾಗೆ ಅವರನ್ನು ಇಂದ್ರನು ತೊಲಗಿಸಿದನು. ಅವರು ಬೆಟ್ಟದ ತಪ್ಪಲುಗಳ ಕೆಳಗೆ ಓಡುತ್ತ ಹೋಗಿ (ತಲೆಮರೆಸಿಕೊಂಡರು) ಬಿದ್ದರು. ಹೇ ಇಂದ್ರ, (ರಜಸಃಪಾರೇ=ಸ್ವರ್ಗದ ಗಡಿಗಳಲ್ಲಿ) ಅಂತರಿಕ್ಷದ ಆಚೆಯ ದಡದಲ್ಲಿ ನಗುತ್ತ ಅಳುತ್ತ ಇದ್ದವರೊಡನೆ ನೀನು ಯುದ್ಧ ಮಾಡಿದೆ ; ಎತ್ತರದಲ್ಲಿ ನಿಂತ ನೀನು ದಸ್ಯುವನ್ನು ಸ್ವರ್ಗದಿಂದ ಸುಟ್ಟುರುಳಿಸಿ ಬಿಟ್ಟೆ ; ನಿನ್ನನ್ನು ಅಭಿಜ್ಞಾಪಿಸುವ,

ಮನ್ನಿಸುವ, ಮತ್ತು ನಿನಗೆ ಸೋಮದಾನ ಮಾಡುವ, ಮನುಷ್ಯರನ್ನು, ಅವರ ಮಾತನ್ನು ಸಂವರ್ಧಿಸಿದೆ. ಸೂರ್ಯನನ್ನು ಭೂಮಿಯು ಸುತ್ತುವಂತೆ ಮಾಡಿ, ಆ ಸೂರ್ಯನ ("ಸ್ವರ್ಣರತ್ನದ") ಬೆಳಕಿನಲ್ಲಿ ಅವರು ಬೆಳಗಿದರು. ಅಷ್ಟೆಲ್ಲಾ ಸೂರ್ಯನತ್ತ ಮುತ್ತಿದರೂ, ಇಂದ್ರನೇ, ನೀನು ಸೂರ್ಯನ ಸುತ್ತಲೂ ಗೂಢಚಾರರನ್ನು ಇಟ್ಟುದರಿಂದ, ಅವರು ಇಂದ್ರಸ್ಥಾನದ ಆಚೆಗೆ ಹೋಗಲಾರದಾದರು. ಎಲೈ ಇಂದ್ರನೇ, ನಿನ್ನ ವ್ಯಾಪಕತೆಯಿಂದ (ವೈಶಾಲ್ಯದಿಂದ) ನೀನು ನಿನ್ನ ಸುತ್ತಲೂ ಇರುವ ಭೂಮಿಯನ್ನೂ ಸ್ವರ್ಗವನ್ನೂ ವಶದಲ್ಲಿಟ್ಟು-ಕೊಂಡಿದ್ದೀಯೆ. ಹೇ ಇಂದ್ರ, ಮಂತ್ರೋಚ್ಚಾರಕರಿಂದ ("ಬ್ರಹ್ಮಭಿಃ") ನೀನು ದಸ್ಯುವನ್ನು ಹೊರದಬ್ಬಿದೆ; ಸತ್ಯ ಚಿಂತಕರ ಮೂಲಕ ನೀನು ಸತ್ಯಚಿಂತನ ಮಾಡಲಾರದ ದಸ್ಯುವನ್ನು ಮೇಲೆ ಬಿದ್ದು ಹೊರದೂಡಿದೆ ("ಅಮನ್ಯಮಾನನ್ ಅಭಿಮನ್ಯ ಮಾನೈಃ"). ಅವರು ಸ್ವರ್ಗ-ಭೂಮಿಗಳ ಅಂತವನ್ನು ಸೇರಲಾರದಾದರು. ವೃಷಭನಾದ ಇಂದ್ರನು ಮಿಂಚನ್ನು ತನ್ನ ನೆರವಿಗೆ ತೆಗೆದುಕೊಂಡನು. ಬೆಳಕಿನ ಬಲದಿಂದ ಕತ್ತಲ (ಕೆಚ್ಚಲಿನಿಂದ) ಹಾಲನ್ನು ಅವನು ಕರೆದನು."

ಯುದ್ಧ ನಡೆಯುವುದು ಭೂಮಿಯ ಮೇಲಲ್ಲ -ಅಂತರಿಕ್ಷದ ಅತ್ತಲಿನ ತೀರದಲ್ಲಿ. ಸಿಡಿಲಿನ (ವಜ್ರಾಯುಧದ) ಜ್ವಾಲೆಯಿಂದ ದಸ್ಯುಗಳು ಸ್ವರ್ಗ ಬಹಿಷ್ಕೃತರಾದರು ; ಅವರು ಭೂಮಿಗೆ ಸುತ್ತು ಹಾಕಿದಾಗ ಭೂಮಿ-ಸ್ವರ್ಗಗಳೆರಡರಿಂದಲೂ ಹೊರಹಾಕಲ್ಪಟ್ಟರು; ಏಕೆಂದರೆ ಅವರಿಗೆ ಭೂಮಿ-ಸ್ವರ್ಗಗಳೆರಡರಲ್ಲೂ ಸ್ಥಾನವು ಅಲಭ್ಯ. ಏಕೆಂದರೆ ಭೂಮಿ-ಸ್ವರ್ಗಗಳೆಲ್ಲಾ ಇಂದ್ರನ ಮಹಾತ್ಮ್ಯದಿಂದ ತುಂಬಿ ಹೋಗಿವೆ. ಸೂರ್ಯನು ತನ್ನ ರಶ್ಮಿಗಳೆಂಬ ರಹಸ್ಯಚರರನ್ನು ಸುತ್ತಲೂ ಕಳುಹಿಸಿರುವುದರಿಂದ ಮತ್ತು ಆ ರಶ್ಮಿಗಳು ಅವರನ್ನು ಕಂಡುಹಿಡಿದುದರಿಂದ ದಸ್ಯುಗಳು ಅವನ ಮಿಂಚಿನ ಕಣ್ಮರೆಯಾಗಲಾರರು. ಇದೆಂದೂ ಆರ್ಯ-ದ್ರಾವಿಡ ಕುಲದವರ ಪಾರ್ಥಿವ ಸಮರವೆನ್ನಿಸದು ; ಮಿಂಚೆಂದೂ ಭೌತಿಕವೆನ್ನಿಸದು. ಏಕೆಂದರೆ, ರಾತ್ರಿಯ ಶಕ್ತಿಯ ಸಂಹಾರದೊಡನೆ ಅದರ ಸಂಬಂಧವೇನೂ ಇಲ್ಲ ; ಕತ್ತಲ (ಕೆಚ್ಚಲಿನಿಂದ) ಬೆಳಕಿನ ನೆರವು ಪಡೆದು ಉಷಾಧೇನು ಹಾಲು ಕರೆವ ಸಂದರ್ಭ ಕೂಡಾ ಇಲ್ಲಲ್ಲ. ಆದುದರಿಂದ ಈ ಅಯಾಜ್ಞಿಕರು, ಈ ಮಂತ್ರದ್ವೇಷಿಗಳು, ಮಂತ್ರಚಿಂತನಕ್ಕೂ. ಅನರ್ಹರಾದವರು-ಆರ್ಯಾರಾಧನೆಯ ಮಾನವ್ಯ ಹಗೆಗಳಲ್ಲ. ಅವರು ಮಾನವನಲ್ಲಿಯೇ ಇರುವ ಸ್ವರ್ಗ ಭೂಮಿಗಳ ಒಡೆಯತನಕ್ಕಾಶಿಸುವ (ಪ್ರಯತ್ನಿಸುವ) ಆಸುರೀ ಶಕ್ತಿಗಳಲ್ಲದೆ ದ್ರಾವಿಡರಲ್ಲ.

ಆ ದಸ್ಯುಗಳು ಹೋರಾಡಿದರೂ "ಸ್ವರ್ಗಭೂಮಿಗಳ ಗಡಿ"ಯನ್ನು ತಲುಪಲಾರರೆಂದಿರುವುದು ಗಮನಾರ್ಹ. ಕೇವಲ ಮಂತ್ರದಿಂದಲೂ ಯಜ್ಞದಿಂದಲೂ ಗೆಲ್ಲಬಹುದಾದ ಭೂಮ್ಯಾಕಾಶಗಳ (ಭೂಮಿಸ್ವರ್ಗಗಳ) ಆಚೆಗಿನ ಉನ್ನತತರ ಪ್ರಪಂಚವನ್ನು ಪ್ರವೇಶಿಸಲು ಮಂತ್ರವನ್ನು ಅಥವಾ ಯಜ್ಞವನ್ನು ಸಾಧನವನ್ನಾಗಿ ಬಳಸದೆಯೇ ಈ ದಸ್ಯು ಶಕ್ತಿಗಳು ಬಯಸುತ್ತವೆ ಎಂದು ನಾವು ಭಾವಿಸಬಹುದು. ಅಜ್ಞಾನದ ವಿಧಿಯ ಅಂಕೆಯಲ್ಲಿಯೇ ದಸ್ಯುಗಳು ಪರಮಸತ್ಯವನ್ನು ಪಡೆದಿಟ್ಟುಕೊಳ್ಳಲು ಬಯಸುತ್ತಾರೆ. ಆದರೆ ಅವರಿಗೆ ಭೂ-ಸ್ವರ್ಗಗಳ ಗಡಿಯನ್ನು ಮುಟ್ಟಲು ಸಾಧ್ಯವಾಗುವುದಿಲ್ಲ ; ಕೇವಲ ಇಂದ್ರ ಮತ್ತು ದೇವತೆಗಳು ಹಾಗೆ ಅವುಗಳನ್ನು ದಾಟಿ-ಅರ್ಥಾತ್-ಮನಸ್ಸು, ಪ್ರಾಣ ಮತ್ತು ದೇಹಗಳ ವಿನ್ಯಾಸ ಸೂತ್ರವನ್ನು ತಮ್ಮ ಮಾಹಾತ್ಮ್ಯದಿಂದ ತುಂಬಿದ ಅನಂತರ, ಮನಃಪ್ರಾಣದೇಹಾತೀತರಾಗುವರು. ಸರಮೆಯು. (X. 108.6) ಪಣಿಗಳ ಈ ಮಹತ್ವಾಕಾಂಕ್ಷೆಯನ್ನು ಸೂಚಿಸುವಂತೆ ತೋರುತ್ತದೆ : "ನಿಮ್ಮ ಮಂತ್ರಗಳು ಸಿದ್ಧಿ ಹೊಂದದಿರಲಿ ;

ನಿಮ್ಮ ಸಕಾಯತೆಯು ದುಷ್ಟವೂ ಅಮಂಗಲವೂ ಆಗಲಿ ; ನಿಮಗೆ ಆ (ಸತ್) ಪಥವನ್ನು ದಾಟಿ ಹೋಗಲು (ಹಾಳು ಮಾಡಿ ಹೋಗಲು) ಸಾಧ್ಯವಾಗದಿರಲಿ ; ಬೃಹಸ್ಪತಿಯು (ದಿವ್ಯ ಮತ್ತು ಮಾನುಷ) ಎರಡೂ ಪ್ರಪಂಚಗಳ ಸುಖವನ್ನು ಕೊಡದಿರಲಿ." ಪಣಿಗಳು ಸೊಕ್ಕಿನಿಂದ, ಇಂದ್ರನು ತಮ್ಮ ಗವಿಯಲ್ಲೇ ಇದ್ದು ತಮ್ಮ ಆಕಳುಗಳನ್ನು ಕಾಯ್ದುಕೊಂಡು ಬಿದ್ದಿದ್ದರೆ ಅವನ ಸ್ನೇಹಿತರಾಗುವೆವೆಂದಾಗ ಸರಮೆ ಉತ್ತರ ಕೊಡುತ್ತಾಳೆ : ಇಂದ್ರನು ಸರ್ವಜಯಿ, ನಿಮಗೆ ಅವನನ್ನು ಜಯಿಸಿ ದಮಿಸಲಿಕ್ಕೆ ಸಾಧ್ಯವಿಲ್ಲ-ಎಂದು. ಆಗ ಪಣಿಗಳು ಹೇಳುತ್ತಾರೆ : ಸರಮೇ, ನೀನು ನಿನ್ನ ದೂರದ ಊರಿನಿಂದ ದೇವತೆಗಳ ಒತ್ತಾಯದಿಂದ ಇಲ್ಲಿಗೆ ಬಂದವಳು ; ನೀನು "ಪ್ರಬಾಧಿತಾ ಸಹಸಾ ದೈವ್ಯೇನ" ಆದ್ದರಿಂದ ಅವರ ಪಕ್ಷವನ್ನು ಬಿಟ್ಟು ನಮ್ಮೊಡನೆ ಇರುವುದಾದರೆ ನಿನ್ನನ್ನು ನಾವು ಸೋದರಿಯಂತೆ ನಡೆಸಿಕೊಳ್ಳುತ್ತೇವೆ - ಎಂದು. ಅದಕ್ಕೆ ಸರಮೆಯು-ನನಗೆ ಭಾತೃತ್ವವೂ ಗೊತ್ತಿಲ್ಲ, ಸೋದರೀತ್ವವೂ ಗೊತ್ತಿಲ್ಲ. ಅದೆಲ್ಲಾ ಇಂದ್ರನಿಗೂ ಭಯಂಕರರಾದ ಅಂಗಿರಸರಿಗೂ ಗೊತ್ತು. ಹಸುಗಳನ್ನಾಶಿಸಿ ಅವರು ನನ್ನನ್ನು ರಕ್ಷಿಸಿದರು. ಅದಕ್ಕೇ ನಾನಿಲ್ಲಿಗೆ ಬಂದು (ಅವರೊಡನಿದ್ದೇನೆ) ಎಂದು ಉತ್ತರಿಸಿದಳು. ಮತ್ತು ಮುಂಬರಿದು ಅವಳು - "ಪಣಿಗಳಿರಾ. ಆದ್ದರಿಂದ, ಹೊರಡಿರಿ, ಇದಕ್ಕಿಂತ ಉತ್ತಮವಾದ ಜಾಗಕ್ಕೆ ಹೋಗಿರಿ. ನೀವು ಹಿಡಿದಿಟ್ಟುಕೊಂಡಿರುವ ದನಗಳು ಪರಮಸತ್ಯದತ್ತ ಮೇಲ್ವರಿದು ಹೋಗಲಿ. ನೀವು ಅಡಗಿಸಿಟ್ಟುಕೊಂಡ ಹಸುಗಳನ್ನು ಬೃಹಸ್ಪತಿಯೂ ಸೋಮನೂ ಅರಣಿಗಳೂ ಪ್ರಬುದ್ಧ ಋಷಿಗಳೂ ಹುಡುಕಿ ತೆಗೆಯುತ್ತಾರೆ" ಎನ್ನುತ್ತಾಳೆ.

ಪೂಷನ್ನನನ್ನು ಪೋಷಿಸುವ ಸೂರ್ಯನನ್ನು ಕುರಿತ (VI. 53) ನೆಯ ಸೂಕ್ತದಲ್ಲಿ ಪಣಿಗಳು ತಾವಾಗಿಯೇ ತಾವು ಸಂಗ್ರಹಿಸಿ ಇಟ್ಟುಕೊಂಡ ಸಂಪತ್ತನ್ನು ಒಪ್ಪಿಸಿ ಕೊಡುವ ವಿಚಾರವೂ ಬಂದಿದೆ. "ಎಲೈ ಪೂಷನ್ನನೇ, ಪಥೇಶ್ವರನೇ, ರಥದಂತೆ ನಾವು ನಿನ್ನನ್ನು ನೊಗವಾಗಿ ಹೊತ್ತು ಕೊಳ್ಳುವೆವು ; ನೀನು ದಿವ್ಯ ಸತ್ಯವನ್ನು (ಅದರ ವಿಚಾರವನ್ನು), ಅನಂತ ವಿಸ್ತಾರವನ್ನು ಗೆದ್ದುಕೋ... ಓ ಹೊಳೆವ ಪೂಷನ್ನನೇ, ಪಣಿಯು ದಾನ ಮಾಡುವಂತೆ ಪ್ರೇರಿಸು ; ಕೊಡದವನನ್ನೂ ಕೊಡುವಂತೆ ಮಾಡು ; ಪಣಿಯ ಮನಸ್ಸನ್ನೂ ಮೃದುಗೊಳಿಸು. ಶ್ರೇಯಸ್ಸಿನ ಅನಂತ ಐಶ್ವರ್ಯಕ್ಕೆ ತಲುಪುವ ದಾರಿಗಳನ್ನು ವಿಂಗಡಿಸು, ಆಕ್ರಾಮಕರನ್ನು ಕೊಲ್ಲು, ನಮ್ಮ ವಿಚಾರಗಳು ಪರಿಪೂರ್ಣಗೊಳ್ಳಲಿ. ನಿನ್ನ ಅಂಕುಶದಿಂದ ಪಣಿಗಳ ಹೃದಯಗಳನ್ನು ತಿವಿ, ಎಲೈ ದ್ರಷ್ಟಾರನೇ, ಆ ವಿಚಾರಗಳನ್ನು ನಮಗೆ ವಶವಾಗುವಂತೆ ಮಾಡು. ನಮ್ಮ ಪಣಿಗಳ ಹೃದಯದಲ್ಲಿ ಸಂತಸದ ಆಸೆಯನ್ನು ಬಯಸು. ಹಾಗೆ ಅವರನ್ನು ನಮ್ಮ ಅಂಕೆಯೊಳಗೆ ಬರಿಸು. ಅವರನ್ನು ನಮಗೊಳಪಡಿಸು.... ನೀನು ಹಿಡಿದ ಅಂಕುಶವು ಮಂತ್ರವು ಮೂಡುವಂತೆ ಮಾಡುತ್ತದೆ. ಎಲೈ ರಾರಾಜಿಸುವ ದ್ರಷ್ಟಾರನೇ, ಆ ಅಂಕುಶದಿಂದ ಎಲ್ಲರ ಹೃದಯಗಳ ಮೇಲೆಯೂ ಗೆರೆ ಹಾಕಿ ಅವನ್ನು, ಬೇರ್ಪಡಿಸು (ಈ ರೀತಿಯಿಂದ ಅವು ನಮ್ಮ ನಮ್ಮ ವಶಕ್ಕೆ ಬರುವಂತೆ ಮಾಡು). ನಿನ್ನ ಅಂಕುಶಕ್ಕೆ ರಶ್ಮಿಯೇ ಮೊನೆ ; ಅದು ಗೋವ್ರಜಗಳನ್ನು ಪರಿಪೂರ್ಣಗೊಳಿಸುತ್ತದೆ ; (ವಿಚಾರ-ದರ್ಶನದ ಗೋವ್ರಜಗಳನ್ನೂ-"ಪಶುಸಾಧನೀ-ಹೋಲಿಸಿರಿ : ಸಾಧಂತಾಂಧಿಯಃ- ಆನೆಯ ಪದ್ಯದಲ್ಲಿ) ಅದೇ ನಮ್ಮ ಪ್ರಮೋದ, ನಾವು ಬಯಸುವ ಹರ್ಷ. ಆ ದಿವ್ಯ ವಿಚಾರವನ್ನು ನಮಗಾಗಿ ಸೃಜಿಸು - ಅದು ದನಗಳನ್ನು ಗೆದ್ದು ಕೊಡುತ್ತದೆ, ಕುದುರೆಗಳನ್ನು ಗೆದ್ದು ತರುತ್ತದೆ, ಐಶ್ವರ್ಯದ ಅನಂತ ವಿಸ್ತಾರವನ್ನು ಗೆದ್ದು ಕೊಡುತ್ತದೆ."

ಪಣಿಗಳ ಸಂಕೇತದ ನಮ್ಮ ಈ ಅರ್ಥವಿವರಣೆ ಸರಿಯಾದುದೇ ಆದರೆ, ಪದಗಳ ಸಾಮಾನ್ಯ ರೂಢ್ಯರ್ಥಗಳನ್ನಿದು ಕೆಡಿಸದೆ ಸಾಕಷ್ಟು ಅರ್ಥವಾಗುವಂತಾಗುತ್ತದೆಯಲ್ಲದೆ, ಸಾಯಣನು ಹಿಂದಿ

ಹಿಚುಕಿ ಹೊರಡಿಸಿದ ಅರ್ಥ ವಿವರಣೆಯಂತೆ -ಪಣಿಯೆಂದರೆ ಒಬ್ಬ ಕಡುಲೋಭಿಯಾದ ಮನುಷ್ಯ ; ಹಸಿದ ಹೊಟ್ಟೆಯ ಕವಿಯು ಸೂರ್ಯದೇವನನ್ನು ಕರುಣಾಜನಕವಾಗಿ ಪ್ರಾರ್ಥಿಸಿ ಈ ಪಣಿಯನ್ನು ಮೃದು ಹೃದಯದವನನ್ನಾಗಿ ಮಾಡಿ ಅವನನ್ನು ದಾನಶೀಲನನ್ನಾಗಿ ಮಾಡೆಂದು ಅಂಗಲಾಚುತ್ತಾನೆ- ಎಂದು ನಾವು ಗ್ರಹಿಸಬೇಕಾಗಿಲ್ಲ. ವೈದಿಕ ಆಲೋಚನೆಯು ಇಂತಿತ್ತು : ಅವಚೇತನದ ಯಾ ಅವಪ್ರಜ್ಞೆಯ ಕತ್ತಲೆಯಲ್ಲಿ ಮತ್ತು ನಮ್ಮ ಸಾಮಾನ್ಯ ಜೀವನದ ಅಜ್ಞಾನದಲ್ಲಿ ದಿವ್ಯ ಜೀವನಕ್ಕೆ ಸೇರಿದ ಎಲ್ಲವೂ ಮುಳುಗಿ ಹೋಗಿವೆ ; ಈ ಗುಪ್ತ ಸಂಪತ್ತುಗಳನ್ನು, ಪಶ್ಚಾತ್ತಪಿಸದ ಅಜ್ಞಾನ ಶಕ್ತಿಗಳನ್ನು ಮೊದಲು ನಾಶಮಾಡಿ, ಆಮೇಲೆ ಪಡೆದುಕೊಂಡು, ಅನಂತರ ನಮ್ಮ ಕೀಳು ಜೀವನವನ್ನು ಮೇಲು ಜೀವನದ ಅಂಕೆಗೊಳಪಡಿಸಬೇಕು ಎಂಬುದು. ಇಂದ್ರನ ಬಗೆಗೆ ಹೀಗೆ ಹೇಳಲಾಗಿದೆ : ದಸ್ಯುಗಳನ್ನು ಅವನು ಕೊಲ್ಲುತ್ತಾನೆ ಇಲ್ಲವೆ ಗೆಲ್ಲುತ್ತಾನೆ ಮತ್ತು ಅವರ ಆಸ್ತಿಯನ್ನು ಆರ್ಯರಿಗೆ ಕೊಡಿಸುತ್ತಾನೆ. ಹಾಗೇ ಸರಮೆಯೂ ಪಣಿಗಳೊಡನೆ ಶಾಂತಿ ಮಾಡಿಕೊಳ್ಳುವುದನ್ನೂ ಸಹಕರಿಸುವುದನ್ನೂ ಒಲ್ಲೆನೆನ್ನುತ್ತಾಳೆ ; ಅಲ್ಲದೆ ಅವಳು "ದೇವತೆಗಳಿಗೂ ಆರ್ಯರಿಗೂ ಶರಣುಹೋಗಿರಿ, ಕಾರಾವಾಸದಲ್ಲಿಟ್ಟಿರುವ ದನಗಳನ್ನು ಅವರಿಗೆ ಒಪ್ಪಿಸಿಕೊಡಿರಿ, ನೀವು ಕತ್ತಲ ಜಾಗ ಬಿಟ್ಟು ಉತ್ತಮತರ ಸ್ಥಳಕ್ಕೆ ಹೋಗಿರಿ" ಎಂದೂ ಸೂಚಿಸುತ್ತಾಳೆ. ವರೀಯಃ (X.108.10.11) ಉಜ್ವಲ ಪ್ರತಿಭೆಯ ಋಷಿಯ ಅಂಕುಶವು ಮುಚ್ಚಿದೆದೆಯನ್ನು ತೆರೆದು ಅದರ ಆಳದಿಂದ ಮಂತ್ರವೆದ್ದು ಬರುವಂತೆ ಮಾಡಿ ತನ್ನ ಹೊಳೆವ ಮೊನೆಯಿಂದ ಲಸದ್ಧೇನುಗಳನ್ನು ಪೂರ್ಣತೆಗೊಯ್ದು ಮುಟ್ಟಿಸಿ ಹೊಳೆವ ವಿಚಾರಗಳನ್ನು ಸಾಧಿಸಿ ಕೊಡುತ್ತದೆ ; ಆ ಋಷಿಯಾದರೋ ಪರಸತ್ಯದ ಒಡೆಯನಾದ ಪೂಷನ್. ಈ ಪ್ರಕಾರ ಪೂಷನ್ನನು ಪಣಿಗಳನ್ನು ಮತಾಂತರಗೊಳಿಸಬೇಕೆಂದು ಹೇಳಲಾಗಿದೆ. ಅನಂತರ ಆ ಸತ್ಯದೇವನು ತನ್ನ ಕೃಷ್ಣೀಕೃತ ಹೃದಯದಲ್ಲಿ ಆರ್ಯನು ಬಯಸುವುದನ್ನೇ ಬಯಸುವನು. ಆದುದರಿಂದ ಬೆಳಕು ಸತ್ಯಗಳ ಈ ಆಳವಾಗಿ ಒಳಹೊಗುವ ಕಾರ್ಯದಿಂದ ಸಾಮಾನ್ಯರೂಢಿಯ ಅಜ್ಞಾನಜನ್ಯ ಐಂದ್ರಿಯ ಚಟುವಟಿಕೆಯು ಆರ್ಯನ ಅಂಕೆಗೆ ಒಳಪಡುತ್ತದೆ.

ಆದರೆ ಸಾಮಾನ್ಯವಾಗಿ ಪಣಿಗಳು ಆರ್ಯರ ಶತ್ರುಗಳು, ದಾಸರಲ್ಲ (ದಾಸ=ಅಧೀನತೆ ಮತ್ತು ಸೇವಾಪರತೆ ; ದಸ್=ಕೆಲಸ) ; ಆದರೆ ವಿನಾಶಕರು, ಘಾತಕರು ಎಂಬರ್ಥದಲ್ಲಿ ಪಣಿಗಳು ಆರ್ಯ ವೈರಿಗಳು (ದಾಸ=ದಸ್ಯು=ಹಗೆ, ಲೂಟಿಗಾರ; ದಸ್=ವಿಭಜಿಸು, ಹಾನಿಮಾಡು, ಘಾತಿಸು). ಪಣಿಯು ದರೋಡೆಗಾರ-ಅವನು ಬೆಳಕು-ದನಗಳನ್ನು ಕಸಿದೊಯ್ಯುವಾತ, ವೇಗ ಸ್ವರೂಪದ ಹಯಗಳನ್ನು ಎಳೆದೊಯ್ಯುವಾತ.ಅವನು ತೋಳ, ನುಂಗಣ್ಣ, "ಅತ್ರಿ ವೃಕ"; ಅವನು ವಿಘ್ನಕಾರಕ ("ನಿದ್") ಮತ್ತು ಮಂತ್ರ ಕೆಡಿಸುವಾತ. ಅವನು ಅರಿ, ಚೋರ, ಅನೃತ ವಿಚಾರಿ ಯಾ ದುರಾಲೋಚಕ ; ತನ್ನ ಚೌರ್ಯದಿಂದಲೂ ವಿಘ್ನ ವಿಧಾನದಿಂದಲೂ ಸತ್ಯಪಥಪ್ರಯಾಣವು ಕಠಿಣವಾಗುವಂತೆ ಮಾಡುವಾತ. "ಹೇ ಸತ್ತ್ವಾಧಿಪತಿಯೇ, ನಮ್ಮ ದಾರಿಯನ್ನು ಸುಗಮವನ್ನಾಗಿ ಮಾಡು. ಪಣಿಯನ್ನು ಕೊಲ್ಲು - ಆತನು ತೋಳ, ಗುಳುಂ ಎಂದು ನುಂಗುವಾತನು. (VI.51.13.14) ದೇವತೆಗಳು ಅವನ ಏಳಿಗೆಯನ್ನು ತಡೆಯಬೇಕು. "ಈ (ಸೋಮ)ದೇವನು ಇಂದ್ರನೊಡನೆ ಹುಟ್ಟಿದಾಗ ಪ್ರಣೋದದಿಂದ ಪಣಿಯನ್ನು ತಡೆದನು. (VI.44.22) ಮತ್ತು ಸ್ವರನ್ನೂ, ಸೂರ್ಯನನ್ನೂ ಸಕಲೈಶ್ವರ್ಯವನ್ನು ಗೆದ್ದು ತಂದನು. ಪಣಿಗಳು ಸಂಹಾರ್ಯರು ಅಥವಾ ದಿಕ್ಪಾಪಾಲಾಗಿ ಓಡಿಸಲ್ಪಡತಕ್ಕವರು - ಆ ಮೂಲಕ ಅವರ ಸಂಪತ್ತೆಲ್ಲವನ್ನೂ ಸೂರೆಗೈದು ಅದನ್ನು ಉದಾತ್ತ ಜೀವನಕ್ಕಾಗಿ ಬಳಸಬೇಕಾಗಿದೆ." ಸರಮಾಲೆಯಾಗಿ ಬರುವ ಪಣಿಗಳ ಸಾಲುಗಳನ್ನು ಕಡಿದು ತುಂಡು ಮಾಡಿದ ನಿನ್ನವು ಈ ಬಲದಾಯಕವಾದ ದಾನಗಳು, ಎಲೌ ಸರಸ್ವತಿ, ಹೇ ಸರಸ್ವತಿ, ಓ ಸರಸ್ವತಿ,

ದೈವಕಂಟಕರನ್ನು ತುಳಿದು ಹಾಕು (VI.61.1,3.) "ಎಲೈ ಅಗ್ನಿ, ಎಲೈ ಸೋಮ-ಆಗ ನಿಮ್ಮ ಸಾಮರ್ಥ್ಯವು ಜಾಗರಿಸಲ್ಪಟ್ಟಿತು. ಆಗ ನೀವು ಪಣಿಗಳ ಆವುಗಳನ್ನು ಕದ್ದುಕೊಂಡು ಬಂದಿರಿ ಮತ್ತು ಬಹುಜನರಿಗಾಗಿ ಏಕೈಕವಾದ ಬೆಳಕನ್ನು ಶೋಧಿಸಿಕೊಟ್ಟಿರಿ (I.93.4).

ಉಷಃಕಾಲದಲ್ಲಿ ದೇವತೆಗಳು ಯಜ್ಞಕ್ಕಾಗಿ ಎಚ್ಚೆತ್ತಾಗ ಅದರ ಜಯಪ್ರದ ಪ್ರಗತಿಯಲ್ಲಿ ಪಣಿಗಳೂ ಎದ್ದು ಕೈ ಹಾಕಬಾರದು-ಕೈ ಹಾಕಲು ಏಳಬಾರದು. ಅವರು ತಮ್ಮ ಅಂಧಂ ತಮಸ್ಸಿನ ಗುಹೆಯಲ್ಲಿ ನಿದ್ರಿಸಲಿ. "ಹೇ ಉಷಾದೇವಿಯೇ, ಅನಂತವಿಸ್ತಾರಗಳ ರಾಣಿಯೇ ನಮ್ಮಲ್ಲಿ ತುಂಬಿರುವ ದೇವತೆಗಳನ್ನು ಎಚ್ಚರಿಸು, ಆದರೆ ಪಣಿಗಳು ಎಚ್ಚರ ಹೊಂದದೆ ನಿದ್ರಿಸಿರಲಿ. ಅಪ್ರಮೇಯ ವಿಸ್ತಾರದ ಅರಸಿತಿಯೇ, ಆ ವಿಸ್ತಾರದಧಿಪತಿಗಳಿಗಾಗಿ ಸಮೃದ್ಧವಾಗಿ ಬೆಳಗು, ನಿನ್ನನ್ನು ಅಹುದೆಂದು ಸಾರುವವನಿಗಾಗಿಯೂ ಸುಸಂಪನ್ನತೆಯಿಂದ ಬೆಳಕು ಜೀರು. ಎಲೌ ಉಷೆಯೇ, ನೀನೇ ಪರಮಸತ್ಯ. ಹರೆಯದವಳಾದ ಆಕೆ ನಮ್ಮೆದುರು ದಶದಿಶೆಗಳಲ್ಲಿ ಬೆಳಗುವಳು. ಅವಳು ತನ್ನ ಕಪಿಲೆಗಳನ್ನು (ಕೆಂಪೊತ್ತಿದ ಹಸುಗಳನ್ನು), ಕೆಂದನಗಳ ಗೋಲೆಗಳನ್ನು, ಸೃಜಿಸಿದ್ದಾಳೆ. ಅನಸ್ತಿತ್ವ ದರ್ಶನದಲ್ಲಿ ಅವಳು ಅಗಲವಾಗಿ ಮೂಡಿದ್ದಾಳೆ. (I.124.10,11) ಅಥವಾ ಮತ್ತೆ IV.5.1-3ರಲ್ಲಿ, "ಅರೇ, ನಮ್ಮೆದುರಿಗೇ ಜ್ಞಾನಪೂರ್ಣವಾದ ಆ ಪರಂಜ್ಯೋತಿಯು ಅಂಧಕಾರದಿಂದ ಹೊರ ಮೂಡಿ ನಿಂತಿದೆ ; ಸ್ವರ್ಗಸುತೆಯರಾದ ಉಷೋದೇವಿಯರು ವಿಸ್ತಾರವಾಗಿ ಬೆಳಗುತ್ತಾ ಮಾನವನಿಗಾಗಿ ದಾರಿಯನ್ನು ಮಾಡಿಕೊಟ್ಟಿದ್ದಾರೆ. ಈ ಉಷೋದೇವಿಯರು ಯಜ್ಞವೇದಿಕೆಗಳಲ್ಲಿರುವ ಯೂಪಸ್ತಂಭಗಳಂತೆ ನಮ್ಮೆದುರು ನಿಂತಿದ್ದಾರೆ. ಪರಿಶುದ್ಧೆಯರಾಗಿ ಒಡಮೂಡಿದ ಅವರು (ಸರ್ವವನ್ನೂ) ಶುದ್ಧೀಕರಿಸುತ್ತಾ (ಚೊಕ್ಕ ಮಾಡುತ್ತಾ) ಕತ್ತಲ ದೊಡ್ಡಿಯ ಬಾಗಿಲುಗಳನ್ನು ತೆರೆದಿದ್ದಾರೆ. ಇಂದು ಒಡಮೂಡಿದ ಆ ದೇವಿಯರು (ದಿವ್ಯೋಷೆಯರು) ಭೋಗಿಗಳನ್ನು, ಸಮೃದ್ಧ ಸೌಖ್ಯದಾನಕ್ಕಾಗಿ, ಜ್ಞಾನೋನ್ಮುಖರನ್ನಾಗಿ ಮಾಡುತ್ತಾರೆ. ಬೆಳಕಿನಾಟವಿಲ್ಲದ ಕತ್ತಲ ಹೃದಯದಲ್ಲಿ ಎಚ್ಚರ ಹೊಂದದೆ ನಿದ್ರಿಸಿರಲಿ." ಆ ಪಣಿಗಳನ್ನು ಉಚ್ಚಪ್ರಜ್ಞಾಸ್ತರಗಳಿಂದ ಈ ಪಾತಾಳದ ಅಂಧಕಾರ ಕೂಪಕ್ಕೆ ತಳ್ಳಬೇಕು ; ಅವರಿಂದ ಬಂಧಿಸಲ್ಪಟ್ಟ ದಿವ್ಯೋಷಸ್ಸುಗಳನ್ನು ಆ ಇರುಳಿನಲ್ಲೇ ಉನ್ನತತಮ ಪ್ರಜ್ಞಾಸ್ತರಗಳಿಗೆ ಎತ್ತಬೇಕು. "ವಕ್ರತ್ವ ಗ್ರಂಥಿ ನಿರ್ಮಾಪಕರಾದ ಪಣಿಗಳು ಕೆಲಸ ಮಾಡುವ ಇಚ್ಛೆಯುಳ್ಳವರಲ್ಲ (ಯಜ್ಞೇಚ್ಛುಗಳಲ್ಲ) ; ಮಂತ್ರ ಕೆಡಿಸುವವರು ; ಶ್ರದ್ಧಾಹೀನರಾದವರು, ಅನಭಿವರ್ಧಮಾನರು ಮತ್ತು ಅವರು ಆಯಾಜ್ಞಿಕರು. ಅವರನ್ನು ಅಗ್ನಿಯು ದೂರ, ದೂರಕ್ಕೆ ಓಡಿಸಿಬಿಟ್ಟಿದ್ದಾನೆ ; ಅಪ್ರತಿಹತ ಬಲನಾದ ಅವನು ಆ ಅಯಾಜ್ಞಿಕರನ್ನು ಪಾತಾಳಕ್ಕೆ ಅಟ್ಟಿದ್ದಾನೆ. ಪಾತಾಳದ ಅಂಧಕಾರದಲ್ಲಿ ರಮಿಸುತ್ತಿದ್ದ ಉಷಾಗೋಗಳ ಸ್ವಬಲದಿಂದ ಅಗ್ನಿಯು ಅತ್ಯುಚ್ಚ (ಲೋಕಕ್ಕೆ) ಸ್ಥಳಕ್ಕೆ ಎತ್ತಿ ಒಯ್ದಿಟ್ಟಿದ್ದಾನೆ..ಅವನು ಗಡಿಮಿತಿಗಳಾದ ಗೋಡೆಗಳೆಲ್ಲವನ್ನೂ ತನ್ನ (ಶಕ್ತಿಯಿಂದ) ಹೊಡೆತದಿಂದ ಒಡೆದು ಚೆಲ್ಲಿದ್ದಾನೆ. ಆರ್ಯನ ವಶಕ್ಕೆ ಅವನು ಉಷಸ್ಸುಗಳನ್ನು ತಂದು ಕೊಟ್ಟಿದ್ದಾನೆ- "ಆರ್ಯಪತ್ನೀರ್ ಉಷಸಶ್ ಚಕಾರ (VII.6.3-5) ವೃತ್ರನ ಅಥವಾ ವಲನ ವಶದಲ್ಲಿದ್ದಾಗ ನದಿಗಳನ್ನೂ ಉಷಸ್ಸುಗಳನ್ನೂ ದಾಸಪತ್ನಿಯರೆಂದರೆ, ದೇವತೆಗಳ ಕಾರ್ಯದಿಂದ ಅವು ಆರ್ಯರ - "ಆರ್ಯಪತ್ನೀಃ" - ಸಹಧರ್ಮಚಾರಿಣಿಯರಾಗುತ್ತಾರೆ.

ಅಜ್ಞಾನಾಧಿಪತಿಗಳನ್ನು ಸಂಹರಿಸಲೇಬೇಕು ಅಥವಾ ಪರಮ ಸತ್ಯದ ಮತ್ತು ಅದನ್ನು ಬಯಸುವವರ ದಾಸ್ಯಕ್ಕೆ ದೂಡಲೇಬೇಕು ; ಆದರೆ, ಅವರ ಸಂಪತ್ತು ಮನುಷ್ಯರ ಜೀವನ ಸಾಫಲ್ಯಕ್ಕೆ ಬೇಕೇ ಬೇಕು- ಅದಿಲ್ಲದ ಅವರ ಬಾಳು ಅಪೂರ್ಣ ಅಂದರೆ, ಪಣಿಗಳಲ್ಲಿ ಅತ್ಯಂತ

ಹೆಚ್ಚು ಧನಿಕನಾದವನ ತಲೆಯ ಮೇಲೇರಿ ನಿಲ್ಲುತ್ತಾನೆ ಇಂದ್ರ- ಪಣೀನಾಂ ವರ್ಷಿಷ್ಠೇ ಮೂರ್ಧನ್ ಅಸ್ಥಾತ್ ; ಅವನ ಬೆಳಕಿನಾಕಳಾಗುತ್ತಾನೆ, ವೇಗದ ವಾಜಿಯಾಗುತ್ತಾನೆ- ಸಾವಿರಾರು ಪಟ್ಟು ಹೆಚ್ಚು ಸಂಪದ್ವಿತರಣೆ ಮಾಡುತ್ತಾನೆ. ನಮಗಾಗಲೇ ಗೊತ್ತಾಗಿರುವಂತೆ ಆ ಸಂಪತ್ತಿನ ಪೂರ್ಣತೆ ಮತ್ತು ಅದರ ಸ್ವರ್ಗೋನ್ಮುಖ ಆರೋಹಣ ಎಂದರೆ, ಅಮೃತತ್ವದ ದಾರಿ ಮತ್ತು ಹುಟ್ಟು. "ಅಂಗಿರಸರು ಸತ್ಯದ ಅತ್ಯುನ್ನತ ಅವತರಣವನ್ನು (ವ್ಯಕ್ತೀಕರಣವನ್ನು)ಧರಿಸಿದ್ದಾರೆ. ಅವರು ಯಜ್ಞಾಗ್ನಿಯನ್ನು ಹೊತ್ತಿಸಿದವರು - ಅವರದರಲ್ಲಿ ಪೂರ್ಣತೆಯನ್ನು ಮುಟ್ಟಿದವರು. ಅವರು ಪಣಿಗಳ ಗವಾಶ್ವಗಳ ಸಂಪೂರ್ಣ ಸಂಪತ್ತನ್ನು ಗೆದ್ದು ಭೋಗಿಸಿದವರು. ಅಥರ್ವನ್ ಎಂಬವನು ಮೊದಲು ದಾರಿ ಮಾಡಿದನು. ಆಮೇಲೆ ಆನಂದಮಯನನ್ನೂ ವಿಧಿಯನ್ನೂ (ಕಾಯದೆಯನ್ನೂ) ಕಾಯಲು ಸೂರ್ಯನು ಹುಟ್ಟಿದನು. "ತತಃ ಸೂರ್ಯೋ ವ್ರತಪಾವೇನ ಅಜನಿ". ಉಶನಸ್ ಕಾವ್ಯನು ದನಗಳನ್ನು ಮೇಲಕ್ಕೆ ಹೊಡೆದುಕೊಂಡು ಹೋದನು. ವಿಧಿಯಧಿಪತಿಯ ಪುತ್ರನಾಗಿ ಹುಟ್ಟಿದ ಅಮೃತತ್ವವನ್ನು ಆ ಹಸುಗಳ ಹಾಗೂ ಯಾಗದ ನೆರವಿನಿಂದ ನಾವು ಗೆಲ್ಲುತ್ತೇವೆ. "ಯಮಸ್ಯ ಜಾತಂ ಅಮೃತಂ ಯಜಾಮಹೇ" (I.83.4,5) ಅಂಗಿರಸನು ದ್ರಷ್ಟಾರನ ಸಂಕಲ್ಪವನ್ನು ಪ್ರತಿನಿಧಿಸುವ ಋಷಿ. ಅಥರ್ವಣನು ಮಾರ್ಗಚಾರಿ ಋಷಿ. ಕಾವ್ಯ ಉಶನಸ್ಸನು ದ್ರಷ್ಟೃಜ್ಞಾನ ಜನ್ಯವಾದ ಸ್ವರ್ಗೋನ್ಮುಖವಾದ ಬಯಕೆ. ಅಂಗಿರಸರು ಕೀಳುಬಾಳಿನ ವಕ್ರತೆಯಲ್ಲಿ ಅಡಗಿದ್ದ ಪ್ರಬೋಧ ಸಂಪತ್ತನ್ನೂ ಪರಸತ್ಯದ ಶಕ್ತಿ ಸಂಪತ್ತನ್ನೂ ಗೆಲ್ಲುವವರು. ಅವರ ಬಲದಿಂದ ಅಥರ್ವನ್ನನು (ಅಥರ್ವಣನು)ದಾರಿ ಮಾಡುವನು. ಆಮೇಲೆ ಬೆಳಕಿನ (ಪ್ರಬೋಧದ) ದೊರೆಯಾದ ಸೂರ್ಯನು ದಿವ್ಯವಿಧಿ (ದಿವ್ಯವ್ರತ, ದಿವ್ಯ ನಿಯಮ) ಎಂಬುದನ್ನೂ ಯಮಶಕ್ತಿಯನ್ನೂ ಕಾಯುವವನಾಗಿ ಜನಿಸುತ್ತಾನೆ; ಉಶನಸ್ಸನು ಗೋಲಿಯಾದ ಪ್ರಬೋಧಗಳನ್ನು ಅಟ್ಟಿಕೊಂಡು ಹೋಗುತ್ತಾನೆ- ಆ ಪ್ರಬೋಧಗಳು ಪಳಚ್ಚನೆ ಹೊಳೆದ ಪರಮ-ಆನಂದಕ್ಕೊಯ್ದು ಮುಟ್ಟಿಸುವ, ಪರಮ ಸತ್ಯ ಮಾರ್ಗದ ಬಗೆಗಿನ ನಮ್ಮ ಉನ್ನತ ವಿಚಾರಕ್ಕೆ ಸಂಬಂಧಿಸಿದಂಥವುಗಳು - ಆ ಆನಂದವು ಸೂರ್ಯನ ವಶದಲ್ಲಿರುವಂಥದು. ಆದ್ದರಿಂದಲೇ ಆರ್ಯಾತ್ಮವು ತನ್ನ ಯಜ್ಞದ ಮೂಲಕ ಪರಮಸತ್ಯದ (ವ್ರತದಿಂದ) ವಿಧಿಯಿಂದ ಹುಟ್ಟಿದ ಅಮೃತತ್ವವನ್ನು ಆಶಿಸುತ್ತದೆ.



## ಅಧ್ಯಾಯ-೨೩

# ನಿಗಮನಗಳ ಸಾರಾಂಶ

ಋಗ್ವೇದದ ಅಂಗಿರಸ ಪುರಾಣ ಕಥೆಯನ್ನು ಸಾಧ್ಯವಿದ್ದ ಎಲ್ಲ ಬದಿಗಳಿಂದಲೂ (ದೃಷ್ಟಿಕೋನಗಳಿಂದಲೂ) ಅದರ ಎಲ್ಲ ಮುಖ್ಯ ಸಂಕೇತಾರ್ಥಗಳಲ್ಲೂ ಸೂಕ್ಷ್ಮ ವಿಶ್ಲೇಷಣೆ ಮಾಡಿ ಮುಗಿಸಿರುವುದರಿಂದ ಅದರಿಂದ ನಾವು ತರ್ಕಿಸಿದ ನಿಗಮನಗಳನ್ನು ದೃಢವಾಗಿ ಸಾರಾಂಶರೂಪದಲ್ಲಿಡಬಹುದಾಗಿದೆ. ನಾನು ಆಗಲೇ ಹೇಳಿದಂತೆ, ಅಂಗಿರಸ ಪುರಾಣ ಕಥೆಯೂ ವೃತ್ರನ ದೃಷ್ಟಾಂತ ಕಥೆಯೂ ವೇದದ ಎರಡು ಸೂಚಕ ಕಥೆಗಳಾಗಿವೆ. ಅವು ಮತ್ತೆ ಮತ್ತೆ ಎಲ್ಲೆಡೆಯೂ ಬರುತ್ತವೆ. ನಿಕಟವಾಗಿ ಸಂಬಂಧಿಸಿದ ಎರಡು ಸಾಂಕೇತಿಕ ಅಲಂಕಾರೋಕ್ತಿಗಳ ನೂಲುಗಳಂತೆ ಅವು ಸೂಕ್ತಗಳ ಮೂಲಕ ಹರಿಯುತ್ತವೆ; ಮತ್ತು ಅವುಗಳ ಸುತ್ತಲೂ ಇತರ ಎಲ್ಲ ವೈದಿಕ ಸಾಂಕೇತಿಕತೆಯೂ ಹೆಣೆದುಕೊಂಡಿದೆ. ಅವೇನು ಅದರ ಕೇಂದ್ರ ಕಲ್ಪನೆಗಳೆಂದಲ್ಲ, ಆದರೆ ಈ ಹಳೆಯ ಸೌಧದ ಎರಡು ಮುಖ್ಯವಾದ ಕಂಬಗಳು. ಅವುಗಳ ಅರ್ಥವನ್ನು ನಿಶ್ಚಯಿಸಿದಾಗ ನಾವು ಇಡೀ ಋಗ್ವೇದ ಸಂಹಿತೆಯ ಅರ್ಥವನ್ನು ನಿರ್ಧರಿಸಿಬಿಟ್ಟಂತಾಗುತ್ತದೆ. ವೃತ್ರನೂ ಜಲಗಳೂ ಮೋಡವನ್ನೂ ಮಳೆಯನ್ನೂ ಹಾಗೇ ಪಂಜಾಬಿಗೆ ಧುಮುಧುಮಿಸಿ ಬರುವ ಸಪ್ತಸಿಂಧುಗಳನ್ನು ಸಂಕೇತಿಸಿದರೆ ಮತ್ತು ಅಂಗಿರಸರು ಭೌತಿಕ ಉಷಃಕಾಲವನ್ನು ತರುವವರೆಂದಾದರೆ ಆಗ ವೇದವು ದೇವ-ಋಷಿ-ಅಸುರ ರೂಪಕೋಕ್ತಿಯ ಮೂಲಕ ಮೂರ್ತಿಕರಿಸಿದ ಪ್ರಾಕೃತಿಕ ಘಟನೆಗಳ ಒಂದು ಸಂಕೇತಸಂಹಿತೆಯಾಗುತ್ತದೆ. ವೃತ್ರನೂ ವಲನೂ ದ್ರಾವಿಡ ದೇವತೆಗಳಾದರೆ, ಪಣಿಗಳೂ ವೃತ್ರರೂ ಮಾನವ ಶತ್ರುಗಳಾದರೆ, ಆಗ ವೇದವು ಪ್ರಕೃತಿಪೂಜಕ ಬರ್ಬರರು ದ್ರಾವಿಡ ಭಾರತದ ಮೇಲೆ ದಾಳಿ ಮಾಡಿದುದರ ಒಂದು ಕಾವ್ಯಮಯ ಪೌರಾಣಿಕ ಕಥಾನಕವಾಗುತ್ತದೆ. ತದ್ವಿರುದ್ಧವಾಗಿ, ವೇದವು ಬೆಳಕು-ಕತ್ತಲೆಗಳೆಂಬ ಆಧ್ಯಾತ್ಮಿಕ ಶಕ್ತಿಗಳ ಋತಾನೃತಗಳ, ಜ್ಞಾನಾಜ್ಞಾನಗಳ, ಮೃತಿ-ಅಮೃತತ್ವಗಳ ನಡುವಣ ಹೋರಾಟದ ಒಂದು ಸಂಕೇತಸಂಹಿತೆ ಎಂದು ಬಾವಿಸಿದರೆ ಆಗ ಇಡೀ ವೇದದ ನಿಜವಾದ ಅರ್ಥವನ್ನು ಹೇಳಿದಂತಾಗುತ್ತದೆ.

ಅಂಗಿರಸ ಋಷಿಗಳು ಉಷಾನಯನಕರ್ತರು ಎಂದು ನಾವು ನಿಗಮಿಸಿದ್ದೇವೆ, ಕತ್ತಲಿನಿಂದ ಸೂರ್ಯನನ್ನು ಸಂರಕ್ಷಿಸುವವರೆಂದು ತೀರ್ಮಾನಿಸಿದ್ದೇವೆ. ಆದರೆ ಈ ಉಷೆ ಸೂರ್ಯ, ಕತ್ತಲುಗಳು ಆಧ್ಯಾತ್ಮಿಕ ಅರ್ಥಪೂರ್ಣವಾಗಿ ಉಪಯುಕ್ತವಾದ ಅಲಂಕಾರೋಕ್ತಿಗಳು. ಅಜ್ಞಾನಾಂಧಕಾರದಿಂದ ಪರಮಸತ್ಯವನ್ನು ಗೆಲ್ಲುವುದು ವೇದದ ಕೇಂದ್ರ ಕಲ್ಪನೆ; ಪರಮಸತ್ಯವಿಜಯದಿಂದ ಅಮೃತತ್ವದ ವಿಜಯವೂ ಸಾಧಿಸಲ್ಪಡುತ್ತದೆ. ವೇದದ "ಋತುವು" ಒಂದು ಆಧ್ಯಾತ್ಮಿಕ ಕಲ್ಪನೆಯೂ ಹೌದು, ಮಾನಸ ಶಾಸ್ತ್ರೀಯ ಕಲ್ಪನೆಯೂ ಹೌದು. ಅದೇ ನಿಜ ಇರವು, ನಿಜ ಪ್ರಜ್ಞೆ, ನಿಜವಾದ ಸತ್ತಾನಂದ-ಈ ಆನಂದವು ಭೂಮಿಯನ್ನೂ ಶರೀರವನ್ನೂ ಮೀರಿದ್ದು. ಈ ಪ್ರಾಣಪ್ರಜ್ಞೆಗೆ ಪ್ರಾಣಪ್ರಣೋದಕ್ಕೆ

ಹಾಗೂ ಸಾಮಾನ್ಯವಾದ ಬಾನಿನ ಅಥವಾ ಮನವು ಕಲ್ಪಿಸಿಕೊಂಡ ಸ್ವರ್ಗಕ್ಕೆ ಅತೀತವಾದದ್ದು. ದೇವತೆಗಳ ಸ್ವಗೃಹವೂ ಅಮೃತತ್ವದ ಬುನಾದಿಯೂ ಆದ ಅತಿಮಾನಸ, ಅತಿಪ್ರಜ್ಞೆಯ, ಸುಪ್ರಮಾನಸ, ಸತ್ಯದ ಉನ್ನತತರ ಸ್ತರವನ್ನು ಏರಲು ಈಯೆಲ್ಲ ಪ್ರಜ್ಞಾಸ್ತರಗಳನ್ನೂ ನಾವು ದಾಟಿಹೋಗಬೇಕು. ಇದೇ ಸ್ವರ್ - ಇದನ್ನು ಸೇರಲೆಂದೇ ಮುಂದಿನ ತಲೆಮಾರಿಗಾಗಿ ಅಂಗಿರಸರು ಮಾರ್ಗವನ್ನು ಶೋಧಿಸಿಟ್ಟರು.

ಅಂಗಿರಸರು ದಿವ್ಯಋಷಿಗಳು ಮತ್ತು ಅವರು ದೇವರುಗಳ ಮತ್ತು ಅವರ ಪಾರ್ಥಿವ ಪ್ರತಿನಿಧಿಗಳಾದ ಪ್ರಾಚೀನ ಪಿತೃಪಿತ್ರಾದಿಗಳ ವೈಶ್ವತ್ರಿಕ ಹಾಗೂ ಮಾನುಷ್ಯ ಕಾರ್ಯಗಳಲ್ಲಿ ನೆರವೀಯುವವರು. ಈ ಪ್ರಾಚೀನ ಅನುವಂಶ ಮೂಲ ಪುರುಷರು ಮೊದಲು ವಿವೇಕವನ್ನು (ಪ್ರಜ್ಞಾನವನ್ನು) ಕಂಡವರು. ವೈದಿಕ ಸೂಕ್ತಗಳು ಆ ಪ್ರಜ್ಞಾನಬ್ರಹ್ಮದ (ಪರಮಸತ್ಯದ) ಪವಿತ್ರಗಾನ, ಸ್ಮರಣೆ; ಮತ್ತು ಅನುಭವದಲ್ಲಿ ಪುನರ್ ನವೀಕರಿಸಿಕೊಳ್ಳಬೇಕಾದಂಥವುಗಳು. ಏಳು ದಿವ್ಯಾಂಗಿರಸರು ಅಗ್ನಿಯ ಮಕ್ಕಳು ಯಾ ಶಕ್ತಿಗಳು ; ದ್ರಷ್ಟ ಸಂಕಲ್ಪದ ಶಕ್ತಿಗಳು ಇವುಗಳ ಸಂಘಾತವು; ದಿವ್ಯಪ್ರಚೋದದ ಜ್ವಾಲೆ, ದಿವ್ಯಜ್ಞಾನದ ಸಹ ಮೂಲಪ್ರವೃತ್ತಿ-ಇದನ್ನು ವಿಜಯಕ್ಕಾಗಿ ಹೊತ್ತಿಸಲಾಗುತ್ತದೆ. ಪಾರ್ಥಿವ ಸತ್ತೆಯ ಬೆಳೆಗಳಲ್ಲಿ ಇದು ಗೂಢವಾಗಿರುವುದನ್ನು ಭೃಗುಗಳು (ಭಾರ್ಗವರು) ಕಂಡರು. ಆದರೆ ಅಂಗಿರಸರು ಯಜ್ಞಕುಂಡದಲ್ಲಿ ಇದನ್ನು ಹೊತ್ತಿಸುತ್ತಾರೆ ಮತ್ತು ಯಾಜ್ಞಿಕ ವರ್ಷ ಮುಗಿವವರೆಗಿನ ಅವಧಿಯಲ್ಲಿ ಇದನ್ನು ಕಾಯ್ದುಕೊಂಡಿರುತ್ತಾರೆ. ಆ ಅವಧಿಯು ಕತ್ತಲೆಯಿಂದ ಸತ್ಯಸೂರ್ಯನನ್ನು ಪುನಃ ಪಡೆಯಲು ಬೇಕಾದ ದಿವ್ಯಕಾಯಕದ ಅವಧಿಯನ್ನು ಸಂಕೇತಿಸುತ್ತದೆ. ೯ ತಿಂಗಳು ಯಾಗ ಮಾಡುವವರು ನವಗ್ವರು - ೯ ಹಸುಗಳನ್ನೋ ೯ ಕಿರಣಗಳನ್ನೋ ನೋಡುವ ಋಷಿಗಳು. ಅವರು ಸೂರ್ಯನ ಗೋವ್ರಜಶೋಧವನ್ನೂ ಪಣಿಗಳೊಡನೆ ಯುದ್ಧಕ್ಕೆ ಇಂದ್ರನು ಹೊರಡುವುದನ್ನೂ ಆರಂಭಿಸುತ್ತಾರೆ. ೧೦ ತಿಂಗಳು ಯಾಗಮಾಡುವವರು ದಶಗ್ವರು.ಅವರು ದಶಕಿರಣ ದ್ರಷ್ಟಾರರು; ಇಂದ್ರನೊಡನೆ ಅವರು ಪಣಿಗಳ ಗುಹೆಯಲ್ಲಿ ಹೊಕ್ಕು ಕಳೆದು ಹೋದ ದನದ ಗೋಲೆಗಳನ್ನು ಮರಳಿ ತರುತ್ತಾರೆ.

ಯಜ್ಞವೆಂದರೆ ಮನುಷ್ಯನು ತನ್ನ ಇರವಿನಲ್ಲಿಯ ಎಲ್ಲವನ್ನು ತನಗಿಂತ ಉನ್ನತತರವಾದ ಯಾ ದಿವ್ಯವಾದ ಪ್ರಕೃತಿಗೆ (=ಪರಾಶಕ್ತಿಗೆ) ಅರ್ಪಿಸುವುದೇ ಆಗಿದೆ; ದೇವತೆಗಳ ಉದಾರ ವರದಾನದಿಂದ ಯಾಜಕನ ಮನುಷ್ಯತ್ವವು ಸಮೃದ್ಧವಾಗುವುದೇ ಅದರ ಫಲ (=ಮಾನವೀಯತೆ, ದಯಾದಿ ಧರ್ಮಗಳು, ಆತ್ಮಗುಣಗಳು ಅಧಿಕವೂ ಸ್ಥಿರವೂ ಆಗುವುದೇ ಸಮೃದ್ಧಿ). ಹೀಗೆ ಲಬ್ಧವಾದ ಸಂಪತ್ತು ಒಂದು ಮಟ್ಟದ ಆಧ್ಯಾತ್ಮಿಕ ಐಶ್ವರ್ಯ, ಶ್ರೀಮಂತಿಕೆ ಎನ್ನಿಸುತ್ತದೆ. ಅದೊಂದು ಸುಖ -ಆ ಸುಖವೇ ಬಲ -ಆ ಬಲದಿಂದ ಪ್ರಯಾಣ ಮುನ್ನಡೆ; ಯಜ್ಞವೇ ಅಗ್ನಿಯ ನಾಯಕತ್ವದಲ್ಲಿ ಮೇಲಿನ ದಿವ್ಯಮಾರ್ಗವನ್ನು ಹಿಡಿದು ದೇವತೆಗಳತ್ತ ಹೋಗುತ್ತದೆ. ಇದಕ್ಕೆ ಪಿತೃಗಳಾದ ಅಂಗಿರಸರು ಸ್ವರ್‌ಬ ದಿವ್ಯ ಪ್ರಪಂಚಕ್ಕೆ ಪ್ರಯಾಣ ಮಾಡುವುದೇ ಮಾದರಿ. ಅವರ ಯಜ್ಞದ ಪ್ರಯಾಣವು ಒಂದು ಯುದ್ಧವೂ ಹೌದು. ಏಕೆಂದರೆ, ಅದು ಪಣಿವೃತ್ರಾದಿ ಅನೃತ ಶಕ್ತಿಗಳಿಂದಲೂ ದುಷ್ಟಶಕ್ತಿಗಳಿಂದಲೂ ಅಡ್ಡಿ ಮಾಡಲ್ಪಡುತ್ತದೆ. ಈ ಘರ್ಷಣೆಯಲ್ಲಿ ಇಂದ್ರ-ಅಂಗಿರಸರೊಂದಾಗಿ ಪಣಿಗಳೊಡನೆ ಹೋರಾಡುವುದು ಮುಖ್ಯ ಘಟನೆ.

ಯಜ್ಞಕ್ಕೆ ದಿವ್ಯಜ್ವಾಲೆಯನ್ನು ಹೊತ್ತಿಸುವುದು. ಘೃತಾಹುತಿ ಹಾಕುವುದು. ಸೋಮಮದ್ಯವನ್ನು ಸುರಿಯುವುದು ಮತ್ತು ಪವಿತ್ರಶಬ್ದಗಳನ್ನು ಯಾ ಮಂತ್ರಗಳನ್ನು ಹಾಡುವುದು ಎಂಬವು ಮುಖ್ಯ ಲಕ್ಷಣಗಳು. ಸೂಕ್ತದಿಂದಲೂ ಆಹುತಿಯಿಂದಲೂ ದೇವತೆಗಳು ಪುಷ್ಟರಾಗುತ್ತಾರೆ. ಅವರು ಹುಟ್ಟುತ್ತಾರೆ

ಎಂದು ಹೇಳಲಾಗಿದೆ-ಅವರು ಮಾನವನಲ್ಲಿ ಸೃಷ್ಟರಾಗುತ್ತಾರೆ ಯಾ ಆವಿರ್ಭವಿಸುತ್ತಾರೆ. ಈ ಪುಷ್ಟಿಯಿಂದಲೂ ಮಹತ್ತೆಯಿಂದಲೂ ಅವರು ಭೂಮ್ಯಾಕಾಶಗಳನ್ನು ಹೆಚ್ಚಿಸುತ್ತಾರೆ-ಅಂದರೆ-ಮಾನವನ ಭೌತಿಕ ಮತ್ತು ಮಾನಸಿಕ ಸತ್ತೆಯನ್ನು ಅದರ ತುತ್ತತುದಿಗೇರಿಸಿ ಅನಂತರ ಅದನ್ನು ಮೀರಿಸಿ ಅದಕ್ಕಿಂತ ಮೇಲಿನ ಲೋಕಗಳಿಗೋ ಪ್ರಜ್ಞಾಸ್ತರಗಳಿಗೋ ಒಯ್ಯುತ್ತಾರೆ ಅಥವಾ ಅದರ ಜಾಗದಲ್ಲಿ ಇವುಗಳನ್ನು ಸೃಜಿಸುತ್ತಾರೆ. ಮೇಲಿನಿರವೆಂದರೆ ದಿವ್ಯ - ಅದಕ್ಕೆ ಹೊಳೆ ಹೊಳೆವ ದನ, ಅನಂತ ಮಾತೆ, ಅದಿತಿ ಎಂಬುವಳೇ ಸಂಕೇತ. ಕೆಳಗಿನಿರವು ಅವಳ ಕಾಳರೂಪವಾದ ದಿತಿ-ಅದು ಅವಳ ಅಂಕೆಯಲ್ಲಿ ಇರುತ್ತದೆ. ದಿವ್ಯ ಅನಂತ, (ಮೇಲ್ತರದ) ಜೀವನವೇ ಯಜ್ಞದ ಧ್ಯೇಯ, ಅದನ್ನು ಗೆದ್ದುಕೊಳ್ಳುವುದೇ ಗುರಿ. ಆ ಉದಾತ್ತ ಸತ್ತೆಯನ್ನು ಪಡೆಯುವುದರೊಡನೆ ಕೆಳಗಿನ ಯಾ ಮನುಷ್ಯ ಜೀವನವನ್ನು ಉಕ್ತಸತ್ತೆಯ ಸತ್ಯಕ್ಕೆ ಹಾಗೂ ನಿಯಮಕ್ಕೆ (ವಿಧಿಗೆ) ಒಳಪಡಿಸುವುದು ಯಜ್ಞೋದ್ದೇಶ. ಯಜ್ಞ ಕುಂಡಕ್ಕೆ ಹೊಯ್ಯುವ ಘೃತವೆಂದರೆ ರಾಜಧೇನುವಿನ ಹಾಲು(ರಸ). ಅದು ಮಾನವ ಮಾನಸಿಕತೆಯಲ್ಲಿಯ ಸೌರ ಸ್ಪಷ್ಟತೆ ಅಥವಾ ಹೊಳಪು, ಸೋಮವೆಂದರೆ ಬಾಳುವೆಯ ಅಮರ ಆನಂದ. ಈ ಬಾಳು ಯಾ ಜೀವನ ಎಂಬುದು ಅಭೌತಿಕ ಅಮಾನಸಿಕ, ದಿವ್ಯ ಸತ್ತೆ, ದಿವ್ಯಾಸ್ತಿತ್ವ. ಜಲದಲ್ಲೂ ಸಸ್ಯದಲ್ಲೂ ಅಡಗಿದ್ದ ಸೋಮವನ್ನು ಹಿಂಡಿ ತೆಗೆಯುವುದು ದೇವತೆಗಳ ಹಾಗೂ ಮಾನವರ ಪಾನಕ್ಕಾಗಿ. ಶಬ್ದ ಯಾ ಮಂತ್ರ ಎಂದರೆ ಸ್ಫೂರ್ತ ವಾಣಿ. ಅದು ಪರಮಸತ್ಯದ ವಿಚಾರ ಜ್ಯೋತಿಯನ್ನು ಅಭಿವ್ಯಕ್ತಿಸುತ್ತದೆ. ಆ ಪರಮ ಸತ್ಯವು ಜೀವಾತ್ಮನಿಂದ ಮೇಲೇಳುತ್ತದೆ, ಹೃದಯದಲ್ಲಿ ರೂಪಿಸಲ್ಪಟ್ಟದ್ದು ಅದು; ಮನಸ್ಸು ಅದನ್ನು ಸಾಕಾರಗೊಳಿಸಿದ್ದು. ಘೃತಪುಷ್ಟನಾದ ಅಗ್ನಿಯೂ ಸೋಮಪಾನಲಬ್ಧವಾದ ಮಿರ್ರನೆ ಮಿಂಚುವ ಬಲದಿಂದಲೂ ಸಂತೋಷದಿಂದಲೂ ಮಂತ್ರ ಪೌಷ್ಟಿಕದಿಂದಲೂ ಪ್ರಚೋದನನಾದ ಇಂದ್ರನೂ ಸೌರಗೋವಜ್ರಗಳನ್ನು ಮರಳಿ ಪಡೆಯುವುದರಲ್ಲಿ ಅಂಗಿರಸರಿಗೆ ಸಹಾಯ ಮಾಡುತ್ತಾರೆ.

ಬೃಹಸ್ಪತಿಯು ಸಿಸೃಕ್ಷಾಶಬ್ದಕ್ಕೆ (ಮಂತ್ರಕ್ಕೆ) ಒಡೆಯನು. ಅಗ್ನಿಯು ಸರ್ವೋಚ್ಚ ಅಂಗಿರಸನಾದಾಗ ಅವನ ಜ್ವಾಲೆಯಿಂದ ಅಂಗಿರಸರು ಹುಟ್ಟಿದರು. ಹಾಗೆ ಹುಟ್ಟಿದ ಅಂಗಿರಸರಲ್ಲಿ ಬೃಹಸ್ಪತಿಯು ಸಪ್ತಾಸ್ಯನಾದ ಅಂಗಿರಸನು. ಆ ಸಪ್ತಾಸ್ಯಗಳೆಂದರೆ ಕಣ್ತೆರೆಯಿಸುವ ವಿಚಾರದ ಸಪ್ತ ಕಿರಣಗಳು ಮತ್ತು ಅವುಗಳನ್ನು ವ್ಯಕ್ತಪಡಿಸುವ ಸಪ್ತಮಂತ್ರಗಳು. ಆ ಮಂತ್ರಗಳನ್ನು ಹೇಳಬಲ್ಲವರು ಶಕ್ತಿಸ್ವರೂಪದ ಈ ಋಷಿಗಳು. ಪರಸತ್ಯದ ಸಂಪೂರ್ಣವಾದ.ವಿಚಾರ ; ಅದು ಸಪ್ತಶೀರ್ಷ ; ಅದು ಚತುರ್ಥವಾದ ದಿವ್ಯಲೋಕವನ್ನು-ಯಜ್ಞದ ಧ್ಯೇಯವಾದ ಸಂಪೂರ್ಣ ಆಧ್ಯಾತ್ಮಿಕ ಐಶ್ವರ್ಯವನ್ನು ಗೆಲ್ಲುವುದರ ಮೂಲಕ ಮನುಷ್ಯನಿಗಾಗಿ ಗೆದ್ದುಕೊಡುತ್ತದೆ. ಆದುದರಿಂದ ಅಗ್ನಿ, ಇಂದ್ರ, ಬೃಹಸ್ಪತಿ, ಸೋಮ ಎಂಬೀ ಎಲ್ಲರೂ ಸೌರಗೋವ್ರಜಗಳನ್ನು ಗೆದ್ದವರೆಂದೂ ಅವುಗಳನ್ನು ಮನುಷ್ಯನಿಂದ ಮುಚ್ಚಿಟ್ಟು ಹಿಡಿದಿಟ್ಟುಕೊಂಡಿರುವ ದಸ್ಯುಗಳನ್ನು ನಾಶಮಾಡಿದವರೆಂದೂ ವರ್ಣಿಸಲಾಗಿದೆ. ಪರಸತ್ಯದ ಸ್ಫೂರ್ತಿಸ್ವರೂಪಿಣಿ ಅಥವಾ ಮಂತ್ರಧಾರಾಸ್ವರೂಪಿಣಿ ಎನ್ನಿಸಿದ ಸರಸ್ವತಿಯು ಕೂಡ ದಸ್ಯುವಿನಾಶಿಕೆಯೂ ಉಜ್ಜ್ವಲವ್ರಜವಿಜೇತ್ರಿಯೂ ಆಗಿದ್ದಾಳೆ, ಮತ್ತು ಅವುಗಳನ್ನು ಶೋಧಿಸಿದಾಕೆ ಸರಮೆ; ಅವಳು ಇಂದ್ರನ ಮುಂಚೂಣಿಯಲ್ಲಿ ಹೋದವಳು, ಸೌರ ಯಾ ಉಷಾದೇವಿ ಮತ್ತು ಪರಮಸತ್ಯದ ಪ್ರಾತಿಭಶಕ್ತಿಸ್ವರೂಪಿಣಿ ಎಂದು ತೋರುತ್ತದೆ. ಉಷೆ ಅಥವಾ ಹಿಂಬೆಳಗು ಆ ಮಹಾವಿಜಯ ಸಾಧನೆಯಲ್ಲಿ ಏಕಕಾಲಕ್ಕೆ ಕಾರ್ಯಕರ್ತ್ರಿಯೂ ಹೌದು, ತನ್ನ ಪೂರ್ಣಾಗಮನದಲ್ಲಿ ಆ ವಿಜಯದ ವಿರಾಜಮಾನಫಲಿತೆಯೂ ಹೌದು.

ಉಷೆಯು ದಿವ್ಯ ಹಿಂಬೆಳಗು (ಸೂರ್ಯೋದಯವು ಮುಂದೆ ಬರುವ ಮುಂಬೆಳಗು). ಏಕೆಂದರೆ ಸೂರ್ಯನು (ಅತಿಮಾನಸ ಸತ್ಯಸ್ವರೂಪನು) ಅನಂತರ ಉದಂಯಿಸುವನು. ಅವನು ತರುವ ಹಗಲೇ ನಿಜಜ್ಞಾನದಲ್ಲಿಯ ನಿಜಜೀವನ-ಅವನು ಇರುಳನ್ನೋಡಿಸುತ್ತಾನೆ-ಆ ಇರುಳೆಂಬುದೇ ಅಜ್ಞಾನ. ಅದು ತನ್ನ ಹೊಟ್ಟೆಯಲ್ಲಿ ಉಷೆಯನ್ನು ಮುಚ್ಚಿಟ್ಟುಕೊಂಡಿರುತ್ತದೆ. ಉಷೆಯೇ ಸೂನೃತ ಪರಮಸತ್ಯ ಮತ್ತು ಹಲವಾರು ಉನ್ನತ (ದಿವ್ಯ) ಸತ್ಯಗಳ ತಾಯಿ. ದಿವ್ಯೋಷಸ್ಸಿನ ಈ ಸತ್ಯಗಳನ್ನು ಅವಳ ದನಗಳೆಂದೂ ಲಸದ್‌ವ್ರಜಗಳೆಂದೂ ಕರೆಯಲಾಗಿದೆ. ಅವನ್ನು ಅನುಸರಿಸಿ ಬರುವ ಮಹಾಸತ್ಯದ ಪ್ರಣೋದ ಸೇನೆಯು ಜೀವನವನ್ನು ಆಕ್ರಮಿಸಿದಾಗ ಕುದುರೆಗಳೆನ್ನಿಸುತ್ತವೆ. ವೈದಿಕ ಸಾಂಕೇತಿಕತೆಯ ಬಹ್ವಂಶವು ಈ ದನ-ಕುದುರೆಗಳ ಸುತ್ತ ತಿರುಗುತ್ತದೆ; ಏಕೆಂದರೆ ದೇವರಿಂದ ಮನುಷ್ಯನು ಪಡೆಯಬಯಸುವ ಸಂಪತ್ತಿನ ಮುಖ್ಯಾಂಗಗಳು ಇವೇ. ಅಂಧಕಾರ ರಾಜ್ಯದ ದೊರೆಗಳಾದ ಅಸುರರು(ದಿತಿಜರು) ತಮ್ಮ ಗುಪ್ತ ಅವಮಾನಸದ ಪಾತಾಳ ಗುಹೆಯಲ್ಲಿ ಉಷೆಯ ಗೋಗಳನ್ನು ಕದ್ದು ಮುಚ್ಚಿಟ್ಟುಕೊಂಡಿರುತ್ತಾರೆ. ಆ ಗೋವುಗಳೇ ಜ್ಞಾನದ ಪ್ರಬೋಧಗಳು, ಪರಸತ್ಯದ ವಿಚಾರಗಳು "ಗಾವೋ ಮತಯಃ". ಅವುಗಳನ್ನು ಕಾರಾಗೃಹದಿಂದ ಮುಕ್ತಗೊಳಿಸಬೇಕು. ಅವುಗಳ ಬಿಡುಗಡೆಯೇ ದಿವ್ಯೋಷೆಯ ಉತ್‌ಸರತ್ ಶಕ್ತಿಗಳು.

ಅದು ಕಾರ್ಗತ್ತಲಲ್ಲಿ ಬಿದ್ದಿದ್ದ ಸೂರ್ಯನ ಪುನಃಪ್ರಾಪ್ತಿಯೂ ಹೌದು. ಏಕೆಂದರೆ, ಪಣಿಗಳ ಗವಿಯಲ್ಲಿ ಇಂದ್ರಾಂಗಿರಸರು ಹುಡುಕಿತೆಗೆದ "ತತ್ ಸತ್ಯ" ಎಂದರೆ ಸೂರ್ಯನೆಂದೇ ಹೇಳಲಾಗಿದೆ. ಗುಹೆಯನ್ನು ಸೀಳಿದ್ದರಿಂದ ಪರಸತ್ಯದ ಕಿರಣರೂಪದ ದಿವ್ಯೋಷಾಗೋಗಳು ಸತ್ತಾಗಿರಿಯನ್ನೇರುವುವು ಮತ್ತು ಪರಂಪಾರವನ್ನು ಮುಟ್ಟುವವರೆಗೆ, ಜಲಧಿಯಲ್ಲಿ ತೇಲಿ ಹೋಗುವ ಹಡಗನ್ನು ಹೇಗೋ ಹಾಗೆ ಚಿಂತಕರು ಕರೆದೊಯ್ದಾಗ ಸೂರ್ಯನೂ ದಿವ್ಯಾಸ್ತಿತ್ವದ ಮಿಂಚುವ ಮೇಲ್ಗಡಲನ್ನು ಸೇರುತ್ತಾನೆ.

ಗೋವೃಂದಗಳನ್ನು ಅಡಗಿಸಿಡುವ ಪಣಿಗಳು ಪಾತಾಳ ಗುಹೆಯ ಯಜಮಾನರು. ಅವರು ಒಂದು ವರ್ಗದ ದಸ್ಯುಗಳು. ವೈದಿಕ ಸಂಕೇತಶಾಸ್ತ್ರಾನುಸಾರವಾಗಿ ಅವರು ಆರ್ಯರ, ಆರ್ಯದೇವರುಗಳ ಮತ್ತು ಋಷಿಗಳ (ದ್ರಷ್ಟಾರರ) ಹಾಗೂ ಕಾರ್ಯಕರ್ತರ ಎದುರು ನಿಲ್ಲುವವರೆಂದು ಚಿತ್ರಿಸಲಾಗಿದೆ. ಯಾಜಕನು ಆರ್ಯನು; ಪ್ರಬೋಧಕ ಪವಿತ್ರ ಮಂತ್ರಗಳನ್ನು ಕಂಡವನು ; ಆರ್ಯನು ದೇವತೆಗಳನ್ನು ಬಯಸಿ ಅವರನ್ನು ಬಲಪುಷ್ಟರನ್ನಾಗಿ ಮಾಡುವವನು ಆರ್ಯನು-ಹಾಗೇ ಅವರಿಂದ ಬಲಪುಷ್ಟನಾಗುವವನೂ ಹೌದು. ಆರ್ಯನ ಬಲಪುಷ್ಟಿಯೆಂದರೆ ನಿಜವಾದ ಇರವಿನ ವಿಸ್ತಾರವನ್ನು ಹೊಗುವುದೇ ಆಗಿದೆ; ಅವನು ಪರಂಜ್ಯೋತಿಗೆ ಪರವಾಗಿ ಹೋರಾಡುವ ಯೋಧನು ಮತ್ತು ಪರಸತ್ಯವನ್ನು ಕುರಿತು ಪ್ರಯಾಣ ಮಾಡುವವನು. ದಸ್ಯುವು ಅದಿವ್ಯ ಜೀವಿ, ಅವನು ಯಜ್ಞಮಾಡನು; ಸರಿಯಾಗಿ ತಾನು ಬಳಸಲಾರದ ಐಶ್ವರ್ಯವನ್ನವನು ಗಳಿಸುತ್ತಾನೆ; ಹಾಗೆ ಬಳಸಲಾರದವನಾಗಲು - ಅವನು ಮಂತ್ರ ಹೇಳಲಾರ, ಅತಿಮಾನಸ ಸತ್ಯವನ್ನು ಮಾನಸೀಕರಿಸಿಕೊಳ್ಳಲಾರ. ಮಂತ್ರವನ್ನು ದ್ವೇಷಿಸುತ್ತಾನೆ, ದೇವತೆಗಳನ್ನೂ ಯಜ್ಞವನ್ನೂ ಕಂಡರೆ ಕೆಂಡ ಕಾರುತ್ತಾನೆ ಮತ್ತು ಉದಾತ್ತ ಜೀವನಕ್ಕಾಗಿ ತನ್ನದೇನನ್ನೂ ಕೊಡದೆ ಆರ್ಯನ ಆಸ್ತಿಯನ್ನು ಕದ್ದು ಕಸಿದಿಟ್ಟುಕೊಂಡಿರುತ್ತಾನೆ-ಎಂಬುದೇ ಕಾರಣ. ಆತನು ಕಳ್ಳನು, ಹಗೆಯು, ತೋಳನು, ಭಕ್ಷಕನು, ವಿಭಾಜಕನು, ಕಂಟಕನು, ಆಸ್ತಿಯನ್ನು ಹೂತಿಟ್ಟುಕೊಳ್ಳುವವನು. ದಸ್ಯುಗಳು ಅಜ್ಞಾನಾಂಧಕಾರಗಳ ಶಕ್ತಿಗಳು; ಅವರು ಸತ್ಯವನ್ನೂ ಅಮೃತತ್ವವನ್ನೂ ಬಯಸುವವರನ್ನು ವಿರೋಧಿಸುತ್ತಾರೆ. ದೇವತೆಗಳು ಬೆಳಕಿನ ಶಕ್ತಿಗಳು, ಅನಂತದ ಮಕ್ಕಳು, ಒಬ್ಬನೇ ಒಬ್ಬನಾದ ಮಹಾದೇವನ ರೂಪಗಳು, ವ್ಯಕ್ತಿಸ್ವರೂಪಗಳು ಅವನು ಅವರ ಸಹಾಯ-ವೃದ್ಧಿಗಳಿಂದಲೂ ಮಾನವರ ಯತ್ನಗಳಿಂದಲೂ ಮಾನವರನ್ನು ಸತ್ಯ ಮತ್ತು ಅಮೃತತ್ವಗಳ ಎತ್ತರಕ್ಕೆ ಎತ್ತುತ್ತಾನೆ.

ಈ ಪ್ರಕಾರ, ಅಂಗಿರಸರ ಪುರಾಣಕಥೆಯು ವೇದದ ಇಡೀ ರಹಸ್ಯದ ಬೀಗದ ಕೈಯನ್ನು ನಮಗೆ ಕೊಡುತ್ತದೆ. ಹೇಗೆಂದರೆ, ಆರ್ಯರು ಕಳೆದುಕೊಂಡ ದನಗಳೂ ಕುದುರೆಗಳೂ ದೇವತೆಗಳಿಂದ ಅವರಿಗೆ ಮತ್ತೆ ಕೊಡಿಸಲ್ಪಡುವುವು. ಆ ದನಗಳು ಕುದುರೆಗಳು ಇಂದ್ರನ ಒಡೆಯತನಕ್ಕೆ ಸೇರಿದಂಥವುಗಳು-ಅವನು ಕೊಡುಗೈ ದೊರೆ ಮತ್ತು ನಿಜವಾಗಿ ನೋಡಿದರೆ ಅವನೇ ಆ ಗೋವು ಮತ್ತು ಹಯ. ಅವೆಂದೂ ಭೌತಿಕ ದನ-ಕುದುರೆಗಳಲ್ಲ. ಈ ಯಜ್ಞೋದ್ದಿಷ್ಟ ಸಂಪತ್ತುಗಳ ಅಂಗಗಳು ಆಧ್ಯಾತ್ಮಿಕ ಸಂಪತ್ತಿನ ಸಂಕೇತಗಳಾದರೆ, ಹಾಗೇ ಅವುಗಳ ಇತರ ಅಂಗಗಳಾದ (ಸದಾ ಅವುಗಳೊಡನಿರುವ) ಸುತರು. ಜನರು, ಚಿನ್ನ, ಭಂಡಾರ, ಇತ್ಯಾದಿಗಳೂ ಆಧ್ಯಾತ್ಮಿಕ ಸಂಕೇತಗಳೆಂದೇ ಆಗುತ್ತವೆ. ಘೃತಜನಕವಾದ ಗೋವು ಭೌತಿಕವಲ್ಲವಾದರೆ-ಪರಂಜ್ಯೋತಿ ಸ್ವರೂಪಿಯಾದ ಮಾತೃಶ್ರೀಯಾದರೆ-ಆ ಧೇನುಜವಾದ ಘೃತವೂ-ಅದು ನೀರಲ್ಲಿ ಸಿಕ್ಕಲಿ, ಪಣಿಗಳಿಂದ ದನಗಳಲ್ಲಿ ಮೂರು ಪಟ್ಟು ಹಿಂಡಲ್ಪಟ್ಟದ್ದಾಗಿರಲಿ-ಏನೇ ಆದರೂ ಅದು ಭೌತಿಕ ತಿಳಿವೆಣ್ಣೆಯಲ್ಲ-ಹಾಗೇ ಸೋಮನ ಮಧು ಮಾಕ್ಷಿಕ ಮದ್ಯವಾದರೂ- ಅದು ನೀರಲ್ಲಿದೆಯೆಂದು ಹೇಳಿರಲಿ, ಮಧುರಸವಾಗಿ ಕಡಲಿಂದ ಮೇಲೇರುತ್ತದೆ ಎಂದು ಹೇಳಿರಲಿ, ದೇವತೆಗಳತ್ತ ಮೇಲೆ ಮೇಲೆ ಹರಿಯುತ್ತದೆ ಎಂದು ಹೇಳಿರಲಿ - ಏನೇ ಆದರೂ ಅದು ಭೌತಿಕ ಆಹುತಿಯಾಗದು. ಇವೆಲ್ಲವೂ ಭೌತಿಕವಲ್ಲವಾದರೆ ಯಜ್ಞದ ಮಿಕ್ಕ ಆಹುತಿಗಳೂ (ಹವಿಸ್ಸುಗಳೂ) ಸಾಂಕೇತಿಕಗಳೇ ಆಗಬೇಕಾಗುತ್ತದೆ. ಆದುದರಿಂದ ಬಾಹ್ಯಯಜ್ಞವೆಂಬುದುದೊಂದು ಆಂತರಿಕ ಸಮರ್ಪಣೆಯಾಗುತ್ತದೆ ಮತ್ತು ಅಂಗಿರಸಋಷಿಗಳೂ ಪಾಕ್ಷಿಕವಾಗಿ ಸಾಂಕೇತಿಕರಾದದ್ದೇ ಆದರೆ ಅಥವಾ ಅರೆದೇವತೆಗಳೆಂದೇ ಆದರೆ, ದೇವತೆಗಳೊಡನೆ ಕೆಲಸಮಾಡುವವರಾದರೆ, ಅವರಂತೆಯೇ ಯಜ್ಞದಲ್ಲಿ ಸಹಾಯ ಮಾಡುವವರಾದರೆ- ಅವರಂತೆಯೇ ಭೃಗುಗಳೂ ಅಥರ್ವನ್ನರೂ (ಅಥರ್ವರೂ) ಉಶನರೂ ಕುತ್ಸರೂ ಹಾಗೇ ಅವರಂಥ ಇತರರೂ ಅವರೊಡನೆ ಅವರ ಯಜ್ಞಕಾರ್ಯದಲ್ಲಿ ಭಾಗವಹಿಸುವವ-ರಾದುದರಿಂದ ಸಾಂಕೇತಿಕರೇ ಆಗುತ್ತಾರೆ. ಅಂಗಿರಸ ಪುರಾಣ ಕಥೆಯೂ ದಸ್ಯುಗಳೊಡನಾದ ಘರ್ಷಣವೂ (ಹೋರಾಟವೂ) ದೃಷ್ಟಾಂತದ ಕಟ್ಟುಕತೆಗಳಾದರೆ- ಅದೇ ಪ್ರಕಾರ ಋಗ್ವೇದದಲ್ಲಿ ನಾವು ಕಾಣುವ ಇತರ ಪುರಾಣಕಥೆಗಳಲ್ಲಿ ಬರುವಂತೆ ಋಷಿಗಳಿಗೆ ದೇವತೆಗಳು ದೈತ್ಯರ ವಿರುದ್ಧವಾಗಿ ಮಾಡುವ ಸಹಾಯ ಮುಂತಾದವುಗಳೂ ಸಾಂಕೇತಿಕಗಳೇ ಆಗಬೇಕಾಯಿತು. ಏಕೆಂದರೆ, ಈ ಕಥೆಗಳನ್ನೂ ಅದೇ ಪ್ರಕಾರ ಯಜ್ಞಕ್ಕೆ ಸಂಬಂಧಿಸಿ ಹೇಳಿರುವುದರಿಂದ ಮತ್ತು ಪದೇ ಪದೇ ಅವನ್ನು ಅಂಗಿರಸರ ಕಥೆಗಳೊಡನೆ ಅದೇ ಪ್ರಕಾರ ಸೇರಿಸಿರುವುದರಿಂದ ಇವು ಸಾಂಕೇತಿಕವಾಗುವುದು ಕ್ರಮಪ್ರಾಪ್ತ.

ಹಾಗೇ ಈ ದಸ್ಯುಗಳು ದಾನಕೊಡುವುದನ್ನೂ ಯಜ್ಞಮಾಡುವುದನ್ನು ನಿರಾಕರಿಸುತ್ತಾ ಮಂತ್ರವನ್ನು ದ್ವೇಷಿಸಿ ದೇವತೆಗಳನ್ನು ಹಗೆಗಳೆಂದು ತಿಳಿದು ಆರ್ಯರೊಡನೆ ಪದೇ ಪದೇ ಯುದ್ಧ ಮಾಡುತ್ತಾ ವೃತ್ರ-ಪಣ್ಯಾದಿಗಳೆಂದೇ ಆದರೆ ಅವರಾರೂ ಮಾನವ್ಯ ಶತ್ರುಗಳಾಗರು; ಆದರೆ ಅಂಧಕಾರದ, ಅನೃತದ ಮತ್ತು ದೌಷ್ಟ್ಯದ ಶಕ್ತಿಗಳೆಂದೇ ಗಣಿತರಾಗುತ್ತಾರೆ. ಆಗ ಆರ್ಯರ ಯುದ್ಧಗಳ, ರಾಜರ ಮತ್ತು ರಾಷ್ಟ್ರಗಳ ಕಲ್ಪನೆಯು ಇಡಿಯಾಗಿ ಆಧ್ಯಾತ್ಮಿಕ ಸಂಕೇತದ ಮತ್ತು ನೀತಿ ಕಥೆಯ ಸ್ವರೂಪವನ್ನು ತಾಳುವುದು. ಆ ಕಥೆಗಳಲ್ಲವೂ ಇಡಿಯಾಗಿ ಅಂಥವುಗಳಾಗಿರಲಿ ಅಥವಾ ಬಿಡಿಯಾಗಿ (ಪಾಕ್ಷಿಕವಾಗಿ) ಅಂಥವುಗಳಾಗಿರಲಿ- ಇದು ಹಾಗೋ ಹೀಗೋ ಎಂದು ನಿಶ್ಚಯಿಸಲು ನಮಗೀಗ ಪ್ರಸ್ತುತವಲ್ಲದ ಇನ್ನೂ ಹೆಚ್ಚಿನ ವಿವರ ಪೂರ್ವಕವಾದ ಪರೀಕ್ಷಣವು ಅಗತ್ಯ-ಅನ್ಯಥಾ ಸಾಧ್ಯವೇ ಇಲ್ಲ. ವೈದಿಕ ಸೂಕ್ತಗಳು ಪ್ರಾಚೀನ ಭಾರತೀಯ ಯೋಗಿಗಳ ಸಾಂಕೇತಿಕ ಅಮರವಾಣಿ

ಮತ್ತು ಅವುಗಳ ಅರ್ಥವು ಸಾಂಕೇತಿಕ ಮತ್ತು ಮಾನಸ ಶಾಸ್ತ್ರೀಯ. ಮೇಲುನೋಟದಿಂದಲೇ ಈ ನಿರ್ಣಯಕ್ಕೆ ಬರುವುದು ನಮ್ಮ ಉದ್ದೇಶವಾಗಿತ್ತು. ಆ ಉದ್ದೇಶವನ್ನು ನಾವೀಗ ಪೂರ್ತಿಗೊಳಿಸಿ-ದಂತಾಯಿತು. ಹೇಗೆಂದರೆ ಆಗಲೇ ಈ ದೃಷ್ಟಿಕೋನದಿಂದ ವಿವರಪೂರ್ವಕವಾಗಿ ಇಂಥ ಭಾವಗೀತೆಯ ಸಾಂಕೇತಿಕತೆಯ ಮೂಲಕ ವೇದಾಭ್ಯಾಸ ಮಾಡಲು ಸಾಕಷ್ಟು ಆಧಾರವಿದೆ.

ನಮ್ಮ ಪ್ರಕರಣವನ್ನು ಇನ್ನೂ ಹೆಚ್ಚು ದೃಢ ಪಡಿಸಬೇಕಾದರೆ ಅಂಗಿರಸರಿಗೂ ಬೆಳಕಿಗೂ ಇರುವ ಪುರಾಣ ಕಥೆಯ ಸಂಬಂಧವನ್ನು ವೃತ್ರ ಹಾಗೂ ಜಲಗಳಿಗೆ ಸಂಬಂಧಿಸಿದ ಪುರಾಣ ಕಥೆಯೊಡನೆ ಇರುವ ಸಂಬಂಧದೊಟ್ಟಿಗೆ ತುಲನೆ ಮಾಡಿ-ಅಂಥ ಹೋಲಿಕೆ ಈ ಇಬ್ಬಗಳ ಕಥೆಗಳಲ್ಲಿ ಇರುವುದನ್ನು ನಾವು ನೋಡಿರುವುದರಿಂದ- ಪರೀಕ್ಷಿಸುವುದು ಸರಿಯಾದ ಮಾರ್ಗ. ಮೊಟ್ಟಮೊದಲು ವೃತ್ರಹಂತಕನಾದ ಇಂದ್ರನು ಅಗ್ನಿಯ ಜೊತೆಗೇ ಇರುತ್ತಾನೆ. ಅವನು ವೈದಿಕ ದೇವತಾಪರಂಪರೆಯ ಇಬ್ಬರು ಮುಖ್ಯ ದೇವತೆಗಳಲ್ಲಿ ಒಬ್ಬನು. ಅವನ ಚಾರಿತ್ರ ಮತ್ತು ಕರ್ತವ್ಯಗಳನ್ನು ಸರಿಯಾಗಿ ನಿಶ್ಚಯಿಸಿದರೆ-ಅದು ಸಾಧ್ಯವಾದರೆ - ಆರ್ಯದೇವತೆಗಳ ಸರ್ವಸಾಧಾರಣ ಮಾದರಿಯನ್ನು ನಾವು ದೃಢವಾಗಿ ನಿರ್ಧರಿಸಿಬಿಟ್ಟಂತಾಗುತ್ತದೆ. ಎರಡನೆಯದಾಗಿ, ಮರುತ್ತುಗಳು ಅವನ ಸಹಚರರು, ಮಂತ್ರಗಾಯಕರು, ಎಂಬುದು ವೈದಿಕ ಆರಾಧನೆಯ ಪ್ರಕೃತಿ ಪೂಜಾಸಿದ್ಧಾಂತದ ಬಲಿಷ್ಠವಾದ ಅಂಶ; ಮರುತ್ತುಗಳು ನಿಃಸಂದೇಹವಾಗಿ ಮಳೆ ಮೋಡ ಹೊತ್ತ ಗಾಳಿಯಾಣ್ಮರು, ಗಾಳಿದೇವರು. ವೇದದ ಮಹಾದೇವತೆಗಳಲ್ಲಿ ಅಗ್ನಿ, ಅಶ್ವಿಗಳು, ವರುಣ, ಮಿತ್ರ, ತ್ವಷ್ಟ, ಸ್ತ್ರೀದೇವತೆಗಳು, ಸೂರ್ಯ, ಉಷೆ ಮುಂತಾದ ಯಾರಿಗೂ ಇಂಥ ಪ್ರಸಿದ್ಧ ಭೌತಿಕ ಲಕ್ಷಣವಿಲ್ಲ. ಈಗ ಈ ಮೇಘಂದರ ವಾಯು ದೇವತೆಗಳು ಮಾನಸ ಶಾಸ್ತ್ರೀಯ ಹಾಗೂ ಸಂಕೇತ ಶಾಸ್ತ್ರೀಯ ಲಕ್ಷಣವುಳ್ಳವುಗಳೆಂಬುದನ್ನು ತೋರಿಸಿಕೊಟ್ಟರೆ ಇನ್ನಾವ ದೂರಗಾಮಿ ಸಂದೇಹವೂ ವೇದದ ಮತಧರ್ಮ ಮತ್ತು ಕರ್ಮಗಳ ಗಭೀರತರ ಅರ್ಥದ ಬಗೆಗೆ ಉಳಿಯಲಾರದು. ಕೊನೆಯದಾಗಿ, ವೃತ್ರನನ್ನೂ ಅವನ ಸಂಪರ್ಕವುಳ್ಳ ಶುಷ್ಣ, ನಮುಚಿ ಮತ್ತು ಇತರ ಅಸುರರ ತಂಡವನ್ನು ಸೂಕ್ಷ್ಮ ವಿಶ್ಲೇಷಣೆಗೊಳಪಡಿಸಿದಾಗ, ಆಧ್ಯಾತ್ಮಿಕ ದೃಷ್ಟಿಯಿಂದ, ಅವರೆಲ್ಲಾ ದಸ್ಯುಗಳೆಂದು ಕಂಡುಬಂದರೆ ಮತ್ತು ವೃತ್ರ ತಡೆಗಟ್ಟುವ ಸ್ವರ್ಗೀಯ ಜಲಗಳ ಅರ್ಥವನ್ನು ದೃಷ್ಟಾಂತರೂಪಕ ಕಥೆಗಳು ಎಂಬುದು ಗೊತ್ತಾಗಿ ಅದನ್ನೇ ನಿಖರವಾದ ಆರಂಭದ ಆಧಾರವೆಂದು ಗ್ರಹಿಸಿ ವೈದಿಕ ಪ್ರಪಂಚಗಳ ಸಾಂಕೇತಿಕತೆಯನ್ನು ಹೆಚ್ಚು ತೃಪ್ತಿಕರ ವ್ಯಾಖ್ಯೆಯ ಹತ್ತಿರಕ್ಕೆ ತಂದಂತಾಗುವುದು.

ಇದಕ್ಕೂ ಹೆಚ್ಚಿನ ಪ್ರಯತ್ನವನ್ನೀಗ ನಾವು ಮಾಡಲಾರೆವು. ಏಕೆಂದರೆ ಸೂಕ್ತಗಳಲ್ಲಿ ರಚಿತವಾದ ವೈದಿಕ ಸಂಕೇತಜಾಲವು ವಿವರಗಳಲ್ಲಿ ಬಹಳ ಜಟಿಲ, ದೃಷ್ಟಿಕೋನಗಳಲ್ಲಿ ಬಹಳ ಸಂಖ್ಯಾತ; ತನ್ನ ಅರ್ಥಛಾಯೆಗಳಲ್ಲೂ ಆನುಷಂಗಿಕ ಉಪಕಥೆಗಳಲ್ಲೂ ವಿವರಣಕಾರನಿಗೆ ಅದು ಅನೇಕಾನೇಕ ತೊಂದರೆಗಳನ್ನೂ ಅಸ್ಪಷ್ಟತೆಗಳನ್ನೂ ಒಡ್ಡುತ್ತದೆ. ಇದಕ್ಕೂ ಹೆಚ್ಚಾಗಿ, ಯುಗಗಟ್ಟಲೆಯ ವಿಸ್ಮೃತಿಯಿಂದ ಮತ್ತು ಅಪಗ್ರಹಿಕೆಗಳಿಂದ ಅತೀವ ಅಸ್ಪಷ್ಟತೆಗಿಳಿದುಹೋದುದರಿಂದ ಒಂದೇ ಒಂದು ಗ್ರಂಥದಲ್ಲಿ ಸಾಕಷ್ಟು ತೃಪ್ತಿಕರವಾಗಿ ವೇದಾರ್ಥಗತ ಮುಖ್ಯಾಮುಖ್ಯ ಶಂಕೆಗಳೆಲ್ಲವನ್ನೂ ಪರಿಹರಿಸುವುದು ಸಾಧ್ಯವಾಗದ ಕೆಲಸ. ಈಗ ನಾವು ಪುರೋನಾಯಕ ಸೂಚನೆಗಳಷ್ಟನ್ನು ಸುರಕ್ಷಿತವಾದ ಹಾಗೂ ನ್ಯಾಯವಾದ ತಳಪಾಯಗಳೆಂದು ಹುಡುಕಿತೆಗೆದು ನಿರ್ಧರಿಸಿಟ್ಟರೆ ಸಾಕು-ಕೇವಲ ಅಷ್ಟನ್ನಿಲ್ಲಿ ನಾವು ಮಾಡಬಲ್ಲೆವು.

❖ ❖

# ಆಯ್ದ ಸೂಕ್ತಗಳು*

## I

## ಇಂದ್ರಾಗಸ್ತ್ಯರ ಸಂವಾದ

### ಋಗ್ವೇದ I. 170

ಇಂದ್ರ :

ನ ನೂನಮಸ್ತಿ ನೋ ಶ್ವಃ ಕಸ್ತದ್ವೇದ ಯದದ್ಭುತಂ ।
ಅನ್ಯಸ್ಯ ಚಿತ್ತಮಭಿ ಸಂಚರೇಣ್ಯಮುತಾಧೀತಂ ವಿ ನಶ್ಯತಿ ॥ ೧ ॥

ಇಂದ್ರ :

೧. ಅದು ಇಂದಲ್ಲ, ಅದು ನಾಳೆಯೂ ಅಲ್ಲ ; ಸರ್ವೋಚ್ಚವೂ ಅದ್ಭುತವೂ ಆದ ಅದನ್ನಾರು ಬಲ್ಲರು? ಇನ್ನೊಬ್ಬರ ಪ್ರಜ್ಞೆಯಲ್ಲಿ ಅದರ ಚಲನವೂ ಕಾರ್ಯವೂ ಇವೆ, ಆದರೆ ವಿಚಾರವು (ಆಲೋಚನೆಯು) ಅದರ ಹತ್ತಿರ ಹೋದ ಕೂಡಲೇ ಅದು ಅದೃಶ್ಯವಾಗಿ ಬಿಡುತ್ತದೆ.

ಅಗಸ್ತ್ಯ :

ಕಿಂ ನ ಇಂದ್ರ ಜಿಘಾಂಸಸಿ ಭ್ರಾತರೋ ಮರುತಸ್ತವ ।
ತೇಭಿಃ ಕಲ್ಪಸ್ವ ಸಾಧುಯಾ ಮಾನಃ ಸಮರಣೇ ವಧೀಃ ॥ ೨ ॥

---

* ಈ ಭಾಷಾಂತರಗಳು ಸಾಮಾನ್ಯ ಓದುಗನಿಗಾಗಿ ಅವುಗಳ ಫಲಿತಗಳನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು ಮಾಡಲ್ಪಟ್ಟಿವೆ ; ಮತ್ತು ನಾವು ಮಂಡಿಸಿದ ಸಿದ್ಧಾಂತಕ್ಕೆ ನಿದರ್ಶನಗಳೆಂದು ಇವುಗಳನ್ನು ಕೊಡಲಾಗಿದೆ. ಅತ್ಯಲ್ಪ ಸಂಖ್ಯಾತರ ವೃತ್ತಕ್ಕಷ್ಟೇ ಅವುಗಳ ಭಾಷಾ ಶಾಸ್ತ್ರೀಯ ಹಾಗೂ ವೈಮರ್ಶಿಕ ಸಮರ್ಥನೆಯು ಕುತೂಹಲಕರವೆನ್ನಿಸೀತು. ಹೇಗೇ ಆಗಲಿ - ಕೆಲವೊಂದು ಗುರುತುಗಳನ್ನು, ನಮ್ಮ ಪದ್ಧತಿಯನ್ನು ನಿದರ್ಶಿಸುವುದಕ್ಕಾಗಿ, ಮುಂದಿನ ಹಂತದಲ್ಲಿ ಹೇಳಲಾಗುವುದು.

ಅಗಸ್ತ್ಯ :

೨. ಓ ಇಂದ್ರ, ನೀನೇಕೆ ನಮ್ಮನ್ನು ಹೊಡೆಯಬಯಸುವೆ? ಮರುತ್ತುಗಳು ನಿನ್ನ ಸೋದರರು. ಅವರ ಮೂಲಕ ಪೂರ್ಣತೆಯನ್ನು ಪಡೆ ; ನಮ್ಮ ಹೋರಾಟದಲ್ಲಿ ನಮ್ಮನ್ನು ಕೊಲ್ಲದಿರು.

ಇಂದ್ರ :

**ಕಿಂ ನೋ ಭ್ರಾತರಗಸ್ತ್ಯ ಸಖಾ ಸನ್ನತಿ ಮನ್ಯಸೇ ।**
**ವಿದ್ಮಾ ಹಿ ತೇ ಯಥಾ ಮನೋಽಸ್ಮಭ್ಯ ಮಿನ್ನ ದಿತ್ಸತಿ ॥ ೩ ॥**

ಇಂದ್ರ :

೩. ಸೋದರ ಅಗಸ್ತ್ಯನೇ, ನೀನು ನನ್ನ ಸ್ನೇಹಿತನಾಗಿ ನನ್ನ ಆಚೆಗೆ ಏಕೆ ನಿನ್ನ ಆಲೋಚನೆಯನ್ನು ಕಳುಹುವೆ? ಏಕೆಂದರೆ, ನೀನು ನಿನ್ನ ಮನಸ್ಸಿನಲ್ಲಿರುವುದನ್ನು ಹೇಗೆ ನಮಗೆ ಹೇಳಲು ಮನಸ್ಸು ಮಾಡುತ್ತಿಲ್ಲ-ಎಂಬುದು ನನಗೆ ಚೆನ್ನಾಗಿ ಗೊತ್ತಿದೆ.

ಇಂದ್ರ :

**ಅರಂ ಕೃಣ್ವಂತು ವೇದಿಂ ಸಮಗ್ನಿಮಿಂಧತಾಂ ಪುರಃ ।**
**ತತ್ರಾಮೃತಸ್ಯ ಚೇತನಂ ಯಜ್ಞಂ ತೇ ತನವಾವಹೈ ॥ ೪ ॥**

ಅಗಸ್ತ್ಯ :

೪. ಅವರು ಯಜ್ಞವೇದಿಕೆಯನ್ನು ಸಿದ್ಧಪಡಿಸಲಿ. ಎದುರಿಗವರು ಅಗ್ನಿಜ್ವಾಲೆಯನ್ನೆಬ್ಬಿಸಲಿ. ಅಮೃತತ್ವದತ್ತಣ ಪ್ರಜ್ಞಾಜಾಗರಣೆಯು ಅಲ್ಲಿದೆ. ನಿನ್ನ ಪರಿಣಾಮಕರ ಯಜ್ಞವನ್ನು ನಿನಗಾಗಿ ನಾವಿಬ್ಬರೂ ಬಿತ್ತರಿಸೋಣ.

ಅಗಸ್ತ್ಯ :

**ತ್ವಮೀಶಿಷೇ ವಸುಪತೇ ವಸೂನಾಂತ್ವಂ ಮಿತ್ರಾಣಾಂ ಮಿತ್ರಪತೇ ಧೇಷ್ಠಃ ।**
**ಇಂದ್ರತ್ವಂ ಮರುದ್ಭಿಃ ಸಂ ವದಸ್ವಾಧ ಪ್ರಾಶಾನ ಋತುಥಾ ಹವೀಂಷಿ ॥ ೫ ॥**

ಅಗಸ್ತ್ಯ :

೫. ಹೇ ದ್ರವ್ಯೇಶ್ವರ, ಸರ್ವಸತ್ತಾ ಸಾರಾಧಿಪತೇ, ನೀನು ಅಧಿಕಾರಸ್ಥ ಒಡೆಯ ! ಎಲೈ ಪ್ರೇಮಪತಿಯೇ, ಪ್ರೇಮಶಕ್ತೀಶನೇ, ಸ್ಥಿತಿಧಾರಣೆಯಲ್ಲಿ ನೀನು ಬಲಿಷ್ಠ. ಓ ಇಂದ್ರ, ಮರುತ್ತುಗಳೊಡನೆ ನೀನು ಒಪ್ಪಿಕೊಂಡು ಪರಮಸತ್ಯದ ಸಕ್ರಮ ಪದ್ಧತಿಯಿಂದ ಹವಿಸ್ಸುಗಳನ್ನು ಭೋಗಿಸು.

## ವ್ಯಾಖ್ಯಾನ :

ಬುದ್ಧಿಪೂರ್ವಕವಾದ (ಪ್ರಜ್ಞಾಯುಕ್ತವಾದ) ಚಟುವಟಿಕೆಯ ಎಲ್ಲ ಪ್ರಗತಿಪರ ಹಂತಗಳಲ್ಲಿ ತನ್ನ ಇರವಿನ ಸಂಪೂರ್ಣ ಉನ್ನತಿಯನ್ನು ಸಾಧಿಸಿಕೊಳ್ಳದೆ ಬರೀ ವಿಚಾರ ಪ್ರಣೋದದಿಂದ ಅಪರಿಪಕ್ವದಶೆಯಲ್ಲೇ ಸರ್ವವಸ್ತು ಮೂಲವನ್ನು ಸೇರಲು ಮೇಲೋಡಬಯಸುವ ಆಧ್ಯಾತ್ಮಿಕ ಪ್ರಗತಿಯ ಮಟ್ಟದಲ್ಲಿರುವ .ಮಾನವಾತ್ಮದ ಸ್ಥಿತಿಗೆ ಉಕ್ತ ಸೂಕ್ತದ ವ್ಯಾಪಕ ಕಲ್ಪನೆಯು ಸಂಬಂಧಿಸಿದೆ. ಮಾನವ್ಯ ವಿಶ್ವದ ಹಾಗೂ ಪ್ರಪಂಚದ ಅಧ್ಯಕ್ಷರಾದ (ಅಧಿದೇವತೆಗಳಾದ) ದೇವರುಗಳು ಈ ಪ್ರಯತ್ನವನ್ನು ವಿರೋಧಿಸುತ್ತಾರೆ. ಅಹಂಕಾಲಿಕ ತ್ವರೆಯಲ್ಲಿರುವ ವ್ಯಕ್ತ್ಯಾತ್ಮಕ್ಕೂ (ಜೀವಾತ್ಮಕ್ಕೂ) ವಿಶ್ವದ ದಿವ್ಯೋದ್ದೇಶವನ್ನು ಪೂರೈಸಬಯಸುವ ವೈಶ್ವತ್ರಿಕ ಶಕ್ತಿಗಳಿಗೂ ಮಾನವ್ಯ ಪ್ರಜ್ಞೆಯಲ್ಲಿ ಒಂದು ಘೋರ ಸೆಣಸಾಟವು ನಡೆಯುತ್ತದೆ.

ಇಂಥ ಪ್ರಸಂಗದಲ್ಲಿ ದ್ರಷ್ಟಾರನಾದ ಅಗಸ್ತ್ಯನು ತನ್ನ ಅಂತರನುಭವದಲ್ಲಿ ಶುದ್ಧಬುದ್ಧಿಯ ರಾಜ್ಯವಾದ ಸ್ವರ್ಲೋಕದ ಒಡೆಯನಾದ ಇಂದ್ರನನ್ನು ಎದುರಿಸುತ್ತಾನೆ. ಉತ್‌ಪತನಶೀಲ ಜೀವಾತ್ಮನು ದಿವ್ಯ ಸತ್ಯದೊಳಹೊಗುವುದು ಸ್ವರ್‌ಲೋಕದ ಮೂಲಕ ಅಗಸ್ತ್ಯನು ತಾಳ್ಮೆಗೆಟ್ಟು ಹತ್ತಿರ ಹೋಗಲು ಯತ್ನಿಸುತ್ತಿದ್ದ ಅಜ್ಞೇಯ ವಸ್ತು, ಮೂಲವನ್ನು ಕುರಿತು ಇಂದ್ರನು ಮೊದಲು ಹೇಳುತ್ತಾನೆ. ಅದು ಕಾಲದಲ್ಲಿ ಲಭ್ಯವಲ್ಲ. ಅದು ವರ್ತಮಾನ ಕಾಲದ ವಾಸ್ತವಿಕತೆಗಳಲ್ಲಿ ಸಿಕ್ಕುವಂಥದಲ್ಲ. ಹಾಗೇ ಭವಿಷ್ಯತ್ ಕಾಲದ ಘಟನಾವಳಿಗಳಲ್ಲೂ ದೊರಕುವಂಥದಲ್ಲ. ಅದು ಈಗಿನದಲ್ಲ, ಮುಂದೆ ಆಗುವಂಥದೂ ಅಲ್ಲ. ಅದರ ಸತ್ತೆಯು ದೇಶಕಾಲಾತೀತ. ಆದುದರಿಂದ, ದೇಶಕಾಲಾಂತರ್ಗತವಾದ ಯಾವುದರಿಂದಲೂ ಸ್ವಸ್ವರೂಪದಲ್ಲಿರುವಂತೆ ಅದನ್ನು ತಿಳಿಯಲು ಅಸಾಧ್ಯ. ಅದು ಸ್ವೇತರ ಪದಾರ್ಥದ ಪ್ರಜ್ಞೆಯಲ್ಲಿ ತನ್ನ ಆಕಾರ-ಕ್ರಿಯೆಗಳ ಮೂಲಕ ತನ್ನನ್ನು ವ್ಯಕ್ತಪಡಿಸಿಕೊಳ್ಳುತ್ತದೆ. ಆ ಕ್ರಿಯೆಗಳ ಮೂಲಕ ಅದನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂಬುದು ಆ ಕ್ರಿಯೆಗಳು ಕೊಡುವ ಸೂಚನೆ, ಹೇಳುವ ಅರ್ಥ. ಆದರೆ ಒಂದು ಜೀವಾತ್ಮವು ಅದನ್ನು ಸಮೀಪಿಸಲು ಯತ್ನಿಸಿ, ಅದರಲ್ಲೇ ಅದನ್ನು ಅಭ್ಯಸಿಸಹೋದೊಡನೆಯೇ ಅದನ್ನು ಗ್ರಹಿಸಲೆಳಸಿದ ವಿಚಾರದ ಕಣ್ಣಿಗೆ ತಾನು ಇಲ್ಲವೇ ಇಲ್ಲವೆಂಬಂತೆ ಮರೆಯಾಗಿ ಹೋಗುವುದು.

ತಾನೇಕೆ ಇಷ್ಟು ಜೋರಾಗಿ ಎದುರಿಸಲ್ಪಟ್ಟೆ? ಅದರಲ್ಲೂ ಸರ್ವಾಸ್ತಿತ್ವದ ಕಾಲಾಂತರದ ಗುರಿಯಾದ ಪದಾರ್ಥವನ್ನು ಸಾಧಿಸಲು ಹೊರಟಾಗ? ಅಲ್ಲದೆ, ತನ್ನ ಎಲ್ಲ ವಿಚಾರಗಳೂ, ಭಾವನೆಗಳೂ ಬೇಕು ಬೇಕೆಂದು ಬೇಡುವಾಗ (ಕೇಳುವಾಗ)? - ಎಂಬುದು ಅಗಸ್ತ್ಯನಿಗಿನ್ನೂ ಗೊತ್ತಾಗಿಲ್ಲ. ಮರುತ್ತುಗಳು ವಿಚಾರದ ಶಕ್ತಿಗಳು. ಅವು ತಮ್ಮ ಪ್ರಗತಿಯ ಬಲವಾದ ಹಾಗೂ ತೋರಿಕೆಯ ವಿನಾಶಕ ಚಲನದಿಂದ ಪ್ರತಿಷ್ಠಿತವಾದುದನ್ನು ಮುರಿದು ಹಾಕಿ ನವಾಕೃತಿಗಳ ನಿರ್ಮಾಪನಕ್ಕೆ ನೆರವೀಯುತ್ತವೆ. ಶುದ್ಧಬುದ್ಧಿ ಶಕ್ತಿ ಸ್ವರೂಪದ ಇಂದ್ರನು ಅವರ ಸೋದರ, ಹಿರಿಯನಾದರೂ ಸ್ವಭಾವದಲ್ಲಿ ಅವರ ಬಂಧು ; ಅಗಸ್ತ್ಯನು ಯತ್ನಿಸುತ್ತಿರುವ ಪೂರ್ಣತೆಯನ್ನು ಅವರ ನೆರವಿನಿಂದ ಅವನು ಸಾಧಿಸಿಕೊಡಬೇಕು ; ಮತ್ತು ಈ ಭಯಂಕರ ಹೋರಾಟದಲ್ಲಿ ಆತನು ಗುರಿ ಸಾಧಿಸುವತ್ತ ತನ್ನ ನೇಹಿಗನಾದ ಅಗಸ್ತ್ಯನನ್ನು ಹಗೆಯೆಂದು ಗಣಿಸಲೂಬಾರದು ಮತ್ತು ಹಿಂಸಿಸಲೂ ಬಾರದು, ಕೊಲ್ಲಹೋಗಲೂಬಾರದು.

ಇಂದ್ರನು ಅಗಸ್ತ್ಯನಿಗೆ ನೀನು ನನ್ನ ಗೆಳೆಯನೆಂದು ಉತ್ತರ ಕೊಡುತ್ತಾನೆ. ಆತ್ಮತ್ವದಲ್ಲಿ ಸೋದರ - ಇಬ್ಬರೂ ಒಂದೇ ಒಂದಾದ ಸರ್ವೋದಾತ್ತ ಸತ್ ಪದಾರ್ಥದ ಮಕ್ಕಳಾದುದರಿಂದ ; ಸಮಾನ ಪ್ರಯತ್ನದಲ್ಲಿರುವುದರಿಂದಲೂ ಈ ಸಹಕರ್ಮಚಾರಿಗಳು ಸ್ನೇಹಿತರು ; ಅಲ್ಲದೆ ದೇವ-ಮಾನವರನ್ನು ಒಂದಾಗಿಸುವ ದಿವ್ಯಪ್ರೇಮ ಸಂಬಂಧದಿಂದ ತನ್ನ ಪ್ರಗತಿಪರ ಪೂರ್ಣ ಯೋಗದಲ್ಲಿ ಸದ್ಯದ ಹಂತಕ್ಕೆ ಉಕ್ತ ಋಷಿಯು ಏರಿ ನಿಂತಿದ್ದಾನೆ. ಆದರೆ ಈಗ ಅವನು ಇಂದ್ರನೊಬ್ಬ ಕೆಳದರ್ಜೆಯ ಶಕ್ತಿಯೆಂದು ಭಾವಿಸಿ ಆ ದೇವರಾಜ್ಯದಲ್ಲಿ ತನ್ನ ಸಾಫಲ್ಯವನ್ನು ಪಡೆಯದೆ ಅದನ್ನು ದಾಟಿ ಹೋಗಲು ಬಯಸುತ್ತಾನೆ. ಅವನು ತನ್ನ ಹೆಚ್ಚಾದ ವಿಚಾರಶಕ್ತಿಗಳನ್ನು ದಿವ್ಯಸತ್ಯದ ದಾರಿಯಿಂದ ತನ್ನ ಮೂಲಕ ವಿಶ್ವಮತಿಯಾದ ಇಂದ್ರನು ಮಾನವಕುಲದ ಸಾಕ್ಷಾತ್ಕಾರಗಳನ್ನು ಶ್ರೀಮಂತಗೊಳಿಸಲನುಕೂಲವಾಗುವಂತೆ ಆ ಶಕ್ತಿಗಳನ್ನು ಅವನಿಗರ್ಪಿಸುವುದನ್ನು, ಬಿಟ್ಟು ತನ್ನ ಸ್ವಂತದ ಉದ್ದೇಶಕ್ಕಾಗಿ ಬಳಸಬಯಸುತ್ತಾನೆ. ಹಾಗಲ್ಲದೆ, ಪರೋಪಕಾರದ ಅಪೇಕ್ಷೆಯಿಂದ ಅವುಗಳನ್ನು ಇಂದ್ರಾರ್ಪಣ ಮಾಡಿದ್ದರೆ ಅಗಸ್ತ್ಯನನ್ನು ಪರಮಸತ್ಯದತ್ತ ಇಂದ್ರನು ನಡೆಸಿಕೊಂಡು ಹೋಗುತ್ತಿದ್ದನು. ಸ್ವಾರ್ಥದ (ಅಹಂಕಾರ - ಮಮಕಾರಗಳ) ಪ್ರಯತ್ನ ನಿಲ್ಲಲಿ, ಮಹಾಯಜ್ಞವು ಪುನರಾರಂಭಿಸಲ್ಪಡಲಿ, ಯಜ್ಞದ ನಾಯಕ ಸ್ಥಾನಕ್ಕಾಗಿ, ಅಗ್ನಿಯು ಮಹಾಯಾನದ ನೇತಾರನಾಗುವುದಕ್ಕಾಗಿ, ಆತನ ದಿವ್ಯ ಪ್ರಣೋದ ಜ್ವಾಲೆಯು ಹೊತ್ತಿಸಲ್ಪಡಲಿ. ವೈಶ್ವಾತ್ರಿಕ ಶಕ್ತಿಯಾದ ಇಂದ್ರನೂ ಮಾನವ ಜೀವಾತ್ಮನಾದ ಅಗಸ್ತ್ಯನೂ ಶುದ್ಧ ಬುದ್ಧಿಯ ಪ್ರಜ್ಞಾಸ್ತರದಲ್ಲಿ ಜೊತೆಗೂಡಿ ಪರಿಣಾಮಕರವಾದ ಅಂತಃಕ್ರಿಯೆಯನ್ನು ವಿಸ್ತರಿಸುವರು. ಅದರಿಂದ ಅಗಸ್ತ್ಯನ ಜೀವಾತ್ಮವು ಆಧ್ಯಾತ್ಮಿಕ ಸಂಪತ್ತನ್ನು ಹೆಚ್ಚಿಸಿಕೊಂಡು ಆ ಮೂಲಕ ತನ್ನ ಜೀವತ್ವದ ಪ್ರಜ್ಞಾಸ್ತರವನ್ನು ದಾಟಿ ಮುಂಬರಿಯಬಹುದೆಂಬುದೇ ತಾತ್ಪರ್ಯ. ಏಕೆಂದರೆ, ಮರ್ತ್ಯನ ಪ್ರಮಿತವೂ ಅಹಂಕಾರಮಯವೂ ಆದ ಪ್ರಜ್ಞೆಯು ತನ್ನ ನೀಚಸತ್ತೆಯನ್ನು ಕ್ರಮ ಕ್ರಮವಾಗಿ ದಿವ್ಯ ಚಟುವಟಿಕೆಗಳಿಗಾಗಿ ಸಮರ್ಪಿಸುವುದರಿಂದಲೇ ತನ್ನ ಗುರಿಯಾದ ಅನಂತ ಅಮೃತತ್ವ ಸ್ಥಿತಿಯ ಸ್ವರೂಪದಲ್ಲಿ ಜಾಗರಿತವಾಗುತ್ತದೆ, ಎಚ್ಚತ್ತಿರುತ್ತದೆ.

ಅಗಸ್ತ್ಯನು (ವಿಶ್ವದೇವನಾದ ಶುದ್ಧಬುದ್ಧಿ ಸ್ವರೂಪದ) ಇಂದ್ರದೇವನ ಸಂಕಲ್ಪವನ್ನು ಒಪ್ಪಿಕೊಂಡು ಅವನಿಗೆ ತನ್ನ ಸಿದ್ಧಿಗಳೆಲ್ಲವನ್ನೂ ಸಮರ್ಪಿಸುತ್ತಾನೆ, ಅವನ ಅಧೀನನಾಗಿ ವರ್ತಿಸುತ್ತಾನೆ. ಇಂದ್ರನ ಚಟುವಟಿಕೆಗಳಲ್ಲಿ ಸರ್ವೋಚ್ಚ ಸತ್ಯವನ್ನು ಕಂಡು ಅದರ ಇಚ್ಛೆಯನ್ನು ಅಗಸ್ತ್ಯನು ಪೂರ್ತಿಗೊಳಿಸುತ್ತಾನೆ. ತನ್ನದೇ ಆದ ರಾಜ್ಯದಲ್ಲಿ ಇಂದ್ರನು ಮನ-ಪ್ರಾಣ-ದೇಹ ಸ್ವರೂಪದಲ್ಲಿ ತ್ರಿಪುಟವಾಗಿ ಪ್ರಕಟವಾದ ಸಮಸ್ತ ಜೀವಿಗಳ ಅಸ್ತಿತ್ವದ ಸಾರದ ಮೇಲೆ ಸಂಪೂರ್ಣ ಪ್ರಭುತ್ವವುಳ್ಳದವನಾಗಿದ್ದಾನೆ ; ಆದುದರಿಂದ ಪ್ರಕೃತಿಯ ಚಲನೆಯಲ್ಲಿ ವಿಶ್ವರೂಪದಲ್ಲಿ ಪ್ರಕಟವಾದ ದಿವ್ಯಸತ್ಯವನ್ನು ಸಫಲಗೊಳಿಸುವುದಕ್ಕಾಗಿ ಇಂದ್ರನಿಗೆ (ಆಕೃತಿಗಳನ್ನು, ನಿರ್ಮಿತಿಗಳನ್ನು, ರೂಪಗಳನ್ನು) ದೇಹಿಗಳನ್ನು ತನಗೆ ಬೇಕಾದ ಹಾಗೆ ನಡೆಸಿಕೊಳ್ಳುವ ಅಧಿಕಾರವಿದೆ ; ಆ ದಿವ್ಯ ಸತ್ಯವಾದರೋ ಅದೇ ತ್ರಿಪುಟ ಪ್ರಪಂಚದಲ್ಲಿ ವ್ಯಕ್ತವಾದ ಪ್ರೇಮ ಹಾಗೂ ಸಂತೋಷಗಳ ಮೇಲೆ ದೊರೆತನವುಳ್ಳದ್ದಾಗಿರುವುದರಿಂದ ಪ್ರಕೃತಿಯಲ್ಲಿ ಆ ದೇಹಿಗಳನ್ನು ಪ್ರಾಕೃತ ಸ್ಥಿತಿಗಳಿಗನುಗುಣವಾಗಿ ಪರಸ್ಪರ ಹೊಂದಿಸಿ ನೆಲೆ ನಿಲ್ಲಿಸಲು ಶಕ್ತವಾಗಿದೆ. ತನ್ನ ಸಿದ್ಧಿಗಳೆಲ್ಲವನ್ನೂ (ಸಾಕ್ಷಾತ್ಕಾರಗಳೆಲ್ಲವನ್ನೂ) ತನ್ನ ಪ್ರಜ್ಞೆಯ ನೆಲೆ ನಿಂತ ಭಾಗಗಳಲ್ಲಿ ಇಂದ್ರನು ಮಾಡಲಿರುವ ಯಜ್ಞಕ್ಕಾಗಿ ಯಜ್ಞಾಹುತಿಗಳೆಂದು ಇಂದ್ರನ ಕೈಗೆ ಕೊಟ್ಟು ಬಿಡುತ್ತಾನೆ.

ಇಂದ್ರನು ಆ ನೆಲೆನಿಂತ ಭಾಗಗಳು, ಚಲಿಸುವಂತೆ ಮಾಡಿ ಹೊಸ ನಿರ್ಮಿತಿಗಳಾಗೆಡೆ ಮಾಡಿಕೊಡುವನು. ಪುನಃ ಇಂದ್ರನು ಅಗಸ್ತ್ಯನ ಸತ್ತೆಯ ಊರ್ಧ್ವಗಮನಪ್ರಿಯ ಶಕ್ತಿಗಳೊಡನೆ ಗೆಳೆತನದ ಮಾತುಕತೆಗಳಾಗಾರಂಭಿಸುವನು ಮತ್ತು ದ್ರಷ್ಟಾರನ ವಿಚಾರಗಳಿಗೂ ಶುದ್ಧ ಬುದ್ಧಿಯ ಮೂಲಕ ನಮಗೆ ಬರುವ ಪ್ರಬೋಧ ಪ್ರಭೆಗಳಿಗೂ ಹೊಂದಿಕೆಯುಂಟಾಗುವಂತೆ ಮಾಡುತ್ತಾನೆ. ಆ ಶಕ್ತಿಯು ಆಗ ಅಗಸ್ತ್ಯನಲ್ಲಿ ಸರಿಯಾದ ಕ್ರಮದಿಂದ, ಮಾನಸೋತ್ತರ ಸತ್ಯವು ನಿರ್ಮಿಸಿ ನಿಯತಗೊಳಿಸಿದ ಪ್ರಕಾರವಾಗಿ ಯಜ್ಞಾಹುತಿಗಳನ್ನು ಭೋಗಿಸುತ್ತದೆ (ಭುಜಿಸುತ್ತದೆ).



# II

# ಬೆಳಕನ್ನೀವ ಇಂದ್ರನು

## ಋಗ್ವೇದ I.4

**ಸುರೂಪಕೃತ್ನುಮೂತಯೇ ಸುದುಘಾಮಿವ ಗೋದುಹೇ ।**
**ಜುಹೂಮಸಿ ದ್ಯವಿ ದ್ಯವಿ ॥ ೧ ॥**

೧. ಹಾಲು ಕರೆವವನು ಹೆಚ್ಚು ಒಳ್ಳೆಯ ಹಾಲನ್ನು ಕೊಡುವ ಹಸುವನ್ನು ಕರೆಯುವಂತೆ ನಾವು ಪೂರ್ಣಾಕೃತಿಗಳ ನಿರ್ಮಾಪಕನನ್ನು ಪ್ರತಿದಿನದ ನಮ್ಮ ಅಭಿವೃದ್ಧಿಗಾಗಿ ಕರೆಯುತ್ತೇವೆ (ಆಮಂತ್ರಿಸುತ್ತೇವೆ).

**ಉಪ ನಃ ಸವನಾ ಗಹಿ ಸೋಮಸ್ಯ ಸೋಮಪಾಃ ಪಿಬ ।**
**ಗೋದಾ ಇದ್ರೇವತೋ ಮದಃ ॥ ೨ ॥**

೨. ನಮ್ಮ ಸೋಮಾಹುತಿಗಳಿಗಾಗಿ ಬಾ. ಎಲೈ ಸೋಮಪಾಯಿಯೇ, ಸೋಮರಸವನ್ನು ಕುಡಿ. ನಿನ್ನ ಮತ್ತ ಆನಂದೋದ್ರೇಕವು ನಿಜವಾಗಿ ಬೆಳಕನ್ನು ನೀಡುತ್ತದೆ.

**ಅಥಾ ತೇ ಅಂತಮಾನಾಂ ವಿದ್ಯಾಮ ಸುಮತೀನಾಂ ।**
**ಮಾನೋ ಅತಿ ಖ್ಯ ಆ ಗಹಿ ॥ ೩ ॥**

೩. ಆಗ ನಾವು ನಿನ್ನ ನ್ಯಾಯವಿಚಾರಗಳ ಅತ್ಯುನ್ನತನೆಲೆಯ ಬಗೆಗೆ ಕೆಲಮಟ್ಟಿಗೆ ತಿಳಿದುಕೊಳ್ಳಬಲ್ಲವರಾದೇವು. ಅದಕ್ಕೂ ಹೆಚ್ಚಿಗೆ ತೋರಿಸಬೇಡ (ತಿಳಿಸಬೇಡ).

**ಪರೇಹಿ ವಿಗ್ರಮಸ್ತೃತ ಮಿಂದ್ರಂ ಪೃಚ್ಛಾ ವಿಪಶ್ಚಿತಂ ।**
**ಯಸ್ತೇ ಸಖಿಭ್ಯ ಆ ವರಂ ॥ ೪ ॥**

೪. ಬಾ, ಸ್ಪಷ್ಟವಾಗಿ ಕಾಣಬಲ್ಲ ಮನಸ್ಸನ್ನುಳ್ಳ ಇಂದ್ರನನ್ನು ಕೇಳು. ಅವನು ವೀರ್ಯವಂತ, ಅಜಯ್ಯ, ನಿನ್ನ ಸಹಚರರಿಗೆ ಅತಿ ಹೆಚ್ಚಿನ ಒಳಿತನ್ನು ಮಾಡಿದವನು.

**ಉತ ಬ್ರುವಂತು ನೋ ನಿದೋ ನಿರನ್ಯತಶ್ಚಿದಾರತ ।**
**ದಧಾನಾ ಇಂದ್ರ ಇದ್ ದುವಃ ॥ ೫ ॥**

೫. ಮತ್ತು ಆತಂಕಕಾರಿಗಳು[1] ನಮಗೆ ಹೇಳಲಿ ; "ಇಲ್ಲ, ಇತರ ಕ್ಷೇತ್ರಗಳಲ್ಲಿಯೂ ಮುನ್ನುಗ್ಗಿ ಹೋರಾಡಿರಿ ; (ಆದರೆ ಮೊದಲು) ನಿಮ್ಮ ಚಟುವಟಿಕೆಯು ಇಂದ್ರನನ್ನು ಆಧರಿಸಿರಲಿ."

**ಉತ ನಃ ಸುಭಗಾಂ ಅರಿರ್ವೋಚೇಯುರ್ದಸ್ಮ ಕೃಷ್ಟಯಃ ।**
**ಸ್ಯಾಮೇದಿಂದ್ರಸ್ಯ ಶರ್ಮಣಿ ॥ ೬ ॥**

೬. ಮತ್ತು ಯೋಧರು, ಕಾರ್ಯಕಾರಿಗಳು[2] ನಮ್ಮನ್ನು ಸಂಪೂರ್ಣ ಪುಣ್ಯಾತ್ಮರೆಂದು ಸಾರಲಿ. ಎಲೈ ಸಾಧಕನೇ, ನಾವು ಇಂದ್ರನ ಶಾಂತಿಯನ್ನು ಅನುಸರಿಸೋಣ.

**ಏಮಾಶುಮಾಶವೇ ಭರ ಯಜ್ಞಶ್ರಿಯಂ ನೃಮಾದನಂ । ।**
**ಪತಯನ್ಮಂದಯತ್‌ಸಖಂ ॥ ೭ ॥**

೭. ಕಡುಪಿಗೆ ಕಡುಪಾಗಿ, ಮನುಷ್ಯನನ್ನು ಮದವೇರಿಸುವ ಯಜ್ಞವೈಭವವನ್ನು ಸಾಧಿಸಿಕೊಂಡು - ಮಿತ್ರನಿಗೆ ಸಂತಸವೀಯುವ ಇಂದ್ರನನ್ನು ಹಾದಿಯಲ್ಲಿ ಕರೆದುಕೊಂಡು ಹೋಗು.

**ಅಸ್ಯ ಪೀತ್ವಾ ಶತಕ್ರತೋ ಘನೋ ವೃತ್ರಾಣಾಮಭವಃ ।**
**ಪ್ರಾವೋ ವಾಜೇಷು ವಾಜಿನಂ ॥ ೮ ॥**

೮. ನೀನಿದನ್ನು ಕುಡಿದ ಮೇಲೆ, ಎಲೈ ಶತಕ್ರತುವೇ, (ನೂರಾರು ದೊಡ್ಡ ಕೆಲಸಗಳನ್ನು ಮಾಡಿದವನೇ), ಆವಾರಕರ (ಅಡಗಿಸಿಟ್ಟುಕೊಂಬುವರ) ಹಂತಾರನಾದೆ ಮತ್ತು ಸಂಪನ್ನಮನವನ್ನು ಸಂಪತ್ತಿನಿಂದ ಕಾಯ್ದೆ.

---

೧. ಅಥವಾ ನಿಂದಕರು, "ನಿದಃ". ನಿದ್ ಎಂಬ ಧಾತುವಿಗೆ ವೇದದಲ್ಲಿ "ಬಂಧನ" ಎಂಬ ಅರ್ಥವಿರುವಂತೆ ನನಗೆ ತೋರುತ್ತದೆ ; ಹಾಗೇ "ಹಿಡಿದಿಟ್ಟುಕೊಳ್ಳುವುದು", "ಪರಿಸೀಮನ" ಎಂಬ ಅರ್ಥಗಳನ್ನೂ ಆ ಧಾತುವಿನ ನಾಮರೂಪಕ್ಕೆ ಸಂಪೂರ್ಣ ನಿಶ್ಚಯದಿಂದ ಭಾಷಾಶಾಸ್ತ್ರೀಯ ನಿಗಮನದ ಮೂಲಕ ಹೇಳಬಹುದಾಗಿದೆ. ಅದು ನಿದಿತವೆಂಬುದರ ಮೂಲ, ಬದ್ಧ ಮತ್ತು "ನಿದಾನ" ಆತಂಕಕಾರಿ. ಆದರೆ ದೂರೆಂಬ ಅರ್ಥವನ್ನೂ ಉಕ್ತಧಾತು ಹೇಳುತ್ತದೆ. ಯೋಗವಾಣೀಬಂಧದ ವಿಚಿತ್ರ ಪದ್ಧತಿಯಿಂದ ಬಿನ್ನೋಪಬ್ಬೇದಗಳಲ್ಲಿ ಇವುಗಳಲ್ಲಿಯ ಯಾವುದಾದರೊಂದು ಅರ್ಥವು ಮತ್ತೊಂದನ್ನು ಪೂರ್ಣವಾಗಿ ಬಿಡದೆ ಮುಖ್ಯವಾಗಿ ಎದ್ದು ನಿಲ್ಲುತ್ತದೆ.

೨. "ಅರಿಃಕೃಷ್ಟಯಃ" ಎಂಬುದನ್ನು "ಆರ್ಯಜನಾಂಗ" ಯಾ "ಯೋಧರಾಷ್ಟ್ರಗಳು" ಎಂಬುದಾಗಿಯೂ ಅನುವಾದಿಸಬಹುದು. "ಕೃಷ್ಟಿ ಮತ್ತು ಚರ್ಷಣಿ" ಎಂಬ ಪದಗಳು ಸಾಯಣನ ಪ್ರಕಾರ : "ಮನುಷ್ಯ" ಎಂದಾಗುತ್ತದೆ - ಅವುಗಳ ಧಾತುಗಳು "ಕೃಷ್ ಮತ್ತು ಚರ್ಷ್"=ದುಡಿ ಎಂದು ಮೂಲಾರ್ಥ. ಪ್ರಯತ್ನಿಸು, ಸುದೀರ್ಘ ಕಾರ್ಯ ಮಾಡು-ಎಂದೂ ಆಗುತ್ತದೆ. ಅವು ಕೆಲವೊಮ್ಮೆ ವೈದಿಕ ಕರ್ಮವನ್ನು ಯಾ ಕರ್ಮಕರನನ್ನು - ಕಾರ್ಮಿಕ ಯಾ ಕರ್ಮಗಳು ಎಂದಾಗುವುದೂ ಉಂಟು.

**ತಂ ತ್ವಾ ವಾಜೇಷು ವಾಜಿನಂ ವಾಜಯಾಮಃ ಶತಕ್ರತೋ ।**
**ಧನಾನಾಮಿಂದ್ರ ಸಾತಯೇ ॥ ೯ ॥**

೯. ಹೀಗೆ ಶ್ರೀಮಂತನಾದ ನಿನ್ನನ್ನು ನಾವು ಪುನಃ ಮತ್ತಷ್ಟು ಶ್ರೀಮಂತನನ್ನಾಗಿ ಮಾಡುವೆವು ; ಓ ಇಂದ್ರ, ಓ ಶತಕ್ರತೋ (ನೂರ್ಗಜ್ಜಗಾರನೇ), ನಮ್ಮ ವಸ್ತುಗಳ ಸುರಕ್ಷಿತ ಭೋಗಕ್ಕಾಗಿ (ನಾವು ಹಾಗೆ ಮಾಡುವೆವು).

**ಯೋ ರಾಯೋಽವನಿರ್ಮಹಾನ್‌ತ್ಸು ಪಾರಃ ಸುನ್ವತಃ ಸಖಾ ।**
**ತಸ್ಮಾ ಇಂದ್ರಾಯ ಗಾಯತ ॥ ೧೦ ॥**

೧೦. ತನ್ನ ವಿಸ್ತಾರದಲ್ಲಿ ಯಾವನು ಆನಂದದ ಖಂಡವೇ ಆಗಿರುವನೋ ಸೋಮದಾತನ ಸ್ನೇಹಿತನಾಗಿರುವನೋ ಮತ್ತು ಆ ದಾನಿಯನ್ನು ಸುರಕ್ಷಿತವಾಗಿ ಮುನ್ನಡೆಸಿಕೊಂಡು ಹೋಗುವನೋ ಆ ಇಂದ್ರನನ್ನು ಕುರಿತು ಮಂತ್ರಧ್ವನಿಯನ್ನೆತ್ತಿರಿ.



# ಸಾಯಣನ ಅರ್ಥವಿವರಣೆ

೧. ಒಳ್ಳೆಯ ಹಾಲುಳ್ಳ ಹಸುವನ್ನು ಕರೆಯಲೆಂದು ಯಾವನಾದರೊಬ್ಬನು ಹಾಲಿಗನನ್ನು ಕರೆಯುವಂತೆ (ಆಮಂತ್ರಿಸುವಂತೆ) ಒಳ್ಳೆಯ ಸ್ವರೂಪದ ಕೆಲಸಗಳನ್ನು ಮಾಡುವ ಇಂದ್ರನನ್ನು ನಾವು ದಿನವೂ ಕರೆಯುತ್ತೇವೆ.

೨. ನಮ್ಮ (ಮೂರು) ಸೋಮಾಹುತಿಗಳಿಗೆ ಬಾ ; ಸೋಮಪಾನ ಮಾಡು ; ಎಲೈ ಸೋಮಪಾಯಿಯೇ, ಐಶ್ವರ್ಯವಂತನೇ, ನಿನ್ನ ಆನಂದಮತ್ತತೆಯು ಗೋದಾನಕಾರಿ.

೩. ಅನಂತರ ನಿನ್ನ ಅತಿ ಹತ್ತಿರದ ಬುದ್ಧಿವಂತ ಜನರೊಡನೆ (ನಿಂತ) ನಿನ್ನನ್ನು ನಾವು ತಿಳಿದುಕೊಳ್ಳುವಂತಾಗಲಿ. ನಮ್ಮನ್ನು ದಾಟಿ (ಹೋಗಬೇಡ) ; ಮತ್ತು (ನಿನ್ನನ್ನು) ಇತರರಿಗೆ (ತೋರಿಸಿಕೋ ಆದರೆ) ನಮ್ಮ ಕಡೆಗೆ ಬಾ.

೪. ಬುದ್ಧಿವಂತನಾದ ನೀನು ಅವನ ಹತ್ತಿರ ಹೋಗಿ ನನ್ನ ಬಗೆಗೆ ಕೇಳು (ಅವನನ್ನು ನಾನು ಸರಿಯಾಗಿ ಸ್ತುತಿಸಿರಲಿ ಅಥವಾ ಬಿಟ್ಟಿರಲಿ)- ಬುದ್ಧಿವಂತನೂ ಅಕ್ಷತನೂ ಆದ ಇಂದ್ರನ ಹತ್ತಿರ ಹೋಗು. ನಿನ್ನ ಗೆಳೆಯರಿಗವನು (ಅರ್ಚಕರಿಗೆ) ಅತ್ಯುತ್ತಮ ಸಂಪತ್ತನ್ನು ಕೊಡುತ್ತಾನೆ.

೫. ನಾವು (ಅಂದರೆ ನಮ್ಮ ಅರ್ಚಕರು) ಬಾಯ್ತೆರೆದು ಮಾತಾಡೋಣ. (ಅಂದರೆ ಇಂದ್ರನನ್ನು ಹೊಗಳೋಣ ಮತ್ತು ಓ ನಿಂದಕನೇ (ಇಲ್ಲಿಂದ) ನೀನು ಹೊರಟು ಹೋಗು-ಇತರ ಕಡೆಗಳಿಂದಲೂ ತೊಲಗು- (ನಮ್ಮ ಅರ್ಚಕರು) ಇಂದ್ರನಿಗಾಗಿ ಪೂಜೆ ಪುರಸ್ಕಾರಗಳನ್ನೆಲ್ಲಾ ಮಾಡುತ್ತಿದ್ದಾರೆ.

೬. ಓ ಶತ್ರುಘ್ನನೇ, ನಮ್ಮ ಶತ್ರುಗಳೂ ನಮ್ಮಲ್ಲಿ ಒಳ್ಳೆಯ ಸಂಪತ್ತಿದೆಯೆನ್ನಲಿ, - ಮಾನವರು (ಅಂದರೆ ನಮ್ಮ ನೇಹಿಗರೇನೋ ಅದನ್ನು ಹೇಳಿಯೇ ಹೇಳುವರು) ; ಇಂದ್ರ (ಕರುಣಿಸಿದ) ಶಾಂತಿಯಲ್ಲಿ ನಾವಿರುವಂತಾಗಲಿ.

೭. ಯಜ್ಞದ ಸಂಪತ್ತಾದ ಸೋಮವನ್ನು ತಾ ; ಅದು ಜನಮನೋಲ್ಲಾಸಕಾರಕ; ಸೋಮನು (ಆಹುತಿತ್ರಯವನ್ನು) ವ್ಯಾಪಿಸಿದ್ದಾನೆ. ಏಕೆಂದರೆ, ಇಂದ್ರನೂ (ಸೋಮಾಹುತಿಯನ್ನು) ವ್ಯಾಪಿಸಿದ್ದಾನೆ ಮತ್ತು ಸೋಮನು (ಇಂದ್ರಮಿತ್ರನು) ; ಇಂದ್ರನು (ಯಜ್ಞಕರ್ತನಿಗೆ) ಸಂತಸವನ್ನು ನೀಡುತ್ತಾನೆ.

೮. ಹೇ ಶತಕ್ರತೋ, ಇದನ್ನು ಕುಡಿದು ನೀನು ವೃತ್ರಘ್ನನಾದೆ (ವೃತ್ರಾನೀತ ಶತ್ರುಗಳ ಸಂಹಾರಕನಾದೆ) ಮತ್ತು ರಣಗಳಲ್ಲಿ ಯೋಧನನ್ನು ಕಾಯ್ದೇಬಿಟ್ಟೆ.

೯. ಶತಕ್ರತುವಾದ ಇಂದ್ರನೇ, ಸಂಪದ್‌ಭೋಗಕ್ಕಾಗಿ ಯುದ್ಧದಲ್ಲಿ[1] ಬಲಿಷ್ಠನಾದ ನಿನ್ನ ಆಹಾರವನ್ನು ಸಮೃದ್ಧಗೊಳಿಸುತ್ತೇವೆ.

೧೦. ಸಂಪದ್ರಕ್ಷಕನೂ ದೊಡ್ಡವನೂ ಒಳ್ಳೆಯ (ಕಾರ್ಯ) ಸಾಧಕನೂ ಯಾಜ್ಞಿಕ ಮಿತ್ರನೂ ಆದ ಇಂದ್ರನನ್ನು ಕುರಿತು ಹಾಡು.



---

೧. ಸಾಯಣನು I. ೪೮ರಲ್ಲಿ "ವಾಜಿನಂ" ಎಂದರೆ "ಯುದ್ಧದಲ್ಲಿ ಯುದ್ಧ ಮಾಡುವವನು" ಎಂದು ವಿವರಿಸಿ, ಮುಂದಿನ ಪದ್ಯದಲ್ಲಿ ಅದೇ ಪದಕ್ಕೆ "ಯುದ್ಧದಲ್ಲಿ ಬಲಿಷ್ಠ" ಎಂದು ಅರ್ಥ ಹೇಳಿದ್ದನ್ನೂ "ವಾಜೇಷು ವಾಜಿನಂವಾ ಜಯಾಮಃ" ಎಂಬ ಪದಸಂಹತಿಯಲ್ಲಿ ವಾಜವೆಂಬ ಪದ ಮೂಲವನ್ನು "ಯುದ್ಧ". "ಬಲ" ಮತ್ತು "ಆಹಾರ" ಎಂಬ ಮೂರು ಅರ್ಥಗಳಲ್ಲಿ ತೆಗೆದುಕೊಳ್ಳುತ್ತಾನೆ - ಇದನ್ನು ಗಮನಿಸಿರಿ. ಸಾಯಣನ ಬುದ್ಧಿಪೂರ್ವಕವಾದ ಅಸಾಂಗತ್ಯದ ಪದ್ಧತಿಗೆ ನಿದರ್ಶನವಾಗಿದೆ.

ನಾನು ಎರಡು ಬಗೆಯ ಅರ್ಥವಿವರಣೆಗಳನ್ನು ಕೊಟ್ಟಿದ್ದೇನೆ. ಇದರಿಂದ ವಾಚಕನು ಸುಲಭವಾಗಿ ಈ ಎರಡು ಪದ್ಧತಿಗಳನ್ನೂ ಅವುಗಳ ಫಲಿತಗಳನ್ನೂ ಹೋಲಿಸಿ ನೋಡಬಹುದು. ಆವರಣ ಚಿಹ್ನೆಗಳ ನಡುವೆ, ನಾನು, ಅಗತ್ಯವಿದ್ದಲ್ಲೆಲ್ಲಾ ಅರ್ಥವನ್ನು ಪೂರ್ತಿಗೊಳಿಸಿ ಅರ್ಥ ತಿಳಿಯುವಂತೆ ಮಾಡಲು ವಿವರಣಕಾರನ ವಿವರಣೆಗಳನ್ನು ಕೊಟ್ಟಿದ್ದೇನೆ. ಈ ಒಂದೇ ಉದಾಹರಣೆಯಿಂದ ಸಂಸ್ಕೃತ ಬಾರದವನೂ ವೇದಪಾಠದ ಸಾಯಣವಿವರಣೆಯನ್ನು ಇಂದಿನ ವೈಮರ್ಶಿಕ ಮನಸ್ಸು ಒಪ್ಪದಿರುವುದರ ಕಾರಣಗಳನ್ನು ಮೆಚ್ಚಬಹುದೆಂದು ನಾನು ಭಾವಿಸುತ್ತೇನೆ.

# ವ್ಯಾಖ್ಯಾನ

ಜ್ಯೋತಿರ್ಮಯ ಮನದ ಒಡೆಯನಾದ ಇಂದ್ರನನ್ನು ವಿಶ್ವಾಮಿತ್ರನ ಮಗ ಮಧುಚ್ಛಂದಸ್ಸನು ಬೆಳಕನ್ನು ಹೆಚ್ಚಿಸಲೆಂದು ಸೋಮಾಹುತಿಕಾಲದಲ್ಲಿ ಆಮಂತ್ರಿಸುತ್ತಾನೆ. ಈ ಸೂಕ್ತದ ಸಂಕೇತಗಳೆಲ್ಲಾ ಸಾಮೂಹಿಕ ಯಜ್ಞಕ್ಕೆ ಸಂಬಂಧಿಸಿದವುಗಳು. ಇದರ ವಿಷಯಗಳು ಕೆಳಗೆ ಹೇಳಿದಂತಿವೆ : ಅಮೃತತತ್ವ ಕೊಡುವ ಸೋಮಪಾನದಿಂದ ಇಂದ್ರನಲ್ಲಿ ಶಕ್ತಿಯೂ ಸಂತಸವೂ ಹೆಚ್ಚಾಗುವುದು ; ತತ್ಫಲವಾಗಿ ಮಾನವ ಜೀವಿಗೆ ಪ್ರಾತಿಭ ಪ್ರಬೋಧ ಹೊಳೆಯುವುದು ; ಈ ಪ್ರಬೋಧದ ಮಿಂಚಿನಿಂದ ಅವನ ಆಂತರಿಕ ವಿಘ್ನಗಳು ದೂರವಾಗುವುವು ಮತ್ತು ಅವನು ಮುಕ್ತಮನದ ಆತ್ಯಂತಿಕ ವೈಭವವನ್ನು ಪಡೆಯುವನು.

ಆದರೆ ಈ "ಸೋಮ" ಎಂದರೇನು? ಇದನ್ನು ಕೆಲವೊಮ್ಮೆ ಅಮೃತವೆಂದು ಕರೆಯಲಾಗುತ್ತದೆ. ಇದು ಗ್ರೀಕ್ ಅಂಬ್ರೋಸಿಯ-ಇದೇ ಅಮೃತತ್ವದ ಸಾರವೇನು? ಇದು ದಿವ್ಯಾನಂದವನ್ನು ಸೂಚಿಸುವ ಒಂದು ಸಂಕೇತ ಪದ ; ಇದು ಪರಮಾನಂದ ತತ್ವ. ವೈದಿಕ ಕಲ್ಪನೆಯ ಪ್ರಕಾರ, ಇದರಿಂದಲೇ ಮಾನಸ ಸತ್ತೆಯುಳ್ಳ ಮನುಷ್ಯನ ಅಸ್ತಿತ್ವವು ಉಂಟಾಗಿದೆ. ಒಂದು ಗುಪ್ತ ದಿವ್ಯಾನಂದವೇ ನಮ್ಮ ಇರವಿನ ಅಡಿಗಲ್ಲು, ಈ ಇರವಿನ ಉಳಿವಿನ ಪರಿಸರ ಮತ್ತು ಇದರ ಸಾರವೆಂದೇ ಹೇಳಲೂ ಅಡ್ಡಿಯಿಲ್ಲ. ತೈತ್ತಿರೀಯ ಉಪನಿಷತ್ತಿನಲ್ಲಿ ಈ ಆನಂದವನ್ನು ಪರಮಾನಂದದ ಆಕಾಶಾವರಣವೆಂದು ಹೇಳಲಾಗಿದೆ. ಇದನ್ನುಳಿದು ಯಾವುದೂ ಇರಲಾರದು. ಐತರೇಯ ಉಪನಿಷತ್ತಿನಲ್ಲಿ ವಿರಾಟ್, ಪುರುಷನಲ್ಲಿ ಚಾಂದ್ರದೇವತೆಯಾಗಿ ಐಂದ್ರಿಯ ಮನದಿಂದ ಜನಿಸಿದ್ದುದು ಎಂದು ಹೇಳಲ್ಪಟ್ಟಿದೆ. ಮತ್ತು ಮಾನವ ಸೃಷ್ಟಿಯಾದಾಗ ಅವನು ಪುನಃ ಮಾನವಾಸ್ತಿತ್ವದಲ್ಲಿ ಇಂದ್ರಿಯಮಾನಸಿಕತೆಯಾಗಿ ಅಭಿವ್ಯಕ್ತವಾಗುತ್ತಾನೆ. ಏಕೆಂದರೆ, ಸಂವೇದನೆಗೆ ಸಂತೋಷವೇ ಉದ್ದೇಶ ; ಅಥವಾ ಸಂವೇದನೆಯೆಂಬುದು ಸತ್ತೆಯ ಗುಪ್ತ ಸಂತೋಷವನ್ನು ಭೌತಿಕ ಪ್ರಜ್ಞೆಯ ರೂಪಕ್ಕೆ ಪರಿವರ್ತಿಸುವ ಒಂದು ಪ್ರಯತ್ನ ಎನ್ನಬಹುದಾಗಿದೆ. ಆದರೆ ಆ ಪ್ರಜ್ಞೆಯಲ್ಲಿ (ದಿವ್ಯ ಬೆಳಕೋ ದಿವ್ಯ ಸಂತೋಷವೋ) ಯಾವುದೇ ಆಗಲಿ ಯಾ ಎರಡೂ ಆಗಲಿ ಕಲ್ಲು ಬೆಟ್ಟದಂತಿರುವ ಸಾಂದ್ರವಸ್ತುವಿನಲ್ಲಿ ಅಡಗಿಸಿ ಬಂಧಿಸಿಡಲಾಗಿದೆ ಮತ್ತು ಅದನ್ನು ಮುಕ್ತಗೊಳಿಸಬೇಕು ಯಾ ಭಟ್ಟಿ ಇಳಿಸಿ ತೆಗೆಯಬೇಕು. ಈ ಆನಂದವು "ರಸ" ರೂಪದಲ್ಲಿರುತ್ತದೆ, ಸಸ್ಯರಸ ಯಾ ಸಸ್ಯಸಾರವಾಗಿರುತ್ತದೆ-ಯಾವವುಗಳಲ್ಲಿ? ಇಂದ್ರಿಯ ವಿಷಯಗಳಲ್ಲಿ ಮತ್ತು ಇಂದ್ರಿಯಾನುಭವಗಳಲ್ಲಿ ; ಸಸ್ಯಗಳಲ್ಲಿ ಮತ್ತು ಭೌಮಪ್ರಕೃತಿಯ ಬೆಳೆಗಳಲ್ಲಿ. ಹಾಗೇ ಈ ಬೆಳೆಗಳಲ್ಲಿ ಯೌಗಿಕ ಸೋಮವು (ಸೋಮಲತೆಯು) ದಿವ್ಯ ಸಾರವನ್ನು ಕೊಡುವಂಥ, ಅಲ್ಲದೆ, ಎಲ್ಲ ಇಂದ್ರಿಯ ಕ್ರಿಯೆಗಳ ಹಾಗೂ ಅವುಗಳ ಭೋಗದ ಹಿಂದಿರುವಂಥ ಒಂದು ಅವಿಭಾಜ್ಯ ಅಂಶವಾಗಿದೆ, ಮೂಲದ್ರವ್ಯವಾಗಿದೆ. ಅದನ್ನು ಭಟ್ಟಿ ಇಳಿಸಬೇಕು, ಭಟ್ಟಿ ಇಳಿಸಿದ ಮೇಲೆ ಅದು

ತೇಜೋಮಯವಾಗುವವರೆಗೆ ಶೋಧೀಕರಿಸಿ (ಘನೀಕರಿಸಬೇಕು) ಸಾಂದ್ರತೆಗೊಳಿಸಬೇಕು, ಆ ಸಾಂದ್ರತೆಯಲ್ಲಿ, ಸತ್ವ ಸಂಪನ್ನತೆಯಲ್ಲಿ, ಅದು ಪೂರ್ಣ ರಶ್ಮಿಸ್ರಾವಕತೆಯನ್ನೂ ವೇಗವತ್ತೆಯನ್ನೂ ಶಕ್ತಿಮತ್ತೆಯನ್ನೂ - "ಗೋಮತ್, ಆಶು, ಯುವಾಕು" ತಾಳುತ್ತದೆ. ಅದು ದೇವತೆಗಳ ಮುಖ್ಯಾಹಾರವಾಗುವುದು. ಅವರನ್ನು ಸೋಮಾಹುತಿಗೆ ಕರೆಯಲಾಗುತ್ತದೆ. ಆಗವರು ಅದರಲ್ಲಿಯ ತಮ್ಮ ಭೋಗ್ಯ ಪಾಲನ್ನು ತೆಗೆದುಕೊಳ್ಳುತ್ತಾರೆ ಮತ್ತು ಮಾನವನಲ್ಲಿಯ ಆ ಆನಂದೋದ್ರೇಕದ ಆಧಿಕ್ಯದ ಬಲದಲ್ಲಿ ಅವನ ಅತ್ಯುನ್ನತ ಸಾಧ್ಯತೆಗಳಿಗೆ ಎತ್ತುತ್ತಾರೆ. ಅವನನ್ನು ಅತ್ಯುಚ್ಚ ಅನುಭೂತಿಗಳನ್ನು ತಾಳಿಕೊಳ್ಳಲು ಶಕ್ತನನ್ನಾಗಿ ಮಾಡುತ್ತಾರೆ. ಯಾರು ತಮ್ಮಲ್ಲಿರುವ ಸಂತೋಷವನ್ನು ಕೊಡದೆ ತಮ್ಮಲ್ಲೇ ಐಂದ್ರಿಯ ಹಾಗೂ ನೀಚ ಜೀವನಗಳಿಗಾಗಿ ಇಟ್ಟುಕೊಳ್ಳುತ್ತಾರೋ ಅವರು ದೇವತೆಗಳ (ಆದಿತ್ಯರ, ಅದಿತಿಜರ) ಪೂಜಕರಾಗರು - ಅವರು ಪಣಿಗಳು, ಇಂದ್ರಿಯಪ್ರಜ್ಞಾಧಿಪತಿಗಳು. ಆ ಪ್ರಜ್ಞೆಯ ಸೀಮಿತ ಕ್ರಿಯೆಗಳಲ್ಲಿ ವ್ಯವಹರಿಸುವರು - ಅವರು ಯೌಗಿಕ ಮದ್ಯವನ್ನು ಹಿಂಡರು ಶುದ್ಧೀಕೃತ ಆಹುತಿಯನ್ನು ಕೊಡರು ಮತ್ತು ಪವಿತ್ರಮಂತ್ರಗಳನ್ನು ದನಿಯೆತ್ತರಿಸಿ ಹೇಳರು. ಪಣಿಗಳೇ ನಮ್ಮಿಂದ ಜ್ಯೋತಿರ್ಮಯ ಪ್ರಜ್ಞೆಯ ಕಿರಣಗಳನ್ನು ಕಳುವವರು-ಆ ಜ್ವಲತ್ಕಿರಣಗಳೇ ಸೂರ್ಯಗೋವ್ರಜಗಳು-ಅವನ್ನು ಪಣಿಗಳು ಅವಮಾನಸದ ಕೊಟ್ಟಿಗೆಯಲ್ಲಿ ಕೂಡಿ ಹಾಕುವವರು ಅರ್ಥಾತ್ ಪಾಂಚಭೌತಿಕ ಗುಡ್ಡದ ದಟ್ಟವಾದ ಹೊರ ಮುಚ್ಚಳುಳ್ಳ ಗವಿಯಲ್ಲಿ ಬಂಧಿಸುವವರು; ಅವರು ಸ್ವರ್ಗಶ್ವಾನಸ್ತ್ರೀಯಾದ, ಚಮತ್ ಪ್ರತಿಭೆಯ ಸರಮೆಯನ್ನು ಕೂಡಾ ಭ್ರಷ್ಟಾಚಾರಕ್ಕಿಳಿಸಿದರು - ಅದೂ ಆಕೆ ಅವರ ದಾರಿಹಿಡಿದು ಹೋಗಿ ಪಣಿಗುಹೆಯನ್ನು ಹೊಕ್ಕಾಗ.

ಆದರೆ ಈ ಸೂಕ್ತದ ಕಲ್ಪನೆಯು ನಮ್ಮ ಆಂತರಿಕ ಪ್ರಗತಿಯ ಒಂದು ಮಜಲನ್ನು ಕುರಿತದ್ದಾಗಿದೆ. ಈ ಮಜಲಿನಲ್ಲಿ ಪಣಿಗಳನ್ನು ಮೀರಿಸಿದ್ದಾಗಿದೆ. ನಮ್ಮ ಶಕ್ತಿಗಳನ್ನೂ ಕ್ರಿಯೆಗಳನ್ನೂ ನಮ್ಮಿಂದ ದೂರಿಕರಿಸುವ ವೃತ್ರರನ್ನು ಯಾ ಆಚ್ಛಾದಕರನ್ನು ಸಹಾ ಆಗಲೇ ಹಿಂದಕ್ಕೆ ಹಾಕಿ ಬಿಟ್ಟಾಗಿದೆ ; ಬೆಳಕನ್ನು ತಡೆಹಿಡಿದಿಟ್ಟುಕೊಳ್ಳುವ ವಲನನ್ನು ಕೂಡಾ ಹಿಂದಕ್ಕಟ್ಟಲಾಗಿದೆ. ಇಷ್ಟಾದರೂ ನಮ್ಮ ಪೂರ್ಣತ್ವ ಸಾಧನೆಗೆ (ದಾರಿಯಲ್ಲಿ) ಅಡ್ಡಗಟ್ಟುವ ಶಕ್ತಿಗಳು ಉಳಿದೇ ಇವೆ. ಅವು ಪರಿಮಿತಿಕರಣಶಕ್ತಿಗಳು, ಕಟ್ಟಿ ಕೂಡಿಹಾಕುವ ಶಕ್ತಿಗಳು, ನಿಂದಕಗಳು - ಅವುಗಳು ಕಿರಣಗಳನ್ನು ಪೂರಾ ಮಸುಳಿಸದೆ ಕಾರ್ಯೋತ್ಸಾಹವನ್ನು ಸ್ಥಗಿತಗೊಳಿಸದೆ ಇದ್ದರೂ ನಮ್ಮ ಸ್ವಾಭಿವ್ಯಕ್ತಿಯ ನ್ಯೂನತೆಗಳನ್ನು ಪದೇ ಪದೇ ಒತ್ತಿ ಹೇಳಿ, ಅದರ ಕ್ಷೇತ್ರವನ್ನು ಮಿತಿಗೊಳಪಡಿಸಿ, ಆಗಲೇ ನಾವು ಸಾಧಿಸಿದ ಪ್ರಗತಿಯನ್ನು ಮುಂದಿನ ಪ್ರಗತಿಗೆ ಅಡ್ಡಬರುವಂತೆ ಮಾಡುತ್ತವೆ. ಮಧುಚ್ಛಂದನು ಕೊರತೆಯನ್ನು ನೀಗಿಸಿ, ಅದರ ಸ್ಥಳದಲ್ಲಿ ಬೆಳಕಿನ ಹರಿಹವನ್ನು ಹೆಚ್ಚಿಸೆಂದು ಇಂದ್ರನನ್ನು ಕೇಳಿಕೊಳ್ಳುತ್ತಾನೆ, ಪ್ರಬೋಧವನ್ನು ಬಲಪಡಿಸೆಂದು ಆಮಂತ್ರಿಸುತ್ತಾನೆ.

ನಾಡೀ ಪ್ರಜ್ಞೆಯ ಅಸ್ಪಷ್ಟತೆಗಳಿಂದಲೂ ಇತಿಮಿತಿಗಳಿಂದಲೂ ಮುಕ್ತಗೊಳಿಸಲಾದ ಮಾನಸ ಶಕ್ತಿಯ ತತ್ವವನ್ನು ಇಂದ್ರನು ಪ್ರತಿನಿಧಿಸುತ್ತಾನೆ. ಈ ಪ್ರಬುದ್ಧ ಬುದ್ಧಿಯೇ ಇಂದ್ರಿಯಗಳ ಅನೃತಗಳಿಂದ ವಿಪ್ಲಿತವಾಗದೆ ಮತ್ತು ನಾಡೀ (ನರ) ಪ್ರೇರಣೆಗಳಿಂದ ಕುರೂಪಿತವಾಗದೆ, ನ್ಯಾಯವಾದ ಅಥವಾ ಪೂರ್ಣವಾದ ವಿಚಾರವನ್ನು ಅಥವಾ ಕ್ರಿಯೆಯನ್ನು ರೂಪಿಸುವಂಥದು. ಗೋದೋಹ ಮಾಡುವವನಿಗೆ ಯಥೇಷ್ಟವಾಗಿ ಹಾಲುಕೊಡುವ ಹಸುವಿನ

ಪ್ರತಿಮೆಯನ್ನಿಲ್ಲಿ ಕೊಡಲಾಗಿದೆ. ಸಂಸ್ಕೃತದಲ್ಲಿ "ಗೋ" ಎಂದರೆ ಹಸು ಮತ್ತು ಒಂದು ಕಿರಣ ಎಂಬ ಅರ್ಥಗಳಿವೆ. ವೈದಿಕ ಸಂಕೇತಕಾರ ಋಷಿಗಳಿಗೆ ಅಲಂಕಾರಕ್ಕಿಂತಲೂ ಅಲಂಕಾರವಾದ ಈ (ಧ್ವಂದ್ವಾರ್ಥ-ಯುಕ್ತವಾದ) ಧ್ವಂದ್ವಾಲಂಕಾರವನ್ನು ಬಳಸಿ ಧ್ವಂದ್ವಾರ್ಥ ಸೂಚನೆ ಮಾಡುವುದು ರೂಢಿ. ಏಕೆಂದರೆ ಅವರ ಪ್ರಕಾರ, ಬೆಳಕೆಂಬುದು ವಿಚಾರದ ಸರಿಯಾದ ಕಾವ್ಯಮಯ ಪ್ರತಿಮೆ (ರೂಪಕ) ಅಲ್ಲ ; ಅದರ ನಿಜವಾದ ಭೌತಿಕ ರೂಪ ಮಾತ್ರ, ಯುಕ್ತವಾದ (ಉಚಿತವಾದ) ಪ್ರತಿಮೆ. ಹೀಗೆ ಹಾಲು ಕರೆವ ದನದ ಗೋಲೆಗಳೆಂದರೆ ಸೂರ್ಯನ (ಕಿರಣಗಳ) ಗೋಲೆಗಳು (ಗುಂಪುಗಳು). ಸೂರ್ಯನಾದರೋ ಆವಿರ್ಭಾವಕ ಮತ್ತು ಪ್ರಾತಿಭೇಯ ಮನಸ್ಸು ಅಥವಾ ಸೌರವೈಭವವನ್ನು ಪ್ರಕಟಿಸುವ ಉಷಾದೇವತೆ. ಆಯಾ (ಮನುಷ್ಯನ) ಗ್ರಾಹಕಮನದ ಮೇಲೆ ಯಥೇಷ್ಟವಾಗಿ ಹೆಚ್ಚು ಹೆಚ್ಚು ಕ್ರಿಯಾವೃಷ್ಟಿಯನ್ನು ಕಿರಣಗಳಿಂದ ಪ್ರತಿದಿನವೂ ಮಾಡುವುದರ ಮೂಲಕ, ಉಕ್ತ ಋಷಿಯು ಪರಮಸತ್ಯದ ಬೆಳಕಿನ ಉತ್ಕರ್ಷವು ಇಂದ್ರನಿಂದಾಗಬೇಕೆಂದು ಬಯಸುತ್ತಾನೆ.

ಸೋಮರಸದಿಂದ (ರಸ=ಮಧು=ಮದ್ಯ) ದಿವ್ಯಕ್ರಿಯೆಯಲ್ಲಿಯ ಮಾದರಿಯಾಗಿ ಮತ್ತು ದಿವ್ಯಾಸ್ತಿತ್ವದಲ್ಲಿಯ ನಮ್ಮ ಸಂತೋಷವು ಮಾದರಿಯಾಗಿ ಮಾಡಲ್ಪಟ್ಟಿದೆ. ಆ ಸಂತೋಷದ ಪ್ರಜ್ಞಾತ ಅಭಿವ್ಯಕ್ತಿಯಿಂದ ಶುದ್ಧ ಪ್ರಬುದ್ಧ ಬುದ್ಧಿಯ (ಹೊಳೆಯಲ್ಪಟ್ಟ ಬುದ್ಧಿಯ) ಚಟುವಟಿಕೆಯು ಪಾಲಿತವೂ ಪೋಷಿತವೂ ಆಗುವಂತೆ ಮಾಡುತ್ತದೆ. ಆ ಬುದ್ಧಿಯು ಅದನ್ನು ಭಕ್ಷಿಸುತ್ತಾ ಹೋದ ಹೋಗೆ ಅದರ ಕ್ರಿಯೆಯು ಮದೋನ್ಮತ್ತ ಯೋಗಾನಂದವಾಗುತ್ತದೆ, ಉದ್ರಿಕ್ತ ಸ್ವರೂಪದ ದಿವ್ಯಾನಂದವಾಗುತ್ತದೆ. ಆ ಆನಂದೋದ್ರೇಕದ ಸ್ಫೂರ್ತಿಯಿಂದ ಆ ರಶ್ಮಿಗಳು ಯಥೇಷ್ಟವಾಗಿಯೂ ಸಂಮೋದಮಯವಾಗಿಯೂ ಒಳಗೆ ಸುರಿಯುತ್ತಾ ಬರುತ್ತವೆ : "ನಿನ್ನ ಆನಂದೋದ್ರೇಕದಲ್ಲಿ ಜ್ಯೋತಿರ್ದಾನವೇ ನಿಜವಾಗಿ ನಿನ್ನ ಮದೋನ್ಮಾದ."

ಏಕೆಂದರೆ ಆಗ ಮಾತ್ರ ಬಂಧನಕಾರರು ಮತ್ತೂ ಒತ್ತಾಯಿಸಿದ ಪರಿಮಿತಿಗಳನ್ನು ಉಲ್ಲಂಘಿಸಿ ಮೇಲೆ ಹೋಗಲು ಸಾಧ್ಯ. ಹಾಗೆ ಉತ್ತರೋತ್ತರವಾಗಿ ಮುನ್ನಡೆದ ಮೇಲೆಯೇ ಆವಿರ್ಭೂತ ಜ್ಯೋತಿಯನ್ನು ಪಡೆದ ಬುದ್ಧಿಗೆ ಜ್ಞಾನದ ಆತ್ಯಂತಿಕತೆಗಳ ಯಾವುದಾದರೊಂದು ಅಂಶವನ್ನು ತಲುಪಲು ಸಾಧ್ಯ. ಸರಿಯಾದ ವಿಚಾರಗಳು ಸರಿಯಾದ ವಿಚಾರವಂತಿಕೆಗಳೂ - ಎಂಬುದೇ "ಸುಮತಿ" ಪದದ ಪೂರ್ಣಾರ್ಥವು. ಏಕೆಂದರೆ ವೈದಿಕ ಮತಿಶಬ್ದವು ಚಿಂತನ ಮಾಡುವ ಅರ್ಥವಷ್ಟನ್ನೇ ಅಲ್ಲದೆ ಮಾನಸಿಕತೆಯ (ಮನೋಧರ್ಮದ) ಭಾವನಾತ್ಮಕತೆಯನ್ನೂ ಒಳಗೊಳ್ಳುತ್ತದೆ. "ಸುಮತಿ" ಎಂಬುದರ ಪೂರ್ಣಅರ್ಥವಿದು - "ಸುಮತಿಯು" ವಿಚಾರಗಳಲ್ಲಿಯ ಬೆಳಕು ; ಅದು ಆತ್ಮಗತವಾದ ಪ್ರಸನ್ನತೆಯೂ ಹೌದು, ದಯಾರ್ದ್ರತೆಯೂ ಹೌದು. ಆದರೆ ಈ ಉಪಚ್ಛೇದದಲ್ಲಿ ಒತ್ತಿ ಹೇಳಿರುವುದು ಸರಿಯಾದ (ನ್ಯಾಯವಾದ ಯುಕ್ತವಾದ) ವಿಚಾರವನ್ನಲ್ಲದೆ (ರತಿ-ನಿರ್ವೇದಾದಿ) ಭಾವನೆಗಳನ್ನಲ್ಲ. ಆಗಲೇ ಸಾಧಿಸಿದ ಪ್ರಜ್ಞಾ ಕ್ಷೇತ್ರದಲ್ಲಿಯೇ ನ್ಯಾಯವಾಗಿ ವಿಚಾರ ಮಾಡುವುದು (ಚಿಂತನ ಮಾಡುವುದು), ಅಂಥ ವಿಚಾರದ ಪ್ರಗತಿಯನ್ನು ಆರಂಭಿಸಬೇಕು ಎಂಬುದನ್ನು ನಾವು ಮರೆಯುವಂತಿಲ್ಲ. ಹೊಳೆತಗಳೂ ಕಣ್ಣು ಕೋರೈಸುವ ಅಭಿವ್ಯಕ್ತಿಗಳೂ (ಆವಿರ್ಭಾವಗಳೂ) ಅಲ್ಲಿರಬಾರದು. ಅವುಗಳಿದ್ದರೆ, ಅವು ನಮ್ಮ ಶಕ್ತಿಗಳ ಗಡಿಮಿತಿಗಳನ್ನು ದಾಟಿ ಹೋಗಿ, ಸರಿಯಾದ ರೂಪದಲ್ಲಿ ಹೇಳಲಾರದಂತಾಗಿ ಗ್ರಾಹಕ (ಸ್ವೀಕಾರಕ) ಮನಸ್ಸಿನಲ್ಲಿ ಗೊಂದಲವೆಬ್ಬಿಸುತ್ತವೆ. ಇಂದ್ರನು

ಬೆಳಕು ಬೀರುವವನಷ್ಟೇ ಅಲ್ಲದೆ, ಯುಕ್ತ ವಿಚಾರಗಳನ್ನು ರೂಪಿಸುವವನೂ ಹೌದು ("ಸುರೂಪಕೃತ್ನು".)

ಆಮೇಲೆ ಋಷಿಯು ಸಾಮೂಹಿಕ ಯೋಗಸಾಧನೆಯಲ್ಲಿ ಪಾಲುಗಾರನಾದ ಸಹಯೋಗಿಯತ್ತ ತಿರುಗಿ, ಅಥವಾ ಬಹುಶಃ ತನ್ನ ಮನವನ್ನೇ ಕುರಿತು ಅವನನ್ನು ಯಾ ಅದನ್ನು, ಸ್ವವಿರುದ್ಧವಾದ ಸೂಚನೆಗಳ ಆತಂಕಗಳನ್ನು ಮೀರಿ ಹೋಗಲು ಪ್ರೋತ್ಸಾಹಿಸುತ್ತಾನೆ. ಇತರರಿಗೆ ಆಗಲೇ ಪರಮೋಚ್ಚ ಸತ್ವಸಂಸಿದ್ಧಿಯನ್ನು ಹೊಂದಲು ಮುಂಬರಿವಂತೆ ಮಾಡಿದ ದಿವ್ಯಬುದ್ಧಿಯನ್ನು ಪ್ರಶ್ನಿಸುವುದು ಆತಂಕಕಾರಿ, ಹಾಗೆ ಪ್ರಶ್ನಿಸಹೇಳುವ ಸೂಚನೆಯು ವಿಘ್ನಕರ. ತನ್ನಷ್ಟಕ್ಕೇ ತಾನೇ ಹುಟ್ಟಿಕೊಂಡಿರುವ ಗೊಂದಲ (ಗಲಿಬಿಲಿ) ಮತ್ತು ಮಸುಕು, ಮಂಕಾಗಿಸುವ ಅಸ್ಪಷ್ಟತೆ ಇವುಗಳನ್ನು ಸೂಕ್ಷ್ಮವಾಗಿ ನೋಡಿ, ಸ್ಪಷ್ಟವಾಗಿ ಕಂಡು, ಪರಿಹರಿಸುವುದು ಆ ಬುದ್ಧಿ ಮಾತ್ರ. ಆ ಮಹಾಬುದ್ಧಿಯು, ದಿವ್ಯಧೀಯು, ತ್ವರಿತಗತಿಯುಳ್ಳದ್ದು, ತಲಸ್ಪರ್ಶಿ ಯಾ ಅತಿಸಾಂದ್ರ ಮತ್ತು ಔತ್ಸಾಹಿಕ ; ಅದು ತನ್ನ ಉತ್ಸಾಹಭರದಲ್ಲಿ ನಾಡೀ ಪ್ರಜ್ಞೆಯ ಉಪನೋದನಗಳಂತೆ ತನ್ನ ದಾರಿಗಳಲ್ಲಿ ಮುಗ್ಗರಿಸದು, ಕಾಲುಜಾರಿ ಬೀಳದು. ಅಥವಾ ಬಹುಶಃ ಅದರ ಅಜಯ್ಯ ಕಾರ್ಯಶಕ್ತಿಯ ದೆಸೆಯಿಂದ ಅದು ಪ್ರಚ್ಛಾದಕರ ಅಥವಾ ಪರಿಸೀಮನಕಾರರ ಆಕ್ರಮಣಕ್ಕೆ ಬಲಿಯಾಗದು ಎಂಬುದು ತಾತ್ಪರ್ಯ.

ಮುಂದೆ ಋಷಿಯು ಉತ್ಕಟವಾಗಿ ಬಯಸುವ ಫಲಿತಗಳನ್ನು ವರ್ಣಿಸಲಾಗಿದೆ. ಮಾನಸಜ್ಞಾನದ ಆತ್ಯಂತಿಕತೆಗಳ ಮೇಲೆ ಹೆಚ್ಚಿನ ಬೆಳಕು ಬಿದ್ದುದರಿಂದ ಪ್ರಮಿತಿಕರಣ ಶಕ್ತಿಗಳು ತೃಪ್ತರಾಗುವುವು ಮತ್ತು ಹೆಚ್ಚಿನ ಮುಂಬರಿತ ಹಾಗೂ ಹೊಸ ಜ್ಯೋತಿರ್ಮಯ ಚಟುವಟಿಕೆಗಳಿಗೆ ಅವಕಾಶ ಕೊಡಲೊಪ್ಪಿ ತಾವಾಗಿಯೇ ಹಿಂಜರಿದು ಹೋಗುವುವು. ತಾತ್ಪರ್ಯತಃ ಅವು ಹೇಳುವುವು : "ಹೌದು, ಈವರೆಗೆ ನಿಮಗೆ ನಾವು ನ್ಯಾಯವಾಗಿ ಕೊಡದಿದ್ದ ಹಕ್ಕು ನಿಮಗೀಗ ಪ್ರಾಪ್ತವಾಗಿದೆ. ಆಗಲೇ ನೀವು ಗೆದ್ದ ಕ್ಷೇತ್ರಗಳಲ್ಲಷ್ಟೇ ಅಲ್ಲ, ಇತರ ಅಪರಿಚಿತ (ನೀವು ನಡೆಯದಿರುವ) ದಾರಿಯುಳ್ಳ ಕ್ಷೇತ್ರಗಳಿಗೂ ನಿಮ್ಮ ವಿಜಿಗೀಷು ದಂಡಯಾತ್ರೆಯನ್ನು ಒಯ್ಯಬಹುದು. ಈ ಕಾರ್ಯವನ್ನು ದಿವ್ಯಬುದ್ಧಿಯಲ್ಲಿ ಸುರಕ್ಷಿತವಾಗಿ ಇಡಿರಿ-ನಿಮ್ಮ ಕೆಳಮಟ್ಟದ ಕಾರ್ಯಶಕ್ತಿಗಳಲ್ಲಲ್ಲ. ಏಕೆಂದರೆ ಹೆಚ್ಚಿನ ಸಮರ್ಪಣೆಯು ನಿಮಗೆ ಹೆಚ್ಚಿನ ಹಕ್ಕನ್ನು ಕೊಡುತ್ತದೆ."

"ಆರತ"= ಚಲಿಸು ಯಾ ಯತ್ನಿಸು, ಹೋರಾಡು, ಹೆಣಗು - ಎಂಬ ಪದವು ಅದರ ದಾಯಾದ ಪದಗಳಾದ ಅರಿ, ಅರ್ಯ, ಆರ್ಯ, ಅರತ, ಅರಣಿ ಎಂಬ ಪದಗಳಂತೆ ವೇದದ ಕೇಂದ್ರ ಕಲ್ಪನೆಯನ್ನು ವ್ಯಕ್ತಪಡಿಸುತ್ತದೆ. "ಅರ್" ಧಾತು ಎಂಬುದು ಯಾವಾಗಲೂ ಪ್ರಾಯತ್ನಿಕ ದೂರ ಚಲನ ಯಾ ಹೋರಾಟದ ದೂರಗಾಮಿತ್ವ, ಅಥವಾ ಮಿತಿಮೀರಿದ ಔನ್ನತ್ಯ ಯಾ ಸೀಮಾತೀತವಾದ ಅನುತ್ತಮತೆ, ಆತ್ಯಂತಿಕ ಔತ್ತಮ್ಯ ಎಂಬ ಅರ್ಥವನ್ನು ಹೇಳುತ್ತದೆ. ಅದನ್ನು ದೋಣಿ ಒತ್ತುವುದಕ್ಕೂ (ಹುಟ್ಟುಹಾಕುವುದಕ್ಕೂ), ಊಳುವುದಕ್ಕೂ, ಯುದ್ಧ ಮಾಡುವುದಕ್ಕೂ, ಎತ್ತುವುದಕ್ಕೂ, ಹತ್ತುವುದಕ್ಕೂ ಬಳಸಲಾಗುತ್ತದೆ. ಅಂದ ಮೇಲೆ ಆರ್ಯನೆಂದರೆ (ಆರ್ಯನ್ನನೆಂದರೆ) ಯಾರು? ವೈದಿಕ ಕರ್ಮಗಳಿಂದ ಜೀವಸಾಫಲ್ಯ ಮಾಡಿಕೊಳ್ಳಬೇಕೆಂಬವನು, ಒಳಗಿನ ಮತ್ತು ಹೊರಗಿನ "ಕರ್ಮ ಯಾ ಅಪಸ್" ಅರ್ಥಾತ್ ದೇವತೆಗಳ ಕುರಿತ ಯಜ್ಞವನ್ನು ಮಾಡುವಾತನು-ಎಂದರ್ಥ. ಆದರೆ ಇದನ್ನೊಂದು ಪ್ರಯಾಣ ಎಂದು ರೂಪಿಸಿ ಹೇಳಲಾಗಿದೆ- ಇದೊಂದು ದಂಡಯಾತ್ರೆ, ಯುದ್ಧ, ಮೇಲಕ್ಕೆ ಹತ್ತುವುದು ಎಂದು ಪ್ರತಿಮಿಸಲಾಗಿದೆ. ಆರ್ಯನು

ಎತ್ತರಗಳತ್ತ ಏರಿ ಹೋಗಲು ಕಷ್ಟಪಟ್ಟು ದುಡಿಯುತ್ತಾನೆ ; ಎದುರಾಗುವ ಅಡ್ಡಿ ಆತಂಕಗಳೆಲ್ಲವನ್ನೂ ಖಂಡಿಸಿ ಯುದ್ಧ ಮಾಡುತ್ತಾ ಹೋಗುವನು. ಈ ಗಮನವು ಮುನ್ನಡೆಯೂ ಹೌದು - ಅದೇ ಸಮಯದಲ್ಲಿ - ಒಂದು ಉತ್ತರಣವೂ ಹೌದು, ಉದ್ಗಮನವೂ ಹೌದು. ಅದೇ ಅವನ ಆರ್ಯತ್ವರೇ-ಅವನ "ಅರೇತೇ" = ಸದ್ಗುಣ ; ಅದೇ ಧಾತುವಿನಿಂದ ನಿಷ್ಪನ್ನವಾದ ಒಂದು ಗ್ರೀಕ್ ಶಬ್ದವಿದು. ಉಳಿದ ಪದಸಂಹತಿಗಳೊಡನೆ "ಆರತ"ವನ್ನು "ಹೊರಹೊರಟು ಇತರ ಕ್ಷೇತ್ರಗಳಲ್ಲಿ ಮುನ್ನಡೆಯಿಡು" ಎಂದು ಭಾಷಾಂತರಿಸಬಹುದಾಗಿದೆ.

ಪದಪ್ರತಿಧ್ವನಿಗಳ ವಿಚಾರ ಸಂಬಂಧಗಳ ಸೂಕ್ಷ್ಮ ವೈದಿಕ ಪದ್ಧತಿಯಲ್ಲಿ ಉಕ್ತ ಕಲ್ಪನೆಯನ್ನು ಪುನಃ ತೆಗೆದುಕೊಳ್ಳಲಾಗಿದೆ : "ಅಲಿಃಕೃಷ್ಟಯಃ" ಎಂಬ ಪದವಿನ್ಯಾಸ ಮುಂದಿನ ಪದ್ಯದಲ್ಲಿ ಬಂದಿದೆ. ಇವಾವುವೂ ಭೂಮಿಯ ಮೇಲಿನ ಆರ್ಯರಾಷ್ಟ್ರಗಳಲ್ಲವೆಂದು ನನಗೆನ್ನಿಸುತ್ತದೆ. ಸಾಮೂಹಿಕ (ಸಾಂಘಿಕ) ಯೋಗದ ಯಾ ರಾಷ್ಟ್ರೀಯ ಯೋಗದ ಕಲ್ಪನೆ ಸಾಧ್ಯವಿದ್ದಾಗ ಮೇಲೆ ಹೇಳಿದ ಅರ್ಥಕ್ಕೂ ಆಸ್ಪದವಿರುವುದೆಂದು ಹೇಳಲೂಬಹುದು. ಆದರೆ ಮಾನವನ ಉದ್ಗಮನದಲ್ಲಿ ನೆರವೀಯುವ ಅವನ ಆಧ್ಯಾತ್ಮಿಕ ಬಂಧುಗಳು, ಅವನ ಮತ್ತು ತಮ್ಮ ಮಹತ್ವಾಕಾಂಕ್ಷೆಗಳು ಒಂದೇ ಆಗಿರುವುದರಿಂದ, ಅವನ ಸಹಕಾರಿಗಳಾಗಿ ಬದ್ಧರಾಗಿರುವ ಅರ್ಥವು ಸಹಜ ; ಅವು ಅವನ ಮಿತ್ರರು, ಸೋದರರು, ಸಹಕರ್ಷಕರು (ನೇಗಿಲ ಯೋಗಿಗಳು)- "ಸಖಾಯಃ, ಯುಜಃ, ಜಾಮಯಃ" ಅವನ ಕಾರ್ಯಸಿದ್ಧಿಯೇ ಅವರ ಕಾರ್ಯಸಿದ್ಧಿಯಾಗಿರುವುದರಿಂದ, ಅವನ ನಿಗ್ರಹಾಕಾರರು ತೃಪ್ತರಾಗಿ ಅವನಿಗೆ ಹಾದಿ ಮಾಡಿಕೊಟ್ಟರೆ, ತತ್ಫಲವಾಗಿ ಅವನು ಸಿದ್ಧಿ ಹೊಂದಿದರೆ, ಅವರಿಗೂ ಸಾಫಲ್ಯಾನುಭವ ಉಂಟಾಯಿತೆನ್ನಬಹುದು. ಆ ನಿಗ್ರಹಕಾರರೂ (ಆತಂಕ ಒಡ್ಡಿದವರು) ಮಾನವ ಆನಂದದ ಪೂರ್ಣತೆ ಸಿದ್ಧಿಸಿದಾಗ, ಜೀವಾತ್ಮವು ಇಂದ್ರನ ಶಾಂತಿಯಲ್ಲಿ ವಿರಮಿಸಿದಾಗ, ಕೊನೆಯದಾಗಿ (ಸಿದ್ಧನಾದ ಸಾಧಕನನ್ನು) ಸಮರ್ಥಿಸುತ್ತಾರೆ. ಐಂದ್ರೀಶಾಂತಿಯು ಬೆಳಕಿನೊಡನೆ ಬರುತ್ತದೆ- ಆ ಶಾಂತಿಯೆಂಬುದು ಮೋಕ್ಷದ ಮತ್ತು ಸಫಲ (ಸಾರ್ಥಕ) ಪ್ರಜ್ಞೆಯ ತುತ್ತ ತುದಿಗಳಲ್ಲಿ ನಿಂತಂತಿರುವ ಪೂರ್ಣತ್ವ ಹೊಂದಿದ (ಮಾನವ್ಯ) ಮನೋಧರ್ಮ (ಮಾನಸಿಕತೆ.)

ಆದುದರಿಂದಲೇ ದಿವ್ಯಾನಂದವನ್ನು, ಪದ್ಧತಿ ಪ್ರಕಾರ, ವೇಗವತ್ತಾದುದನ್ನಾಗಿಯೂ ಸಾಂದ್ರಘನಶಕ್ತಿಯುಳ್ಳದ್ದನ್ನಾಗಿಯೂ ಮಾಡಲು ಹೊರಗೆ ಸುರಿಯಲಾಗಿದೆ ; ಮತ್ತು ಅದನ್ನು ಇಂದ್ರಾರ್ಪಣ ಮಾಡಲಾಗಿದೆ. ಅದರಿಂದ ಇಂದ್ರನು ತನ್ನ ಶಕ್ತಿಗಳ ಸಾಂದ್ರೀಕರಣಕ್ಕೆ (ವಜ್ರಸಾರೀಕರಣಕ್ಕೆ) ಅಗತ್ಯವಾದ ಬಲವನ್ನು ಪಡೆಯುವನು. ಏಕೆಂದರೆ, ಆಂತರಿಕ ಸಂವೇದನೆಗಳಲ್ಲಿ ಆವಿರ್ಭವಿಸಿದ ಈ ಗಂಭೀರ ಸಂಮೋದವೇ, ಹರ್ಷೋದ್ರೇಕವೇ, ಮನುಜನನ್ನಾಗಲಿ, ದೇವನನ್ನಾಗಲಿ ಬಲಿಷ್ಠನನ್ನಾಗಿ ಮಾಡುವಂಥದಾಗಿದೆ. ಇದರಿಂದ ದಿವ್ಯ ಬುದ್ಧಿಯು ಪೂರ್ತಿಗೊಳಿಸದೆ ಉಳಿದ ಪ್ರಯಾಣವನ್ನು ಪೂರ್ತಿಗೊಳಿಸಲು ಶಕ್ತವಾಗಿ ಆ ಬುದ್ಧಿದೇವತೆಯಾದ ಇಂದ್ರನು ಸ್ವಮಿತ್ರನಾದ ಯಾಜಕನಿಗೆ ಪ್ರತಿದಾನರೂಪವಾಗಿ ಮೋಕ್ಷದ ಹೊಸ ಹೊಸ ಶಕ್ತಿಗಳು ದೊರಕುವಂತೆ ಮಾಡುತ್ತಾನೆ.

ಏಕೆಂದರೆ ಮನುಷ್ಯಾಂತರ್ಗತವಾದ ದಿವ್ಯಮಾನಸದ ಈ ಶಕ್ತಿಯಿಂದಲೇ ಅವನು ಆವಾರಕರೋ ಆಚ್ಛಾದಕರೋ ಆಕ್ರಾಮಕರೋ ಆಗಿ, ಎದುರುಬಿದ್ದ ಎಲ್ಲ ಶಕ್ತಿಯನ್ನೂ ಅದರ ಸಾಂಕಲ್ಪಿಕ ಹಾಗೂ ವೈಚಾರಿಕವಾದ ನೂರ್ಮಡಿ ಚಟುವಟಿಕೆಗಳನ್ನೂ ವಿನಾಶ ಮಾಡಿದನು.

ಈ ಶಕ್ತಿಯಿಂದಲೇ ಆ ಇಂದ್ರನು (ತತ್‌ಸ್ವರೂಪನಾದ ದೇವನು) ನಮ್ಮ ಆಸ್ತಿಯ ಭಕ್ಷಕರೂ ಲೂಟಿಗಾರರೂ ಆದ ಅತ್ರಿಗಳೊಡನೆ ಮತ್ತು ದಸ್ಯುಗಳೊಡನೆ ಯುದ್ಧಮಾಡಿ ಪುನಃ ಪಡೆದ ನಮ್ಮ ಆಸ್ತಿಯನ್ನು ರಕ್ಷಿಸಿದನು.

ಮಧುಚ್ಛಂದಸ್ಸು ಮುಂದುವರಿದು ಹೇಳುತ್ತಾನೆ. (ದಿವ್ಯಬುದ್ಧಿ ಸ್ವರೂಪನಾದ ಇಂದ್ರನು) ಆ ಬುದ್ಧಿಯು ಹೀಗೆ ಬೇಕಾದಷ್ಟು ಶ್ರೀಮಂತವಾಗಿದ್ದರೂ ತನ್ನ ಶ್ರೀಮಂತಿಕೆಯ ಸಂಗ್ರಹವನ್ನು ನಾನಾರೂಪದಲ್ಲಿ ಬೈತಿಟ್ಟುಕೊಂಡಿದ್ದರೂ ನಿರೋಧಕರನ್ನೂ ವೃತ್ರರನ್ನೂ ಹೊಡೆದೋಡಿಸಿ ನಾವು ಅದು ಇನ್ನೂ ಅಧಿಕ ಔದಾರ್ಯ ಪ್ರಣೋದವುಳ್ಳದ್ದಾಗುವಂತೆ ಮಾಡುವುದೇಕೆಂದರೆ, ನಾವು ನಮಗೆ ಆಶ್ವಸ್ತವಾದ ಪೂರ್ಣ ಸಂಪತ್ತಿನ ಒಡೆಯತನ ದೊರಕಲಿ ಎಂಬ ಕಾರಣದಿಂದ.

ಏಕೆಂದರೆ, ಈ ಪರಂಜ್ಯೋತಿಯು ಸ್ವಂತದ ಪೂರ್ಣಮಹತ್ತೆಯಲ್ಲಿ ಮಿತಿ ಮುಕ್ತವಾದ ಸುಖ ಸ್ವರೂಪದ ಭೂಖಂಡ ; ಈ ಶಕ್ತಿಯು ಮಾನವಾತ್ಮದೊಡನೆ ಸ್ನೇಹದಿಂದ ಇರುವುದು; ಅದನ್ನು ಯುದ್ಧ ಕಾಲದಲ್ಲಿ ಸುರಕ್ಷಿತವಾಗಿ ಮುನ್ನಡೆಸಿಕೊಂಡು ಹೋಗುವುದು ; ಅದರ ಮಹತ್ವಾಕಾಂಕ್ಷೆಯ ಶಿಖರವು ಆ ದಂಡಯಾತ್ರೆಯ ಗುರಿ, ಅದರ ಅಂತ-ಆ ಅಂತಕ್ಕೆ ಅದನ್ನು ಈ ಇಂದ್ರಶಕ್ತಿಯು ತಲುಪಿಸುವುದು.



# III

# ಇಂದ್ರನೂ ವಿಚಾರಪ್ರಣೋದಗಳೂ

## ಋಗ್ವೇದ I. 171

**ಪ್ರತಿ ವ ಏನಾ ನಮಸಾಹಮೇಮಿ ಸೂಕ್ತೇನ ಭಿಕ್ಷೇ ಸುಮತಿಂ ತುರಾಣಾಂ ರರಾಣತಾ ಮರುತೋ ವೇದ್ಯಾಭಿರ್ನಿ ಹೇಳೋ ಧತ್ತ ವಿ ಮುಚಧ್ವಮಶ್ವಾನ್ ॥ ೧ ॥**

೧. ಈ ನಮನದೊಡನೆ ನಾನು ನಿಮ್ಮೆಡೆಗೆ ಬರುತ್ತೇನೆ, ಮಾರ್ಗಕ್ರಮಣದಲ್ಲಿ ವೇಗವತ್ತಾದುವುಗಳನ್ನು ನ್ಯಾಯ ಮನಸ್ಕತೆಯನ್ನು ನೀಡಿರೆಂದು ಪೂರ್ಣಮಂತ್ರದಿಂದ ಬೇಡುತ್ತೇನೆ. ಜ್ಞಾನಾಂಶಗಳಲ್ಲಿ ಸಂತಸಬಟ್ಟುಕೊಳ್ಳಿರಿ, ಓ ಮರುತ್ತುಗಳೇ ನಿಮ್ಮ ಕ್ರೋಧವನ್ನು ತ್ಯಜಿಸಿರಿ, ನಿಮ್ಮ ಕುದುರೆಗಳನ್ನು ನೊಗದಿಂದ ಮುಕ್ತಗೊಳಿಸಿರಿ.

**ಏಷ ವಃಸ್ತೋಮೋ ಮರುತೋ ನಮಸ್ವಾನ್ ಹೃದಾ ತಷ್ಟೋ ಮನಸಾಧಾಯಿ ದೇವಾಃ ಉಪೇಮಾ ಯಾತ ಮನಸಾ ಜುಷಾಣಾ ಯೂಯಂ ಹಿ ಷ್ಠಾ ನಮಸ ಇದ್ ವೃಧಾ ಸಃ ॥ ೨ ॥**

೨. ಎಲೈ ಮರುತ್ತುಗಳೇ, ನಿಮ್ಮ ಅಸ್ತಿತ್ವ ಸಮರ್ಥನೆಯ ಸೂಕ್ತದಲ್ಲಿ ನನ್ನ ನಮನವಿದೆ. ಅದು ಹೃದ್‌ರೂಪಿತ, ಮನಸಾ ಪ್ರತಿಷ್ಠಾಪಿತ ; ಓ ದೇವತೆಗಳೇ, ನನ್ನ ಮಂತ್ರಗಳ ಸನಿಹಕ್ಕೆ ಬನ್ನಿರಿ, ಅವುಗಳನ್ನು ಮನಸಾ ಅಪ್ಪಿಕೊಳ್ಳಿರಿ; ಏಕೆಂದರೆ, ನೀವು ಶರಣಾಗತಿಯನ್ನು[1] ಸಂವರ್ಧಿಸುವವರು, ಪ್ರೋತ್ಸಾಹಿಸುವವರು).

---

೧. "ನಮಸಃ" - ಸಾಯಣನು ಉದ್ದಕ್ಕೂ ನಮಸ್ಸನ್ನು ತನಗೆ ಪ್ರಿಯವಾದ ಆಹಾರವೆಂಬರ್ಥದಲ್ಲಿ ಗ್ರಹಿಸುತ್ತಾನೆ. ಏಕೆಂದರೆ "ನಮಸ್ಕಾರವರ್ಧನರು" ಎಂಬರ್ಥವು ಅಸಾಧ್ಯವೆಂಬುದು ಸ್ಪಷ್ಟ. ಈ ಮತ್ತು ಇತರ ಉಪಚ್ಛೇದಗಳಿಂದ ನಮನವೆಂಬ ಭೌತಿಕಾರ್ಥದ ಹಿಂದೆ ಮಾನಸಶಾಸ್ತ್ರೀಯವಾದ ಅರ್ಥವಿದೆ. ಅಲ್ಲದೆ, ಅದಿಲ್ಲ ಸ್ಥೂಲ ಅಲಂಕಾರೋಕ್ತಿಯಿಂದ ಬೇರೆಯಾಗಿ ಎದ್ದು ಕಾಣುತ್ತದೆ.

**ಸ್ತುತಾಸೋ ನೋ ಮರುತೋ ಮೃಳಯಂತೂತ ಸ್ತುತೋ ಮಘವಾ ಶಂಭವಿಷ್ಠಃ**
**ಊರ್ಧ್ವಾ ನಃ ಸಂತು ಕೋಮ್ಯಾ ವನಾನ್ಯಹಾನಿ[೨] ವಿಶ್ವಾಮರುತೋ ಜಿಗೀಷಾ**
**॥ ೩ ॥**

೩. ಸಮರ್ಥಿತರಾದ ಮರುತ್ತುಗಳು ನಮಗೆ ಪ್ರಸನ್ನರಾಗಲಿ. ಸಮರ್ಥಿತನಾದ ಅನಂತಪತಿಯು ಸಂಪೂರ್ಣ ಸುಖಸೃಜನಾಗಿದ್ದಾನೆ. ನಮ್ಮ ಅಪೇಕ್ಷಣೀಯ ಆಹ್ಲಾದಗಳು ಉದಾತ್ತೀಕೃತವಾಗಲಿ ; ಎಲೈ ಮರುತ್ತುಗಳೇ, ಜಯೋನ್ಮುಖ ಸಂಕಲ್ಪದಿಂದ ನಮ್ಮ ಹಗಲುಗಳೆಲ್ಲವೂ ಎತ್ತರಿಸಲ್ಪಡಲಿ.

**ಅಸ್ಮಾದಹಂ ತವಿಷಾದೀಷಮಾಣ ಇಂದ್ರಾದ್‌ಭಿಯಾ ಮರುತೋ ರೇಜಮಾನಃ ।**
**ಯುಷ್ಮಭ್ಯಂ ಹವ್ಯಾ ನಿಶಿತಾನ್ಯಾಸನ್ತಾನ್ಯಾರೇ ಚಕೃಮಾವುಳತಾನಃ ॥ ೪ ॥**

೪. ಹೇ ಮರುತ್ತುಗಳೇ, ಇಂದ್ರನ ಭಯದಿಂದ ನಡುಗುತ್ತಾ ಈ ಬಲಿಷ್ಠನ ಒಡೆಯತನಕ್ಕೆ ಸಿಕ್ಕಿದ ನಾನು ನಿಮಗಾಗಿ ಸಾರವತ್ತಾಗಿ ಮಾಡಿ ಇಟ್ಟ ಆಹುತಿಗಳನ್ನು ಬಹಳ ದೂರ ಇರಿಸಿದ್ದೇನೆ. ನಿಮ್ಮ ಅನುಗ್ರಹವು ನಮ್ಮ ಮೇಲಿರಲಿ.

**ಯೇನ ಮಾನಾಸಶ್ಚಿತಯಂತ ಉಸ್ರಾ[೩] ವ್ಯುಷ್ಟಿಷು ಶವಸಾ[೪] ಶಶ್ವತೀನಾಂ ।**
**ಸನೋ ಮರುದ್ ಭಿರ್ ವೃಷಭ[೫] ಶ್ರವೋಧಾ ಉಗ್ರ ಉಗ್ರೇಭಿಃ ಸ್ಥವಿರಃ ಸಹೋದಾಃ ॥೫॥**

---

೨. "ವನಾನಿ" = ಕಾಡುಗಳು ಅಥವಾ ಭೋಗಗಳು ; ಅಥವಾ ಗುಣವಾಚಕವಾದರೆ "ಭೋಗ್ಯ" ಎಂದಾಗುತ್ತದೆ. ವೇದದಲ್ಲಿ ಶಬ್ದಕ್ಕೆ ದ್ವಂದ್ವಾರ್ಥವಿರುವುದು ಸಾಮಾನ್ಯ -"ಆಹ್ಲಾದಕರ ಬೆಳೆಗಳೂ" - ಯಾವುದರ? ನಮ್ಮ ಭೌತಿಕ ಅಸ್ತಿತ್ವದ - "ರೋಮಾಪೃಥಿವ್ಯಾ" - ಮುಂದಿನ ಋಕ್ಕಿಗೆ ಸಂಬಂಧಿಸಿದ್ದು - ಅನುವಾದಕ.

೩. "ಉಸ್ರಾಃ" ಸ್ತ್ರೀಲಿಂಗದಲ್ಲಿ ಈ ಪದವು ದನ ಮತ್ತು ಕಿರಣ ಎಂಬ ಎರಡೂ ಅರ್ಥಗಳನ್ನು ಹೇಳುವಂತೆ ವೇದದಲ್ಲಿ ಬಳಸಲಾದ "ಗೋ" ಎಂಬ ಪದಕ್ಕೆ ಪರ್ಯಾಯ "ಉಷಾಃ"= ಉಷಃಕಾಲವೂ ಗೋಮತೀ=ರಶ್ಮಿಯಿಂದ ಸುತ್ತುವರಿಯಲ್ಪಟ್ಟದ್ದು ಯಾ ಸೂರ್ಯನ ವ್ರಜಗಳಿಂದ ಹಿಂಬಾಲಿಸಲ್ಪಟ್ಟದ್ದು. ಈ ಪಾದದಲ್ಲಿ ಒಂದು ಅರ್ಥಪೂರ್ಣ ಆದಿಪ್ರಾಸವಿದೆ. ಉಸ್ರಾವಿ-ಉಷ್ಟಿಷು ; ಇದೊಂದು ವೈದಿಕ ಉಪಾಯ. ಸ್ಪಷ್ಟವಾಗಿ ಹೇಳುವುದು ಅಗತ್ಯವಲ್ಲವೆಂದೆಣ್ಣಿಸಿದ ಸಂದರ್ಭದಲ್ಲಿ ಯಾವುದಾದರೊಂದು ವಿಚಾರವನ್ನೋ ಸಂಬಂಧವನ್ನೋ ಈ ಪ್ರಕಾರ ವೈದಿಕರು ಸೂಚಿಸುತ್ತಾರೆ.

೪. "ಶವಸಾ" - ವೇದದಲ್ಲಿ ಬಲ, ಪ್ರಣೋದ, ಶಕ್ತಿ ಎಂಬವುಗಳಿಗೆ ಅನೇಕ ಪದಗಳಿವೆ. ಅವುಗಳಲ್ಲಿ ಪ್ರತಿಯೊಂದಕ್ಕೂ ವಿಶಿಷ್ಟವಾದ ಒಂದೊಂದು ಅರ್ಥಚ್ಛಾಯೆಯಿದೆ. "ಶವಸ್" ಸಾಮಾನ್ಯವಾಗಿ ಬೆಳಕನ್ನು, ಪ್ರಣೋದವನ್ನು ಏಕಕಾಲಕ್ಕೆ ವ್ಯಂಜಿಸುತ್ತದೆ.

೫. "ವೃಷಭ" = ಎತ್ತು, ಗಂಡು, ಪ್ರಭಾವಿಗಳ ಒಡೆಯ ; ಪದೇ ಪದೇ ಇಂದ್ರನನ್ನು ವೃಷಭ ಎಂದೋ, ವೃಷನ್ ಎಂದೋ ಕರೆಯಲಾಗುತ್ತದೆ. ಇಲ್ಲಿಯಂತೆ ಈ ಪದವೊಂದನ್ನೇ ಕೂಡಾ ಬಳಸಲಾಗುತ್ತದೆ. ಅದರಿಂದ ನಿಯಂತ್ರಿತವಾದ ಮತ್ತೊಂದು ಪದದಿಂದ ವ್ರಜಗಳ ಕಲ್ಪನೆಯನ್ನು ಮೂಡಿಸಲಾಗಿದೆ. ಉದಾ : ವೃಷಭಃ ಮತೀನಾಂ = ವಿಚಾರಗಳ ಪತಿ - ಇಲ್ಲಿ ಸ್ಪಷ್ಟವಾಗಿ ವೃಷಭ ಮತ್ತು ದನಗಳ ಹಿಂದಿನ ಅರ್ಥವು ಉದ್ದಿಷ್ಟವಾಗಿದೆ.

೫. ಓ ಗೋವ್ರಜಗಳ ವೃಷಭನೇ ನಿರಂತರ ಉಷಸ್ಸುಗಳ ಪ್ರಕಾಶಮಾನ ಶಕ್ತಿಯ ಮೂಲಕ ನಮ್ಮ ಮುಂಜಾವಗಳಲ್ಲಿ ಯಾರಿಂದ ನಮ್ಮ ಮನಸ್ಸು ಪ್ರಜ್ಞಾಮಯವೂ ಪ್ರಜ್ವಲವೂ ಆಗುವುದೋ ಆ ನೀನು ಮರುತ್ತುಗಳ ಮೂಲಕ ನಮ್ಮಲ್ಲಿ 'ಸ್ಫೂರ್ತಜ್ಞಾನವನ್ನು ಸಂಸ್ಥಾಪಿಸು - ಆ ಉಷಸ್ಸುಗಳ ಕಾರ್ಯಶಕ್ತಿಯೇ ನಿನ್ನ ಕಾರ್ಯಶಕ್ತಿ, ಅವುಗಳಿಂದಲೇ ನೀನು ಸ್ಥಿರಚಿತ್ತ, ಬಲದಾತ.

**ತ್ವಂ ಪಾಹೀಂದ್ರ ಸಹೀಯಸೋ ನೃನ್[೬]ಭವಾ ಮರುದ್ಭಿರವಯಾತ ಹೇಳಾಃ ।**
**ಸುಪ್ರಕೇತೇ ಭಿಃ ಸಾಸಹಿದಣಧಾನೋ ವಿದ್ಯಾಮೇಷಂ ವೃಜನಂ ಜೀರದಾನ್ನುಂ ॥ ೬ ॥**

೬. ಓ ಇಂದ್ರ, ನೀನು ತಮ್ಮ ಅತಿಶಯಿತ ಬಲದಲ್ಲಿರುವ ಅವರ ಶಕ್ತಿಗಳನ್ನು ರಕ್ಷಿಸು. ಮರುತ್ತುಗಳ ಮೇಲಿನ ನಿನ್ನ ಸಿಟ್ಟನ್ನು ದೂರೀಕರಿಸಿಕೋ. ನಿನ್ನ ಪ್ರಣೋದಭರದಲ್ಲಿ ಅವರಿಂದಲೇ ಅದು ಸಮರ್ಥಿತವಾಗಿತ್ತು. ಅವರಿಗೆ ಸರಿಯಾದ ಪ್ರತ್ಯಕ್ಷದರ್ಶನವಿದೆ. ಎಡಬಲಗಳ ಅಡೆತಡೆಗಳನ್ನು ಅತ್ತಿತ್ತ ನೂಕಿ ವೇಗದಿಂದ ಮುನ್ನುಗ್ಗುವ ಪ್ರಣೋದನವು ನಮಗೆ ದೊರಕಲಿ.



೬ "ನೃನ್" - ನೃಶಬ್ದಕ್ಕೆ ಮೂಲತಃ ಕ್ರಿಯಾಶೀಲ, ವೇಗವತ್ ಯಾ ಬಲಿಷ್ಠ ಎಂಬ ಅರ್ಥವಿದ್ದಂತೆ ತೋರುತ್ತದೆ. ನೃಮ್ಣ= ಬಲ ಮತ್ತು ನೃತಮೋ ನೃಣಾಂ = ಶಕ್ತಿಗಳಲ್ಲಿ ಅತಿಪ್ರಭಾವಶಾಲಿಯಾದದ್ದು ಆಮೇಲೆ ಗಂಡು ಯಾ ಮಾನವ ಎಂಬರ್ಥವನ್ನು ಪಡೆಯಿತು. ವೇದದಲ್ಲಿ ಇದನ್ನು ದೇವತೆಗಳಿಗೆ ಅತಿ ಹೆಚ್ಚು ಸಲ ಅನ್ವಯಿಸಲಾಗಿದೆ. ದೇವತೆಗಳಲ್ಲಿ ಗಂಡು ಶಕ್ತಿಗಳು ಯಾ ಪುರುಷರು. ಅವರು ಪ್ರಕೃತಿಯ ಕಾರ್ಯಶಕ್ತಿಗಳ ಅಧ್ಯಕ್ಷರು (ಅಧಿಷ್ಠಾನ ದೇವತೆಗಳು) ; ಸ್ತ್ರೀಶಕ್ತಿಗಳು ತದ್ವಿರುದ್ಧ . ಅವು "ಗ್ನಾಃ" ಅಥವಾ "ಗ್ನಾವಃ".

# ವ್ಯಾಖ್ಯಾನ

ಇಂದ್ರಾಗಸ್ತ್ಯ ಸಂವಾದಕ್ಕೆ ಅನುಚ್ಛೇದವಾಗಿ ಬಂದ ಈ ಸೂಕ್ತವು ಅಗಸ್ತ್ಯನು ಮರುತ್ತುಗಳ ಸಂತೋಷಣಕ್ಕಾಗಿ, ಹೇಳಿದ್ದಾಗಿದೆ. ಅವರ ಯಜ್ಞವನ್ನು ಆತನು ಅವರಿಗಿಂತ ಬಲಿಷ್ಠ ದೇವತೆಯ ಆಜ್ಞೆಯಂತೆ ತಡೆಯಲು ಹೋಗಿದ್ದನು. ಅಷ್ಟು ನೇರವಾಗಿ ಅಲ್ಲದೆ ವಿಚಾರದಲ್ಲಿದು ಮೊದಲ ಮಂಡಲದ ೧೬೫ನೆಯ ಸೂಕ್ತದಲ್ಲಿಯ ಇಂದ್ರ-ಮರುತ್ತುಗಳ ಸಂವಾದಕ್ಕೆ ಸಂಬಂಧಿಸಿದೆ. ಆ ಸಂವಾದದಲ್ಲಿ ಸ್ವರ್ಗಾಧಿಪತಿಯ ಮೇಲ್ಮೆಯನ್ನು ಘೋಷಿಸಲಾಗಿದೆ. ಮತ್ತು ಅವನಿಗಿಂತ ಕೆಳಗಿನ ಈ ಪ್ರಕಾಶಮಯ ಯಜ್ಞಾತಿಥಿವೃಂದದ ತದಧೀನಾಧಿಕಾರ ಸಂಪನ್ನತೆಯನ್ನು ಒಪ್ಪಿಕೊಳ್ಳಲಾಗಿದೆ. ಇವುಗಳು ಇಂದ್ರನಿಗೆ ಸೇರಿದ ಉನ್ನತ ಸತ್ಯಗಳತ್ತ ತಮ್ಮ ಪ್ರೇರಣೆಯನ್ನು ಮಾನವರಿಗೆ ತಿಳಿಸುತ್ತವೆ. "ನಿಮ್ಮ ಉಸಿರಿನ ಕಾರ್ಯಶಕ್ತಿಯನ್ನಿತ್ತು ಅವರ ವಿವಿಧ ಬೆಳಕಿನ ವಿಚಾರಗಳು ನನ್ನ ಸತ್ಯಗಳ ಜ್ಞಾನದತ್ತ ಹೊರಳುವಂತೆ ಮಾಡುವವರಾಗಿರಿ ; ಯಾರೇ ಆಗಲಿ ಕೆಲಸ ಮಾಡಲು ಕರ್ತಾರನಾಗಿ ಚುರುಕಾದರೆ ಮತ್ತು ನಮ್ಮನ್ನು ಚಿಂತಕನ ಬುದ್ಧಿಯು ಅವನಲ್ಲಿ ಸೃಜಿಸಿದ್ದೇ ಆದರೆ, ಎಲೈ ಮರುತ್ತುಗಳೇ, ಆ ಪ್ರಬುದ್ಧ ಋಷಿಯ ಸಮೀಪಕ್ಕೆ ಹೋಗಿರಿ"-ಸಂವಾದದ ಕೊನೆಯ ಮಾತು ಇಂತಿದೆ - ಇದು ಇಂದ್ರನು ತನಗಿಂತ ಕೆಳಗಿನ ದೇವತೆಗಳಿಗೆ ಕೊಟ್ಟ ಕೊನೆಯ ಆಜ್ಞೆ.

ಈ ಪದ್ಯಗಳು ಮರುತ್ತುಗಳ ಮಾನಸಶಾಸ್ತ್ರೀಯ ಕರ್ತವ್ಯವೇನೆಂಬುದನ್ನು ಸ್ಪಷ್ಟವಾಗಿ ನಿಗದಿಪಡಿಸುತ್ತವೆ. ಅವು ಯುಕ್ತವಾಗಿ ವಿಚಾರಾಧಿಷ್ಠಾತೃಗಳಲ್ಲ. ಅವು ಕೇವಲ ಕಾರ್ಯಶಕ್ತಿಯ ಅಧಿಷ್ಠಾನದೇವತೆಗಳು. ಆದರೂ ಅವುಗಳ ಕಾರ್ಯಶಕ್ತಿಯು ಫಲಿಸುವುದು ಮನಸ್ಸಿನಲ್ಲಿ. ಅಶಿಕ್ಷಿತ ಆರ್ಯ ಅರ್ಚಕನಿಗೆ ಮರುತ್ತುಗಳು ಗಾಳಿದೇವತೆಗಳು, ಬಿರುಗಾಳಿ ಮಳೆಗಳನ್ನು ಹೊತ್ತುತರುವ ದೇವತೆಗಳು. ಅದರಿಂದಲೇ ಹೆಚ್ಚಾಗಿ ಬಿರುಗಾಳಿಯ ಪ್ರತಿಮೆಗಳನ್ನೇ ಅವುಗಳಿಗೆ ಅನ್ವಯಿಸಲಾಗುತ್ತದೆ. ಅವುಗಳನ್ನು ರುದ್ರರೆಂದೂ ಕರೆದದ್ದುಂಟು. ರುದ್ರರು ಭಯಂಕರ, ಉದ್ಧತ, ದೇವತೆಗಳು. ಅವರ ರುದ್ರ ಎಂಬ ಹೆಸರು ಅಗ್ನಿಗೂ ಅನ್ವಯಿಸುತ್ತದೆ. - ಅಗ್ನಿಯು ಪ್ರಣೋದ ಪ್ರತಾಪಿ. ಇಂದ್ರನು ಮರುತ್ತುಗಳಲ್ಲಿ ಹಿರಿಯನೆಂದು ಕೆಲವೆಡೆಗಳಲ್ಲಿ ಹೇಳಿದರೂ ನೋಟಕ್ಕೆ ಅವು ವಾಯುರಾಜ್ಯಕ್ಕೆ ಸೇರಿದವುಗಳಾಗಿ ತೋರುತ್ತವೆ. ವಾಯುವು ಪ್ರಾಣದ ಅಧಿಷ್ಠಾನದೇವತೆ. ವೈದಿಕ ಪದ್ಧತಿಯಲ್ಲಿ ವಾಯುವು ಜೀವದ ಒಡೆಯ, ಉಸಿರಿಗೆ ಸ್ಫೂರ್ತಿಕೊಡುವ ವಾತ, ಅಥವಾ ಉತ್ಕ್ರಿಯಾ ಶಕ್ತಿ. ಪ್ರಾಣಗಳು ಮಾನವನಲ್ಲಿ ಅವನ ದೇಹದ ಜೈವಿಕ ಹಾಗೂ ನಾಡೀಯ ಕ್ರಿಯೆಗಳಿಂದ ಪ್ರತಿನಿಹಿತ. ಆದರಿದು ಕೇವಲ ಅವರ ಮುಖಸಾಮುದ್ರಿಕದ ಒಂದು ಭಾಗ. ಔದ್ಧತ್ಯಕ್ಕಿಂತ ಕಡಿಮೆಯಲ್ಲದ, ಪ್ರಾಣದೇವತೆಗಳ (ರುದ್ರರ) ಝಗಝಗಿಸುವಿಕೆಯು ಅವರ ಮುಖ್ಯ ಲಕ್ಷಣ. ಅವರ ಬಗೆಗಿನ ಎಲ್ಲವೂ ಪಳ ಪಳ ಹೊಳೆವಂಥದು. ಅವರೇ ಅವರ ಹೊಳೆಯುವ ಆಯುಧಗಳು, ಅವರ ಬಂಗಾರದ

ಆಭರಣಗಳು, ಅವರ ರಾಜದ್ರಥಗಳು. ಅವರು ಮಳೆಯನ್ನು ಕೆಳಗೆ ಕಳುಹಿಸುವುದಲ್ಲದೆ, ಸ್ವರ್ಗದಲ್ಲಿ ಬೇಕಾದಷ್ಟು ತುಂಬಿರುವ ಜಲವನ್ನು ವರ್ಷಿಸುವುದಲ್ಲದೆ, ಹೊಸ ಕಾರ್ಯಚಲನೆಗಳಿಗೂ ಹೊಸ ನಿರ್ಮಿತಿಗಳಿಗೂ ಹಾದಿ ಮಾಡಿಕೊಡಲೆಂದು ನಡುವೆ ಬರುವ ಸ್ಥಿರವಾಗಿ ಸ್ಥಾಪಿಸಲ್ಪಟ್ಟ ಅನೇಕ ವಸ್ತುಗಳನ್ನು ಮುರಿದೊಗೆಯುವರು ; ಮಿಕ್ಕ ಕಾರ್ಯಗಳಲ್ಲಿ ಅವರು ಉಳಿದ ದೇವತೆಗಳೊಡನೆ, ಇಂದ್ರ-ಮಿತ್ರ-ವರುಣರೊಡನೆ, ಭಾಗವಹಿಸುವರು. ಆದರೆ ಅವರಂತೆಯೇ ಅವರಾದರೂ (ಪ್ರಾಣ ಯಾ ಮರುತ್ ದೇವತೆಗಳಾದರೂ) ಪರಸತ್ಯದ ಸ್ನೇಹಿತರು, ಬೆಳಕಿನ ಸೃಷ್ಟಿಗಳು. ಗೋತಮ ರಾಹುಗಣನು ಮರುತ್ತುಗಳನ್ನು ಪ್ರಾರ್ಥಿಸುತ್ತಾನೆ. ಪರಸತ್ಯದ ಮಿಂಚುವ ಕಸುವುಳ್ಳವರೇ ನಿಮ್ಮ ಬಲದಿಂದ ಅದನ್ನು ಪ್ರತ್ಯಕ್ಷಗೊಳಿಸಿರಿ ; ನಿಮ್ಮ ಮಿಂಚಿನಿಂದ ಆ ರಾಕ್ಷಸನನ್ನು ಇರಿಯಿರಿ. ಅಡಗಿಸಿಟ್ಟುಕೊಳ್ಳುವ ಅಂಧತಮವನ್ನು ಅಡಗಿಸಿರಿ ; ಎಲ್ಲ ಭಕ್ಷಕರನ್ನೂ ಓಡಿಸಿರಿ. ನಾವು ಬಯಸುವ ಬೆಳಕನ್ನು ನಿರ್ಮಿಸಿರಿ" (I.86.9, 10) ಇನ್ನೊಂದು ಸೂಕ್ತದಲ್ಲಿ ಅಗಸ್ತ್ಯನು ಮರುತ್ತುಗಳನ್ನು ಕುರಿತು ಹೇಳುತ್ತಾನೆ : "ಅವರು ತಮ್ಮೊಡನೆ (ಆನಂದದ) ಮಾಧುರ್ಯವನ್ನು ಒಯ್ಯುತ್ತಾರೆ ; ಆ ಮಾಧುರ್ಯವು ಅವರ ನಿತ್ಯ ಸುಪುತ್ರನಂತಿದೆ ; ಅವರು ಅವರಾಟವನ್ನು ಆಡಿ ಮುಗಿಸುತ್ತಾರೆ - ಅವರ ಜ್ಞಾನದ ಕ್ರಿಯೆಗಳಲ್ಲಿ ಉಜ್ವಲರಾಗಿದ್ದಾರೆ. (I.166.2) ಆದುದರಿಂದ ಮರುತ್ತುಗಳು ಮಾನಸಿಕತೆಯ, ಮನಸ್ತತ್ವದ, ಮನೋಧರ್ಮದ, ಕಾರ್ಯಶಕ್ತಿಗಳು-ಜ್ಞಾನದಾಯಕ ಕ್ರಿಯಾಶಕ್ತಿಗಳು. ಅವರದ್ದು ಸುಪ್ರತಿಷ್ಠಿತ ಸತ್ಯವಲ್ಲ - ಅದು ಹರಹಿದ ಬೆಳಕು, ಆದರೆ ಅದು ಒಂದು ಚಲನೆ, ಶೋಧ, ವಿದ್ಯುದುನ್ಮೇಷ ; ಮತ್ತು ಪರಸತ್ಯ ದೊರಕಿದೊಡನೆಯೇ ಆ ಸತ್ಯದ ಪ್ರತ್ಯೇಕ ಪ್ರಬೋಧಗಳು ಬಹುಪಾರ್ಶ್ವೀಯ ಅಲೆ.

ಇಂದ್ರಾಗಸ್ತ್ಯರ ಸಂಭಾಷಣೆಯಲ್ಲಿ ಅಗಸ್ತ್ಯನು ಬಹಳ ಸಲ ಮರುತ್ತುಗಳನ್ನು ಕುರಿತು ಹೇಳಿರುವುದನ್ನು ನಾವು ನೋಡಿದೆವು. ಮರುತ್ತುಗಳು ಇಂದ್ರನ ಸೋದರರು. ಆದುದರಿಂದ ಆ ದೇವತೆ ಸ್ವಪೂರ್ಣತೆಗಾಗಿ ಹೋರಾಡುವ ಅಗಸ್ತ್ಯನತ್ತ ಹೊಡೆಯಲು ಗುರಿ ಹೂಡಬಾರದು. ಇಂದ್ರಾದಿ ಮರುದ್ದೇವತೆಗಳೆಲ್ಲರೂ ಪೂರ್ಣತ್ವ ಸಿದ್ಧಿಗೆ ಅಗತ್ಯವಾದ ಸಾಧನಗಳು. ಹೀಗಿರುವುದರಿಂದ ಇಂದ್ರನು (ಅದಕ್ಕಾಗಿ) ಮರುತ್ತುಗಳನ್ನು ಬಳಸಬೇಕು. ಕೊನೆಯ ಶರಣಾಗತಿಯ ಮತ್ತು ಪುನಃಸ್ನೇಹಸಂಧಾನದ ಸಂದರ್ಭದಲ್ಲಿ ಮರುತ್ತುಗಳೊಡನೆ ಪುನಃ ಮಾತುಕತೆಗಳನ್ನು ಪ್ರಾರಂಭಿಸಿ, ಪರಮಸತ್ಯವನ್ನು ಸೇರುವ ಧ್ಯೇಯವುಳ್ಳದ್ದುದರಿಂದ, ಆ ದಿವ್ಯಸತ್ಯದ ಶಿಸ್ತು ಮತ್ತು ಚಲನಗಳ ನೀತಿಯ ಪ್ರಕಾರ ಯಜ್ಞವು ನಡೆಯುವಂತೆ ಮಾಡಲು ಇಂದ್ರನು ಮರುತ್ತುಗಳ ಮಾತಿಗೆ ಒಪ್ಪಿ ನಡೆದುಕೊಳ್ಳಬೇಕೆಂದು ಅಗಸ್ತ್ಯನು ಪ್ರಾರ್ಥಿಸುತ್ತಾನೆ. ಇಲ್ಲಿ ಉಂಟಾದ ಸಂಕಟವೇನೆಂದರೆ, ಆ ಸಂಕಟ (ಅಗಸ್ತ್ಯನಂಥ) ದ್ರಷ್ಟಾರನ ಮನಸ್ಸಿನ ಮೇಲೆ ಅಷ್ಟು ದೊಡ್ಡ ವಿಷಾದವನ್ನು ಉಂಟುಮಾಡಿದ್ದೇಕೆಂದರೆ - ಅಲ್ಲೊಂದು ದೊಡ್ಡ ಸಮರವೇ ಉಂಟಾಯ್ತು. ಅದರಲ್ಲಿ ಬಲಿಷ್ಠವಾದ ಮೇಲ್ಮಟ್ಟದ ದೇವತಾಶಕ್ತಿಯು ಅಗಸ್ತ್ಯನಿಗೆ ಎದುರಾಗಿ ನಿಂತಿತು ; ಅಗಸ್ತ್ಯನನ್ನೂ ಅವನೊಡನಿದ್ದ ಮರುತ್ತುಗಳನ್ನೂ ಅವರ ಔದ್ಧತ್ಯಕ್ಕಾಗಿ ಅಡ್ಡತರುಬಿತು ; ಅವರ ಉದ್ಧತ ಮುನ್ನಡೆ ಅದಕ್ಕೆ ಸಹಿಸಲಾಗಲಿಲ್ಲ. ಅಲ್ಲಿ ಜಗತ್ತನ್ನಾಳುವ ದಿವ್ಯ ಬುದ್ಧಿಗೂ (ಇಂದ್ರನಿಗೂ) ಮಾನವ್ಯ ಅಗಸ್ತ್ಯನ ವೇಗವಾಹಿಯಾದ ಮನಸ್ಸಿಗೂ ನಡುವೆ ಸಿಟ್ಟು ತಾಕಲಾಟಗಳು ಉಂಟಾದವು. ಇಬ್ಬರ ಧ್ಯೇಯವೂ ಮಾನವ ಮನವು ತನ್ನ ಗುರಿಯನ್ನು ತಲುಪಬೇಕೆಂಬುದೇ ಆಗಿದೆ ; ಆದರೆ ಆ ಗುರಿಯ ಸಾಧನೆಯು ಕೆಳಮಟ್ಟದ ದಿವ್ಯಶಕ್ತಿಗಳ

(ದೇವತೆಗಳ) ಮಾರ್ಗದರ್ಶನದಂತೆ ನೆರವೇರಕೂಡದು. ತದ್ವಿರುದ್ಧವಾಗಿ, ಮೇಲ್ಮಟ್ಟದ, ಗುಪ್ತಬುದ್ಧಿಯು (ಇಂದ್ರನು) ಇನ್ನೂ ಬೇಡುವ ಸ್ಥಿತಿಯಲ್ಲಿರುವ ಪ್ರಕಟಬುದ್ಧಿಯು ಬಯಸುವುದನ್ನು ತನ್ನ ವಶದಲ್ಲಿಟ್ಟುಕೊಂಡಿರುವುದರಿಂದ ಅದು ಮಾಡುವ ಮಾರ್ಗದರ್ಶನದ ಪ್ರಕಾರವೇ ಆ ಧ್ಯೇಯ ಸಾಧನೆಯು ನಡೆಯಬೇಕು-ಅದು ದೃಢವಾಗಿ ಸಂಕಲ್ಪಿಸಿ, ಆಗಲೇ ವ್ಯವಸ್ಥೆ ಮಾಡಿಟ್ಟಂತೆಯೇ ಸಾಗಬೇಕು. ಆದುದರಿಂದ ಮಾನವನ ಮನವು ಒಂದು ಸಂಗ್ರಾಮಭೂಮಿಯಾಯಿತು - ಅದು ಆ ದೇವಬಲಪ್ರದರ್ಶನವನ್ನು ಕಂಡು ಭಯಭಕ್ತಿಗಳಿಂದ ಮತ್ತು ಗಾಬರಿಯ ಅನುಭವದಿಂದ ತತ್ತರಿಸುವಂತಾಯಿತು.

ಇಂದ್ರನಿಗೆ ಶರಣಾಗತನಾದದ್ದಾಯಿತು. ಈಗ ಅಗಸ್ತ್ಯನು ಸಂಧಾನದ ಶರ್ತಗಳನ್ನು ಒಪ್ಪಿಕೊಳ್ಳಬೇಕೆಂದು ಮರುತ್ತುಗಳನ್ನು ಬೇಡಿಕೊಳ್ಳುತ್ತಾನೆ. ಮರುತ್ತುಗಳೊಪ್ಪಿದರೆ ಅದರಿಂದ ಅಗಸ್ತ್ಯನ ಅಂತರಾತ್ಮನ ಸಾಮಶ್ರುತ್ಯವು ಪುನಃ ಬಂದು ನೆಲೆಸೀತು. ಅವನು ಹೆಚ್ಚಿನ ದೇವನಿಗೆ ತನ್ನನ್ನೊಪ್ಪಿಸಿಕೊಂಡದ್ದನ್ನು ಮರುತ್ತುಗಳಿಗೆ ಹೇಳಿ ತೇಜಃಪುಂಜಸೇನಾರೂಪದ ಆ ದೇವತೆಗಳೂ ಹಾಗೆ ಮಾಡಬೇಕೆಂದು ಬೇಡುತ್ತಾನೆ. ಉನ್ನತತರ ಜ್ಞಾನದತ್ತ ಸಾಗುತ್ತಿರುವ ವಿಚಾರಪ್ರಣೋದಗಳು ವೇಗವನ್ನು ತಾಳದೆ, ಮಾನವನ ಮನಃಸ್ಥಿತಿಯು, ಅವನು ಬಯಸುವಂತೆ, ತನ್ನ ಸ್ಪಷ್ಟತೆಯಲ್ಲಿ, ನ್ಯಾಯ್ಯತೆಯಲ್ಲಿ, ಸತ್ಯದರ್ಶನ ಶಕ್ತಿಯಲ್ಲಿ, ಪೂರ್ಣತೆಯನ್ನು ಪಡೆಯಲಾರದು. ಆದರೆ ಆ ಪಥಚಲನವು ತಪ್ಪಾಗಿ ನಿರ್ದೇಶಿಸಲ್ಪಟ್ಟದ್ದರಿಂದ, ಸರಿಯಾಗಿ ಪ್ರಬುದ್ಧವಾಗದೆ ಇದ್ದುದರಿಂದ, ಇಂದ್ರನಿಂದ ಬಲವಾಗಿ ಪ್ರತಿರೋಧಿಸಲ್ಪಟ್ಟಿತು ಮತ್ತು ಸ್ವಲ್ಪಕಾಲ ಅಗಸ್ತ್ಯನ ಮಾನಸ ಪ್ರಪಂಚದಿಂದ ಅದು ಮರೆಯಾಗಿ ದೂರ ಹೋಯಿತು. ಹೀಗೆ ಹಿಂದಕ್ಕಟ್ಟಲ್ಪಟ್ಟು, ಮರುತ್ತುಗಳು ಅವನನ್ನು ಉಳಿದ ಯಾಜ್ಞಿಕರಿಗಾಗಿ ಬಿಟ್ಟು ಹೋದರು ; ಅವರ ಉಜ್ವಲರಥಗಳು ಬೇರೆ ಕಡೆಗಳಲ್ಲಿ ಬೆಳಗಿದವು ; ಬೇರೆ ಕ್ಷೇತ್ರಗಳಲ್ಲಿ ಅವರ ವಾಯುಪಾದದ ಕುದುರೆಗಳ ಗೊರಸುಗಳ ಗುಡುಗು ಗುಡುಗಿತು. ದ್ರಷ್ಟಾರನು ಕೋಪಿಸಿಕೊಳ್ಳ-ಬಾರದೆಂದು ಅವರನ್ನು ಪ್ರಾರ್ಥಿಸುತ್ತಾನೆ ; ಪುನಃ ಜ್ಞಾನಸಾಧನೆಯಲ್ಲೂ ಅದರ ಚಟುವಟಿಕೆಗಳಲ್ಲೂ ಆಸಕ್ತಿ ವಹಿಸಬೇಕೆಂದು ಬೇಡುತ್ತಾನೆ ; ಇನ್ನೆಂದೂ ತನ್ನನ್ನು ಬದಿಗೆ ಸರಿಸಬಾರದು, ಅವರು ತಮ್ಮ ಕುದುರೆಗಳ ನೊಗಗಳನ್ನು ಬಿಚ್ಚಲಿ, ಕೆಳಗಿಳಿಯಲಿ, ಯಜ್ಞವೇದಿಕೆಯಲ್ಲಿಯ ತಮ್ಮ ಆಸನಗಳಲ್ಲಿ ವಿರಾಜಮಾನರಾಗಲಿ, ತಮ್ಮ ಹವಿರ್ಭಾಗಗಳನ್ನು ಸ್ವೀಕರಿಸಲಿ-ಎಂದು ಅರಿಕೆ ಮಾಡಿಕೊಳ್ಳುತ್ತಾನೆ.

ಏಕೆಂದರೆ ಈ ಬಹುಪ್ರಶಸ್ತ ಕಾರ್ಯಶಕ್ತಿಗಳನ್ನು ಅವನು ತನ್ನಲ್ಲಿ ದೃಢೀಕರಿಸಿಕೊಳ್ಳುವನು ಮತ್ತು ಅವರಿಗವನು ಅರ್ಪಿಸುವುದು ಅವರ (ಗೌರವದ) ಸಮರ್ಥನೆಯ, ಅಭಿಜ್ಞಾಪನದ, ಸೂಕ್ತವನ್ನು - ಆ ಸೂಕ್ತವೇ ವೈದಿಕ ಋಷಿಗಳ "ಸ್ತೋಮ". ಯೋಗಿಗಳ ಪದ್ಧತಿಯಲ್ಲಿ ಶಬ್ದವು ಶಕ್ತಿ. ಅದು ಸೃಜಿಸಬಲ್ಲುದು - ಇದು ಅಂಶಿಕವಾಗಿ ಭಾರತದ ಯೋಗಪ್ರಸ್ಥಾನಗಳಲ್ಲಿ ಉಳಿದುಕೊಂಡು ಬಂದಿದೆ. ಶಬ್ದವಿಲ್ಲಿ ಮಂತ್ರ, ದೈವೀಶಕ್ತಿಸಂಪನ್ನವಾಕ್ ಎಂಬುದು ತಾತ್ಪರ್ಯ. ಏಕೆಂದರೆ, ಎಲ್ಲ ಸೃಷ್ಟಿಯೂ ಅಭಿವ್ಯಕ್ತಿ, ಅವ್ಯಕ್ತವು ವ್ಯಕ್ತವಾಗುವುದು ; ಪ್ರತಿಯೊಂದೂ ಆಗಲೇ ಅನಂತದಲ್ಲಿ ಅಡಗಿರುತ್ತದೆ - "ಗುಹಾ ಹಿತಂ" ಮತ್ತು ಹಾಗೆ ಅಡಗಿದ್ದುದನ್ನು ಸಕ್ರಿಯ ಪ್ರಜ್ಞೆಗೆ ಇಲ್ಲಿ ಗೊತ್ತಾಗುವ ತೋರಿಕೆಯ ರೂಪಕ್ಕೆ ತಂದರೆ ಸರಿ. ಕೆಲ ವೈದಿಕ ವಿಚಾರ ಪ್ರಸ್ಥಾನಗಳು ಶಬ್ದಧ್ವನಿ ದೇವತೆಯು ಮೊದಲ ನಾಭಸ ನಾದ ತರಂಗರೂಪದಲ್ಲಿ ಜಗತ್ತುಗಳನ್ನು ನಿರ್ಮಿಸಿದಳೆಂದೂ ಅನಂತರ ಅವುಗಳು (ಪಂಚೇಂದ್ರಿಯಗ್ರಾಹ್ಯ) ಆಕಾರಗಳನ್ನು ತಾಳಿದವೆಂದೂ ಹೇಳಿವೆ. ವೇದದಲ್ಲಿಯೇ ಪವಿತ್ರ ಮಂತ್ರಗಳ ಕಾವ್ಯಮಾಪಕಗಳನ್ನು ಚಿತ್ತರಿಸುವ

ಉಪಭೇದಗಳಲ್ಲಿ ವಸ್ತುಜಾತದ ವೈಶ್ವತ್ರಿಕ ಪಥಚಲನದ ಎರಕಗಳನ್ನೊಳಗೊಂಡ ಲಯಗತಿಗಳ ಸಂಕೇತಗಳೆಂದು - "ಅನುಷ್ಟುಭ್, ತ್ರಿಷ್ಟುಭ್, ಜಗತೀ, ಗಾಯತ್ರೀ" ಎಂಬ ಛಂದೋವಿಧಿಗಳನ್ನು ಬಳಸಲಾಗಿದೆ.

ಆದುದರಿಂದ, ಸರ್ಜನವೆಂದರೆ ಸೃಷ್ಟಿಮಾಡುವ ಅಭಿವ್ಯಂಜನೆ ; ವ್ಯಕ್ತೀಕರಣವು ನವನಿರ್ಮಾಣ. ಈ ಕ್ರಿಯೆಯ ಮೊದಲು ವಸ್ತುವು ಅವ್ಯಕ್ತವಾಗಿ ಇತ್ತೆಂಬುದು ತಾತ್ಪರ್ಯ. ಮಂತ್ರದಿಂದ, ಮಾನವರು ದೇವತೆಗಳನ್ನು ಸೃಜಿಸಿದರೆಂದೂ ಹೇಳಲಾಗಿದೆ. ಅಂದರೆ ಮಂತ್ರರೂಪದ ಶಬ್ದಶಕ್ತಿಯಿಂದ ಅವರು ಅವ್ಯಕ್ತರಾಗಿದ್ದ ದೇವತೆಗಳನ್ನು ವ್ಯಕ್ತಗೊಳಿಸಿದರೆಂದು ತಾತ್ಪರ್ಯ. ನಮ್ಮ ಪ್ರಜ್ಞೆಯಲ್ಲಿ ಮಂತ್ರದಿಂದ ನಿರ್ಮಿಸಲಾದುದನ್ನು ಅಲ್ಲೇ ನೆಲೆನಿಲ್ಲುವಂತೆ ಮಾಡಿ ನಮ್ಮದೇ ಅಂಗವನ್ನಾಗಿ ರೂಪಿಸಿಕೊಂಡು, ನಮ್ಮ ಒಳ-ಹೊರ ಬಾಳುಗಳೆರಡರಲ್ಲೂ ಫಲಪ್ರದವಾಗುವಂತೆ ಎಸಗಬಹುದು. ಅಭಿವ್ಯಂಜನದಿಂದ ನಾವು ರೂಪುಗೊಳ್ಳುತ್ತೇವೆ, ರೂಪಿಸುತ್ತೇವೆ, ಸಮರ್ಥನೆಯ ಅಭಿಜ್ಞಾನದಿಂದ ನಾವು ಸ್ಥಿರೀಕರಿಸುತ್ತೇವೆ. ಅಭಿವ್ಯಂಜನಶಕ್ತಿಯನ್ನು "ಗೀಃ ಅಥವಾ ವಚಸ್" ಎಂದು ಕರೆಯಲಾಗಿದೆ. ಸಮರ್ಥನಾಭಿಜ್ಞಾನ ಶಕ್ತಿಗೆ "ಸ್ತೋಮ" ವೆಂದು ಹೆಸರು. ಈ ಎರಡೂ ಅರ್ಥಗಳಲ್ಲಿ ಅದನ್ನು "ಮನ್ಮ ಅಥವಾ ಮಂತ್ರ" ಎಂದು ಕರೆಯಲಾಗಿದೆ. ಮಂತ್ರ= ಮನದಲ್ಲಿರುವ ವಿಚಾರದ ಅಭಿವ್ಯಂಜನ ; ಬ್ರಹ್ಮನ್[೧]=ಹೃದಯದ ಅಥವಾ ಜೀವಾತ್ಮದ ಅಭಿವ್ಯಂಜನ. ಬ್ರಹ್ಮಶಬ್ದದ ಪ್ರಾಚೀನತರ ಅರ್ಥ ಇದೇ ಆಗಿರಬೇಕು - ಆಮೇಲೆ ಅದಕ್ಕೆ ಸರ್ವೋಚ್ಚಾತ್ಮ (ಪರಮಾತ್ಮ) ಅಥವಾ ವೈಶ್ವತ್ರಿಕಸತ್ತೆ, ವೈಶ್ವಪದಾರ್ಥ ಯಾ ತತ್ವ (ತಸ್ಯಭಾವಸ್ತತ್ವಂ) ಎಂಬ ಅರ್ಥ ಬಂದಿರಬೇಕು.

ಎರಡನೆಯ ಪದ್ಯದಲ್ಲಿ ಮಂತ್ರವು ರೂಪಿತವಾಗುವ ಪ್ರಕ್ರಿಯೆಯನ್ನು ಹೇಳಲಾಗಿದೆ. ಜೊತೆಗೆ ಅದರ ಪರಿಣಾಮಕಾರಿತ್ವಕ್ಕಿರುವ ಉಪಾಧಿಯನ್ನೂ (ಶರ್ತವನ್ನೂ) ಉಲ್ಲೇಖಿಸಲಾಗಿದೆ. ಅಗಸ್ತ್ಯನು ಏಕಕಾಲದಲ್ಲಿ ಸಮರ್ಥನಾಭಿಜ್ಞಾನ ಮತ್ತು ಶರಣಾಗತಿಗಳೆರಡನ್ನೂ ಒಳಗೊಂಡ ಸ್ತೋಮವನ್ನು ಮರುತ್ತುಗಳಿಗೆ ಅರ್ಪಿಸುತ್ತಾನೆ. ಅದಾದರೋ ಹೃದ್ರೂಪಿತ, ಮನದಲ್ಲಿ ಲಬ್ಧ ಸ್ವಸ್ಥಲ ; ಮನಸ್ಸು ಮನನಮಾಡಿ ದೃಢಪಡಿಸಿದಾಗ ಮಂತ್ರಕ್ಕೆ ನ್ಯಾಯವಾದ ಸ್ಥಾನವು ಸಿಕ್ಕುತ್ತದೆ. ಮನದಲ್ಲಿಯ ವಿಚಾರವನ್ನು ಅಭಿವ್ಯಂಜಿಸಿದರೂ ತಿರುಳಿನಲ್ಲಿ ಅದು ಬುದ್ಧಿಜಾತವಲ್ಲ, ಪವಿತ್ರವೂ ಪರಿಣಾಮಕವೂ ಆದ ಶಬ್ದವೆನ್ನಿಸಬೇಕಾದರೆ ಮಂತ್ರವು ಅತಿಮಾನಸ ಪ್ರಜ್ಞಾಸ್ತರದಿಂದ ಸ್ಫೂರ್ತವಾಗಿ ಬಂದಿರಬೇಕು. ಆ ಪ್ರಜ್ಞೆಗೆ ವೇದದಲ್ಲಿ "ಋತಂ" ಎಂದು ಹೆಸರು. ಋತಂ=ಸತ್ಯಂ[೨] (ಏಕಮೇವಾದ್ವಿತೀಯ ಸತ್ಯಂ). ಮೇಲು ಮೇಲಿನ ತೋರಿಕೆಯ ಮೇಲ್ಪೊರೆಯಂತಿರುವ

---

೧. "ಬ್ರಹ್" = ಬ್ರಹ್ಮನ್ (ಉದಾ : ಬೃಹಸ್ಪತಿ, ಬ್ರಹ್ಮಣಸ್ಪತಿ) ; ಇನ್ನೂ ಹೆಚ್ಚು ಹಳೆಯರೂಪಗಳೂ ಇದ್ದಿರುವಂತೆ ತೋರುತ್ತದೆ. "ಬೃಹನ್" ಮತ್ತು "ಬ್ರಹನ್". ಬ್ರಹ್ಮಸ್ (ಷಷ್ಠೀವಿಭಕ್ತಿ) ಪಡೆದ "ಬ್ರಹನ್" ಎಂಬುದರಿಂದಲೇ ಬಹುಶಃ ಗ್ರೀಕ್ "ಫ್ರೆನ್", "ಫ್ರೆನೋಸ್"= ಮನಸ್ಸು ಎಂಬ ಪದಗಳು ಹುಟ್ಟಿರಬಹುದಾಗಿದೆ.

"Universal of Being ಎಂಬುದು "ವಿಶ್ವಸ್ಮಾದ್ ಇಂದ್ರ ಉತ್ತರಃ" ಎಂಬುದರಿಂದ ಸೂಚಿತವಾಗುವ Absolute ಸರ್ವತಂತ್ರ ಸ್ವತಂತ್ರವಾದ ಏಕಾಮೇವಾದ್ವಿತೀಯ ಸತ್ಯ "Inifinities" ನಿಂದ ಸೂಚಿತವಾಗುವ ಅನಂತತೆಗಳಲ್ಲಿ - ಅನುವಾದಕ.

೨. ಸತ್ಯದ ಕ್ರಿಯಾಶಕ್ತಿಯು ಋತವೆಂದೂ ಋತದ ಜ್ಞಾನಶಕ್ತಿಯು ಸತ್ಯವೆಂದೂ ತಿಳಿದುಕೊಳ್ಳುವಂಥ ಅಭಿಪ್ರಾಯವನ್ನು ಕೆಲ ಸಂದರ್ಭಗಳಲ್ಲಿ ಈ ಗ್ರಂಥವು ಹೇಳಿದೆ-ಅನುವಾದಕ.

ಪ್ರಜ್ಞಾಸ್ತರವು ಅದನ್ನು ಸ್ವೀಕರಿಸಿದಾಗ ಅದು "ಮನೀಷಾ" ಆಗುತ್ತದೆ. ಆ ಸ್ವೀಕಾರವು ಹೃದಯದ ಮೂಲಕವಾದರೂ ಆಗಿರಬಹುದು ಯಾ ಜ್ಯೋತಿರ್ಮಯ ಬುದ್ಧಿಯ ಮೂಲಕವಾದರೂ ಆಗಿರಬಹುದು. ವೇದದಲ್ಲಿ ಹೃದಯವೆಂಬುದು "ನಿರ್ವೇದಾದಿ ಭಾವನೆಗಳ ಪೀಠ" ಎಂಬಷ್ಟೇ ಅರ್ಥಕ್ಕೆ ಸೀಮಿತವಾಗಿಲ್ಲ. ವೈದಿಕ ಮನಃಶಾಸ್ತ್ರದ ಪ್ರಕಾರ ಯಾವು ಯಾವುದು ಸ್ವಯಮುದ್‌ಬುದ್ಧ ಮನೋಧರ್ಮವೆನ್ನಿಸುತ್ತವೆಯೋ ಅವಮಾನಸಕ್ಕೆ ನಿಕಟವಾದ ಆಯೆಲ್ಲವುಗಳಿಗೂ ಹೃದಯವೇ ಆಕಾರ. ಆಯೆಲ್ಲವುಗಳೆಂದರೆ : ಸಂವೇದನೆಗಳು, ಭಾವನೆಗಳು, ಮೂಲ ಪ್ರವೃತ್ತಿಗಳು, ಪ್ರೇರಣೆಗಳು, ಪ್ರತಿಭಾಜಾತಗಳು, ಸ್ಫೂರ್ತಿಸುತಗಳು. ಈ ಯಾವವುಗಳಿಗೂ ನಿಮಿತ್ತ ಕಾರಣಗಳ ಮೂಲಕ ಬುದ್ಧಿಯನ್ನು ತಲುಪುವವರೆಗೆ ನಿರ್ದಿಷ್ಟರೂಪಬಾರದು. ಬುದ್ಧಿಸ್ತರದಲ್ಲಿ ಹೊಕ್ಕ ಮೇಲೆ ಅವುಗಳಿಗೆ ಅಭಿಜ್ಞೆಯ ರೂಪಗಳು ಬರುತ್ತವೆ ಎಂಬುದು ತಾತ್ಪರ್ಯ. ವೇದ-ವೇದಾಂತೋಕ್ತವಾದ ಹೃದಯವೆಂದರೆ ಇದು; ಇದೇ ಹೃದ್, ಬ್ರಹ್ಮನ್. ವರ್ತಮಾನ ಯುಗದಲ್ಲಿ ಪುರುಷನು ಹೃದಯಸ್ಥನೆಂದು ಭಾವಿಸಲಾಗಿದೆ. ಈ ಹೃದಯವು ಸಾಮಾನ್ಯ ಮನುಕುಲದ ಅತಿವಿಸ್ತಾರವಾದ ಅವಮಾನಸ ಪ್ರಜ್ಞೆಗೆ ಸಮೀಪವರ್ತಿ-ಯಾಗಿದೆ. ಈ ಬುದ್ಧಿಯು ಅಥವಾ ಮನಸ್ಸು[೧] ಅನಂತದೊಡನೆ ಪ್ರಕಾಶಮಾನವಾದ ನಿಕಟವಾದ ಮತ್ತು ನೇರವಾದ ಸಂಬಂಧವನ್ನು ಹೊಂದಿರುವುದಿಲ್ಲ. ಅನಂತವು ಇದಕ್ಕಿಂತ ಎತ್ತರವಾದ ಪ್ರಜ್ಞಾಸ್ತರ. ಅದರ ಸಂಪರ್ಕವು ಪ್ರಕಾಶಮಾನ, ಅತ್ಯಾಪ್ತ ಮತ್ತು ನೇರ. ವಿಶ್ವಾತ್ಮನ ಸ್ಫೂರ್ತಿಗಳು ಬಹು ಸುಲಭವಾಗಿ ಹೊಕ್ಕು ಬಹುವೇಗವಾಗಿ ವೈಯಕ್ತಿಕ ಆತ್ಮವನ್ನು ವಶಪಡಿಸಿಕೊಳ್ಳಬಲ್ಲುದು. ಆದುದರಿಂದ ಹೃದಯದ ಬಲದಿಂದ ಮಂತ್ರವೆಂಬುದು ರೂಹುದಾಳುತ್ತದೆ. ಆದರೆ ಅದನ್ನು ಸ್ವೀಕರಿಸಿ ಬುದ್ಧಿಯ ವಿಚಾರದಲ್ಲಿ ಹಿಡಿದಿಟ್ಟುಕೊಳ್ಳಬೇಕು. ಹಾಗೇ ಹೃದಯದ ಪ್ರತ್ಯಕ್ಷದಲ್ಲೂ ನೆಲೆ ನಿಲ್ಲಿಸಿಕೊಳ್ಳಬೇಕು. ಏಕೆಂದರೆ, ಬುದ್ಧಿಯು ಒಪ್ಪಿ ವಿಚಾರ ಮಾಡಿ ನಿರ್ಧರಿಸಿದ ಹೊರತು ವಿಚಾರದ ಆ ಸತ್ಯವು-ಅರ್ಥಾತ್-ಮಂತ್ರವು ವ್ಯಕ್ತಪಡಿಸಿದ ಸತ್ಯವು ದೃಢವಾಗಿ ವಶ್ಯವಾಗದು ಅಥವಾ ಸಾಮಾನ್ಯವಾಗಿ ಪರಿಣಾಮಕರವಾಗದು. ಅದು ಹೃದಯರೂಪಿತ ಮತ್ತು ಮನಸಾ ದೃಢೀಕೃತ. ಆದರೆ ಮತ್ತೊಂದು ಅನುಮೋದನೆಯೂ ಅಗತ್ಯ. ವ್ಯಕ್ತಿಯ ಮನ ಒಪ್ಪಿತು - ವಿಶ್ವದ ಪರಿಣಾಮಕ ಶಕ್ತಿಗಳೂ ಒಪ್ಪಬೇಕು. ಮನವು ಹಿಡಿದು ಇಟ್ಟುಕೊಂಡಿರುವ ಸೂಕ್ತ ಪದಗಳು ಹೊಸ ಮನಃಪ್ರಣಾಳಿಗೆ ಆಧಾರ. ಆ ಪ್ರಣಾಳಿಯಿಂದ ಭವಿಷ್ಯತ್‌ಕಾಲದ ವಿಚಾರ ಕಾರ್ಯಶಕ್ತಿಗಳು ಹೊರಹೊರಡಬೇಕು. ಮರುತ್ತುಗಳು ಹತ್ತಿರಿಸಿ, ಅವುಗಳನ್ನಾಧರಿಸಿ ತಮ್ಮ ನಿಲುಮೆಯನ್ನು ರೂಪಿಸಿಕೊಳ್ಳಬೇಕು. ಈ ವಿಶ್ವಜನೀನ ಶಕ್ತಿಗಳ ಮನಸ್ಸು ಅನುಮೋದಿಸಿ ವ್ಯಕ್ತಿಯ ಮಾನಸ ನಿರ್ಮಿತಿಗಳೊಡನೆ ಒಂದಾಗಬೇಕು. ಹೀಗಾದರೆ ಮಾತ್ರ ನಮ್ಮ ಒಳ ಅಥವಾ ಹೊರ ಕಾರ್ಯವು ಅತ್ಯುನ್ನತ ಪರಿಣಾಮಕತ್ವವನ್ನು ಹೊಂದುವುದು.

ತಮ್ಮ ಒಪ್ಪಿಗೆಯನ್ನು ಕೊಡಲು ನಿರಾಕರಿಸಲು ಯಾ ಭಿನ್ನಾಭಿಪ್ರಾಯವನ್ನು ಮುಂಬರಿಸಲು ಮರುತ್ತುಗಳಿಗೆ ಯಾವ ಕಾರಣವೂ ಇಲ್ಲ. ಅವು ದಿವ್ಯ ಶಕ್ತಿಗಳು, ತಮ್ಮ

---

೧. "ಸಂಕಲ್ಪ -ವಿಕಲ್ಪಾತ್ಮಕಂ ಮನಃ" ಎಂಬ ಲಕ್ಷಣ ಇಲ್ಲಿ ಅನ್ವಯಿಸದು. ಈ ಗ್ರಂಥವು ಮನಸ್ಸಿನ ಉಕ್ತ ಲಕ್ಷಣವನ್ನು ಅವಲಂಬಿಸಿಲ್ಲ - ಅನುವಾದಕ.

ಮೇಲಿನ ಶಕ್ತಿಗಳಿಗೆ ವಿಧೇಯವಾಗಿ ವರ್ತಿಸುವುವು ; ವೈಯಕ್ತಿಕ ಪ್ರೇರಣೆಗಿಂತ ಮೇಲ್ತರಗತಿಯ ವಿಧಿ (ನಿಯಮ) ಅನುಲ್ಲಂಘನೀಯವೆಂಬುದು ಅವುಗಳಿಗೆ ಗೊತ್ತಿದೆ ಎಂದು ತಾತ್ಪರ್ಯ. ಹಾಗೆ ಉಲ್ಲಂಘಿಸದಿರುವುದು ಅವುಗಳ ಕರ್ತವ್ಯ. ಮುಖ್ಯ ಸ್ವಭಾವ. ಆದ್ದರಿಂದ ಅವು ಮಾನವನ ಮನದಿಂಗಿತಗಳು ಬಯಸುವಂಥ-ಮರ್ತ್ಯತೆಯು . ಅಮರ್ತ್ಯತೆಗೆ ಶರಣಾಗತವಾಗುವಿಕೆ ಮತ್ತು ಪರಸತ್ಯಕ್ಕೆ ಅವು ಹೆಚ್ಚು ವಿಧೇಯವಾಗಿರುವಿಕೆ - ಇವುಗಳಿಗೆ ನೆರವೀಯುವುದು ಮರುದಾದಿ ದೇವತೆಗಳ ಇರವಿನ ಪ್ರಯೋಜನ ಎಂಬುದು ಅಭಿಪ್ರಾಯ ಸಾರ.

ಸಮರ್ಥಿತನೂ ಸ್ವೀಕೃತನೂ ಆದ ಇಂದ್ರನೀಗ ಮರ್ತ್ಯರಿಗೆ ಕಾಟ ಕೊಡುವುದಿಲ್ಲ. ಅವನ ದಿವ್ಯ ಸ್ಪರ್ಶವು ಈಗ ಸಂಪೂರ್ಣ ಸರ್ಜನಾತ್ಮಕ ಮತ್ತು ಶಾಂತಿ ಸುಖದಾಯಕ. ಹಾಗೇ ಸಮರ್ಥಿತ-ಸ್ವೀಕೃತ ಮರುತ್ತುಗಳೂ ತಮ್ಮ ಹಿಂಸಾತ್ಮಕ ಚಟುವಟಿಕೆಗಳಿಂದ ದೂರ ಸರಿಯಬೇಕು. ತಮ್ಮ ಮೃದು ಸ್ವಭಾವವನ್ನು ತಾಳಿ ಅವರು ಕಾರ್ಯತಃ ಅನುಕೂಲರಾಗಬೇಕು - ಜೀವನನ್ನು ಕಷ್ಟ-ಕಾರ್ಪಣ್ಯಗಳಿಗೆ ಒಳಪಡಿಸಬಾರದು. ಅವರೂ (ಇಂದ್ರನಂತೆಯೇ) ಸಂಪೂರ್ಣವಾಗಿ ಪ್ರಭಾವಿಗಳೂ ಉಪಕಾರಿಗಳೂ ಆಗಬೇಕು.

ಈ ಪೂರ್ಣ ಸಮಶ್ರುತಿಯನ್ನು ಸ್ಥಿರಪಡಿಸಿದ ಅನಂತರ ಅಗಸ್ತ್ಯನ ಯೋಗವು ಅದಕ್ಕಾಗಿಯೇ ನಿರ್ದಿಷ್ಟಪಡಿಸಿ ಇರುವ ನೇರ ಮಾರ್ಗವನ್ನು ಹಿಡಿದು ಜಯದ ಮೇಲೆ ಜಯ ಪಡೆಯುತ್ತಾ ಮುಂದುವರಿಯುತ್ತದೆ. ಯಾವಾಗಲೂ ಮೇಲು ಮೇಲಿನ ಪ್ರಜ್ಞಾಸ್ತರಕ್ಕೇರುತ್ತಾ ಹೋಗುವುದೇ (ಜೀವನದ) ಗುರಿ. ವಿಭಕ್ತವಾದ ಅಹಂಕಾರಿಕ ಸಂವೇದನೆ, ಭಾವನೆ, ವಿಚಾರ ಮತ್ತು ಕಾರ್ಯಗಳು ಸಾಮಾನ್ಯ (ಮರ್ತ್ಯ) ಜೀವನದ ಲಕ್ಷಣಗಳು. ಇದರ ಮೇಲಿನ ಪ್ರಜ್ಞಾಸ್ತರದಲ್ಲಿ ಈ ಯಾವ ಅನುಭವವೂ ಬಾರದು. ಹಾಗೆ ಮೇಲಕ್ಕೇರುವ ಯೋಗವನ್ನು ಯಾವಾಗಲೂ ಒಂದೇ ಸಮವಾದ ಪ್ರಭಾವಿ ಸಂಕಲ್ಪದಿಂದ ಸಾಧಿಸುತ್ತಾ ಅಡೆತಡೆಗಳೆಲ್ಲವನ್ನು ನಿಗ್ರಹಿಸುತ್ತಾ ಜಯದತ್ತ ಸಾಗಬೇಕು. ಆದರದು ಒಂದು ಸಮಗ್ರ (ಪೂರ್ಣ) ಉದಾತ್ತೀಕರಣವಾಗಿರಬೇಕು. ಆ ಎತ್ತರದ ಪ್ರಜ್ಞಾಸ್ತರಕ್ಕೆ ತನ್ನ ಎಲ್ಲಾ ದಿನಗಳನ್ನೂ, ವೇದದ ಸಂಕ್ಷಿಪ್ತ, ಸಾಂಕೇತಿಕ ಭಾಷೆಯಲ್ಲಿ ಹೇಳಿದಂತೆ, ಸಾಧಕನು ಸ್ವಾನುಭವದ ಮಾನುಷಾಪೇಕ್ಷಿತ ಭೋಗಗಳನ್ನೂ ಜಾಗರಾವಸ್ಥೆಯ ಎಲ್ಲ ಕಾರ್ಯಕಾರಿ ಶಕ್ತಿಗಳನ್ನೂ ಆ ಪ್ರಕಾರ ಮೇಲ್ಮಟ್ಟಕ್ಕೆ ಏರಿಸಬೇಕು. ಸ್ವೀಕಾರಕ ಸಂವೇದನೆಗಳಿರುವುದೇ ಎಲ್ಲ ವಸ್ತುನಿಷ್ಠತೆಗಳಲ್ಲೂ (ಪ್ರವೃತ್ತಿ ವಿಜ್ಞಾನಗಳಲ್ಲೂ) ಆನಂದವನ್ನು ಹುಡುಕಿ ಪಡೆಯುವುದಕ್ಕಾಗಿಯೇ. ಆದುದರಿಂದ ವೇದವು "ವನಾನಿ" ಎಂಬ ಪದಪ್ರಯೋಗದಿಂದ ಅಂಥ ಸಂವೇದಗಳನ್ನು ಪ್ರತಿನಿಧಿಸುತ್ತದೆ. ನಮ್ಮ ಈ ಸಂವೇದನೆಗಳು ಆಗ ತ್ಯಾಜ್ಯವಾಗದೆ ಆ ಆನಂದ ಶೋಧದಲ್ಲಿ ಪಾವನವಾಗಿ ಹೋಗಿಬಿಡುತ್ತವೆ. ಇಲ್ಲಿ ಯಾವುದನ್ನೂ ಪರಿತ್ಯಾಗ ಮಾಡಲು ಎಡೆಯೇ ಇರದು. ಯಾವಾಗ? ನಮ್ಮ ಈ ಬಾಳಿನ ಸಂವೇದನೆಗಳನ್ನು ಉಕ್ತ ದಿವ್ಯಪ್ರಜ್ಞೆಯ ಶುದ್ಧ ಸ್ತರಗಳೆತ್ತರಕ್ಕೆ ಏರಿಸಿದಾಗ - ಅರ್ಥಾತ್ ಅದಿವ್ಯಭಾವದ ಪರಿತ್ಯಾಗವಿಲ್ಲಿ ಸೂಚಿತ ; ಅದನ್ನು ಬಿಟ್ಟರೆ ಇನ್ನಾವುದನ್ನೂ ಬಿಡಬೇಕಾಗಿಲ್ಲ ಎಂಬುದು ತಾತ್ಪರ್ಯ - ದಿವ್ಯವು ಮಾನುಷವಲ್ಲ, ಅದಿವ್ಯವು ಮಾನುಷ, ಅವಮಾನುಷ ಇತ್ಯಾದಿ ಹಾಗೇ ಅರಿಷಡ್ವರ್ಗ ಮುಕ್ತತೆಯೇ ಮನಸ್ಸಿನ ಶುದ್ಧತೆ ಎಂಬುದಿಲ್ಲಿ ಗೃಹೀತವು.

ಮೊದಲು ಅಗಸ್ತ್ಯನು ಮರುತ್ತುಗಳಿಗಾಗಿ ಇತರ ಪರಿಕರಗಳೊಡನೆ ಯಜ್ಞ ಮಾಡಿದ್ದನು. ಅರ್ಥಾತ್ ಆ ಯಾಗ ದಿವ್ಯವಾಗಿರಲಿಲ್ಲ. ಶುದ್ಧವಾಗಿರಲಿಲ್ಲ. ದಿವ್ಯತೆ - ಪಾವಿತ್ರ್ಯಗಳು ಅವಿನಾಭಾವಿಗಳೆಂದರಿಲ್ಲಿ ಉಚಿತ, ಸರ್ವತ್ರ ಉಚಿತ. ವಿಚಾರಾಧಿಷ್ಠಾನ ದೇವತೆಗಳ ಕೈಯಲ್ಲಿ ಅವನು ತನ್ನಲ್ಲಿರುವ ಪ್ರಣೋದದ ಎಲ್ಲ ಕುರ್ವದ್ರೂಪಗಳನ್ನೂ ಕೊಟ್ಟಿದ್ದನು. ಯಜ್ಞದಲ್ಲಿ ದೋಷ ಕಂಡು ಬಂದುದರಿಂದ ಬಲಿಷ್ಠ ಇಂದ್ರನು ಶತ್ರುವಿನಂತೆ ಎದುರಾದನು. ಹೆದರಿಕೆ - ನರಳಿಕೆಗಳ ಆಧಿಕ್ಯದಿಂದ ಆತನು ಕಣ್ತೆರೆದು ತನ್ನ ಆತ್ಮವನ್ನು (ಜೀವಾತ್ಮವನ್ನು =ಅಹಂಕಾರ ಪರಿಚ್ಛಿನ್ನವಾದ ಮನಸ್ಸನ್ನು) ಆ ದೇವನಿಗೆ ಸಮರ್ಪಿಸಿದನು. ಆ ದುಸ್ಸಹಾನುಭವದ ಅಂಶವಿನ್ನೂ ಉಳಿದಿರುವಾಗಲೇ ಅವನು ತಾನು ಆರಂಭಿಸಿದ್ದ ಪ್ರಭಾವಿ ಯಜ್ಞದ ಕಾರ್ಯಸಿದ್ಧತೆಯನ್ನು ಒತ್ತಾಯದಿಂದ ಬಿಟ್ಟುಬಿಡಬೇಕಾಯಿತು. ಈಗ ಮತ್ತೆ ಅವನು ಹೊಸದಾಗಿ ಯಜ್ಞಕ್ಕಾರಂಭಿಸುತ್ತಾನೆ. ಅದರಲ್ಲಿ ಉಜ್ವಲವಾದ ಮರುನ್ನಾಮಧೇಯದ ಜತೆಗೆ ಪ್ರಭಾವಿ ಇಂದ್ರದೇವನ ಹೆಸರನ್ನೂ ಸೇರಿಸುತ್ತಾನೆ. ಆತಂಕಕ್ಕೀಡಾದ ಯಜ್ಞದಿಂದ ಸಿಟ್ಟು ಮಾಡದೆ ಮರುತ್ತುಗಳು ಈಗ ಹೆಚ್ಚು ನ್ಯಾಯ್ಯವಾಗಿ ಮಾಡಲಾರಂಭಿಸಿದ ಯಜ್ಞವನ್ನು ಸ್ವೀಕರಿಸಲಿ ಎಂಬುದು ಅಗಸ್ತ್ಯನ ಕೋರಿಕೆ. ಅಂದರೆ ಇಂದ್ರನನ್ನು ಮರೆತು ಮಾಡುವ ಯಜ್ಞ ಅಥವಾ ದೇವತಾಪ್ರೀಣನ ಕಾರ್ಯ ಎಲ್ಲವೂ ಇಂದ್ರ ಕ್ರೋಧದಿಂದ ಹಾಳಾಗುವುವೆಂದು ತಾತ್ಪರ್ಯ. ಅಂದರೆ, ಸರ್ವ ದೇವಕಾರ್ಯಗಳಲ್ಲೂ ಶುದ್ಧ ಬುದ್ಧಿಯ ಯಜಮಾನಿಕೆ ಇದ್ದರೆ ಮಾತ್ರ ಅದು ಸಫಲ.

ಅಂತ್ಯದ ಎರಡು ಸೊಲ್ಲುಗಳಲ್ಲಿ ಅಗಸ್ತ್ಯನು ಮರುತ್ತುಗಳಿಂದ ಇಂದ್ರನತ್ತ ತಿರುಗುತ್ತಾನೆ. ಮರುತ್ತುಗಳು ಮಾನವ್ಯ ಮನೋಧರ್ಮದ ಪ್ರಗತಿಪರ ಪ್ರಬೋಧೋದಯವನ್ನು ಪ್ರತಿನಿಧಿಸುತ್ತಾರೆ. ಇಂದ್ರನು ಪುರುಷನು ಅರ್ಥಾತ್ ಮಹಾಸತ್ತೆಯ (ಪರಮಸತ್ಯದ) ಪ್ರತಿನಿಧಿ. ಮಾನವನ (ವ್ಯಾವಹಾರಿಕ) ಮನಸ್ಸು ಮೊದಲು ಅತ್ಯಸ್ಪಷ್ಟ (ಕಲಲಸದೃಶ) ಚಲನ ವಲನಗಳ ಅವಸ್ಥೆಯಲ್ಲಿರುತ್ತದೆ. ಅದು ಅವಮಾನಸದ ಅಂಧಕಾರದಿಂದ ಆಗತಾನೇ ಎದ್ದು ಬಂದ ಸ್ಥಿತಿ. ಅದರ ಚಲನಕ್ರಿಯೆಯು ಕ್ರಮೇಣ ಸ್ಪಷ್ಟ ಸ್ಪಷ್ಟತರವಾಗುತ್ತಾ ವಿಕಾಸ ಹೊಂದಿ, ಇಂದ್ರನೇ ಪುರುಷನಾದ (ಒಡೆಯನಾದ) ಜ್ಯೋತಿರ್ಮಯ ಪ್ರಜ್ಞೆಯ ರೂಪವನ್ನು ಹೊಂದುತ್ತದೆ. ಉಕ್ತ ಪ್ರಾರಂಭಿಕ ಮನದ ಅರೆಮರೆವಿನಂಥ ಅಲ್ಪಜ್ಞಾತ ಪ್ರಜ್ಞೆಯು ಜ್ಞಾತಪ್ರಜ್ಞೆಯಾಗುತ್ತದೆ. ಆ ಜ್ಞಾತತೆ ಸಂಜೆಯ ಬೆಳಕಿನಂತೆ ಅರೆ ಬೆಳಗುತ್ತಿರುತ್ತದೆ ; ಅದರಿಂದ ತಪ್ಪು ದಾರಿ ಹಿಡಿವ ಆಲೋಚನೆಗಳು ಹುಟ್ಟುವುವು. ಆ ಜ್ಞಾನ (ಪ್ರಜ್ಞಾಜ್ಞಾನ) ಬೆಳೆಯುತ್ತಾ ಹೋದ ಹಾಗೆ ಈ ಕೊರತೆಗಳನ್ನು ಮೀರಲು ಕಲಿತು ಮಾನವನ ಮನಶ್ಚಲನೆಗಳು ಕೊನೆಗೆ ದಿವ್ಯ ಪ್ರಕಾಶವನ್ನು ಧರಿಸುವುವು. ಇದೊಂದು ಮಹಾವಿಕಾಸ - ಬಹಳ ನಿಧಾನವಾಗಿ, ಮಾನವನ ಜೀವಾತ್ಮನ ನಸುಕುಗಳಲ್ಲಿ ಹುಟ್ಟಿದ ಈ ವಿಕಾಸವು ಸತತವಾದ ಉಷೋದಯಗಳ ಮೂಲಕ ತನ್ನ ಕೊನೆಯ ಹಂತವನ್ನು ತಲುಪುವುದು. ವೇದದಲ್ಲಿ ಉಷೆಯು ಮಾನವನ ಭೌತಿಕ ಪ್ರಜ್ಞೆಯ ಮೇಲೆ (ಕ್ರಮಕ್ರಮವಾಗಿ) ಹೊಸ ಹೊಸದಾಗಿ ದಿವ್ಯ ಪ್ರಬೋಧದ ಅಲೆಗಳು ಚಿಮ್ಮುತ್ತಾ ಹೋಗುವಂತೆ ಮಾಡುವ ಸಾಂಕೇತಿಕ ದೇವತೆ. ಉಷೆಯು ರಾತ್ರಿ ಮುಗಿದೊಡನೆಯೇ ಬರುವವಳು-ರಾತ್ರಿಯ ಬೆನ್ನ ಹಿಂದೆಯೇ ಇರುವವಳು. ಚಕ್ರಾರಗತಿಯಲ್ಲಿ ಅವರಿಬ್ಬರ ತಿರುಗಾಟವೆಂದು ತಾತ್ಪರ್ಯ. ಉಷೆಯೂ ರಾತ್ರಿಯೂ ಸೋದರಿಯರಂತೆ. ಅಂಧಕಾರವು

ಬೆಳಕನ್ನು ಹಡೆವ ತಾಯಿ. ಕಲಿಹುಬ್ಬಿನ ತಾಯಿ ಸಿದ್ಧಮಾಡಿಟ್ಟದ್ದನ್ನು ಯಾವಾಗಲೂ ಉಷೆಯು ಬಯಲು ಮಾಡಲು ಬರುತ್ತಾಳೆ. ಇಲ್ಲಿ ಋಷಿಯು ಸತತ ಉಷೋದಯವನ್ನು ಹೇಳುವಂತೆ ತೋರುತ್ತದೆ. ತೋಲಿಕೆಯ ಅಸ್ಪಷ್ಟತೆಯ ವಿರಾಮದ ಮಧ್ಯಾವಧಿಗಳನ್ನವನು ಗಣಿಸುವಂತೆ ತೊರುವುದಿಲ್ಲ. ಉತ್ತರೋತ್ತರವಾಗಿ, ಸತತ, ಅವಿಚ್ಛಿನ್ನವಾಗಿ ಬರುವ ಆ ಉಜ್ವಲ ಪ್ರಣೋದವು ಬದಲಾವಣೆಯನ್ನು ಉಂಟು ಮಾಡಿದ ಇಂದ್ರಪ್ರಭಾವವೇ-ಅರ್ಥಾತ್-ಉಷೆಯು ಇಂದ್ರಾಧೀನ ದೇವತೆ. (ಇಂದ್ರರೂಪದ) ಆ ಪರಮೋಚ್ಚ ಬುದ್ಧಿಯೇ ಉಷೆಯ ಮೂಲಕ, ಮರುತ್ತುಗಳ ಮೂಲಕ, ಮಾನವನ ಬಾಳಿನೊಳಗೆ ಸುರಿಯುತ್ತಾ ಬಂದದ್ದು. ಇಂದ್ರನು ಕಿರಣಾಪಸಾರಕ ಗೋವ್ರಜದ ವೃಷಭ, ವಿಚಾರದ ಕ್ರಿಯಾಶಕ್ತಿಗಳ ಒಡೆಯ, ಉಜ್ವಲ ಉಷಸ್ಸುಗಳ ದೊರೆ.

ಈಗ ಕೂಡಾ ಇಂದ್ರನು ಮರುತ್ತುಗಳನ್ನು ತನ್ನ ಸಾಧನಗಳನ್ನಾಗಿ ಬಳಸಿಕೊಂಡು ಪ್ರಬೋಧೋದಯವನ್ನುಂಟು ಮಾಡಲಿ. ಋಷಿಯ ದ್ರಷ್ಟಾರನ, ಅತಿಮಾನಸ ಪ್ರಜ್ಞೆಯನ್ನು ದೃಢಪಡಿಸಲಿ. ಮಾನವ ಸ್ವಭಾವದಲ್ಲಿ ಅವರ ಕ್ರಿಯಾಶಕ್ತಿಯಿಂದ ಅವನ ಕ್ರಿಯಾಶಕ್ತಿಯು ಬೆಂಬಲ ಪಡೆಯುತ್ತದೆ ; ಮತ್ತು ಆ ಸ್ವಭಾವಕ್ಕೆ ಅವನು ತನ್ನ ದಿವ್ಯ ದಾರ್ಢ್ಯವನ್ನೀಯುವನು, ತನ್ನ ದಿವ್ಯ ಪ್ರಣೋದವನ್ನು ಕೊಡುವನು-ಅದರಿಂದ ಮಾನವನು ಆಕಸ್ಮಿಕ ಆಘಾತದಿಂದ ಎಡಹನು ಅಥವಾ ಅವನ ಸ್ವಭಾವವು ಸಾಮಾನ್ಯವಾಗಿ ತಡೆಯಲಾರದಷ್ಟು ಪ್ರಭಾವಿ ಚಟುವಟಿಕೆಗಳನ್ನು ಎದುರಿಸುವ ಸಂದರ್ಭ ಬಂದಾಗ ಅವುಗಳ ಹೊಡೆತಕ್ಕೆ ಸೋಲನು.

ಹೀಗೆ ಮರು ಬೆಂಬಲ ಪಡೆದ ಮರುತ್ತುಗಳಿಗೆ ಯಾವಾಗಲೂ ಮೇಲ್ಮಟ್ಟದ ದೇವತಾಶಕ್ತಿಯ ಮಾರ್ಗದರ್ಶನ ಹಾಗೂ ರಕ್ಷಣೆಗಳು ಬೇಕಾಗುತ್ತವೆ. ಅವರು ಭಿನ್ನ ಭಿನ್ನವಾದ ವಿಚಾರ ಕ್ರಿಯಾಶಕ್ತಿಗಳ ಪುರುಷರು, ಅಧಿದೈವಗಳು. ಅವರೆಲ್ಲರ ಮೇಲಿನ ಮಹಾಪುರುಷನೆಂದರೆ ಇಂದ್ರ-ಎಲ್ಲ ವಿಚಾರಕ್ರಿಯಾ ಶಕ್ತಿಗಳಿಗೂ ಅವನೇ ಆತ್ಯಂತಿಕ ದೊರೆ. ಅವನಲ್ಲಿ ಅವರು ತಮ್ಮ ಪೂರ್ಣತೆಯನ್ನೂ ತಮ್ಮ ಸಾಮಶ್ರುತ್ಯವನ್ನೂ ಕಂಡುಕೊಳ್ಳುತ್ತಾರೆ. ಹೀಗಿರುವಾಗ ಈ ಇಡಿಗೂ ಆ ಜಿಡಿಗಳಿಗೂ ಬಡಿದಾಟ ಅನೈಕಮತ್ಯಗಳು ಇಲ್ಲವಾಗಲಿ. ಇಂದ್ರನನ್ನು ಸ್ವೀಕರಿಸಿದ ಮರುತ್ತುಗಳು ತಿಳಿಯಬೇಕಾದಂಥವುಗಳ ಸರಿಯಾದ ತಿಳುವಳಿಕೆಯನ್ನು ಅವನಿಂದ ಪಡೆಯುತ್ತಾರೆ. ಅವರು ಅರ್ಧಂಬರ್ಧ ಬೆಳಕಿನಿಂದ ಹಾದಿ ತಪ್ಪರು, ಅಥಾ ಪರಿಮಿತ ಶಕ್ತಿಯನ್ನು ಹೀರಿಕೊಂಡು ಬಹುದೂರ ಎಳೆದೊಯ್ಯಲ್ಪಡರು. ಜೀವಾತ್ಮನ ಮತ್ತು ಅವನ ಪರಿಪೂರ್ಣತೆಯ ನಡುವೆ ಯಾವ ಅಡ್ಡಗಲ್ಲು ಇದ್ದರೂ ಅದನ್ನು ಕಿತ್ತೆಸೆವ ಇಂದ್ರನ ಪ್ರಣೋದ ಪ್ರಯೋಗದ ಕಾರ್ಯವನ್ನು ಆ ಮರುತ್ತುಗಳೂ ತಡೆದುಕೊಳ್ಳಬಲ್ಲವರಾಗುತ್ತಾರೆ.

ಆದ್ದರಿಂದ, ಈ ದಿವ್ಯಶಕ್ತಿಗಳ ಸಾಮಶ್ರುತ್ಯದಲ್ಲಿ ಹಾಗೂ ಆಶೆ-ಆಕಾಂಕ್ಷೆಗಳಿಂದ, ಮಾನವ ಕುಲವು ಜಗತ್ತಿನ ಕೋಟ್ಯನುಕೋಟಿ ವಿರೋಧಗಳನ್ನು ಮುರಿದೊಗೆಯಬಲ್ಲ ಪ್ರೇರಣಾ ಬಲವನ್ನು ಪಡೆಯಲಿ ; ಅಂಥ ಬಲವು ವ್ಯಕ್ತಿಯ ಸಾವಯವ ವ್ಯಕ್ತಿತ್ವದಲ್ಲಾಗಲಿ, ಕುಲದಲ್ಲಾಗಲಿ-ಪದೇ ಪದೇ ಕಂಡ. ಆದರೆ ಹಾಗೆ ಬಹುದೂರದಲ್ಲಿರುವಂತೆ ಸಿದ್ಧನೆಂದುಕೊಂಡವನಿಗೂ ತೋರುವ ಧ್ಯೇಯದತ್ತ ಬಹುವೇಗವಾಗಿ ಸಾಗಲಿ.

❖❖

# IV
# ಪ್ರಬುದ್ಧ ಸಂಕಲ್ಪಸ್ವರೂಪದ ಅಗ್ನಿ

## ಋಗ್ವೇದ I.77

**ಕಥಾ ದಾಶೇಮಾಗ್ನಯೇ ಕಾಸ್ಮೈ ದೇವಜುಷ್ಟೋಚ್ಯತೇ ಭಾಮಿನೇ ಗೀಃ ।**
**ಯೋ ಮರ್ತ್ಯೇಷ್ವಮೃತ ಋತಾವಾ ಹೋತಾ ಯಜಿಷ್ಠ ಇತ್‌ಕೃಣೋತಿ ದೇವಾನ್ ॥ ೧ ॥**

೧. ನಾವು ಅಗ್ನಿಗೆ ಹೇಗೆ (ಆಹುತಿಯನ್ನು) ಹಾಕೋಣ? ಪ್ರಜ್ವಲ ಜ್ವಾಲೆಯುಳ್ಳ ಆತನಿಗೆ, ಆ ಒಡೆಯನಿಗೆ ದೇವಸ್ವೀಕೃತವಾದ ಯಾವ ಮಂತ್ರವು ಹೇಳಲ್ಪಟ್ಟಿದೆ? ಮರ್ತ್ಯರಲ್ಲಿ ಅಮರ್ತ್ಯನಾದ ಪರಮಸತ್ಯೇಶ್ವರನಾದ, ಯಜ್ಞಕ್ಕೆ ಬಲಿಷ್ಠ ಆಹುತಿಯನ್ನು ಕೊಡುವ, ಅರ್ಚಕನಾದ ಮತ್ತು ದೇವನಿರ್ಮಾಪಕನಾದ ಆತನಿಗೆ (ಯಾವುದು ತಕ್ಕ ಆಹುತಿ ಮತ್ತು) ಯಾವುದು ತಕ್ಕ ಮಂತ್ರ ?

**ಯೋ ಅಧ್ವರೇಷು ಶಂತಮ ಋತಾವಾ ಹೋತಾ ತಮೂ ನಮೋಭಿರಾ ಕೃಣುಧ್ವಂ ।**
**ಅಗ್ನಿರ್ಯದ್ವೇರ್ಮರ್ತಾಯ ದೇವಾಂತ್ಸ ಚಾ ಬೋಧಾತಿ ಮನಸಾ ಯಜಾತಿ ॥ ೨ ॥**

೨. ಅಗ್ನಿಯು ಯಜ್ಞಗಳಲ್ಲಿ ಅರ್ಚಕನು, ಪುರೋಹಿತನು ಅವನು ಆಹುತಿಹಾಕುವ ಅಧ್ವರ್ಯುವು. ಅವನು ಪೂರ್ಣಶಾಂತನು, ಪೂರ್ಣಸತ್ಯನು- ನಿಮ್ಮ ಸಮರ್ಪಣೆಗಳಿಂದ (ಶರಣಾಗತಿಗಳಿಂದ) ನಿಮ್ಮಲ್ಲಿ ಆತನು ಮೂಡುವಂತೆ ಮಾಡಿಕೊಳ್ಳಿರಿ ; ಅವನು ನರ-ಸುರರಿಗಾಗಿ ವ್ಯಕ್ತನಾದಾಗ[೧] ಅವನಿಗೆ ಅವರು ಪ್ರತ್ಯಕ್ಷರಾಗಿರುವುದರಿಂದ ಅವನು ಅವರಿಗೆ ಮನಸಾ ಯಜ್ಞವನ್ನು ಸಮರ್ಪಿಸುತ್ತಾನೆ.

**ಸ ಹಿ ಕ್ರತುಃ ಸ ಮರ್ಯಃ ಸ ಸಾಧುರ್ಮಿತ್ರೋ ನಭೂದದ್‌ಭುತಸ್ಯ ರಥೀಃ ।**
**ತಂ ಮೇಧೇಷು ಪ್ರಥಮಂ ದೇವಯಂತೀರ್ವಿಶ ಉಪಬ್ರುವತೇ ದಸ್ಮಮಾರೀಃ ॥ ೩ ॥**

---

೧. ಅಥವಾ "ಅವನು ದೇವತೆಗಳೊಳಗೆ ಹೊಕ್ಕಾಗ".

೩. ಏಕೆಂದರೆ ಅವನೇ ಸಂಕಲ್ಪ, ಅವನೇ ಬಲ, ಅವನೇ ಪೂರ್ಣತ್ವವಿಧಾಯಕ; ಮಿತ್ರನಂತೆಯೇ ಅವನೂ ಸರ್ವೋತ್ತಮನ ಸಾರಥಿಯಾಗುತ್ತಾನೆ. ಆಶಾಪೂರಕನೂ ಪ್ರಥಮನೂ ಆದ ಅವನನ್ನು ಬಹ್ವಾಹುತಿಗಳ ಮೂಲಕ ದೇವತಾಸಾಕ್ಷಾತ್ಕಾರವನ್ನು ಬಯಸುವ ಆರ್ಯಜನರು ಮಂತ್ರ ಹೇಳುತ್ತಾರೆ.

**ಸನೋನೃಣಾಂ ನೃತಮೋ ರಿಶಾದಾ ಅಗ್ನಿರ್ಗಿರೋಽವಸಾವೇತು ಧೀತಿಂ**
**ತನಾಚಯೇ ಮಘವಾನಃ ಶವಿಷ್ಠಾ ವಾಜಪ್ರಸೂತಾ ಇಷಯಂತ ಮನ್ಮ ॥ ೪ ॥**

೪. ತನ್ನ ಉಪಸ್ಥಿತಿಯಿಂದ ಶಕ್ತಿಗಳಲ್ಲಿ ಅತ್ಯಂತ ಬಲಿಷ್ಠನಾದ ಮತ್ತು ವಿನಾಶಕರ ಭಕ್ಷಕನಾದ ಈತನು ಮಂತ್ರಗಳನ್ನೂ ಅವುಗಳ ತಿಳಿವಳಿಕೆಯನ್ನೂ ಪ್ರಕಟಿಸಲಿ[1] ಹಾಗೂ ಸ್ವವಿಸ್ತಾರದಲ್ಲಿ ಶ್ರೀಯ ಪೂರ್ಣತಾಧೀಶರೂ ಕ್ರಿಯಾಶಕ್ತಿಯಲ್ಲಿ ಉಜ್ಜ್ವಲತಮರೂ ಆದ ಅವರು ತಮ್ಮ ಐಶ್ವರ್ಯವನ್ನು ಧಾರಾಕಾರವಾಗಿ ಸುರಿಸಲಿ ಮತ್ತು ವಿಚಾರಕ್ಕೆ ತಮ್ಮ ಪ್ರಚೋದನೆಯನ್ನು ನೀಡಲಿ.

**ಏವಾಗ್ನಿರ್ಗೋತಮೇಭಿರ್ ಋತಾವಾ ವಿಪ್ರೇಭಿರಸ್ತೋಷ್ಟ ಜಾತವೇದಾಃ ।**
**ಸ ಏಷು ದ್ಯುಮ್ನಂ ಪೀಪಯತ್ಸವಾಜಂ ಸ ಪುಷ್ಟಿಂ ಯಾತಿ ಜೋಷಮಾ ಚಿಕಿತ್ವಾನ್॥ ೫ ॥**

೫. ಈ ಪ್ರಕಾರ, ಸ್ವವಶೀಕೃತ ಪರಸತ್ಯನಾದ ಅಗ್ನಿಯು ಬೆಳಕಿನ[2] ಒಡೆಯರಿಂದ ದೃಢೀಕೃತನೂ ಸ್ಪಷ್ಟೀಕೃತ ಮನಗಳಿಂದ ಲೋಕಗಳನ್ನು ತಿಳಿದವನೂ ಆಗಿದ್ದಾನೆ. ಅವನೂ ಐಶ್ವರ್ಯವೇ. (ಅದರಿಂದ) ಅವನು ಅವರಲ್ಲಿ ಪ್ರಬೋಧಜ್ಯೋತಿಯ ಪ್ರಚೋದವನ್ನು ಬೆಳೆಸಲಿ ; ತನ್ನ ಸಾಕ್ಷಾತ್ಕಾರಗಳಿಂದ ಆತನು ಅಭಿವೃದ್ಧಿಯನ್ನು ಸಾಮಶ್ರುತ್ಯವನ್ನೂ ಪಡೆಯಲಿ.



೧. ಅಥವಾ "ಮಂತ್ರಗಳನ್ನೂ ಆಲೋಚನ ಕ್ರಿಯೆಯನ್ನೂ ಪ್ರವೇಶಿಸಲಿ"

೨. "ಗೋತಮೇಭಿಃ" - ಹೊರ ಅರ್ಥದಲ್ಲಿ ಇದಕ್ಕೆ "ಗೋತಮರಿಂದ" ಎಂಬುದು ಭಾಷಾಂತರ. ಗೋತಮಕುಲವು ರಾಹುಗಣಕ್ಕೆ ಸೇರಿದ್ದು ; ಗೋತಮನು ಸೂಕ್ತದ ದ್ರಷ್ಟಾರನು. ಆದರೆ ಋಷಿಗಳ ಹೆಸರುಗಳನ್ನು ಪದೇ ಪದೇ ಅಂತರರ್ಥದಲ್ಲಿ ಬಳಸಲಾಗುತ್ತದೆ. ಈ ಉಪಚ್ಛೇದದಲ್ಲಿ "ಗೋತಮೇಭಿಃ ಋತಾವಾ, ವಿಪ್ರೇಭಿರ್ ಜಾತವೇದಾಃ" ಎಂದು ಪದಗಳನ್ನು ಗುಂಪುಗೂಡಿಸುವುದರಲ್ಲಿ ಒಂದು ಅಸ್ಖಲಿತ ಅರ್ಥವಿದೆ. ಮೂರನೆಯ ಪದ್ಯದಲ್ಲಿ "ದಸ್ಮಂ ಅರಿಃ" ಎಂಬ ಪದಸಂಯೋಜನೆಯಲ್ಲೂ ಇದೇ ತಂತ್ರವನ್ನು ಕಾಣಬಹುದು.

# ವ್ಯಾಖ್ಯಾನ

ಈ ಸೂಕ್ತದ ದ್ರಷ್ಟಾರನು ಗೋತಮರಾಹುಗಣನು. ಇದು ಅಗ್ನಿಸ್ತುತಿಯ ಒಂದು ಸ್ತೋಮ. ಅಗ್ನಿಯು ವಿಶ್ವದಲ್ಲಿ ಕ್ರಿಯಾಮಗ್ನವಾಗಿರುವ ಒಂದು ದಿವ್ಯ ಸಂಕಲ್ಪ.

ಅಗ್ನಿಯು ವೈದಿಕ ದೇವತೆಗಳಲ್ಲಿ ಮುಖ್ಯತಮನೂ ವಿಶ್ವಾತ್ಮತಮನೂ ಆದ ದೇವತೆಯು., ಭೌತ ಪ್ರಪಂಚದಲ್ಲಿ ಅವನು ಸಾಮಾನ್ಯ ಭಕ್ಷಕನೂ ಭೋಗಿಯೂ ಆದಂಥವನು. ಅವನು ಪಾವಕನೂ ಹೌದು. (ಶುದ್ಧೀಕರಣಕರ್ತನೂ ಹೌದು) ; ಅವನು ನುಂಗಿ ಸಂತೋಷ ಪಡುವಾಗ ಕೂಡಾ ಪಾವನಗೊಳಿಸುವನು. ಸಿದ್ಧಮಾಡಿ ಪೂರ್ತಿಗೊಳಿಸುವ ಬೆಂಕಿ ಅವನು. ಅಲ್ಲದೆ, ಅವನು ತಿಂದದ್ದನ್ನು ರಕ್ತಗತ ಮಾಡುವವನೂ (ವೈಶ್ವಾನರನೂ) ಅವನೇ ಮತ್ತು ರೂಪಿಸುವ ಶಕ್ತಿಯ ಬಿಸಿಯೂ (ಶಾಖವೂ) ಅವನೇ. ಪ್ರಾಣದ ಬಿಸಿಯೂ ಅವನೇ. ಅವನೇ ವಸ್ತುಗತ ರಸದ ಸ್ರಷ್ಟಾರ. ರಸವೆಂಬುದು ಆ ವಸ್ತುಗಳ ದ್ರವ್ಯಾತ್ಮಕ ಅಸ್ತಿತ್ವದ ಸಾರ - ಅವುಗಳ ಸಂತೋಷದ ಸಾರವೂ ಹೌದು.

ಹಾಗೇ-ಅಷ್ಟೇ ಸಮಾನಾರ್ಥದಲ್ಲಿ- ಅವನು ಪ್ರಾಣದ ಸಂಕಲ್ಪ-ಉತ್ಕ್ರಿಯ ಜೈವಿಕ ಕ್ರಿಯಾಶಕ್ತಿ ಮತ್ತು ಆ ಕ್ರಿಯಾಶಕ್ತಿಯಲ್ಲಿ ಅವನು ಅದೇ ಕರ್ತವ್ಯಗಳನ್ನು ಮಾಡುತ್ತಾನೆ. ನುಂಗುವುದು ಮತ್ತು ಅದರಿಂದ ಸಂತೋಷಪಡುವುದು ಪಾವನಿಸುವುದು, ಸಿದ್ಧಮಾಡುವುದು, ರಕ್ತಗತ ಮಾಡುವುದು, ರೂಪಿಸುವುದು - ಇವೇ ಅವನ ಕರ್ತವ್ಯಗಳು. ಅವನು ಯಾವಾಗಲೂ ಮೇಲಕ್ಕೇ ಉರಿದು ತನ್ನ ಶಕ್ತಿಗಳನ್ನು ಮರುತ್ತುಗಳನ್ನಾಗಿ ಪರಿವರ್ತಿಸುವನು - ಮರುತ್ತುಗಳೂ ವಿಶ್ವಮಾನಸಕ್ರಿಯಾ ಶಕ್ತಿಗಳು. ನಮ್ಮ ಭಾವಾವೇಶಗಳೂ ಅಸ್ಪಷ್ಟ ಭಾವನೆಗಳೂ ಉರಿಯುವ ಅಗ್ನಿಯ ಹೊಗೆ. ನಮ್ಮ ನಾಡೀಯ ಪ್ರಣೋದಗಳೆಲ್ಲಾ ಅವನ ಬೆಂಬಲದಿಂದ ಮಾತ್ರ ಕಾರ್ಯಕಾರಿತ್ವದ ಆಶ್ವಾಸನವನ್ನು ಪಡೆಯುತ್ತವೆ.

ನಮ್ಮ ನಾಡೀಸತ್ತೆಯಲ್ಲಿ ಅವನು ದಿವ್ಯಸಂಕಲ್ಪದಿಂದ ಅದನ್ನು ಪವಿತ್ರೀಕರಿಸುವವನಾದರೆ, ಮಾನಸದಲ್ಲಿಯೂ ಸಂಕಲ್ಪ ಸ್ವರೂಪನಾಗಿ ಅವನು ಅದನ್ನು ತಿಳಿಗೊಳಿಸುವವನು - ಅರ್ಥಾತ್ - ಧ್ಯೇಯೋನ್ಮುಖವನ್ನಾಗಿ ಮಾಡುವವನು. ಬುದ್ಧಿಯನ್ನು ಹೊಕ್ಕೊಡನೆಯೇ ಅವನು ತನ್ನ ದಿವ್ಯ ಜನ್ಮಸ್ಥಲ ಮತ್ತು ಸ್ವಗೃಹಗಳಿಗೆ ಹತ್ತಿರವಾಗುವನು. ಅವನು ವಿಚಾರಗಳನ್ನು ಕಾರ್ಯಕರ ಶಕ್ತಿಗಳತ್ತ ಒಯ್ಯುವನು; ಅವನು ಕ್ರಿಯಾಶೀಲ ಶಕ್ತಿಗಳನ್ನು ಬೆಳಕಿನತ್ತ ಒಯ್ಯುವನು.

ಅಗ್ನಿಯ ದಿವ್ಯಜನ್ಮಸ್ಥಲ ಮತ್ತು ಮನೆ-ಅವನು ಎಲ್ಲೆಲ್ಲೂ ಹುಟ್ಟಿದರೂ ಎಲ್ಲವುಗಳಲ್ಲಿಯೂ ವಾಸಿಸಿದ್ದರೂ- ಪರಸತ್ಯ, ಪರಾನಂತ, ವಿಸ್ತಾರವಾದ ವಿಶ್ವಬುದ್ಧಿ-ಆ ಬುದ್ಧಿಯಲ್ಲಿ ಜ್ಞಾನವೂ ಪ್ರಣೋದವೂ ಏಕೀಕೃತವಾಗಿವೆ. ಏಕೆಂದರೆ ಅಲ್ಲಿ ಸರ್ವ ಪರ ಸಂಕಲ್ಪವೂ ಸಮಶ್ರುತಿಯಲ್ಲಿರುವುವು. ಯಾವವುಗಳೊಡನೆ? ಎಲ್ಲ ವಸ್ತುಗಳ ಸತ್ಯಗಳೊಡನೆ-ಸತ್ಯವಾಗಿ. ಆದುದರಿಂದ ಅಲ್ಲಿ ಮಾಡಿದ್ದೆಲ್ಲಾ ಪರಿಣಾಮಕರವಾಗುತ್ತದೆ. ಪರವಿವೇಕದ ವಿಚಾರ ಭಾಗಗಳೆಲ್ಲಾ-ಅದು ದಿವ್ಯವಿಧಿ (ಕಾಯಿದೆ) ಯಾಗಿರುವುದರಿಂದ - ದಿವ್ಯಕರ್ಮವನ್ನು ನಿಯಂತ್ರಿಸಲ್ಪಡುತ್ತವೆ. ಪರಿಪೂರ್ಣನಾದ ಅಗ್ನಿಯು

ತನ್ನ ಮನೆಯಲ್ಲಿ ಬಲಿಷ್ಠನಾಗಿರುವನು. -ಅವನ ಮನೆ ಎಂಬುದು ಪರಸತ್ಯ, ಪರಮತ, ಪರವ್ಯಾಪ್ತಿ (ಅಸೀಮ ವೈಶಾಲ್ಯ). ಮನುಕುಲದ ಮಹತ್ವಾಕಾಂಕ್ಷೆಯನ್ನವನು ಇಲ್ಲಿಗೆ ಕರೆದುಕೊಂಡು ಬರುವನು- ಇದು ಆರ್ಯನ ಆತ್ಮ, ವಿಶ್ವಯಾಗದ (ಪರಮೋನ್ನತ) ಶಿರಃಸ್ಥಾನ.

ಈ ಸಂದರ್ಭದಲ್ಲಿ ಮಹಾದ್ವಾರದ ಪ್ರಥಮ ಪ್ರವೇಶ ಸಾಧ್ಯತೆ ಇರುತ್ತದೆ-ಇದು ಮನಃಸ್ಥಲದಿಂದ ಅತಿಮನಃಸ್ಥಲಕ್ಕೇರುವ ಸಂಧಿ ಸಂದರ್ಭ. ಇಲ್ಲೇ ಬುದ್ಧಿಯ ಪರಿವರ್ತನವಾಗುವುದು. ಈ ಅವಧಿಯವರೆಗೆ ಬುದ್ಧಿಯು ಮಾನಸಸತ್ತಾಮಯತೆಯ ಕಿರೀಟಪತಿಯಾಗಿದ್ದರೆ ಈಗ ಅದು ದಿವ್ಯಜ್ಯೋತಿಯೊಳಗೆ ಹೊಗುವುದು. ಇದು ಸರ್ವೋಚ್ಚ, ಸರ್ವಮುಖ್ಯ ಅಂಶ-ಯಾವುದರ? ವೇದೋಕ್ತಯೋಗದ. ಗೋತಮರಾಹುಗಣ ಋಷಿಯು ಸ್ಫೂರ್ತ[೧] ಮಂತ್ರದ ಆವಿರ್ಭಾವವನ್ನು ತನ್ನಲ್ಲಿ ಬಯಸುವ ಸಂಧಿ ಇದು. ಮನಸ್ಸಿನ ನೆಲೆಯಿಂದ ಅತಿಮಾನಸ ನೆಲೆಗೆ ಮನಸ್ಸು ಪರಿವೃತ್ತವಾಗಿ ಮೇಲೆ ಹೋಗುವ ಕ್ರಮ ಪ್ರಾರಂಭವಾಗುವುದು ಈ ಪ್ರಕಾಶಮಯ ಅಸೀಮ ಶ್ರೇಯೋವಿಸ್ತಾರಸ್ಥಲದಲ್ಲೇ-ಇದಕ್ಕೆ ಮಂತ್ರವು ಮಾನವನಿಗೆ ನೆರವೀಯುವುದು.

ಮಾನಸಶಾಸ್ತ್ರೀಯವಾಗಿ ವೈದಿಕ ಯಜ್ಞವು ವೈಶ್ವಿಕ ಹಾಗೂ ವೈಯಕ್ತಿಕ (ವ್ಯಷ್ಟಿ-ಸಮಷ್ಟಿಗಳ) ಕರ್ಮವು ಆತ್ಮಪ್ರಜ್ಞೆಯನ್ನು ಪಡೆದು ಪ್ರಬುದ್ಧವಾಗಿ ತನ್ನ ಗುರಿಯನ್ನು ಕಂಡುಕೊಂಡು ಕಾರ್ಯಮಗ್ನವಾಗುವುದರ ಸಂಕೇತ. ಇಡೀ ಜಗತ್ತಿನ ಪ್ರಕ್ರಿಯೆ (ಆಗುಹೋಗುಗಳು) ಸ್ವಭಾವತಃ ಒಂದು ಯಜ್ಞ-ಸ್ವಪ್ರೇರಿತ ಯಾ ಪರಪ್ರೇರಿತ. ಸ್ವಾರ್ಥತ್ಯಾಗದಿಂದ ಸ್ವಾತ್ಮಪರಿಪೂರ್ಣತೆಯನ್ನು ಪಡೆಯುವುದು - ತ್ಯಾಗದಿಂದ ಬೆಳೆಯುವುದೇ ವಿಶ್ವಸಾಮಾನ್ಯವಾದ ವಿಧಿ(ಕಾಯಿದೆ). ತನ್ನನ್ನು ಕೊಡಲೊಲ್ಲೆನೆಂಬುದು ಕೂಡಾ ವಿಶ್ವದೇವತಾಶಕ್ತಿಗಳ ಆಹಾರವಾಗುತ್ತದೆ. ಅವು ಯಾವುದನ್ನೂ ಬಿಡವು. "ಭಕ್ಷಿಸುವ ಭಕ್ಷಕನು ಭಕ್ಷ್ಯನು - ನುಂಗುವ ನುಂಗಣ್ಣನು ನುಂಗಲ್ಪಡುತ್ತಾನೆ" ಎಂಬುದೇ ಸೂತ್ರ. ಈ ಸೂತ್ರವು ಅರ್ಥಪೂರ್ಣ ಮತ್ತು ಭಯಂಕರ. ಈ ಮಾತಿನಲ್ಲಿ ಉಪನಿಷತ್ತು ವಿಶ್ವದ ಈ ಮುಖವನ್ನು ಸಾರಾಂಶರೂಪದಲ್ಲಿ ಹೇಳಿದೆ ; ಮತ್ತು ಇನ್ನೊಂದು ಉಪಚ್ಛೇದದಲ್ಲಿ ಮನುಷ್ಯರನ್ನು ದೇವತೆಗಳ ದನಕರುಗಳೆಂದು ಹೇಳಲಾಗಿದೆ. ಈ ವಿಶ್ವವಿಧಿಯನ್ನು ಅಭಿಜ್ಞಾಪಿಸಿಕೊಂಡರೆ ಮತ್ತು ಸ್ವಪ್ರೇರಣೆಯಿಂದ ಸ್ವೀಕರಿಸಿದರೆ ಮಾತ್ರ ಸಾವಿನ ರಾಜ್ಯವನ್ನು ದಾಟಿ, ಯಜ್ಞದ ಕರ್ಮಗಳ ಮೂಲಕ ಅಮೃತತ್ವವನ್ನು ಸಾಧ್ಯವನ್ನಾಗಿಯೂ (ಕೊನೆಗೆ) ಸಿದ್ಧವನ್ನಾಗಿಯೂ ಮಾಡಬಹುದು. ಮಾನವನ ಎಲ್ಲ ಶಕ್ತಿಗಳೂ ಸುಪ್ತ ಸಾಮರ್ಥ್ಯಗಳೂ ಆಹುತಿಯಾಗಿ ಕೊಡಲ್ಪಡುವುದೇ ಯಜ್ಞದ ಸಂಕೇತಾರ್ಥ. ಯಾರಿಗೆ ಆಹುತಿಯನ್ನಾಗಿ ಕೊಡುವುದು? ವಿಶ್ವಸ್ಥವಾದ ದಿವ್ಯ ಜೀವನಕ್ಕೆ.

ಜ್ಞಾನ, ಪ್ರಮೋದ, ಸಂತೋಷ ಎಂಬೀ ಮೂರು ದಿವ್ಯಜೀವನದ ಶಕ್ತಿಗಳು. ವಿಚಾರ ಮತ್ತು ಅದರ ರೂಪಾಂತರಗಳು, ಸಂಕಲ್ಪ ಮತ್ತು ಅದರ ಕಾರ್ಯಗಳು, ಪ್ರೇಮ ಮತ್ತು ಅದರ ಸಮಶ್ರುತಿಕರಣಗಳು (ಸಮನ್ವಯ ಕರಣಗಳು) ಎಂಬಿವು ತತ್ಸಮವಾದ ಮಾನುಷಚರ್ಯಗಳು - ಈ ಚರ್ಯೆಗಳನ್ನು ದಿವ್ಯಸ್ತರಕ್ಕೆ ಎತ್ತಬೇಕು. ಸತ್ಯಾನೃತ, ಜ್ಯೋತಿರಂಧಕಾರ, ಕಲ್ಪಿತ ಸರಿತಪ್ಪುಗಳು-

---

೧. ಸ್ಫೂರ್ತವು ಪ್ರತಿಭಾಜನ್ಯಕ್ಕಿಂತ ಹೆಚ್ಚಿನದೆಂಬ ಭಾವವನ್ನು ಈ ಗ್ರಂಥ ಕೆಲವೆಡೆ ಹೇಳಿದೆ.

Intution = ಪ್ರತಿಭೆ ; Inspiration= ಸ್ಫೂರ್ತಿ - ಅನುವಾದಕ.

ಈ ದ್ವಂದ್ವಗಳೆಲ್ಲಾ ಅಹಂಕಾರಿಕ ವಿಭಜನೆಯಿಂದಾದ ಜ್ಞಾನ ಸಂಕರ. ಅಹಮ್ಮಿನ ದ್ವೈಧೀಭಾವಗಳಾದ ಪ್ರೇಮ-ದ್ವೇಷ, ಸಂತೋಷ-ದುಃಖ, ನಲಿವು-ನೋವು ಎಂಬಿವೆಲ್ಲಾ ಪ್ರೇಮದ ಸಂಕರಗಳು, ಆನಂದದ ವಿಪರೀತದಶೆಗಳು. ಬಲ-ದೌರ್ಬಲ್ಯ, ಪಾಪ-ಪುಣ್ಯ, ಕರ್ಮ-ನಿಷ್ಕರ್ಮ ಇವೆಲ್ಲಾ ಸಂಕಲ್ಪ ಶಕ್ತಿಯ ಸಂಕರದಿಂದಾದಂಥ ದ್ವಂದ್ವಗಳು ಇವು ದಿವ್ಯ ಪ್ರಣೋದವನ್ನು ವ್ಯರ್ಥವ್ಯಯಕ್ಕೆ ಈಡುಮಾಡುವಂಥವುಗಳು. ಈ ಸಂಕರಗಳೆಲ್ಲಾ (ಗೊಂದಲ-ಗಲಿಬಿಲಿಗಳೆಲ್ಲಾ) ಉದಯಿಸುತ್ತವೆ ; ಅಲ್ಲದೆ, ಇವು ನಮ್ಮ ಕಾರ್ಯದ ಅವಶ್ಯಕ ರೀತಿಗಳೂ ಆದಾವು. ಏಕೆಂದರೆ, ದಿವ್ಯ ಜೀವನದ ಮೂರು ಶಕ್ತಿಗಳನ್ನು ಪರಸ್ಪರ ವಿಚ್ಛೇದಕ್ಕೊಳಪಡಿಸಲಾಯಿತು-ಬಲದಿಂದ ಜ್ಞಾನವನ್ನು ಪ್ರತ್ಯೇಕಿಸಲಾಯಿತು. ಪ್ರೇಮವನ್ನು ಆಯೆರಡರಿಂದಲೂ ಬೇರ್ಪಡಿಸಲಾಯಿತು. ಈ ಪ್ರತ್ಯೇಕೀಕರಣಕ್ಕೆ ಅಜ್ಞಾನವೇ ಕಾರಣ. ಯಜಮಾನಿಕೆ ವಹಿಸಿದ ಮತ್ತು ವಿಭಾಜಕವಾದ ಈ ವಿಶ್ವಾಜ್ಞಾನವನ್ನು ಪರಿಹರಿಸಿಕೊಳ್ಳಬೇಕು. ಅಂದರೆ ಪರಸತ್ಯದ ಮೂಲಕವೇ ನಿಜ ಸಾಮಶ್ರುತ್ಯದ, ಪರಿಪೂರ್ಣವಾದ, ಸುಖದ ಹಾದಿಯಿದೆ ಎಂದಾಯಿತು. ದಿವ್ಯಜ್ಯೋತಿಯಲ್ಲಿರುವ ಈ ಸುಖವೇ ಪ್ರೇಮದ ಆತ್ಯಂತಿಕ ಪರಿಪೂರ್ಣತೆಯಾಗಿದೆ. ಆದುದರಿಂದ ಮಾನವನಲ್ಲಿಯ ಸಂಕಲ್ಪವು ದಿವ್ಯವೂ ಪರಸತ್ಯಯುಕ್ತವೂ ("ಅಮೃತಃ ಋತಾವಾ") ಆದ ಮೇಲೆಯೇ ಮಾನವಕುಲದಲ್ಲಿ ನಾವು ಪಡೆಯಲೆಳಸುವ ಪೂರ್ಣತೆಯನ್ನು ಸಾಕ್ಷಾತ್ಕರಿಸಿಕೊಳ್ಳ ಬಹುದು.

ಆದುದರಿಂದ, ಅಗ್ನಿಯು ಮರ್ತ್ಯನಲ್ಲಿ ಜಾಗರಿತಪ್ರಜ್ಞನಾಗಬೇಕು. ಸ್ಫೂರ್ತಮಂತ್ರವು ಅವನನ್ನು ವ್ಯಕ್ತಪಡಿಸಬೇಕು. ಎಲ್ಲಿ, ಯಾತಕ್ಕೆ? ಯಜ್ಞದ ಈ ಸದ್ವಾರ ವೇದಿಕೆಯಲ್ಲಿ - ಅವನನ್ನು ದೃಢಪಡಿಸಲು.

"ಹೇಗೆ ನಾವು ಅಗ್ನಿಗಾಹುತಿ ಹಾಕಬೇಕು" ಎಂದು ಕೇಳುತ್ತಾನೆ ಋಷಿ. "ದಾಶೇಮ" ಎಂದರೆ ವಿತರಣ ಎಂದರ್ಥ. ಆ ಅಕ್ಷರಾರ್ಥದಂತೆ ಅದರ ವ್ಯಾಖ್ಯೆಯು ಯಾಜ್ಞಿಕ ದಾನವೆಂದಾಗುತ್ತದೆ ; ಸೂಕ್ಷ್ಮನೋಟ ಎಂಬ ಒಳ ಅರ್ಥದ ಸಂಪರ್ಕ ಅದಕ್ಕಿದೆ. ಯಜ್ಞವು ಮಾನವಚರ್ಯೆಗಳ ವಿತರಣದ ವ್ಯವಸ್ಥೆ ಮತ್ತು ವಿವಿಧ ವೈಶ್ವತ್ರಿಕ ದೇವತೆಗಳ ಭೋಗಕ್ಕಾಗಿ ಮಾಡುವಂಥದು. ಯಾವ ಯಾವ ವೈಶ್ವತ್ರಿಕ ದೇವತೆಗಳ ಕಾರ್ಯಕ್ಷೇತ್ರಕ್ಕೆ ಯಾವ ಮಾನುಷ ಚಟುವಟಿಕೆಗಳು ಸೇರುತ್ತವೆಯೋ ಅದದಕ್ಕೆ ಅದದನ್ನು ಸಮರ್ಪಿಸಿಬಿಡುವುದು. ಆದುದರಿಂದ ಸೂಕ್ತಗಳು ಪ್ರತಿಸಲವೂ ಹವಿರ್ಭಾಗದ ಮಾತನ್ನೆತ್ತುತ್ತವೆ. ಸ್ವಕರ್ಮಗಳ ಸರಿಯಾದ ವ್ಯವಸ್ಥಾಪನ ಮತ್ತು ವಿತರಣ ಎಂಬುದೇ ಯಾಜ್ಞಿಕನೆದುರಿರುವ ಸಮಸ್ಯೆ. ಏಕೆಂದರೆ ಯಾಗವು ಯಾವಾಗಲೂ ವಿಧಿ ವಿಹಿತವೂ (ಕಾಯದೆಬದ್ಧವೂ) ದಿವ್ಯಾಜ್ಞಾನುಸಾರಿಯೂ (ಆಮೇಲೆ ಈ ಆಜ್ಞೆಗೆ = ಋತುವಿಗೆ ವಿಧಿ ಎಂಬರ್ಥ ಬಂದಿತು)ಆಗಿರಬೇಕು. ಮರ್ತ್ಯರಲ್ಲಿ ಪರಮವಿಧಿ ಮತ್ತು ಪರಮಸತ್ಯಗಳು ಆಡಳಿತ ನಡೆಸಬೇಕಾದರೆ ಸರಿಯಾದ ಯಾಜ್ಞಿಕ ವ್ಯವಸ್ಥಾಪನೆಯಾಗಬೇಕೆಂಬ ಸಂಕಲ್ಪವು ಅತ್ಯಂತ ಮುಖ್ಯವಾದುದು.

ಸರಿಯಾದ ಸಾಕ್ಷಾತ್ಕಾರವೊಂದೇ ಸಮಸ್ಯೆಗೆ ಪರಿಹಾರ. ಸರಿಯಾದ ಸಾಕ್ಷಾತ್ಕಾರವು ಸರಿಯಾದ ಪ್ರಬೋಧಕ ಮಂತ್ರದಿಂದಾಗುತ್ತದೆ. ಅಂಥ ಮಂತ್ರವಾವುದೆಂದರೆ ಋಷಿಗೆ ದಿವ್ಯ ವೈಶಾಲ್ಯದಿಂದ ಪ್ರೇಷಿತವಾದ ಸ್ಫೂರ್ತವಿಚಾರದ ಅಭಿವ್ಯಕ್ತಿ. ಆದುದರಿಂದ ಋಷಿಯು ಮತ್ತೆ ಕೇಳುತ್ತಾನೆ : "ಯಾವ ಮಂತ್ರವನ್ನು ಅಗ್ನಿಗೆ ಹೇಳಲಾಗುತ್ತದೆ." ಅಗ್ನಿ ದೃಢೀಕರಣದ, ಅಗ್ನಿ ಸಾಕ್ಷಾತ್ಕಾರದ, ಯಾವ ಶಬ್ದವನ್ನುಚ್ಚರಿಸಬೇಕು?

ಎರಡು ಶರ್ತಗಳನ್ನು (ಉಪಾಧಿಗಳನ್ನು) ಪೂರೈಸಬೇಕು. ಉಳಿದ ದೇವತೆಗಳು ಆ ಮಂತ್ರವನ್ನು ಒಪ್ಪಿರಬೇಕು - ಅಂದರೆ- ಅಂಥ ಮಂತ್ರವು ಪ್ರಕೃತಿಯಲ್ಲಿಯ ಯಾವುದಾದರೂ

ಸುಪ್ತ ಶಕ್ತಿಯನ್ನು ಹೊರತರಬೇಕು ಅಥವಾ ದಿವ್ಯಕಾರ್ಯಕರ್ತರು ಮಾನವಕುಲದ ಮೇಲುಮೇಲಿನ (ಕೃತಕ) ಪ್ರಜ್ಞೆಯಲ್ಲಿ ಅವತರಿಸುವಂತೆ ಪ್ರಚೋದಿಸುವ ಮತ್ತು ಆ ಕುಲದ ಕರ್ತವ್ಯಗಳನ್ನು ಪ್ರಕಟವಾಗಿ ಸ್ವೀಕರಿಸುವಂತೆ ಮಾಡಬಲ್ಲ ಸಾಕ್ಷಾತ್ಕಾರದ ಬೆಳಕನ್ನು ಶಬ್ದದೊಳಗೆ ತರಬಲ್ಲುದಾಗಿರಬೇಕು. ಅದು ಅಗ್ನಿಯ ದ್ವಿಪ್ರಕಾರದ ಸ್ವಭಾವವನ್ನು ಹೊರಪಡಿಸಿರುವಂಥದಾಗಿರಬೇಕು. ಅಗ್ನಿಯು ಉಜ್ವಲ ಜ್ವಾಲಾಪತಿ. "ಭಾಮ:" ಎಂದರೆ ಜ್ಞಾನದ ಬೆಳಕೆಂದೂ ಅರ್ಥ, ಕಾರ್ಯದ ಜ್ವಾಲೆ ಎಂದೂ ಅರ್ಥ. ಅಗ್ನಿಯು ದಿವ್ಯ ಬೆಳಕೂ ಹೌದು, ದಿವ್ಯ ಪ್ರಣೋದವೂ ಹೌದು.

ಮಂತ್ರವು ಬರುತ್ತದೆ : "ಯೋ ಮರ್ತ್ಯೇಷು ಅಮೃತಃ ಋತಾವಾ" ಮುಖ್ಯವಾಗಿ ಅಗ್ನಿಯು ಮರ್ತ್ಯರಲ್ಲಿ ಅಮರ್ತ್ಯನು. ಈ ಅಗ್ನಿಯ ಮೂಲಕವೇ ಅನಂತದ ಇತರ ವರ್ಚಸ್ವಿ ಮಕ್ಕಳು ದೇವತಾತತ್ವದ ಅವತಾರ ಹಾಗೂ ಸ್ವವಿಸ್ತಾರಗಳನ್ನೂ ಸಾಧಿಸಲುಬಲ್ಲರು. "ದೇವವೀತಿ, ದೇವತಾತಿ=ಅವತರಣ, ವಿಸ್ತರಣ;"[೧] ಯಾ ಅಭಿವ್ಯಂಜನ, ವ್ಯಾಪನ ; ಇದೇ ವಿಶ್ವದ ಮತ್ತು ಮಾನವನ ಯಜ್ಞದ ಪ್ರಕ್ರಿಯೆ ಹಾಗೂ ಧ್ಯೇಯ. ಏಕೆಂದರೆ ಅವನೇ ದಿವ್ಯ ಸಂಕಲ್ಪ- ಅದು ಎಲ್ಲವುಗಳಲ್ಲಿಯೂ ಯಾವಾಗಲೂ ಇದ್ದೇ ಇರುತ್ತದೆ; ಅದು ಯಾವಾಗಲೂ ನಾಶಮಾಡುತ್ತಿರುತ್ತದೆ, ರಚಿಸುತ್ತಿರುತ್ತದೆ ; ಯಾವಾಗಲೂ ಕಟ್ಟುತ್ತಲೂ ಪೂರ್ಣಗೊಳಿಸುತ್ತಲೂ ಹೋಗುತ್ತದೆ ; ವಿಶ್ವದ ಜಟಿಲ ಪ್ರಗಮನವನ್ನು ಎತ್ತಿ ಹಿಡಿಯುತ್ತಿರುತ್ತದೆ. ಮರಣ-ಪರಿವರ್ತನಗಳೆಲ್ಲವುಗಳ ಮೂಲಕವೂ ಸತತ ಮುಂಬರಿಯುತ್ತಿರುವುದು ಇದೊಂದೇ. ಇದು ಸತತವೂ ಅವಿನಾಭಾವಿಯಾಗಿ ಪರಸತ್ಯ ಸಂಪನ್ನವಾಗಿರುತ್ತದೆ. ಪ್ರಕೃತಿಯ ಕೊನೆಯ ಅಸ್ಪಷ್ಟೀಕರಣದಲ್ಲಿ, ಭೌತದ ಅತ್ಯಧಮ ಅಜ್ಞಾನದಲ್ಲಿ ಈ (ದೈವ) ಸಂಕಲ್ಪವೇ ಗುಪ್ತಜ್ಞಾನರೂಪದಿಂದ ಅಂಧಕಾಲೀಕೃತವಾದ ಈ ಕ್ರಿಯಾಶಕ್ತಿಗಳೆಲ್ಲವನ್ನೂ ಯಾಂತ್ರಿಕವಾಗಿ ದಿವ್ಯವಿಧಿಯನ್ನು ಅನುಸರಿಸುವಂತೆ ಒತ್ತಾಯಿಸುವಂಥದು-ಅದರ ಪ್ರಕೃತಿಯ ಸತ್ಯಕ್ಕೆ ಅಂಟಿಕೊಂಡಿರುವಂತೆ ಮಾಡುವಂಥದು. ಬೀಜಕ್ಕೆ ತಕ್ಕಂತೆ ಮರವು ಬೆಳೆಯುವಂತೆ ಮಾಡುವುದಿದು ; ಇದರಿಂದ ಪ್ರತಿಯೊಂದು ಕಾರ್ಯಕ್ಕೂ ತಕ್ಕಫಲ ದೊರಕುತ್ತದೆ. ಮಾನವನ ಅಜ್ಞಾನದ ಅಸ್ಪಷ್ಟತೆಯಲ್ಲಿ- ಈ ದಿವ್ಯ ಸಂಕಲ್ಪವೇ ಸಲಹೆ ನೀಡುವುದು ಮತ್ತು ನಿಯಂತ್ರಿಸುವುದು; ಈ ಅಜ್ಞಾನವಾದರೋ ಭೌತಿಕ ಪ್ರಕೃತಿಗಿಂತ ಕೆಳಮಟ್ಟದ್ದಾದರೂ ಅದಕ್ಕಿಂತ ಹೆಚ್ಚಿನದು, ಮಹತ್ತರವಾದದ್ದು. ಉಕ್ತ ದಿವ್ಯ ಸಂಕಲ್ಪವು ಅವನ ಕುರುಡುತನವನ್ನು ಅರಿತಿರುತ್ತದೆ, ಅವನ ಮನೋವಿಕಾರಗಳನ್ನೂ ತಿಳಿದಿರುತ್ತದೆ. ಆದುದರಿಂದ ಅವನಲ್ಲಿರುವ ವಿಶ್ವಾನೃತದ ವಕ್ರಚರ್ಯೆಗಳಿಂದ ವಿಶ್ವಸತ್ಯದ ಕ್ರಮವಿಕಾಸವನ್ನು, ಕ್ರಮಿಕ ಅಭಿವ್ಯಕ್ತಿಯನ್ನು ಇದು ಸಾಧಿಸುತ್ತದೆ. ಪ್ರಕಾಶಮಾನ ದೇವತೆಗಳಲ್ಲಿ ಏಕಾಕಿಯಾದ ಅಗ್ನಿಯು ಪ್ರಕಾಶಮಾನನಾಗಿ ಉಳಿದು, ಹಗಲಿನ ವೈಭವಕ್ಕೇನೂ ಕಡಿಮೆಯಿಲ್ಲದಂತೆ ರಾತ್ರಿಯ ಕತ್ತಲೆಯಲ್ಲಿ ಸಂಪೂರ್ಣದರ್ಶನ ಶಕ್ತಿಯುಳ್ಳವನಾಗಿ ಕೆಲಸ ಮಾಡುತ್ತಾನೆ. ಉಳಿದ ದೇವತೆಗಳೆಲ್ಲರೂ "ಉಷರ್‌ಬುಧಃ"=ಉಷೆಯೊಡನೆ ಎಚ್ಚರ ಹೊಂದಿ ಏಳುವವರು.

ಆದುದರಿಂದಲೇ ಅಗ್ನಿಯು ಯಜ್ಞದ ಆಹುತಿಯ ಪುರೋಹಿತನು. ಯಜ್ಞಕ್ಕೆ ತಕ್ಕ ಅತಿಬಲ ಸಂಪನ್ನ, ಅತ್ಯುಚಿತ ಆಮಂತ್ರಕ-ಸರ್ವಶಕ್ತ-ಯಾವಾಗಲೂ ಪರಸತ್ಯದ ನಿಯಮವನ್ನು

೧. M.M. Milliams ದೇವವೀತಿ = a feast or enjoyment for the gods.
ದೇವತಾತಿ = divine service. - ಅನುವಾದಕ.

ಪಾಲಿಸುವಂಥವನು. ಹವ್ಯವು ಯಾವಾಗಲೂ ಕರ್ಮವನ್ನು ಸೂಚಿಸುತ್ತದೆ ಎಂಬುದನ್ನು ನಾವು ನೆನಪಿಟ್ಟುಕೊಳ್ಳಬೇಕು ಮತ್ತು ಮನದ ಯಾ ದೇಹದ ಪ್ರತಿಯೊಂದು ಕಾರ್ಯವೂ ವಿಶ್ವಾತ್ಮನಿಗೂ ವೈಶ್ವತ್ರಿಕ ಉದ್ದೇಶಕ್ಕೂ ನಮ್ಮ ಸಂಪತ್ತನ್ನು ಸಲ್ಲಿಸುವ ಕೆಲಸ (ಸೇವೆ). ದಿವ್ಯ ಸಂಕಲ್ಪ ಸ್ವರೂಪನಾದ ಅಗ್ನಿಯು ಮಾನವ ಸಂಕಲ್ಪದ ಕೆಲಸಗಳ ಹಿಂದಿರುವ ದೇವತೆ ಎಂದು ಭಾವಿಸಲಾಗಿದೆ. ಪ್ರಜ್ಞಾತ ಆಹುತಿಯಲ್ಲವನು ಮುನ್ನಿಲ್ಲುತ್ತಾನೆ. ಅವನು ಮುಂದಿಡಲ್ಪಟ್ಟ (ಪುರೋಹಿತ) ಹೋತೃ ಅವನು ಆಹುತಿ ಕಾರ್ಯವನ್ನು ನಿರ್ದೇಶಿಸುವುದಲ್ಲದೆ ಅದರ ಪರಿಣಾಮಕತೆಯನ್ನು ನಿರ್ಧರಿಸುತ್ತಾನೆ.

ಈ ಸ್ವಯಂನಿರ್ದೇಶಿತ ಸತ್ಯದಿಂದ, ವಿಶ್ವದಲ್ಲಿ ತಪ್ಪಿಲ್ಲದೆ ಸಾಗುವ ಸಂಕಲ್ಪ ಶಕ್ತಿಯಾಗಿ ಕೆಲಸ ಮಾಡುವ ಈ ಜ್ಞಾನದಿಂದ, ಅಗ್ನಿಯು ಮರ್ತ್ಯರಲ್ಲಿ ದೇವತೆಗಳನ್ನು ರೂಪಿಸುತ್ತಾನೆ. ಮೃತ್ಯು ಮುಖಗತವಾದ ಶರೀರದಲ್ಲಿ ಅವನು ದಿವ್ಯ ಸುಪ್ತಶಕ್ತಿಗಳನ್ನು ಪ್ರಕಟಿಸುತ್ತಾನೆ. ಅವುಗಳನ್ನವನು ಪರಿಣಾಮಕರ ವಾಸ್ತವಿಕತೆಗೂ ಪೂರ್ಣತೆಗೂ ಒಯ್ಯುತ್ತಾನೆ. ಅವನು ನಮ್ಮಲ್ಲಿ ಅಮರರ ಪ್ರಕಾಶಮಾನ ರೂಪಗಳನ್ನು ಹುಟ್ಟಿಸುತ್ತಾನೆ.

ನಮ್ಮ ಅಜ್ಞಾನದಲ್ಲಿ ನಾವು ಸ್ವರ್ಗೋನ್ಮುಖ ಪ್ರೇರಣೆಯನ್ನು ಪ್ರತಿಭಟಿಸುತ್ತೇವೆ ; ನಮ್ಮ ಕರ್ಮಗಳನ್ನು ಅಹಂಕಾರಿಕ ಜೀವನಕ್ಕೆ ಅರ್ಪಿಸುವ ಅಭ್ಯಾಸವನ್ನು ಬೆಳೆಸಿಕೊಂಡಿರುತ್ತೇವೆ ; ಇನ್ನೂ ನಾವು ದಿವ್ಯಸಮರ್ಪಣವನ್ನು ಮಾಡಲಾರದವರಾಗಿಯೇ ಉಳಿದಿದ್ದೇವೆ. ಹೀಗಿದ್ದರೂ ವಿಶ್ವಶಕ್ತಿ ಸ್ವರೂಪನಾದ ಅಗ್ನಿಯು ಇಂಥ ದಂಗೆಕೋರತನದ ಮಾನವ್ಯ ಸಾಮಗ್ರಿಯ ಮೇಲೆ ಕುಳಿತು ದುಡಿಯುತ್ತಾ, ಮೇಲೆ ಹೇಳಿದಂತೆ, ನಮ್ಮಲ್ಲಿ ದೇವತೆಗಳನ್ನು ನಿರ್ಮಿಸುತ್ತಾನೆ. ಆದರೆ ಅವನು ಮಾಡುವ ಈ ದೇವತಾಸೃಷ್ಟಿಕಾರ್ಯವು ನಮ್ಮ ಅಹಂಭಾವ ಪರಿತ್ಯಾಗಕ್ಕೆ ತಕ್ಕ ಅನುಪಾತದಲ್ಲಿರುತ್ತದೆ. ಆದುದರಿಂದ ನಾವು ನಮ್ಮ ಅಹಂಭಾವವನ್ನು ದೇವತಾಧೀನಗೊಳಿಸುವುದುನ್ನು ಕಲಿಯಬೇಕು ; ವಿಶ್ವಾತ್ಮನಿಗೆ ಪ್ರತಿಯೊಂದು ಕಾರ್ಯದಲ್ಲೂ ಮಣಿಯುವಂತೆ ಮಾಡಬೇಕು ; ಅದರ ಅತ್ಯಲ್ಪ ಚಲನೆಯಲ್ಲೂ ಆ ಸರ್ವೋಚ್ಚ ಸತ್ತಾತ್ಮಕ ಪರಮಾತ್ಮನ ದಿವ್ಯ ಸಂಕಲ್ಪವನ್ನು ಪ್ರಜ್ಞಾತವಾಗಿ (ಬುದ್ಧಿಪೂರ್ವಕವಾಗಿ) ಅದು ಸೇವೆ ಸಲ್ಲಿಸುವಂತೆ ಅದನ್ನು ಒತ್ತಾಯಿಸಬೇಕು. ಇದರಿಂದ ಅಗ್ನಿಯೇ ಸ್ವತಃ ನಮ್ಮಲ್ಲಿ ರೂಹುದಾಳುತ್ತಾನೆ. ಆಗ ದಿವ್ಯ ಸಂಕಲ್ಪವು ಮಾನವ ಮನದಲ್ಲಿ ಉಪಸ್ಥಿತವಾಗಿ ಅದನ್ನು ದಿವ್ಯಜ್ಞಾನದಿಂದ ಪ್ರಬುದ್ಧಗೊಳಿಸುತ್ತದೆ. ಹೀಗೆ ಮಹಾದೇವತೆಗಳನ್ನು ತನ್ನ ದುಡಿಮೆಯಿಂದ ಮನುಷ್ಯನು ರೂಪಿಸುತ್ತಾನೆ ಎಂದು ಹೇಳಲು ಸಾಧ್ಯವಾಗಿದೆ.

"ಅಕೃಣುದ್ಧಂ" ಎಂಬುದಿಲ್ಲಿ ಬಳಸಲಾದ ಸಂಸ್ಕೃತದ ಮಾತು. "ಆ" ಎಂಬ ಉಪಸರ್ಗದಿಂದ ಹೊರಗಿನ ಯಾವುದೋ ಒಂದನ್ನು ಒಳಗೆಳೆದುಕೊಂಡು ನಮ್ಮ ಪ್ರಜ್ಞೆಯಲ್ಲಿ ಅದನ್ನು ರೂಪಿಸುವುದು ಎಂಬ ಅರ್ಥವು ಹೊರಡುತ್ತದೆ. "ಆ ಕೃ" ಎಂಬುದು ತತ್ಪೂರಕ ಅರ್ಥವುಳ್ಳ "ಆ ಭೂ" ಎರದು ದೇವತೆಗಳ ಬಗೆಗೆ ಬಳಸಿದ ಮಾತಿಗೆ ಹೊಂದುತ್ತದೆ : ದೇವತೆಗಳು ಮರ್ತ್ಯರ ಹತ್ತಿರ ಬಂದಾಗ ಮಾನವರ ಆಕಾರದಲ್ಲಿ ಹೊಕ್ಕು ಅವರಲ್ಲಿ ರೂಪ ತಾಳುತ್ತಾರೋ ಏನೋ ಎಂಬಂಥ ಅರ್ಥ ಉಂಟಾಗಿದೆ. ವಿಶ್ವಶಕ್ತಿಗಳು ವಿಶ್ವದಲ್ಲಿದ್ದು ಕೆಲಸ ಮಾಡುತ್ತವೆ. ಮಾನವನು ಅವುಗಳನ್ನು ತನ್ನ ಮೈಮೇಲೆ ತೆಗೆದುಕೊಂಡು ತನ್ನ ಪ್ರಜ್ಞೆಯಲ್ಲಿ ಅವರ ಪ್ರತಿಮೆಗಳನ್ನು ರೂಪಿಸಿಕೊಂಡು ಸರ್ವೇಶ್ವರನು

(ಸರ್ವಾಧಿಕಸತ್ತಾಪ್ರಜ್ಞೆಯ ಶಕ್ತಿಯು) ತನ್ನ ದಿವ್ಯ ರೂಪಗಳಲ್ಲೂ ಲೋಕಶಕ್ತಿ[೧]ಗಳಲ್ಲೂ ಉಸಿರಾಡಿಸಿ ತುಂಬಿದ ಜೀವವನ್ನೂ ಶಕ್ತಿಯನ್ನೂ ಆ ಪ್ರತಿಮೆಗಳಿಗೆ ಕೊಡುತ್ತಾನೆ-ಅವುಗಳಲ್ಲಿ ಆವಾಹಿಸುತ್ತಾನೆ.

ಈ ಪ್ರಕಾರ, ಮರ್ತ್ಯನಲ್ಲಿ ಅಗ್ನಿಯು ಉಪಸ್ಥಿತನೂ ಪ್ರಜ್ಞಾಯುಕ್ತನೂ ಆಗಿರುವಾಗ ಅವನು ಸ್ವಗೃಹದ[೨] ಯಜಮಾನ (ಒಡೆಯ) ನೆಂದೆನ್ನಿಸುತ್ತಾನೆ. ಆಗ ಅಗ್ನಿಯು ತನ್ನ ನಿಜವಾದ ದಿವ್ಯತೆಯ ಸ್ವಭಾವದಿಂದ ದೃಷ್ಟನಾಗುತ್ತಾನೆ. ನಾವು ಅಜ್ಞರಾಗಿ ಪರಸತ್ಯದ ಹಾಗೂ ಪರಮತದ (ವಿಧಿಯ, ಕಾಯದೆಯ, ನೀತಿಕ್ರಮದ) ವಿರುದ್ಧವಾಗಿ ದಂಗೆಯೆದ್ದರೆ, ನಮ್ಮ ವಿಕಾಸಕ್ಕೆ ಎಡರುಂಟಾದಂತಾಗಿ ನೋವು, ನರಳಿಕೆಗಳ, ಗೊಂದಲ, ಗಲಿಬಿಲಿಗಳ ಒಂದು ಮೆಟ್ಟಿಲಿಂದ ಇನ್ನೊಂದು ಮೆಟ್ಟಿಲಿಗೆ ಕೆಳಮುಖವಾಗಿ ಜಾರುತ್ತಾ ಹೋಗುತ್ತೇವೆ. ಪರಸತ್ಯಕ್ಕೆ ಸತತ ವಶವರ್ತಿಯಾದರೆ, ಅದಕ್ಕೆ ಸರ್ವಸಮರ್ಪಣೆ ಮಾಡಿದರೆ,("ನ ಮೋಘಃ"), ಆ ದಿವ್ಯ ಸಂಕಲ್ಪದ ಪ್ರತಿಮೆಯನ್ನು ನಮ್ಮಲ್ಲಿಯೇ ನಾವು ನಿರ್ಮಿಸಿಕೊಳ್ಳುತ್ತೇವೆ. ಅದು ತದ್ವಿರುದ್ಧವಾಗಿ ಶಾಂತಿಪೂರ್ಣವಾಗಿರುತ್ತದೆ ; ಏಕೆಂದರೆ ಅದಕ್ಕೆ ಪರಸತ್ಯದ ಹಾಗೂ ಪರವಿಧಿಯ ಆಶ್ವಾಸನವು ದೊರಕಿರುತ್ತದೆ. ವಿಶ್ವಜನೀನ ವಿವೇಕಕ್ಕೆ ಶರಣಾಗತರಾದುದರಿಂದ ಜೀವಗಳ[೩] ಸಮಾನತೆ ಸ್ಪಷ್ಟವಾಗಿ ಅದರಿಂದ ನಮಗೆ ಶಾಂತಿ ಸಮಾಧಾನಗಳು ದೊರಕುತ್ತವೆ.ಆ ವಿವೇಕವು ನಮ್ಮ ಎಲ್ಲ ಹೆಜ್ಜೆಗಳನ್ನೂ ಪರಸತ್ಯದ ನೇರ ದಾರಿಗಳಲ್ಲಿ ಕರೆದೊಯ್ಯುವುದರಿಂದ, "ದುರಿತಾನಿ"-ಎಲ್ಲ ಎಡರು-ತೊಡರುಗಳನ್ನೂ ನಾವು ದಾಟುತ್ತೇವೆ.

ಅಷ್ಟೇ ಅಲ್ಲದೆ, ನಮ್ಮ ಮಾನವತೆಯಲ್ಲಿ ಅಗ್ನಿಯು ಜಾಗರಿತನಾಗಿರುವಾಗ ನಮ್ಮಲ್ಲಾಗುವ ದೇವತಾಸೃಷ್ಟಿಯು ದೇವಾವತಾರದಷ್ಟೇ ಸತ್ಯವಾದೀತಲ್ಲದೆ, ಅದೆಂದೂ ಪ್ರಚ್ಛನ್ನ ಬೆಳವಣಿಗೆ-ಯಾಗಲಾರದು. ಒಳಗಿರುವ ಸಂಕಲ್ಪಕ್ಕೆ ಅತಿಶಯಿಸುತ್ತಿರುವ ದೈವೀಶಕ್ತಿಯ ಅರಿವು ಮೂಡುತ್ತದೆ; ಅದು (ವಿಕಾಸ) ಪ್ರಕ್ರಿಯೆಗೆ ಅವಧಾನವೀಯುತ್ತದೆ, ಬೆಳವಣಿಗೆಯ ಗೆರೆಗಳನ್ನು ಕಾಣುತ್ತದೆ. ಬುದ್ಧಿವಂತಿಕೆಯಿಂದ ನಿರ್ದೇಶಿತವಾದ ಹಾಗೂ ವಿಶ್ವಶಕ್ತಿಗಳಿಗೆ ಭಕ್ತಿಪೂರ್ವಕ ವಿಧೇಯವಾಗಿರುವಾಗ, ಮಾನವನ ಕರ್ಮವು ಯಾಂತ್ರಿಕವಾಗದೆ, ಅವಶವಾಗದೆ, ಅಪೂರ್ಣಾಹುತಿಯಾಗದೆ, ಉಳಿಯುತ್ತದೆ. ಚಿಂತನಶೀಲವೂ ಸಾಕ್ಷಿಶೀಲವೂ ಆದ ಮನಸ್ಸು ಭಾಗವಹಿಸಿ ಯಾಜ್ಞಿಕ ಸಂಕಲ್ಪಕ್ಕೆ ಸಾಧನವಾಗುತ್ತದೆ.

ಅಗ್ನಿಯು ಪ್ರಜ್ಞಾತ ಪರಾಸತ್ತೆಯ ಶಕ್ತಿ, ನಾವದನ್ನು ಸಂಕಲ್ಪ ಎನ್ನುತ್ತೇವೆ ; ಅದು ಮನ-ದೇಹಗಳ ಕ್ರಿಯೆಗಳ ಹಿಂದೆ ನಿಂತು ಅವುಗಳನ್ನು ಪರಿಣಾಮಕರಗಳನ್ನಾಗಿ ಮಾಡುತ್ತದೆ. ಅಗ್ನಿಯು ನಮ್ಮ ಅಂತರ್ಗತನಾದ ಬಲಿಷ್ಠ ದೇವತೆ ("ಮರ್ಯಃ"=ಬಲಿಷ್ಠ, ಗಂಡಸುತನವುಳ್ಳ). ಎದುರುಬೀಳುವ ಎಲ್ಲ ಶಕ್ತಿಗಳ ವಿರುದ್ಧವಾಗಿಯೂ ಅವನು ತನ್ನ ಬಲವನ್ನು ನಿಲ್ಲಿಸುತ್ತಾನೆ. ಅವನು ಜಾಡ್ಯಕ್ಕೆ ಎಡೆಗೊಡನು, ಹೃದಯದ ಮತ್ತು ಪ್ರಣೋದದ ಎಲ್ಲ ಸೋಲುಗಳನ್ನೂ ಓಡಿಸುತ್ತಾನೆ; ಗಂಡಸುತನದ ಕೊರತೆಯತ್ತ ತುಚ್ಛೀಕರಿಸುವ ದೃಷ್ಟಿಯಿಂದ ನೋಡುತ್ತಾನೆ. ಅಪರಿಣಾಮಕರವಾದ ವಿಚಾರ ಯಾ ಆಕಾಂಕ್ಷೆಯಾಗಿ ಉಳಿಯಬಹುದಾದ ಎಲ್ಲವನ್ನೂ ಅಗ್ನಿಯು ವಾಸ್ತವೀಕರಿಸುತ್ತಾನೆ. ಅವನು ಯೋಗ ಸಾಧಕ ("ಸಾಧು"), ಅವನು ದಿವ್ಯ ಕಮ್ಮಾರ, ತನ್ನ ಕುಲುಮೆಯಿಂದ ದುಡಿಯುತ್ತಿರುತ್ತಾನೆ,

---

೧. ಹಿಂದು ವಿಗ್ರಹಾರಾಧನೆಯ ಸಿದ್ಧಾಂತವೂ ಅರ್ಥವೂ ನಿಜವಾಗಿ ಇದೇ ಆಗಿದೆ ; ವೈದಿಕ ಮಹಾ ಸಂಕೇತಗಳ ಭೌತಿಕ ರೂಪಗಳೇ ಈ ಪ್ರತಿಮೆಗಳು, ವಿಗ್ರಹಗಳು.

೨. ಗೃಹಪತಿ ; ಹಾಗೂ ವಿಶ್ಪತಿ = ಪ್ರಾಣಿಯಲ್ಲಿರುವ ಒಡೆಯ ಯಾ ದೊರೆ.

೩. ಗೀತೋಕ್ತ ಸಮತೆ

ನಮ್ಮ ಪೂರ್ಣತೆಗಾಗಿ ಕೊಡತಿಗೆಯಿಂದ ಬಡಿಯುತ್ತಿರುತ್ತಾನೆ. ಇಲ್ಲಿ ಇವನನ್ನು ಸರ್ವೇಶ್ವರನ ಸಾರಥಿಯಾಗುವನೆಂದು ಹೇಳಲಾಗಿದೆ. "ಇನ್ನೊಬ್ಬನ[೧] ಪ್ರಜ್ಞೆಯಲ್ಲಿ ಚಲಿಸುವ ಮತ್ತು ತನ್ನ ಪೂರ್ಣತೆಯನ್ನು ಕಾಣುವ" ಆ ಸರ್ವೇಶ್ವರನೂ ಅದ್ಭುತನೂ[೨] ಆದ ಪರಮಸತ್ಯ ಸ್ವರೂಪನು ಆ ಚಲನವನ್ನು ಫಲಿಸುತ್ತಾನೆ. ಯಾವುದರಿಂದ? ತನ್ನ ಚಟುವಟಿಕೆಗಳನ್ನು ಹೊತ್ತಿರುವ ಕಡಿವಾಣಗಳನ್ನು ಹಿಡಿದಿರುವಂಥ, ಈ ಅಗ್ನಿಶಕ್ತಿಸ್ವರೂಪದ ಸಾರಥಿಯಿಂದ. ಮಿತ್ರನೂ, ಪ್ರೇಮಾಧಿಪತಿಯಾಗಿ, ತೇಜೋಧಿಪತಿಯಾಗಿ, ಅಗ್ನಿಯಂತೆಯೇ ಸಾರಥ್ಯ ವಹಿಸುತ್ತಾನೆ. ಪ್ರತಿಭಾತ ಪ್ರೇಮವು ದಿವ್ಯ ಪಥಚಲನದ ಗುರಿಯಾದ ಸಾಮಶ್ರುತ್ಯವನ್ನು ಫಲಿತಗೊಳಿಸುತ್ತದೆ. ಆದರೆ ಅಗ್ನಿಸ್ವರೂಪದ ಸಂಕಲ್ಪ ಹಾಗೂ ತೇಜಸ್ಸುಗಳ ಒಡೆಯನ ಶಕ್ತಿಯೂ ಅಗತ್ಯ. ಪ್ರಣೋದವೂ ಪ್ರೇಮವೂ ಸಂಯುಕ್ತವಾಗಿ ಜ್ಞಾನದಿಂದ ಜ್ಯೋತಿರ್ಮಯವಾದರೆ ಜಗತ್ತಿನಲ್ಲಿ ದೇವನನ್ನು ಸಫಲಗೊಳಿಸುತ್ತವೆ.

ಸಂಕಲ್ಪವು ಮೊದಲ ಅವಶ್ಯಕತೆ - ಅದೇ ಮುಖ್ಯವಾದ ಕಾರ್ಯಕರ ಪ್ರಣೋದವು. ಆದುದರಿಂದ, ಆ ಮಹಾಧ್ಯೇಯದತ್ತ ಮರ್ತ್ಯ ಕುಲವು ಪ್ರಜ್ಞಾತವಾಗಿ ಹೊರಳಿದಾಗ ಮತ್ತು ತಮ್ಮ ಸಮೃದ್ಧ ಕಾರ್ಯಾರ್ಹತೆಗಳನ್ನು ಸ್ವರ್ಗಸುತರಿಗೆ ಆಹುತಿ ಕೊಟ್ಟಾಗ ಮತ್ತು ತಮ್ಮಲ್ಲೇ ದಿವ್ಯತತ್ತ್ವವನ್ನು ರೂಪಿಸಿಕೊಳ್ಳಲು ಬಯಸಿದಾಗ - ಅವರು ಮೊಟ್ಟ ಮೊದಲಿಗನೂ ಮುಖ್ಯನೂ ಆದ ಅಗ್ನಿಯತ್ತ ತಮ್ಮ ಸಾಕ್ಷಾತ್ಕಾರ ವಿಚಾರವನ್ನು ಎತ್ತಿ ಹಿಡಿದು ರಚನಾತ್ಮಕ (ಸರ್ಜನಾತ್ಮಕ) ಶಬ್ದವನ್ನು (ಮಂತ್ರವನ್ನು) ರಚಿಸುತ್ತಾರೆ. ಏಕೆಂದರೆ ಅವರು ಆರ್ಯರು-ಕೆಲಸ ಮಾಡುವವರು ಮತ್ತು ಪ್ರಯತ್ನವನ್ನು ಸ್ವೀಕರಿಸುವವರು. ಆ ಕೆಲಸವಾದರೋ ಎಲ್ಲ ಕೆಲಸಗಳಿಗಿಂತಲೂ ವಿಸ್ತಾರವಾದುದು ; ಆ ಪ್ರಯತ್ನವಾದರೋ ಎಲ್ಲ ಪ್ರಯತ್ನಗಳಿಗಿಂತಲೂ ಹೆಚ್ಚಿನ ಘನೋದ್ದೇಶವುಳ್ಳದ್ದು ; ಮತ್ತು ಅಗ್ನಿಯು ಕರ್ಮವನ್ನು ಸ್ವೀಕರಿಸಿದವನು ಮತ್ತು ಕರ್ಮದಿಂದ ಉದ್ದೇಶವನ್ನು ಪೂರ್ತಿಗೊಳಿಸುವವನು. ದಿವ್ಯಸಂಕಲ್ಪವಿಲ್ಲದವನು, ಅಂಥ ಸಂಕಲ್ಪದ ಮೂಲಕ ದುಡಿಯದವನು, ಕೆಲಸ ಮಾಡದವನು ಗೆಲ್ಲದವನು, ನರಳದವನು ಮತ್ತು (ಅಂತ್ಯ) ಜಯ ಹೊಂದದವನು ಎಂಥ ಆರ್ಯನು?

ಆದುದರಿಂದ ಈ ಅಗ್ನಿ ಸ್ವರೂಪದ ಸಂಕಲ್ಪವೇ ಪ್ರಯತ್ನವನ್ನು ನಾಶಗೊಳಿಸಲು ನಿಯುಕ್ತವಾದ ಎಲ್ಲ ಪ್ರಣೋದಗಳನ್ನು ನುಚ್ಚುನೂರು ಮಾಡುವಂಥದಾಗಿದೆ. ದೇವ ಪ್ರಭಾವಗಳಲ್ಲೆಲ್ಲಾ ಅಗ್ನಿ ಪ್ರಭಾವವೇ ಅತ್ಯಂತ ಬಲಿಷ್ಠವಾದುದು ; ಅದರಲ್ಲೇ ಸರ್ವೇಶ್ವರನಾದ ಪುರುಷೋತ್ತಮನು ಪ್ರತಿಮಿತನಾಗಿರುವುದು - ಈ ಮಾನುಷ ಪಾತ್ರೆಗಳಲ್ಲಿ ಆ ಮೂಲಕವೇ ಪರಮಪುರುಷನು ತನ್ನ ಉಪಸ್ಥಿತಿಯನ್ನು ಅನುಗ್ರಹಿಸಬೇಕು. ಅಲ್ಲಿ ಅದು ಮಾನವ್ಯ ಮನವನ್ನು ಯಜ್ಞಸಾಧನವನ್ನಾಗಿ ಮಾಡಿಕೊಳ್ಳುತ್ತದೆ ಮತ್ತು ಕೇವಲ ತನ್ನ ಉಪಸ್ಥಿತಿಯಿಂದ ಆ ಸ್ಫೂರ್ತವೂ ಸಾಕ್ಷಾತ್ಕಾರಕಾಲಿಯೂ ಆದ ಶಬ್ದಗಳನ್ನು (ಮಂತ್ರಗಳನ್ನು) ಪ್ರಕಟವಾಗುವಂತೆ ಮಾಡುತ್ತದೆ. ಆ ಮಂತ್ರಗಳೇ ರಥದಂತೆ ದೇವತಾ ಸಂಚಾರಕ್ಕೆ ರಚಿತವಾದವುಗಳಾಗುತ್ತವೆ. ಅವು ನಮ್ಮ ಜಾಗರಿತ ಪ್ರಜ್ಞೆಯಲ್ಲಿ ರೂಹುದಾಳುವ ದಿವ್ಯ ಶಕ್ತಿಗಳಿಗೆ (ದೇವತೆಗಳಿಗೆ) ಅವಕಾಶ ಮಾಡಿಕೊಡುತ್ತವೆ. ಆ ದಿವ್ಯ ಶಕ್ತಿಗಳ ಆಕಾರಗಳಾದರೋ ಧ್ಯಾನನಿಷ್ಠ ವಿಚಾರವು ಹೊರಪಡಿಸುವ ಜ್ಯೋತಿರ್ಮಯ ತಿಳುವಳಿಕೆಯಿಂದಾದಂಥವುಗಳು.

---

೧. ಋಗ್ವೇದ - I.170

೨. ಇಂದ್ರಾಗಸ್ತ್ಯರ ಸಂವಾದದಲ್ಲೂ ಅದ್ಭುತ ಎಂಬ ಶಬ್ದದ ಪ್ರಯೋಗವಿದೆ. - ಅನುವಾದಕ.

ಅನಂತರ ಇಂದ್ರ, ಅಶ್ವಿನಿಗಳು, ಉಷೆ, ಸೂರ್ಯ, ವರುಣ, ಮಿತ್ರ ಮತ್ತು ಅರ್ಯಮರಂಥ ಬಲಾಢ್ಯ ದೇವತೆಗಳು ಉದಾತ್ತ ಜೀವನದ ಸಮಗ್ರತೆಯನ್ನು (ಹೇರಳತನವನ್ನು) ತಮ್ಮೊಡನೆ ತೆಗೆದುಕೊಂಡು ಬಂದು, ತಮ್ಮ ಅತ್ಯಂತ ಪ್ರಕಾಶಮಾನವಾದ ಕಾರ್ಯಶಕ್ತಿಗಳ ಸಾಕಾರ ಸೃಷ್ಟಿಯ ವಿಸ್ತಾರವನ್ನು ಮಾನವನಲ್ಲಿ ತರಲಿ-ಮಾನವನಲ್ಲಿ ಹಾಗೆ ರೂಹುದಾಳಲಿ; ನಮ್ಮಲ್ಲಿ ಅವರ ಶ್ರೇಯಃ, ಸಮೃದ್ಧಿಯನ್ನು ಸೃಷ್ಟಿಸಲಿ ; ನಮ್ಮ ಗೂಢಸ್ಥಲಗಳಿಂದ ಅವರು ಅದನ್ನು ಹೊರಸುರಿಯಲಿ-ಅದರ ಹಗಲು ದಾರಿಯಲ್ಲದು ಉಪಯೋಗಕ್ಕೆ ಬರುವಂತಾಗಲಿ. ಮಾನಸವು ಅತ್ಯುಚ್ಚ ತೇಜಸ್ವಿಯಾಗಿ ಮಾರ್ಪಡುವವರೆಗೆ ಅದನ್ನು ಆ ದೇವತೆಗಳ ಪ್ರಚೋದನೆಗಳು ಮುಂದೆ ಮುಂದೆ ಒತ್ತುತ್ತಾ ಹೋಗಲಿ.

ಸೂಕ್ತ ಮುಗಿಯುತ್ತದೆ. ಈ ಪ್ರಕಾರ, ಸ್ಫೂರ್ತವಾಣಿಯಲ್ಲಿ ದಿವ್ಯಸಂಕಲ್ಪ ಸ್ವರೂಪನಾದ ಅಗ್ನಿಯು ಗೋತಮರ ಪವಿತ್ರ ಮಂತ್ರೋಚ್ಚಾರಣೆಯಿಂದ ದೃಢೀಕರಿಸಲ್ಪಡುತ್ತಾನೆ, ಅಭಿಜ್ಞಾತನಾಗುತ್ತಾನೆ. ಋಷಿಯು ತನ್ನ ಹಾಗೂ ತನ್ನ ಮನೆತನದ ಹೆಸರನ್ನು ಸಂಕೇತಪದವನ್ನಾಗಿ ಬಳಸುತ್ತಾನೆ. ಗೋ=ಪ್ರಕಾಶಮಾನ, ಗೋತಮ=ಪ್ರಕಾಶಮಯ. "ಗೋತಮೇಭಿರ್ ಋತಾವಾ"-ಕೆಳದರ್ಜೆಯ ಕಿರಣವಾದ ಈ ಜಗತ್ತಿನಲ್ಲಿ ಉಜ್ವಲ ಬುದ್ಧಿಯ ಪೂರ್ಣತೆಯನ್ನು ಉಳ್ಳವರಷ್ಟೇ ದಿವ್ಯಸತ್ಯದ ಒಡೆಯನನ್ನು ಸ್ವೀಕೃತನನ್ನಾಗಿಯೂ ದೃಢೀಕೃತನನ್ನಾಗಿಯೂ ಮಾಡಬಲ್ಲರು. "ವಿಪ್ರೇಭಿರ್ ಜಾತವೇದಾಃ" - ಶುದ್ಧ, ಸ್ವಚ್ಛ, ಅನಾವೃತ ಮನಸ್ಕರಲ್ಲಷ್ಟೇ ಭೌತ ಜಗತ್ತು ಯಾವವುಗಳಿಂದ ಹುಟ್ಟಿ, ತನ್ನ ಕಾರ್ಯಶಕ್ತಿಗಳನ್ನು ಬೆಂಬಲಿಸುವುದೋ ತನ್ನ ಹಿಂದೆಯೇ ಇರುವ ಆ ಮಹಾಸರ್ಗಗಳ ಸರಿಯಾದ ಜ್ಞಾನವು ಮೂಡಬಲ್ಲುದು. ವಿಪ್ರ=ಶುದ್ಧ, ಸ್ವಚ್ಛ, ಅನಾವೃತ ಮನಸ್ಸುಳ್ಳವನು.

ಅಗ್ನಿಯು ಜಾತವೇದಸ್=ಜನ್ಮಗಳನ್ನರಿತವನು, ಜಗಗಳನ್ನರಿತವನು. ಅವನು ಪಂಚ ಪ್ರಪಂಚಗಳನ್ನು ಸಂಪೂರ್ಣವಾಗಿ ಬಲ್ಲನು.[೧] ಅವನು ಸ್ವಪ್ರಜ್ಞೆಯಲ್ಲಿ ಈ ಪರಿಮಿತವೂ ಅಸ್ವತಂತ್ರವೂ ಆದ ಭೌತಿಕ ಸಾಮಥ್ರುತ್ಯಕ್ಕಷ್ಟೇ ಒಳಪಟ್ಟವನಲ್ಲ. ಮೂರು ಅತ್ಯುನ್ನತ ಸ್ಥಾನಗಳನ್ನೂ[೨] ಅವನು ಹೊಗಬಲ್ಲನು ; ಯೋಗ ಸಾಕ್ಷಾತ್ಕಾರ ಸ್ವರೂಪದ ಗೋವಿನ[೩] ಕೆಚ್ಚಲಿಗೂ ಅವನು ಹಕ್ಕುದಾರ, ನಾಲ್ಕು ಕೋಡಿನ ವೃಷಭನ[೪] ಐಶ್ವರ್ಯವನ್ನೂ ಅವನು ಬಳಸಬಲ್ಲನು. ಆ ಐಶ್ವರ್ಯದಿಂದ ಅವನು ಈ ಆರ್ಯ ಮುಮುಕ್ಷುಗಳಲ್ಲಿ (ಸಾಧಕರಲ್ಲಿ) ಪ್ರಬೋಧವು ಉದಯವಾಗುವಂತೆ ಪೋಷಿಸುವನು. ಅವರ ಸುಪ್ತಕೌಶಲ ಸಮೃದ್ಧಿಯನ್ನು ಹೆಚ್ಚಿಸುವನು. ಆ ಪೂರ್ಣತೆಯಿಂದ ಮತ್ತು ಸಮೃದ್ಧಿಯಿಂದ ಅವನು ಭಿನ್ನ ವಿಚಾರಗಳನ್ನು ಒಂದಾಗಿಸುವನು, ಭಿನ್ನ ಶಬ್ದಗಳನ್ನು (ಯಾ ಮಂತ್ರಗಳನ್ನು) ಒಂದಾಗಿಸುವನು - ಈ ಒಂದಾಗಿಸುವಿಕೆ ಎಷ್ಟರಮಟ್ಟಿಗೆ ಹೋಗುವುದೆಂದರೆ ಮಾನವ್ಯಬುದ್ಧಿಯು ಸಾಕಷ್ಟು ಸಮರ್ಥನ ಬಲಪುಷ್ಟವಾಗಿ (ಅಂತ್ಯದಲ್ಲಿ) ದಿವ್ಯ ಕಲ್ಪನೆಯಾಗಿ ಮಾರ್ಪಡುವುದು - ಎಂಬುದರವರೆಗೆ ಅಂದರೆ ಎಲ್ಲರೂ ತಾವು ಸರ್ವಾತ್ಮೈಕ್ಯ ಭಾವವಂತರೆಂದು ಅನುಭವತಃ ತಿಳಿದು ಬಾಳುವವರೆಗೆ - ಎಂದು ತಾತ್ಪರ್ಯ.

❖ ❖

---

೧. ಅನ್ನ, ಪ್ರಾಣ, ಮನ, ಸತ್ಯ, ಬ್ರಹ್ಮಾನಂದಗಳೇ ಮುಖ್ಯವಾದ ಕಾರ್ಯಶಕ್ತಿಗಳು ; ಅವುಗಳನ್ನು ಅನುಕ್ರಮವಾಗಿ ಭೂರ್, ಭುವರ್, ಸ್ವರ್, ಮಹಸ್ಸ್, ಜನ (ಜನಸ್) ಅಥವಾ ಮಯಸ್ ಎಂದು ಕರೆಯಲಾಗಿದೆ.

೨. ಸತ್=ದಿವ್ಯಜೀವನ, ಚಿತ್=(ಶುದ್ಧ)ಪ್ರಜ್ಞೆ, (ಪರಮ) ಆನಂದ=ಸಚ್ಚಿದಾನಂದ.

೩. ಅದಿತಿ=ಅನಂತಪ್ರಜ್ಞೆ= ಲೋಕಗಳ ಮಾತೆ

೪. ದಿವ್ಯ ಪುರುಷ=ಸಚ್ಚಿದಾನಂದ-ಮೂರು ಅತ್ಯುನ್ನತ ಸ್ಥಾನಗಳೂ (ನಿತ್ಯ) ಸತ್ಯವೂ ಅವನ ನಾಲ್ಕು ಕೋಡುಗಳು.

# V

# ಸೂರ್ಯ ಸವಿತೃ, ಸೃಷ್ಟಿಕರ್ತ ಮತ್ತು ಪೋಷಕ

## ಋಗ್ವೇದ V.81

**ಯುಜ್ಞತೇ ಮನ ಉತಯುಜ್ಞತೇ ಧಿಯೋ ।**
**ವಿಪ್ರಾ ವಿಪ್ರಸ್ಯ ಬೃಹತೋ ವಿಪಶ್ಚಿತಃ ।**
**ವಿಹೋತ್ರಾ ದಧೇ ವಯುನಾ ವಿದೇಕ ಇ- ।**
**ನ್ಮಹೀ ದೇವಸ್ಯ ಸವಿತುಃ ಪರಿಷ್ಟುತಿಃ ॥ ೧ ॥**

೧. ಪ್ರಬುದ್ಧ ಮನುಷ್ಯರು ತಮ್ಮ ಮನವನ್ನು ನೊಗಕ್ಕೆ ಕಟ್ಟುತ್ತಾರೆ ಮತ್ತು ತಮ್ಮ ವಿಚಾರಗಳನ್ನು ಯಾವನು ಸ್ವತಃ ಪ್ರಬೋಧನೋ ಸ್ವತಃ ವಿಸ್ತಾರ ಸ್ವರೂಪನೋ ಮತ್ತು ಸ್ವತಃ ನೋಡಬಲ್ಲನೋ(ಅಪರೋಕ್ಷಾನುಭೂತಿ ಸಂಪನ್ನನೋ) ಅವನ ನೊಗಕ್ಕೆ ಕಟ್ಟುತ್ತಾರೆ. ಎಲ್ಲಾ ಪ್ರಾಕೃತಿಕ ಘಟನೆಗಳನ್ನೂ ತಿಳಿದುಕೊಂಡು ಆತನು ಒಬ್ಬನೇ ಒಬ್ಬನಾಗಿ ಯಜ್ಞದ ಕ್ರಿಯಾಶಕ್ತಿಗಳಿಗೆ ಆಜ್ಞಾಪಿಸುತ್ತಾನೆ. ಸವಿತಾರನ ಎಲ್ಲ ವಸ್ತುಗಳ ದೃಢೀಕರಣವು ಬಹು ವಿಸ್ತಾರವಾದುದು-ಅವನು ದಿವ್ಯಸೃಷ್ಟಿಕರ್ತ.

**ವಿಶ್ವಾರೂಪಾಣಿ ಪ್ರತಿ ಮುಞ್ಚತೇ ಕವಿಃ ।**
**ಪ್ರಾಸಾವೀದ್ ಭದ್ರಂ ದ್ವಿಪದೇ ಚತುಷ್ಪದೇ ।**
**ವಿನಾ ಕಮಖ್ಯತ್ ಸವಿತಾ ವರೇಣ್ಯೋ ।**
**ಅನು[೧] ಪ್ರಯಾಣಮುಷಸೋ ವಿರಾಜತಿ ॥ ೨ ॥**

೨. ದ್ರಷ್ಟಾರನಾದ ಆತನು ಎಲ್ಲ ಆಕೃತಿಗಳನ್ನೂ ತನ್ನಲ್ಲಿ ತೆಗೆದುಕೊಳ್ಳುತ್ತಾನೆ. ಮತ್ತು ಅವುಗಳಿಂದ ಅವನು ದ್ವಿಧಾ ಸತ್ತೆಗೂ ಚತುರ್ಧಾಸತ್ತೆಗೂ ಒಳಿತಾಗುವಂಥದನ್ನು ಸೃಷ್ಟಿಸುತ್ತಾನೆ. ಅತ್ಯುಚ್ಚ ಶುಭರೂಪನಾದ ಆ ಸೃಷ್ಟಿಕರ್ತನು ಸ್ವರ್ಗವನ್ನು ಇಡಿಯಾಗಿ ಅಭಿವ್ಯಂಜಿಸಿ (ವ್ಯಾಕರಿಸಿ) ಉಷೆಯ ಹಿಂದೆ ಹೆಜ್ಜೆಯಿಟ್ಟು ಅವನು ನಡೆಯುವಾಗ ಅವನ ಬೆಳಕು ವಿಶ್ವವ್ಯಾಪಕವಾಗುತ್ತದೆ.

---

೧. ಇದನ್ನು ಅವಗ್ರಹವೆಂದು ತಿಳಿಯಬೇಕು. ಅಕಾರವನ್ನು ನುಂಗಿದರೆ ಛಂದೋಭಂಗವಾಗುತ್ತದೆ ಛಂದಸ್ಸೆಂದರೇ ವೇದ ; ಅದರಲ್ಲಿ ಛಂದೋಭಂಗ ಮಾಡಲು ನಮಗೆ ಹಕ್ಕಿಲ್ಲ-ಅನುವಾದಕ

**ಯಸ್ಯ ಪ್ರಯಾಣ ಮನ್ವನ್ಯ[೧] ಇದ್ಯಯುರ್ ॥**
**ದೇವಾ ದೇವಸ್ಯ ಮಹಿಮಾನಮೋಜಸಾ ।**
**ಯಃ ಪಾರ್ಥಿವಾನಿ ವಿಮಮೇ ಸ ಏತಶೋ**
**ರಜಾಂಸಿ ದೇವಃ ಸವಿತಾ ಮಹಿತ್ವನಾ ॥ ೩ ॥**

೩. ಅವನ ಪ್ರಯಾಣದ ಅವಧಿಯಲ್ಲಿ ಉಳಿದ ದೇವತೆಗಳೂ ಅವನ ಪ್ರಣೋದದಿಂದ (ದಿವ್ಯತೆಯ ಯಾ ದೇವನ, ಸವಿತೃವಿನ) ಮಹತ್ತೆಯನ್ನು ತಲುಪುತ್ತಾರೆ. ತನ್ನ ಬಲಾಢ್ಯತೆಯಿಂದ ಅವನು ಪಾರ್ಥಿವ ಬೆಳಕಿನ ರಾಜ್ಯಗಳ ನಕ್ಷೆ ಬಿಡಿಸಿಬಿಟ್ಟಿದ್ದಾನೆ - ಆತನು ಉಜ್ವಲನು, ಸೃಷ್ಟಿಕರ್ತನು.

**ಉತ ಯಾಸಿ ಸವಿತಸ್ತ್ರೀಣಿ ರೋಚನೋ ।**
**ಉತ ಸೂರ್ಯ ಸ್ಯ ರಶ್ಮಿಭಿಃ ಸಮುಚ್ಯ ಸಿ ॥**
**ಉತ ರಾತ್ರೀ ಮುಭಯತಃ ಪರೀಯಸ**
**ಉತ ಮಿತ್ರೋ ಭವಸಿ ದೇವ ಧರ್ಮಭಿಃ ॥ ೪ ॥**

೪. ಮತ್ತು, ಓ ಸವಿತಾರನೇ, ನೀನು ಮೂರು ಉಜ್ವಲ ಸ್ವರ್ಗಗಳನ್ನು ಸೇರುವೆ ; ಅಲ್ಲದೆ, ನೀನು ಸೂರ್ಯನ ಕಿರಣಗಳಿಂದಲೇ ಸಂಪೂರ್ಣವಾಗಿ ಅಭಿವ್ಯಕ್ತನಾಗಿರುವೆ (ವ್ಯಾಕೃತನಾಗಿರುವೆ) ; ಹಾಗೂ ನೀನು ನಿನ್ನ ಇಕ್ಕಡೆಗಳಲ್ಲಿ ರಾತ್ರಿಯನ್ನು ಒಳಗೊಂಡಿರುವೆ ; ಮತ್ತು ನಿನ್ನ ಕಾರ್ಯಗಳ ವಿಧಿಯಿಂದ ನೀನು, ಎಲೈ ದೇವರೇ, ಪ್ರೇಮಾಧಿಪತಿಯಾಗುತ್ತೀಯೆ.

**ಉತೇಶಿಷೇ ಪ್ರಸವಸ್ಯ ತ್ವಮೇಕ ಇದ್**
**ಉತ ಪೂಷಾ ಭವಸಿ ದೇವ ಯಾಮಭಿಃ ॥**
**ಉತೇದಂ ವಿಶ್ವಂ ಭುವನಂ ವಿರಾಜಸಿ**
**ಶ್ಯಾವಾಶ್ವಸ್ತೇ ಸವಿತಃ ಸ್ತೋಮಮಾನಶೇ ॥ ೫ ॥**

೫. ಎಲೈ ಸವಿತಾರನೇ[೨], ನೀನು ಪ್ರತಿಯೊಂದನ್ನು ಸೃಷ್ಟಿಸುವುದರಲ್ಲೂ ಸಮರ್ಥನು ; ಮತ್ತು ಹೇ ದೇವ, ನಿನ್ನ ಚಲನವಲನಗಳಿಂದ ನೀನು ಪೋಷಕನಾಗುವೆ : ಹಾಗೂ ಈ ಬದಲಾಗುವ ಜಗತ್ತನ್ನೆಲ್ಲಾ ನೀನು ಬೆಳಗುತ್ತೀಯೆ. ಶ್ಯಾವಾಶ್ವನು ನಿನ್ನ ದೃಢೀಕರಣಕ್ಕೆ ತಕ್ಕವನಾಗಿದ್ದಾನೆ.

---

೧. ಯಸ್ಯ ಪ್ರಯಾಣಂ ಅನು ಅನ್ಯ ಇದ್ಯಯುರ್ -ಛಂದೋಭಂಗ ನಿವಾರಣೆಗಾಗಿ-ಅನುವಾದಕ

೨. ಒಳ್ಳೆಯ ಪ್ರಯೋಗ ರೂಢಿ ಬದ್ಧವಾದ ಸಾಹಿತ್ಯಿಕ ಅನುವಾದವನ್ನೂ ಮೂಲದ ಅರ್ಥವನ್ನೂ ಗತಿಲಯವನ್ನೂ ಉಳಿಸಿಕೊಳ್ಳುವುದನ್ನು ಸಾಧಿಸಲು ಕೆಲಮಟ್ಟಿಗೆ ಸಂಸ್ಕೃತವನ್ನು ತಿದ್ದುವ ಸ್ವಾತಂತ್ರ್ಯ ಅಗತ್ಯ. ಆದುದರಿಂದ ಇವುಗಳ ಪದಸಂಹತಿಗಳ ಹೆಚ್ಚು ಅಕ್ಷರಾರ್ಥ ಪ್ರಧಾನವಾದ ಅನುವಾದವನ್ನು ವ್ಯಾಖ್ಯಾನದಲ್ಲಿ ಕೊಡಲಾಗಿದೆ.

# ವ್ಯಾಖ್ಯಾನ

ಇಂದ್ರನೂ ಅವನೊಟ್ಟಿಗೆ ಅವನ ಉಜ್ವಲ ಮರುದ್ಗಣಗಳೂ ದಿವ್ಯ ಪ್ರಣೋದನಾದ ಹಾಗೂ ಆರ್ಯಯಜ್ಞವನ್ನು ಪೂರ್ತಿಗೊಳಿಸಿಕೊಡುವ ಅಗ್ನಿಯೂ ವೈದಿಕ ಪದ್ಧತಿಯ ಅತಿ ಮುಖ್ಯರಾದ ದೇವತೆಗಳು. ಅಗ್ನಿಯೇ ಆದಿ, ಅಗ್ನಿಯೇ ಅಂತ. ಈ ಸಂಕಲ್ಪ ರೂಪದ ಜ್ಞಾನವು ಅಮೃತತ್ವವನ್ನು ಕುರಿತು ಮರ್ತ್ಯರು ಮಾಡುವ ಊರ್ಧ್ವಮುಖವಾದ ಪ್ರಯತ್ನದ ಪ್ರವೇಶಕ ; ಈ ದಿವ್ಯ ಪ್ರಜ್ಞೆಗೆ - ದಿವ್ಯಶಕ್ತಿಯೊಡನೊಂದಾಗಿರುವ ಜಾಗರಕ್ಕೆ-ಅದು ಅಮರ ಅಸ್ತಿತ್ವದ ಅಡಿಗಲ್ಲು, ನೆಲೆಗಟ್ಟು ಎಂದು ತಿಳಿದು. ಇಂದ್ರನು ಸ್ವರಧಿಪತಿ, ದ್ಯುಮದ್ಬುದ್ಧಿ. ನಮ್ಮ ಅಸ್ಪಷ್ಟ ಭೌತಿಕ ಮನೋಧರ್ಮವನ್ನು, ದಿವ್ಯಪ್ರಜ್ಞೆಯಾಗಿ ಪರಿವರ್ತನ ಹೊಂದುವುದಕ್ಕಾಗಿ, ಆ ದ್ಯುಮದ್‌ಬುದ್ಧಿಯ ರೂಪಕ್ಕೆ ಮಾರ್ಪಡಿಸಬೇಕು. ಈ ಕಾರ್ಯದಲ್ಲಿ ಇಂದ್ರನು ನಮ್ಮ ಸಹಾಯಕರಲ್ಲಿ ಅಗ್ರೇಸರ. ಇಂದ್ರ ಹಾಗೂ ಮರುದ್‌ಗಣಗಳ ಸಹಾಯದಿಂದಲೇ ಈ ಪರಿವರ್ತನವು ನೆರವೇರಬೇಕು. ನಾಡೀ ಮನಸ್ಕತೆಯ ಪ್ರೇರಣೆಗಳಿಂದಾದ ನಮ್ಮ ಪ್ರಾಣಪ್ರಜ್ಞೆಯನ್ನು ತೆಗೆದುಕೊಂಡು ತಮ್ಮ ಪ್ರಬೋಧ ಕಿರಣಗಳಿಂದ ಆ ಪ್ರೇರಣೆಗಳ ಮೇಲೆ ಪ್ರಭುತ್ವ ಪಡೆದು ಅದನ್ನು ಇರವಿನ ಗುಡ್ಡ ಹತ್ತಿಸಿ ಸ್ವರ್‌ಲೋಕದ ಹಾಗೂ ಇಂದ್ರನ ಸತ್ಯಗಳ ಕಡೆಗೆ ಒಯ್ಯುವವರು ಮರುತ್ತುಗಳು. ನಮ್ಮ ಮಾನಸ ವಿಕಾಸವು ಈ ಪ್ರಾಣಬಲದಿಂದ ಪಶುಬಲದಿಂದ ಆರಂಭಿಸುತ್ತದೆ. ಉದ್ಗಮನದಲ್ಲಿ ನಾವು ಪ್ರಗತಿ ಹೊಂದುತ್ತಾ ಹೋದ ಹಾಗೆ ಈ ಮರುತ್ತುಗಳು ಸೂರ್ಯನ ಜ್ವಲತ್ ಕಿರಣಗಳಾಗಿ, ವೇದೋಕ್ತ ದಿವ್ಯ ಗೋವುಗಳಾಗಿ ಪರಿವೃತ್ತರಾಗುತ್ತಾರೆ. ವೈದಿಕ ಸಂಕೇತದ ಮಾನಸ ಶಾಸ್ತ್ರೀಯ ಅರ್ಥ ಈ ಬಗೆಯದು.

ಆದರೆ ಈ ಕಿರಣಗಳು ಎಲ್ಲಿಂದ ಹೊರಬರುವುವೋ ಆ ಸೂರ್ಯನಾರು? ಅವನು ಸತ್ಯಾಧಿಪತಿ, ಬೆಳಗುವವನು (ಪ್ರಬೋಧಕನು. ಎಚ್ಚರಿಸುವವನು) ಸವಿತೃ=ಸ್ರಷ್ಟಾರನು, ಪೂಷನ್=ಪೋಷಯಿತಾರನು, ಹೆಚ್ಚು ಮಾಡುವವನು. ಸ್ವಸ್ವಭಾವದಲ್ಲಿ ಅವನ ಕಿರಣಗಳು ಆವಿರ್ಭೂತಿ, ಸ್ಫೂರ್ತಿ, ಪ್ರತಿಭಾನ, ಲಸದ್ದರ್ಶನಗಳೆಂಬ ಅತಿಮಾನಸ ಚಟುವಟಿಕೆಗಳಾಗಿವೆ. ಆ ಚಟುವಟಿಕೆಗಳೇ ವೇದಾಂತ ಹೇಳುವ ವಿಜ್ಞಾನ ಪೂರ್ಣಜ್ಞಾನ, "ವೇದಋತಂ" - ಪರಸತ್ಯ. ಆದರೆ ಈ ಕಿರಣಗಳು ಅಧೋಗಾಮಿಗಳಾಗಿ ಕೂಡ ಮಾನವ್ಯ ಮನೋಧರ್ಮದಲ್ಲಿ ಹೊಕ್ಕು ಅದರ ಶಿಖರ ಸ್ಥಾನದಲ್ಲಿ ಇಂದ್ರನ ಆಧಿಪತ್ಯಕ್ಕೆ ಸೇರಿದ ಸ್ವರ್ ಎಂಬ ದ್ಯುಮದ್ ಬುದ್ಧಿ ಪ್ರಪಂಚವನ್ನು ಉಕ್ತ ಮನೋಧರ್ಮದಲ್ಲಿ (ಮಾನಸಿಕತೆಯಲ್ಲಿ) ನಿರ್ಮಿಸುತ್ತವೆ.

ಈ ವಿಜ್ಞಾನವೆಂಬುದು ಮಾನವ್ಯವಾದ ಸುಪ್ತಕೌಶಲವಲ್ಲ - ಇದು ದಿವ್ಯ ಸುಪ್ತ ಕೌಶಲ (ಕುಶಾಗ್ರತೆ). ಮಾನವನ ಮನವು ಸ್ವಯಂಪ್ರಭ ಸತ್ಯದಿಂದಾಗಿಲ್ಲ. ದಿವ್ಯಮನವು ಸ್ವಯಂಪ್ರಭ ಸತ್ಯಜಾತವಾಗಿದೆ. ಮಾನವಮನವೊಂದು ಐಂದ್ರಿಯ ಮನಸ್ಕತೆ, ಇಂದ್ರಿಯಾಧೃತ

ಮನೋಧರ್ಮ. ಅದು ಪರಸತ್ಯವನ್ನು ಗ್ರಹಿಸಿ ಅರ್ಥೈಸಿಕೊಳ್ಳಬಲ್ಲುದು[೧]. ಆದರೆ ಅದು ತದ್‌ಭಿನ್ನ, ತದೈಕ್ಯವುಳ್ಳದ್ದಲ್ಲ. ಜ್ಞಾನದ ಬೆಳಕು ತನ್ನ ಪ್ರಕಾಶವನ್ನು ಮಂದಗೊಳಿಸಿಕೊಂಡು ಈ ಮಾನವ್ಯ ಧಾರಣಾಬುದ್ಧಿಯಲ್ಲಿ ಉಪಸ್ಥಿತವಾಗಬೇಕಾಗಿದೆ. ಏಕೆಂದರೆ, ಮಾನವ ಮನಸ್ಸಿಗೆ (ತದ್ವಿಶಿಷ್ಟವಾದ) ಶಕ್ಯತೆಗಳಿವೆ, ಭೌತಿಕ ಪ್ರಜ್ಞೆಯ ಇತಿಮಿತಿಗಳಿವೆ : ಮತ್ತು ಅದು ಕ್ರಮ ಕ್ರಮವಾಗಿ ಏರುತ್ತಾ ಹೋಗಿ ತನ್ನ ನಿಜಸ್ವರೂಪವನ್ನು ಕಂಡುಕೊಳ್ಳಬೇಕಾಗಿದೆ - ತನ್ನ ಉತ್ತರೋತ್ತರ ವೈಕಾಸಿಕ ಅವಸ್ಥೆಗಳನ್ನು, ನಮ್ಮ ಮಾನಸಾಭಿವೃದ್ಧಿಗಾಗಿ, ಪ್ರಕಟಿಸಬೇಕಾಗಿದೆ. ಆದುದರಿಂದ, ಸೂರ್ಯ ಕಿರಣಗಳು ನಮ್ಮ ಮಾನಸಾಸ್ತಿತ್ವವನ್ನು ರೂಪಿಸಲು ದುಡಿಯುತ್ತಾ ಒಂದರ ಮೇಲೊಂದು ಹೇರಿರುವಂಥ ಮೂರು ಮನೋಧರ್ಮ ಪ್ರಪಂಚಗಳನ್ನು ಸೃಷ್ಟಿಸಬೇಕಾಗಿದೆ - ಸಂವೇದನಾತ್ಮಕ ; ಸೌಂದರ್ಯಾತ್ಮಕ ಮತ್ತು ಭಾವನಾತ್ಮಕ ಶುದ್ಧಬುದ್ಧಿ ಮತ್ತು ದಿವ್ಯಧೀಶಕ್ತಿ-ಇವೇ ಆ ಪ್ರಪಂಚತ್ರಯ. ಈ ಪ್ರಪಂಚತ್ರಯದ ಪೂರ್ಣತೆ ಮತ್ತು ಸಮಗ್ರತೆಗಳು ಅಸ್ತಿತ್ವದ ಶುದ್ಧವಾದ ಮಾನಸ. ಸ್ತರದಲ್ಲಿರುತ್ತವೆ[೨]. ಅದರಲ್ಲಿ ಅವು (ಮೂರು ಪ್ರಪಂಚಗಳು) ಮೂರು ಸ್ವರ್ಗಗಳ ಮೇಲಿನವುಗಳಾಗಿರುತ್ತವೆ. "ತಿಸ್ರೋ ದಿವಃ"=ಅವುಗಳ ಮೂರು ಪ್ರಭೆಗಳು "ತ್ರೀಣಿರೋಚನಾನಿ". ಆದರೆ ಅವುಗಳ ಬೆಳಕು ಭೌತಿಕ ಪ್ರಜ್ಞೆಯ ಮೇಲೆ ಇಳಿದು ಬರುತ್ತದೆ. ತನ್ನ ರಾಜ್ಯಗಳಲ್ಲಿ ಆಯಾ ರಾಜ್ಯಕ್ಕೆ ತಕ್ಕ ಆಕಾರಗಳನ್ನು ನಿರ್ಮಿಸುತ್ತದೆ-ವೈದಿಕ ಭಾಷೆಯಲ್ಲಿ "ಪಾರ್ಥಿವಾನಿ ರಜಾಂಸಿ"=ಬೆಳಕಿನ ಪಾರ್ಥಿವ ಲೋಕಗಳು. ಅವುಗಳೂ ಮೂರು - "ತಿಸ್ರಃ ಪೃಥಿವೀಃ= ಪೃಥ್ವೀತ್ರಯ. ಸೂರ್ಯ ಸವಿತೃವೇ (ಸವಿತಾರನೇ) ಈ ಮೂರೂ ಪ್ರಪಂಚಗಳ ಸೃಷ್ಟಿಕರ್ತ (ಸ್ರಷ್ಟಾರ).

ಈ ಅಲಂಕಾರೋಕ್ತಿಯಲ್ಲಿ ವಿವಿಧ ಮಾನಸಶಾಸ್ತ್ರೀಯ ಮಟ್ಟಗಳಿವೆ. ಅವುಗಳಲ್ಲಿ ಒಂದೊಂದನ್ನೂ ಒಂದೊಂದು ಪ್ರಪಂಚವೆಂದು ಪರಿಗಣಿಸಲಾಗಿದೆ. ಇದು ವೈದಿಕ ಋಷಿಗಳ ಕಲ್ಪನೆಗಳಿಗೆ ಇರುವ ಬೀಗದ ಕೈ. ಮನುಷ್ಯ ಪದಾರ್ಥವೆಂಬುದು ಒಂದು ಅಸ್ತಿತ್ವದ ಅವಯವ ಸಂಯೋಜಿತವಾದ ಘಟಕ. ಅದು ವಿಶ್ವದ ರಚನೆಯನ್ನು ಪ್ರತಿಬಿಂಬಿಸುತ್ತದೆ. ಅದರಲ್ಲೇ ಅದು ವಿಶ್ವದ ಸ್ಥಿತಿಗಳನ್ನೂ ಪ್ರಣೋದಗಳ ಲೀಲೆಯನ್ನೂ ಪುನರಾವರ್ತಿಸುತ್ತದೆ. ಮಾನವನಲ್ಲಿ ಅವನ ವ್ಯಕ್ತಿನಿಷ್ಠ ದೃಷ್ಟಿಕೋನದಂತೆ ಎಲ್ಲ ಜಗತ್ತುಗಳೂ ತುಂಬಿಕೊಂಡಿವೆ ; ಹಾಗೇ ವಸ್ತುನಿಷ್ಠ ದೃಷ್ಟಿಕೋನದ ಜಗಗಳು ಅವನನ್ನೊಳಗೊಂಡಿವೆ. ವೈದಿಕ ಋಷಿಗಳು ಅಮೂರ್ತ ಕಲ್ಪನೆಗಳನ್ನು ಹೇಳುವ ಭಾಷಾ ಶೈಲಿಗಿಂತ ಮೂರ್ತ ಕಲ್ಪನೆಗಳನ್ನು ಹೇಳುವ ಭಾಷಾ ಶೈಲಿಯನ್ನು ಮೆಚ್ಚುವವರಾದುದರಿಂದ ಭೌತ ಪ್ರಜ್ಞೆಯನ್ನು "ಪೃಥ್ವಿ, ಭೂ" ಎಂಬುದಾಗಿ

---

೧. ಹೀಗೆ ಅರ್ಥಮಾಡಿಕೊಳ್ಳುವುದಕ್ಕೆ ವೇದದಲ್ಲಿ "ಧೀ" ಎಂಬ ಶಬ್ದವನ್ನು ಪ್ರಯೋಗಿಸಲಾಗಿದೆ. ತನ್ನೊಳಗೆ ತೆಗೆದುಕೊಂಡು ಹಾಗೇ ಹಿಡಿದಿಟ್ಟುಕೊಳ್ಳಬಲ್ಲ ಬುದ್ಧಿಗೆ ಧೀಯೆಂದು ಹೆಸರು.

೨. ನಮ್ಮ ಸ್ವಾಭಾವಿಕ ಅಸ್ತಿತ್ವದ ನೆಲೆಯೆಂದರೆ ಸ್ಪಷ್ಟವಾಗಿ ಭೌತಿಕ ಪ್ರಜ್ಞೆಯೇ ; ಆದಗೆ ಉಳಿದ ಪ್ರಜ್ಞೆಗಳೂ ತೆರೆದಿವೆ ನಮಗಾಗಿ-ಏಕೆಂದರೆ ನಮ್ಮ ಅಸ್ತಿತ್ವದ, ಬಾಳಿನ, ಸತ್ತೆಯ, ಇರವಿನ ಭಾಗವು ಆ ಪ್ರತಿಯೊಂದು ಪ್ರಜ್ಞೆಯಲ್ಲೂ ವಾಸಿಸಿರುತ್ತದೆ.

ಆಲಯ ವಿಜ್ಞಾನ = ವ್ಯಕ್ತಿನಿಷ್ಠದೃಷ್ಟಿ ; ಪ್ರವೃತ್ತಿ ವಿಜ್ಞಾನ = ವಸ್ತುನಿಷ್ಠ ದೃಷ್ಟಿ - ಶಾಸ್ತ್ರ ಪರಿಭಾಷೆಯಲ್ಲಿ -ಅನುವಾದಕ.

ವ್ಯಾಹರಿಸುತ್ತದೆ. ಅವರು ಶುದ್ಧವಾದ ಮಾನಸ ಪ್ರಜ್ಞೆಯನ್ನು "ಸ್ವರ್ಗ, ದ್ಯೌ ಸ್ವರ್" ಎಂದು ವ್ಯಾಹರಿಸುತ್ತಾರೆ - ಸ್ವರ್ ಎಂಬ ಜ್ಯೋತಿರ್ಮಯ ಮನವೇ ತುತ್ತತುದಿ. ನಡುವಿನ ಉತ್ಕ್ರಿಯಾಮಯವಾದ ಜೈವಿಕ ಯಾ ನಾಡೀಪ್ರಜ್ಞೆಯನ್ನು "ಅಂತರಿಕ್ಷ, ಭುವರ್" ಎಂಬುದಾಗಿ ಬಣ್ಣಿಸುತ್ತಾರೆ-ಭೂ ನಿರ್ಮಾಪಕವಾದ ಗುಣಿತ ನಿರ್ಮಾಪಕ ಪ್ರಪಂಚಗಳಿವು.

ಋಷಿಗಳ ಕಲ್ಪನೆಯಲ್ಲಿ ಒಂದು ಪ್ರಪಂಚ ಅಥವಾ ಲೋಕವೆಂದರೆ ಪ್ರಥಮತಃ ಒಂದು ಪ್ರಜ್ಞಾಸೃಷ್ಟಿ. ಗೌಣವಾಗಿ ಮಾತ್ರ ಅದು ವಸ್ತುಗಳ ಭೌತಿಕ ನಿರ್ಮಿತಿ. ಜಗತ್ತೊಂದು "ಲೋಕ" - ಪ್ರಜ್ಞಾವಂತನು ತನ್ನನ್ನು ತಾನೇ ರೂಪಿಸಿಕೊಂಡ ಪ್ರತಿಮೆ. ಅದು ಕಾರಣಿಕ ಸತ್ಯ, ಬೀಜಸತ್ಯ-ಸೂರ್ಯ ಸವಿತಾರನಿಂದ ಪ್ರತಿನಿಹಿತವಾದದ್ದು-ತನ್ನ ಆಕೃತಿಗಳನ್ನೆಲ್ಲಾ ಸೃಷ್ಟಿ ಮಾಡುವಂಥದು-ಅದು ಅನಂತಸತ್ತೆಯಲ್ಲಿರುವ ಕಾರಣ (ಶರೀರ) ಸ್ವರೂಪದ ಕಲ್ಪನೆ-ಅದು ಅಮೂರ್ತ ಕಲ್ಪನೆಯಲ್ಲ-ಅದು ನಿಜವೂ ಉತ್ಕ್ರಿಯವೂ ಆದ ಕಲ್ಪನೆ - ಅದು ವಿಧಿನಿಯಮದ ಸ್ರಷ್ಟಾರ, ಕ್ರಿಯಾಶಕ್ತಿಗಳ ಜನಕ ; ವಸ್ತು ನಿರ್ಮಿತಿಗಳ ಮೂಲ ಮತ್ತು ನಿಶ್ಚಿತ ಪ್ರಕ್ರಿಯೆಗಳಿಂದ ಅವುಗಳಿಗೆ ನಿಶ್ಚಿತ ರೂಪಗಳನ್ನು ಕೊಡುವ ಮಾತೃ ಕಾರಣ (ಭಾವವು) ಕಲ್ಪನೆಯು ನಿಜವಾದ ಸತ್ತಾ ಪ್ರಣೋದವಾಗಿರುವುದರಿಂದ ಅದನ್ನು ಸತ್ಯವೆನ್ನಲಾಗಿದೆ=ಇರವಿನಲ್ಲಿ ಯಾವುದು ನಿಜವೋ ಅದು. ಅದು ಎಲ್ಲ ಕಾರ್ಯಗಳ ಹಾಗೂ ರಚನೆಗಳ ನಿಶ್ಚಾಯಕ ಸತ್ಯವೆನ್ನಿಸಿದಾಗ ಋತವೆನ್ನಿಸುತ್ತದೆ. ಋತ=ಕಾರ್ಯರೂಪದಲ್ಲಿರುವ ಸತ್ಯ. ಏಕೆಂದರದು ತನ್ನ ಸ್ವ ಸ್ವರೂಪ ಜ್ಞಾನದಲ್ಲಿ ವಿಶಾಲವೂ ಅನಂತವೂ ಆಗಿದೆ-ತನ್ನ ವ್ಯಾಪ್ತಿಯಲ್ಲಿಯೂ ಕಾರ್ಯಮಯತೆಯಲ್ಲಿಯೂ ಅದು "ಬೃಹತ್"=-ವಿಸ್ತಾರವಾದುದು, ದೊಡ್ಡದಾದುದು ಮತ್ತು ಅಗಲವಾದುದು, ಅತಿವ್ಯಾಪಕವಾದುದು.

(ಪರ, ಪರಮ, ಪರಮಾರ್ಥ) ಸತ್ಯದ ಮೂಲಕ ಸವಿತಾರನು ಸ್ರಷ್ಟಾರ. ಅವನ ಸೃಷ್ಟಿಯು ವಸ್ತು ನಿರ್ಮಾಣದಲ್ಲಿ ಕೃತಕವಲ್ಲ, ಯಾಂತ್ರಿಕವಲ್ಲ. ಶಬ್ದದ ಮೂಲಧಾತ್ವರ್ಥವು ಪ್ರೇರಣೆ, ಜಡಿಸಿ ಮುಂಜಡುವುದು, ಪ್ರೇಷಣೆ-ಎಂದು. ಸೃಷ್ಟ್ಯರ್ಥವೂ ಅದಕ್ಕಿದೆ ; ಆದ್ದರಿಂದ ಅದು ಉತ್ಪಾದನಾರ್ಥಕವೂ ಹೌದು. ಕಾರಣಾತ್ಮನು ಕೃತಕ ಸೃಷ್ಟಿ ಮಾಡುವವನಲ್ಲ. ಆದರೆ ತಪೋ ಬಲದಿಂದ ಅರ್ಥಾತ್ ತನ್ನ ಇರವಿನ ಮೇಲೆ ಬಂದ ಪ್ರಜ್ಞೆಯ ಒತ್ತಡದಿಂದ ತನ್ನಲ್ಲೇ ಗೂಢವಾಗಿರುವ, ಸುಪ್ತ ಶಕ್ತಿ ಸ್ವರೂಪದಲ್ಲಿರುವ ವಿಶ್ವೋತ್ತರಸ್ಥ ಸತ್ಯದಲ್ಲಿ ಆಗಲೇ ಹುದುಗಿರುವ ಪದಾರ್ಥವನ್ನು ಹೊರತರುತ್ತದೆ.

ಈಗ ತನ್ನ ಜನನಕ್ಕೆ ಕಾರಣವಾದ, ಅತಿಭೌತ ಕಾರ್ಯಗತವಾದ ಸತ್ಯಗಳನ್ನು ಸಂಕೇತದಂತೆ ಭೌತ ಪ್ರಪಂಚದ ಪ್ರಣೋದಗಳು ಹಾಗೂ ಪ್ರಕ್ರಿಯೆಗಳು ಪುನರಾವರ್ತಿಸುತ್ತವೆ. ಭೌತಾತಿಭೌತ ಪ್ರಪಂಚಗಳೆರಡರ ನಿಯಾಮಕ ಪ್ರಾಧಿಕಾರಗಳೂ ಒಂದೇ ಆಗಿವೆ. ಅವೆರಡನ್ನೂ ನಿಬಂಧಿಸುವ ಪ್ರಣೋದ-ಪ್ರಕ್ರಿಯೆಗಳೆರಡೂ ಒಂದೇ ಆಗಿವೆ. ನಮ್ಮ ಅಂತರ್ಜೀವನ ಹಾಗೂ ಅದರ ವಿಕಾಸಗಳನ್ನು ಅದೇ ಸತ್ಯಗಣ ನಿಯಂತ್ರಿಸುತ್ತದೆ. ಆದುದರಿಂದ ಋಷಿಗಳು ಭೌತ ಪ್ರಕೃತಿಯ ಘಟನಾವಳಿಗಳನ್ನೇ ಅಂತರ್ಜೀವನದ ಕ್ರಿಯಾಂತರಗಳ ಸಂಕೇತಗಳನ್ನಾಗಿ ಬಳಸಿದರು. ಹಾಗೆ ಬಳಸಿ ಹೇಳುವುದು ಅವರಿಗೆ ಬಹಳ ಕಷ್ಟದ ಕೆಲಸವಾಯಿತು ಅದರಲ್ಲೂ ಅವರೊಂದು ಪವಿತ್ರ ಪದ್ಯಕಾವ್ಯವನ್ನು ಬರೆಯಲು ಹೊರಟಾಗ, ಈ ಅಂತರ್ಜೀವನ ಸೂಚಕವಾದ ಪವಿತ್ರ ಪದ್ಯವು ದೃಶ್ಯ ಪ್ರಪಂಚದ ಶಕ್ತಿಗಳೆನ್ನಿಸಿದ ದೇವತೆಗಳ ಬಾಹ್ಯಪೂಜೆಗೂ ಉಪಯುಕ್ತವಾಗಬೇಕೆಂಬ ದೃಷ್ಟಿಯಿಂದಲೇ ಋಷಿಗಳು

ಉಭಯಪ್ರಯೋಜಕ ಭಾಷಾಶೈಲಿಯಿಂದ ಮಂತ್ರಗಳನ್ನು ರಚಿಸಿದರೆಂಬುದು ತಾತ್ಪರ್ಯ. ಸೌರಕ್ರಿಯಾಶಕ್ತಿಯೇ ಭೌತರೂಪ ತಾಳಿದ ಸೂರ್ಯ-ಬೆಳಕು-ನನ್ನಿಗಳ ಒಡೆಯ. ಈ ಪರಸತ್ಯದ ಮೂಲಕವಾಗಿಯೇ ನಾವು ಅಮೃತತ್ವವನ್ನು ಪಡೆಯುವುದು ; ವೇದಶಾಸ್ತ್ರದ ಚರಮಧ್ಯೇಯವೇ ಇದು. ಆದುದರಿಂದ ಸೂರ್ಯ ಮತ್ತು ಅವನ ಕಿರಣಗಳು, ಉಷೆ-ಹಗಲು-ಇರುಳುಗಳು, ಮತ್ತು ಎರಡು ಧ್ರುವಗಳಾದ ಹಗಲು-ರಾತ್ರಿಗಳ ನಡುವಿನ ಮಾನವ ಜೀವನ-ಈ ಪ್ರತಿಮೆಗಳ (ಸಂಕೇತಗಳ) ಅಡಿಯಲ್ಲೇ ಆರ್ಯಋಷಿಗಳು ಮಾನವಾತ್ಮದ ಪ್ರಗತಿಪರ ಪ್ರಬೋಧೋದಯವನ್ನು ಪ್ರತಿನಿಧಿಸಿದ್ದಾರೆ. ಅತ್ರಿಕುಲದ ಶ್ಯಾವಾಶ್ವನ ಸೂಕ್ತಗಳಲ್ಲಿ ಸೂರ್ಯನು ಸವಿತೃ=ಸ್ರಷ್ಟ, ಪೂಷನ್=ಪೋಷಕ ಮತ್ತು ದರ್ಶಯಿತೃ=ತೆರೆದು ತೋರಿಸುವವನು.

ಪರಮಸತ್ಯದ ಪ್ರಬೋಧದ ಹೊಳಪುಗಳಿಂದ (ಹೊಳೆಹೊಳೆವ ಪ್ರಬೋಧಗಳಿಂದ) ಸೂರ್ಯನು ಮನಸ್ಸನ್ನೂ ವಿಚಾರಗಳನ್ನೂ ಬೆಳಗುತ್ತಾನೆ, ಸ್ಪಷ್ಟಗೊಳಿಸುತ್ತಾನೆ. ಅವನು ವಿಪ್ರ=ಬೆಳಕು ಕಂಡವನು, ಪ್ರಬುದ್ಧನು, ಜ್ಞಾನಜ್ಯೋತಿಃ ಸ್ವರೂಪನು. ಅಹಂಕಾರ ಸ್ವರೂಪದ ಜೀವಾತ್ಮ ಪ್ರಜ್ಞೆಯಿಂದಲೂ ಅದರ ಆವರಣದಿಂದಲೂ ಪರಿಹಿತವಾದ ಮಾನವನ ವೈಯಕ್ತಿಕ ಮನವನ್ನು ಮುಕ್ತಗೊಳಿಸುವವನು ಅವನೇ. ಮತ್ತು ಅಧ್ಯಾರೋಪಿತವಾದ ಸ್ವವ್ಯಕ್ತಿತ್ವದ ವಿಷಯದಲ್ಲಿಯೇ ಮಗ್ನವಾದ ಉಕ್ತ ಪ್ರಜ್ಞೆಯನ್ನು ಅದರ ಪರಿಮಿತ ಚಲನಗಳಿಂದ ಮುಕ್ತಗೊಳಿಸಿ ಅದನ್ನು ವಿಸ್ತರಿಸುವವನೂ ಅವನೇ. ಆದುದರಿಂದ ಸೂರ್ಯನು "ಬೃಹತ್"=ವಿಸ್ತಾರವಾದವನು. ಆದರೆ ಅವನ ಪ್ರಬೋಧಪ್ರಭೆಯು ಒಂದು ಅನಿಶ್ಚಿತ ಬೆಳಕಲ್ಲ ; ಹಾಗೇ ಅವನ ವಿಸ್ತಾರವು ಜೀವಾತ್ಮದ ಹಾಗೂ ವಸ್ತುವಿನ ಒಂದು ಗಲಿಬಿಲಿಯಿಂದ ಪ್ರಾಪ್ತವಾದುದಲ್ಲ. ವಸ್ತುಗಳ ಅಂಶಗಳನ್ನೂ ಅವುಗಳ ಸಂಬಂಧಗಳನ್ನೂ ಒಮ್ಮೊತ್ತದ ರೂಪದಲ್ಲಿ ಸೂಕ್ಷ್ಮವಾಗಿ ಹಾಗೂ ಸ್ಪಷ್ಟವಾಗಿ ನೋಡಿದ ದರ್ಶನವನ್ನು ಅವನು ಧರಿಸಿದ್ದಾನೆ, ಧಾರಣ ಮಾಡಿದ್ದಾನೆ. ಆದುದರಿಂದ ಅವನು "ವಿಪಶ್ಚಿತ್"=ನೋಟದಲ್ಲಿ[೧] ಸ್ಪಷ್ಟತೆಯುಳ್ಳವನು. ಈ ಸೌರ ಪ್ರಬೋಧವನ್ನು ಆಂಶಿಕವಾಗಿಯಾದರೂ ಪಡೆಯಲಾರಂಭಿಸಿದವರು ತಮ್ಮೊಳಗಿರುವ ದಿವ್ಯಸೂರ್ಯನಿಗೆ ತಮ್ಮ ಇಡೀ ಮನೋಧರ್ಮವನ್ನೂ ಅದರ ವಿಚಾರಗಳ ಹೂರಣಗಳನ್ನೂ (ತಿರುಳ್ಗಳನ್ನೂ) ಒಳಪಡಿಸಲು (ನೊಗಕ್ಕೆ ಎತ್ತು ಕೊರಳನ್ನು ಕೊಡುವಂತೆ) ಕಷ್ಟಪಟ್ಟು ಪ್ರಯತ್ನಿಸುತ್ತಾರೆ. ಅಂದರೆ-ತಮ್ಮಲ್ಲಿ ಉದಯಿಸಿದ ಸೂರ್ಯ ಪ್ರಬೋಧ ಪ್ರಭೆಯು ತಮ್ಮ ಮನದ ಅಸ್ಪಷ್ಟತೆಯನ್ನು ಸ್ಪಷ್ಟಗೊಳಿಸಲಿ, ತಮ್ಮ ತಪ್ಪ ವಿಚಾರಗಳನ್ನು (ವಿಚಾರದ ತಪ್ಪುಗಳನ್ನು) ಸತ್ಯತೆಗೆ ಪರಿವರ್ತಿಸಲಿ - ಏಕೆಂದರೆ, ತಮ್ಮ ಅಸ್ಪಷ್ಟ ಮನಃಸ್ಥಿತಿಯೂ ತಮ್ಮೆಲ್ಲ ತಪ್ಪು ಆಲೋಚನೆಗಳೂ ದಿವ್ಯ ಸತ್ಯಗಳನ್ನು ವಕ್ರಗೊಳಿಸಿಕೊಂಡಿವೆ - ಎಂಬುದು ಸೌರ ಪ್ರಭಾವಕ್ಕೆ ಸ್ವಲ್ಪವಾದರೂ ಒಳಪಟ್ಟವರ ಆಸೆ-ಎಂದರ್ಥ. ಈ ಒಳಪಡಿಸುವಿಕೆ ಅಥವಾ ಸೂರ್ಯರಥದ ನೊಗಕ್ಕೆ ಎತ್ತಿನಂತೆ ಅಥವಾ ಕುದುರೆಯಂತೆ ಕೊರಲ್ಗೊಡುವುದೇ ಅವರ ಯೋಗ ("ಯುಂಜತೇ=-ನೊಗಕ್ಕೊಳಪಡಿಸುವುದು, ಯುಗ=ನೊಗ). "ಅವರು ಮನವನ್ನು ನೊಗಕ್ಕೆ ಹೂಡುತ್ತಾರೆ (ಕಟ್ಟುತ್ತಾರೆ) ; ತಮ್ಮ ವಿಚಾರಗಳನ್ನು ನೊಗದ ಸರಿಗುಣಿಕೆಯ ಬಂಧನಕ್ಕೆ ಒಳಪಡಿಸುತ್ತಾರೆ. ಯಾರವರು? "ಪ್ರಬುದ್ಧರಲ್ಲಿ ಪ್ರಬುದ್ಧರು (ಅಂದರೆ, ತಾವು ತದ್ಭಾಗರೋ ತದಧೀನರೋ ಆದವರು), ಬೃಹದಾತ್ಮರು, ಸ್ಪಷ್ಟದರ್ಶನ ಶಕ್ತಿಯುಳ್ಳವರು."

---

೧. ಮಾತಿನ ರೂಢಿಯಲ್ಲಿ ನೋಟವು ಇಂದ್ರಿಯ ಪ್ರತ್ಯಕ್ಷಗಳೆಲ್ಲವನ್ನೂ ಒಳಗೊಳ್ಳುತ್ತದೆ - ಅನುವಾದಕ.

ಅನಂತರ, ಪರಮಸತ್ಯೇಶ್ವರನು ತನಗೆ ಆಹುತಿಯಾಗಿ ಅರ್ಪಿಸಿದ ಮಾನವ್ಯ ಕ್ರಿಯಾಶಕ್ತಿಗಳನ್ನು ಪರಮ ಸತ್ಯಾನುಸಾರವಾಗಿ ಸುವ್ಯವಸ್ಥೆಗೊಳಪಡಿಸುತ್ತಾನೆ. ಏಕೆಂದರೆ, ಅವನು ಮಾನವರಲ್ಲಿ ಏಕೈಕ ಸಾರ್ವಭೌಮ ಶಕ್ತಿಯಾಗಿ ಅವನ ಎಲ್ಲಾ ಜ್ಞಾನವನ್ನೂ ಕರ್ಮವನ್ನೂ ನಿಯಂತ್ರಿಸುತ್ತಾನೆ. ಪರಸ್ಪರ ಘರ್ಷಿಸುವ ಕರ್ತೃಗಣಗಳು ತಲೆ ಹಾಕದಂತೆ ಮಾಡಿ ಆ ಸತ್ಯೇಶ್ವರನು ಪರಿಪೂರ್ಣವಾಗಿ (ದೋಷರಹಿತವಾಗಿ) ರಾಜ್ಯಭಾರ ಮಾಡುತ್ತಾನೆ. ಏಕೆಂದರೆ, ಅವನಿಗೆ ವ್ಯಕ್ತ(ವ್ಯಾಕೃತ)ವಾದ ಎಲ್ಲವೂ ಗೊತ್ತು. ಅವುಗಳ ಕಾರಣಗಳೆಲ್ಲವನ್ನೂ ಅವನು ತಿಳಿದಿದ್ದಾನೆ- ಅವುಗಳ ನಿಯಮ ಪ್ರಕ್ರಿಯೆಗಳನ್ನು ತನ್ನೊಳಗಿಟ್ಟುಕೊಂಡಿದ್ದಾನೆ-ಸರಿಯಾದ ಫಲ ಪ್ರಾಪ್ತಿಯನ್ನು ಒತ್ತಾಯಿಸುತ್ತಾನೆ. ಯಾಜ್ಞಿಕ ಕ್ರಿಯಾಶಕ್ತಿಗಳು ("ಹೋತ್ರಗಳು") ಮಾನವ ಸತ್ತೆಯಲ್ಲಿವೆ-ಒಂದೊಂದು ಕ್ರಿಯಾಶಕ್ತಿಗೆ ಹೊಂದುವ ಒಂದೊಂದು ಮಾನಸಶಾಸ್ತ್ರೀಯ ಸತ್ತೆ ಮನುಷ್ಯನಲ್ಲಿದೆ : ದೇಹ, ಪ್ರಾಣ (ಜೀವ), ಮನಸ್ಸು, ಅತಿಮಾನಸ ಆನಂದ, ಸಂಕಲ್ಪ ಮತ್ತು ಆತ್ಮ(ಸಾರಭೂತ ಅಸ್ತಿತ್ವ). ಈ ಏಳರ ಅಕ್ರಮ ಕಾರ್ಯವು ಯಾ ತಪ್ಪು ಸಂಬಂಧವು, ಮಹಾ ಮನದಲ್ಲಿಯ ಜ್ಞಾನಮಾಲಿನ್ಯ (ಅರಿವಿನ ಮಸುಕು) ಹುಟ್ಟಿಸಿ ಇಟ್ಟುಕೊಂಡಿದ್ದರಿಂದ, ಎಲ್ಲಾ ತರಹದ ಎಡರು ತೊಡರುಗಳಿಗೂ ಏಳುಬೀಳುಗಳಿಗೂ ದುಃಖಶೋಕಗಳಿಗೂ ದುಷ್ಕಾರ್ಯ-ದುಃಸ್ಥಿತಿಗಳಿಗೂ ಕಾರಣವಾಗಿದೆ. ಜ್ಞಾನೇಶ್ವರನಾದ ಸೂರ್ಯನು ಮಹಾ ಯಜ್ಞದಲ್ಲಿ ಆ ಪ್ರತಿಯೊಂದನ್ನೂ ಅದದಕ್ಕೆ ತಕ್ಕ ಸ್ಥಾನದಲ್ಲಿ ಇಡುತ್ತಾನೆ. "ಭೌತಿಕ ಘಟನಾವಳಿಗಳನ್ನು ಬಲ್ಲ ಆತನು ಒಬ್ಬನೇ ಒಬ್ಬನಾಗಿ ಯಾಜ್ಞಿಕ ಕ್ರಿಯಾಶಕ್ತಿಗಳನ್ನು ಸುವ್ಯವಸ್ಥೆಗೊಳಪಡಿಸುತ್ತಾನೆ."

ಈ ಪ್ರಕಾರ, ಮಾನವನು ವಿಶಾಲವೂ ಸರ್ವಂಕಷವೂ (ಸರ್ವವ್ಯಾಪಕವೂ) ಆದ ಈ ದಿವ್ಯ ದ್ರಷ್ಟಾರನ ದೃಢೀಕರಣವನ್ನು ತನ್ನಲ್ಲೇ ಹೊಂದುತ್ತಾನೆ. ಈ ಉಪಚ್ಛೇದದಲ್ಲಿದು ಸೂಚಿತವಾಗಿದೆ ಮತ್ತು ಮುಂದಿನ ಉಪಚ್ಛೇದದಲ್ಲಿ ಇನ್ನಷ್ಟು ಸ್ಪಷ್ಟವಾಗಿ ಲಕ್ಷಿತವಾಗಿದೆ. ಅದರ ಫಲವೆಂದರೆ ಸರಿಯಾದ ಸುಖಕರವಾದ ಸೃಷ್ಟಿ-ಏಕೆಂದರೆ ನಮ್ಮ ಸತ್ತೆಯೆಲ್ಲವೂ ಸತತ ಸರ್ಜನ ಕ್ರಿಯೆಯಿಂದ ತುಂಬಿ ಹೋಗಿದೆ - ಅದೂ ಎಂಥ ಸರ್ಜನ? ಸರ್ಗ? ಮಾನವನ ಇಡೀ ಬಾಳಿನ (ಇರವಿನ) ವಿಶ್ವದ ಸರ್ಗ (ಸೃಷ್ಟಿ). "ಸವಿತಾರನ ಸರ್ವಂಕಷ ದೃಢೀಕರಣವು ವಿಸ್ತಾರವಾದುದು."

ಸೂರ್ಯನೇ ದ್ರಷ್ಟಾರ, ಆವಿರ್ಭಾವಕ. ವಸ್ತುಗಳ ಎಲ್ಲ ರೂಪಗಳನ್ನೂ ಅವನ ಮಹಾಸತ್ಯವು ತನ್ನ ದೀಪ್ತಿಯೊಳಗೆ ಸೆಳೆದುಕೊಳ್ಳುತ್ತದೆ. ಪ್ರಪಂಚವೆಂಬ ಎಲ್ಲ ಪ್ರಾಕೃತಿಕ ವಸ್ತುಗಳನ್ನೂ ಅನುಭವಗಳನ್ನೂ ನಮ್ಮ ಒಳ ಹೊರಗಿನ ವೈಶ್ವತ್ರಿಕ ಪ್ರಜ್ಞೆಯ ಎಲ್ಲ ಆಕೃತಿಗಳನ್ನೂ ಹಾಗೇ ಒಳಸೆಳೆದುಕೊಳ್ಳುತ್ತದೆ. ಅದದರಲ್ಲಿರುವ ಸತ್ಯವನ್ನು ಆ ಮಹಾಸತ್ಯವು ಆವಿರ್ಭವಿಸುವಂತೆ ಮಾಡುತ್ತದೆ. ಹಾಗೆ ಅದದರ ಅರ್ಥವನ್ನೂ ಉದ್ದೇಶವನ್ನೂ ಸಮರ್ಥನೆಯನ್ನೂ ಮತ್ತು ಸದುಪಯೋಗವನ್ನೂ ಹೊರಗೆಡಹುತ್ತದೆ. ಯಜ್ಞದ ಕ್ರಿಯಾಶಕ್ತಿಗಳನ್ನು ಸುವ್ಯವಸ್ಥಿತಗೊಳಿಸಿ ಅದು ನಮ್ಮ ಇಡೀ ಬಾಳಿನ (ಅಸ್ತಿತ್ವದ, ಸತ್ತೆಯ) ವಿಧಿ ಸ್ವರೂಪದಲ್ಲಿ ಒಳಿತನ್ನು ಸೃಜಿಸುತ್ತದೆ ಅಥವಾ ಉತ್ಪಾದಿಸುತ್ತದೆ. ಏಕೆಂದರೆ ಎಲ್ಲವುಗಳಿಗೂ ಅವವುಗಳ ನ್ಯಾಯ್ಯವಾದ ಸತ್ತಾ ಕಾರಣ, ಸತ್ ಪ್ರಯೋಜನ ಮತ್ತು ಸದ್‌ಭೋಗ-ಎಂಬವುಗಳಿರುತ್ತವೆ. ಅವುಗಳಲ್ಲಿರುವ ಈ ಸತ್ಯವು ದೊರಕಿ ಉಪಯುಕ್ತವಾದಾಗ ಎಲ್ಲ ವಸ್ತುಗಳೂ ಆತ್ಮಹಿತಕರವಾದುದನ್ನೇ ಉತ್ಪಾದಿಸುವುವು. ಆತ್ಮದ ಯೋಗಕ್ಷೇಮವನ್ನು ಹೆಚ್ಚಿಸುವುವು. ಅದರ ಸುಖವನ್ನು ಹೆಚ್ಚಿಸುವುವು. ಈ ದಿವ್ಯಕ್ರಾಂತಿಯು ನೀಚ ಭೌತಿಕ ಜೀವನದಲ್ಲೂ ಉಚ್ಚ

(ಹೆಚ್ಚುಪೂರ್ಣವಾದ) ಅಂತರ್ಜೀವನದಲ್ಲೂ ಸಂಭವಿಸುತ್ತದೆ ; ಉಚ್ಚವು ನೀಚವನ್ನು ತನ್ನ ಅಭಿವ್ಯಕ್ತಿಗೆ ಬಳಸಿಕೊಳ್ಳುತ್ತದೆ. "ದ್ರಷ್ಟಾರನು ಎಲ್ಲ ಆಕಾರಗಳನ್ನು ತನ್ನ ಜವಾಬ್ದಾರಿಯೊಳಗೆ ತೆಗೆದುಕೊಳ್ಳುತ್ತಾನೆ. ಅವನು ದ್ವಿಪಾದ (ದ್ವಿಪಾತ್) ಹಾಗೂ .ಚತುಷ್ಪಾದ (ಚತುಷ್ಪಾತ್)[೧] ಎಂಬ ಇರ್ಪದಿ-ನಾಲ್ಪದಿ ಜೀವಿಗಳೆಲ್ಲವುಗಳಿಗೂ ಒಳಿತನ್ನು ಉಂಟುಮಾಡುತ್ತಾನೆ.

ಸೂಕ್ತದ ಉಳಿದ ಭಾಗದಲ್ಲಿ ಈ ಹೊಸ ಸೃಷ್ಟಿಯ ಪ್ರಕ್ರಿಯೆಯನ್ನು ವರ್ಣಿಸಲಾಗಿದೆ. ಶುದ್ಧ ಮನದ ನೆಲೆಯ ಮೇಲೆ ಸರ್ವೋಚ್ಚ ಶ್ರೇಯಸ್ಸಾಗಿರುವ ಸೂರ್ಯ ಸವಿತಾರನು ಮಾನವ ಪ್ರಜ್ಞೆಯಲ್ಲಿ ಶ್ರೇಯಸ್ಸಿಗೆ ಗುಪ್ತ ಸ್ವರ್ಗೀಯ ಶಿಖರವನ್ನು ಆವಿರ್ಭವಿಸುವಂತೆ ಮಾಡುತ್ತಾನೆ ; ಮತ್ತು ನಾವು ನಮ್ಮ ಭೌತ ಜೀವನದ ಭೂಮಿಯಿಂದ ಮೇಲೆ ನೋಡಲು ಶಕ್ತರಾಗುವೆವು ಹಾಗೂ ಅಜ್ಞಾನ ರಾತ್ರಿಯ ಅಸ್ಪಷ್ಟತೆಗಳಿಂದ ಮುಕ್ತರಾಗುವೆವು. ನಮ್ಮ ಬಾಳಿನ ಯಾವ ಬದಿಗಳ ಮೇಲೆ ಬೆಳಕು ಬೀಳಲು ಸಾಧ್ಯವೋ ಆ ಬದಿಗಳ ಮೇಲೆಲ್ಲಾ ಅದರ ಬೆಳಕು ಚೆಲ್ಲಿ, ಆ ಬದಿಗಳನ್ನು ಬೆಳಗಿಸಿ ಸೂರ್ಯನಂತೆ[೨] ಉಷಾಪಥದಲ್ಲಿ ಆ ಶ್ರೇಯೋರೂಪದ ಸೂರ್ಯನು ನಡೆಯುತ್ತಾನೆ. ಏಕೆಂದರೆ, ಅತಿಮಾನಸ ತತ್ತ್ವವಾದ ಪರಮಸತ್ಯವು ಈ ನೀಚಾಸ್ತಿತ್ವದ ಮೇಲೆ ಪ್ರಭುತ್ವ ಸ್ಥಾಪನೆಯನ್ನು (ಪ್ರಕಟವಾಗಿ) ಸ್ಥಾಪಿಸುವುದಕ್ಕೆ ಮುಂಚಿತವಾಗಿ ಮಾನಸಿಕ ಪ್ರಬೋಧವು ಯಾವಾಗಲೂ ಅಗತ್ಯ. "ಸ್ರಷ್ಟಾರನು ಅತ್ಯಪೇಕ್ಷಣೀಯನು ; ಅವನು ಎಲ್ಲ ಸ್ವರ್ಗಗಳನ್ನೂ ಮೂಡಿಬರುವಂತೆ ಮಾಡಿ (ಅನುಸರಿಸಿ ಯಾ ತದನುಗುಣವಾಗಿ ) ಉಷೆಯ ಪುರೋಗಾಮಿತ್ವವನ್ನು ಬೆಂಬಿಡಿದು ವ್ಯಾಪಕವಾಗಿ ಪ್ರಕಾಶಿಸುತ್ತಾನೆ."

ಈ ಮಹಾಸೂರ್ಯಯಾತ್ರೆಯಲ್ಲಿ[೩] ಎಲ್ಲ ದೇವತೆಗಳೂ ಸೂರ್ಯನ ಅನುಯಾಯಿಗಳು ಮತ್ತು ಅವನ ಬೆಳಕಿನ ಪ್ರಣೋದದಿಂದ ಆ ದೇವತೆಗಳೆಲ್ಲಾ ಅವನ ವೈಶಾಲ್ಯವನ್ನು ಪಡೆಯುವುವು. ಅಂದರೆ, ಮಾನವನಲ್ಲಿರುವ ಇತರ ದೈವಿಕ ಸುಪ್ತ ಕೌಶಲಗಳೆಲ್ಲವೂ (ಸುಪ್ತ ಯೋಗ್ಯತೆಗಳೆಲ್ಲವೂ) ಅವನಲ್ಲಿರುವ ಮಹಾಸತ್ಯ-ಮಹಾಜ್ಯೋತಿಗಳ ವಿಸ್ತರಣದ ಜೊತೆಜೊತೆಗೇ ವಿಸ್ತರಿಸುವುವು, ಆದರ್ಶ ಅತಿಮಾನಸದ ಸಾಮರ್ಥ್ಯದಲ್ಲಿ ಅವು ಅದೇ ಅನಂತತೆಯ ಸರಿಯಾದ ವಿವರ್ತದ ಆಯಾಮವನ್ನು, ಸರಿಯಾದ ಕರ್ಮವನ್ನು ಮತ್ತು ಸರಿಯಾದ ಜ್ಞಾನವನ್ನು ಪಡೆಯುತ್ತವೆ. ಪರಮಸತ್ಯವು ತನ್ನ ಬೃಹತ್ತೆಯಲ್ಲಿ ಎಲ್ಲವನ್ನೂ ಅನಂತ ವಿಶ್ವಜೀವನದ ಸ್ವರೂಪಕ್ಕೆ ತಿರುಗಿಸುವುದು ಮತ್ತು ಜೊತೆ ಜೊತೆಗೇ ಪರಿಮಿತವಾದ ವ್ಯಕ್ತಿಜೀವನವನ್ನು ಪದಚ್ಯುತಗೊಳಿಸುತ್ತದೆ ಹಾಗೂ ಅವುಗಳ ನಿಜಸತ್ತೆಯಲ್ಲಿ ಭೌತಪ್ರಜ್ಞೆಯ ರಾಜ್ಯಗಳ ನಕ್ಷೆಯನ್ನು ತಯಾರಿಸುತ್ತದೆ-ಸವಿತೃತ್ವದಲ್ಲಿ ಆ ಮಹಾಸೂರ್ಯನು ತಾನೇ ನಮ್ಮ ಪರಿಮಿತ (ಉಪಾಹಿತ) ವ್ಯಕ್ತಿ ಜೀವನಕ್ಕೆ ಕಾರಣನಾಗಿದ್ದನು-ಎಂಬುದಿಲ್ಲಿ ಅವಿಸ್ಮರಣೀಯ. ಇದೂ ನಮ್ಮಲ್ಲೊಂದು ಸೃಷ್ಟಿ, ಸರ್ಗ-ಇದೇನೋ ಮೊದಲೇ ನಮ್ಮ ಅಜ್ಞಾನಾಂಧಕಾರದಲ್ಲಿ ಅಡಗಿಸಿ ಇಡಲ್ಪಟ್ಟಿತ್ತು- ತೀರಾ ಹೊಸದೇನೂ ಅಲ್ಲ - ಹಾಗೆ ಗುಪ್ತವಾಗಿದ್ದ ಈ ಭೌತಜ್ಞಾನದ ನಿಜ ಸತ್ತೆಯನ್ನೀಗ

---

೧. "ದ್ವಿಪಾದೇ, ಚತುಷ್ಪಾದೇ" ಎಂಬ ಸಂಕೇತಗಳನ್ನು ಬೇರೆ ರೀತಿಯಿಂದಲೂ ಅರ್ಥೈಸಬಹುದು. ಅದರ ಚರ್ಚೆಗಿಲ್ಲಿ ಆರಂಭಿಸಿದರೆ ಬಹಳ ಜಾಗ ತೆಗೆದುಕೊಂಡೀತು.

೨. ಗುಪ್ತ ಅನನ್ವಯಾಲಂಕಾರ=ಸೂರ್ಯನಂತೆ ಸೂರ್ಯನು ಉಷಾನುಸಾರಿ-ಅನುವಾದಕ.

೩. Capital Letter ಇರುವಲ್ಲೆಲ್ಲಾ ಪರ, ಪರಮ, ಮಹಾ, ದಿವ್ಯ ಇತ್ಯಾದಿ ವಿಶೇಷಣಗಳನ್ನು ಬಳಸಲಾಗಿದೆ - ಅನುವಾದಕ.

ಮಹಾಸೂರ್ಯನು ವ್ಯಕ್ತಪಡಿಸಿದನು-ಅಷ್ಟೇ. ಅಜ್ಞಾನವು ಭೌತ, ಅದಿವ್ಯ-ಜ್ಞಾನವು ಅಭೌತ, ದಿವ್ಯ ಮತ್ತು ಅತಿಮಾನಸ-ಎಂಬುದಿಲ್ಲಿ ತಾತ್ಪರ್ಯ-ಅಜ್ಞಾನವು ದಿತಿಜ ಹಾಗೂ ಜ್ಞಾನವು ಅದಿತಿಜ-ಎಂದೂ ಗ್ರಹಿಸಬಹುದು. ಆದರೆ ದೈತ್ಯನನ್ನು ಯಜ್ಞವು ಆದಿತ್ಯನನ್ನಾಗಿ ಪರಿವರ್ತಿಸುವುದು ವೇದಾರ್ಥ ಸಾರ, ವೇದೋದ್ದೇಶ-ಏಕೆಂದರೆ ದೈತ್ಯನ ಅಸ್ತಿತ್ವವೂ ಆದಿತ್ಯಮೂಲವುಳ್ಳದ್ದೇ-ದಿತಿಯು ಆದಿತ್ಯಧೀನೆ-ಎಂಬುದು ತಾತ್ಪರ್ಯ ವಿಶ್ಲೇಷಣೆ, ಗೂಢಾರ್ಥದಲ್ಲಿರುವ ನಿಗೂಢಾರ್ಥ. ಈ ಅಡಗಿಸಿಡುವ ಕಾರ್ಯವು, ಜ್ಞಾನ ಪ್ರಚ್ಛಾದನವು ಕತ್ತಲು ಪಾರ್ಥಿವ ರಾಜ್ಯಗಳನ್ನು ರಾತ್ರಿಯಲ್ಲಿ ನಮ್ಮಿಂದ ಮುಚ್ಚಿಡುವುದಕ್ಕೆ ಸರಿಸಮ ; ಅಜ್ಞಾತ ಜ್ಞಾನವು ಆವಿರ್ಭವಿಸುವುದೂ ಉಷಾನುಯಾಯಿಯಾಗಿ ಸೂರ್ಯನು ಒಂದೊಂದಾಗಿ ಭೌತ ಪ್ರದೇಶಗಳನ್ನು ನಮ್ಮ ದೃಷ್ಟಿಗೆ ಬೀಳುವಂತೆ ಮಾಡಿದಾಗ ಹೇಗೋ ಹಾಗೇ ಎಂದು ನಾವು ತಿಳಿಯಬೇಕು. "ಯಾರ ಪ್ರಯಾಣವನ್ನು ಅನುಸರಿಸಿ ಅವನ ಬಲದಿಂದ ಇತರ ದೇವತೆಗಳು ಕೂಡ ದಿವ್ಯತೆಯ (ದೇವೇಂದ್ರನ ದೇವಾನಾಂ ದೇವಃ ಎನ್ನಿಸಿದವನ) ವ್ಯಾಪ್ತಿಯನ್ನು ಸೇರುವುವೋ, ಯಾವ ಪ್ರೋಜ್ವಲ ದೇವನಾದ ಸವಿತೃವು ಸ್ವಮಹತ್ತ್ವೆಯಿಂದ ಪಾರ್ಥಿವ ಪ್ರಭಾ ರಾಜ್ಯಗಳ ನಕ್ಷೆಯನ್ನು (ಭೂಪಟವನ್ನು) ಬರೆಯುವನೋ" ಅವನೇ ಸೂರ್ಯನು; ಪಾರ್ಥಿವ ಸೂರ್ಯನು ಅಪಾರ್ಥಿವ ಸೂರ್ಯನ ಸಂಕೇತವೆಂದಿಲ್ಲಿ ತಾತ್ಪರ್ಯವು. ಪಾರ್ಥಿವದ ಅಪಾರ್ಥಿವೀಕರಣಕ್ಕೆ ಯಜ್ಞವು ಸಾಧನವೆಂಬುದು ತಾತ್ಪರ್ಯದ ವಿಶ್ಲೇಷಣೆ.

ಆದರೆ ದಿವ್ಯಸತ್ಯವು ಬೆಳಗಿಸಿ ಸಮಗ್ರ ಕಾರ್ಯವನ್ನು ಮಾಡಲು ನಮ್ಮ ಪಾರ್ಥಿವ ಪ್ರಜ್ಞೆಯ ಪೂರ್ಣಶಕ್ಯತೆಯೊಂದನ್ನೇ ತೆಗೆದುಕೊಳ್ಳುವುದೆಂದಿಲ್ಲ. ಅದು ಶುದ್ಧಮನದ ಮೂರು ಭಾಸ್ವತ್‌ಪ್ರಪಂಚಗಳನ್ನೂ ವ್ಯಾಪಿಸುತ್ತದೆ ("ತ್ರೀಣಿ ರೋಚನಾ") ; ಅದು ನಮ್ಮ ಸಂವೇದನೆಗಳ, ಭಾವನೆಗಳ, ಬುದ್ಧಿಯ, ಪ್ರಾತಿಭೇಯ ವಿಚಾರ ಶಕ್ತಿಯ ದಿವ್ಯ ಸಾಧ್ಯತೆಗಳನ್ನು ನಮ್ಮ ಸಂಬಂಧಕ್ಕೆ ತಂದು, ಉತ್ತಮ ಸುಪ್ತ ಕೌಶಲಗಳನ್ನು ಅವುಗಳ ಇತಿಮಿತಿಗಳಿಂದ ಮುಕ್ತಗೊಳಿಸಿ, ಭೌತ ಪ್ರಪಂಚಕ್ಕೆ ಸದಾ ತಗುಲಿಕೊಳ್ಳುವ ಪ್ರವೃತ್ತಿಯನ್ನು ನಿಲ್ಲಿಸಿ, ನಮ್ಮ ಇಡೀ ಮಾನಸಸತ್ತೆಯ ಗುರಿಯನ್ನು (ಬೆಳವಣಿಗೆಯ ಮಹಾಧ್ಯೇಯವನ್ನು) ಪೂರ್ತಿಗೊಳಿಸುತ್ತದೆ. ಅದರ ಚಟುವಟಿಕೆಗಳು ತಮ್ಮ ಪೂರ್ಣತಮ ಪ್ರಕಟತೆಯನ್ನು ಪಡೆಯುತ್ತವೆ ; ಪೂರ್ಣಸತ್ಯದ ಬಾಳಿನಲ್ಲಿ ಅವುಗಳೆಲ್ಲವನ್ನೂ ಸೂರ್ಯಕಿರಣಗಳ ಮೂಲಕ ಸೇರಿಸಿಕೊಂಡು ಪೂರ್ಣತ್ವಕ್ಕೆ ಏರುತ್ತವೆ - ಅರ್ಥಾತ್ - ನಮ್ಮಲ್ಲಿ ಪ್ರಕಟವಾದ ದಿವ್ಯ ಅತಿಮಾನಸ ಪ್ರಜ್ಞೆಯ ಪೂರ್ಣ ಚಂಚದ್‌ವೈಭವದ ಮೂಲಕ ಆ ಪ್ರಕಾರ ಪೂರ್ಣವಾಗುತ್ತವೆ ಮತ್ತು "ಓ ಸವಿತಾರನೇ, ನೀನು ಮೂರು ಉಜ್ವಲ ಲೋಕಗಳಿಗೆ ಹೋಗುವೆ ಮತ್ತು ನೀನು ಮಹಾಸೂರ್ಯನ ಕಿರಣಗಳಿಂದ ಪೂರ್ಣವಾಗಿ ಅಭಿವ್ಯಕ್ತನಾಗುತ್ತೀಯೆ (ಅಥವಾ ಆ ಕಿರಣ ಸಾಧನದಿಂದ ಸಂಘಟಿತವಾಗಿ ಸೆಳೆದುಕೊಳ್ಳಲ್ಪಡುತ್ತೀಯೆ)."

ಆಗ ತುಂಗತರವಾದ ಅಮೃತತ್ವದ ರಾಜ್ಯವು -ಅರ್ಥಾತ್ - ಸಚ್ಚಿದಾನಂದವು ಅನಾವೃತವಾಗುವುದು, ಪೂರ್ಣವಾಗಿ ಈ ಜಗದಲ್ಲಿ ಹಬ್ಬಿ ಹೊಳೆಯುತ್ತದೆ. ನೀಚೋಚ್ಚಗಳು ಆಗ ರಾಜಿಯಾಗುತ್ತವೆ. ಆ ಅತಿಮಾನಸ ಆವಿರ್ಭೂತಿಯಲ್ಲಿ. ರಾತ್ರಿ ಸ್ವರೂಪದ ಅಜ್ಞಾನವು ಸರ್ವ ಸಮಗ್ರ ಸತ್ತೆಯ ಉಭಯ ಪಾರ್ಶ್ವಗಳಲ್ಲೂ ಬೆಳಕಿಗೆದುರಾಗುತ್ತದೆ - ನಮ್ಮ ವರ್ತಮಾನ ಸ್ಥಿತಿಯಲ್ಲಾದರೋ ಒಂದು ಬದಿಯಲ್ಲಿ ಮಾತ್ರ ಅದು ಬೆಳಕಿಗೆದುರಾಗಬಲ್ಲದಾಗಿದೆ. ಈ ತುಂಗತರ ರಾಜ್ಯವು ನಮಗೆಲ್ಲಾ ಮಿತ್ರದೇವನಿಂದ ಪ್ರತಿನಿಹಿತವಾದ ಒಲವು-ಬೆಳಕುಗಳ ತತ್ವವೆನ್ನಿಸಿದ ಪರಮಸುಖತತ್ವದಲ್ಲಿ ತಾನು ಅಭಿನ್ನನೆಂಬ ಒಪ್ಪಿಗೆಯಿತ್ತು, ನೆಲೆನಿಲ್ಲುತ್ತದೆ. ಪೂರ್ಣದೇವತ್ವದಲ್ಲಿ

ಪರಮಸತ್ಯೇಶ್ವರನು ಪ್ರಕಟವಾದಾಗ ಅವನೇ ಪರಮಾನಂದ ಪತಿಯಾಗುವನು. ಅವನ ಸತ್ತಾವಿಧಿಯು ಅವನ ಚಟುವಟಿಕೆಗಳನ್ನು ನಿಯಂತ್ರಿಸುವ ತತ್ತ್ವವು ; ಅದೇ ಪ್ರೇಮ. ಏಕೆಂದರೆ ಜ್ಞಾನ-ಕರ್ಮಗಳ ಸರಿಯಾದ ವ್ಯವಸ್ಥೆಯಲ್ಲಿ ಇಲ್ಲಿಯ ಎಲ್ಲವೂ ಒಳಿತಾಗಿ, ಸುಖವಾಗಿ, ಆನಂದವಾಗಿ ಮಾರ್ಪಡುತ್ತವೆ. "ಎಲೈ ಮಿತ್ರದೇವನೇ, ನೀನು ಇರುಳನ್ನು ಇಬ್ಬದಿಯಲ್ಲೂ ಆಕ್ರಮಿಸಿದ್ದೀಯೆ ; ನೀನು ನಿನ್ನ ಕರ್ಮದಿಂದ ನೀನಾದೆ (ನೀನಾಗುವೆ)" ಅರ್ಥಾತ್-ನೀನು ಇದ್ದದ್ದಕ್ಕಿಂತ ಈಗ ನಿನ್ನ ಕರ್ಮಬಲದಿಂದ ಹೆಚ್ಚಿನವನಾಗಿ ತೋರುವೆ - ಎಂದು ಸಾರಾಂಶ.

ದಿವ್ಯ ಜೀವನದ ಪರಮಸತ್ಯವು ಕ್ರಮೇಣ ನಮ್ಮಲ್ಲಿಯ ಎಲ್ಲ ಸರ್ಗಗಳ ಏಕೈಕ ಒಡೆಯನಾಗುವುದು. ಮತ್ತು ಅವನ ಸತತ ಪ್ರತ್ಯಾಗಮನಗಳಿಂದ ಅಥವಾ ಅವನ ಎಡೆಬಿಡದ ಪ್ರಗಮನದಿಂದ ಸೃಷ್ಟಿಕರ್ತನಾದ ಅವನು ಸೃಷ್ಟಿಪೋಷಕನಾದ ಪೂಷನ್ ಎನ್ನಿಸುವನು - ಸವಿತೃವು ಪೂಷನ್ ಎಂದಾಗುವನು. ಆತನು ತನ್ನ ಸತತ ಪ್ರಗತಿಪರ ಸರ್ಜನದಿಂದ ನಮ್ಮ ಆಗುವಿಕೆಯನ್ನು ಇಡೀ ಜಗತ್ತಿಗೆ ತೋರಿಸಿ ಬೆಳಗಿಸುವವರೆಗೆ ನಮ್ಮ ಮೇಲೆ ತನ್ನ ಅಧಿಕಾರವನ್ನು ಬಲಾತ್ಕಾರದಿಂದ ಚಲಾಯಿಸುವನು. ನಾವು ಪೂರ್ಣವಾಗಿ ಬೆಳೆದು ನಿಲ್ಲುತ್ತೇವೆ. ಪೂರ್ಣವು ವೈಶ್ವತ್ರಿಕ ಅನಂತ. ಆದುದರಿಂದಲೇ ಅತ್ರಿಯ ಮಗನಾದ ಶ್ಯಾವಾಶ್ವನು ಸವಿತೃವನ್ನು, ದೃಢಪಡಿಸುವುದರಲ್ಲಿ ಜಯಶೀಲನಾದನು - ತನ್ನ ಸತ್ತೆಯಲ್ಲೇ ಬೆಳಗುವ ಸತ್ಯ ಸ್ವರೂಪದಲ್ಲಿ - ಅರ್ಥಾತ್-ಸರ್ಜಕ ಪ್ರಗತಿಪರ, ಮಾನವತಾಸಮೃದ್ಧಿಕರ ಮತ್ತು ಮಾನವನನ್ನು ಅವನ ಅಹಂಕಾರಾತ್ಮಕ ಮಿತಿಯಿಂದ ಹೊರದೆಗೆದು ವೈಶ್ವತ್ರಿಕತೆಗೆ ತಂದವನು-ಎನ್ನಿಸುವುದರಲ್ಲಿ ಯಶಸ್ವಿಯಾದನು. "ಮತ್ತು ಓ ದೇವರೇ, ನಿನಗೆ ಮಾತ್ರ ಸವಿತೃತ್ವವಿದೆ, ನೀನೇ ಪೋಷಕನಾಗುವೆ-ಹೇಗೆ? ನಿನ್ನ ಗಮನಗಳಿಂದ ; ಮತ್ತು ನೀನು ಈ ಇಡೀ ಜಗವನ್ನು ಸಂಪೂರ್ಣವಾಗಿ ಬೆಳಗುವೆ (ಅಕ್ಷರಶಃ ನೀನೇ ಇಡೀ ಜಗವಾಗುವೆ.) ಶ್ಯಾವಾಶ್ವನು, ಹೇ ಸವಿತಾರನೇ, ನಿನ್ನ ದೃಢೀಕರಣವನ್ನು ಸಾಧಿಸಿದ್ದಾನೆ."



# VI

# ದಿವ್ಯ ಉಷೆ

## ಋಗ್ವೇದ III.61

**ಉಷೋ ವಾಜೇನ ವಾಜಿನಿ ಪ್ರಚೇತಾಃ ಸ್ತೋಮಂ ಜುಷಸ್ವ ಗೃಣತೋ ಮಘೋನಿ ।**
**ಪುರಾಣೀ ದೇವಿ ಯುವತಿಃ ಪುರಂಧಿರನು ವ್ರತಂ ಚರಸಿ ವಿಶ್ವವಾರೇ ॥ ೧ ॥**

೧. ಹೇ ಉಷಾದೇವಿಯೇ, ಹೇ ದ್ರವ್ಯ ಶ್ರೀಮತಿಯೇ, ನಿನ್ನನ್ನು ಅಭಿವ್ಯಕ್ತಗೊಳಿಸಿದವನ ದೃಢೀಕರಣವನ್ನು ಪ್ರಜ್ಞಾವತಿಯಾಗಿ ಬೆನ್ನು ಬಿಡದೆ ಅಂಟಿಕೋ-ಹೇ ಸಮೃದ್ಧಳೇ, ದೇವಿಯಾದ ನೀನು ಪ್ರಾಚೀನ ಕಾಲದವಳಾದರೂ ಯುವತಿಯಾಗಿರುವೆ ; ಸರ್ವವರದಾತ್ರಿಯೇ, ನಿನ್ನ ಚಟುವಟಿಕೆಗಳ ವಿಧಿಯನ್ನು ಪಾಲಿಸಿಕೊಂಡು ಬಹುಜನ ವಿಚಾರವಂತರನ್ನು ಪ್ರಚೋದಿಸಿದ್ದೀಯೆ.

**ಉಷೋ ದೇವ್ಯಮರ್ತ್ಯಾ ವಿ ಭಾಹಿ ಚಂದ್ರರಥಾ ಸೂನೃತಾ ಈರಯಂತೀ ।**
**ಆ ತ್ವಾವಹಂತು ಸುಯಮಾಸೋ ಅಶ್ವಾ ಹಿರಣ್ಯವರ್ಣಾ ಪೃಥುಪಾಜಸೋ ಯೇ ॥ ೨ ॥**

೨. ದಿವ್ಯ ಉಷೆಯೇ, ನಿನ್ನ ಸುಖಕರ ಬೆಳಕಿನ ರಥದಲ್ಲಿ ಹೇ ಅಮರ್ತ್ಯೆಯೇ, ದೂರದವರೆಗೂ ಪರಮ ಸತ್ಯದ ಆಹ್ಲಾದಕ ಸ್ವರಗಳನ್ನು ಕಳುಹು. ಸರಿಯಾದ ಮಾರ್ಗದರ್ಶನ ಪಡೆದ ನಿನ್ನ ಕುದುರೆಗಳು ಬಂಗಾರದಂತೆ ಹೊಳೆವ ಬಣ್ಣದ ಮತ್ತು ಅವುಗಳಿಗಿಂತ ಬಲಶಾಲಿನಿಯಾದ ನಿನ್ನನ್ನು ಇಲ್ಲಿಗೆ ಕರೆತರಲಿ.

**ಉಷಃಪ್ರತೀಚೀ ಭುವನಾನಿ ವಿಶ್ವೋರ್ಧ್ವಾ ತಿಷ್ಠಸ್ಯಮೃತಸ್ಯ ಕೇತುಃ ।**
**ಸಮಾನಮರ್ಥಂ ಚರಣೀಯಮಾನಾ ಚಕ್ರಮಿವ ನವ್ಯಸ್ಯಾ ವವೃತ್ಸ್ವ ॥ ೩ ॥**

೩. ಉಷಾ ದೇವಿಯೇ, ಸರ್ವಲೋಕಗಳೆದುರಿಗೆ ನೀನು ತಲೆಯೆತ್ತಿ ನಿಂತಿದ್ದೀಯೆ. ಮತ್ತು ನೀನು ಅವುಗಳ ಅಮೃತತ್ವದ ಅಪರೋಕ್ಷಾನುಭೂತಿ. ನೀನು ಅವುಗಳ ಮೇಲೆ ಗಾಲಿಯಂತೆ ನಡೆಯುವ ಎಲೈ ಹೊಸಹಗಲೇ, ಆ ಲೋಕಗಳಷ್ಟೇ ಕ್ಷೇತ್ರದಲ್ಲಿ ನೀನು ಪ್ರಯಾಣ ಮಾಡುತ್ತೀಯೆ.

**ಅವ ಸ್ಯೂಮೇವ ಚಿನ್ವತೀ ಮಘೋನ್ಯುಷಾ ಯಾತಿ ಸ್ವಸರಸ್ಯ ಪತ್ನೀ ।**
**ಸ್ವರ್ಜನಂತೀ ಸುಭಗಾ ಸುದಂಸಾ ಆಂತಾದ್ದಿವಃ ಪಪ್ರಥ ಆ ಪೃಥಿವ್ಯಾಃ ॥ ೪ ॥**

೪. ಪರಮಾನಂದ ವಧುವಾದ ಉಷೆಯು ತನ್ನ ಶ್ರೀಯಃ ಸಮೃದ್ಧಿಯಲ್ಲಿ-ಹೊಲಿದ "ಬಟ್ಟೆ"ಯೊಂದನ್ನು ಜೀಲಿಸುವವಳಂತೆ ಚಲಿಸುತ್ತಾಳೆ. ಸ್ವರ್‌ನ್ನು ಸೃಷ್ಟಿಸುತ್ತಾ ಕಾರ್ಯದಲ್ಲಿ ಪರಿಪೂರ್ಣತೆ ತೋರುವಂಥ, ಭೋಗದಲ್ಲಿ ಸಮಗ್ರತೆಯುಳ್ಳಂಥ ಆಕೆ ಸ್ವರ್ಗದ ತುದಿಯಿಂದ ಭೂಮಿಯವರೆಗೆ ಅಗಲವಾಗುತ್ತಿದ್ದಾಳೆ.

**ಅಚ್ಛಾವೋ ದೇವೀಮುಷಸಂ ವಿಭಾತೀಂ ಪ್ರವೋಭರಧ್ವಂ ನಮಸಾ ಸುವೃಕ್ತಿಂ ।**
**ಊರ್ಧ್ವಂ ಮಧುಧಾ ದಿವಿಪಾಜೋ ಅಶ್ರೇತ್ ಪ್ರರೋಚನಾ ರುರುಚೇ ರಣ್ವಸಂದೃಕ್ ॥ ೫ ॥**

೫. ನೀವು ಉಷೆಯನ್ನು ಭೇಟಿ ಮಾಡಿರಿ ; ಅವಳೀಗ ಹಬ್ಬಿಕೊಂಡು ನಿಮ್ಮತ್ತ ಬರುತ್ತಿದ್ದಾಳೆ ; ನಿಮ್ಮ ಸಂಪೂರ್ಣ ಕ್ರಿಯಾಶಕ್ತಿಗಳೊಡನೆ ನೀವು ಆಕೆಗೆ ಶರಣಾಗತರಾಗಿರಿ. ಸ್ವರ್ಗದಲ್ಲಿ ಅವಳು ಅತ್ಯುದಾತ್ತ ಪ್ರಣೋದವುಳ್ಳವಳಾಗಿ ಆ ಪ್ರಣೋದವನ್ನು ಬಳಸಿ ಮಾಧುರ್ಯವನ್ನು ನೆಲೆಗೊಳಿಸುತ್ತಿದ್ದಾಳೆ ; ಅವಳು ದ್ಯುಮಲ್ಲೋಕಗಳನ್ನು ಹೊಳೆಯುವಂತೆ ಮಾಡುತ್ತಾಳೆ ಮತ್ತು ಅವಳು ಸುಖ-ಸಮೃದ್ಧಿಗಳ ದರ್ಶನವಾಗಿದ್ದಾಳೆ.

**ಋತಾವರೀ ದಿವೋ ಅರ್ಕೈರಬೋಧ್ಯಾ ರೇವತೀ ರೋದಸೀ ಚಿತ್ರಮ ಸ್ಥಾಂ ।**
**ಆಯತೀಮಗ್ನ ಉಷಸಂ ವಿಭಾತೀಂ ವಾಮಮೇಷಿ ದ್ರವಿಣಂ ಭಿಕ್ಷಮಾಣಃ ॥ ೬ ॥**

೬. ಸ್ವರ್ಗದ ಮಿಂಚುಗಳಿಂದ ಪರಮಸತ್ಯಧಾರಿಣಿಯನ್ನಾಗಿ ಯಾರಾದರೂ ನೋಡಬಹುದು. ಅವಳು ಅತ್ಯಾಹ್ಲಾದ ಮಯಿಯಾಗಿ ಬರುತ್ತಾಳೆ. ಎಲ್ಲಿಗೆ? ಅದರ ವಿಚಿತ್ರ ವರ್ಣಗಳೊಂದಿಗೆ ಎರಡು ಅಂತರಿಕ್ಷಗಳಿಗವಳು ಬರುತ್ತಾಳೆ. ಎಲೈ ಅಗ್ನಿಯೇ, ನಿನ್ನ ಮೇಲೆ ಹೊಳಪು ಚೀರುತ್ತಾ ಉಷೆ ಬರುವಾಗ ನೀನು ಅವಳಿಂದ ಆಹ್ಲಾದವನ್ನು ಬಯಸಿ ಅದರ ಸಾರವನ್ನು ಪಡೆಯುತ್ತೀಯೆ.

**ಋತಸ್ಯ ಬುಧ್ನ ಉಷಸ್ನಾಮಿ ಷಣ್ಯನ್ ವೃಷಾ ಮಹೀ ರೋದಸೀ ಆ ವಿವೇಶ ।**
**ಮಹೀ ಮಿತ್ರಸ್ಯ ವರುಣಸ್ಯ ಮಾಯಾ ಚಂದ್ರೇವ ಭಾನುಂ ವಿ ದಧೇ ಪುರುತ್ರಾ ॥ ೭ ॥**

೭. ಪರಮಸತ್ಯದ ನೆಲೆಗಟ್ಟಿನಲ್ಲಿ ತನ್ನ ಒತ್ತಡವನ್ನು ಹಾಕಿ, ಉಷೆಯರ ಬುಡದಲ್ಲಿ ಪ್ರಚೋದನೆ ಮಾಡಿ, ಅವರ ಒಡೆಯನು ಅಂತರಿಕ್ಷಗಳ ವಿಸ್ತಾರವನ್ನು ಹೊಗುವನು. ವರುಣ-ಮಿತ್ರರ ವಿವೇಕವು ವಿಶಾಲ (ಪರಮ ವಿಶಾಲ), ಸಂತೋಷಕರವಾದ ಉಜ್ವಲತೆಯಲ್ಲಿರುವ ಹಾಗೆ ಗುಂಪುಗುಂಪಾಗಿ (ಗುಣಿತ ಸಂಖ್ಯೆಯಿಂದ) ಅದು ಹೆಬ್ಬೆಳಕನ್ನು ಕುರಿತು ಅಪ್ಪಣೆ ಕೊಡುತ್ತದೆ.

❖ ❖

# ವ್ಯಾಖ್ಯಾನ

ಸೂರ್ಯ ಸವಿತಾರನು ತನ್ನ ಬೆಳಗುವ ಕರ್ತವ್ಯದಲ್ಲಿ ಉಷೆಯ ಪ್ರಗತಿಯನ್ನು ಅನುಸರಿಸುತ್ತಾನೆ. ಇನ್ನೊಂದು ಸೂಕ್ತದಲ್ಲಿ ಸತತೋದಯಿನಿಯರಾದ ಉಷಸ್ಸುಗಳ ಚಲನವಲನಗಳಿಂದ ಮನಸ್ಸು ಪ್ರಜ್ಞಾಪುಷ್ಟಿಯನ್ನು ಪಡೆದು ಹೆಚ್ಚು ಚುರುಕಾಗುತ್ತದೆ ಎಂದು ಹೇಳಲಾಗಿದೆ. ವೇದದ ಉದ್ದಕ್ಕೂ ಸ್ವರ್ಗಸುತೆಯಾದ ಉಷೆ ಅದೇ ಕಾರ್ಯವನ್ನು ಮಾಡುತ್ತಾಳೆ ಎಂದು ಹೇಳಲಾಗಿದೆ. ಅವಳು ಜಾಗರಿಸುವ ಸಾಧನ ; ಇತರ ದೇವತೆಗಳ ಚಟುವಟಿಕೆಗಳನ್ನೂ ಬೆಳವಣಿಗೆಯನ್ನೂ ಕುರಿತು ಅವಳು ಎಚ್ಚರಿಸುತ್ತಾಳೆ. ಅವಳು ವೈದಿಕ ಸಾಕ್ಷಾತ್ಕಾರದ ಮೊದಲನೆಯ ಉಪಾಧಿ (ಶರ್ತ). ಅವಳ ವರ್ಧಮಾನವಾದ ಬೆಳಕು ಜೀರುವಿಕೆಯ ಕಾರ್ಯದಿಂದ ಮಾನವನ ಇಡೀ ಸ್ವಭಾವವು ಸ್ಪಷ್ಟೀಕೃತವಾಗುತ್ತದೆ. ಅವಳ ಮೂಲಕವೇ ಅವನು ಪರಸತ್ಯದೆಡೆಗೆ ತೆರಳುವನು ; ಅವಳ ಮೂಲಕವೇ ಆತನು ಬ್ರಹ್ಮಾನಂದವನ್ನು ಭೋಗಿಸುವನು. ಋಷಿಗಳು ಹೇಳಿದ ದಿವ್ಯೋಷೆಯೆಂದರೆ, ಮುಸುಕಿನ ಮೇಲೆ ಮುಸುಕನ್ನು ತೆರೆಯುತ್ತಾ ಹೋಗಿ, ಮಾನವನ ಚಟುವಟಿಕೆಗಳಲ್ಲಿ ಪ್ರಕಾಶಮಯ ದೇವತೆಯನ್ನು ಅನಾವರಣ ಮಾಡುವುದಕ್ಕಾಗಿ ಬರುವ ದಿವ್ಯಜ್ಯೋತಿ. ಆ ಜ್ಯೋತಿಯಲ್ಲಿ ಮಹಾಕಾರ್ಯ ನಡೆಯುತ್ತದೆ - ಯಜ್ಞದ ಆಹುತಿ ಅರ್ಪಿತವಾಗಿ ಅದರ ಅಪೇಕ್ಷಣೀಯ ಫಲವು ಮಾನವ ಕುಲದಿಂದ ಗಳಿಸಲ್ಪಡುತ್ತದೆ.

ಅನೇಕಾನೇಕ ಸೂಕ್ತಗಳು ಉಷಾ ದೇವಿಯ ಅಂತಃಸತ್ಯವನ್ನು, ಭೌತಿಕ ಉಷೆಯು ಸಮೃದ್ಧವೂ ಸುಂದರವೂ ಆದ ಅಲಂಕಾರೋಕ್ತಿಗಳ ಮೂಲಕ ಅಡಗಿಸಿಟ್ಟಿರುವುದನ್ನು ಹೇಳುತ್ತವೆ. ಆದರೆ ಮಹರ್ಷಿ ವಿಶ್ವಾಮಿತ್ರನ ಈ ಸೂಕ್ತದಲ್ಲಿ ಸ್ಪಷ್ಟೋಕ್ತಿಗಳಿಂದ ಮತ್ತು ವಿಚಾರದ ಹೊರಮುಖದಲ್ಲಿಯೇ ಮಾನಸಶಾಸ್ತ್ರೀಯವಾದ ವೈದಿಕ ಉಷಃ ಸಂಕೇತವು ಎದ್ದು ಕಾಣಿಸುತ್ತದೆ. ಋಷಿಯು ಗಟ್ಟಿಯಾಗಿ ಅವಳಿಗೆ ಹೇಳುತ್ತಾನೆ : "ಎಲೈ ದ್ರವ್ಯಕೋಶ ಸಮೃದ್ಧಳಾದ ಉಷೆಯೇ, ಬ್ರಹ್ಮಾನಂದಮಯಿಯೇ, ನಿನ್ನನ್ನು ಅಭಿವ್ಯಕ್ತಗೊಳಿಸಿದವನ ದೃಢೀಕರಣವನ್ನು ಜಾಗರಿತ ಪ್ರಜ್ಞೆಯಿಂದ ಅಂಟಿಕೋ." "ಪ್ರಚೇತಸ್" ಎಂಬ ಶಬ್ದವೂ ತತ್ಸಂಬಂಧಿಯಾದ "ವಿಚೇತಸ್" ಎಂಬ ಶಬ್ದವೂ ವೈದಿಕ ಪದಸಂಹತಿಗಳಲ್ಲಿ ನಿತ್ಯ ಪ್ರಯುಕ್ತಗಳು. ಆ ಮೇಲಿನ ವೇದಾಂತ ಪ್ರಯೋಗಗಳಾದ ಪ್ರಜ್ಞಾನ-ವಿಜ್ಞಾನಗಳಿಗೆ ಅವು ಸಮಾನಾರ್ಥಕಗಳಾಗಿರ-ಬಹುದೆಂದು ತೋರುತ್ತದೆ. ತನ್ನ ನೋಟಕ್ಕೆದುರಾಗುವ ವಸ್ತುಗಳೆಲ್ಲವನ್ನೂ ಸ್ವೇತರ (ವಸ್ತುನಿಷ್ಠ) ಪದಾರ್ಥಗಳೆಂದು ನೋಡುವುದು (ಗುರುತಿಸುವುದು) ಪ್ರಜ್ಞಾನ ; ದಿವ್ಯಮನದಲ್ಲದು ವಿಷಯಗಳ ಮೂಲಾಕರ, ಪ್ರಭು ಮತ್ತು ಸಾಕ್ಷಿ ಎಂಬ ಸ್ವರೂಪಗಳನ್ನುಳ್ಳ ವಸ್ತುಜ್ಞಾನ. ಎಲ್ಲವನ್ನೂ ಒಳಗೊಳ್ಳುವ, ಎಲ್ಲ ವಸ್ತುಗಳಲ್ಲೂ ಹೊಗುವ, ಪ್ರಜ್ಞೆಯಲ್ಲಿ ಅವೆಲ್ಲವನ್ನೂ ವ್ಯಾಪಿಸುವ ಸಮಗ್ರ

(ಸರ್ವಂಕಷ) ಜ್ಞಾನವು ವಿಜ್ಞಾನ ; ಅದು ಒಂದು ವಿಧದ ತ್ರಿಪುಟೀಭಂಗದಿಂದ ಲಭಿಸುವ ಜ್ಞಾನ - ಜ್ಞಾತೃ ಜ್ಞೇಯ, ಜ್ಞಾನಗಳ ಐಕ್ಯ- ದ್ರಷ್ಟಾರನೂ ದೃಷ್ಟವೂ ಒಂದೇ ಆಗುವ ಜ್ಞಾನ-ವಸ್ತು ಸತ್ಯದೊಡನೆ ನಾವು ಏಕೀಭವಿಸುವ ಜ್ಞಾನ. ಉಷೆಯು ಋಷಿಯ ಪ್ರತಿಭಾತ ವಿಚಾರವನ್ನೂ ವಾಕ್ಯವನ್ನೂ ಅಕ್ರಮಿಸುವ ಒಂದು ಜ್ಞಾನಶಕ್ತಿಯಾಗಿದ್ದಾಳೆ. ಆ ವಿಚಾರಗಳೂ ವಾಕ್ಯಗಳೂ ಅವಳ ಮನದ ಮುಂದಿಟ್ಟ ಎಲ್ಲವುಗಳ ಸತ್ಯದ ಪ್ರಜ್ಞೆ ಅವಳಾಗಿದೆ. ಏಕೆ? ಅದನ್ನು ಮಾನವನಲ್ಲಿ ಅಭಿವ್ಯಂಜಿಸುವುದಕ್ಕಾಗಿ. ಆಗ ಸತ್ಯದ ದೃಢೀಕರಣವು ಸಮಗ್ರವೂ ಪೂರ್ಣವೂ (ಯಥೇಷ್ಟವೂ) ಆಗುವುದೆಂದು ಹೇಳಲಾಗಿದೆ. ಏಕೆಂದರೆ ಉಷೆಯು "ವಾಜೇನವಾಜಿನೀ" ಮತ್ತು "ಮಘೋನೀ"=ಸಾರದಿಂದ ಸಾರವತಿ ಮತ್ತು ಅವಳಲ್ಲಿ ಎಲ್ಲ ಶ್ರೇಯಃ ಸಮೃದ್ಧಿಗಳಿವೆ.

ದಿವ್ಯ ಕರ್ಮದ ನಿಯಮದಂತೆ ಉಷೆ ಯಾವಾಗಲೂ ಮುನ್ನಡೆಯಿಡುತ್ತಾ ಹೋಗುತ್ತಾಳೆ. ಆ ಗಮನದಲ್ಲಿ ಅವಳು ತರುವ ವಿಚಾರಗಳು ಬಹಳವಾಗಿರುತ್ತವೆ. ಆದರೆ ಅವಳ ಹೆಜ್ಜೆಗಳು ನಿಶ್ಚಿತ ಮತ್ತು ಅವಳ ಕೈಯಲ್ಲಿ ಎಲ್ಲ ಅಪೇಕ್ಷಣೀಯ ವಸ್ತುಗಳೂ ಎಲ್ಲ ಮಹೋಚ್ಚ ವರಗಳೂ, ಆನಂದದ ವರಗಳೂ ದಿವ್ಯ ಜೀವನದ ಆಶೀರ್ವಚನಗಳೂ ಇವೆ. ಉಷೆಯು ಪ್ರಾಚೀನಳು ಮತ್ತು ನಿತ್ಯಳು, ದಿವ್ಯ ಜ್ಯೋತಿಯ ಉದಯಸ್ವರೂಪಿಣಿ-ಆ ಜ್ಯೋತಿ ಮೊದಲಿನಿಂದಲೂ ಇತ್ತು - "ಪುರಾಣೀ" - ಆದರೆ ಅವಳು ಬರುವಾಗ ಅವಳನ್ನು ಸ್ವಾಗತಿಸುವ ಜೀವಾತ್ಮಕ್ಕೆ ಯಾವಾಗಲೂ ಯುವತಿ ಮತ್ತು ಯಾವಾಗಲೂ ಹೊಸತನದ ಕಾಂತಿಯುಳ್ಳವಳು.

ದಿವ್ಯೋಷೆಯು ವಿಸ್ತಾರವಾಗಿ ಬೆಳಗುತ್ತಾಳೆ. ಅವಳು ಅಮರ್ತ್ಯ ಅಸ್ತಿತ್ವದ ಬೆಳಕು. ಮನುಷ್ಯನಲ್ಲಿ ದಿವ್ಯಸತ್ಯ-ದಿವ್ಯಾಹ್ಲಾದಗಳ ಧ್ವನಿಗಳನ್ನೋ ಶಕ್ತಿಗಳನ್ನೋ ಅವಳು ಹೊರಹೊಮ್ಮಿಸುತ್ತಾಳೆ ("ಸೂನೃತಾ": =ಸತ್ಯ ಮತ್ತು ಪ್ರಿಯ ಎರಡೂ ಆಗಿರುವ) ; ಏಕೆಂದರೆ, ಅವಳು ಹತ್ತಿಹೋಗುವ ತೇರು ಏಕಕಾಲಕ್ಕೆ ಜ್ಯೋತಿರ್ಮಯವೂ, ಸುಖಮಯವೂ ಆಗಿಲ್ಲವೇ? "ಚಂದ್ರರಥ" ಎಂಬುದರಲ್ಲಿಯ "ಚಂದ್ರ" ಪದಕ್ಕೆ ಚಾಂದ್ರ ದೇವತೆಯಾದ ಸೋಮ=ಅಮೃತತ್ವದ ಆನಂದದ ದೊರೆ ಆ ಅಮೃತತ್ವವೂ ಆನಂದವೂ ಮಾನವನೊಳಗೆ ಸುರಿಯುತ್ತಿರುತ್ತದೆ- ಎಂಬುದೊಂದು ಅರ್ಥ. ಆನಂದ-ಅಮೃತಗಳು=ಎರಡೂ ಜ್ಯೋತಿರ್ಮಯ ಮತ್ತು ಆಹ್ಲಾದಮಯ. ಉಷೆಯ ರಥವನ್ನೆಳೆದು ತರುವ ಕುದುರೆಗಳು ನಾಡೀಶಕ್ತಿಗಳ ಆಕಾರಗಳು ; ನಮ್ಮ ಎಲ್ಲ ಕಾರ್ಯಗಳನ್ನೂ ಬೆಂಬಲಿಸಿ ಮುನ್ನಡೆಸಿಕೊಡುವ ಶಕ್ತಿಗಳು '- ಇವುಗಳನ್ನು ಚೆನ್ನಾಗಿ ಹಿಡಿತದಲ್ಲಿ ಇಟ್ಟುಕೊಂಡಿರಬೇಕು. ಉಷೆಯು ಸುವರ್ಣವರ್ಣೆ, ಬಣ್ಣದಲ್ಲಿ ಹೊಳಪುಳ್ಳವಳು- ಸ್ವಭಾವದಲ್ಲೂ ಹಾಗೇ (ಏಕೆಂದರೆ, ಈ ಪ್ರಾಚೀನ ಸಾಂಕೇತಿಕತೆಯಲ್ಲಿ ಬಣ್ಣವು ಗುಣಚಾರಿತ್ರ, ಮನೋವೃತ್ತಿಗಳನ್ನು ಸೂಚಿಸುತ್ತವೆ)-ಈಯೆಲ್ಲವೂ ಆದರ್ಶ ಜ್ಞಾನದ ಉತ್ತ್ರಿಯೆಯಾಗಿರಬೇಕು-ಅದರಲ್ಲೂ, ಅದನ್ನು ಕಡೆದು ತೆಗೆದ ಸಾಂದ್ರಜ್ಯೋತಿರ್ಮಯತೆಯ ಉತ್ಕ್ರಿಯೆಯಾಗಿರಬೇಕು-ತನ್ನ ಆಯಾಮದಲ್ಲದು ಅಗಲ-ಆ ಭಟ್ಟಿ ಇಳಿಸಿ ಮಾಡಿದ ಆದರ್ಶ ಜ್ಞಾನದ ಪ್ರಣೋದದ ಮುದ್ದೆಯಾಗಿರಬೇಕು- "ಪೃಥು ಪಾಜಸೋ ಯೇ."

ದಿವ್ಯ ಉಷೆಯು ಪ್ರಜ್ಞಾನ ಸಮೇತಳಾಗಿ (ತನ್ನ ಜ್ಞಾನದ ಬೆಳಕಿನೊಡನೆ) ಜೀವಾತ್ಮದೆಡೆಗೆ ಬರುತ್ತಾಳೆ. ಹಾಗೆ ಬರುವಾಗ ಆ ಜ್ಞಾನದ ಎಲ್ಲ ಲೋಕಗಳನ್ನೂ ಅದರ ಕ್ಷೇತ್ರವೆಂದೇ ಗ್ರಹಿಸಬೇಕು. ಆ ಕ್ಷೇತ್ರಕ್ಕಿದಿರಾಗಿಯೇ ಅವಳ ಪ್ರಜ್ಞಾನವು ಬರುತ್ತದೆ. - ಆ ಕ್ಷೇತ್ರವಾದರೋ ವೈಶ್ವತ್ರಿಕನತ್ತ ಅಂದರೆ ನಮ್ಮ ವಿಶ್ವಾತ್ಮಕತೆಯ - ಅರ್ಥಾತ್ - ಮನ, ಪ್ರಾಣ, ಭೌತ (ಅನ್ನ)

ಪ್ರಜ್ಞೆಗಳೆಲ್ಲವೂ ಕೂಡಿದ್ದಾಗಿರುತ್ತದೆ. ನಮ್ಮ ಮಾನಸೋತ್ತರ ಸ್ತರದಲ್ಲಿ ನಮಗಿಂತ ಎತ್ತರವಾಗಿ ಅವಳು ನಿಲ್ಲುತ್ತಾಳೆ. ಅವಳು ಹಾಗೆ ನಿಲ್ಲುವ ಸ್ಥಳವು ಸ್ವರ್ಗ ; ಅವಳ ಸ್ವರೂಪವೋ ಆಗ (ಅಮರ್ತ್ಯತ್ವದ) ಅಮೃತತ್ವದ ಯಾ ಅಮೃತದ ಸ್ವಾನುಭೂತಿಯದಾಗಿರುತ್ತದೆ ("ಅಮೃತಸ್ಯ ಕೇತುಃ") - ಆ ಉನ್ನತ ಸ್ತರಗಳಲ್ಲಿ ಅವಳು ಶಾಶ್ವತವೂ ಪರಮಸುಖಮಯವೂ ಆದ ಸತ್ತೆಯನ್ನು ಅಥವಾ ನಿತ್ಯವೂ ಸರ್ವಾನಂದ ಮಯವೂ ಆದ ಮಹಾದೇವತ್ವವನ್ನು, ಅನಾವರಣಗೊಳಿಸುತ್ತಾಳೆ. ಉದಾತ್ತತಮೆಯಾದ ಅವಳು ದಿವ್ಯಜ್ಞಾನದ ಚಲನೆಯನ್ನು ಕಾರ್ಯರೂಪಕ್ಕೆ ತರಲು ಸಿದ್ಧವಾಗಿ ನಿಂತಿರುತ್ತಾಳೆ. ಆ ದಿವ್ಯಜ್ಞಾನವು ನಿತ್ಯಸತ್ಯದ ಒಂದು ಹೊಸ ಆವಿರ್ಭೂತಿಯಾಗಿ ಮುನ್ನಡೆಯುತ್ತಿರುತ್ತದೆ. - "ನವ್ಯಸಿ"- ಆ ಮುನ್ನಡೆಯು ಸಾಮಶ್ರುತ್ಯ ಸಂಪನ್ನ ಸಮತ್ವಯುಕ್ತ ಕಾರ್ಯಗಳುಳ್ಳದ್ದಾಗಿ ಸಮತಟ್ಟಾದ ನೆಲದಲ್ಲಿ ಗಾಲಿ ತಿರುಗುವಂತೆ ತಿರುಗುತ್ತದೆ. ಏಕೆಂದರೆ, ಅವುಗಳಿಗೆ ಈಗ ನಾನಾತ್ವದ ಬಾಧೆಯಿಲ್ಲ, ವೈವಿಧ್ಯದ ಅಪಶ್ರುತಿ ಇಲ್ಲ - ಆದ್ದರಿಂದ ಅವೀಗ, ಆ ಮಾನಸಾದಿ ಲೋಕಗಳೀಗ, ಆ ಸಮಚಲನೆಗೆ ಯಾವ ಆತಂಕವನ್ನೂ ಒಡ್ಡುವುದಿಲ್ಲ.

ತನ್ನ ಅಪಾರ ಐಶ್ವರ್ಯ ವಿಸ್ತಾರದಲ್ಲಿ ಉಷೆ ಪರಿಚ್ಛಿನ್ನೆಯಾದಂತೆ ತೋರಿಸಿಕೊಳ್ಳುತ್ತಾಳೆ. ವಿಸ್ತಾರವಾಗಿ ಹೊಲಿದ ಬಟ್ಟೆ ಮೊದಲು ವಸ್ತುಗಳ ಸತ್ಯವನ್ನು ಮುಚ್ಚಿಕೊಂಡಿತ್ತು. ಅವಳು ಆ ಬಟ್ಟೆಯನ್ನು ತೆಗೆದೆಸೆದು ದಿವ್ಯ ಪ್ರೇಮಿಯತ್ತ ಹೋಗುವ ಹೆಂಡತಿಯಂತೆ ಹೋಗುತ್ತಾಳೆ ; ಯಾರಲ್ಲಿಗೆ? ತನ್ನ ಸರ್ವಾನಂದಮಯ ಪತಿಯ ಎಡೆಗೆ - "ಸ್ವಸರಸ್ಯ ಪತ್ನೀ". ಸುಖ ಸಂತೋಷ ರಾಶಿಯಲ್ಲಿ ಪೂರ್ಣೆಯಾಗಿ, ಎಲ್ಲ ಚಟುವಟಿಕೆಗಳನ್ನು ಕಾರ್ಯರೂಪಕ್ಕೆ ಪೂರ್ಣವಾಗಿ ತಂದು, "ಸುಭಗಾ ಸುದಂಸಾಃ" ಎನ್ನಿಸಿದ ಅವಳು ನಮ್ಮ ಮನದ ಅತ್ಯುನ್ನತ ಸ್ವರ್ಗವಾದ "ಸ್ವರ್" ಎಂಬ ಗುಪ್ತ ಪ್ರಾತಿಭೇಯ ಮನವನ್ನು ನಮ್ಮಲ್ಲಿ ತನ್ನ ಆವಿರ್ಭಾವಕತ್ವದಿಂದ ಅಸ್ತಿತ್ವಕ್ಕೆ ತರುತ್ತಾಳೆ. ಹೀಗೆ ಅವಳು ಮಾನಸ ಸತ್ತೆಯ ಅತ್ಯಂತ ದೂರದಿಂದ ನಮ್ಮ ಭೌತಿಕ ಪ್ರಜ್ಞೆಯತ್ತ ತನ್ನನ್ನು ತಾನೇ ಚಿತ್ತರಿಸುತ್ತಾ ಬರುತ್ತಾಳೆ.

ವಸ್ತು ಸತ್ಯಗಳ ಮೇಲೆ ದಿವ್ಯ ಉಷೆಯು ತನ್ನ ಬೆಳಕನ್ನು ಸುತ್ತಮುತ್ತಲೆಲ್ಲಾ ಹುಯ್ಯುತ್ತಾ ಬಂದ ಹಾಗೆ ಶರಣಾಗತಿಯ ಮೂಲಕ ಮಾನವರು ಅವಳ ದಿವ್ಯಕಾರ್ಯ ಮತ್ತು ಚಲನೆಗಳಿಗೆ ವಶವರ್ತಿಗಳಾಗಿ ತಮ್ಮ ಇರವಿನ ಸಮಗ್ರವಾಗಿ ಶಕ್ತಿ ಸಂಭೃತವಾದ ಪೂರ್ಣತೆಗಳನ್ನು ಶಕ್ಯತೆಗಳನ್ನೂ ಅವಳ ಬೆಳಕನ್ನು ಹೊತ್ತು ತರುವ ವಾಹನವನ್ನಾಗಿ ಮಾಡಿ, ಅಥವಾ ಅವಳ ಯಾಜ್ಞಿಕ ಚಟುವಟಿಕೆಗಳಿಗೆ ಅವುಗಳನ್ನು ಪೀಠವನ್ನಾಗಿ ಮಾಡಿ, ಮುಂದಕ್ಕೆ ತರುತ್ತಾರೆ- ಅವಳಂತೆಯೇ ತಮ್ಮೆಲ್ಲವನ್ನೂ ಅವಳೆದುರು ಸುರಿಯುತ್ತಾರೆ, ರಾಶಿ ಹಾಕುತ್ತಾರೆ.

ಅನಂತರ ಋಷಿಯು ಮನುಷ್ಯನಲ್ಲಿ ಉಷೆ ಮಾಡುವ ಎರಡು ಮಹತ್ಕಾರ್ಯಗಳನ್ನು ವರ್ಣಿಸುತ್ತಾನೆ. ಪರಜ್ಯೋತಿಯ ಸಮಗ್ರ ಪ್ರಣೋದದೆತ್ತರಕ್ಕೆ ಮಾನವನನ್ನು ಒಯ್ಯುವುದು ಮತ್ತು ಪರಸತ್ಯದ ಅನಾವರಣ ಮಾಡುವುದು ; ಅಲ್ಲದೆ, ಆನಂದ, ಸೋಮರಸ (ಸೋಮಮದ್ಯ), ಅಮೃತತ್ವದ ಪರಮಸುಖ-ಎಂಬುದನ್ನು ಮಾನವನ ಮಾನಸಿಕ ಹಾಗೂ ದೈಹಿಕ ಬಾಳಿಗೆ ತಂದು ಹುಯ್ಯುವುದು. ದಿವಿ=ಶುದ್ಧ ಮನದ ಪ್ರಪಂಚದಲ್ಲಿ ದಿವ್ಯಜ್ಯೋತಿಯ ಪೂರ್ಣ ಪ್ರಣೋದ ಮತ್ತು ಘನತೆಗಳೊಳಗೆ ಹೊಕ್ಕು ಎದ್ದು ನಿಂತು "ಊರ್ಧ್ವಂ ಪಾಜೋಅಶ್ರೇತ್", ಆ ಶುದ್ಧವೂ ಉನ್ನತವೂ ಆದ ಮಟ್ಟಗಳಿಂದ ಸೋಮನ ಮಧುವನ್ನು, ಜೇನುಸಿಹಿಯನ್ನು, ಸ್ಥಿರಪಡಿಸುತ್ತಾಳೆ ; ರೋಚನೆಯಾಗಿ ಅವಳು ಮೂರು ಜ್ಯೋತಿಷ್‌ಪ್ರಪಂಚಗಳನ್ನು ಪ್ರಕಾಶಿಸುವಂತೆ

ಮಾಡುತ್ತಾಳೆ ; ಆಗ ಅವಳು ತನ್ನ ಬ್ರಹ್ಮಾನಂದದ ದರ್ಶನವನ್ನು ತನ್ನೊಡನೆ ತರುತ್ತಾಳೆ. "ದಿವೋ ಅರ್ಕೈ:"= ಸಾಕ್ಷಾತ್ಕಾರ ಪ್ರಪಂಚದಿಂದ ಶುದ್ಧ ಮನಸ್ಕತೆಯ ಸಫಲ ಹೊಳೆತಗಳಿಂದ ಅವಳು ಪರಸತ್ಯವಾಹಕಗಳಾಗಿ (ಪರಸತ್ಯಧಾರಿಣಿಯಾಗಿ) ತೋರುತ್ತಾಳೆ ; ಮತ್ತು ಅತಿಮಾನಸ ಲೋಕದಿಂದ ಪರಸತ್ಯದೊಡನೆ ಅವಳು ಪ್ರವೇಶಿಸಿ, ಮಾನವನ ಚಟುವಟಿಕೆಗಳು ನಡೆಯುವ ಇತಿಮಿತಿಗಳ ನಡುವೆ ಇರುವ, ಮನೋದೇಹ ಪ್ರಜ್ಞೆಯಲ್ಲಿ ಚಿತ್ರ ವಿಚಿತ್ರ ಲೀಲೆಯಿಂದ ಬಹುಕಾರ್ಯ-ಬಹುವಿಚಾರಗಳನ್ನು ನಡೆಸಿ ಸಂತೋಷ ಪಡುತ್ತಾಳೆ. "ವಾಜೇನ ವಾಜಿನಿ" ಸಂಪತ್ ಸಮೃದ್ಧಿಯಾಗಿ ಅವಳು ಬಂದಾಗ ಮರ್ತ್ಯನನ್ನು ಮೇಲಕ್ಕೆತ್ತಲು ಮಾನವ ದೇಹದಲ್ಲಿ ದಿವ್ಯ ಪ್ರಣೋದನಾಗಿ ದುಡಿಯುತ್ತಿರುವ ಅಗ್ನಿಯು, ಅವನ ಮನದಲ್ಲಿಯೂ ಹೋರಾಡುತ್ತಿರುವ ಆ ಅಗ್ನಿಯು, ಬ್ರಹ್ಮಾನಂದಾಮೃತವೆನ್ನಿಸಿದ ಸೋಮವನ್ನು ಪಡೆಯಲು ಪ್ರಾರ್ಥಿಸುತ್ತಾನೆ; ಆ ಆನಂದವೊಂದು ಆಹ್ಲಾದಸಾರ, ಪ್ರಮೋದ ದ್ರವ್ಯ.

ನಮ್ಮಲ್ಲಿರುವ ಅತಿಮಾನಸ ಪ್ರಜ್ಞಾಸ್ತರವು ಪರಮಸತ್ಯದ ಆಧಾರವೂ ಹೌದು, ಉಷೋಗಣದ ಮೂಲಾಧಾರವೂ ಹೌದು. ಉಷೋಗಣವು ಮಾನವ್ಯ ಸ್ವಭಾವದ ಮಟ್ಟಕ್ಕಿಳಿದು ಬರುವ "ಋತಂಜ್ಯೋತಿ:=ಅಮರ್ತ್ಯ ಪರಮಸತ್ಯದ ಮರ್ತ್ಯ ಬೆಳಕು. ಉಷಸ್ಸುಗಳ ಒಡೆಯನು ಸವಿತಾರನು, ಬೆಳಕು ಹರಿಸುವವನು, ಸಂಘಟಕನು, ಮಹಾಸತ್ಯದ ಮಾನಸೋತ್ತರ ಬುನಾದಿಯ ಮೇಲೆ ತನ್ನ ಕಾರ್ಯಪ್ರಚೋದನೆಗಳನ್ನು ಮಾಡಿ, ಉಷಸ್ಸುಗಳೊಡನೆ ಬಂದು ದೈಹಿಕ ಹಾಗೂ ಮಾನಸಿಕ ಅಸ್ತಿತ್ವವನ್ನುಳ್ಳ ಮಾನವನನ್ನು ಹೊಗುತ್ತಾನೆ-ಆ ಅಸ್ತಿತ್ವವು ಮೊದಲು ಅಜ್ಞಾನಾಂಧಕಾರದಲ್ಲಿ ಮುಳುಗಿ ಹೋಗಿದ್ದರೂ ಈಗ (ಉಷೋದಯಾನಂತರ) ಅದು ಸ್ವ ಮಿತಿಯಿಂದ ಮುಕ್ತವಾಗಿ "ಮಹೀರೋದಸೀ"=ಅಗಲವಾಗುವ ಯೋಗ್ಯತೆಯನ್ನು ಪಡೆದಿರುತ್ತದೆ. ಪರಮಸತ್ಯೇಶ್ವರನು ಸರ್ವೇಶ್ವರನು. ಅವನು ವರುಣನು - ಅಪಾರತೆಯ ಹಾಗೂ ಪಾವಿತ್ರ್ಯದ ಆತ್ಮ, ಸಾರ, ರಸ ; ಅವನೇ ಮಿತ್ರ-ಪ್ರೇಮ, ಜ್ಯೋತಿ ಸಾಮಶ್ರುತ್ಯಗಳ ಆಕರ. "ಮಹೀಮಿತ್ರಸ್ಯ ವರುಣ ಸ್ವಮಾಯಾ"= ಅವನ ಸರ್ಗಶೀಲ ವಿವೇಕವು ತನ್ನ ವ್ಯಾಪ್ತಿಯಲ್ಲಿ ಅಪರಿಮಿತ-ಏಕೆಂದರೆ, ಅವನು ವರುಣನು, "ಚಂದ್ರೇವ"=ಆನಂದ-ಆಹ್ಲಾದಗಳ ಬೆಳಕಾಗಿ ತೋರುವವನು. ಅವನು ಮಿತ್ರ-ಅಚ್ಚುಕಟ್ಟಾಗಿ ಸಂಘಟಿಸುವವನು, ವ್ಯವಸ್ಥೆ ಮಾಡುವವನು, ಬೇಕಾದಷ್ಟು ಆಕೃತಿಗಳಲ್ಲಿ ಉಜ್ವಲ ಆಯಾಮಗಳನ್ನು ನಿರ್ಮಿಸಿ ಜಿಡಬಲ್ಲ ಮುಕ್ತ ಸ್ವಭಾವದವನು ; ಪರಮಸತ್ಯದ ಪ್ರಶಾಂತ, ಗಂಭೀರ, ಅಭಿವ್ಯಕ್ತಿಗಳನ್ನು ಯೋಜಿಸಬಲ್ಲವನು. ನಮ್ಮ ಅಂತರಿಕ್ಷಗಳಿಗಿಳಿದು ಬಂದ ಉಷಾದೇವಿಯ (=ಉಷೋಗಣಗಳ) ವಿವಿಧ ಪ್ರಭಾವಲಯಗಳನ್ನು ಅವನು ಕೂಡಿಸುತ್ತಾನೆ ; ಅವಳ ನಿಜವೂ ಇಂಪೂ ಆದ ಸ್ವರಗಳನ್ನು ಏಕಸ್ವರದ ಐಕ್ಯಕ್ಕೆ (ಸಮಶ್ರುತಿಗೆ) ತರುತ್ತಾನೆ.

ದಿವ್ಯೋಷೆಯು ಮಹಾದೇವತಾತತ್ವದ ಆಗಮನ. ಅವಳು ಪರಸತ್ಯದ ಬೆಳಕು ಮತ್ತು ನಮ್ಮ ಮೇಲೆ ಸುರಿಯುತ್ತಿರುವ ವಿವೇಕಾನಂದಗಳ ಒಡೆಯನ ಪರಮ ಸುಖದ ಸೆಳಕು - "ಅಮೃತಸ್ಯ ಕೇತು:, ಸ್ವಸರಸ್ಯ ಪತ್ನೀ."

❖ ❖

# VII

# ಭೋಗಿ ಭಗ ಸವಿತಾರನನ್ನು ಕುರಿತು

## ಋಗ್ವೇದ V . 82

**ತತ್[೧] ಸವಿತುರ್ ವೃಣೀ ಮಹೇ ವಯಂ ದೇವಸ್ಯ ಭೋಜನಂ ।**
**ಶ್ರೇಷ್ಠಂ ಸರ್ವಧಾತಮಂ ತುರಂ ಭಗಸ್ಯ ಧೀಮಹಿ ॥ ೧ ॥**

೧. ಸುಖ ಪಡುವ, ಶ್ರೇಷ್ಠವಾದ, ಎಲ್ಲವನ್ನೂ ನ್ಯಾಯವಾಗಿ ವಿತರಣ ಮಾಡುವ ದಿವ್ಯ ಸವಿತಾರನನ್ನು ನಾವು ಸ್ವೀಕರಿಸುತ್ತೇವೆ. ಅಥವಾ ಅಪ್ಪಿಕೊಳ್ಳುತ್ತೇವೆ ; ಅಲ್ಲದೆ, ಭಗನ ಶಕ್ತಿಯನ್ನೂ ನಾವು ವಿಚಾರಸ್ಥವನ್ನಾಗಿ ಮಾಡಿಕೊಳ್ಳುತ್ತೇವೆ.

**ಅಸ್ಯ ಹಿ ಸ್ವಯಶಸ್ತರಂ ಸವಿತುಃ ಕಚ್ಚನ ಪ್ರಿಯಂ ।**
**ನ ಮಿನಂತಿ ಸ್ವರಾಜ್ಯಂ ॥ ೨ ॥**

೨. ಈ ಭೋಗಿಯ ಸ್ವರಾಜ್ಯವನ್ನಾಗಲಿ, ವಸ್ತುಗತ ಸಂತೋಷವನ್ನಾಗಲಿ, ಯಾರೂ ಕಡಿಮೆ ಮಾಡಲಾರರು ; ಏಕೆಂದರೆ, ಅವೆಲ್ಲಾ ಅವನ ಸ್ವಜಿತ.

**ಸಹಿರತ್ನಾನಿ ದಾಶುಷೇ ಸುವಾತಿ ಸವಿತಾ ಭಗಃ ।**
**ತಂಭಾಗಂ ಚಿತ್ರ ಮೀಮಹೇ ॥ ೩ ॥**

೩. ದಾನಿಗೆ ಸುಖ-ಸಂತೋಷಗಳನ್ನು ಕಳುಹುವವನು ಅವನೇ; ಅವನೇ ವಸ್ತುಜಾತದ ಸೃಷ್ಟಿಕರ್ತನು ; ಅವನ ಭೋಗದ ಆ ವಿವಿಧ ಶ್ರೀಮಂತಿಕೆಯನ್ನು ನಾವು ಬೇಡುತ್ತೇವೆ.

---

೧. ನಾವು "ಸವಿತುರ್ ಭಗಸ್ಯ"= ಸವಿತಾರಂಭಗಂ (ವಿಭಕ್ತಿ ಪಲ್ಲಟದಿಂದ) ; ವಿತರಣಾಕಾರನಾದ, ಸವಿತುಃ=ಸೃಷ್ಟಿಕರ್ತನ, ದೇವನನ್ನು (ದೇವಸ್ಯ=ದೇವನನ್ನು), ಶ್ರೇಷ್ಠಂ ಸರ್ವಧಾತಮಂ ಭೋಜನಂ ವೃಣೀಮಹೇ= ಸರ್ವದವಾದ ಶ್ರೇಷ್ಠ ಭೋಗ್ಯವನ್ನು, ತುರಂ (abundant)= ಬೇಕಾದಷ್ಟು ಬೇಡುವೆವು. ಭಗ=ವಿತರಣಕಾರ ; ಸವಿತುಃ ದೇವಸ್ಯ, ಭಗಸ್ಯ ಎಂಬೆಲ್ಲವೂ ಏಕಮೂಲಾರ್ಥಕಗಳು. ಆದ್ದರಿಂದ "Embracc" ಇಲ್ಲಿ "ವೃಣೀಮಹೇ" ಗೆ ಉಚಿತಾರ್ಥವಾಗದು. ಹಾಗೇ ಭಗನು ಸೂರ್ಯನಾದ ಸವಿತೃವಿನಿಂದ ಪ್ರತ್ಯೇಕ ದೇವತೆ ಅಲ್ಲ ಇಲ್ಲಿ - ಅನುವಾದಕ. ಮೂಲ ಇಂಗ್ಲಿಷ್ ಅನುವಾದಕ್ಕೆ ಈ ದುರಸ್ತು ಅಗತ್ಯ- ಅದರಿಂದ ಅರವಿಂದಾರ್ಥಕ್ಕೆ, ತಾತ್ಪರ್ಯಕ್ಕೆ ಹೆಚ್ಚಿನ ಪುಷ್ಟಿ ದೊರಕುತ್ತದೆ - ಅನುವಾದಕ.

**ಅದ್ಯಾನೋ ದೇವ ಸವಿತಃ ಪ್ರಜಾವತ್ಸಾವೀಃ ಸೌಭಗಂ ।**
**ಪರಾದುಷ್ವಪ್ನ್ಯಸುವ ॥ ೪ ॥**

೪. ಓ ದಿವ್ಯ ಸ್ರಷ್ಟಾರನೇ (ಉತ್ಪಾದಕನೇ), ಇಂದು ನಮಗೆ ಸಫಲ ಸೌಭಾಗ್ಯವನ್ನು ಕಳುಹಿಸು ; ದುಃಸ್ವಪ್ನಗಳಿಗೆ ಸೇರಿದ್ದನ್ನೆಲ್ಲಾ ನಿವಾರಿಸು.

ವಿಶ್ವಾನಿ ದೇವ ಸವಿತರ್ ದುರಿತಾನಿ ಪರಾ ಸುವ ।
ಯದ್ ಭದ್ರಂ ತಂ ನ ಆಸುವ ॥ ೫ ॥

೫. ಹೇ ದಿವ್ಯ ಸವಿತಾರನೇ (ಸೃಷ್ಟಿಕರ್ತನೇ), ದುರಿತಗಳೆಲ್ಲವನ್ನೂ ದೂರೀಕರಿಸು ; ಶುಭವಾದುದನ್ನು ನಮಗೆ ಕಳುಹು.

**ಅನಾಗಸೋ ಅದಿತಯೇ ದೇವಸ್ಯ ಸವಿತುಃ ಸವೇ ।**
**ವಿಶ್ವಾವಾಮಾನಿ ಧೀಮಹಿ ॥ ೬ ॥**

೬. ಅನಂತ ಸತ್ತೆಗೆ ಯಾವ ದೋಷವನ್ನೂ ತಾರದಿರುವ ನಾವು ದಿವ್ಯ ಸ್ರಷ್ಟಾರನು ಹೊರ ಹರಿಸಿದ ಪದಾರ್ಥಗಳಲ್ಲಿ ಆಹ್ಲಾದಕರವಾದುದೆಲ್ಲವನ್ನೂ ವಿಚಾರಗತಮಾಡಿಕೊಂಡು ಧರಿಸುತ್ತೇವೆ, ಇಟ್ಟುಕೊಳ್ಳುತ್ತೇವೆ.

**ಆ ವಿಶ್ವದೇವಂ ಸತ್‌ಪತಿಂ ಸೂಕ್ತೈರದ್ಯಾ ವೃಣೀಮಹೇ ।**
**ಸತ್ಯಸವಂ ಸವಿತಾರಂ ॥ ೭ ॥**

೭. ಇಂದು ನಾವು ನಮ್ಮ ಪರಿಪೂರ್ಣ ಮಂತ್ರದಿಂದ (ಸೂಕ್ತಗಳಿಂದ) ಸತ್ಯವಾದ ಪದಾರ್ಥಗಳನ್ನು ಸೃಷ್ಟಿಸುವ ವಿಶ್ವೇಶ್ವರನೂ ಸತ್ತಾಧಿಪತಿಯೂ ಆದವನನ್ನು ಸ್ವೀಕರಿಸುತ್ತೇವೆ.

**ಯ ಇಮೇ ಉಭೇ ಅಹನೀ ಪುರ ಏತ್ಯಪ್ರಯುಚ್ಛನ್ ।**
**ಸ್ವಾಧೀರ್ದೇವಃ ಸವಿತಾ ॥ ೮ ॥**

೮. ಈ ದಿನಯಾಮಿನಿಯರ (ಹಗಲು ರಾತ್ರಿಗಳ) ಎದುರು ತಪ್ಪದೆ ಹೋಗುವ ದಿವ್ಯ ಸ್ರಷ್ಟಾರನು ತನ್ನ ವಿಚಾರವನ್ನು ವಿಹಿತ ಮಾಡಿಕೊಂಡು (ವಿಹಿತಗೊಳಿಸಿಕೊಳ್ಳುತ್ತಾನೆ.)

**ಯ ಇಮಾ ವಿಶ್ವಾ ಜಾತಾನ್ಯಾಶ್ರಾವಯತಿ ಶ್ಲೋಕೇನ ।**
**ಪ್ರ ಚ ಸುವಾತಿ ಸವಿತಾ ॥ ೯ ॥**

೯. ದಿವ್ಯ ಸೃಷ್ಟಿಕರ್ತನು (ಸವಿತಾರನು, ಸೂರ್ಯನು) ಜ್ಞಾನದ ಗತಿಯ ಲಯಜ್ಞನಾಗಿ ಜನ್ಮಗಳನ್ನು ಜೀವಜಾತಗಳನ್ನು ನಮಗೆ ಕೇಳಿಸುವಂತೆ (ಗೊತ್ತಾಗುವಂತೆ) ಸೃಷ್ಟಿಸುತ್ತಾನೆ.



# ವ್ಯಾಖ್ಯಾನ

"ವರುಣ, ಮಿತ್ರ, ಭಗ, ಅರ್ಯಮನ್" ಎಂಬ ನಾಲ್ಕು ಮಹಾದೇವತೆಗಳು ವೇದದಲ್ಲಿ ಪದೇ ಪದೇ ಬರುತ್ತಾರೆ ; ಗುಣ ಕರ್ಮಗಳಲ್ಲಿ (ಸ್ವಭಾವ-ಕಾರ್ಯಗಳಲ್ಲಿ) ಅವರು ನಿಕಟವರ್ತಿಗಳು. ವರುಣ-ಮಿತ್ರರು ಸತತ ಅವಿನಾಭಾವಿಗಳು. ಆರ್ಷ್ಯ ವಿಚಾರಗಳಲ್ಲಿ ಯಾವಾಗಲೂ ಒಟ್ಟಿಗೇ ಇರುವವರು. ವರುಣ-ಮಿತ್ರ-ಭಗ ಅಥವಾ ವರುಣ-ಮಿತ್ರ-ಅರ್ಯಮನ್ ಎಂಬ ದೇವತಾತ್ರಯಗಳೂ ಕೆಲವು ಸಲ ಒಟ್ಟೊಟ್ಟಾಗಿ ಬರುವುದುಂಟು. ಈ ಒಬ್ಬೊಬ್ಬ ದೇವತೆಗೂ ಪ್ರತ್ಯೇಕವಾಗಿ ಒಂದೊಂದು ಸೂಕ್ತವನ್ನು ರಚಿಸಿದ್ದು ಅತ್ಯಂತ ವಿರಳ ; ವರುಣನಿಗೇನೋ ಬಹುಮುಖ್ಯವಾದ ಕೆಲ ಸೂಕ್ತಗಳಿವೆ. ಆದರೆ ಇತರ ದೇವತೆಗಳಿಗೋ ವಿಶ್ವೇ ದೇವರಿಗೋ ಬರೆದ ಸೂಕ್ತಗಳಲ್ಲಿರುವ ಉಕ್ತ ಚತುರ್ದೇವತೆಗಳ ಹೆಸರುಗಳೇನೂ ಕಡಿಮೆ ಸಂಖ್ಯಾತವಾಗಿರುವುದಿಲ್ಲ.

ಸಾಯಣಾಚಾರ್ಯನ ಪ್ರಕಾರವಾಗಿ ಈ ದೇವತಾಚತುಷ್ಟಯವು ಸೌರ ಶಕ್ತಿಗಳು. ನಿಷೇಧಾತ್ಮಕವಾಗಿ ವರುಣನು ರಾತ್ರಿರಾಜನು. ಮಿತ್ರನು ಅನುಷೇಧಾತ್ಮಕವಾಗಿ ಅಹೋರಾಜನು, ಹಗಲರಸ. ಭಗ-ಅರ್ಯಮನ್-ಎಂಬಿವು ಸೂರ್ಯನಾಮಗಳು. ಈ ವಿಶೇಷ ಅಭಿಜ್ಞಾನಕ್ಕೆ ನಾವು ಬಹಳ ಮಹತ್ವ ಕೊಡಬೇಕಾಗಿಲ್ಲ. ಆದರೆ ಈ ನಾಲ್ಕು ದೇವತೆಗಳಿಗೂ ಸೌರಗುಣವಿರುವುದು ಮಾತ್ರ ನಿಶ್ಚಿತ. ಇವರಲ್ಲಿ ವೈದಿಕ ದೇವತೆಗಳ ವಿಚಿತ್ರ ಲಕ್ಷಣದ ಮಾದರಿ ದೊರಕುತ್ತದೆ ; ವೈದಿಕ ದೇವತೆಗಳೆಲ್ಲಾ ತಮ್ಮ ಲೀಲೆಗಳಲ್ಲೂ ವ್ಯಕ್ತಿತ್ವಗಳಲ್ಲೂ ಕರ್ತವ್ಯಗಳಲ್ಲೂ ಬೇರೆ ಬೇರೆ ಎಂಬಂತೆ ವರ್ಣಿತರಾಗಿದ್ದರೂ ಅವರೆಲ್ಲಾ ಮೂಲತಃ ಸಾರತಃ ಆತ್ಮತಃ, ಒಂದೇ ಆಗಿದ್ದಾರೆ ಎಂಬುದು ಎದ್ದು ಕಾಣುತ್ತದೆ. ಈ ನಾಲ್ಕು ದೇವತೆಗಳೂ ತಮ್ಮ ತಮ್ಮೊಳಗೆ ಬಹಳ ನಿಕಟರಾಗಿರುವುದಲ್ಲದೆ, ಪರಸ್ಪರರ ಸ್ವಭಾವಗಳನ್ನೂ ಗುಣಗಳನ್ನೂ ಅಲ್ಲಲ್ಲಿ ಅವರು ಪ್ರಕಟಿಸುತ್ತಾರೆ. ಈ ಎಲ್ಲರೂ ಸೂರ್ಯ ಸವಿತಾರನ ಅವತಾರಗಳೆಂಬುದು ಸ್ಪಷ್ಟ. ಸೂರ್ಯನೋ ತನ್ನ ಸರ್ಜಕ ಮತ್ತು ಪ್ರಕಾಶಕ ಸೌರರೂಪದ ದಿವ್ಯ ಸ್ವರೂಪನು (ದಿವ್ಯ ಸತ್ತಾಕನು).

ಸವಿತಾರನಾದ ಸೂರ್ಯನು ಸೃಷ್ಟಿಕರ್ತನು. ವಸ್ತುಗಳ ಪರಮಸತ್ಯದಂತೆ, ಋತದ ಭಾಷೆಯಲ್ಲಿ, ಅದಿತಿಯು ಅನಂತಸತ್ತೆಯುಳ್ಳವಳು. ಅದಿತಿ ದೇವಿಯೆಂಬ ದಿವ್ಯ ಪ್ರಜ್ಞೆಯಿಂದ ಜಗತ್ತುಗಳು (ವಿಶ್ವಗಳು, ಲೋಕಗಳು, ಪ್ರಪಂಚಗಳು) ಹುಟ್ಟಿವೆ. ಅದಿತಿಯು ದೇವತಾಮಾತೆ, ಅವಿಭಾಜ್ಯ ಪ್ರಜ್ಞೆ, ಅನಾವಿದ್ಧ ಜ್ಯೋತಿ, ದಿವ್ಯ ಗೋಪ್ರತಿಮಿತೆ - ಆ ಗೋವು ಅಘ್ನ್ಯೆ (ಕೊಲ್ಲಲು ಅಸಾಧ್ಯೆ). ಆ ಸೃಷ್ಟಿಯಲ್ಲಿ (ಸರ್ಗಕ್ರಿಯೆಯಲ್ಲಿ) ವರುಣ-ಮಿತ್ರ-ಅರ್ಯಮ-ಭಗರು ಪರಿಣಾಮಕರ ಪ್ರಭಾವಿಗಳು. ವರುಣನು ಶುದ್ಧ ಅಸೀಮ ಸತ್ತೆಯ ಸಂಕೇತ, ಸಚ್ಚಿದಾನಂದದೊಳಗಿನ ಸತ್ ; ಅರ್ಯಮನು ಪ್ರಣೋದರೂಪದಿಂದ ಕೆಲಸ ಮಾಡುವ ದಿವ್ಯಪ್ರಜ್ಞೆಯ ಜ್ಯೋತಿಸ್ತತ್ತ್ವ, ಮಿತ್ರನು ಬೆಳಕು - ಅರಿವುಗಳೆರಡರ ಪ್ರತೀಕ, ಸರ್ಜನ ಕ್ರಿಯೆಗೆ ಅವನು ಆನಂದತತ್ತ್ವವನ್ನು ಬಳಸಿಕೊಳ್ಳುವ ಸಾಮಞ್ಜಸ್ಯವಿಧಾಯಕನಾದ ಪ್ರೇಮತತ್ವ ; ಭಗನು ಆನಂದದ ಸರ್ಜನಾತ್ಮಕ ಭೋಗವನ್ನು

ಪ್ರತಿನಿಧಿಸುತ್ತಾನೆ ; ಅವನು ಸರ್ಜನೆಯ ಸಂತೋಷವನ್ನು ಅನುಭವಿಸುತ್ತಾನೆ, ಸೃಷ್ಟ ಪದಾರ್ಥಗಳೆಲ್ಲವುಗಳ ಸಂತಸವನ್ನೂ ಗ್ರಹಿಸುತ್ತಾನೆ. ಮಿತ್ರ-ವರುಣರ ರೂಪಿಸುವ (ಆಕಾರಾಧಾನದ) ವಿವೇಕವೇ ಮಾಯೆ. ಅದಿತಿಯ ಬೆಳಕನ್ನು ಗುಣಿತ ಸಂಖ್ಯಾತವಾಗಿ ದಿಕ್ಕು ದಿಕ್ಕಿಗೆ ಚೆಲ್ಲುವವನು ಮಿತ್ರನು. ಜಗಗಳನ್ನು ಇಂದ್ರಿಯ ಗ್ರಾಹ್ಯವನ್ನಾಗಿ ಮಾಡಲು ಅದಿತಿಯ ಬೆಳಕನ್ನು ತರುವವಳು ಉಷೆ - ಈ ದೇವತಾನಾಮಗಳೆಲ್ಲಾ ಪ್ರತೀಕ, ಸಂಕೇತ, ಎಂಬ ಸ್ವರೂಪದವುಗಳೆಂಬುದು ಸರ್ವತ್ರ ಗೃಹೀತ-ಎಂಬುದು ಅವಿಸ್ಮರಣೀಯ.

ತಮ್ಮ ಮಾನಸ ಶಾಸ್ತ್ರೀಯ ಕರ್ತವ್ಯಗಳಲ್ಲಿ ಈ ನಾಲ್ಕು ದೇವತೆಗಳೂ ಏಕತತ್ವ ಪ್ರತಿನಿಧಿಗಳು. ಅವರು ಮಾನವ್ಯ ಮನದಲ್ಲಿ ಕೆಲಸ ಮಾಡುವವರು ಅದರಲ್ಲೂ ಮಾನವ್ಯ ಮನಃಪ್ರವೃತ್ತಿಯಲ್ಲಿ. ಅವರು ಮಾನವನಲ್ಲಿ ವಿವಿಧ ಸತ್ತಾಸ್ತರಗಳನ್ನು ಕಟ್ಟುತ್ತಾರೆ ; ಮತ್ತು ಕೊನೆಯಲ್ಲಿ ದಿವ್ಯ ಸತ್ಯದ ರೂಪಗಳನ್ನಾಗಿಯೂ ನಿಶ್ಚಿತ ಸಂಬಂಧವುಳ್ಳವುಗಳನ್ನಾಗಿಯೂ ತಿದ್ದಿ ಇಡುತ್ತಾರೆ. ವಿಶೇಷತಃ ಮಿತ್ರಾವರುಣರು ತಮ್ಮ ಕಾರ್ಯದ ವಿಧಿಗೆ ದೃಢವಾಗಿ ಅಂಟಿಕೊಳ್ಳುವವರೆಂದು ಸತತವಾಗಿ ಬಣ್ಣಿಸಲಾಗಿದೆ. ಆ ಕಾರ್ಯವೆಂದರೆ ಪರಮಸತ್ಯಸಂವರ್ಧನೆ, ಆ ಸತ್ಯದ ಸ್ಪರ್ಶನ, ಅದರ ಮೂಲಕವೇ ಅದನ್ನು ಭೋಗಿಸುವುದು. ಆ ಅನುಭೋಗವು - ಆ ಸತ್ಯದ ವಿಸ್ತಾರದ್ದೋ ಯಾ ದಿವ್ಯ ಸಂಕಲ್ಪದ್ದೋ ಯಾ ಅದರ ಅಸಂಕುಚಿತ ಮಹಾಯಾಗ ಕರ್ಮದ್ದೋ-ಈ ಯಾವುದಾದರೂ ಒಂದರ ಭೋಗವಾಗಬಹುದು. ಆಯಾಮ, ಧರ್ಮ (ನ್ಯಾಯ) ಮತ್ತು ಪಾವಿತ್ರ್ಯ ಎಂಬ ಗುಣಗಳಿಗೆ ವರುಣನು ಮುಖ್ಯಾಕರ. ಸಲಿತನ, ಮಡಿತನಗಳಿಂದ ದೂರವಾದ, ಅವನ್ನು ಬಿಟ್ಟು ಅಡ್ಡದಾರಿ ಹಿಡಿದ ಎಲ್ಲವೂ ಅಂಥ ಕರ್ಮಿಯ ಮೇಲೆ ತಿರುಗಿ ಬೀಳುತ್ತವೆ ; ಮತ್ತು ಪಾಪಕ್ಕೆ ತಕ್ಕ ಶಿಕ್ಷೆಯೆಂದು ತಪ್ಪಿತಸ್ಥನನ್ನು ವರುಣನು ಶಿಕ್ಷಿಸುವನು. ವರುಣನ ಸತ್ಯದ ವಿಸ್ತಾರವನ್ನು ಮನುಷ್ಯನು ತಲುಪುವವರೆಗೆ, ಅವನು ವಿಶ್ವಯಜ್ಞದ ಯೂಪಸ್ತಂಭಕ್ಕೆ ಯಜ್ಞಪಶುವಾಗಿ ಕಟ್ಟಲ್ಪಟ್ಟು (ಆ ಕಟ್ಟುವ ಹಗ್ಗವೆಂದರೆ ಮನ, ಪ್ರಾಣ, ದೇಹಗಳು - ಮೂರು ಹುರಿಗಳನ್ನು ಹೊಸೆದು ಮಾಡಿದ ಹಗ್ಗ) ಯಾವುದರ ಮೇಲೂ ಒಡೆಯತನವಿಲ್ಲದೆ, ಭೋಗಾಧಿಕಾರವಿಲ್ಲದೆ ನರಳುತ್ತಿರುತ್ತಾನೆ. ಆದುದರಿಂದಲೇ ನಾವು ಪಾವಿತ್ರ್ಯಭಂಗದಿಂದ ಕುಪಿತನಾದಾಗ ನೀನು ನಮ್ಮ ಕೊರಳಿಗೆ ಹಾಕಿದ ಉರುಳಿನಿಂದ ನಮ್ಮನ್ನು ಬಿಡುಗಡೆ ಮಾಡು ಎಂದು ಪದೇ ಪದೇ ಪ್ರಾರ್ಥಿಸುತ್ತೇವೆ. ಹಾಗಲ್ಲದೆ ಮಿತ್ರದೇವನು ದೇವತೆಗಳಿಗೆಲ್ಲಾ ಅತ್ಯಂತ ಪ್ರಿಯನಾದವನು; ತನ್ನ ಸಾಮಶ್ರುತ್ಯದ ದಾರ್ಢ್ಯದಿಂದ ಅವನು ಜಗದ್ವಸ್ತು ವಿನ್ಯಾಸದಲ್ಲಿ ಸಾರ್ಥಕ್ಯಪಡೆದ ಪ್ರೇಮದ ಹೊಳೆವ ಪೀಠಗಳ ಮೂಲಕ ಎಲ್ಲರನ್ನೂ ಒಂದುಗೂಡಿಸುತ್ತಾನೆ. "ಮಿತ್ರಸ್ಯ ಧಾಮಭಿಃ". ಮಿತ್ರ=ಸ್ನೇಹಿತ. ಮಿತ್ರನೆಂಬ ದೇವತೆಯ ಅರ್ಥದೊಡನೆ ಈ ಸ್ನೇಹಿತ ಎಂಬ ಅರ್ಥವನ್ನು ಸದಾ ಇಟ್ಟುಕೊಂಡೇ ಮಿತ್ರಪದದ ಪ್ರಯೋಗವನ್ನು ಮಾಡಲಾಗುತ್ತದೆ. ಎಲ್ಲರಲ್ಲೂ ಅವನು (ಮಿತ್ರನು) ಮಿತ್ರನಾಗಿರುತ್ತಾನೆ. ಅದರಿಂದ ಇತರ ದೇವತೆಗಳೆಲ್ಲ ಮಾನವನ ಮಿತ್ರರಾಗುತ್ತಾರೆ. ಅರ್ಯಮನು ವೇದದಲ್ಲಿ ವ್ಯಕ್ತಿ ವೈಶಿಷ್ಟ್ಯವಿಲ್ಲದೆ ಬರುತ್ತಾನೆ-ಅವನ ಬಗ್ಗೆ ಹೇಳಿದ್ದು ಬಹಳ ಸ್ವಲ್ಪ, ಸಂಕ್ಷಿಪ್ತ. ಭಗನ ಕರ್ತವ್ಯಗಳನ್ನು ವಿಶ್ವದಲ್ಲಿ ಸ್ಪಷ್ಟವಾಗಿ ಮಾನವಸಾಧಾರಣವಾಗಿ ಹೇಳಲಾಗಿದೆ.

ಶ್ಯಾವಾಶ್ವನು ಸವಿತೃನಿಗೆ ಈ ಸೂಕ್ತದಲ್ಲಿ ಭಗನ ಕರ್ತವ್ಯಗಳನ್ನೂ ಸವಿತೃ ಸೂರ್ಯನೊಡನಿರುವ ಅವನ ಐಕ್ಯವನ್ನೂ ಹೇಳಲಾಗಿದೆ. ಏಕೆಂದರೆ ಸೃಷ್ಟಿಕರ್ತನಾದ ಒಡೆಯನನ್ನು ಸೂಕ್ತವು ಸಂಬೋಧಿಸುತ್ತದೆ ; ಆದರೆ ವಿಶಿಷ್ಟವಾಗಿ ಭಗ ಸ್ವರೂಪದಲ್ಲಿರುವ ಸೂರ್ಯನನ್ನೇ ಸಂಬೋಧಿಸುತ್ತದೆ.

ಭಗ ಸ್ವರೂಪದಲ್ಲಿ ಸೂರ್ಯನು ಭೋಗಾಧಿಪತಿಯು. ಭಗ=ಭೋಗ ಯಾ ಭೋಗಿಯು.[೧] ಭೋಜನಂ, ಭಾಗ, ಸೌಭಾಗ್ಯಂ - ಸೂಕ್ತೋಕ್ತಿಯಂತೆ. ಇದು ಉಕ್ತ ಭಗಾರ್ಥವನ್ನು ಸಮರ್ಥಿಸುತ್ತದೆ. ಸವಿತೃವು ಸ್ರಷ್ಟಾರನೆಂದು ಗೊತ್ತು. ಆದರೆ ಸವಿತೃತ್ವವು ವಿಶೇಷತಃ ಸ್ರಷ್ಟತ್ವವು - ಅವ್ಯಕ್ತವನ್ನು ವ್ಯಕ್ತಗೊಳಿಸುವುದು, ಗುಪ್ತ (ಸುಪ್ತ)ವಾದುದನ್ನು ಪ್ರಕಟಗೊಳಿಸುವುದು. ಸೂಕ್ತದ ಉದ್ದಕ್ಕೂ ಸವಿತೃಶಬ್ದವು ತನ್ನ ಧಾತ್ವರ್ಥದಲ್ಲಿಯೇ ಬಳಕೆಯಾಗಿರುವುದರಿಂದ ಅದರ ಸಮರ್ಪಕ ಭಾಷಾಂತರ ಮಾಡುವುದು ಅಸಾಧ್ಯ. ಮೊದಲನೆಯ ಋಕ್ಕಿನಲ್ಲಿಯೇ ಅಂಥ ಗೂಡಾರ್ಥದ ಪ್ರಯೋಗವಿದೆ. ಏಕೆಂದರೆ ಭೋಜನಂ=ಉಣ್ಣುವುದು ಮತ್ತು ಊಟ ಮಾಡುವ ಆಹಾರ ಉಣ್ಣುವುದು, ಭೋಗ, ಊಟಮಾಡುವ ಆಹಾರವು ಭೋಜ್ಯ ಯಾ ಭೋಗಾರ್ಹವಾದ ಭೋಗ್ಯ. ಸವಿತೃವಿಗೆ ಸೋಮನು (ವು) ಭೋಜ್ಯ ಎಂಬುದು ಇಂಗಿತ. ಸೋಮಶಬ್ದದ ಧಾತುವೂ "ಸು"=ಉತ್ಪಾದಿಸು, ಹಿಂಡಿತೆಗೆ, ಬತ್ತಿಸಿ ತೆಗೆ ; ದೊಡ್ಡ ಉತ್ಪಾದಕನು ಮಾಡಿದ ಅತ್ಯುನ್ನತವಾದದ್ದು ದಿವ್ಯಾತ್ಮಗಳ ಆಹಾರ ; ಅತ್ಯುನ್ನತ, ಬತ್ತಿಸಿ ಭಟ್ಟಿ ಇಳಿಸಿದ ರಸ. ಋಷಿಯ ಇಂಗಿತದ ಪ್ರಕಾರವಾಗಿ, ಆ ಆಹಾರವೆಂಬುದು ಸರ್ವಸೃಷ್ಟ ಪದಾರ್ಥಗಳಲ್ಲೂ ಅಮೃತಕರವೂ ಅಮೃತವೂ ಆಗಿ ಭೋಗ್ಯವಾಗಿರುವ ಆನಂದವು.

ಈ ಆನಂದವೇ ದಿವ್ಯ ಸವಿತಾರನ ಭೋಗ, ಭೋಗ್ಯ, ಭೋಜ್ಯ. ಸವಿತಾರ=-ಸೂರ್ಯ=ಪರಮಸತ್ಯದ ಅತ್ಯುನ್ನತ ಪರಿಣಾಮ. ದಿವ್ಯ ಬ್ರಹ್ಮಾನಂದಕ್ಕೆ ಈ ಪರಮ ಸತ್ಯವೇ ದಾರಿ. ಈ ಆನಂದವು ಪರಮೋಚ್ಚವೂ ಶ್ರೇಷ್ಠವೂ ಆದ ಸುಖಭೋಗವು. ಅದು ಸರ್ವವನ್ನೂ ಸರಿಪಡಿಸುವುದು. ದಿವ್ಯ ಸಂತೋಷವಾದ ಆನಂದವು ಎಲ್ಲ ಪದಾರ್ಥಗಳಲ್ಲಿಯೂ (ಋಷಿಗೆ ಯಾ ದೇವತೆಗೆ) ಸಿದ್ಧಿಯಾದಾಗ, ಅದು ಲೋಕದ ಎಲ್ಲ ವಿಕಾರಗಳನ್ನೂ ವ್ಯತಿಕ್ರಮಗಳನ್ನೂ ದೌಷ್ಟ್ಯವನ್ನೂ, ದೌರಾತ್ಮ್ಯವನ್ನೂ ಕೇಡನ್ನೂ ಸರಿಪಡಿಸುತ್ತದೆ-ಅದು ಮಾನವನನ್ನು ಈ ಮೂಲಕ ಧ್ಯೇಯದೆಡೆಗೆ ಒಯ್ಯುವುದು. ವಸ್ತುಗಳ (ಪದಾರ್ಥಗಳ) ಸತ್ಯ-ಋತಗಳ ದೆಸೆಯಿಂದ ನಾವು ಆನಂದಕ್ಕೆ ಬಂದು ಮುಟ್ಟಿದ್ದೇ ಆದರೆ, ಆನಂದದಿಂದ ಕೂಡಾ ನಾವು ಸತ್ಯ-ಋತಗಳಿಗೆ ಬಂದು ಮುಟ್ಟಬಹುದು. ಅದು ಭಗನಾಮದಲ್ಲಿ, ಭಗರೂಪದಲ್ಲಿರುವ ಉಕ್ತ ಸವಿತಾರನು-ಮಾನವ್ಯ ವ್ಯಕ್ತಿಯ ದಿವ್ಯತ್ವಾರ್ಹತೆ ಮತ್ತು ಸರಿಯಾದ (ನ್ಯಾಯವಾದ, ಋತ್ಯವಾದ, ಧರ್ಮ್ಯವಾದ), ಸರ್ವ ವಸ್ತುಗಳಲ್ಲಿ ಪಡುವ, ಸಂತೋಷಪರತೆ ಇವುಗಳ ಮೂಲ-ಅರ್ಥಾತ್ ಈ ಆನಂದವೇ ಸವಿತೃವು. ಭಗ ಸ್ವರೂಪದ ದಿವ್ಯತ್ವದಲ್ಲಿ ಆನಂದ ದೇವನನ್ನಾಲಂಗಿಸಿದರೆ - ತನ್ನಲ್ಲಿರುವ ಮನ-ಹೃದಯ-ಪ್ರಾಣ-ಅನ್ನ (ಭೌತ) ಸತ್ತೆಗಳ ಮೂಲಕ ಮಾನವನು ಆನಂದವನ್ನು ಸ್ವೀಕರಿಸಿದರೆ, ಆಗ ಜಗದಾನಂದವು ತಾನೇ ಆವಿರ್ಭವಿಸುತ್ತದೆ. ಈ ದಿವ್ಯ ಭಗ ಸ್ವರೂಪದ ಆನಂದವು (ಯಾ ಸವಿತಾರನು) ವಸ್ತುಜಾತದ ಯಾವುದರಲ್ಲಿ ಆಸಕ್ತವಾಗಿ ಸಂತೋಷಿಸುವುದೋ ಯಾವ ಪಾತ್ರೆಯಲ್ಲಿ (=ಪಾತ್ರದಲ್ಲಿ) - ಜೀವ-ಜಡಾದಿ ಪದಾರ್ಥಗಳಲ್ಲಿ ಆಸಕ್ತವಾಗಿ ಆನಂದಿಸುವುದೋ - ದೇವ-ದಾನವ, ಶತ್ರು-ಮಿತ್ರ, ಘಟನೆ-ಸಂವೇದನೆ ಎಂಜಿಲ ಯಾವುವೂ ಅದರ ಹೃಷ್ಟಿಯನ್ನು ಪರಿಸೀಮನಗೊಳಿಸಲಾರದು. ಏಕೆಂದರೆ ಆನಂದಸ್ವರೂಪನಾದ ಅನಂತ ಸತ್ತೆಯಲ್ಲಿರುವ ಆ ಸೂರ್ಯನ "ಸ್ವರಾಜ್ಯವನ್ನು"=ಸ್ವ ಸಾಮ್ರಾಜ್ಯವನ್ನು, ಅವನ ಈಶತ್ವ-ವಶಿತ್ವಗಳನ್ನು (ಸಂಪೂರ್ಣ ಸ್ವ-ನಿಯಂತ್ರಣವನ್ನು), ಯಾವುದೂ ಕಡಿಮೆ ಮಾಡದು ಹಾಗೂ ಅದಕ್ಕೆ ಯಾವುದೂ ಅಡ್ಡಿಯನ್ನುಂಟು ಮಾಡಲಾರದು ; ಅನಂತ ಸತ್ತೆಯು ಅನಂತಾನಂದ ;ಪರಮ ಸತ್ಯದ ಅನಂತ ಕ್ರಮಿಕ ಶಾಲ್ಯಗಳಿಗೆ ಅದು ಪರ್ಯಾಯವಾಗಿದೆ.

---

೧. ಭೋಗ ಯಾ ಭೋಗಿ ಎಂಬ ಅರ್ಥವೇ ವಿಶೇಷತಃ ದಿವ್ಯನಾಮದ ಭಗನಿಗೆ ಯುಕ್ತವಾದುದು. - ಅನುವಾದಕ

ಆದುದರಿಂದ ಅವನೇ ಸಪ್ತಾಹ್ಲಾದವಾಹಕ ("ಸಪ್ತರತ್ನಾ") ; ಯಾಜ್ಞಿಕನಿಗೆ ಏಳು ಮೋದಗಳನ್ನು ತಂದು ಕೊಡುವಂಥವನು. ನಮಗಾಗಿ ಅವನವುಗಳನ್ನು ಸಡಿಲಿಸಿಬಿಡುತ್ತಾನೆ. ಏಕೆಂದರೆ, ಅವೆಲ್ಲವೂ ಪ್ರಪಂಚದಲ್ಲಿ, ದಿವ್ಯಸತ್ತೆಯಲ್ಲಿ ನಮ್ಮಲ್ಲೂ ಆಗಲೇ ಇರುವಂತೆ (ಸುಪ್ತವಾಗಿ) ಇವೆ. ಅವುಗಳ ಕಟ್ಟನ್ನು ಬಿಚ್ಚಿ ಸಡಿಲಿಸಿದರೆ ಆಯಿತು-ಅವನ್ನು ನಮ್ಮ ಬಾಹ್ಯ ಪ್ರಜ್ಞೆಯ ಮೇಲೆ ಹರಿಬಿಟ್ಟರಾಯಿತು. ಈ ಸಪ್ತಭ್ವದ ಸಂಮೋದದ, ಏಳು ಮಡಿ ಸಂತಸದ ಚಿತ್ರ ವಿಚಿತ್ರವಾದ ಮತ್ತು ಶ್ರೀಮಂತವಾದ ವ್ಯಾಪ್ತಿಯು ನಮ್ಮ ಸರ್ವಸತ್ತ್ವಾಸ್ತರಗಳಲ್ಲೂ ಪೂರ್ಣವಾಗಿ ಇರುತ್ತದೆ ; ಇದೇ ಭಾಗ, ಭಗನ ಭೋಗ ಯಾ ಪಾಲು - ಪೂರ್ಣಯಜ್ಞದಲ್ಲಿ ಆ ಭಗಸವಿತೃವಿನ ಹವಿರ್ಭಾಗ (ಆಹುತಿಭಾಗ). ಈ ದಿವ್ಯ ಭೋಗಿಯ ಸ್ವೀಕಾರದಿಂದಲೇ (ಯಜ್ಞದಲ್ಲಿ) ಋಷಿಯು ವಿವಿಧ ಸಂಪತ್ತನ್ನು ತನಗಾಗಿಯೂ ತನ್ನ ಸಹಚರರಿಗಾಗಿಯೂ ಬಯಸುವವನಾಗಿರುತ್ತಾನೆ.

ಶ್ಯಾವಾಶ್ವನು ಅನಂತರ ಭಗ ಸವಿತಾರನನ್ನು ಕುರಿತು ಕರ್ಮಫಲ ಸಮೃದ್ಧವಾದ, ಆತ್ಮಜರಬಾಹುಲ್ಯವುಳ್ಳ ("ಪ್ರಜಾವತ್‌ಸೌಭಾಗ್ಯಂ"), ಅವಂಧ್ಯ ಸುಖ ಸೌಕರ್ಯವನ್ನು ಇದೇದಿನ ದಯಪಾಲಿಸಬೇಕೆಂದು ಕರೆದು ಆಶ್ವಾಸಿಸಲು ಬೇಡುತ್ತಾನೆ. ಆನಂದವು ಸರ್ಜನಶೀಲ, ಅದು ಜನ, ಜೀವಕ್ಕೂ ಜಗತ್ತಿಗೂ ಜನ್ಮವೀಯುವ ಪ್ರಮೋದಃ ದಿವ್ಯ ಪರಸತ್ಯದ ಲಕ್ಷಣಗಳಿಂದ ಕೂಡಿದ ಕಲ್ಪನೆಯ ಸ್ವರೂಪವುಳ್ಳ ವಸ್ತುಗಳು ಮಾತ್ರ ನಮ್ಮತ್ತ ಹರಿದು ಬರುವಂತೆ ಮಾಡಲಿ ; ದಿವ್ಯ ಪರಸತ್ಯದ ಅಜ್ಞಾನದಿಂದ ಹುಟ್ಟಿಸಲಾದ "ದುಃಷ್ವಪ್ನ್ಯಂ" (=ದುಸ್ವಪ್ನ್ಯಂ) ದು:ಸ್ವಪ್ನಕ್ಕೂ ಅನೃತಕ್ಕೂ ಸೇರಿದ ಎಲ್ಲವೂ ಕಳೆದು ಹೋಗಲಿ, ನಮ್ಮ ಪ್ರಜ್ಞಾತ ಬಾಳಿನಿಂದ ನಿವೃತ್ತವಾಗಲಿ.

ಮುಂದಿನ ಪದ್ಯದಲ್ಲಿ (ಋಕ್ಕಿನಲ್ಲಿ, ಸೊಲ್ಲಿನಲ್ಲಿ) ದುಃಸ್ವಪ್ನದ ಅರ್ಥವನ್ನು ಸ್ಪಷ್ಟತರಗೊಳಿಸುತ್ತಾನೆ. ಭಗನು ಕೊಡುವುದೆಲ್ಲವೂ ಒಳಿತೇ ; ಋಷಿ ಬಯಸುವುದು ಎಲ್ಲ ಕೇಡೂ ಹೋಗಬೇಕೆಂದು - "ವಿಶ್ವಾನಿ ದುರಿತಾನಿ". "ಸುವಿತಂ" ಮತ್ತು "ದುರಿತಂ" ಎಂದರೆ ವೇದಾನುಸಾರವಾಗಿ ಸರಿಯಾಗಿ ಹೋಗುವುದು ಮತ್ತು ತಪ್ಪಾಗಿ ಹೋಗುವುದು ಎಂದರ್ಥ. ಸುವಿತವು ವಿಚಾರ-ಕಾರ್ಯಗಳ ಸತ್ಯ ; ದುರಿತವೆಂದರೆ ದುಃಖ, ನರಳುವಿಕೆ, ತಪ್ಪುಗಳ ಮತ್ತು ದುಷ್ಕಾರ್ಯಗಳ ಫಲ. ಸುವಿತವೆಂದರೆ ಸುಖವಾಗಿ ಹೋಗುವುದು, ಸುಲಭವಾಗಿ ಸಾಗುವುದು, ಆನಂದಮಾರ್ಗ-ಎಂದರ್ಥ. "ವಿಶ್ವಾನಿ ದುರಿತಾನಿ" ಎಲ್ಲ ದುಷ್ಕೃತ್ಯಗಳೂ ನಮ್ಮಿಂದ ಹೊರ ಹಾಕಬೇಕಾದವುಗಳು. ದುಃಸ್ವಪ್ನ, ಕೆಟ್ಟ ಕನಸು. ಭದ್ರಂ=ಸೌಲಭ್ಯ ದಿವ್ಯಾನುಭೂತಿಯ ಶುಭಾಂಶ, ಧರ್ಮ್ಯ ಕರ್ಮದ ಸುಖ, ಧರ್ಮ್ಯಸೃಷ್ಟಿ - ಎಂದು ಅರ್ಥ.

ಏಕೆಂದರೆ, ಭಗ ಸವಿತಾರನು ತನ್ನ ಪೂರ್ಣ, ಅಸ್ಖಲಿತ ಯಜ್ಞದಲ್ಲಿ ಸೃಷ್ಟಿಸಿದ ಪ್ರಪಂಚದಲ್ಲಿ ಮನುಜರು ಆನಂದದ ದೆಸೆಯಿಂದ ಪಾಪರಹಿತರಾಗುತ್ತಾರೆ, ದೂರಿನಿಂದ ದೂರವಾಗುತ್ತಾರೆ- "ಅನಾಗಸಃ" - ಅದಿತಿಯ ದೃಷ್ಟಿಯಲ್ಲಿ ದೋಷರಹಿತರು ಮುಕ್ತಾತ್ಮನ ಅವಿಭಕ್ತ ಅನಂತ ಪ್ರಜ್ಞೆಗೆ ಅವರು ಅರ್ಹರು. "ಸವ" ಪದಕ್ಕೆ ದ್ವಂದ್ವಾರ್ಥವಿದೆ. (೧) ಸಡಿಲಗೊಳಿಸಿಬಿಡುವುದು ; ಯಾವ ಸಂದರ್ಭದಲ್ಲಿ? ಸರ್ಜನ ಸಂದರ್ಭದಲ್ಲಿ. (೨) ಸೋಮಾಹುತಿ ಕೊಡುವುದು ; ಯಾವಾಗ? ಯಜ್ಞ ಕಾಲದಲ್ಲಿ. ಉಕ್ತ ಸ್ವಾತಂತ್ರ್ಯದ ದೆಸೆಯಿಂದ ಆನಂದವು ಮಾನವರಲ್ಲಿ ವಿಶ್ವವ್ಯಾಪಕವಾಗಿ ಇರಬಲ್ಲದು. ಅವರು ಪ್ರಮೋದದ ಸರ್ವವಸ್ತುಗಳನ್ನೂ ತಮ್ಮ ವಿಚಾರದಿಂದ ಹಿಡಿದಿಟ್ಟುಕೊಳ್ಳಬಲ್ಲ-ವರಾಗುವರು - "ವಿಶ್ವಾ ವಾಮಾನಿ". ಏಕೆಂದರೆ, ತಿಳುವಳಿಕೆಯ ರೂಪದಲ್ಲಿ ಗ್ರಹಿಸಿಕೊಂಡು ವ್ಯವಸ್ಥೆಗೊಳಿಸುವ "ಧೀ"ಯಲ್ಲಿ ಜಗತ್ತಿನ ನ್ಯಾಯವಾದ ವಿನ್ಯಾಸವಿದೆ, ಸರಿಯಾದ ಸಂಬಂಧದ

ಅನುಭವವಿದೆ. ಸರಿಯಾದ ಉದ್ದೇಶದ ಅರಿವಿದೆ ಹಾಗೂ ಸರಿಯಾದ ಬಳಕೆ, ಸಾಫಲ್ಯ ಮತ್ತು ಎಲ್ಲವುಗಳಲ್ಲೂ ದಿವ್ಯ, ಆನಂದಮಯ ಆಸಕ್ತಿಯಿದೆ.

ಅದು ವೈಶ್ವತ್ರಿಕ ದಿವ್ಯಭಾವ, ಸತ್‌ಪದಾರ್ಥದ ಒಡೆಯ - ಅದರಿಂದಲೇ ಎಲ್ಲವೂ ಸೃಷ್ಟವಾದದ್ದು - ಅದೂ ಸತ್ಯದ ಪ್ರಕಾರವಾಗಿ - "ಸತ್ಯಂ". ಯಾಜ್ಞಿಕರಿಂದು ಪವಿತ್ರ ಮಂತ್ರದ ಮೂಲಕ ತಮ್ಮಲ್ಲಿ ಸ್ವೀಕರಿಸಿಟ್ಟುಕೊಳ್ಳಬಯಸುವುದು ಎಲ್ಲವೂ ಭಗಸವಿತಾರನ ಹೆಸರಿನಲ್ಲಿ. ಅವನು ಸ್ರಷ್ಟಾರನು, ಅವನ ಸೃಷ್ಟಿಯು ಸತ್ಯ - ಅವನ ಯಜ್ಞವು ಆ ಸತ್ಯದ ವೃಷ್ಟಿಧಾರೆ-ಅದನ್ನವನು ತನ್ನ ಆನಂದವರ್ಷಣದ ಮೂಲಕ ಮಾಡುತ್ತಾನೆ - ಆ ಆನಂದವು ಅವನ ದಿವ್ಯ, ಅಸ್ಖಲಿತ ಸತ್ತಾಸಂಮೋದ-ಅದನ್ನವನು ಮಾನವಾತ್ಮದಲ್ಲಿ ಸುರಿಯುತ್ತಾನೆ. ಅವನು ಸೂರ್ಯ ಸವಿತಾರನಾಗಿ ಪರಸತ್ಯೇಶ್ವರನು, ತನ್ನ ರಾತ್ರಿಯ ಹಾಗೂ ಉಷಃಕಾಲದ (ಈ ಎರಡರ) ಮುಂದೆಯೂ ಹೋಗುತ್ತಾನೆ: ರಾತ್ರಿ=ಸುಪ್ತಪ್ರಜ್ಞೆ, ಉಷೆ=ಜಾಗರಿತ ಪ್ರಜ್ಞೆ ಒಂದು ಅವಮಾನಸವಾದರೆ ಇನ್ನೊಂದು ಅತಿಮಾನಸವು - ಅವೆರಡರ ಪರಸ್ಪರ ಕ್ರಿಯೆಯೇ ನಮ್ಮೆಲ್ಲ ಅನುಭವಗಳನ್ನೂ ಸೃಜಿಸುತ್ತದೆ ಮತ್ತು ತನ್ನ ಚಲನೆಯಲ್ಲಿ ಅವನು ಯಾವುದನ್ನೂ ಅನಾದರಿಸುವುದಿಲ್ಲ, ಎಂದೂ (ಕಿವುಡನಂತೆ) ಕಿವಿ ಮುಚ್ಚಿಕೊಳ್ಳುವುದಿಲ್ಲ -ಎಂದೂ ತಪ್ಪು ಮಾಡುವುದಿಲ್ಲ. ಎರಡರ ಮುಂದೆಯೂ ಹೋಗಿ ಆತನು ಅವಮಾನಸದ ಇರುಳಿಂದ ದಿವ್ಯಜ್ಯೋತಿಯನ್ನು ಹೊರತಂದು ಅದನ್ನು - ಆ ಅನಿಶ್ಚಿತ ದಿವ್ಯ ಜ್ಯೋತಿಯನ್ನು ಅದರ ಹೆಗ್ಗಿರಣಗಳನ್ನಾಗಿ ಮಾಡಿ ಅಥವಾ ಆ ವಿಕೃತವಾದ ಪ್ರತಿಫಲಿತಗಳನ್ನುಳ್ಳ ಜಾಗರಿತ ಪ್ರಜ್ಞೆಯನ್ನು ಸರಿಪಡಿಸಿ ವಿಚಾರವನ್ನು ಸರಿಯಾಗಿ ವಿಹಿತಗೊಳಿಸುತ್ತಾನೆ. ಅಪಾನ್ವಯವೇ ಸರ್ವಸ್ಖಾಲಿತ್ಯಗಳ ಆಕರ, ಸತ್ಯವನ್ನು ಅಸ್ಥಾನದಲ್ಲಿಡಲು ಕಾರಣ, ಅದನ್ನು ತಪ್ಪಾಗಿ ವಿನ್ಯಾಸ ಮಾಡುವ ಹೇತು, ತಪ್ಪಾಗಿ ಸಂಬಂಧಿಸುವ ಬೀಜ, ದೇಶ-ಕಾಲಗಳಲ್ಲಿ ಅನುಷೇಧಿಸಲು ಮೂಲ-ವಿಷಯ (ವಸ್ತು)ಗಳ ಅಕ್ರಮ ವ್ಯವಸ್ಥಾಪನೆ ಅದರಿಂದಲೇ ಆಗುವುದು. ಆದರೆ ಪರಮಸತ್ಯೇಶ್ವರನಲ್ಲಿ ಅಂಥ ಪ್ರಮಾದವಿಲ್ಲ, ಅಂಥ ಎಡಹಿಬೀಳುವ ಪ್ರಮೇಯವಿಲ್ಲ, ಹಾಗೆ ಅಸ್ಥಾನ ಸ್ಥಾಪನೆಯಿಲ್ಲ.

ಸೂರ್ಯ ಸವಿತಾರನು ಭಗನು-ನಮ್ಮ ಒಳಗೂ ಹೊರಗೂ ಅನಂತಕ್ಕೂ ಸೃಷ್ಟ ಪ್ರಪಂಚಗಳಿಗೂ ಮಧ್ಯಸ್ಥನಾಗಿರುತ್ತಾನೆ. ಸರ್ಜನಾತ್ಮಕ ಪ್ರಜ್ಞೆಯಲ್ಲಿ ಸೃಷ್ಟಿಸಬೇಕಾಗಿರುವ ಎಲ್ಲವನ್ನೂ ಅವನು ವಿಜ್ಞಾನದೊಳಗೆ ಸ್ವೀಕರಿಸುತ್ತಾನೆ. ಅವತರಿಸಿ ಬರುವಾಗ ಜ್ಞಾನವು ಮಂತ್ರವನ್ನು ಕೇಳುವುದರ ಮತ್ತು ಸ್ವೀಕರಿಸುವುದರ ಮೂಲಕ ಅದನ್ನವನು ದಿವ್ಯಲಯದಲ್ಲಿ ತಕ್ಕ ಸ್ಥಳದಲ್ಲಿ ಇಡುತ್ತಾನೆ. ಆದುದರಿಂದ ವಸ್ತುಚಲನೆಯಲ್ಲಿ ಅವನದನ್ನು ಸೇರಲು ಸಡಿಲು ಮಾಡಿಬಿಡುವನು. "ಆಶ್ರಾವಯತಿ ಶ್ಲೋಕೇನ ಪ್ರ ಚ ಸುವಾತಿ". ನಮ್ಮಲ್ಲಿ ಪ್ರತಿಯೊಂದು ಸೃಷ್ಟ ಪದಾರ್ಥವೂ ಕ್ರಿಯಾಶೀಲ ಆನಂದಕ್ಕೆ ಸೇರಿದ್ದು- "ಪ್ರಜಾವತ್ ಸೌಭಗಂ"-ಹೀಗೆ ಅವ್ಯಕ್ತದಿಂದ ಹೊರಬರುತ್ತದೆ. ಇದು ಸ್ವೀಕೃತ, ಶ್ರುತ ಯಾವುದರಿಂದ? ವಸ್ತುಗಳ ಅಸ್ಖಲಿತ ಲಯದಲ್ಲಿರುವ ಜ್ಞಾನದಿಂದ. ಅನಂತರ ನಮ್ಮಲ್ಲಿ ಸೃಷ್ಟಿಯಾಗುವುದು - ಭಗ ಸವಿತೃ ಮತ್ತು ಆ ಸೃಷ್ಟಿಯ ಎಲ್ಲ ಹುಟ್ಟುಗಳ ಆವಿಷ್ಕಾರ. ಆ ಸೃಷ್ಟಿಯು ನಮ್ಮ ಮಕ್ಕಳು, "ಅಪತ್ಯಗಳು, ಪ್ರಜೆಗಳು"-ಸಂಮೋದ ಕಾರಕಗಳು - "ವಿಶ್ವಾ ವಾಮಾನಿ". ಇದು ಮಾನವನಲ್ಲಿಯ ಭಗದೇ ವನ ಸಾಧನೆ- ಅವನ ಪ್ರಪಂಚರೂಪದ ಯಜ್ಞದ ಪೂರ್ಣಭಾಗ.

❖ ❖

# VIII
# ಜೈವಿಕ ಶಕ್ತಿಗಳ ಒಡೆಯನಾದ ವಾಯು
## ಋಗ್ವೇದ IV. 48

**ವಿಹಿ ಹೋತ್ರಾ ಅವೀತಾ ವಿಪೋ ನ ರಾಯೋ ಅರ್ಯಃ ।**
**ವಾಯವಾ ಚಂದ್ರೇಣ ರಥೇನ ಯಾಹಿ ಸುತಸ್ಯ ಪೀತಯೇ ॥ ೧ ॥**

೧. ಎಲೈ ವಾಯುವೇ, ಸುಖಕಾರಕನೂ ಕಾರ್ಯಕರ್ತನೂ ಆಗಿರುವಂತೆಯೇ ನೀನು ಅವ್ಯಕ್ತವಾಗಿರುವ ಯಜ್ಞ ಶಕ್ತಿಗಳನ್ನು ವ್ಯಕ್ತಗೊಳಿಸು. ನಿನ್ನ ಸುಖಕರ ಜ್ಯೋತೀರಥದಲ್ಲಿ ಸೋಮ(ಮಧ್ಯ)ರಸವನ್ನು ಕುಡಿಯಲು ಬಾ.

**ನಿರ್ಯುವಾಣೋ ಅಶಸ್ತೀರ್ ನಿಯುವಾತ್ವಾ ಇಂದ್ರಸಾರಥಿಃ ।**
**ವಾಯವಾ ಚಂದ್ರೇಣ ರಥೇನ ಯಾಹಿ ಸುತಸ್ಯ ಪೀತಯೇ ॥ ೨ ॥**

೨. ನಿನ್ನಿಂದ ನೀನು ಅಭಿವ್ಯಕ್ತಿ ನಿರಾಕರಣೆಯನ್ನು ದೂರೀಕರಿಸು. ನೊಗಕ್ಕೆ ತೇರ್‌ಗುದುರೆಗಳನ್ನು ಕಟ್ಟಲಾಗಿದೆ. ತೇರಿಗೆ ಇಂದ್ರ ಸಾರಥಿಯಾಗಿದ್ದಾನೆ. ಆದ್ದರಿಂದ ವಾಯುದೇವ, ಆ ನಿನ್ನ ಸುಖಾವಹ ಜ್ಯೋತಿರ್ಮಯ ರಥದಲ್ಲಿ ಸೋಮರಸ ಪಾನಕ್ಕಾಗಿ ಬಾ.

**ಅನುಕೃಷ್ಣೇ ವಸುಧಿತೀ ಯಮಾತೇ ವಿಶ್ವಪೇಶಸಾ ।**
**ವಾಯವಾ ಚಂದ್ರೇಣ ರಥೇನ ಯಾಹಿ ಸುತಸ್ಯ ಪ್ರೀತಯೇ ॥ ೩ ॥**

೩. ಆ ಇಬ್ಬರು ಕಪ್ಪಾಗಿದ್ದಾರೆ. ಆದರೂ ಎಲ್ಲ ದ್ರವ್ಯಗಳನ್ನೂ ಹಿಡಿದು ನಿಲ್ಲಿಸಿದ್ದಾರೆ. ತಮ್ಮ ಕಾರ್ಯ ಮಗ್ನತೆಯಲ್ಲೇ ಅವರು ನಿನ್ನನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಾರೆ. ಎಲ್ಲ ಆಕಾರಗಳೂ ಅವರಲ್ಲಿವೆ. ಓ ವಾಯುವೇ, ಸುಖಾವಹವಾದ ಬೆಳಕಿನ ರಥದಲ್ಲಿ ಕುಳಿತು ನೀನು ಸೋಮರಸ ಕುಡಿಯಲು ಬಾ.

**ವಹಂತು ತ್ವಾ ಮನೋಯುಜೋ ಯುಕ್ತಾಸೋ ನವತಿರ್ನವ ।**
**ವಾಯವಾ ಚಂದ್ರೇಣ ರಥೇನ ಯಾಹಿ ಸುತಸ್ಯ ಪ್ರೀತಯೇ ॥ ೪ ॥**

೪. ಮನದಿಂದ ನೊಗಕ್ಕೆ ಹೂಡಲ್ಪಟ್ಟ ತೊಂಬತ್ತೊಂಬತ್ತು ನಿನ್ನನ್ನು ಹೊರಲಿ, ಎಲೋ ವಾಯು, ಆ ನಿನ್ನ ಸುಖದಾಯಕವಾದ ಪ್ರಭಾ ರಥದಲ್ಲಿ ಸೋಮರಸ ಕುಡಿಯಲು ಬಾ.

**ವಾಯೋ ಶತಂ ಹರೀಣಾಂ ಯುವಸ್ವ ಪೋಷ್ಯಾಣಾಂ ।**
**ಉತ ವಾ ತೇ ಸಹಸ್ರಿಣೋ ರಥ ಆಯಾತು ಪಾಜಸಾ ॥ ೫ ॥**

೫. ವರ್ಧಮಾನವಾದ ನಿನ್ನ ನೂರು ಹೊಳಪಿನ ಕುದುರೆಗಳನ್ನು ನೊಗಕ್ಕೆ ಹೂಡು, ವಾಯುವೇ ; ಅಥವಾ ತನ್ನ ಘನತ್ವದ ಪ್ರಣೋದದಿಂದ ಸಹಸ್ರಹಯನೀತವಾದ ನಿನ್ನ ರಥವು (ಇತ್ತು) ಬರಲಿ.



# ವ್ಯಾಖ್ಯಾನ

ವೈದಿಕ ಋಷಿಗಳ ಮಾನಸಶಾಸ್ತ್ರೀಯ ಕಲ್ಪನೆಗಳು ಎಷ್ಟೋ ಸಾರಿ ಆಶ್ಚರ್ಯಕರ ಗಂಭೀರತೆ (ಆಳ) ಉಳ್ಳವುಗಳಾಗಿವೆ; ಅದರಲ್ಲೂ ಅವಮಾನಸದಿಂದ ಉದ್ಬುದ್ಧವಾದ ಮಾನಸ-ಜೈವಿಕ ಜಾಗರಿತ ಚಟುವಟಿಕೆಗಳ ಘಟನೆಯನ್ನು ಪ್ರಸ್ತಾಪಿಸುವಾಗ ಇನ್ನೂ ಹೆಚ್ಚು ಅದ್ಭುತ ಗಾಂಭೀರ್ಯವನ್ನು ತೋರುತ್ತವೆ. ಸ್ಫೂರ್ತರಾದ ಈ ಋಷಿಗಳಿಂದ, ಯೋಗಿಗಳಿಂದ, ಉದ್ಧರಿಸಲ್ಪಟ್ಟ ಶ್ರೀಮಂತ ಸೂಕ್ಷ್ಮ ತತ್ವಜ್ಞಾನವು ವಿಕಸಿತವಾದುದು. ಈ ಕಲ್ಪನಾವಳಿಯನ್ನು ಇಡೀ ತಳಹದಿಯನ್ನಾಗಿ ತೆಗೆದುಕೊಂಡೇ-ಜ್ಞಾನದ ಪ್ರಾಚೀನ ಉಷಃಕಾಲದಲ್ಲಿ ಎಂದು ಕೂಡಾ ಹೇಳಬಹುದು. ವೈದಿಕ ಯುಗದ ಅತಿ ಗಂಭೀರ ದ್ರಷ್ಟಾರರಲ್ಲೊಬ್ಬನೂ ಮಧುರತಮ ಗಾಯಕರಲ್ಲೊಬ್ಬನೂ ಆದ ವಾಮದೇವನಿಗಿಂತ ಮಹತ್ತರ ಸೂಕ್ಷ್ಮತೆಯಿಂದಲೂ ಲೀಲಾಂಜಾಲವಾಗಿಯೂ ಇನ್ನಾರೂ ಆ ಕಲ್ಪನಾವಳಿಯನ್ನು ಉದ್ಧರಿಸಿಲ್ಲ. ೪ನೆಯ ಮಂಡಲದ ಕೊನೆಯದಾದ ಸೂಕ್ತವೊಂದು ಆರ್ಯಪಿತೃಪಿತಾಮಹರುಗಳಿಂದ ಅಷ್ಟು ಪವಿತ್ರವೆಂದು ತಿಳಿಯಲಾದ ಮಾನಸಶಾಸ್ತ್ರೀಯ ಅನುಭವ ಹಾಗೂ ಸಾಕ್ಷಾತ್ಕಾರಗಳ ವಾಸ್ತವತೆಯನ್ನು ಅಲಂಕಾರೋಕ್ತಿಗಳಲ್ಲಿ ಅಡಗಿಸಿಟ್ಟ ಸಾಂಕೇತಿಕತೆಯ ಅತಿ ಪ್ರಮುಖ ಬೀಗದ ಕೈಯಾಗಿದೆ.

ಆ ಸೂಕ್ತದಲ್ಲಿ ವಾಮದೇವನು ಅವಮಾನಸ ಸಾಗರವನ್ನು ಉಲ್ಲೇಖಿಸುತ್ತಾನೆ ; ಅದು ನಮ್ಮ ಇಡೀ ಜೀವನದ ಎಲ್ಲಾ ಚಟುವಟಿಕೆಗಳಿಗೂ ಮೂಲವಾಗಿದೆ. ಆ ಸಾಗರದಿಂದ "ಮಧುಮಯತರಂಗ" ಏಳುತ್ತದೆ. ಅದಾವುದು? ಅದೇ ಸಂವೇದನಾತ್ಮಕ ಅಸ್ತಿತ್ವ-ಅದರೊಡನೆ ಘೃತಸೋಮ ಭರಿತವಾಗಿ ಮೇಲೇರಲೆಳಸುತ್ತಿರುವ ಅನನುಭೂತ ಸಂತೋಷವೂ ಅರ್ಥಾತ್ ಸ್ಪಷ್ಟೀಕೃತ ಪ್ರಜ್ಞೆಯೂ ಪಳಚ್ಚನೆ ಹೊಳೆದು ಕೆಳಗಿಳಿದು ಬರುವ ಆನಂದವೂ ಅಮೃತತತ್ವದತ್ತ ಹೋಗಲೆಳಸುತ್ತಿರುತ್ತವೆ. ಮಾನಸ ಪ್ರಜ್ಞೆಯ "ಗುಪ್ತ ಮಹಾಪ್ರಕೃತಿ" ಯು ದೇವತೆಗಳು ಜಗತ್ತನ್ನು ಆಸ್ವಾದಿಸುವ ನಾಲಿಗೆ ಅಮೃತತತ್ವದ (ಅಮರ್ತ್ಯತ್ವದ) ಜೋಡಣೆಯ ರೂಪದಲ್ಲಿರುತ್ತದೆ ; ಅಮೃತತತ್ವವಿಲ್ಲಿ ಸೋಮನಿಂದ ಸಂಕೇತಿತವಾಗಿರುವ ಆನಂದ, ಪರಮಾನಂದ. ಏಕೆಂದರೆ ಈ ಸೃಷ್ಟಿಯೆಲ್ಲವೂ ದಿವ್ಯ ಪುರುಷ ಸ್ವರೂಪದ ಚತುಃಶೃಂಗಿ ವೃಷಭನು ಅವಮಾನಸ ಸಾಗರಕ್ಕೆ ತನ್ನಿಂದ ತೆಗೆದು ಹೊರಗೆಸೆದನೇನೋ ಎಂಬಂತಿದೆ. ಆ ವೃಷಭನ ನಾಲ್ಕು ಕೋಡುಗಳೆಂದರೆ - ಸತ್ತೆ (ಸತ್), ಪ್ರಜ್ಞೆ (ಚಿತ್), ಆನಂದ (ಅನಂತ ಸಂತೋಷ) ಮತ್ತು ಸತ್ಯ (ಏಕಮೇವಾದ್ವಿತೀಯಂ ಪರಮಸತ್ಯಂ) ಎಂಬಿವೇ ಆಗಿವೆ. ಇದನ್ನು ವಾಮದೇವನು ಉತ್ಸಾಹಪೂರ್ಣ, ಅಸಂಬದ್ಧತೆಯುಳ್ಳ, ಇತಿಹಾಸಪೂರ್ವ ಕಾಲದ ಯೌಗಿಕ ಹಾಗೂ ಸಾಂಕೇತಿಕ ಕಲೆಯ ಅಳಿದುಳಿದ ಉದಾತ್ತವೂ ಅದ್ಭುತವೂ ಆದ ವಿಕಟಾಕಾರ ಮತ್ತು ಅಪೂರ್ವಾಕಾರಗಳನ್ನು ನಮಗೆ ನೆನಪು ಮಾಡಿಕೊಡುವಂಥ ಪ್ರತಿಮೆಗಳ ಮೂಲಕ (ರೂಪಕೋಕ್ತಿಗಳ ಮೂಲಕ) ಹೇಳುತ್ತಾನೆ. ವಾಮದೇವನು ದಿವ್ಯ ಪುರುಷನನ್ನು ಮಾನವ್ಯ ವೃಷಭದ ವಕ್ರೋಕ್ತಿಯಲ್ಲಿ ಬಣ್ಣಿಸುತ್ತಾನೆ. ಆ ಪುರುಷನ ನಾಲ್ಕು ಕೋಡುಗಳು ನಾಲ್ಕು ದಿವ್ಯ ತತ್ವಗಳು ; ಅವನ ಮೂರು ಕಾಲುಗಳು ಯಾ ಪಾದಗಳು ಮೂರು ಮಾನವ್ಯ ತತ್ವಗಳ ಸಂಕೇತಗಳು :

(೧) ಮನೋಧರ್ಮ, ಮಾನಸಿಕತೆ ; (೨) ಪ್ರಾಣಿಕ ಯಾ ಜೈವಿಕ ಉತ್ಕ್ರಿಯೆ ; (೩) ಭೌತಿಕ ದ್ರವ್ಯಸಾರ. ಅವನ ಎರಡು ತಲೆಗಳು ಪರಮಾತ್ಮದ ಮತ್ತು ಪರಾಪ್ರಕೃತಿಯ ಪ್ರಜ್ಞೆಗಳು= ಪುರುಷ ಮತ್ತು ಪ್ರಕೃತಿಗಳು. ವೃಷಭನ ೭ ಕೈಗಳು ಉಕ್ತ ಏಳು ತತ್ವಗಳಿಗನುಗುಣವಾದ ೭ ಕ್ರಿಯೆಗಳು, ಕರ್ಮಗಳು. ತ್ರಿಪುಟ ಬಂಧನ=ಮನಸ್ಸು, ಜೈವಿಕ ಕ್ರಿಯಾಶಕ್ತಿಗಳು ಮತ್ತು ಶರೀರಗಳಿಂದ ಜೀವಾತ್ಮನು ಬದ್ಧನಾಗಿದ್ದಾನೆ. "ವೃಷಭನು ಗಟ್ಟಿಯಾಗಿ ಗುಟುರು ಹಾಕುತ್ತಾನೆ-ಮರ್ತ್ಯರಲ್ಲಿ ಹೊಕ್ಕ ದೇವತ್ವವು ಅತಿ ದೊಡ್ಡದು (ಮಹಾಮೇರು ಸಮವಾದುದು)".

"ಘೃತವು" ಪರಸತ್ಯವನ್ನು ಪ್ರತಿಬಿಂಬಿಸುವ ಮಾನಸಿಕತೆಯ ಸ್ಪಷ್ಟವಾದ ಬೆಳಕು. ಅದು ಕೆಳಗಿನ ಐಂದ್ರಿಯ ಕ್ರಿಯೆಯ ಅಧಿಪತಿಗಳಾದ ಪಣಿಗಳಿಂದ ಪ್ರಚ್ಛಾದಿತವಾಗಿ ಅವಮಾನಸದಲ್ಲಿ ಇಡಲ್ಪಟ್ಟಿದೆ. ನಮ್ಮ ವಿಚಾರಗಳಲ್ಲಿ, ಆಸೆಪಾಸೆಗಳಲ್ಲಿ, ಭೌತಿಕ ಪ್ರಜ್ಞೆಯಲ್ಲಿ ಪರಂಜ್ಯೋತಿಯೂ ಪರಂ ಆನಂದವೂ ಮುಪ್ಪುರಿಯಾಗಿ ಪ್ರತಿಷ್ಠಾಪಿಸಲ್ಪಟ್ಟಿವೆ; ಆದರೆ ನಮ್ಮಿಂದ ಅವು ಅಡಗಿಸಿಡಲ್ಪಟ್ಟಿವೆ. ಘೃತದ ಸ್ವಚ್ಛಗೊಳಿಸಲ್ಪಟ್ಟ ಪ್ರವಾಹಗಳನ್ನು (ಧಾರೆಗಳನ್ನು) ದೇವತೆಗಳು ಕಾಣುವುದು ಪರಂಜ್ಯೋತಿಃ ಸಂಕೇತವಾದ ಆಕಳಿನಲ್ಲಿ. ಈ ಧಾರೆಗಳು - ಋಷಿ ಹೇಳುತ್ತಾನೆ-ವಸ್ತುಜಾತದ ಹೃದಯದಿಂದ ಏಳುತ್ತವೆ, ಅವಮಾನಸದ ಸಾಗರದಿಂದ ಉಚ್ಚಳಿಸುತ್ತವೆ - "ಹೃದ್ಯಾತ್ ಸಮುದ್ರಾತ್" ಆದರೆ ಶತ್ರುವಾದ ವೃತ್ರನು ಅವುಗಳನ್ನು ನೂರಾರು ಹಟ್ಟಿಗಳಲ್ಲಿ ಕಟ್ಟಿ ಹಾಕಿದ್ದಾನೆ ; ಹಾಗೆ ಆತನು ಮಾಡಲು ಕಾರಣವೇನೆಂದರೆ ನಾವು ಸೂಕ್ಷ್ಮದರ್ಶಕ ದೃಷ್ಟಿಯಿಂದ ದೂರವಿರಬೇಕು, ಮುಚ್ಚಿಟ್ಟದ್ದನ್ನು ತೆರೆಯಲು ಮತ್ತು ಕಾರಾಬದ್ಧವನ್ನು ವಿಮೋಚಿಸಲು ಹೋರಾಡುತ್ತಿರುವ ಮಾನವಾಂತರ್ಗತ ಜ್ಞಾನದಿಂದ ನಮ್ಮನ್ನು ಹೊರಗಿಡಬೇಕು. ಎಂಬ (ದುರ್) ಉದ್ದೇಶವೇ ಆಗಿದೆ. ಅವು ಅವಮಾನಸ ಸಾಗರದ ತೀರದಲ್ಲಿ ತಿರುಗಾಡುತ್ತವೆ. ಅವು ಚಲನೆಯಲ್ಲಿ ಉತ್ಸೇಕಿಗಳಾದರೂ ಸಾಂದ್ರವಾಗಿ ಸಂಘಟಿತವಾದ ಗೋಗಳು (ಜ್ಞಾನ ಕಿರಣಗಳು). ಅವುಗಳ ಚಲನೆಯು ನರಗಳ ಕ್ರಿಯೆಗಳಿಂದ ಪರಿಸೀಮಿತವಾಗಿ ಜೈವಿಕ ಶಕ್ತಿಯಾದ ವಾಯುವಿನ ಚಿಕ್ಕ ಚಿಕ್ಕ ರೂಪಗಳಲ್ಲಿರುತ್ತವೆ- "ವಾತ ಪ್ರಮಿಯಂಃ" ಪ್ರಜ್ಞಾತ ಹೃದಯ-ಮನಗಳ ಅನುಭವಗಳಿಂದ ಕ್ರಮೇಣ ಶುದ್ಧಿ ಹೊಂದಿ ಪರಾಪ್ರಕೃತಿಯ ಈ ಕ್ರಿಯಾಶಕ್ತಿಗಳು ಕಟ್ಟಕಡೆಯಲ್ಲಿ ಅಗ್ನಿಯೊಡನೆ, ಮದುವೆಯಾಗಲು ಸಂಪೂರ್ಣ ಸಮರ್ಥವಾಗುತ್ತವೆ. ಅಗ್ನಿಯೋ, ದಿವ್ಯ ಸಂಕಲ್ಪದ ಪ್ರಣೋದ ; ಅವನು ಅವುಗಳ ಇತಿಮಿತಿಗಳನ್ನೆಲ್ಲಾ ಕಡಿದೊಗೆದು ಅನಂತರ ಪುನಃ ಸಾಮರ್ಥ್ಯ ಪಡೆದ ಅವುಗಳ ತರಂಗಗಳಿಂದ ಪುಷ್ಟನಾಗುವ ದೇವನು - ಆ ಸಾಮರ್ಥ್ಯವೇ ಶ್ರೇಯಸ್ಸಿನ ಹೇರಳ, ಐಶ್ವರ್ಯ, ಈಶ್ವರತ್ವ. ಅದೇ ಮರ್ತ್ಯಪ್ರಕೃತಿಯು ಅಮರ್ತ್ಯತ್ವಕ್ಕೆ ಮಾರ್ಪಡಲು ಸಿದ್ಧತೆ ಮಾಡುವ ಅಸ್ತಿತ್ವ ಸ್ವರೂಪದ ಕಂಟಕ (ಪ್ರಸವ ವೇದನೆಯಂಥಹ ಕಷ್ಟ).

ಸೂಕ್ತದ ಕೊನೆಯ ಪದ್ಯದಲ್ಲಿ "ಅಂತಃ ಸಮುದ್ರೇ ಹೃದಿ ಅಂತರ್ ಆಯುಷಿ" - ವಾಮದೇವನು ಇಡೀ ಅಸ್ತಿತ್ವವು (ಅಸೀಮ ಸತ್ತಾಸಾರವು) ಮೇಲೆ ದಿವ್ಯ ಪುರುಷನ ಪೀಠದಲ್ಲೂ ಕೆಳಗೆ ಅವಮಾನಸ ಸಾಗರದಲ್ಲೂ (ಮಾನವ್ಯ ಸಾಮಾನ್ಯ) ಜೀವನದಲ್ಲೂ ಪ್ರತಿಷ್ಠಿತವಾಗಿರುವುದನ್ನು ವರ್ಣಿಸುತ್ತಾನೆ. ಆದ್ದರಿಂದ ಪ್ರಜ್ಞಾತ ಮನಸ್ಸೆಂಬುದು ಕೆಳ-ಮೇಲು ಕಡಲುಗಳ ಸಂಪರ್ಕ ಸಾಧನ - ಅತಿಮಾನಸ-ಅವಮಾನಸಗಳ ನಡುವಿನ ಸಂಪರ್ಕ ಸೇತು-ದಿವ್ಯಜ್ಯೋತಿಗೂ ಮಹಾ ಪ್ರಕೃತಿಯ ಮೂಲಭೂತ ಅಂಧಕಾರಗಳಿಗೂ ಮಧ್ಯದಲ್ಲಿರುವ ಸಮಾಚಾರ ಮಾಧ್ಯಮ.

ವಾಯುವು (ಮಾನವ) ಜೀವನದ ದೊರೆ. ಪ್ರಾಚೀನ ಯೋಗಿಗಳ ಪ್ರಕಾರ ಜೀವನವೊಂದು ಮಹಾಪ್ರಣೋದ-ಅದು ಸರ್ವಭೌತಾಸ್ತಿತ್ವವನ್ನೂ ವ್ಯಾಪಿಸಿ ಅದರ ಚಟುವಟಿಕೆಗಳ ಉಪಾಧಿ

(ಶರ್ತ)ಯಾಗಿದೆ. ಪ್ರಾಣವೆಂದು ಆಮೇಲೆ ಅದನ್ನೇ ಕರೆಯಲಾಯಿತು ; ಪ್ರಾಣ = ವೈಶ್ವತ್ರಿಕ ಶ್ವಾಸ. ಮಾನವನ ಜೈವಿಕ ಹಾಗೂ ನಾಡೀಯ ಕ್ರಿಯೆಗಳೆಲ್ಲಾ ಪ್ರಾಣಲಕ್ಷಣಾಂತರ್ಗತವಾಗಿವೆ ಮತ್ತು ವಾಯು ರಾಜ್ಯಕ್ಕೆ ಸೇರಿದವುಗಳಾಗಿವೆ. ಆದರೂ ಈ ಮಹಾದೇವನು ತುಲನಾತ್ಮಕವಾಗಿ ಋಗ್ವೇದದಲ್ಲಿ ಅಲ್ಪಸಂಖ್ಯಾತ ಸೂಕ್ತಗಳ ಪಾಲುದಾರನಾಗಿದ್ದಾನೆ. "ಅಂಥ ಸೂಕ್ತಗಳಲ್ಲೂ - ಅಂದರೆ ಅವನನ್ನೇ ಎತ್ತಿ ಹಿಡಿದ ಸೂಕ್ತಗಳಲ್ಲೂ - ಅವನೊಬ್ಬನೇ ಇರನು ; ಅವನೊಡನೆ ಇತರ ದೇವತೆಗಳು ಸಹಚರರಾಗಿಯೂ ಅವನ ಅವಲಂಬನರಾಗಿಯೂ (ಅವನು ಅವಲಂಬಿಯಾಗಿಯೂ) ವರ್ಣಿತನಾಗಿದ್ದಾನೆ. ಅವನನ್ನು ವಿಶೇಷತಃ ಇಂದ್ರನೊಡನೆ ತಳುಕು ಹಾಕಲಾಗಿದೆ. ವೈದಿಕ ಋಷಿಗಳು ಅವನಿಗೆ ಮಾಡ ಹೇಳಿದ ಕೆಲಸಗಳಲ್ಲೆಲ್ಲಾ ಅವನಿಗೆ ಇಂದ್ರನ ಸಹಾಯ (ಅವಲಂಬನ) ಅಗತ್ಯವಾಗಿರುವಂತೆ ತೋರುತ್ತದೆ. ಇಂದ್ರನು ವಾಯುವಿಗಿಂತ ಮೇಲಿನ ದೇವತೆ. ಮಾನವನಲ್ಲಿಯ ಜೀವ ಪ್ರಣೋದಗಳ ದಿವ್ಯ ಕರ್ಮದ ಸಂದರ್ಭದಲ್ಲೆಲ್ಲಾ ವೈದಿಕ ವಾಜಿಯ ಸ್ವರೂಪದಲ್ಲಿರುವ ದಧಿಕ್ರಾವದ್ ಎಂಬ ಹೆಸರಿನಲ್ಲಿ ಅಗ್ನಿಯು ವಾಯುವಿಗೆ ಪರ್ಯಾಯವಾಗಿ ಬರುತ್ತಾನೆ.

ಋಷಿಗಳ ಮೂಲಭೂತ ಕಲ್ಪನೆಗಳನ್ನು ಪರಾಮರ್ಶಿಸಿದರೆ ವಾಯುವಿನ ಈ ಸ್ಥಾನದ ಅರ್ಥವು ನಮಗಾಗುತ್ತದೆ. ನೀಚಸತ್ತೆಯನ್ನು ಉಚ್ಚಸತ್ತೆಯು ಬೆಳಗಿಸುವುದೇ, ಮರ್ತ್ಯವನ್ನು ಅಮರ್ತ್ಯವು ಪ್ರಬೋಧಿಸುವುದೇ ಅವರ ಮುಖ್ಯ ಕಲ್ಪನೆಯಾಗಿತ್ತು. ಗೋವು ಮತ್ತು ಅಶ್ವಗಳು ಜ್ಯೋತಿಯನ್ನೂ ಪ್ರಣೋದವನ್ನೂ ಪ್ರತಿನಿಧಿಸುತ್ತವೆ. ದನವೂ ಕುದುರೆಯೂ ಯಜ್ಞಪಶುಗಳಾಗಿದ್ದವು. ಪ್ರಣೋದವು ಉಪಾಧಿ (ಅನಿವಾರ್ಯ ಸಾಧನ), ಜ್ಯೋತಿಯು ವಿಮೋಚನ ಕರ್ತೃವು ; ಮತ್ತು ಇಂದ್ರನೂ ಸೂರ್ಯನೂ ಮುಖ್ಯರಾದ ಬೆಳಕು ತರುವವರು. ಇಷ್ಟೇ ಅಲ್ಲ '- ಅಗತ್ಯವಾದ ಪ್ರಣೋದವೆಂದರೆ ದಿವ್ಯ ಸಂಕಲ್ಪವು -ಅದು ಮಾನವ್ಯ ಕ್ರಿಯಾಶಕ್ತಿಗಳೆಲ್ಲವುಗಳ ಮೇಲೂ ಪ್ರಭುತ್ವವನ್ನು ಸ್ಥಾಪಿಸಿಕೊಳ್ಳುತ್ತದೆ ಮತ್ತು ಅದು ತನ್ನನ್ನು ಅವುಗಳಲ್ಲಿ ಅನಾವರಿಸಿಕೊಳ್ಳುತ್ತದೆ, ತೋರಿಸಿಕೊಳ್ಳುತ್ತದೆ. ಈ ದಿವ್ಯ ಸಂಕಲ್ಪದ ವ್ಯಾಪಾರ ಸಂದರ್ಭದಲ್ಲಿ, ನಾಡೀಯ ಜೈವಿಕತೆಯ ಮೇಲೆ ಒಡೆಯತನವನ್ನು ಸ್ಥಾಪಿಸಿಕೊಂಡು ತನ್ನನ್ನು ತಾನೇ ಬಯಲು ಮಾಡಿಕೊಳ್ಳುವ ಸಂದರ್ಭದಲ್ಲಿ ವಿಶೇಷತಃ ದಧಿಕ್ರಾವನ್ನಗ್ನಿಯೇ ವಾಯುವಿಗಿಂತ ಹೆಚ್ಚಿನ ಸಂಕೇತವಾಗಿದ್ದಾನೆ. ಏಕೆಂದರೆ ಅಗ್ನಿಯು ತಪೋಧಿಪತಿ. ದಿವ್ಯ ಪ್ರಜ್ಞೆಯು ವೈಶ್ವ ಕ್ರಿಯಾಶಕ್ತಿಯಲ್ಲಿ ತನ್ನನ್ನು ರೂಪಿಸಿಕೊಳ್ಳುವುದೇ ತಪಸ್ಸು - ಆ ಕ್ರಿಯೆಯಲ್ಲಿ ಪ್ರಾಣವು ನೀಚ ಸತ್ತೆಯಲ್ಲಿಯ ಒಂದು ಪ್ರತಿನಿಧಿ ಮಾತ್ರ ಆಗಿದೆ. ಆದುದರಿಂದ ವಾಮದೇವನ (IV. 58)ಸೂಕ್ತದಲ್ಲಿ ಅವಮಾನಸ ಪ್ರಜ್ಞೆಯಿಂದ ಪ್ರಜ್ಞಾತ ದೇವತೆಯನ್ನು ವ್ಯಕ್ತಪಡಿಸುವುದನ್ನು ಫಲಪ್ರದಗೊಳಿಸುವವರು ಇಂದ್ರ-ಸೂರ್ಯ-ಅಗ್ನಿಗಳು. ವಾತ ಅಥವಾ ವಾಯುವು ಅರ್ಥಾತ್ ನಾಡೀ ಕಾರ್ಯವು ಮೂಡಿಬರುತ್ತಿರುವ ಮಹಾಮನದ ಮೊದಲನೆಯ ಸ್ಥಿತಿ ಮಾತ್ರ. ಮಾನವನಿಗದು ಮಹಾಜೀವಶಕ್ತಿಯು ಮಹಾಮನದೊಡನೆ ಸೇರುವ ಸಂದರ್ಭ ಮತ್ತು ಈ ಎರಡನೆಯದಾದ ನಾಡೀ ಪ್ರಜ್ಞಾ ವಿಕಾಸಕ್ಕೆ ಮೊದಲನೆಯವನಾದ ವಾಯುವು ಬೆಂಬಲಿಸುವುದು ಮುಖ್ಯ ಲಕ್ಷಣ. ಆದುದರಿಂದ ಮಹಾಮಾನಸಾಧಿಪತಿಯಾದ ಇಂದ್ರ ಮತ್ತು ಮಹಾ ಪ್ರಾಣದೇವನಾದ ವಾಯು (ವಾಯು ಯಾವಾಗಲೂ ಇಂದ್ರಾವಲಂಬಿ) - ಈ ಇಬ್ಬರೂ ಕೂಡಿಕೊಂಡೇ ಕಾರ್ಯಾಸಕ್ತರಾಗುವುದನ್ನು ನಾವು ನೋಡುತ್ತೇವೆ. ವಿಚಾರ, ಪ್ರಣೋದಗಳಾದ ಮರುತ್ತುಗಳು ಇಂದ್ರ-ವಾಯು ಮೂಲರಾಗಿ ಕಂಡರೂ ಋಷಿಗಳಿಗೆ ಅವರು ವಾಯುವಿಗಿಂತ ಹೆಚ್ಚು ಮುಖ್ಯರು. ತಮ್ಮ ಉತ್ಕ್ರಿಯಾ ಕ್ಷೇತ್ರದಲ್ಲಿ ಮರುತ್ತುಗಳು ಅಗ್ನಿ ರುದ್ರನೊಡನೆ ಹೆಚ್ಚಿನ ಸಂಬಂಧವುಳ್ಳವರಾಗಿರುವರಲ್ಲದೆ, ಗಾಳಿದಲಗಳ ಸ್ವಾಭಾವಿಕ ಮುಖಂಡನಾದ ವಾಯುವಿನೊಡನೆ ಅಲ್ಲ.

ವಾಮದೇವನ ಪ್ರಸ್ತುತ (IV.48) ಸೂಕ್ತವೇ ಇಂದ್ರ ವಾಯುಗಳನ್ನು ಸೋಮಪಾನಕ್ಕೆ ಕರೆದ ಮೂರು ಸೂಕ್ತಗಳಲ್ಲಿ ಕೊನೆಯದು. ಅವರಿಬ್ಬರನ್ನೂ ಇನ್ನೊಂದಾದ I.23.3. ರಲ್ಲಿ ಹೇಗೋ ಹಾಗೆ ಇದರಲ್ಲೂ ಶವಸ್ಪತಿಗಳೆಂದು (=ಉಜ್ವಲ ಪ್ರಣೋದೇಶರು) ಒಟ್ಟಿಗೇ ಕರೆಯಲಾಗಿದೆ. ಅವರನ್ನು ಧಿಯಸ್ಪತಿಗಳೆಂದೂ (=ವಿಚಾರಾಧೀಶರು) ಕರೆದದ್ದುಂಟು. ಇಂದ್ರನು ಮನಃಪ್ರಣೋದದ ಅಧಿಪತಿ, ವಾಯುವು ನಾಡೀಯ ಯಾ ಜೈವಿಕ ಪ್ರಣೋದಗಳ ಪ್ರಭು - ಮತ್ತು ಅವರ ಐಕ್ಯವು ವಿಚಾರಕ್ಕೂ ಕ್ರಿಯೆಗೂ ಅಗತ್ಯ. ಒಂದೇ ತೇರಿನಲ್ಲಿ ಬನ್ನಿರಿ ಎಂದು ಅವರನ್ನು ಆಹ್ವಾನಿಸಿದ್ದುಂಟು. ಒಟ್ಟಿಗೇ ದೈವೀಕರಣದ ಕ್ರಿಯಾಶಕ್ತಿಗಳನ್ನು ತರುವ ಆನಂದ ಮದ್ಯವನ್ನು ಕುಡಿಯಿರಿ ಎಂದದ್ದುಂಟು. ವಾಯುವಿಗೆ ಮೊದಲ ಗುಟುಕನ್ನು ಕುಡಿಯುವ ಹಕ್ಕುಂಟಂತೆ. ದಿವ್ಯ ಕಾರ್ಯಕ್ಕೆ ಆ ಕಾರ್ಯದ ಹರ್ಷೋದ್ರೇಕಕ್ಕೆ, (ಅದನ್ನುಂಟು ಮಾಡಲು) ತಕ್ಕ ಶಕ್ತಿಯು ಮೊದಲು ಬರಬೇಕಾದದ್ದು ಬೆಂಬಲಕ್ಕಿರುವ ಜೈವಿಕ ಪ್ರಣೋದಗಳಿಗೆ.

ಮೂರನೆಯ ಸೂಕ್ತದಲ್ಲಿ ಯಜ್ಞಫಲವನ್ನು ಲಕ್ಷಣಿಸಲಾಗಿದೆ. ಅದರಲ್ಲಿ ವಾಯುವೊಬ್ಬನನ್ನೇ ಆಹ್ವಾನಿಸಲಾಗಿದೆ ; ಆದರೂ ಅವನ ಇಂದ್ರ ಸಹಚರತ್ವವನ್ನು ಸ್ಪಷ್ಟವಾಗಿ ಸೂಚಿಸಲಾಗಿದೆ. ಕಣ್ಮನಗಳನ್ನು ತಣಿಸುವಂಥ ಚಂಚದ್ರಥದಲ್ಲಿ ಅವನು ಬರಬೇಕು. ಇನ್ನೊಂದು ಸೂಕ್ತದಲ್ಲಿ ಉಷೆಯೂ ಹಾಗೇ ಬರಬೇಕೆಂದು ಕೇಳಿಕೊಂಡದ್ದಿಲ್ಲಿ ತುಲನೀಯ. ಅವನು ಯಾಕೆ ಬರಬೇಕು? ದೈವೀಕರಿಸುವ ಮದ್ಯವನ್ನು[೧] ಕುಡಿಯಲು. ತೇರು ಕ್ರಿಯಾಶಕ್ತಿಗಳ ಚಲನವನ್ನು ಸಂಕೇತಿಸುತ್ತದೆ. ಅದು ಆಗಲೇ ಬೆಳಗಲಾರಂಭಿಸಿದ ಜೈವಿಕ ಕ್ರಿಯಾಶಕ್ತಿಗಳ ಉಲ್ಲಾಸದ ತಿರುಗಾಟ. ಅವುಗಳನ್ನು ವಾಯುವೆಂದು ಕಲ್ಪಿಸಿ ಅಮಂತ್ರಿಸಲಾಗಿದೆ. ಈ ಹೊಳೆಹೊಳೆವ ಸುಖದಾಯಕ ಚಲನವಲನವನ್ನು ಮೊದಲ ಮೂರು ಪದ್ಯಗಳಲ್ಲಿ ಸೂಚಿಸಲಾಗಿದೆ.

ದೇವನು ಪ್ರತ್ಯಕ್ಷನಾಗಿದ್ದಾನೆ. ಅವನು ಇನ್ನೂ ಪ್ರತ್ಯಕ್ಷವಾಗದ[೨] ಯಾಜ್ಞಿಕ ಕ್ರಿಯಾಶಕ್ತಿಗಳನ್ನು ಪ್ರಜ್ಞಾತ ಕ್ರಿಯೆಯ ಬೆಳಕಿಗೆ ತರಬೇಕಾಗಿದೆ ; ಆ ಕ್ರಿಯಾಶಕ್ತಿಗಳಿನ್ನೂ ಅವಮಾನಸದ ಕತ್ತಲೆಯಲ್ಲಿ ಅಡಗಿವೆ. ಯಾಜ್ಞಿಕ ಅರ್ಥವಿವರಣೆಯ ಪ್ರಕಾರವಾಗಿ ಉಕ್ತ ಪದಸಂಹತಿಯನ್ನು "ಅಭುಕ್ತ ಆಹುತಿಗಳನ್ನು ಉಣ್ಣಿರಿ" ಅಥವಾ ವೀ ಧಾತುವಿನ ಇನ್ನೊಂದರ್ಥದಲ್ಲಿ ಎಂದೂ ಸಮೀಪಿಸಲ್ಪಡದಿರುವ ಯಾಜ್ಞಿಕ ಕ್ರಿಯಾಶಕ್ತಿಗಳತ್ತ ಬನ್ನಿರಿ ಎಂದು ಭಾಷಾಂತರಿಸಬಹುದು ; ಆದರೆ ಈಯೆಲ್ಲಾ ಅನುವಾದಗಳೂ ಸಾಂಕೇತಿಕವಾಗಿ ಒಂದೇ ಮಾನಸಶಾಸ್ತ್ರೀಯ ತಾತ್ಪರ್ಯವನ್ನು ನೀಡುತ್ತವೆ. ಶಕ್ತಿಗಳು ಹಾಗೂ ಚಟುವಟಿಕೆಗಳು ಅವಮಾನಸ ಸಾಗರದಿಂದ ಇನ್ನೂ ಆಮಂತ್ರಿತವಾಗಿಲ್ಲ- ಇಂದ್ರ-ವಾಯುಗಳ ಸಂಯುಕ್ತ ಕಾರ್ಯದಿಂದ ಅವುಗಳನ್ನು ಗುಪ್ತ ಗುಹೆಯಿಂದ ಹೊರತೆಗೆದು ಕಾರ್ಯಪರವನ್ನಾಗಿ ಮಾಡಬೇಕು.

ಏಕೆಂದರೆ, ಅವರನ್ನು ಕರೆದದ್ದು ಸಾಮಾನ್ಯ ನಾಡೀಮನಸ್ಕತೆಯ ಕಾರ್ಯಕ್ಕಾಗಿ ಅಲ್ಲ. ವಾಯುವು ಈ ಕ್ರಿಯಾಶಕ್ತಿಗಳನ್ನು ಹೊಡೆದೆಬ್ಬಿಸಬೇಕಾದದ್ದು "ಸುಖ-ಸಂತೋಷಗಳ ಅನಾವರಣಕಾರನಂತೆ ಆರ್ಯಕಾರ್ಯವನ್ನು ಮಾಡುವವನಂತೆ"- "ವಿಪೋನ ರಾಯೋ ಅರ್ಯಃ". ಈ ಪದಗಳು ಸಾಕಷ್ಟು ಚೆನ್ನಾಗಿ ಉದ್ಬೋಧಗೊಳಿಸಲ್ಪಡಬೇಕಾದ ಕ್ರಿಯಾಶಕ್ತಿಗಳ ಸ್ವರೂಪವನ್ನು

---

೧. "ವಾಯವಾ ಚಂದ್ರೇಣ ರಥೇನ ಯಾಹಿ ಸುತಸ್ಯ ಪೀತ ಯೇ ॥

೨. "ವಿಹಿ ಹೋತ್ರಾ ಅವಿತಾ".

ಸೂಚಿಸುತ್ತವೆ. ಆದರೂ ಉಕ್ತ ಪದಸಂಹತಿಗೆ ಇಂದ್ರನೆಂಬ ಗೂಢಾರ್ಥವಿರಲು ಸಾಧ್ಯವಿದೆ ಮತ್ತು ಹೀಗೆ ಆಮೇಲೆ ಸ್ಪಷ್ಟವಾಗಿ ಹೇಳಿದ್ದನ್ನು ಸೂಚಿಸುತ್ತಿರಬಹುದಾಗಿದೆ. ಅದಾವ ಹೇಳಿಕೆ? ಇನ್ನೂ ಹೆಚ್ಚು ಪ್ರಖರ ಪ್ರಕಾಶದ ದೇವತೆಯ ಪ್ರತಿಭಾತ ಹಾಗೂ ಧ್ಯೇಯೋನ್ಮುಖ ಪ್ರಣೋದದಿಂದ ವಾಯುವಿನ ಕಾರ್ಯವು ನಿಯಂತ್ರಿಸಲ್ಪಡಬೇಕಾಗಿದೆ-ಎಂಬುದೇ ಆಗಿದೆ. ಏಕೆಂದರೆ, ಬ್ರಹ್ಮಾನಂದ ಗುಪ್ತ ಸ್ಥಳಕ್ಕೆ ಒಯ್ಯುವುದು ಇಂದ್ರನ ಪ್ರಬೋಧವೊಂದೇ - ಅದರಿಂದಲೇ ಅದು ಅನಾವೃತವಾಗಬೇಕು. ಮತ್ತು ಆ ಕಾರ್ಯದಲ್ಲಿ ಅವನೇ ಮೊಟ್ಟಮೊದಲಿನ ಕಾರ್ಮಿಕನು. ದೇವರುಗಳಲ್ಲೆಲ್ಲಾ ಇಂದ್ರ, ಅಗ್ನಿ, ಸೂರ್ಯರನ್ನು "ಅರ್ಯ" ಎಂದು ವಿಶೇಷವಾಗಿ ಕರೆಯಲಾಗಿದೆ. ಪರಮಶ್ರೇಯಸ್ಸಿಗೂ ಪರಮಾನಂದಕ್ಕೂ ಸಮರ್ಪಣಾ ಭಾವದಿಂದ ಕೆಲಸ ಮಾಡುವ ಉದಾತ್ತ ಧ್ಯೇಯ ಅವರಿಗಿರುವುದನ್ನೂ ಆ ಕೆಲಸಕ್ಕವರು ಅಣಿಯಾಗುವುದನ್ನೂ ಅರ್ಯಪದದಷ್ಟು ಅಚ್ಚುಕಟ್ಟಾಗಿ ಇನ್ನಾವ ಪದವೂ ಅಭಿವ್ಯಂಜಿಸಲಾರದು - ಆ ಪದವು ಅನನುವಾದನೀಯವಾಗಿದೆ.

ಎರಡನೆಯ ಪದ್ಯದಲ್ಲಿ ಇಂದ್ರನ ಸಲಹೆ-ಸೂಚನೆಗಳ ಅಗತ್ಯವನ್ನು ಸ್ಪಷ್ಟವಾಗಿ ದೃಢಪಡಿಸಲಾಗಿದೆ. ಅವ್ಯಕ್ತವಾದುದೆಲ್ಲವೂ ವ್ಯಕ್ತವಾಗುವುದಕ್ಕೆ ವಿರುದ್ಧವಾದುದೆಲ್ಲವನ್ನೂ ವಿರೋಧಿಸಲು ವಾಯು ಬರಬೇಕು - "ನಿರ್‌ಯುವಾಣೋ ಅಸಸ್ತೀಃ". "ಅಸಸ್ತೀಃ" ಎಂಬ ಪದದ ಅಕ್ಷರಾರ್ಥವು ಅವ್ಯಕ್ತೀಕರಣಗಳು (ವ್ಯಕ್ತೀಕರಣ ವಿರೋಧಗಳು) ಎಂದು. ಮಂತ್ರ ಸಾಧನದಿಂದಲೂ ದೇವತೆಗಳ ಪ್ರಭಾವದಿಂದಲೂ ವ್ಯಕ್ತವಾಗಲು ಸಿದ್ಧವಾಗಬೇಕೆಂದು ಕರೆಯುತ್ತಿರುವಾಗ, ವ್ಯಕ್ತವಾಗಬೇಕೆಂದು ಬೆಳಕೂ ಶಕ್ತಿಯೂ ಕಾಯುತ್ತಿರುವಾಗ ವೃತ್ರನಂಥ ಮುಸುಕಳೆವ ಶಕ್ತಿಗಳು ತಡೆ ಹಿಡಿಯುವುದನ್ನು ಉಕ್ತ ಪದ್ಯವು ವರ್ಣಿಸುತ್ತದೆ. ಪದವೆಂದರೆ ವ್ಯಕ್ತೀಕರಣದ ಕರ್ತ "ಶಸ್ತ್ರಂ, ಗೀಃ, ವಚಸ್". ಆದರದನ್ನು ದಿವ್ಯ ಶಕ್ತಿಗಳು ರಕ್ಷಿಸಬೇಕು ಮತ್ತು ಸತ್‌ಪರಿಣಾಮಕಾರಿಯಾಗುವಂತೆ ಮಾಡಬೇಕು. ವಾಯುವು ಈ ಕೆಲಸವನ್ನು ಮಾಡಬೇಕು ; ಅವನು ಎಲ್ಲ ನಿರಾಕರಣ (ವಿರೋಧನ) ಶಕ್ತಿಗಳನ್ನೂ ಮಲಿನೀಕರಣ ಶಕ್ತಿಗಳನ್ನು ಅವ್ಯಕ್ತೀಕರಣಶಕ್ತಿಗಳನ್ನೂ ನಿವಾರಿಸಬೇಕು. ಇದಕ್ಕಾಗಿ ಅವಳ (ಉಷೆಯ) ಕುದುರೆಗಳನ್ನು ಕಟ್ಟಿದ ಮತ್ತು ಇಂದ್ರನ ಸಾರಥಿತ್ವವನ್ನುಳ್ಳ ರಥವನ್ನೇರಿ ವಾಯುವು ಬರಬೇಕು- "ನಿಯುತ್ವಾನ್ ಇಂದ್ರಸಾರಥಿಃ". ಇಂದ್ರ, ವಾಯು, ಸೂರ್ಯರ ಕುದುರೆಗಳಿಗೆ ತಕ್ಕ ಹೆಸರುಗಳಿವೆ. ಇಂದ್ರನ ಕುದುರೆಗಳು ಹರಿಗಳು ಯಾ ಬಭ್ರುಗಳು (ಕೆಂಪುಚಿನ್ನದ, ಚೆಂಬೊನ್ನಿನ ಅಥವಾ ಹಳದಿಯೊತ್ತಿದ ತೌಡಿನ ಬಣ್ಣದ ಕುದುರೆಗಳು) ; ಸೂರ್ಯನ ಕುದುರೆಗಳು ಹರಿತ್ತುಗಳು (ಸಾಂದ್ರತರ, ಪೂರ್ಣ ಒತ್ತುಹಾಸಿನ ಹೊಳಪುಳ್ಳವುಗಳು) ; ವಾಯುವಿನ ಕುದುರೆಗಳು ನಿಯತ್ತುಗಳು (ನೊಗ ಹೊರಲು ವಿಶಿಷ್ಟ ಸಾಮರ್ಥ್ಯವುಳ್ಳವುಗಳು)- ಏಕೆಂದರೆ, ಕ್ರಿಯಾಶಕ್ತಿಯನ್ನು ಕಾರ್ಯಮಗ್ನಗೊಳಿಸಲೆಂದು ನೊಗಕ್ಕೆ ಹೂಡಲು ಬೇಕಾದ ಉತ್ಕ್ರಿಯ ಚಲನೆಗಳನ್ನವು ಪ್ರತಿನಿಧಿಸುತ್ತವೆ : ಆ ಕುದುರೆಗಳು ವಾಯುವಿನವುಗಳಾದರೂ ಅವನ್ನು ನಡೆಯಿಸುವಾತನು ಇಂದ್ರನೇ. ಇದರ ಅರ್ಥವೇನೆಂದರೆ, ಮನಸ್ಪತಿಯ ಸಲಹೆಯಂತೆಯೇ ನಾಡೀಯ-ಜೈವಿಕ ಪ್ರಜ್ಞಾಪತಿಯ ಚಲನವಲನಗಳು ನಡೆಯಬೇಕು.

ಮೂರನೆಯ ಪದ್ಯವು[೧] ಮೊದಲ ನೋಟಕ್ಕೆ ಯಾವುದೋ ಒಂದು ಅಸಂಬದ್ಧ ಕಲ್ಪನೆಯನ್ನು ಒಳತರುವಂತೆ ತೋರುತ್ತದೆ ; ಅದು ಒಂದು ಕಪ್ಪು ಸ್ವರ್ಗವನ್ನೂ ಕಪ್ಪು ಭೂಮಿಯನ್ನೂ ಹೇಳುತ್ತದೆ.

---

೧. "ಅನುಕೃಷ್ಣೇ ವಸುಧಿತೀ ಯೇಮಾತೇ ವಿಶ್ವಪೇಶಸಾ"

ಅದರ ಪ್ರಕಾರ ಇಂದ್ರ ಸಾರಥಿಯಾದ ವಾಯುವಿನ ಚಲನವಲನಗಳನ್ನು ಆ ಕಾರ್ನಾಡೂ ಕಾರ್‌ಸಗ್ಗವೂ ತಮ್ಮೆಲ್ಲಾ ಆಕೃತಿಗಳೊಂದಿಗೆ ಅನುಸರಿಸಬೇಕು ಅಥವಾ ಅವುಗಳಿಗೆ ವಿಹಿತವಾಗಿ ವರ್ತಿಸಬೇಕು. ಅವು ಕರಿಬಣ್ಣದ ತಮೋವರ್ಣದ, ವಸುಧಿತಿಗಳು=ಆಸ್ತಿಯುಳ್ಳವುಗಳು ಅಥವಾ ದ್ರವ್ಯ ಸಂಪನ್ನವಾದವುಗಳು; ಅವುಗಳ ಹೆಸರುಗಳನ್ನು ಹೇಳಿಲ್ಲ. ಆದರೆ ದ್ವಿವಚನದಲ್ಲಿರುವ "ವಸುಧಿತೀ" ವಸುಶಬ್ದದಿಂದ ನಿಶ್ಚಿತವಾದ ಭೂಮ್ಯರ್ಥದ ಬಲದಿಂದ ಅದರ ಸಹಯೋಗಿಯಾದ ಸ್ವರ್ಗವನ್ನೂ ಹೇಳುತ್ತದೆ ಎಂದು ಊಹಿಸಬಹುದು.[೨] ದ್ಯಾವಾಪೃಥಿವಿಯರಂತೆ ಇವುಗಳಿಲ್ಲಿ ತಂದೆ ತಾಯಂದಿರಲ್ಲ -ಹಾಗಲ್ಲದೆ ಈ ನಾಡು ಸಗ್ಗಗಳು ಸೋದರಿಯರು-"ರೋದಸೀ" ಎಂಬುದು ಭೂಮಿಯ ಹಾಗೂ ಸ್ವರ್ಗದ, ಸ್ತ್ರೀಲಿಂಗರೂಪಗಳು, ಸಾಮಾನ್ಯ ಭೌತಿಕ ಹಾಗೂ ಮಾನಸಿಕ ಪ್ರಜ್ಞೆಗಳ ಕ್ರಿಯಾಶಕ್ತಿಗಳ ಪ್ರತಿನಿಧಿಗಳು. ಈ ಕರಿರೂಪಗಳು ಅವುಗಳ ಇಬ್ಬದಿಗಳ ನಡುವಣ ಕೃಷ್ಣಸ್ಥಿತಿಗಳು - ನಡುವೆ ನಿಂತ ಅಸ್ಪಷ್ಟೀಕೃತ ಪ್ರಜ್ಞೆಗಳು (ಭೂಮಿ-ಸ್ವರ್ಗಗಳ ಗಡಿಗಳು ಒಂದಕ್ಕೊಂದು ತಾಗುವಂತಿರುವ ಗಡಿಗಳ ನಡುವಿನ ಪ್ರಜ್ಞಾಸ್ತರಗಳು). ಅವುಗಳು ನಾಡೀಯ ಉಚಿತ ಉತ್ತ್ರಿಯೆಯಿಂದ ವಾಯುವಿನ ನಿಯಂತ್ರಣದಂತೆ ಯಾ ಅವನ ಚಲನೆಯನ್ನು ಅನುಸರಿಸಿ ತಮ್ಮ ಗುಪ್ತರೂಪಗಳನ್ನು ಪ್ರಕಟಪಡಿಸುವುವು. ಏಕೆಂದರೆ ಎಲ್ಲ ರೂಪಗಳೂ (ಆಕೃತಿಗಳೂ) ಅವುಗಳಲ್ಲಿ ಅಡಗಿವೆ. ಅವುಗಳನ್ನು ಅನಾವರಣ ಮಾಡಲು ಉಕ್ತ ಕೃಷ್ಣೆಯರನ್ನು ಒತ್ತಾಯಿಸಬೇಕು. ಹಿಂದೆ ಹೇಳಿದ ಎರಡು ಪದ್ಯಗಳ ಅರ್ಥವನ್ನೀಪದ್ಯವು ಹೀಗೆ ಪೂರ್ತಿಗೊಳಿಸುತ್ತದೆ. ಯಾವಾಗಲೇ ಆಗಲಿ-ವೇದವನ್ನು ಸರಿಯಾಗಿ ತಿಳಿದುಕೊಂಡರೆ, ಅದರ ಪದ್ಯಗಳು (ಋಕ್ಕುಗಳು) ಗಭೀರ ತಾರ್ಕಿಕ ಸಮನ್ವಯ ಸಹಿತವಾಗಿಯೂ ಅರ್ಥಗರ್ಭಿತ ಅನುಕ್ರಮದಿಂದಲೂ ವಿಚಾರವನ್ನು ಬಿಚ್ಚಿ ನಮ್ಮ ಮುಂದಿಡುತ್ತವೆ ಎಂಬುದು ನಮಗೆ ಗೊತ್ತಾಗುತ್ತದೆ.

ಉಳಿದೆರಡು ಋಕ್ಕುಗಳು ಸ್ವರ್ಗ-ಭೂಮಿಗಳ ಈ ಕಾರ್ಯದ ಪರಿಣಾಮಗಳನ್ನು ಸೂಚಿಸುತ್ತವೆ ; ಸ್ವರ್ಗ-ಭೂಮಿಗಳು ತಮ್ಮ ಗುಪ್ತರೂಪಗಳನ್ನು ಹೊರಗೆಡಹುವ ಕಾರ್ಯದಿಂದಲೂ ತಮ್ಮ ಅವ್ಯಕ್ತ ಕ್ರಿಯಾ ಶಕ್ತಿಗಳ ಪ್ರಕಟನೆಯಿಂದಲೂ ಆನಂದದತ್ತ ವಾಯುವಿನ ರಥದ ಕುದುರೆಗಳು ನಾಗಾಲೋಟದಿಂದ ಧಾವಿಸುತ್ತಿರುವುದನ್ನು ಸೂಚಿಸುತ್ತವೆ. ಮೊಟ್ಟಮೊದಲು ವಾಯುವಿನ ಕುದುರೆಗಳು ತಮ್ಮ ಸ್ವಾಭಾವಿಕ ಸಂಖ್ಯೆಯಲ್ಲಿ ಪೂರ್ಣವಾಗಬೇಕು. "ಮನದಿಂದ[೩] ನೊಗಕ್ಕೆ ಕಟ್ಟಲ್ಪಟ್ಟ ತೊಂಬತ್ತೊಂಬತ್ತು ನಿನ್ನನ್ನು ಹೊತ್ತು ತರಲಿ." ಯಾವಾಗಲೂ ಪುನರುಕ್ತವಾಗುವ ಸಂಖ್ಯೆಯು ತೊಂಬತ್ತೊಂಬತ್ತು. ನೂರಕ್ಕೂ, ಸಾವಿರಕ್ಕೂ ವೇದದಲ್ಲಿ ಸಾಂಕೇತಿಕ ಅರ್ಥವಿದೆ. ಆ ಸಂಕೇತಾರ್ಥವನ್ನು ಸ್ಪಷ್ಟಪಡಿಸುವುದು ಬಹಳ ಕಷ್ಟ. ಯೌಗಿಕ ಸಂಖ್ಯೆಯಾದ ಏಳರ ಗುಣಾಕಾರದಲ್ಲಿ ಬಹುಶಃ ಅದರ ಗುಟ್ಟಿದೆ. ಏಳನ್ನು ಏಳರಿಂದ ಎರಡು ಸಲ ಗುಣಿಸಿ ಅವುಗಳನ್ನು ಒಂದೊಂದನ್ನು ಸೇರಿಸಿ ಹೆಚ್ಚಿಸಿದರೆ ನೂರಾಗುತ್ತದೆ. ೧+೪೯+೪೯+೧=೧೦೦. ವ್ಯಕ್ತ ಮಹಾಪ್ರಕೃತಿಯಲ್ಲಿ ಏಳೆಂಬುದು ಮೂಲಭೂತ ತತ್ವಗಳ ಸಂಖ್ಯೆ. ಪ್ರಪಂಚದಲ್ಲಿ ಲೀಲೆಯಿಂದ ಹರಿದಾಡುವ ದಿವ್ಯ ಪ್ರಜ್ಞೆಗಳ ರೂಪಗಳು ಏಳು. ವಿಂಗಡವಾಗಿ ಮಾಡಿದ ಪ್ರತಿಯೊಂದು, ಜೊತೆಗೆ ಮಿಕ್ಕ ಆರನ್ನು ಕೂಡಿಕೊಂಡಿರುತ್ತದೆ. ಆದ್ದರಿಂದ ಪೂರ್ಣಸಂಖ್ಯೆ ನಲವತ್ತೊಂಬತ್ತು. ಇದಕ್ಕೆ ಸರ್ವಕಾರಣವಾದ ಮೇಲಿನ ಒಂದನ್ನು ಸೇರಿಸಲಾಗುತ್ತದೆ. ಒಟ್ಟು ಐವತ್ತರ ಅಳತೆ ನಮಗೆ

೨. "ದ್ಯಾವಾ ಪೃಥಿವೀ" ಎಂದಂತೆ - ಅನುವಾದಕ

೩. "ವಹಂತು ತ್ವಾ ಮನೋಯುಜೋ ಯುಕ್ತಾಸೋ ನವತಿರ್‌ನವ"

ದೊರಕುತ್ತದೆ. ಇದು ಸಕ್ರಿಯ ಪ್ರಜ್ಞೆಯ ಸಂಪೂರ್ಣ ಪ್ರಸರ. ಆದರೆ ಅದಕ್ಕೆ ಉದ್ಗಮನ-ಅವಗಮನಗಳ ಎರಡು ಶ್ರೇಣಿಗಳಿವೆ. ದೇವತೆಗಳ ಅವಗಮನ ಮತ್ತು ಮಾನವನ ಉದ್ಗಮನ (ಅವತರಣ ಮತ್ತು ಉತ್ತರಣ). ಇದು ನಮಗೆ ತ್ತೊಂಬತ್ತೊಂಬತ್ತನ್ನು ಕೊಡುತ್ತದೆ. ವಿವಿಧವಾಗಿ ಈ ಸಂಖ್ಯೆಯನ್ನು ವೇದದಲ್ಲಿ ಕುದುರೆಗಳಿಗೆ ಅನ್ವಯಿಸಲಾಗಿದೆ ; ಹಾಗೇ ನಗರಗಳಿಗೂ ನದಿಗಳಿಗೂ ಭಿನ್ನವಾದರೂ ಸದೃಶ ಸಾಂಕೇತಿಕತೆಯಿಂದ ಅನ್ವಯ ಮಾಡಲಾಗಿದೆ. ಇದಕ್ಕೆ ಒಂದು ಅಸ್ಪಷ್ಟತಾಸೂಚಕ ಘಟಕವನ್ನು ಸೇರಿಸಿದರೆ (ಈ ಘಟಕದಲ್ಲಿ ಕೆಳಗೆ ಇಳಿವ ಎಲ್ಲವೂ ಮೇಲಿನ ಹೊಳೆವ ಘಟಕಗಳತ್ತ ಏರುವ ಎಲ್ಲವೂ ಅಡಕವಾಗುತ್ತದೆ) ನೂರಾಗುತ್ತದೆ. ಆದುದರಿಂದ ವಾಯುವಿನ ಚಲನದ ಫಲವೆನ್ನಿಸಲಿರುವ ಪ್ರಜ್ಞೆಯ ಜಟಿಲ ಕ್ರಿಯಾಶಕ್ತಿ (ಕ್ರಿಯಾಶಕ್ತಿಗಳ ಜಟಿಲ ಸಂಘಾತ). ಇದು ಮಾನವನಲ್ಲೀಗ ಸುಪ್ತವಾಗಿರುವ, ಅರಳದಿರುವ ಮಾನಸ ಕ್ರಿಯೆಯ ಪೂರ್ಣತಮ ಚಲನೆಯ ಆವಿಷ್ಕಾರ=ಮನಸ್ಸು ನೊಗಕ್ಕೆ ಕಟ್ಟಿದ ೯೯ ಕುದುರೆಗಳು. ಮುಂದಿನ ಪದ್ಯದಲ್ಲಿ ಈ ೯೯ನ್ನು ಪೂರ್ತಿಗೊಳಿಸುವ ಘಟಕವೊಂದನ್ನು ಸೇರಿಸಲಾಗಿದೆ. ನಮ್ಮಲ್ಲೀಗ ೧೦೦ ಕುದುರೆಗಳಿವೆ. ಇದು ಪೂರ್ಣ ಹೊಳೆವ ಮಾನಸಿಕತೆಯ (ಇಡಿ ಮನೋಧರ್ಮದ) ಕಾರ್ಯವಾಗಿರುವುದರಿಂದ ಈಗಲೂ ಇಂದ್ರ, ವಾಯುಗಳನ್ನು ಹೊತ್ತಿದ್ದರೂ ಈ ಕುದುರೆಗಳು ಈಗ ಕೇವಲ ನಿಯತ್ತುಗಳಲ್ಲ- ಹರಿಗಳೂ ಇಂದ್ರನ ಪ್ರೋಜ್ವಲ[೧] ಜಯಮಾಲೆಗಳ ಬಣ್ಣಗಳು - "ಹೇ ವಾಯುವೇ ಇಂದ್ರನ ಶೋಭಾಕರವಾದ ನೂರನ್ನು ನೊಗಕ್ಕೆ ಹೂಡು ; ಅವನ್ನು ಸಂವರ್ಧಿಸಬೇಕಾಗಿದೆ".

ಆದರೆ ಸಂವರ್ಧಿಸುವುದೇಕೆ? ಏಕೆಂದರೆ, ವಿವಿಧವಾಗಿ ಕೂಡಿಕೊಂಡ ಚಲನೆಗಳ ಸಾಧಾರಣ ಪೂರ್ಣತೆಯನ್ನು ನೂರು ಪ್ರತಿನಿಧಿಸುತ್ತದೆ - ಆದರೆ ಅದು ಅದರ ಅತ್ಯಂತ ಜಟಿಲತೆಯನ್ನು ಪ್ರತಿನಿಧಿಸುವುದಿಲ್ಲ. ಪ್ರತಿಯೊಂದು ನೂರನ್ನೂ ಹತ್ತರಿಂದ ಗುಣಿಸಬಹುದು. ಪ್ರತಿಯೊಂದನ್ನೂ ಅದದರ ಜಾತಿಯಲ್ಲೇ ಹೆಚ್ಚಿಸಬಹುದು. ಏಕೆಂದರೆ "ಪೋಷ್ಯಾಣಾಂ" ಎಂಬ ಪದದಿಂದ ಸೂಚಿತವಾದ ಆಧಿಕ್ಯದ (ಹೆಚ್ಚಿಸುವುದರ) ಸ್ವಭಾವ. ಆದುದರಿಂದ, "ಆಮೇಲೆ ಅಧಿಕಗೊಳಿಸಬಹುದಾದ ನೂರರ ಸರ್ವಸಾಧಾರಣ ಪೂರ್ಣತೆಯ ನೂರು ಹತ್ತರ ಜಟಿಲತೆಯೊಡನೆ ಬಾ ಅಥವಾ ನಿನಗೆ ಇಷ್ಟವಾದರೆ ಒಮ್ಮೆಲೇ ಸಾವಿರದೊಡನೆ ಬಾ ಮತ್ತು ನಿನ್ನ ಚಲನೆಯು ತನ್ನ ಸಂಪೂರ್ಣ ಸುಪ್ತ ಕ್ರಿಯಾಶಕ್ತಿಯ[೨] ಮುದ್ದೆ (ರಾಶಿ)ಯಲ್ಲಿ ಬರಲಿ. ಸ್ತೋಮವಾಗಿ ಬರಲಿ. ಅದಾದರೋ ಸಂಪೂರ್ಣ ವೈವಿಧ್ಯಮಯವಾದ ಸರ್ವಪರಿಧಾನ, ಸರ್ವಗೋಲಾವರಣ (ಗೋಲೀಕರಣ)-ಸರ್ವಕ್ರಿಯೋತ್ತೇಜಕ ಮಾನಸಿಕ ಸುಪ್ರಬೋಧನ-ಅದರಲ್ಲಿ ಅದರ ಸತ್ತೆಯ ಪೂರ್ಣತ್ವವಿರುತ್ತದೆ-ಅವನು ಬಯಸುವ ಶಕ್ತಿ, ಆನಂದ, ಜ್ಞಾನ, ಮಾನಸಿಕತೆ (ಮನೋಧರ್ಮ), ಪ್ರಾಣಪ್ರಚೋದ, ಭೌತಿಕ ಚಟುವಟಿಕೆಗಳೆಲ್ಲವೂ ಇರುತ್ತವೆ. ಏಕೆಂದರೆ ಈ ಪೂರ್ಣತೆಯನ್ನು ಸಾಧಿಸಿದ ಮೇಲೆ ಪೂರ್ಣತೆಯನ್ನು ಸಾಧಿಸಿದ ಮನದ ಇಚ್ಛೆಯಂತೆ. ಪೂರ್ಣತೆವೆತ್ತ ಜೀವನದ ಸಮೃದ್ಧವೂ, ಹೇರಳವೂ ಆದ ಚಲನೆಗೆ ಬೇಕಾದ ಸ್ಥಿತಿಗೇರಿಸಲು ಅವಮಾನಸವು ತನ್ನ ಗುಪ್ತ ಸಾಧ್ಯತೆಗಳೆಲ್ಲವನ್ನೂ ಪಕ್ವಗೊಳಿಸಿ ಕೈಯೆತ್ತಿ ಕೊಡುವಂತೆ ಒತ್ತಾಯಿಸಬೇಕಾಗುತ್ತದೆ.

❖ ❖

---

೧. "ವಾಯೋ ಶಸ್ತಂ ಹರೀಣಾಂ ಯುವಸ್ವ ಪೋಷ್ಯಾಣಾಂ" (Bay = ಜಯಮಾಲೆ, ಯಶಸ್ಸು ಅಥವಾ ಸುಗಂಧ ದ್ರವ)

೨. ಉತ ವಾ ತೇ ಸಹಸ್ರಿಣೋ ರಥ ಆ ಯಾತು ಪಾಜಸಾ"

# IX

# ಜೀವಾತ್ಮನ ಶಕ್ತಿಯಾದ ಬೃಹಸ್ಪತಿ

## ಋಗ್ವೇದ IV. 50

ಯಸ್ತಸ್ತಂಭ ಸಹಸಾ ವಿಜ್ಮೋ ಅಂತಾನ್ ಬೃಹಸ್ಪತಿ ಸ್ತ್ರಿಷಧಸ್ಥೋ ರವೇಣ ।
ತಂ ಪ್ರತ್ನಾಸ ಋಷಯೋ ದೀಧ್ಯಾನಾಃ ಪುರೋ ವಿಪ್ರಾದಧಿರೇ ಮಂದ್ರ ಜಿಹ್ವಂ ॥ ೧ ॥

೧. ಸ್ವ ಬಲದಿಂದ ಯಾವನು ಭೂಮಿಯ ತುದಿಗಳನ್ನು ಪ್ರತಿಷ್ಠಾಪಿಸಿದನೋ ಆ ಬೃಹಸ್ಪತಿಯು ನಮ್ಮ ಸಾಧನೆಯ ಲೋಕತ್ರಯದಲ್ಲಿ ಅವನು ಕೊಟ್ಟ ಕರೆಯಿಂದ ತಮ್ಮ ಆದಿ ನಿರ್ಮಲ ಸ್ಥಿತಿಯಲ್ಲಿರುವ ಋಷಿಗಳು ಧ್ಯಾನ ಮಾಡಿದರು ಮತ್ತು ಅದರಿಂದ ಪ್ರಬೋಧಿತರಾಗಿ ಅವನ ಆನಂದೋದ್ರೇಕದ ಜಿಹ್ವೆಯೊಡನೆ ಅವನನ್ನು ತಮ್ಮ ಮುಂದೆ ನಿಲ್ಲಿಸಿಕೊಂಡರು.

ಧುನೇತಯಃ ಸುಪ್ರಕೇತಂ ಮದಂತೋ ಬೃಹಸ್ಪತೇ ಅಭಿಯೇ ನಸ್ತತಸ್ರೇ ।
ಪೃಷಂತಂ ಸುಪ್ರಮದಬ್ಧಮೂರ್ವಂ ಬೃಹಸ್ಪತೇ ರಕ್ಷತಾದಸ್ಯ ಯೋನಿಂ ॥ ೨ ॥

೨. ಓ ಬೃಹಸ್ಪತಿಯೇ, ಸ್ವಚಲನಪ್ರೇರಣೆಯಿಂದ ತರಂಗಿತರಾಗಿ, ಪೂರ್ಣೀಕೃತ ಪ್ರಜ್ಞೆಯಲ್ಲಿ ಸಂತಸಪಡುತ್ತಾ ಅವರು (ಆ ದೇವತೆಗಳು) ನಮಗಾಗಿ ಈ ನಾನು (ಈ ಜೀವಿಯು) ಹುಟ್ಟಿದ ವಿಸ್ತಾರವಾದ, ತ್ವರಿತಗತಿಯ, ಅಜಯ್ಯವಾದ ಹಾಗೂ ಸಮೃದ್ಧವಾದ ಪ್ರಪಂಚವನ್ನು ಹೆಣೆದರು ; ಆ ಪ್ರಪಂಚವನ್ನು ನೀನು, ಹೇ ಬೃಹಸ್ಪತೇ, ಸಲಹು.

ಬೃಹಸ್ಪತೇ ಯಾ ಪರಮಾ ಪರಾವದತ ಆತ ಋತಸ್ಪೃಶೋ ನಿಷೇದುಃ ।
ತುಭ್ಯಂ ಖಾತಾ ಅವತಾ ಅದ್ರಿದುಗ್ಧಾ ಮಧ್ವಃ ಶ್ಚೋತಂತ್ಯಭಿತೋ ವಿರಪ್ ಶಂ ॥ ೩ ॥

೩. ಎಲೈ ಬೃಹಸ್ಪತಿ, ಈ ಪ್ರಪಂಚದಿಂದಾಚೆಗೆ ಸತ್ತೆಯ ಅತ್ಯುನ್ನತ ಪರಮಪದವಿದೆ. ಆ ಪರಮಸತ್ಯವನ್ನು ಮುಟ್ಟಿದವರು ಅಲ್ಲಿ ತಮ್ಮ ಸ್ಥಾನವನ್ನು ಪಡೆಯುತ್ತಾರೆ. ಏಕೆಂದರೆ, ಈ ಗುಡ್ಡದಲ್ಲಿ ಸ್ರವಿಸುತ್ತಿರುವ ಮಧುಕೂಪಗಳನ್ನು ನಿನಗಾಗಿ ಅಗೆಯಲಾಗಿದೆ; ಆದುದರಿಂದ ಆ ಕೂಪಗಳಿಂದ ಮಾಧುರ್ಯವು ಧಾರಾಕಾರವಾಗಿ ಎಲ್ಲ ಕಡೆಗಳಿಂದಲೂ ಹರಿದು ಬರುತ್ತದೆ ಮತ್ತು ಕೋಡಿವರಿದು ಹೋಗುತ್ತಿದೆ.

**ಬೃಹಸ್ಪತಿಃ ಪ್ರಥಮಂ ಜಾಯಮಾನೋ ಮಹೋಜ್ಯೋತಿಷಃ ಪರಮೇ ವ್ಯೋಮನ್ ।**
**ಸಪ್ತಾಸ್ಯಸ್ತುವಿಜಾತೋ ರವೇಣ ವಿ ಸಪ್ತರಶ್ಮಿರಧಮತ್ತಮಾಂಸಿ ॥ ೪ ॥**

೪. ಬೃಹಸ್ಪತಿಯು ಮೊಟ್ಟಮೊದಲು ಸುವಿಸ್ತಾರವಾದ ಬೆಳಕಿನಿಂದ ಸ್ವರ್ಗದ ಅತ್ಯುನ್ನತ ಸ್ಥಳದಲ್ಲಿ ತನ್ನ ಸಪ್ತಮುಖಗಳಿಂದ, ಸಪ್ತಕಿರಣಗಳಿಂದ, ಸಪ್ತಜನ್ಮಗಳಿಂದ ಕೂಡಿ ಜನಿಸಿದನು ಮತ್ತು ತನ್ನ ಘೋಷದಿಂದ ನಮ್ಮನ್ನು ಸುತ್ತುವರಿದಿರುವ ಕತ್ತಲನ್ನು ಸಂಪೂರ್ಣವಾಗಿ ಹೊಡೆದೋಡಿಸುತ್ತಾನೆ.

**ಸ ಸುಷ್ಟುಭಾ ಸ ಋಕ್ವತಾ ಗಣೇನ ವಲಂ ರುರೋಜ ಫಲಿಗಂ ರವೇಣ ।**
**ಬೃಹಸ್ಪತಿರುಸ್ರಿಯಾ ಹವ್ಯಸೂದಃ ಕನಿಕ್ರದ ದ್ವಾವಶತೀ ರುದಾಜತ್ ॥ ೫ ॥**

೫. ದೃಢೀಕರಿಸುವ ಸ್ವಸಖನ ಲಯದಿಂದ ಬೆಳಕು 'ಚೆಲ್ಲುವ ಮಂತ್ರಗಾನಕ್ಕೆ ಸೇರಿದವನು. ಸ್ವಘೋಷದಿಂದ ವಲನನ್ನು ಒಡೆದು ಚೂರು ಚೂರು ಮಾಡಿದನು. ನಮ್ಮ ಆಹುತಿಗಳನ್ನು ತ್ವರಿತಗೊಳಿಸುವ ಸಮುಜ್ವಲ ದೇವತೆಗಳನ್ನು ಬೃಹಸ್ಪತಿಯು ಮೇಲಕ್ಕೆ ಒಯ್ಯುತ್ತಾನೆ. ಹಾಗೆ ಮೇಲೆ ಒಯ್ಯುವಾಗ ಅವನು ಗಟ್ಟಿಯಾಗಿ ಕೂಗುತ್ತಾನೆ ; ಆಗ ಆ ಗೋ ದೇವತೆಗಳು ಅಂಬಾ ಎಂದು ಕೂಗಿ ಉತ್ತರ ಕೊಡುತ್ತವೆ.

**ಏವಾಪಿತ್ರೇ ವಿಶ್ವದೇವಾಯ ವೃಷ್ಣೇ ಯಜ್ಞೈರ್ವಿಧೇಮ ನಮಸಾ ಹವಿರ್ಭಿಃ ।**
**ಬೃಹಸ್ಪತೇ ಸುಪ್ರಜಾ ವೀರವಂತೋ ವಯಂ ಸ್ಯಾಮ ಪತಯೋ ರಯೀಣಾಂ ॥ ೬ ॥**

೬. ಈ ಪ್ರಕಾರವಾಗಿ, ನಾವು ಗೋವ್ರಜ ವೃಷಭನಾದ ಹಾಗೂ ತಂದೆಯಾದ ವಿಶ್ವೇಶ್ವರನಿಗೆ ನಮ್ಮ ಯಜ್ಞಗಳನ್ನೂ ಸಮರ್ಪಣೆಗಳನ್ನೂ ಆಹುತಿಗಳನ್ನೂ ಒಪ್ಪಿಸುತ್ತೇವೆ. ಎಲೈ ಬೃಹಸ್ಪತಿಯೇ ನಾವು ಕ್ರಿಯಾಶಕ್ತಿ ಪೂರ್ಣರೂ ಅಪತ್ಯ ಸಮೃದ್ಧರೂ ಸುಖ-ಸೌಕರ್ಯಗಳ ಒಡೆಯರೂ ಆಗುವಂತಾಗಲಿ.

**ಸ ಇದ್‌ರಾಜಾ ಪ್ರತಿಜನ್ಯಾನಿ ವಿಶ್ವಾಶುಷ್ಮೇಣ ತಸ್ಥಾವಭಿವೀರ್ಯೇಣ ।**
**ಬೃಹಸ್ಪತಿಂ ಯಃ ಸುಭೃತಂ ಬಿಭರ್ತಿ ವಲ್ಗೂಯತಿ ವಂದತೇ ಪೂರ್ವಭಾಜಂ ॥ ೭ ॥**

೭. ತನ್ನ ಕ್ರಿಯಾಶಕ್ತಿಯಿಂದ, ತನ್ನ ವೀರ ಪ್ರಣೋದದಿಂದ ಜಗತ್ತಿನಲ್ಲಿರುವ ತನಗೆದುರಾದ ಎಲ್ಲವನ್ನೂ ಗೆದ್ದುಕೊಂಡ ಮಹಾರಾಜನು (ದಿವ್ಯೇಂದ್ರನು) ಸುರಕ್ಷಿತವಾಗಿ ಬೃಹಸ್ಪತಿಯನ್ನು ಧರಿಸುತ್ತಾನೆ ಮತ್ತು ತನ್ನ ಭೋಗದ ಪ್ರಥಮಫಲಗಳನ್ನು ಅವನಿಗೆ ನಿಜವಾಗಿ ಕೊಡುತ್ತಾನೆ.

**ಸ ಇತ್ ಕ್ಷೇತಿ ಸುಧಿತ ಓಕಸಿ ಸ್ವೇ ತಸ್ಮಾ ಇಳಾ ಪಿನ್ವತೇ ವಿಶ್ವದಾನೀಂ ।**
**ತಸ್ಮೈ ವಿಶಃ ಸ್ವಯಮೇವಾ ನಮಂತೇ ಯಸ್ಮಿನ್ ಬ್ರಹ್ಮಾರಾಜನಿ ಪೂರ್ವಏತಿ॥ ೮ ॥**

೮. ಹೌದು, ತನ್ನ ಯುಕ್ತವಾದ ಮನೆಯಲ್ಲಿ ಅವನು ದೃಢವಾಗಿ ಆಸೀನನಾಗಿದ್ದಾನೆ; ಮತ್ತು ಅವನಿಗಾಗಿ ಇಳೆಯು ಯಾವಾಗಲೂ ಸಮೃದ್ಧಿ ಸಂಪನ್ನೆಯಾಗುತ್ತಾಳೆ. ಎಲ್ಲ ಸೃಷ್ಟ ಪದಾರ್ಥಗಳೂ ಅವನಿಗೆ ತಾವಾಗಿಯೇ ಶರಣು ಹೋಗುವುವು. ಅವನೇ ರಾಜನು. ಜೀವಾತ್ಮ ಶಕ್ತಿಯು ಅವನೆದುರು ಹೋಗುತ್ತದೆ.

**ಅಪ್ರತಿತೋ ಜಯತಿ ಸಂಧ ನಾನಿ ಪ್ರತಿಜನ್ಯಾನ್ಯುತ ಯಾ ಸಜನ್ಯಾ ।**
**ಅವಸ್ಯವೇ ಯೋ ವರಿವಃ ಕೃಣೋತಿ ಬ್ರಹ್ಮಣೇ ರಾಜಾ ತಮವಂತಿ ದೇವಾಃ ॥ ೯ ॥**

೯. ಅವನನ್ನು ಯಾರೂ ಎದುರಿಲಾರರು. ತನಗೆದುರಾದ ಪ್ರಪಂಚದ ಎಲ್ಲ ಸಂಪತ್ತನ್ನೂ ಅವನು ಗೆದ್ದುಕೊಳ್ಳುತ್ತಾನೆ ; ತಾನಿರುವ ಪ್ರಪಂಚದ ಐಶ್ವರ್ಯವನ್ನೂ ವಶಪಡಿಸಿಕೊಳ್ಳುತ್ತಾನೆ. ತಾನು ತನ್ನ ಸಾಕ್ಷಾತ್ಕಾರವನ್ನು ಯಾವ ಮಹಾ ಜೀವಾತ್ಮ ಶಕ್ತಿಯು ಬಯಸುವುದೋ ಅದಕ್ಕೆ ಆ ರಾಜನು ತನ್ನಲ್ಲೇ ದೇವತೆಗಳು ಬಯಸುವಂಥ ಅತಿ ಹೆಚ್ಚಿನ ಒಳತನ್ನು ನಿರ್ಮಿಸಿ ಕೊಡುತ್ತಾನೆ.

**ಇಂದ್ರಶ್ಚ ಸೋಮಂ ಪಿಬತಂ ಬೃಹಸ್ಪತೇ ಅಸ್ಮಿನ್ಯಜ್ಞೇ ಮಂದಸಾನಾ ವೃಷಣ್ವಸೂ ।**
**ಆ ವಾಂ ವಿಶಂತ್ವಿಂದವಃ ಸ್ವಾಭುವೋಽ ಸ್ಮೇರಯಿಂ ಸರ್ವವೀರಂನಿ ಯಚ್ಛತಂ ॥ ೧೦ ॥**

೧೦. ಹೇ ಬೃಹಸ್ಪತೇ, ನೀನೂ ಇಂದ್ರನೂ ಈ ಯಜ್ಞದಲ್ಲಿ ಸಂತೋಷಪಟ್ಟುಕೊಂಡು ಯಥೇಷ್ಟವಾಗಿ, ಚೆಲ್ಲಿ ಚಿಕ್ಕುವಷ್ಟು ಸಾರವಿರುವ ಸೋಮ ಮದ್ಯವನ್ನು (ರಸವನ್ನು) ಕುಡಿಯಿರಿ. ಅದರ ಸಂತೋಷದ ಶಕ್ತಿಗಳು ನಿನ್ನನ್ನು ಪ್ರವೇಶಿಸಲಿ ಮತ್ತು ಪೂರ್ಣ ರೂಪವನ್ನು ಪಡೆಯಲಿ ಮತ್ತು ನಮ್ಮಲ್ಲಿ ಪ್ರತಿಯೊಂದು ಕ್ರಿಯಾಶಕ್ತಿಯಿಂದಲೂ ತುಂಬಿರುವ ಸುಖ ಸೌಲಭ್ಯಗಳನ್ನು ನೀನು ನಿಯಂತ್ರಿಸು.

**ಬೃಹಸ್ಪತ ಇಂದ್ರ ವರ್ಧತಂ ನಃ ಸಚಾ ಸಾ ವಾಂ ಸುಮತಿ ರ್ಭೂತ್ವಸ್ಮೇ ।**
**ಅ ವಿಷ್ಟಂ ಧಿಯೋ ಜಿಗೃತಂ ಪುರಂಧೀರ್ಜಜಸ್ತಮರ್ಯೋರ್ವನು ವನುಷಾ ಮರಾತೀಃ ॥೧೧॥**

೧೧. ಓ ಬೃಹಸ್ಪತಿ, ಓ ಇಂದ್ರ, ನೀವಿಬ್ಬರೂ ಒಂದಾಗಿ ನಮ್ಮಲ್ಲಿ ವರ್ಧಿಸಿರಿ. ನಿಮ್ಮ ಮನಃ ಪರಿಪೂರ್ಣತೆಯು ನಮ್ಮಲ್ಲಿ ಹುಟ್ಟಲಿ; ವಿಚಾರಗಳನ್ನು ಸಾಕಿರಿ ಮತ್ತು ಮನದ ಗುಣಿತ ಸಂಖ್ಯೆಯ ಶಕ್ತಿಗಳನ್ನು ಹೊರದೆಗೆಯಿರಿ. ಎಲ್ಲ ದಾರಿದ್ರ್ಯಗಳನ್ನೂ ನಾಶಮಾಡಿರಿ-ಆರ್ಯನನ್ನು ಗೆಲ್ಲಲು ಬಯಸುವವರು ತರುವಂಥ ದಾರಿದ್ರ್ಯಗಳನ್ನು ನಾಶ ಮಾಡಿರಿ.

❖ ❖

# ವ್ಯಾಖ್ಯಾನ

ವಾಮದೇವ ಋಷಿಯು ಈ ಯೋಗಾನುಭವದ ಸೂಕ್ತವನ್ನು ಬೃಹಸ್ಪತಿ ಬ್ರಹ್ಮಣಸ್ಪತಿ ಬ್ರಹ್ಮ ಎಂಬ ಮೂರು ಹೆಸರುಗಳನ್ನು ಸಂಬೋಧಿಸಿ ಆ ಹೆಸರುಗಳಿಗೆ ಪಾತ್ರನಾದ ದೇವನನ್ನು ಈ ಯೌಗಿಕ ಮಂತ್ರದಿಂದ ಸ್ತುತಿಸುತ್ತಾನೆ. ಆಮೇಲಿನ ಪೌರಾಣಿಕ ದೇವತಾಶಾಸ್ತ್ರದಲ್ಲಿ ಬೃಹಸ್ಪತಿಯೂ ಬ್ರಹ್ಮನೂ ಪ್ರತ್ಯೇಕ - ದೇವತೆಗಳಾಗಿ ಬಹುಕಾಲ ಸಂದಿತು. ಬ್ರಹ್ಮನು ಸೃಷ್ಟಿಕರ್ತನು - ಪೌರಾಣಿಕ ಮಹಾ ಮೂರ್ತಿತ್ರಯದಲ್ಲಿ ಅವನು ಒಬ್ಬನಾದನು. ಬೃಹಸ್ಪತಿಯು ಅಂಥ ಮುಖ್ಯ ದೇವತೆ ಎನ್ನಿಸಲಿಲ್ಲ. ದೇವತೆಗಳಿಗೆ ಅವನು ಆಧ್ಯಾತ್ಮಿಕ ಗುರು, ಅನುಷಂಗಿಕವಾಗಿ ಅವನು ಗುರುಗ್ರಹದ ಅಧಿಷ್ಠಾನ ದೇವತೆ ; ಬ್ರಹ್ಮಣಸ್ಪತಿ. ಇಬ್ಬರನ್ನೂ ಸಂಬಂಧಿಸಿದ ಮಧ್ಯದ ಪದವು ಹೊರಟು ಹೋಯಿತು. ಈ ವೈದಿಕ ದೇವತೆಯ ಮುಖ ಸಾಮುದ್ರಿಕವನ್ನು ಪುನಾರಚಿಸಲು (ಮತ್ತೆ ಕಲ್ಪಿಸಿಕೊಳ್ಳಲು) ಬಿಡಿಸಿದ ಅಂಶಗಳನ್ನು ಕೂಡಿಸಬೇಕು. ಪ್ರತ್ಯೇಕಿಸಲ್ಪಟ್ಟ ಪದಗಳನ್ನು ಮತ್ತೆ ಕೂಡಿಸಬೇಕು-ಮೂಲ ವೈದಿಕ ಕಲ್ಪನೆಗನುಗುಣವಾಗಿ, ಹಾಗೇ ತತ್ಸಬಂಧಿ ಮೌಲ್ಯಗಳನ್ನು ಸರಿಪಡಿಸಬೇಕು.

ವೇದದಲ್ಲಿ "ಬ್ರಹ್ಮನ್" ಶಬ್ದವು ಸಾಮಾನ್ಯವಾಗಿ "ವೈದಿಕ ಪದ" ಅಥವಾ "ಮಂತ್ರ" ಎಂಬ ಅರ್ಥವುಳ್ಳದ್ದು. ಮಂತ್ರವು ಆತ್ಮದ ಅಥವಾ ಸತ್ತೆಯ ಆಳದಿಂದೆದ್ದ ಪ್ರತಿಭೆಯ ಅತ್ಯಂತ ಗಂಭೀರವಾದ ಅಭಿವ್ಯಕ್ತಿಯಾಗಿದೆ. ಜಗತ್ತುಗಳನ್ನು ಸೃಷ್ಟಿಸಿದ್ದು ಲಯದ ಸ್ವರ ಮತ್ತು ಅದು ಯಾವಾಗಲೂ ಹಾಗೆ ಸೃಷ್ಟಿಸುತ್ತಿರುತ್ತದೆ. ಜಗವೆಲ್ಲವೂ ಅಭಿವ್ಯಕ್ತಿ ಅಥವಾ ಆವಿರ್ಭಾವವಾಗಿದೆ-ಶಬ್ದಜ, ದಿವ್ಯ ಶಬ್ದಜ, ಮಂತ್ರಜ. ಪ್ರಜ್ಞಾತ ಸತ್ತಾ ಸ್ವರೂಪಿಯು ತನ್ನ ಹೂರಣವನ್ನು ತನ್ನಲ್ಲೇ ಕಾಂತಿಮಯವಾಗಿ ಸೃಷ್ಟಿಸುತ್ತಾನೆ, ತನ್ನನ್ನೇ ತಾನು ಅಭಿವ್ಯಂಜಿಸುತ್ತಾನೆ - "ಆತ್ಮನ್". ಈ ಆತ್ಮವು ಪರಮಾತ್ಮ, ಅತಿಮಾನಸ ಪ್ರಜ್ಞಾ ಸ್ವರೂಪಿ - ತನ್ನ ಹೂರಣವನ್ನು ತನ್ನಲ್ಲೇ ಅಸ್ಪಷ್ಟತೆಯಲ್ಲಿಟ್ಟುಕೊಂಡಾಗ ಅದು ಅವಮಾನಸ ಪ್ರಜ್ಞಾ ಸ್ಥಿತಿ. ಉನ್ನತ ಮಟ್ಟದ ಸ್ವಯಂಪ್ರಭ ಪ್ರಜ್ಞೆಯು ಈ ಅಸ್ಪಷ್ಟ ಪ್ರಜ್ಞೆಯಲ್ಲಿಳಿಯುತ್ತದೆ. ಈ ಅಸ್ಪಷ್ಟ ರಾಜ್ಯವು ರಾತ್ರಿರಾಜ್ಯ, ಅಂದಂತಮೋ ಗುಪ್ತವಾದ ಅಂಧಂತಮಸ್ಸು, "ತಮಸ್ತಮಸಾ ಗುಳ್ಹಂ"- ಪ್ರಜ್ಞೆಯ ಛಿನ್ನ ಭಿನ್ನತೆಯ ದೆಸೆಯಿಂದ-"ತುಚ್ಛ್ಯೇನಾಭ್ವಪಿಹಿತಂ" ನಿರಾಕಾರ ಸತ್ತೆಯಲ್ಲಿ ಎಲ್ಲವೂ ಅಡಗಿತ್ತು. ಈ ಪ್ರಚ್ಛನ್ನವಾದ ಎಲ್ಲವೂ ದಿವ್ಯ ಮಂತ್ರದ ಮೂಲಕ ಆ ದಿವ್ಯ ರಾತ್ರಿಯಿಂದ ಮತ್ತೆ ಎದ್ದು ಪ್ರಜ್ಞಾತದಲ್ಲಿ ತನ್ನ ವಿಸ್ತಾರವಾದ ಐಕ್ಯವನ್ನು, "ತನ್‌ಮಹಿನಾ ಜಾಯತೈಕಂ" ಪುನಾರಚಿಸುತ್ತದೆ - ಆ ಸ್ವಯಂಪ್ರಭ ಪ್ರಜ್ಞೆ. ಈ ಮಹಾಯಾಮದ, ಬ್ರಹ್ಮಾಂಡ ಭಾಂಡೋದರದ, ವಿಶ್ವರೂಪನಿರ್ಮಾಪಕತೆಯ ಶಕ್ತಿಯುಳ್ಳ, ಸತ್ತಾತ್ಮಕ ಪದಾರ್ಥವೇ ಬ್ರಹ್ಮನ್, ಬ್ರಹ್ಮ, ಪರಬ್ರಹ್ಮನು. ಮಾನವ್ಯ ಅವಮಾನಸ ಪ್ರಜ್ಞೆಯಿಂದ ಹೊರಬರುವುದೇ ಆತ್ಮ ಯಾ ಪರಮಾತ್ಮನು. ಈ ಪರಮಾತ್ಮ ಅಥವಾ ಅಂತರಾತ್ಮನು ಅತಿ ಮಾನಸ ಪ್ರಜ್ಞೆಯತ್ತ ಏರುತ್ತಾನೆ. ಈ ಆತ್ಮದಿಂದ ಹೊರಡುವ ರಚನಾತ್ಮಕ (ಸರ್ಜನಾತ್ಮಕ) ದಿವ್ಯ ಶಕ್ತಿಯನ್ನುಳ್ಳ ಹಾಗೂ ಮೇಲೇರುವ ಶಬ್ದ, ಪದ ಯಾ ಮಂತ್ರವೂ "ಬ್ರಹ್ಮನ್".

ದಿವ್ಯನಾದ ದೇವನೇ ಆತ್ಮದ ಪ್ರಜ್ಞಾತ ದಿವ್ಯ ಶಕ್ತಿಯಾಗಿ ತನ್ನನ್ನು ಅನಾವರಣಗೊಳಿಸಿ-ಕೊಳ್ಳುತ್ತಾನೆ, ಪ್ರಪಂಚಗಳನ್ನು ಸೃಷ್ಟಿಸುತ್ತಾನೆ, ಅವುಗಳನ್ನು ದಿವ್ಯಮಂತ್ರದ ಮೂಲಕ ಅವಮಾನಸ ಪ್ರಜ್ಞಾ ಜಲಗಳಿಂದ ಹೊರ ತೆಗೆದು ನಿರ್ಮಿಸಿಡುತ್ತಾನೆ- "ಅಪ್ರಕೇತಂ ಸಲಿಲಂ ಸರ್ವಂ"-ಅವಪ್ರಜ್ಞಾಸಾಗರವು ಎಂಬುದೇ ಇದೆಲ್ಲಾ ಆಗಿತ್ತು ಎಂದು ಸೃಷ್ಟಿವರ್ಣನೆಯ ಮಹಾಸೂಕ್ತವು (X. 129) ಸರಳವಾಗಿ ಹೇಳಿಬಿಟ್ಟಿದೆ. ದೇವನ ಈ ಶಕ್ತಿಯೇ ಬ್ರಹ್ಮ-ಇದರಲ್ಲಿ ಅಭಿವ್ಯಕ್ತಿಸಾಧನವಾದ ಮಂತ್ರದ ಮೇಲಿರುವುದಕ್ಕಿಂತ ಹೆಚ್ಚಿನ ಅರ್ಥ ಪ್ರಣೋದವು ಪ್ರಜ್ಞಾತ ಆತ್ಮಶಕ್ತಿಯ ಮೇಲಿದೆ. ವಿವಿಧ ವಿಶ್ವ ಸ್ತರಗಳು ಪ್ರಜ್ಞಾತ ಮಾನವ ಪ್ರಾಣಿಯಲ್ಲಿ ಅವತರಿಸುವುದರ ತುತ್ತತುದಿಯು ಅತಿಮಾನಸ ಪ್ರಜ್ಞೆಯ ಅವತಾರದಲ್ಲಿ, ಅಭಿವ್ಯಕ್ತಿಯಲ್ಲಿ, ಆವಿರ್ಭಾವದಲ್ಲಿ. ಈ ಆವಿರ್ಭಾವಿಸುವ ಅತಿಮಾನಸವೇ ಪರಮಸತ್ಯ ಮತ್ತು ಪರಮಾನಂದ ಮತ್ತು ವೇದದ ಯಾ ಅತ್ಯುನ್ನತ ಮಂತ್ರರಾಶಿಯ ಕರ್ತವ್ಯವೇ ಇದಾಗಿದೆ. ಈ ಸರ್ವೋಚ್ಚ ಮಂತ್ರ ಸ್ತೋಮದ ಒಡೆಯನೇ ಬೃಹಸ್ಪತಿಯು - ಈ ಪದದಲ್ಲಿ ಅರ್ಥದ ಒತ್ತಡವು ಬೃಹಸ್ಪತಿ ಎಂಬ ನಾಮಧೇಯದ ಅಂತಃಶಕ್ತಿಯ ಮೇಲಿದೆಯಲ್ಲದೆ ಅದರ ಹಿಂದಿರುವ ಸಾಮಾನ್ಯ ಆತ್ಮಶಕ್ತಿಯ ವಿಚಾರದ ಮೇಲಲ್ಲ. ಬೃಹಸ್ಪತಿಯು ಜ್ಞಾನ ಮಂತ್ರವನ್ನು ಉಪದೇಶಿಸುವನು, ಅಭಿವ್ಯಕ್ತಿಯ ಛಂದೋಲಯವನ್ನು ಹೇಳಿಕೊಡುವನು- ಆ ಮೂಲಕ ಆಗುವುದು ಅತಿಮಾನಸ ಪ್ರಜ್ಞೆಯ ಅಭಿವ್ಯಕ್ತಿ-ಅದರಲ್ಲೂ ದೇವತೆಗಳ-ಅದಕ್ಕೂ ಹೆಚ್ಚಾಗಿ ಇಂದ್ರನ ಅಭಿವ್ಯಕ್ತಿ. ಇಂದ್ರನು ದಿವ್ಯಮಾನಸದೊಡೆಯ - ಅದರಲ್ಲೂ ಆ ದೇವತೆಗಳು ಮಾನವನಲ್ಲಿ ಮಹಾಕಾರ್ಯ ಮುಗಿತಾಯಕ್ಕಾಗಿ ಆರ್ಯಶಕ್ತಿಗಳಾಗಿ ಕೆಲಸ ಮಾಡುವಾಗ. ಈ ಕಲ್ಪನೆಗಳಿಂದ ಹೇಗೆ ವಿಶಾಲತರವೂ ಕಡಿಮೆ ಸೂಕ್ಷ್ಮವೂ ಮತ್ತು ಗಂಭೀರ ಪೌರಾಣಿಕ ಸಾಂಕೇತಿಕತೆಯಲ್ಲಿ ಬ್ರಹ್ಮನು ಸೃಷ್ಟಿಕರ್ತನಾಗಿಯೂ ಬೃಹಸ್ಪತಿಯು ದೇವತೆಗಳ ಗುರುವಾಗಿಯೂ ರೂಪಿತರಾದರು ಎಂಬುದನ್ನು ತಿಳಿದುಕೊಳ್ಳುವುದು ಸುಲಭ. "ಬ್ರಹ್ಮಣಸ್ಪತಿ" ಎಂಬ ಹೆಸರಿನಲ್ಲಿ ಎರಡು ಭಿನ್ನ ಅರ್ಥಪ್ರಣೋದಗಳು ಏಕೀಕೃತವಾಗಿ ಸಾಮರೂಪ್ಯ ಹೊಂದಿದ್ದು ಗೊತ್ತಾಗುತ್ತದೆ. ಒಬ್ಬನೇ ದೇವತೆಯ ಸಾಮಾನ್ಯ ಮತ್ತು ವಿಶೇಷ ಲಕ್ಷಣಗಳನ್ನು ಒಂದುಗೂಡಿಸುವ ಕೆಲಸವನ್ನು ಉಕ್ತ ಹೆಸರು ಮಾಡುತ್ತದೆ.

ಭೂಮಿಯ ಮಿತಿಗಳನ್ನೂ ಲಕ್ಷಣಗಳನ್ನೂ ದೃಢವಾಗಿ ಸ್ಥಾಪಿಸಿದಾತನು ಬೃಹಸ್ಪತಿ - ಅರ್ಥಾತ್ - ಭೌತಿಕ ಪ್ರಜ್ಞೆಯ ಇತಿಮಿತಿಗಳನ್ನು ಸ್ಥಿರಪಡಿಸಿದವನೆಂದರ್ಥ. ನಾನಾಕಾರಗಳ ನಿರ್ಮಾಣವಾದದ್ದು ಅಸ್ಪಷ್ಟವೂ ದ್ರವರೂಪವುಳ್ಳದ್ದೂ ಅನಿರ್ದಿಷ್ಟವೂ ಆದ "ಸಲಿಲ"=ಮಹಾಜಲ ಎಂಬ ಸತ್ತ್ವೆಯಿಂದ; ಈ ಕಲಸು ಮೇಲೋಗರದ ಒಡುವ ರಾಡಿಯಿಂದ ಸಾಕಷ್ಟು ಸ್ಥಿರವಾದ ಎಲ್ಲ ಸೃಷ್ಟಿಯನ್ನೂ ಮಾಡುವುದು ಮೊದಲನೆಯ ಅಗತ್ಯವಾಯಿತು-ಅದನ್ನೇ ಈ ಸೃಷ್ಟಿಗೆ, ಪ್ರಜ್ಞಾತ ಬಾಳ್ವೆಗೆ, ಬುನಾದಿಯನ್ನಾಗಿ ಮಾಡಿಕೊಳ್ಳಬೇಕಾಯಿತು. ಬೃಹಸ್ಪತಿಯು ಅವಮಾನಸ ಪ್ರಜ್ಞೆಯ ಪ್ರತಿರೋಧವನ್ನು ಒಂದು ವಿಧದ ಬಲವಾದ ನಿಯಂತ್ರಣದಿಂದ ಬಗ್ಗಿಸಿ ಹಿಡಿದು-"ಸಹಸಾ"=-ಪ್ರಣೋದದಿಂದ-ಭೌತಿಕ ಮಾನಸ ಪ್ರಜ್ಞೆಯ ರಚನೆಯನ್ನೂ ಅದಕ್ಕೆ ಬೇಕಾದ ಪ್ರಪಂಚವನ್ನೂ ನಿರ್ಮಿಸುವುದನ್ನೂ ಮಾಡಿದನು. ತ್ರಿಪುಟೀ ಸೂತ್ರದ ಮನ, ಪ್ರಾಣ(ಜೀವ), ಶರೀರ ಎಂಬ ಮೂರನ್ನು ಸಂಸ್ಥಾಪಿಸಿ ಬೃಹಸ್ಪತಿಯು ಈ ಮಹಾಸರ್ಗವನ್ನು ಫಲಿಸುವಂತೆ ಮಾಡಿದನು. ವೈಶ್ವತ್ರಿಕ ದುಡಿಮೆ ಹಾಗೂ ಅದರ ಫಲದ ಪ್ರಪಂಚದಲ್ಲಿ ಆತನು ಈ ಮೂರೂ ಜೊತೆಗೇ ಇರುವಂತೆ, ಪರಸ್ಪರ ಭಾಗಿಗಳಾಗಿರುವಂತೆ ಅಥವಾ ಒಂದರಿಂದ ಇನ್ನೊಂದು ವಿಕಸಿಸುವಂತೆ ಮಾಡಿದನು. ಈ ಮೂರೂ ಕೂಡಿ ಅಗ್ನಿಯ ತ್ರಿಗುಣ ಪೀಠಗಳಾದವು ಮತ್ತು ಆತನು ಯಜ್ಞದ ಉದ್ದೇಶವಾದ ಸಿದ್ಧಿಯನ್ನೋ ಪೂರ್ಣತೆಯನ್ನೋ

ಕ್ರಮಕರ್ಮಗತಿಯಲ್ಲಿ ಸಾಧಿಸುತ್ತಾನೆ. ಎಚ್ಚರವಾಗುತ್ತಿರುವ ಮತ್ತು ಯಾವಾಗಲೂ ಹೊಸ ಪ್ರತ್ಯಕ್ಷಾನುಭವಗಳನ್ನೂ ರೂಪನಿರ್ಮಾಪನಗಳನ್ನೂ ಪಡೆಯುತ್ತಾ ಹೋಗುವ ಮಂತ್ರದ ಮೂಲಕ ಅರ್ಥಾತ್ ತನ್ನ ಧ್ವನಿಯಿಂದ, ಕೂಗಿನಿಂದ, ಕರೆಯಿಂದ ಬೃಹಸ್ಪತಿಯು "ರವೇಣ"-ರೂಪನಿರ್ಮಾಣ ಮಾಡುತ್ತಾನೆ. "ಯಾರು ಪ್ರಣೋದದಿಂದ (ಬಲಾತ್ಕಾರದಿಂದ) ಭೂಮಿಯ ತುದಿಗಳನ್ನು ದೃಢವಾಗಿ ನೆಲೆನಿಲ್ಲಿಸಿದನೋ ಆ ಬೃಹಸ್ಪತಿಯು ಹಾಗೆ ಮಾಡಿದ್ದು ಸಿದ್ಧಿಯ (ಪೂರಣದ) ಪೀಠತ್ರಯದಲ್ಲಿ ಕುಳಿತು ತನ್ನ ರವದಿಂದ (ಗರ್ಜನೆಯಿಂದ)".[೧]

ಪ್ರಾಚೀನ ಅಥವಾ ಆದಿಯ ನಿರ್ಮಲ ಸ್ಥಿತಿಯ ಋಷಿಗಳು, ಬೃಹಸ್ಪತಿಯನ್ನು ಧ್ಯಾನಿಸಿದರೆಂದು ಹೇಳಲಾಗಿದೆ. ಅವನ ಧ್ಯಾನದಿಂದ ಅವರು ಮಾನಸದಲ್ಲಿ ಪ್ರತಿಭಾಸ್ಫುರಣವನ್ನು ಪಡೆದರು. ಆ ಪ್ರತಿಭಾ ಪ್ರಬೋಧದಿಂದ ಅವರು ತಮ್ಮೆದುರು ಆನಂದೋದ್ರೇಕದ ನಾಲಗೆಯುಳ್ಳ ದೇವತೆಯನ್ನಾಗಿ ನೆಲೆ ನಿಲ್ಲಿಸಿಕೊಂಡರು ; "ಮಂದ್ರ ಜಿಹ್ವಂ". ಆ ನಾಲಗೆಯಾದರೋ "ಮದ ಮಧು"=ಅಮಲೇರಿಸುವ ಸೋಮರಸದ (ಸೋಮಮದ್ಯದ) ಸುಖವನ್ನು ಭೋಗಿಸುವಂಥದು. ಆ ರಸದಲ್ಲಿ ಮಾಧುರ್ಯ ತರಂಗಗಳೇಳುತ್ತವೆ - "ಮಧುಮಾನ್ ಊರ್ಮಿಃ (IX.110.11) - ಅವು ಪ್ರಜ್ಞಾತ (ಜಾಗರಿತ) ಜೀವನದಲ್ಲಿ ಅಡಗಿರುತ್ತವೆ ಮತ್ತು ಅದರಿಂದ ಕ್ರಮಶಃ ಹೆಚ್ಚು ಹೆಚ್ಚಾಗಿ ಮಾಧುರ್ಯತರಂಗಗಳನ್ನು ನೀಡುತ್ತಾ ಹೋಗುತ್ತವೆ.[೨] ಅದರಲ್ಲಿ ಯಾರ ಬಗ್ಗೆ ಪ್ರಶ್ನೆ ಇದೆ? ಏಳು ದಿವ್ಯ ಋಷಿಗಳು, "ಋಷಯೋ ದಿವ್ಯಾಃ" ತನ್ನ ಪ್ರತಿಯೊಂದು ಏಳು ತತ್ವಗಳಲ್ಲೂ ಪ್ರಜ್ಞಾತೃಪ್ತಿಯನ್ನು ಪಡೆದು, ಅವುಗಳಲ್ಲಿ ಸಮಶ್ರುತಿಯನ್ನುಂಟುಮಾಡಿ, ಒಟ್ಟಿಗೇ ಪ್ರಪಂಚದ ವಿಕಾಸದ ಮೇಲ್ವಿಚಾರಣೆ ಮಾಡಿದ ಸಪ್ತರ್ಷಿ ಸಂಘವೋ? ಅಥವಾ ಮಾನಸೋತ್ತರ ಜ್ಞಾನವನ್ನು ಮೊದಲು ಪಡೆದು ಮನುಷ್ಯರಿಗಾಗಿ ಸತ್ಯ ಪ್ರಜ್ಞೆಯ ಅನಂತತೆಯನ್ನು ಸೂತ್ರೀಕರಿಸಿದ ಮಾನವ್ಯ ಪಿತೃಗಳೋ? ಈಯೆರಡರಲ್ಲಿ ಯಾವುದಾದರೂ ಇಂಗಿತವಾಗಿರಬಹುದು. ಆದರೆ ಅದರನ್ವಯವು ಬಹುಶಃ ಪ್ರಾಚೀನ ಮಾನವ್ಯ ಪಿತೃಗಳು ಪರಸತ್ಯವನ್ನು ಗೆದ್ದುಕೊಂಡದ್ದೇ ಅದರ ವಿಷಯವಾಗಿರಬಹುದೆಂದು ತೋರುತ್ತದೆ. "ದೀಧ್ಯಾನಾಃ" ಎಂಬ ಪದವು ವೇದದಲ್ಲಿ ಹೊಳೆವುದೆಂದೂ ಹೊಳಪು ಪಡೆಯುವುದೆಂದೂ ವಿಚಾರ ಮಾಡುವುದೆಂದೂ ಧ್ಯಾನಿಸುವುದೆಂದೂ ವಿಚಾರವನ್ನು ಸ್ಥಿರಗೊಳಿಸುವುದೆಂದೂ ಅರ್ಥವುಳ್ಳದ್ದಾಗಿದೆ. ಆ ಪದವು ವೇದ ವಿಶಿಷ್ಟವಾದ ಶ್ಲೇಷಾರ್ಥದಲ್ಲಿ ಪದೇ ಪದೇ ಬಳಸಲ್ಪಡುತ್ತದೆ. (ದ್ವಂದ್ವಾರ್ಥದಲ್ಲಿ, ಜಟಿಲಾರ್ಥದಲ್ಲಿ). ಮೊದಲನೆಯ ಅರ್ಥದಲ್ಲಿ ಅದನ್ನು "ವಿಪ್ರಾಃ" ಎಂಬ ಪದದೊಡನೆ ಹೊಂದಿಸಬೇಕು. ವಿಪ್ರರೆಂದರೆ ಪ್ರಬುದ್ಧರು. ಅವರಿಗೆ ಪ್ರಬುದ್ಧತ್ವವು ಬರುವವರೆಗೆ ಅವರು ಕ್ರಮಶಃ ವಿಚಾರದಲ್ಲಿ ಪ್ರಗತಿ ಹೊಂದುತ್ತಾ ಹೋಗಲು ಬೃಹಸ್ಪತಿಯ ಜಯಶೀಲ ಪ್ರಣೋದವು ಕಾರಣ. ಎರಡನೆಯ ಅರ್ಥದಲ್ಲಿ "ದಧಿರೇ" ಎಂಬ ಪದದೊಡನೆ ಹೊಂದಿಸಿದಾಗ ಋಷಿಗಳು ತಮ್ಮ ಪ್ರತಿಭಾನಗಳ ಮೇಲೆ ಚಿಂತನ ಮಾಡಿ ಆ ಚಿಂತನಗಳನ್ನು ವಿಚಾರದಲ್ಲಿ ದೃಢವಾಗಿ ಹಿಡಿದುಕೊಂಡರೆಂಬುದೂ ಪವಿತ್ರವೂ ಪ್ರಬೋಧಕವೂ ಆದ ಮಂತ್ರರೂಪದಲ್ಲಿ ಬೃಹಸ್ಪತಿ ಕೂಗಿದ್ದು ಆತ್ಮದ ಅಂತರಾಳದಿಂದ ಹೊರಬಿದ್ದ ಪ್ರತಿಭಾನಗಳ ಮೇಲೆ ಚಿಂತನ ಮಾಡಿ, ಆ ಚಿಂತನಗಳನ್ನು ವಿಚಾರದಲ್ಲಿ ದೃಢವಾಗಿ

---

೧. "ಯಸ್ ತಸ್ತಂಭ ಸಹಸಾ ವಿ ಜ್ಮೋ ಅಂತಾನ್, ಬೃಹಸ್ಪತಿಸ್ ತ್ರಿಷಧಸ್ಥೋ ರವೇಣ."

೨. "ತಂ ಪ್ರತ್ನಾಸ ಋಷಯೋ ದೀಧ್ಯಾನಾಃ, ಪುರೋ ವಿಪ್ರಾ ದಧಿರೇ ಮಂದ್ರಜಿಹ್ವಂ"

ಹಿಡಿದುಕೊಂಡರೆಂಬುದೂ ಪವಿತ್ರವೂ ಪ್ರಬೋಧಕವೂ ಆದ ಮಂತ್ರರೂಪದಲ್ಲಿ ಬೃಹಸ್ಪತಿ ಕೂಗಿದ್ದು ಆತ್ಮದ ಅಂತರಾಳದಿಂದ ಹೊರಬಿದ್ದ ಪ್ರತಿಭಾನಗಳೊಡನೆ ಕೂಡಿದ್ದುದೂ ಸೂಚಿತವಾಗುತ್ತದೆ ; ಆ ಕೂಡಿಕೆಯಿಂದ ಆ ಋಷಿಗಳು ಮನದಲ್ಲಿ ಪ್ರಬೋಧಿತರಾಗಿ ಅತಿಮಾನಸ ಪ್ರಜ್ಞೆಯ ಪ್ರವಾಹಪ್ರವೇಶಕ್ಕೆ ಪಾತ್ರರಾದರು. ಈ ಪ್ರಕಾರ, ತೆರೆಮರೆಯಲ್ಲಿ, ಸಾಮಾನ್ಯವಾಗಿ ಹಿನ್ನೆಲೆಯೆನ್ನಿಸಿ ಕೆಲಸ ಮಾಡುತ್ತಿದ್ದ ಆತ್ಮ ವಿಚಾರಗಳ ಕೆಲಸಗಳನ್ನು ಪ್ರಜ್ಞಾತ ಜೀವಿಯ ಎದುರು ತರಲು ಶಕ್ತರಾದರು ಮತ್ತು ಅವುಗಳನ್ನು ತಮ್ಮ ಸ್ವಭಾವದ ನೇತೃತ್ವ ಸ್ಥಾನದಲ್ಲಿ ಇಟ್ಟುಕೊಳ್ಳಲು ಸಮರ್ಥರಾದರು. ಅದರ ಫಲವಾಗಿ ಅವರಲ್ಲಿದ್ದ ಬೃಹಸ್ಪತಿಯು ಅವರಿಗಾಗಿ ಅಸ್ತಿತ್ವದ ಸುಖವನ್ನು ಅಮರ್ತ್ಯತೆಯ ಮಧ್ಯವನ್ನು, ಪರಾಕಾಷ್ಠೆಯ ಮಟ್ಟದ ಆನಂದವನ್ನು ಆಸ್ವಾದಿಸಲು ಶಕ್ತನಾದನು. ಭೌತ ಪ್ರಜ್ಞಾರಚನೆಯು ಮೊದಲ ಹೆಜ್ಜೆ ; ಮನದಲ್ಲಿ ಪ್ರಾತಿಭಾತ್ಮವನ್ನು ಮುಂದೆತ್ತಿ ಹಿಡಿದು ಅದು ಆನಂದೋನ್ಮುಖ ವಾಗುವಂತೆ ಮಾಡಿ ಹಾಗೂ ಅದಕ್ಕೆ ನಮ್ಮ ಪ್ರಜ್ಞಾತ ಚಟುವಟಿಕೆಗಳ ನೇತೃತ್ವವನ್ನು ವಹಿಸಿಕೊಡುವುದು ಅಥವಾ ಪೂರ್ಣಸಿದ್ಧಿಗದನ್ನು ಉಪಾಧಿಯನ್ನಾಗಿ ಮಾಡುವುದು ಎರಡನೆಯ ಹೆಜ್ಜೆ.

ಮಾನವನಲ್ಲಿ ಪರಮಸತ್ಯಪ್ರಜ್ಞೆಯನ್ನು ರಚಿತವಾಗುವಂತೆ ಮಾಡುವುದೇ ಇದರ ಪರಿಣಾಮ. ಪ್ರಾಚೀನ ಋಷಿಗಳು ಈ ಚಲನೆಯ ತ್ವರಿತಗತಿಯ ಧ್ವನಿತರಂಗಿತತೆಯನ್ನು ಸಾಧಿಸಿಕೊಂಡರು. ಪೂರ್ಣತಮ, ವೇಗಭರ, ಪ್ರಜ್ಞಾಪಂಕ ಪ್ರವಾಹ ಸ್ವರೂಪದ, ನಮ್ಮ ಸಕ್ರಿಯಾಸ್ತಿತ್ವದ - ಅವಮಾನಸದಲ್ಲಿದ್ದ ಹಾಗೆ ಅಸ್ಪಷ್ಟವಾಗಿಲ್ಲದ-ಪೂರ್ಣೀಕೃತ ಪ್ರಜ್ಞೆಯ ಪೂರ್ಣ ಪ್ರಮೋದ ; "ಅಪ್ರಕೇತವಲ್ಲ" "ಸುಪ್ರಕೇತವಾದ" ಸಿದ್ಧಿ ಅದು. ಅವರನ್ನು ಹೀಗೆ ವರ್ಣಿಸಲಾಗಿದೆ : "ಧುನೇತಯಃ ಸುಪ್ರಕೇತಂ ಮದಂತಃ". "ಋತಂಬೃಹತ್" ಎಂಬುದು ಈ ಪ್ರಜ್ಞಾತ ಜೀವಿಯು ಹುಟ್ಟಿ ಬಂದ ಗರ್ಭ ಅಥವಾ ಜನ್ಮಸ್ಥಲ ; ಅದು ತ್ವರಿತ, ತೇಜೋಮಯ ಮತ್ತು ತೋಷಪೂರ್ಣವಾದ ಅಪರೋಕ್ಷಾನುಭೂತಿ, ಪರಮಸತ್ಯಪ್ರಜ್ಞೆ, ಸಿದ್ಧರಾದ ಋಷಿಗಳು ಈ ಪ್ರಜ್ಞೆಯ ಮೂಲಕ ತಮ್ಮ ಪೂರ್ಣ ತ್ವರಾಮಯ ಚಟುವಟಿಕೆಗಳ ಪ್ರಜ್ಞೆಯನ್ನು ಏಕೀಕರಿಸಿ ಮಾನವ ಮನಸ್ಕತೆಯಲ್ಲಿ ಅದರ ಬೆಳಕು, ಬೆಳ್ದಲಿವುಗಳನ್ನು ಚಿಂತಿಸಿದರು. ಏಕೆಂದರೆ, ಅತಿಮಾನಸದಿಂದಲೇ ಅವಮಾನಸದೊಳಗೆ ನಮ್ಮ ನರಪ್ರಜ್ಞೆ(ನರಾಸ್ತಿತ್ವವು) ಇಳಿಯುವುದು - ಅದರೊಡನೆ ಅದು ಇಲ್ಲಿಗೆ ಮಾನವನಾಗಿ ಹೊರಬೀಳುವ ವ್ಯಕ್ತಿಯನ್ನು (ಜೀವಾತ್ಮವನ್ನು) ತರುತ್ತದೆ- ವೈಯಕ್ತಿಕ ಮಾನವ್ಯ ಜೀವವೇ ಆ ಪ್ರಜ್ಞಾತಾತ್ಮನು. ಪರಸತ್ಯಪ್ರಜ್ಞೆಯ ಸ್ವಭಾವವೇ ಇಂಥದು ; ತನ್ನ ಕೋಟಿವಲಿವ ಕಾರ್ಯದಲ್ಲದು ಹೇರಳ. (PRSANTAM?) ಪೃಷಂತಂ - ಅಥವಾ ತನ್ನ ಸಮಶ್ರುತೀಕೃತ ಗುಣಗಳ ವೈವಿಧ್ಯದಲ್ಲಿ ಬಹುವರ್ಣಯುಕ್ತವಾದದದ್ದು ಎಂದೂ ಅರ್ಥ ಹೇಳಬಹುದು. ತನ್ನ ಚಲನೆಯಲ್ಲದು ವೇಗಿ "ಸೃಪ್ರಂ" ; ಆ ಪ್ರಭಾಮಯ ವೇಗವತ್ತೆಯಲ್ಲಿ ಅದನ್ನು ಬಗ್ಗು ಬಡಿಯಲು ಯಾ ಒಡೆಯಲು ಹೊರಟ ಎಲ್ಲದರ ಮೇಲೆಯೂ ಅದು ತನ್ನ ಜಯಪತಾಕೆಯನ್ನು ಹಾರಿಸುತ್ತದೆ-ಅದು "ಅದಬ್ಧಂ" ; ಎಲ್ಲವುದಕ್ಕೂ ಹೆಚ್ಚಾಗಿ ಅದು ವಿಸ್ತೃತ, ವಿಶಾಲ, ಹಿರಿಯಗಲ, ಹೇರಳ, ಲೆಕ್ಕಾಚಾರಕ್ಕೆ ಮೀರಿದಷ್ಟು ವ್ಯಾಪಕ ಮತ್ತು ಅನಂತ, ಅಪರಿಮಿತ, ಅಸೀಮ, ಅಪಾರ, ಅಪ್ರಮೇಯ- ("ಊರ್ವಂ"). ಈ ಎಲ್ಲ ದೃಷ್ಟಿಗಳಿಂದ ಅದು ಮೊದಲ ಮಿತಚಲನೆಗೆ ತೀರಾ ವಿರುದ್ಧವಾದುದು-ಈ ಮಿತಚಲನೆ ಅವಮಾನಸದ ಅಧಃಪಾತಾಳದಿಂದ ಎದ್ದು ಬಂದದ್ದು ಆ ಅವಮನಃಪ್ರಜ್ಞಾಚಲನೆಯು ಕುಬ್ಜ, ತರಗೆಲೆಬಣ್ಣದ್ದು, ಮಂದ ಮತ್ತು ವಿಘ್ನಶತದಬ್ಧ

ವಿರುದ್ಧ ಶಕ್ತಿಗಳಿಂದ ಬಹು ಸುಲಭವಾಗಿ ಒಡೆಯಲ್ಪಡುವಂಥದು, ಜಯಿಸಲ್ಪಡುವಂಥದು; ಮತ್ತು ವಿರಲ, ಅಲ್ಪ ಅಲ್ಪವ್ಯಾಪಕ.[೧] ಆದರೆ ಈ ಪರಮಸತ್ಯ ಪ್ರಜ್ಞೆಯು ಮಾನವನಲ್ಲವತರಿಸಿ ಪುನಃ ಪ್ರಚ್ಛನ್ನವಾಗಬಹುದಾಗಿದೆ. ಸಿಡಿದೆದ್ದ ವೃತ್ರ-ವಲರಿಂದ (ವಿರೋಧಿ ಶಕ್ತಿಗಳಿಂದ) ನಿರಾಕೃತವಾಗುವ ಶಕ್ಯತೆ ಇರುವುದರಿಂದ. ಆದ್ದರಿಂದ ಋಷಿಯು ಆ ಬೃಹಸ್ಪತಿಯ ಆತ್ಮಶಕ್ತಿಯ ಪೂರ್ಣತೆಯಿಂದ ಪರಮಸತ್ಯ ಪ್ರಜ್ಞಾ ಪ್ರವಾಹವನ್ನು ಮೇಲ್ಬರದಂತೆ ತಡೆಯುವ ಉಕ್ತ ಶಕ್ತಿಗಳಿಂದ ಅದು ಅಸ್ಪಷ್ಟಸ್ವರೂಪ ತಾಳದಂತೆ ರಕ್ಷಿಸೆಂದು ಬೃಹಸ್ಪತಿಯನ್ನು ಪ್ರಾರ್ಥಿಸುತ್ತಾನೆ.

ಅತಿಮಾನಸದ ಅಡಿಗಲ್ಲೇ ಪರಮಸತ್ಯಪ್ರಜ್ಞೆ, ಆ ಪ್ರಜ್ಞೆಯ ಸ್ವರೂಪವೇ ಆನಂದ. ತದಿತರ ಅಸ್ತಿತ್ವವು ಅವತರಿಸಿದ್ದು ಅತಿಮಾನಸ ಪ್ರಜ್ಞೆಯ ಪರಮೋಚ್ಚ ಪ್ರಣೋದ ಸ್ಥಿತಿಯಿಂದಲೆ- "ಪರಮಾ ಪರಾವತ್". ಅದನ್ನು ಉಪನಿಷತ್ತು "ಪರಮ ಪರಾರ್ಧ" ಎನ್ನುತ್ತದೆ-ಅದೇ ಸಚ್ಚಿದಾನಂದಾಸ್ತಿತ್ವವು. ಆ ಅತ್ಯುನ್ನತ ಸತ್ತೆಯ ಸಿದ್ಧಿಗೆಂದೇ ಭೌತ ಪ್ರಜ್ಞೆಯಿಂದ ಎಚ್ಚತ್ತ ("ಅತಃ") ಪ್ರಾಚೀನ ಋಷಿ ಪ್ರಿಯರು ಪರಮ ಸತ್ಯಪ್ರಜ್ಞೆಯೊಡನೆ[೨] ಸಂಪರ್ಕ ಹೊಂದುತ್ತಾರೆ. ಅವರದನ್ನು ತಮ್ಮ ಪೀಠವನ್ನಾಗಿಯೂ ಮನೆಯನ್ನಾಗಿಯೂ ಮಾಡಿಕೊಳ್ಳುತ್ತಾರೆ - "ಕ್ಷಯ, ಓಕಸ್". ಏಕೆಂದರೆ ಭೌತಿಕ ಅಸ್ತಿತ್ವದ ಬೆಟ್ಟದಲ್ಲಿ ಅಗಾಧರಸಮಯ ಬಾವಿಗಳನ್ನು ತೋಡಿ ಆ ಕಾಠಿನ್ಯದೊಳಗಡಗಿದ್ದ ಮಾಧುರ್ಯ ರಸವನ್ನು ಹೊರದೆಗೆಯುತ್ತಾರೆ - ಅದೇ ಆನಂದವು. ಪರಮ ಸತ್ಯ ಸ್ಪರ್ಶದಿಂದ ಜೇನಿನ ನದಿಗಳು, ಅಮೃತತ್ವದ ವೇಗಪತಿತ ಧಾರೆಗಳು ಒಸರುತ್ತವೆ ಮತ್ತು ಜೋರಾಗಿ ಹರಿದು ಒಡೆದದ್ದು ಐಶ್ವರ್ಯದ ನೆರೆಯಾಗಿ ಮಾನವ ಪ್ರಜ್ಞೆಯ ಇಡಿಯನ್ನು ತುಂಬಿಕೊಂಡು ಬಿಡುತ್ತವೆ.[೩]

ಹೀಗೆ ಬೃಹಸ್ಪತಿಯು ಆವಿರ್ಭವಿಸಿ, ದೇವತೆಗಳಲ್ಲಿ ಮೊದಲನೆಯವನಾಗಿ ಜನಿಸಿದನು. ಅವನು ಅವತರಿಸಿದ್ದು ಸತ್ಯ ಪ್ರಜ್ಞೆಯ ವಿಸ್ತಾರದಿಂದ. ಸತ್ಯ ಪ್ರಜ್ಞೆಯು ಅತ್ಯುತ್ತುಂಗ ಸ್ವರ್ಗೀಯ ಜಾಗ - ಆ ಜಾಗವು ಪರಮಶ್ರೇಷ್ಠ ಸರ್ವಮಾನ ಸಾತಿರಿಕ್ತ ಪ್ರಜ್ಞೆ-"ಮಹೋ ಜ್ಯೋತಿಷಃ ಪರಮೇ ವ್ಯೋಮನ್_" ತನ್ನನ್ನವನು ಪೂರ್ಣವಾದ ಏಳುಮಡಿ ಲಕ್ಷಣದ ನಮ್ಮ ಪ್ರಜ್ಞಾತ ಇರವಿನಲ್ಲಿ ಪ್ರತ್ಯಕ್ಷಗೊಳಿಸಿಕೊಳ್ಳುತ್ತಾನೆ. ಅವನು ಹುಟ್ಟಿದ್ದು ಗುಣಿತ ಸಂಖ್ಯೆಯಿಂದ ; ಅವನ ರೂಪಗಳು ಪರಮ ಸತ್ಯದ ಸಪ್ತತತ್ತ್ವಗಳ ಪಾರಸ್ಪರಿಕ ಸಂಪರ್ಕದಿಂದ ಉಂಟಾದಂಥವುಗಳು. ಆ ರೂಪಗಳು ಜಡದಿಂದ ಶುದ್ಧ ಚೇತನೆಯ ವರೆಗೂ ತಾರತಮ್ಯವಾಗಿ ಇವೆ. ಆ ಸಪ್ತ ತತ್ತ್ವಗಳು ದ್ಯುತಿಮತ್ತಾಗಿ ಸಪ್ತಮುಖ ಕಿರಣದಿಂದ ನಮ್ಮ ಪ್ರಜ್ಞೆಯ ಮೇಲ್ಮೈ-ಒಳಮೈಗಳೆಲ್ಲವನ್ನು ಬೆಳಗುತ್ತವೆ, ಗಾಧಾಗಾಧ ಪ್ರಜ್ಞಾಸ್ತರಗಳೆಲ್ಲವುಗಳ ಮೇಲೂ ಬೆಳಕು ಚೀರುತ್ತವೆ. ತನ್ನ ಜಯಘೋಷದಿಂದ ಬೃಹಸ್ಪತಿಯು ಅಮಾನುಷ ರಾತ್ರಿಯ ಶಕ್ತಿಗಳೆಲ್ಲವನ್ನೂ ಹೊಡೆದೋಡಿಸುತ್ತಾನೆ, ಅಪ್ರಜ್ಞಾತ ಪ್ರಜ್ಞೆಯ ಎಲ್ಲ ಅಕ್ರಮಣಗಳನ್ನೂ ಹೊರಗೆ ಅಟ್ಟುತ್ತಾನೆ, ಸಾಧ್ಯವಿರುವ ಅಂಧಕಾರವೆಲ್ಲವನ್ನು ಪರಿಹರಿಸುತ್ತಾನೆ.[೪]

---

೧. ದುಃನೇತಯಃ ಸುಪ್ರಕೇತಂ ಮದಂತೋ ಬೃಹಸ್ಪತೇ ಅಭಿಯೇ ನಸ್ ಪತಸ್ರೇ. ಸೃಷಂತಂಸೃಪಂ ಅದಬ್ಧಂ ಊರ್ವಂ, ಬೃಹಸ್ಪತೇ ರಕ್ಷತಾದ್ ಅಸ್ಯಯೋನಿಂ.

೨. ಬೃಹಸ್ಪತೇ ಯಾ ಪರಮಾ ಪರಾವದ್ ಅತ ಆತ ಋತಸ್ಪೃಶೋ ನಿಷೇದು :

೩. ತುಭ್ಯಂ ಖಾತಾ ಅವತಾ ಅದ್ರಿದುಗ್ಧಾ ಮಧ್ವಃಶ್ಚೋತಂತಿ ಅಭಿತೋ ವಿರಪ್ಶಂ

೪. ಬೃಹಸ್ಪತಿಃ ಪ್ರಥಮಂ ಜಾಯಮಾನೋ ಮಹೋಜ್ಯೋತಿಷಃ ಪರಮೇವ್ಯೋಮನ್ ;ಸಪ್ತಾಸ್ಯಸ್ ತುವಿಜಾತೋ ರವೇಣ ವಿ ಸಪ್ತರಶ್ಮಿಃ, ಅಧಮತ್ ತಮಾಂಸಿ.

ಮಂತ್ರಶಕ್ತಿಗಳಿಂದ ಮತ್ತು ಜೀವ ಪ್ರಣೋದಗಳ ತಾಳಲಯ ಬದ್ಧ ಸೇನೆಯಿಂದ ಬ್ರಹಸ್ಪತಿಯು ಎಲ್ಲವನ್ನೂ ಅಭಿವ್ಯಂಜಿಸುತ್ತಾನೆ, ನಮ್ಮನ್ನು ಸುತ್ತುವರಿದ ಎಲ್ಲ ಕತ್ತಲನ್ನೂ ಓಡಿಸುತ್ತಾನೆ ಮತ್ತು ಆ ಅಮಾನುಷ ರಾತ್ರಿಯನ್ನು ಕೊನೆಗೊಳಿಸುತ್ತಾನೆ. ಇವರೇ ವೇದದ "ಬ್ರಹ್ಮರು" - ಮಂತ್ರ ಸ್ವರೂಪದ ಬ್ರಹ್ಮ ಶಕ್ತಿಯಿಂದ ಕೂಡಿದವರು. ದಿವ್ಯ ಋಕ್ಕಾದ, ಸ್ತುಭ್ರೂಪದ ಯಾ ಸ್ತೋಮದ ಗತಿಯನ್ನು ಯಜ್ಞದಲ್ಲಿ ಸ್ವರ್ಗೋನ್ಮುಖಗೊಳಿಸುವ ಬ್ರಹ್ಮರು. ಅರ್ಕ ಪದದೊಡನೆ ಸಂಪರ್ಕವುಳ್ಳ ಋಕ್ ಪದವು ಪ್ರಬೋಧಕರ ಪ್ರಜ್ಞೆಯಲ್ಲಿ ಸಾಕ್ಷಾತ್ಕಾರ ಶಕ್ತಿಯುಳ್ಳ ಶಬ್ದ ಎಂದು ಗಣಿಸಲಾಗಿದೆ. ಅರ್ಕ=ಬೆಳಕು ಯಾ ಬೆಳಕು ಚೆಲ್ಲುವುದು (ಜ್ಞಾನೋದಯವಾಗುವಂತೆ ಮಾಡುವುದು). ಅದು ಪ್ರಬೋಧಕ ಪ್ರಜ್ಞೆಯಲ್ಲಿ ಸಾಕ್ಷಾತ್ಕಾರ ಸತ್ವ ಸಂಪನ್ನವಾದ ಮಂತ್ರ. 'ಸ್ತುಭ್' ಎಂಬುದು ವಸ್ತುಗಳ ನಿಶ್ಚಿತ ಲಯಗತಿಯನ್ನು ಅನುಮೋದಿಸುವ ಮತ್ತು ಸಮರ್ಥಿಸುವ ಶಕ್ತಿಯುಕ್ತವಾದ ಶಬ್ದ. ವ್ಯಂಜನೀಯ ಅರ್ಥವು ಮೊದಲು ಪ್ರಜ್ಞೆಯಲ್ಲಿ ಸಾಕ್ಷಾತ್ಕೃತವಾಗಿ, ದೃಢಪಟ್ಟು, ಕೊನೆಯಲ್ಲಿ ಶಬ್ದ (ಮಂತ್ರ) ಶಕ್ತಿಯಿಂದ ಪುನಃ ಪ್ರತಿಷ್ಠಿತವಾಗುತ್ತದೆ. ಬ್ರಹ್ಮರು ಯಾ ಬ್ರಾಹ್ಮಣರು ಪ್ರಣೋದ ಸ್ವರೂಪರು ; ಅವರು ಮಂತ್ರಾರ್ಚಕರು, ದಿವ್ಯಲಯ ಸ್ರಷ್ಟಾರರು. ಅವರ ಕರೆಗೋಗೊಟ್ಟೇ ಬೃಹಸ್ಪತಿಯು ವಲನನ್ನು ಒಡೆದು ಚೂರು ಚೂರು ಮಾಡುವುದು.

ವೃತ್ರನು ಶತ್ರುವಾದುದರಿಂದ, ದಸ್ಯುವಾದುದರಿಂದ, ಅವನು ಪ್ರಜ್ಞಾತ ಸತ್ತೆಯ ಸಪ್ತ ಸಿಂಧುಗಳ ಪ್ರವಾಹವನ್ನು ತಡೆಗಟ್ಟುತ್ತಾನೆ. ವೃತ್ರನು ಅಜ್ಞಾತ ಪ್ರಜ್ಞೆಯ ಮೂರ್ತೀಕೃತ ರೂಪ. ಹಾಗೇ ವಲನೂ ಅರಿಯೇ, ದಸ್ಯುವೇ, ಅವನು ತನ್ನ ಗುಹೆಯಲ್ಲಿ, ಜಲದಲ್ಲಿ, ಬೆಳಗಿನ ಸಂಘಾತಗಳನ್ನು ಹಿಡಿದಿಡುತ್ತಾನೆ. ಅವನು ಅವಮಾನಸ ಪ್ರಜ್ಞೆಯ ಮೂರ್ತ ಸ್ವರೂಪ. ವಲನು ಸ್ವತಃ ಕಲಿಯನಲ್ಲ, ಅಪ್ರಜ್ಞಾತನಲ್ಲ - ಅವನು ಅಂಧಕಾರಕ್ಕೆ ಕಾರಣನು. ಅವನ ಸಾರವಿರುವುದು ಬೆಳಕಿನಲ್ಲಿ (ಶುದ್ಧ ಜ್ಞಾನದಲ್ಲಿ, ಶುದ್ಧ ಪ್ರಜ್ಞೆಯಲ್ಲಿ) "ವಲಸ್ಯ ಗೋಮತಃ, ವಲಸ್ಯ ಗೋವಪುಷಃ" - ಆದರೆ ಅವನು ಬೆಳಕನ್ನು ತನ್ನಲ್ಲೇ ಹಿಡಿದಿಟ್ಟುಕೊಳ್ಳುತ್ತಾನೆ-ಹೊರಬಿಡುವುದಿಲ್ಲ-ಆ ಬೆಳಕಿನ ಪ್ರಜ್ಞಾತ ಆವಿರ್ಭಾವವನ್ನು ಅಲ್ಲಗಳೆಯುತ್ತಾನೆ. ಅವನನ್ನು ಕುಟ್ಟಿ ಪುಡಿಪುಡಿ ಮಾಡಬೇಕು. ಅದರಿಂದ ಗುಪ್ತ ಪ್ರಕಾಶಗಳು ಮುಕ್ತಗೊಂಡು ಹೊರಜೀಲುತ್ತವೆ. ದಿವ್ಯೋಷೆಯ ಥಳಥಳಿಸುವ ಗೋ ವ್ರಜಗಳು ಕೆಳಗಿರುವ ಭೌತ ಪರ್ವತದ ಗುಹೆಗಳಿಂದ ಹೊರಟು ಬೃಹಸ್ಪತಿಯ ಬೆಂಗಾವಲಿನಲ್ಲಿ ನಮ್ಮ ಸತ್ತೆಯ ಶಿಖರಗಳತ್ತ (ಅವುಗಳೊಡನೆ ನಾವು, ನಮ್ಮೊಡನೆ ಅವು) ಹತ್ತುವೆವು ಎಂಬ ಮಾತಿನಲ್ಲಿ ಉಕ್ತ ಗುಪ್ತ ಪ್ರಕಾಶಗಳ ಮುಕ್ತಿಯನ್ನು ಯಾ ಪಲಾಯನವನ್ನು ಹೇಳಲಾಗಿದೆ, ವ್ಯಕ್ತಪಡಿಸಲಾಗಿದೆ. ಅವನು ತನ್ನ ಅತಿಮಾನಸ ಯಾ ಅತಿಪ್ರಜ್ಞಾತ ಸ್ವರದಿಂದ ಅವುಗಳನ್ನು ಕರೆಯುತ್ತಾನೆ ; ಅವು ಪ್ರಜ್ಞಾತ ಪ್ರತಿಬೆಯ ಅನುಕ್ರಿಯೆಯ ಮೂಲಕ (ಪ್ರತಿಕ್ರಿಯೆಯಿಂದ), ಅವನನ್ನು ಅನುಸರಿಸಿ ಹೋಗುತ್ತವೆ. ಯಜ್ಞದ ಸಾಮಗ್ರಿಗಳಾದ ಚಟುವಟಿಕೆಗಳಿಗೆ ಪುರೋಗಮನ ಪ್ರೇರಣೆಯನ್ನು ತಮ್ಮ ಹಾದಿಯಲ್ಲಿ ನೀಡುತ್ತಾ ಹೋಗುವುವು (ಮತ್ತು ಆ ಸಾಮಗ್ರಿಗಳೆಂದರೇ ಆಹುತಿಗಳು, ಹವಿರ್ಭಾಗಗಳು ಅವನ್ನು ದೇವತೆಗಳು ಸ್ವೀಕರಿಸುತ್ತಾರೆ)-ಈ ಗತಿಶೀಲ ಔಷೇಯ ಗೋವ್ರಜಗಳೂ ನಾವು ಸೇರುವ ಪರಮೋನ್ನತ ಸತ್ಯ ಶಿಖರವನ್ನೇ ನಮ್ಮೊಡನೆ ಸೇರುತ್ತವೆ.[೧]

---

೧. "ಸಸುಷ್ಟುಭಾ ಸೃಕ್ವತಾಗಣೇನ, ವಲಂರುರೋಜ ಫಲಿಗಂರವೇಣ; ಬೃಹಸ್ಪತಿರ್ ಉಸ್ರಿಯಾ ಹವ್ಯಸೂದಃ ಕನಿಕ್ರದದ್ ವಾವಶತೀರ್ ಉದಾಜತ್."

ಈ ಆತ್ಮಾಭಿವ್ಯಂಜನ ಶೀಲವುಳ್ಳ ಶುದ್ಧಾತ್ಮವು ಬೃಹಸ್ಪತಿ, ಪುರುಷ, ಸರ್ವಜನಕ. ಅದು ವಿಶ್ವವ್ಯಾಪಕ ದೇವತಾತತ್ವ. ಅದು ದನಗಳ ಗುಂಪಿನ ಎತ್ತು. ಅದು ಅವುಗಳ ಯಜಮಾನ, ಒಡೆಯ, ಗರ್ಭಾಧಾನಕಾರಕ. ಅವೆಲ್ಲಾ ಜ್ಯೋತಿರ್ಮಯ ಕ್ರಿಯಾಶಕ್ತಿಗಳು. ಅವುಗಳಲ್ಲಿ ಕೆಲವು ವಿಕಸಿತ, ಕೆಲವು ಅವಿಕಸಿತ (ಒಳತೋಟಿಯಲ್ಲಿ ಸಿಕ್ಕಿದಂಥವುಗಳು), ಜೀವಜಾತದ ಹಗಲಲ್ಲಿ ಯಾ ರಾತ್ರಿಯಲ್ಲಿ ಅಸ್ಪಷ್ಟವಾಗಿ ಕೆಲಸ ಮಾಡುತ್ತಿರುವಂಥವುಗಳು - ಅವೆಲ್ಲಾ ಒಟ್ಟಿಗೆ (ಸತ್ತೆಯಿಂದ ಬಿನ್ನವಾದ)-ಸಂಭವನೀಯ (ಆಗುವಿಕೆಯ) ಜಗತ್‌ಸತ್ತೆ, ಭುವನ, ಪರಿವರ್ತನಶೀಲವಾದ ವಸ್ತು, ಸ್ತೋಮ-ಎನ್ನಿಸುತ್ತವೆ. ಬೃಹಸ್ಪತಿ ಎಂಬ ಹೆಸರಿನ ಪುರುಷನಿಗೆ ಯಜ್ಞ ಕ್ರಮದಿಂದ ನಾವು ನಮ್ಮದೆಲ್ಲವನ್ನೂ ಅರ್ಪಿಸಬೇಕೆನ್ನುತ್ತಾರೆ ಋಷಿಗಳು. ಎಲ್ಲ ಎಂದರೆ ನಮ್ಮ ಬಾಳಲ್ಲಿರುವ ದ್ರವ್ಯಗಳು, ವಸ್ತುಗಳು, ಸಾಮಗ್ರಿಗಳು, ಭೌತಾದಿ ಪದಾರ್ಥಗಳು - ಈ ಎಲ್ಲವನ್ನು ಸರ್ವಾತ್ಮನಿಗಾಗಿ ತ್ಯಾಗ ಮಾಡಿಬಿಡಬೇಕು. ಆಹುತಿ ಹಾಕಬೇಕು, ಅರ್ಚಿಸಬೇಕು ಮತ್ತು ಶರಣು ಶರಣೆಂದು ಸಮರ್ಪಿಸಿಕೊಳ್ಳಬೇಕು. ಇಂಥ ಯಜ್ಞದಿಂದ ಈ ದೇವರ ದಯೆಯಿಂದ ಬಾಳ ಕಾಳಗಕ್ಕೆ ಬೇಕಾದ ಕ್ರಿಯಾಶಕ್ತಿಯು ನಮ್ಮಲ್ಲಿ ತುಂಬಿ-ಬರುತ್ತದೆ. ಅಪತ್ಯ ರೂಪದ ಬಹು ಜೀವಾತ್ಮರು, ಜೀವನಾನುಕೂಲ ವಸ್ತುಗಳು ಮುಂತಾದವು. ದಿವ್ಯ ಪ್ರಬೋಧೋದಯದಿಂದ ಮತ್ತು ಸರಿಯಾದ ಕಾರ್ಯದಿಂದ[1] (ವ್ಯವಹಾರದಿಂದ) ನಮಗೆ ಲಭಿಸುತ್ತವೆ. ತನ್ನಲ್ಲೇ ಇರುವ ಜೀವಾತ್ಮದ ಕ್ರಿಯಾಶಕ್ತಿಯೂ ಒತ್ತಡವನ್ನು ಜಯಿಸದ ಪ್ರಣೋದವೂ ಮಾನವನಲ್ಲಿ ಯಜ್ಞದಿಂದ ಪೂರ್ಣಮಟ್ಟಕ್ಕೆ ಮುಟ್ಟುತ್ತವೆ. ಆಗ ಅವನು ಈ ಪ್ರಜ್ಞಾತ ಮಹಾತ್ಮ ಶಕ್ತಿಯನ್ನು, ಪುರುಷ ಶಕ್ತಿಯನ್ನು, ತನ್ನಲ್ಲೇ ಧರಿಸಿಕೊಂಡು - ಪ್ರಕೃತಿಯಲ್ಲಿ ಮಂತ್ರದ ನೇತೃಕರ್ತೃವಾದ ಶುದ್ಧಾತ್ಮ ಶಕ್ತಿಯನ್ನೂ ದೃಢವಾಗಿ ಹಿಡಿದಿಟ್ಟುಕೊಳ್ಳುತ್ತಾನೆ. ಈ ನಾಯಕ ಕರ್ತೃವಾದರೋ ಆದಿಶುದ್ಧ ಋಷಿಗಳಂತೆಯೇ ವರ್ತಮಾನ ಮಾನವನು ಮಾಡಿದ ಅಂತಃಕ್ರಿಯೆಗಳಿಂದ - ಅವುಗಳ ಸವೇಗ, ಸಹರ್ಷ ಚಲನೆಯಿಂದ, ಬರುತ್ತಾನೆ ಮತ್ತು ಅವನು ಅಂತರಂಗದಲ್ಲಿ ಜೀವನಾಶ್ವದ ನಾಗಾಲೋಟದ ಮತ್ತು ಸಮಶ್ರುತಿ ಬದ್ಧತೆಯನ್ನು ಒಳಗೊಳ್ಳುತ್ತಾನೆ. ಅಲ್ಲದೆ, ಈ ದೇವತಾವಿಶೇಷವನ್ನು ಮಾನವನು ಆರಾಧಿಸಿ ತನ್ನ ಭೋಗಗಳನ್ನೂ ತನ್ನ ವಿಕಾಸದಲ್ಲಿ ತಾ ಕಂಡ ಪರಿಣಾಮಗಳ ಪ್ರಥಮ ಫಲಗಳನ್ನು ಅರ್ಪಿಸುತ್ತಾನೆ. ಆ ಕ್ರಿಯಾಶಕ್ತಿಯಿಂದ ಅವನು ಧುಮುಕಿ ಹುಟ್ಟು-ಜಗತ್ತು-ಪ್ರಜ್ಞಾಸ್ತರಗಳಲ್ಲಿ ಬಂದದ್ದೆಲ್ಲವನ್ನೂ ವಶಪಡಿಸಿಕೊಳ್ಳುವನು. ಅವನರಸನಾಗುತ್ತಾನೆ - ಸಮ್ರಾಟ್-ತನ್ನ ಆವರಣದ, ಪರಿಸರದ, ರಾಜ್ಯಭಾರ ಮಾಡುವ ಯಜಮಾನನಾಗುತ್ತಾನೆ, ಪ್ರಭುವಾಗುತ್ತಾನೆ."[೧,೨]

ಏಕೆಂದರೆ, ಅಂಥ ಜೀವಾತ್ಮವು ತನ್ನ ತಕ್ಕ ಮನೆಯಲ್ಲಿ ದೃಢವ್ಯವಸ್ಥಿತ ಅಸ್ತಿತ್ವವನ್ನು ಪಡೆಯುತ್ತದೆ. ಅದೆಂದರೆ, ಪರಮಸತ್ಯಪ್ರಜ್ಞೆ, ಅನಂತ ಸಾಕಲ್ಯ ಮತ್ತು ಅದಕ್ಕೆ ಅತ್ಯುಚ್ಚ ಮಂತ್ರವಾದ ಇಳೆಯು ಪರಮಸತ್ಯಪ್ರಜ್ಞೆಯ ಪ್ರಮುಖ ಕ್ರಿಯಾಶಕ್ತಿ ಸ್ವರೂಪಿಣಿಯು ಜ್ಞಾನದಲ್ಲಿ ನೇರವಾಗಿ ದರ್ಶನವನ್ನು ಆವಿಷ್ಕರಿಸುವವಳು ಮತ್ತು ಆ ಜ್ಞಾನದಲ್ಲಿ ಆಕೆಯು ಸ್ವಯಮುದ್ ಬುದ್ಧ,

---

೧. "ಸ ಇದ್ರಾಜಾ ಪ್ರತಿಜನ್ಯಾನಿ ವಿಶ್ವಾ-ಸುಷುಮೇಣ ತಸ್ಥಾವಭಿ ವೀರ್ಯೇಣ ; "ಬೃಹಸ್ಪತಿಂ ಯಃ ಸುಭೃತಂ ಬಿಭರ್ತಿ, ವಲ್ಗೂಯತಿ ವಂದತೇ ಪೂರ್ವಭಾಜಂ."

೨. "ಏವಾ ಪಿತ್ರೇ ವಿಶ್ವದೇವಾಯ ವೃಷ್ಣೇ ಯಜ್ಞೈರ್‌ವಿಧೇಮ ನಮಸಾ ಹವಿರ್ಭಿಃ, ಬೃಹಸ್ಪತೇ ಸುಪ್ರಜಾ ವೀರವಂತೋ ವಯಂ ಸ್ಯಾಮ ಪತಯೋ ರಯೀಣಾಂ"

ಕಾರ್ಯಫಲಾನುಭವಸ್ಥ, ವಸ್ತ್ವಂತಃ ಸತ್ಯ ಸ್ವರೂಪಿಣಿಯಾಗಿರುತ್ತಾಳೆ - ಸತತವೂ ಇಳೆಯು ಕಾಯದಲ್ಲಿಯೂ ಸಿರಿಯಲ್ಲಿಯೂ ಬೆಳೆಯುತ್ತಲೇ ಇರುತ್ತಾಳೆ.

ಸತ್ಯಗರ್ಭನಾದ ವಿದೇಹಮುಕ್ತನಿಗೆ ತಾವೇತಾವಾಗಿ ಎಲ್ಲ ಸೃಷ್ಟ ವಸ್ತುಗಳೂ ಮಣಿಯುವುವು - ಅವನ ಅಂತಃಸತ್ಯಕ್ಕೆ ಒಳಪಡುವುವು ; ಏಕೆಂದರೆ, ಅವುಗಳ ಹಾಗೂ ಅವನ ಒಳನನ್ನಿಯೊಂದೇ - ಏಕಮೇವಾದ್ವಿತೀಯ ಸತ್ಯವೊಂದೇ. ಏಕೆಂದರೆ, ಪ್ರಜ್ಞಾತ ಪರಮಾತ್ಮ ಶಕ್ತಿಯು ವೈಶ್ವತ್ರಿಕ ಸ್ರಷ್ಟಾರನೂ ಸಾಕ್ಷಾತ್ಕಾರಿಯೂ ಆಗಿರುವುದರಿಂದ (ಅ ಅಂತಃ ಸತ್ಯ ಸ್ವರೂಪನು) ವಿದೇಹಮುಕ್ತನ ಎಲ್ಲ ಕರ್ಮಗಳನ್ನೂ ಮುನ್ನಡೆಸಿಕೊಂಡು ಹೋಗುತ್ತದೆ. ಈ ಸತ್ಯಗರ್ಭನಿಗೆ ಹಿರಣ್ಯಗರ್ಭ ಅಥವಾ ಕಾರ್ಯಬ್ರಹ್ಮನು ಸಮಾನನಾಗಿ ತೋರುತ್ತಾನೆ.[೧] ಪರಮ ಸತ್ಯ ಪ್ರಜ್ಞೆಯು (ಅಥವಾ ಪರಮಬ್ರಹ್ಮನು) ದಿವ್ಯ ಸತ್ಯದ ಮಾರ್ಗದರ್ಶನ ಮಾಡುತ್ತದೆ-ಅದರಿಂದ ಈ ವಿದೇಹ ಮುಕ್ತನು ಸೃಷ್ಟ ಪದಾರ್ಥಗಳೊಡನೆ ತನ್ನ ಸಂಬಂಧಗಳನ್ನು ಸರಿಪಡಿಸಿಕೊಳ್ಳುತ್ತಾನೆ. ಆದ್ದರಿಂದ ಈ ಸೃಷ್ಟಿಕರ್ತನು ತಾನೇ ತಾನಾಗಿ ಸಂಪೂರ್ಣ ಪ್ರಭುತ್ವವುಳ್ಳವನಾಗಿ, ತನ್ನ ಸೃಷ್ಟಿ ಕಾರ್ಯವನ್ನು ನಡೆಸುತ್ತಾನೆ. ಇದೇ ಆದರ್ಶ ಸ್ಥಿತಿ. ಮಾನವನನ್ನು ಅವನ ಜೀವಾತ್ಮ ಶಕ್ತಿಯು ಒಯ್ದು ಮುಟ್ಟಿಸುವುದು ಇದಕ್ಕೇ. ಇದೇ ಬೃಹಸ್ಪತಿತ್ವ, ಬ್ರಹ್ಮತ್ವಃ, ಆಧ್ಯಾತ್ಮಿಕ ಬೆಳಕೂ ಆಧ್ಯಾತ್ಮಿಕ ಮಾರ್ಗದರ್ಶಕನೂ ಆಗಿರುವ ಭಾವ. ಇದರಿಂದ ಮುಂದೆ ಇಂದ್ರತ್ವವು ಲಭ್ಯ. ಇಂದ್ರನು ಕಾರ್ಯಗಳ ರಾಜದೈವತ. ಅವನು ತನ್ನನ್ನು ತನ್ನ ಪರಿಸರವೆಲ್ಲವನ್ನೂ ಸರಿಯಾಗಿ ಆ ಸಮುದಾಯದ ಸಾಧಾರಣ ಸತ್ಯದ ಪ್ರಕಾರ ನಿಯಂತ್ರಿಸಬೇಕು- "ಬ್ರಹ್ಮ ರಾಜನಿ ಪೂರ್ವ ಏತಿ."[೨]

ಏಕೆಂದರೆ ಈ ಬ್ರಹ್ಮನು, ರಚನಾತ್ಮಕ ಆತ್ಮನು ಆವಿರ್ಭವಿಸಲೂ ವೃದ್ಧಿ ಹೊಂದಲೂ ಬಯಸುತ್ತಾನೆ. ಅದಾದರೂ ಹೇಗೆ? ಮಾವನ ಸ್ವಭಾವದ ರಾಜತ್ವದ ಸ್ವಭಾವದಲ್ಲಿ. ಆ ಬೆಳಕಿನ ರಾಜತ್ವವನ್ನೇರಿದವನು ಸಶಕ್ತನಾಗಿ ತನ್ನಲ್ಲೇ ಬ್ರಹ್ಮನಿಗಾಗಿ ಅತ್ಯುನ್ನತ ಮಾನವ್ಯ ಒಳಿತನ್ನು ನಿರ್ಮಿಸುತ್ತಾನೆ ; ತನ್ನನ್ನೆಲ್ಲರೂ ಮರೆಯದೆ ಮೆಚ್ಚಿಕೊಂಡದ್ದನ್ನು ಕಾಣುತ್ತಾನೆ- ದಿವ್ಯವೂ ವೈಶ್ವತ್ರಿಕ ಆದ ಶಕ್ತಿಯೆಲ್ಲಾ ತನ್ನನ್ನು ಸಾಕಿ ದೊಡ್ಡವನನ್ನಾಗಿ ಮಾಡುವುದನ್ನು ಕಾಣುತ್ತಾನೆ - ಆ ವೈಶ್ವತ್ರಿಕ ಶಕ್ತಿಗಳು ಅತ್ಯುನ್ನತ ಪರಮೋಚ್ಚ ಪೂರ್ಣಸಿದ್ಧಿಗಾಗಿ ಕೆಲಸ ಮಾಡುವಂಥವುಗಳು. ಜೀವಾತ್ಮನ ಎಲ್ಲ ಆಸ್ತಿಯನ್ನೂ ಅವನು ಪಡೆಯುವನು. ಅವು ಅವನ ಆತ್ಮದ ರಾಜತ್ವಕ್ಕೆ ಅಗತ್ಯ ; ಹಾಗೇ ತನ್ನ ಪ್ರಜ್ಞಾಸ್ತರಕ್ಕೆ ಸೇರಿದ ಆಸ್ತಿಯನ್ನೂ ಪಡೆಯುತ್ತಾನೆ ; ಮಿಕ್ಕ ಪ್ರಜ್ಞಾಸ್ತರಗಳ ಆಸ್ತಿಗಳೂ ತಾವಾಗಿಯೇ ಅವನ ವಶವರ್ತಿಗಳಾಗುವುವು. ಅವನ ಜಿಷ್ಣು ಪ್ರಗತಿಯನ್ನು ಯಾವುದೂ ತಡೆಯಲಾರದು.[೩] ಸೃಷ್ಟಿಕರ್ತೃತ್ವದಲ್ಲಿ ಬ್ರಹ್ಮನಾದವನೇ ಸ್ಥಿತಿಕರ್ತೃತ್ವದಲ್ಲಿ ಇಂದ್ರನೆಂಬುದಿಲ್ಲಿ ತಾತ್ಪರ್ಯವು - ಅವನು ಪರಮ ಸತ್ಯ ಪ್ರಜ್ಞಾ ಪ್ರತಿಷ್ಠಿತನು !

---

೧. ಅನುವಾದಕನ ಪ್ರಕಾರ : ಏಕೆಂದರೆ, ತ್ರಿಮೂರ್ತಿಗತ ಬ್ರಹ್ಮ ಒಬ್ಬನಲ್ಲ-ಆ ಬ್ರಹ್ಮನ ಬ್ರಹ್ಮತ್ವಕ್ಕೆ ಅವಧಿಯಿದೆ ಎಂಬುದು ವೇದಾಂಗವಾದ ಜ್ಯೋತಿಃಶಾಸ್ತ್ರದ ಪರಂಪರೆ. ಜೀವಾತ್ಮನು ಬ್ರಹ್ಮನಾದರೆ ಅವನು ಸೃಷ್ಟಿಕರ್ತ. ಸೃಷ್ಟಿಕರ್ತನು ಬ್ರಹ್ಮನೊಬ್ಬನೆ ಅವನ ಆಯುರ್ದಾಯವು ೧೦೮,೦೦,೦೦,೦೦,೦೦೦೦ ಮಾನವ್ಯ ವರ್ಷಗಳು.

೨. ಸ ಇತ್ ಕ್ಷೇತಿ ಸುಧಿತ ಓಕಸಿ ಸ್ವೇ ತಸ್ಮಾ ಇಳಾ ಪಿನ್ವತೇ ವಿಶ್ವದಾನೀಂ ; ತಸ್ಮೈ ವಿಶಃ ಸ್ವಯಮೇವಾನ ಮಂತೇ, ಯಸ್ಮಿನ್ ಬ್ರಹ್ಮಾ ರಾಜನಿ ಪೂರ್ವ ಏತಿ.

೩. ಅಪ್ರತೀತೋ ಜಯತಿ ಸಂ ಧನಾನಿ, ಪ್ರತಿಜನ್ಯಾನಿ ಉತ ಯಾ ಸಜನ್ಯಾ ; ಅವಸ್ಯವೇ ಯೋ ವರಿವಃ ಕೃಣೋತಿ, ಬ್ರಹ್ಮಣೇ ರಾಜಾ ತಂ ಅವಂತಿ ದೇವಾಃ.

ಈ ಪ್ರಕಾರ ಇಂದ್ರನೂ ಬೃಹಸ್ಪತಿಯೂ ಇಬ್ಬರು ದಿವ್ಯಶಕ್ತಿಗಳು. ನಮ್ಮಲ್ಲಿ ಅವರ ಪೂರ್ಣತೆಯೂ, ಪ್ರಜ್ಞಾತ ಪರಮಸತ್ಯದ ಒಡೆಯತನವೂ, ಇರುವುದು ನಮ್ಮ ಪೂರ್ಣತೆಗೆ ಉಪಾಧಿ, ಶರ್ತ, ಅನಿವಾರ್ಯ ಕಾರಣ, ಅಪರಿಹಾರ್ಯ ಸಾಧನೆ, ಅತಿರಸ್ಕಾರ್ಯ ಪೂರ್ವಸಿದ್ಧತೆ. ಈ ಮಹಾಯಾಗದಲ್ಲಿ ಅಮರ್ತ್ಯ ಆನಂದಮದ್ಯವನ್ನು ಕುಡಿಯಿರಿ ಎಂದು ವಾಮದೇವನು ಅವರನ್ನು ಆಮಂತ್ರಿಸುತ್ತಾನೆ. ಇಲ್ಲಿ ಬಂದು ಆನಂದೋದ್ರೇಕದಲ್ಲಿ - ಅದರ ಮದೋನ್ಮತ್ತತೆಯಲ್ಲಿ - ಸಂತೋಷದಿಂದ ಹೊರಳಾಡಿರಿ, ಕುಣಿಯಿರಿ - ಎಂದು ಆಹ್ವಾನಿಸುತ್ತಾನೆ-ಹಾಗೇ ಆತ್ಮದ ಸಾರವನ್ನೂ ಸಿರಿಯನ್ನೂ ಬೇಕಾದಷ್ಟು ಹೊರಹರಿಸಿರಿ ಎಂದೂ ಕರೆಕೊಡುತ್ತಾನೆ. ಆ ಬಹಿರ್ಧಾರಾಪಾತಗಳು ಅತಿಮಾನಸ ಪ್ರಜ್ಞೆಯ ಬ್ರಹ್ಮಾನಂದ-ಅದು ಆತ್ಮಪ್ರಣೋದವನ್ನು ಹೊಗಬೇಕು ಮತ್ತು ಅಲ್ಲಿ ಸತ್ತೆಯನ್ನು ಪೂರ್ಣತೆಯಲ್ಲಿ ಸ್ವೀಕರಿಸಬೇಕು : ಹೀಗೆ ಒಂದು ಸುಖ ಸೌಕರ್ಯವು ರೂಪಿಸಲ್ಪಡುತ್ತದೆ, ಒಂದು ನಿಯಂತ್ರಿತ ಸಾಮಶ್ರುತ್ಯವು ನಿರ್ಮಿತವಾಗುತ್ತದೆ-ತನ್ನ ಹಾಗೂ ತನ್ನ ಜಗತ್ತಿನ ಒಡೆಯನದ ಪೂರ್ಣತೆವೆತ್ತ ಸ್ವಭಾವದ ಶಕ್ಯತೆಗಳನ್ನೂ ಎಲ್ಲ ಕ್ರಿಯಾಶಕ್ತಿಗಳನ್ನೂ ಆ ಸಾಮಶ್ರುತ್ಯವು ಒಳಗೊಳ್ಳುತ್ತದೆ.[೧]

ಆದ್ದರಿಂದ ಬೃಹಸ್ಪತಿಯೂ ಇಂದ್ರನೂ ನಮ್ಮಲ್ಲಿ ವರ್ಧಿಸಲಿ. ಆಗ ಅವರು ನಿರ್ಮಿಸಿದ ಆ ಸರಿಯಾದ ಮನಃಸ್ಥಿತಿಯು ಆವಿರ್ಭವಿಸುತ್ತದೆ. ಏಕೆಂದರೆ, ಅದೇ ಕೊನೆಯ ಕರ್ತವ್ಯೋಪಾದಿಯು. ಅವರು ವರ್ಧಮಾನ ಆಲೋಚನೆಗಳನ್ನು ಸಂವರ್ಧಿಸಲಿ, ಮಾನಸಾಸ್ತಿತ್ವದ ಕ್ರಿಯಾಶಕ್ತಿಗಳನ್ನು ಅಭಿವ್ಯಂಜಿಸಲಿ- ಯಾವ ಸಮೃದ್ಧವೂ ಗುಣಿತಸಂಖ್ಯಾತವೂ ಆದ ವಿಚಾರದಿಂದ ತದಸ್ತಿತ್ವವು ಬೆಳಗಲು ಬಲ್ಲವುಗಳಾಗುವುವೋ ಪರಮಸತ್ಯ ಪ್ರಜ್ಞೆಯನ್ನು ವೇಗವಾಗಿ ಹೊಳೆಯಿಸಬಲ್ಲವು-ಗಳಾಗುವುವೋ ಅಂಥ ಕ್ರಿಯಾಶಕ್ತಿಗಳನ್ನೇ ಅವರು ಅಭಿವ್ಯಂಜಿಸಲಿ.

ಆರ್ಯ ಯೋಧನನ್ನು ಎದುರಿಸುವ ಶಕ್ತಿಗಳು ಅವನಲ್ಲಿ ಮಾನಸಿಕ ಹಾಗೂ ಭಾವನಾತ್ಮಕ ದಾರಿದ್ರ್ಯವನ್ನೂ ಎಲ್ಲಾ ಬಗೆಯ ಸುಖ ಸೌಕರ್ಯಗಳ ಅಭಾವವನ್ನೂ ನಿರ್ಮಿಸುವುದರಿಂದ ಅವೆಲ್ಲವನ್ನೂ ಪರಮಾತ್ಮ ಪ್ರಣೋದವೂ ಮಾನಸಿಕ ಪ್ರಣೋದವೂ ಒಟ್ಟಾಗಿ ಬೆಳೆದು ನಾಶ ಮಾಡುತ್ತವೆ. - ಆ ದಾರಿದ್ರ್ಯ ಹಾಗೂ ಕೊರತೆಗಳನ್ನು ನಿವಾರಿಸುತ್ತವೆ. ಒಟ್ಟಾಗಿ ಅವು ಮಾನವನನ್ನು ಅವನ ಕಿರೀಟ ಪಾತ್ರತ್ವಕ್ಕೂ ಅವನ ಪರಿಪೂರ್ಣ ರಾಜತ್ವಕ್ಕೂ ತಂದು ಮುಟ್ಟಿಸುತ್ತವೆ.[೨]



---

೧. ಇಂದ್ರಶ್ಚ ಸೋಮಂ ಪಿಬತಂ ಬೃಹಸ್ಪತೇ, ಅಸ್ಮಿನ್ ಯಜ್ಞೇ ಮಂದಸಾನಾ ವೃಷಣ್ ವಸೂ ; ಆವಾಂ ವಿಶಂತು ಇಂದವಃ ಸ್ವಾಭುವೋ ಸ್ಮೇ ರಯಿಂ ಸರ್ವವೀರಂ ನಿಯಚ್ಛತಂ.

೨. ಬೃಹಸ್ಪತೇ ಇಂದ್ರವರ್ಧತಂ ನಃ ಸಚಾ ಸಾವಾಂ ಸುಮತಿರ್ ಭೂತು ಅಸ್ಮೇ ; ಅವಿಷ್ಟಂ ಧಿಯೋ ಜಿಗೃತಂ ಪುರಂಧಿರ್ ಜಜಸ್ತಂ ಅರ್ಯೋವನುಷಾಂ ಅರಾತಿಃ

# X

# ಆನಂದೇಶ್ವರರಾದ ಅಶ್ವಿನೀ ದೇವತೆಗಳು

## ಋಗ್ವೇದ IV. 45

**ಏಷಸ್ಯ ಭಾನುರುದಿಯರ್ತಿ ಯುಜ್ಯತೇ ರಥಃ ಪರಿಜ್ಮಾ ದಿವೋ ಅಸ್ಯ ಸಾನವಿ ।**
**ಪೃಕ್ಷಾಸೋ ಅಸ್ಮಿನ್ಮಿಥುನಾ ಅಧಿ ತ್ರಯೋ ದೃತಿಸ್ತುರೀಯೋ ಮಧುನೋ ವಿರಪ್ ಶತೇ ॥ ೧ ॥**

೧. ಎಲೋ, ಆ ಹೆಬ್ಬೆಳಕು ಮೇಲೇರುತ್ತಿದೆ ಮತ್ತು ಈ ಸ್ವರ್ಗದ ಎತ್ತರದ ಮಟ್ಟದಲ್ಲಿ ಸರ್ವವ್ಯಾಪಕವಾದ ರಥವನ್ನು ನೊಗಕ್ಕೆ ಹೂಡಲಾಗುತ್ತಿದೆ ; ತಮ್ಮ ಮುಮ್ಮಡಿ ಜೊತೆಗಳಲ್ಲಿ ತೃಪ್ತಿಕರ ತೋಷಕಗಳನ್ನಿಡಲಾಗಿದೆ ಮತ್ತು ನಾಲ್ಕನೆಯದಾದ ಜೇಂದುಂಬಿದ ಚರ್ಮದ ಚೀಲವು ಹೊರ ಹರಿಯುತ್ತಿದೆ.

**ಉದ್ವಾಂ ಪೃಕ್ಷಾಸೋ ಮಧುಮಂತ ಈರತೇ ರಥಾ ಅಶ್ವಾಸ ಉಷಸೋ ವ್ಯುಷ್ಟಿಷು ।**
**ಅಪೋರ್ಣುವಂತಸ್ತಮ ಆ ಪರೀವೃತಂ ಸ್ವರ್ಣ ಶುಕ್ರಂ ತನ್ವಂತ ಆ ರಜಃ ॥ ೨ ॥**

೨. ಜೇನು ತುಂಬಿಕೊಂಡು ಸಂತೋಷವು ಮೇಲೇರುತ್ತದೆ ಉಷೆಯ ಪ್ರಭಾಯಾಮದಲ್ಲಿ ಕುದುರೆಗಳೂ ತೇರುಗಳೂ ಮೇಲೇರುತ್ತವೆ ಮತ್ತು ಸುತ್ತಲೂ ಸುತ್ತಿರುವ ಕತ್ತಲೆಯ ಬುರುಕಿಯ ಬದಿಯಲ್ಲಿ ಅವು ತಿರುಗುತ್ತವೆ ಹಾಗೂ ಕೆಳಜಗವನ್ನು ವಿಸ್ತರಿಸಿ ಜ್ಯೋತಿರ್ಮಯ ಸ್ವರ್ಗದಂತೆ ಮಾಡುತ್ತವೆ.

**ಮಧ್ವಃ ಪಿಬತಂ ಮಧುಪೇಭಿರಾಸಭಿರುತ ಪ್ರಿಯಂ ಮಧುನೇ ಯುಂಜಾಥಾಂ ರಥಂ ।**
**ಆ ವರ್ತನಿಂ ಮಧುನಾ ಜಿನ್ವಥ ಸ್ಪಥೋ ದೃತಿಂ ವಹೇಥೇ ಮಧುಮಂತಮಶ್ವಿನಾ ॥ ೩ ॥**

೩. ನಿಮ್ಮ ಜೇಂಗುಡಿಕ ಬಾಯಿಂದ ಜೇನನ್ನು ಕುಡಿಯಿರಿ. ಜೇನುತುಪ್ಪಕ್ಕಾಗಿ ನೀವು ನಿಮ್ಮ ಪ್ರಿಯತಮ ರಥಕ್ಕೆ ನೊಗ ಕಟ್ಟಿರಿ. ಜೇನಿನಿಂದ ಚಲನೆಗಳ ಹಾಗೂ ರಥ ಪಥಗಳ ಯಾತ್ರಿಕರನ್ನು ಸಂತೋಷಪಡಿಸಿರಿ. ನೀವು ಧರಿಸಿರುವ (ಹೊತ್ತಿರುವ) ಚರ್ಮದ ಚೀಲವು, ಅಶ್ವಿನಿಗಳೇ, ಜೇನುತುಪ್ಪದಿಂದ ತುಂಬಿ ಹೋಗಿವೆ.

**ಹಂಸಾಸೋ ಯೇ ವಾಂ ಮಧುಮಂತೋ ಅಸ್ರಿಧೋ ಹಿರಣ್ಯಪರ್ಣಾ ಉಹುವ ಉಷರ್ಬುಧಃ**
**ಉದಪ್ರುತೋ ಮಂದಿನೋ ಮಂದಿನಿಸ್ಪೃಶೋ ಮಧ್ವೋನ ಮಕ್ಷಃ ಸವನಾನಿ ಗಚ್ಛತಃ ॥ ೪ ॥**

೪. ನಿಮ್ಮನ್ನು ಹೊತ್ತ ಹಂಸಗಳು ಮಧುಮಯವಾಗಿವೆ. ಅವುಗಳಿಗೆ ಬಂಗಾರದ ರೆಕ್ಕೆಗಳಿವೆ ; ಅವು ಉಷೆಯೊಡನೆ ಏಳುತ್ತವೆ. ಅವು ಹಿಂಸಿಸಬರವು ; ನೀರನ್ನವು ಮಳೆಯಾಗಿ ಸುರಿಸುತ್ತವೆ. ಅವು ಹರ್ಷಪುಲಕಿತವಾಗಿವೆ ಮತ್ತು ಆ ಹರ್ಷಪುಲಕ ದಾರಿಯನ್ನು ಮುಟ್ಟುತ್ತವೆ. ಜೇನುಹುಳುಗಳು ಸುರಿಯುವ ಜೇನುತುಪ್ಪದತ್ತ ಹಾರಿ ಬರುವಂತೆ ನೀವು ಸೋಮಾಹುತಿಗಳತ್ತ ಹಾರಿಬನ್ನಿರಿ.

**ಸ್ವಧ್ವರಾಸೋ ಮಧುಮಂತೋ ಅಗ್ನಯ ಉಸ್ರಾ ಜರಂತೇ ಪ್ರತಿ ವಸ್ತೋರಶ್ವಿನಾ ।**
**ಯನ್ನಿಕ್ತ ಹಸ್ತ ಸ್ತರಣಿರ್ ವಿಚಕ್ಷಣಃ ಸೋಮಂ ಸುಷಾವ ಮಧುಮಂತ ಮದ್ರಿಭಿಃ ॥ ೫ ॥**

೫. ಮಧುಮಯಾಗ್ನಿಗಳು ಯಜ್ಞಕ್ಕೆ ಚೆನ್ನಾಗಿ ಮಾರ್ಗದರ್ಶನ ಮಾಡುತ್ತಿವೆ. ಎಲೈ ಅಶ್ವಿಗಳೇ, ಅವರು ನಿಮ್ಮ ದ್ಯುತಿಯನ್ನು ಪ್ರೀತಿಸುತ್ತಾರೆ; ದಿನೇ ದಿನೇ ಯಾರಾದರೊಬ್ಬ ಚೊಕ್ಕವಾದ ಕೈಯಿಂದ, ಪೂರ್ಣದರ್ಶನದಿಂದ, ಧ್ಯೇಯದತ್ತ ಸಾಗುವ ಶಕ್ತಿಯುಳ್ಳವನು ಮಧುಮಯ ಸೋಮಮದ್ಯವನ್ನು ಜಜ್ಜುವ ಕಲ್ಲುಗಳಿಂದ ಜಜ್ಜಿ ಹಿಂಡಿ ತೆಗೆದಿದ್ದಾನೆ.

**ಆಕೇನಿ ಪಾಸೋ ಅಹಭಿರ್ದವಿಧ್ವತಃ ಸ್ವರ್ಣ ಶುಕ್ರಂ ತನ್ವಂತ ಆ ರಜಃ ।**
**ಸೂರಶ್ಚಿದಶ್ವಾನುಯುಯು ಜಾನ ಈಯತೇ ವಿಶ್ವಾಅನು ಸ್ವಧಯಾ ಚೇತಥಸ್ಪಥಃ ॥ ೬ ॥**

೬. ತಮ್ಮ ಸನಿಹದ ಮಧುವನ್ನು ಕುಡಿದು ಅಗ್ನಿಗಳು ಹತ್ತಿ ಹಾರಿ ಓಡಿ-ಕೆಳ ಜಗವನ್ನು ಹೊಳೆವ ಸಗ್ಗದಂತೆ ಮಾಡುತ್ತಾರೆ. ಸೂರ್ಯ ಕೂಡಾ ತನ್ನ ಕುದುರೆಗಳನ್ನು ತೇರಿಗೆ ಕಟ್ಟುತ್ತಾನೆ. ಪ್ರಕೃತಿಯ ಸ್ವವ್ಯವಸ್ಥಾಪನ ಪ್ರಣೋದದಿಂದ ನೀವು ಎಲ್ಲ ದಾರಿಗಳಲ್ಲೂ ಪ್ರಜ್ಞಾತರಾಗಿ ಚಲಿಸಿರಿ.[೧]

**ಪ್ರವಾಮವೋಚಮಶ್ವಿನಾ ಧಿಯಂಧಾ ರಥಃ ಸ್ವಶ್ವೋ ಅಜರೋಯೋ ಅಸ್ತಿ ।**
**ಯೇನ ಸದ್ಯಃ ಪರಿ ರಜಾಂಸಿ ಯಾತೋ ಹವಿಷ್ಮಂತಂ ತರಣಿಂ ಭೋಜಮಚ್ಛ ॥ ೭॥**

೭. ಎಲೈ ಅಶ್ವಿಗಳೇ, ನಾನೀ ಪ್ರಕಾರ ಘೋಷಿಸುತ್ತೇನೆ. ನನ್ನಲ್ಲಿಯ ದಿವ್ಯ ವಿಚಾರವನ್ನು ಹಿಡಿದು ನಿಲ್ಲಿಸಿ ನಿಮ್ಮ ಅಕ್ಷಯವಾದ ತೇರು ಸರ್ವಲಕ್ಷಣ ಸಂಪನ್ನ ಕುದುರೆಗಳಿಂದ ಎಳೆಯಲ್ಪಡುತ್ತಿರುವಾಗ ನೀವು ಹತ್ತಿ ಓಡಾಡುವ ತೇರು ಒಮ್ಮೆಲೇ ಎಲ್ಲ ಜಗಗಳತ್ತಲೂ ನಿಮ್ಮನ್ನೊಯ್ಯುತ್ತದೆ ; ಧ್ಯೇಯದತ್ತ ಒಯ್ಯುವ ಆಹುತಿ ಶ್ರೀಮಂತ ಭೋಗಮಯ ಲೋಕಗಳತ್ತ ನಿಮ್ಮನ್ನು ಕರೆದೊಯ್ಯುತ್ತದೆ.



೧. ಅಥವಾ ಕ್ರಮಾನುಸಾರವಾಗಿ ನೀವು ಎಲ್ಲ ದಾರಿಗಳ ಜ್ಞಾನವನ್ನೂ ಪಡೆಯಿರಿ.

# ವ್ಯಾಖ್ಯಾನ

ಋಭುಗಳಿಗೆ ಸಂಬೋಧಿಸಿ ಹೇಳಿದ ಸೂಕ್ತಗಳಂತೆ ಇಬ್ಬರು ಕಾಂತಿಮಯ ಯಮಳರನ್ನು ಕುರಿತ ಋಗ್ವೇದದ ಸೂಕ್ತಗಳು ಸಾಂಕೇತಿಕೋಕ್ತಿಗಳಿಂದ ತುಂಬಿ ಹೋಗಿವೆ ಮತ್ತು ಅವುಗಳ ಸಾಂಕೇತಿಕತೆಗೆ ಬೇಕಾದ ನಿಶ್ಚಿತ, ದೃಢ, ಸೂಚನೆಗಳಿಲ್ಲದೆ ಹೋದರೆ ಅವನ್ನು ಅರ್ಥಮಾಡಿ-ಕೊಳ್ಳುವುದು ಅಸಾಧ್ಯವೇ ಸರಿ. ಅಶ್ವಿಗಳನ್ನು ಕುರಿತು ಬರೆದ ಈ ಮೂರು ಸೂಕ್ತಗಳಲ್ಲಿ ಅವರ ತೇರಿನ ಹೊಗಳಿಕೆಯಿದೆ, ಕುದುರೆಗಳ ಸ್ತುತಿಯಿದೆ ; ಅವರ ಸವೇಗ, ಸರ್ವವ್ಯಾಪಕ ಚಲನೆಯ ಪ್ರಶಂಸೆಯಿದೆ. ಅವರ ಮಧುಶೋಧ, ಅದರಲ್ಲಿ ಮೋದ-"ಮಧು" ಮತ್ತು ತಮ್ಮ ತೇರಿನಲ್ಲಿ ತೃಪ್ತಿಕರ ತೋಷಜನಕ ಪದಾರ್ಥಗಳನ್ನು ಒಯ್ಯುವುದರ ಉಲ್ಲೇಖವಿದೆ ; ಅಲ್ಲದೆ, ಅವರ ದಿವ್ಯ ಸೂರ್ಯ ಸಂಬಂಧ ಅವನ ಮಗಳಾದ ದಿವ್ಯ ಸೂರ್ಯೆಯ ಗೆಳೆತನ ಹಾಗೂ ಉಷಾ ಸ್ನೇಹಗಳನ್ನು ಬಣ್ಣಿಸಲಾಗಿದೆ.

ಇತರ ದೇವತೆಗಳಂತೆ ಅಶ್ವಿಗಳು ಕೂಡಾ ಋತಾಖ್ಯ ಸತ್ಯಪ್ರಜ್ಞೆಯಿಂದ ಅವತರಿಸುತ್ತಾರೆ. ಶುದ್ಧಮಹಾಮನಃಸ್ವರೂಪದ ಸ್ವರ್ಗನಾಮಧೇಯವುಳ್ಳ ದ್ಯೌವಿಂದ ಅವರು ಹುಟ್ಟಿದ್ದಾರೆ - ಅವರ ಚಲನೆ ವಿಶ್ವಗಳೆಲ್ಲವನ್ನೂ ಹಬ್ಬಿದೆ-ಅವರ ಕಾರ್ಯಭಾರದ ಪರಿಣಾಮಗಳು ದೇಹದಿಂದ ಹಿಡಿದು, ಪ್ರಾಣಸತ್ತೆಯ ಮೂಲಕ ವಿಚಾರ ಪ್ರಜ್ಞೆಯನ್ನೇರಿ ಅತಿಮಾನಸ ಸತ್ಯದವರೆಗೆ ವೇದ್ಯ. ಆ ಕಾರ್ಯವು ಸಾಗರದಿಂದ ಶುರುವಾಗುತ್ತದೆ ; ಅಸ್ತಿತ್ವದ ಅಸ್ಪಷ್ಟ ಸ್ಥಿತಿಯು ಅತಿಮಾನಸ ಸತ್ಯದಿಂದ ಹೊರಜೀಳುತ್ತಿರುವಾಗಲೇ ಅದರ ಆರಂಭವು ಅಶ್ವಿಗಳು ಜೀವಾತ್ಮನನ್ನು ಅವನು ಹಾದಿಯಲ್ಲೇ ಮುಳುಗದಂತೆ ಈ ಜಲ ಮಹಾಪೂರದ ಮೇಲೆ ನಡಕೊಂಡು ಬರುವವರು. ಆದ್ದರಿಂದಲೇ ಅವರು ನಾಸತ್ಯರು, ಚಲನೆಯ ಯಜಮಾನರು, ಜಲಯಾನದ ಅಥವಾ ಪ್ರಯಾಣ ನೇತಾರರು.

ಉಷೆ, ಸೂರ್ಯ, ಸೂರ್ಯೆಯರ ಸಂಪರ್ಕದಿಂದ ಲಬ್ಧವಾದ ಪರಸತ್ಯದಿಂದ ಅವರು ಮಾನವನಿಗೆ ನೆರವೀಯುವರು. ಆದರವರು ಸತ್ತಾಹ್ಲಾದದಿಂದ ಅವನಿಗೆ ಸಹಾಯಕರಾಗುವುದು ವಿಶಿಷ್ಟವಾಗಿದೆ. ಅವರು ಆನಂದಾಧೀಶರು - "ಸುಭಸ್ಪತೀ". ಅವರ ತೇರು ಯಾ ತಿರುಗಾಟವು ಸರ್ವಪ್ರಜ್ಞಾಸ್ತರಗಳಲ್ಲಿಯೂ ಇರುವ ಸತ್ತಾಹ್ಲಾದದ ಸಂತೃಪ್ತಿಯ ರಾಶಿಯಿಂದ ತುಂಬಿದ್ದಾಗಿದೆ. ಅವರು ಜೇನುತುಂಬಿದ ಚರ್ಮದ ಚೀಲಗಳನ್ನು ಹೊಂದಿದ್ದಾರೆ. ಅವರು ಜೇನುತುಪ್ಪವನ್ನು ಬಯಸುತ್ತಾರೆ, ಮಾಧುರ್ಯವನ್ನು ಅರಸುತ್ತಾರೆ ಮತ್ತು ಅದರಿಂದ ಎಲ್ಲವನ್ನೂ ತುಂಬಿಸುತ್ತಾರೆ. ಆದುದರಿಂದ ಅವರು ಆನಂದದ ಪರಿಣಾಮಕರ ಶಕ್ತಿಗಳು. ಆ ಆನಂದ ಹೊರಡುವುದು ಪರಮಸತ್ಯಪ್ರಜ್ಞೆಯಿಂದ ಮತ್ತು ಅದು ಲೋಕತ್ರಯದಲ್ಲೂ ಆವಿರ್ಭವಿಸಿ ಮಾನವನನ್ನು ಅವನ ಆಧ್ಯಾತ್ಮಿಕ ಯಾತ್ರೆಯಲ್ಲಿ ರಕ್ಷಿಸುತ್ತದೆ. ಆದುದರಿಂದ ಅವರ ಕಾರ್ಯವು ಮೂರು ಲೋಕಗಳಲ್ಲೂ ಹಬ್ಬಿದೆ. ಅವರು ವಿಶೇಷತಃ ಕುದುರೆ ಸವಾರರು ಅಥವಾ ಕುದುರೆ ಕಾಸ್ತಾರರು (ಕುದುರೆ ಹೊಡೆದುಕೊಂಡು ಹೋಗುವವರು, ಚಾಕರರು). ಅವರ ಹೆಸರೇ ಇದನ್ನು ಹೇಳುತ್ತದೆ. ಅವರು

ಮಾನವನ ಜೈವಿಕತೆಯನ್ನು ಅವನ ಆಧ್ಯಾತ್ಮಿಕ ಪ್ರವಾಸದಲ್ಲಿ ಗತಿ ಪ್ರಚೋದವನ್ನಾಗಿ ಬಳಸುತ್ತಾರೆ. ಆದರೆ ಅವರು ವಿಚಾರದಲ್ಲೂ ಕೆಲಸ ಮಾಡಿ ಅದನ್ನು ಪರಸತ್ಯದೆಡೆಗೆ ಒಯ್ಯುತ್ತಾರೆ. ದೇಹಕ್ಕೆ ಅವರು ಆರೋಗ್ಯವನ್ನೂ ಸೌಂದರ್ಯವನ್ನೂ ಪರಿಪೂರ್ಣತೆಯನ್ನೂ ಕೊಡುತ್ತಾರೆ. ಅವರೇ ದೇವಲೋಕದ ವೈದ್ಯರು. ಎಲ್ಲಾ ದೇವತೆಗಳಲ್ಲೂ ಮಾನವನು ಕರೆದ ಕೂಡಲೇ ಬರುವವರು ಅವರೇ ಮತ್ತು ಅವನಿಗೆ ಸುಖ ಸಂತೋಷ ಕೊಡುವವರು ಅವರೇ- "ಆಗಮಿಷ್ಠಾ, ಶುಭಸ್ಪತೀ". ಏಕೆಂದರೆ ಇದೇ ಅವರ ವಿಶಿಷ್ಟವೂ ಪೂರ್ಣವೂ ಆದ ಕರ್ತವ್ಯವು. ವಿಶೇಷವಾಗಿ ಅವರು ಸುಖ-ಸಂತೋಷಗಳನ್ನು ನೀಡುವ ದೊರೆಗಳು, ಒಡೆಯರು.

ಪ್ರಸ್ತುತ ಸೂಕ್ತದಲ್ಲಿ ವಾಮದೇವನು ಸತತ ಧ್ವನಿಭಾರದಿಂದ ಅಶ್ವಿಗಳ ಸ್ವಭಾವವನ್ನು (ಚಾರಿತ್ರವನ್ನು) ಬಣ್ಣಿಸಿದ್ದಾನೆ. ಪ್ರತಿ ಋಕ್ಕಿನಲ್ಲೂ ಎನ್ನುವಂತೆ ಪುನಃ ಪುನಃ "ಮಧು, ಮಧುಮಾನ್"=ಜೇನು, ಜೇನುಳ್ಳ-ಎಂಬ ಪದಗಳು ಬರುತ್ತವೆ. ಈ ಸೂಕ್ತವು ಸತ್ತಾ ಮಾಧುರ್ಯಕ್ಕೇ ಮೀಸಲಾದ ಸೂಕ್ತ-ಇದೊಂದು ಅಸ್ತಿತ್ವಾಹ್ಲಾದದ ಪವಿತ್ರ ಗಾನವು. ಬೆಳಕುಗಳಲ್ಲಿ ಹೆಬ್ಬೆಳಕಾದ ಪರಸತ್ಯ ಸೂರ್ಯನು ಪರಸತ್ಯ ಪ್ರಜ್ಞೆಯ ಪ್ರಕಾಶವು. ಅದು ಬಾಳಿನ ಚಟುವಟಿಕೆಗಳಿಂದ ಏಳುತ್ತದೆ - ಎದ್ದು ಸ್ವರ್‌ರೆಂಬ ಪ್ರಬೋಧಿತ ಮನವನ್ನು ನಿರ್ಮಿಸುತ್ತದೆ. ಆ ಮನವು ಕೆಳಗಿನ ತ್ರಿಲೋಕಗಳ ವಿಕಾಸವನ್ನು ಪೂರ್ತಿಗೊಳಿಸುತ್ತದೆ. "ಏಷ ಸ್ಯ ಭಾನುರ್ ಉದಿಯರ್ತಿ" ಮಾನವನಲ್ಲಿ ಈ ಸೂರ್ಯೋದಯವಾಗುವುದರಿಂದ ಅಶ್ವಿನೀ ದೇವತೆಗಳ ಪೂರ್ಣಚಲನೆ ಸಾಧ್ಯವಾಗುತ್ತದೆ. ಏಕೆಂದರೆ ಪರಮ ಸತ್ಯದಿಂದ ಅನುಭೂತ ಆಹ್ಲಾದವು ಯಾ ಸ್ವರ್ಗೀಯ ಬ್ರಹ್ಮಾನಂದವು ಬರುತ್ತದೆ. ಆದುದರಿಂದ ಅಶ್ವಿಗಳ ರಥವು ಈ ಸ್ವರ್ಗದೆತ್ತರದಲ್ಲಿ ಹೂಡಲ್ಪಡುತ್ತದೆ-ಈ ಸ್ತರವು ಉನ್ನತವಾದ ಉಜ್ವಲ ಮನಕ್ಕೆ ಸೇರಿದ್ದು. ಈ ರಥವಾದರೋ ವಿಶ್ವವ್ಯಾಪಕವಾದುದು ; ಅದರ ಓಡಾಟವು ಸರ್ವತ್ರ. ಅದರ ವೇಗವು ನಮ್ಮ ಎಲ್ಲ ಪ್ರಜ್ಞಾಸ್ತರಗಳಲ್ಲೂ ಸಂಚರಿಸಬಲ್ಲುದು - "ಯುಜ್ಯತೇ ರಥಃ ಪರಿಜ್ಮಾ ದಿವೋ ಅಸ್ಯ ಸಾನವಿ."

ಅಶ್ವಿಗಳ ಪರಿಪೂರ್ಣ ವಿಶ್ವವ್ಯಾಪಕವಾದ ಚಲನೆಯು ಅಸ್ತಿತ್ವದ ಸಂತೋಷದ ಶಕ್ಯವಿರುವ ಎಲ್ಲಾ ಸಂತೃಪ್ತಿಗಳನ್ನೂ ತರುತ್ತದೆ. ಅವರ ರಥದಲ್ಲಿ ಎಲ್ಲಾ ಸಂತೃಪ್ತಿಗಳೂ ಇವೆ - "ಪೃಕ್‌ಶಾಸಃ" -ಅದೂ ಮೂರು ಜೋಡಿಗಳಾಗಿ ವೇದದ ಸಾಂಕೇತಿಕ ಭಾಷೆಯಲ್ಲಿದು ಹೀಗೆ ಹೇಳಲ್ಪಟ್ಟಿದೆ. "ಪೃಕ್ಷಾಸೋ ಅಸ್ಮಿನ್ ಮಿಥುನಾ ಅಧಿತ್ರಯಃ". ಪೃಕ್ಷವೆಂಬ ಪದವು ಪ್ರಯಸ್ ಶಬ್ದದಂತೆಯೇ ಕರ್ಮಕಾಂಡೀಯ ವಿವರಣೆಯಲ್ಲಿ ಆಹಾರವೆಂಬುದಾಗಿ ಅನುವಾದಿಸಲ್ಪಟ್ಟಿದೆ. ಪೃಕ್ಷದ ಮೂಲಧಾತ್ವರ್ಥದ ಪ್ರಕಾರ ಸಂತೋಷ, ಪೂರ್ಣತೆ, ತೃಪ್ತಿ, ಎಂದೂ ಭೌತಿಕವಾಗಿ ರಸಪಾಕವೆಂದೂ ತೃಪ್ತಿಕರ ಆಹಾರವೆಂದೂ ಮಾನಸ ಶಾಸ್ತ್ರೀಯವಾಗಿ ಸುಖ, ಸಂತೋಷ, ತೃಪ್ತಿ ಎಂದೂ ವಿವರಿಸಬಹುದು. ತೃಪ್ತಿಗಳು ಯಾ ರಸಪಾಕಗಳು ಅಶ್ವಿಗಳ ರಥದಲ್ಲಿ ಮೂರು ಜೋಡಿಗಳಾಗಿವೆ ; ಅಥವಾ ಉಕ್ತ ಸಂಹತಿಗೆ ಜೋಡಿ ಮೂರಾದರೂ ಅವೆಲ್ಲಾ ಅತಿನಿಕಟವರ್ತಿಗಳಾಗಿವೆ ಎಂದೂ ಹೇಳಬಹುದು. ಹೇಗೇ ಆದರೂ ಈ ಸಾಂಕೇತಿಕ ಅನ್ವಯವು ಮೂರು ತರಹದ ತೃಪ್ತಿಗಳಿಗೆ ಅಥವಾ ಸುಖ-ಸಂತೋಷಕ್ಕೆ ಸರಿದೊರೆಯಾಗುತ್ತದೆ-ಈ ಮೂರೆಂದರೆ ನಮ್ಮ ಪ್ರಗತಿಪರ ಪ್ರಜ್ಞೆಯ ಮೂರು ಚಲನೆಗಳು ಅಥವಾ ಮೂರು ಲೋಕಗಳು (೧) ದೈಹಿಕ ತೃಪ್ತಿ (೨) ಜೈವಿಕ ತೃಪ್ತಿ (೩) ಮತ್ತು ಮಾನಸಿಕ ತೃಪ್ತಿ ಎಂಬಿವೇ ಆ ಮೂರು ಲೋಕಗಳ ತೃಪ್ತಿಗಳು. ಅವು ಮೂರು ಜೋಡಿಗಳಲ್ಲಿದ್ದುದಾದರೆ, ಪ್ರತಿಯೊಂದು ಪ್ರಜ್ಞಾಸ್ತರದಲ್ಲೂ ಅವು ಅಶ್ವಿಗಳ ಸಂಯುಕ್ತ ಯಮಳ

ದ್ವಿತ್ವಕ್ಕೆ ಸರಿಸಮವಾದ ದ್ವಿಮುಖ ಕಾರ್ಯ, ದ್ವಿಮುಖ ತೃಪ್ತಿ ಎಂದು ತಿಳಿದುಕೊಳ್ಳಬೇಕು-ಈ ಸಂಯುಕ್ತತೆ ಐಕ್ಯೋಪಮವಾದುದು. ವೇದದಲ್ಲಿಯೇ ಈ ಪ್ರಖರ ಪ್ರಕಾಶದ ಸುಜಯಮಳರು ಪ್ರತ್ಯೇಕವಾಗಿ ಏನನ್ನು ಪ್ರತಿನಿಧಿಸುತ್ತಾರೆ ಎಂಬುದನ್ನು ತಿಳಿದುಕೊಳ್ಳುವುದು ಕಠಿನ. ಮೂರು ಋಭುಗಳ ವ್ಯತ್ಯಾಸವನ್ನು ತಿಳಿದುಕೊಳ್ಳುವುದಕ್ಕೆ ಇರುವಂಥ ಸೂಚಕಗಳಾವುವೂ ಇಲ್ಲಿಲ್ಲ. ಆದರೆ, ಬಹುಶಃ ಗ್ರೀಕ್ "ದಿಯೋಸ್ಕೋರಿ"=ಸ್ವರ್ಗಪುತ್ರರು - "ದಿವೋನಪಾತಾ" ಎಂಬುದು ಸೂಚಕಾಂಶದಿಂದ ಕೂಡಿದೆ ಎಂದು ಭಾವಿಸಬಹುದು. ಗ್ರೀಕ್ ಪುರಾಣದ ಯಮಳರಲ್ಲಿ ಹಿರಿಯನು ಕಾಸ್ಟೋರ್ ; ಸಂಸ್ಕೃತದಲ್ಲಿ "ಕಶಿತೃ"=ಹೊಳೆಯುವವನು. ಪೊಲುಡ್ಯುಕೇಸ್[೧] ತಮ್ಮನು; ಸಂಸ್ಕೃತದಲ್ಲಿ "ಕರುದಂಸಸ್"= ಕಾರ್ಯದಲ್ಲಿ ಬಹುಮುಖನು. ಈ ಪದವು ವೇದದಲ್ಲಿ ಅಶ್ವಿಗಳ ವಿಶೇಷಣವಾಗಿ ಬಂದಿದೆ ; ಆ ವಿಶೇಷಣದ ಅರ್ಥವು ಕಾರ್ಯದಲ್ಲಿ ಬಹುಮುಖ ಎಂದು. ಇದು ಅಹುದಾದರೆ, ವೇದದಲ್ಲಿ ಅಶ್ವಿಗಳ ಯಮಳೋತ್ಪತ್ತಿಯು ವೈದಿಕ ದ್ವೈಧೀಕರಣದ ಪದ್ಧತಿಯಂತೆ ಶಕ್ತಿ ಮತ್ತು ಬೆಳಕು, ಜ್ಞಾನ ಮತ್ತು ಸಂಕಲ್ಪ, ಪ್ರಜ್ಞೆ ಮತ್ತು ಕ್ರಿಯಾಶಕ್ತಿ - ಎಂಬ ಅರ್ಥಗಳನ್ನು ಸೂಚಿಸುತ್ತಿರಬೇಕು ; ಉದಾ - "ಗೋ ಮತ್ತು ಅಶ್ವ". ಅಶ್ವಿಗಳು ನಮಗೀಯುವ ತೃಪ್ತಿಗಳಲ್ಲೆಲ್ಲಾ ಈ ಎರಡು ಅಂಶಗಳು ಅವಿನಾಭಾವಿಗಳಾಗಿ ಒಂದಾಗಿರುತ್ತವೆ. ; ರೂಪವು ಬೆಳಕು ಯಾ ಪ್ರಜ್ಞೆ ಆಗಿದ್ದಲ್ಲಿ ಶಕ್ತಿಯೂ ಬೆಳಕೂ ಅದಕ್ಕೊಳಪಟ್ಟಿವೆ ; ರೂಪವು ಶಕ್ತಿ ಯಾ ಕ್ರಿಯಾಶಕ್ತಿ ಆಗಿದ್ದಲ್ಲಿ ಬೆಳಕೂ ಪ್ರಜ್ಞೆಯೂ ಅದರಲ್ಲಡಕವಾಗಿರುತ್ತವೆ.

ಆದರೆ ಈ ಮೂರು ತರಹದ ತೃಪ್ತಿಗಳು ಮಾತ್ರ ನಮಗಾಗಿ ಅವರ ರಥದಲ್ಲಿಲ್ಲ. ಇನ್ನೂ ಏನೋ ಇದೆ - ನಾಲ್ಕನೆಯದೊಂದು ಇದೆ ಜೇನುತುಪ್ಪ ತುಂಬಿದ ಚರ್ಮದ ಚೀಲ - ಈ ಚೀಲದಿಂದ ಜೇನು ಹೊಳೆ ಹರಿದು ಎಲ್ಲ ದಿಶೆಗಳನ್ನೂ ತುಂಬುತ್ತಿದೆ ("ದೃತಿಸ್ತುರೀಯೋ ಮಧುನೋವಿರಪ್ಸತೇ"). ಮನ, ಪ್ರಾಣ, ದೇಹಗಳು ಮೂರು ; ನಾಲ್ಕನೆಯದೇ ತುರೀಯವೆಂಬ ನಮ್ಮ ಅತಿಮಾನಸ ಪ್ರಜ್ಞಾಸ್ತರ, ಪರಮಸತ್ಯಪ್ರಜ್ಞೆ, ಅಶ್ವಿಗಳು ತಮ್ಮೊಡನೆ ಒಂದು ದೃತಿಯನ್ನು (ಚರ್ಮದ ಚೀಲವನ್ನೂ) ತರುತ್ತಾರೆ. ಅಕ್ಷರಶಃ ದೃತಿಯೆಂದರೆ ತುಂಡು ಮಾಡಿದ ಒಂದು ವಸ್ತು, ಅರ್ಥಾತ್, ಅತಿಮಾನಸ ಬ್ರಹ್ಮಾನಂದದಿಂದ ತುಂಡು ಮಾಡಿ ತೆಗೆದ ಒಂದು ಆಕೃತಿ. ಬ್ರಹ್ಮಾನಂದವನ್ನು ತುಂಬಲು ಅದನ್ನು ಮಾಡಿದ್ದು. ಆದರೆ ಅದು ಅದನ್ನು ತುಂಬಿಕೊಳ್ಳಲಾರದು. ಆದ್ದರಿಂದ ಆ ಅಜಯ್ಯ, ಅಪಾರ, ಅನಂತ ಮಾಧುರ್ಯವು ಅದನ್ನು ಹರಿದು ಹೊರಬಿದ್ದು ಎಲ್ಲೆಡೆಗೂ ಹಬ್ಬಿ ಹರಿದು ನಮ್ಮ ಇಡೀ ಬಾಳುವೆಯನ್ನು ಒದ್ದೆ ಮಾಡಿಬಿಡುವುದು.

ಆ ಜೇನಿನಿಂದ ಉಕ್ತ ತೃಪ್ತಿತ್ರಯದ ದ್ವಂದ್ವಗಳು - ಮಾನಸ, ಜೈವಿಕ, ದೈಹಿಕ ತೃಪ್ತಿ ದ್ವಂದ್ವಗಳು - ಈ ಸರ್ವವ್ಯಾಪಿಯೂ ಸರ್ವತ್ರೋತ್ಪಾದಕವೂ ಆದ ಐಶ್ವರ್ಯ ಪ್ರವಾಹವನ್ನು ತೆರೆದಾಗ ಈ ಪ್ರವಾಹಗಳು ಅಶ್ವಿಗಳನ್ನು ಸರ್ವಾಂಗಗಳಲ್ಲೂ ತುಂಬಿ "ಮಧುಮಂತ"ರನ್ನಾಗಿ ಮಾಡುತ್ತವೆ, ಮಾಧುರ್ಯಮಯರನ್ನಾಗಿ ಮಾಡುತ್ತದೆ. ಹಾಗಾದ ಮೇಲೆ ಒಮ್ಮೆಲೇ ಅವರು ಮೇಲೇರಲಾರಂಭಿಸುತ್ತಾರೆ. ದಿವ್ಯಾಹ್ಲಾದದಿಂದ ಸ್ಪಷ್ಟರಾಗಿ ಈ ಕೆಳ ಲೋಕದ ನಮ್ಮೆಲ್ಲಾ ತೃಪ್ತಿಗಳಿಂದ ಕೂಡಿ ಅನಿರುದ್ಧವಾಗಿ, ಅತಿಮಾನಸದ ಆಕರ್ಷಣೆಯಿಂದ ಮೇಲೆ ಮೇಲಕ್ಕೆ ಅವರು ಹೋಗುತ್ತಾರೆ - ಪರಮ ಸತ್ಯವನ್ನು, ಬ್ರಹ್ಮಾನಂದವನ್ನು, ಸಮೀಪಿಸುತ್ತಾರೆ. ಮತ್ತು ಅವರೊಡನೆ ಈ ದೇವರುಗಳ ಎಲ್ಲ ರಥಗಳೂ, ಕುದುರೆಗಳೂ ಅದೇ ಎತ್ತರಕ್ಕೇರುವ ಓಟ ಓಡುತ್ತವೆ. ಏಕೆಂದರೆ ಗುಪ್ತವಾಗಿ ಅಥವಾ ಪ್ರಕಟವಾಗಿ

---

೧. ಪೊಲ್ಯುಡೇಕೇಸನ "ಕೆ"ಯು ಮೂಲತಃ "ಶ್". ಆಗ ಹೆಸರು "ಪುರುದಂಸಸ್" ಆಗುತ್ತದೆ. ಆದರೆ ಆರ್ಯಭಾಷೆಗಳ ಅಧ್ರುಢಾವಸ್ಥೆಯಲ್ಲಿ ವಿವಿಧ ಘೂತ್ಕಾರವರ್ಣಗಳ ಬದಲಾವಣೆಯು ಸಾಕಷ್ಟು ರೂಢಿಯಲ್ಲಿತ್ತು.

ಯಾ ಪ್ರಜ್ಞಾತವಾಗಿ ಆಗಲಿ, ಅಪ್ರಜ್ಞಾತವಾಗಿ ಆಗಲಿ - ಸತ್ತಾಹ್ಲಾದವೇ ನಮ್ಮ ಎಲ್ಲ ಕಾರ್ಯಗಳಿಗೂ ನೇತಾರ ! ತಮ್ಮ ಮನೆಯಾದ ಪರಮಸತ್ಯಜ್ಯೋತಿಯ ಪ್ರಗತಿಪರ ಚಲನೆಯನ್ನು, ನಮ್ಮ ಅಸ್ತಿತ್ವದ ವಿವಿಧ ಚಲನೆಗಳೂ ಪ್ರಣೋದಗಳ ಎಲ್ಲ ರೂಪಗಳೂ ಆ ಚಲನೆಗಳಿಗೆ ಪ್ರಚೋದನೆ ಕೊಡುತ್ತಾ, ಅನುಸರಿಸಿ ಹೋಗುತ್ತವೆ - "ಉದ್ವಾಂ ಪೃಕ್ಷಾಸೋ ಮಧುಮಂತ ಈ ರತೇ, ರಥಾ ಅಶ್ವಾಸ ಉಷಸೋ ವ್ಯುಷ್ಟಿಸು".

ಅವರು ವಿಶಾಲವಾಗಿ ಬೆಳಗುವ ಉಷೆಯಲ್ಲಿ ಏಳುವರು - "ಅವಳ ಬೆಳಕಿನಲ್ಲಿ ಜಾಗರಿತರಾಗುತ್ತಾರೆ." ಏಕೆಂದರೆ, ನಮ್ಮ ಜೀವನದ ಅರೆಬೆಳಕಿನ ರಾತ್ರಿಗೆ ಅಥವಾ ಅಂಧಕಾರಕ್ಕೆ ಪರಸತ್ಯದ ಬೆಳಕಾಗಿ (ಪ್ರಬೋಧವಾಗಿ) ಮಾನಸಿಕತೆಯ ಮೇಲೆ ಎದ್ದು ಪೂರ್ಣಪ್ರಜ್ಞೆಯ ಹಗಲನ್ನು ತರುವವಳು ಉಷೆಯೇ. ಅವಳು ದಕ್ಷಿಣೆಯಾಗಿ ಬರುತ್ತಾಳೆ - ಅಂದರೆ ಶುದ್ಧ ಪ್ರಾತಿಭ ಸೂಕ್ಷ್ಮ ದೃಷ್ಟಿಯವಳಾಗಿ ಬರುತ್ತಾಳೆ ; ನಮ್ಮಲ್ಲಿರುವ ಅಗ್ನಿ ದೇವಪ್ರಣೋದವು ಪರಸತ್ಯಾಪೇಕ್ಷೆಯುಂಟಾದಾಗ ಆ ದಕ್ಷಿಣೆಯನ್ನು ಭಕ್ಷಿಸುತ್ತಾನೆ ಅಥವಾ ಶೋಧಕ ಪ್ರತಿಭೆಯಾದ ಸರಮೆಯು ಕಿರಣ ಪ್ರಸಾರಕ ಸೂರ್ಯ ಕಿರಣವ್ರಜಗಳನ್ನು ಅನಾಗರಿಕ ಇಂದ್ರಿಯಕ್ರಿಯಾಧಿಪತಿಗಳಾದ ಪಣ್ಯಾದಿಗಳು ಅವಮಾನಸದ ಗವಿಯಲ್ಲಿ ಅಡಗಿಸಿಟ್ಟುಕೊಂಡಿದ್ದಾಗ, ಅವುಗಳನ್ನು ಬಿಡಿಸಿಕೊಂಡು ಬರಲು ಗುಹಾಪ್ರವೇಶ ಮಾಡುವಾಗ ಮತ್ತು ಮಾಡಿ ಇಂದ್ರನಿಗೆ ವೃತ್ತಾಂತವನ್ನು ತಿಳಿಸುವಾಗ ತಾಳಿರುವ ಸೂಕ್ಷ್ಮದೃಷ್ಟಿ ಅಶ್ವಿಗಳಿಗಾಗ ಉಂಟಾಗುತ್ತದೆ-ಅಂದರೆ-ಅವರು ಉಪಾಧ್ಯಕ್ಷರು ಅಥವಾ ಸರಮಾಕ್ಷರಾಗುತ್ತಾರೆ ಎಂದು ತಾತ್ಪರ್ಯ. ಆಗ ಜ್ಯೋತಿರ್ಮಯ ಮಾನಸೇಶ್ವರ ಬರುತ್ತಾನೆ, ಗವಿಯನ್ನು ಕಡಿದೊಡೆದು ತೆರೆಯುತ್ತಾನೆ ಮತ್ತು ಪರಸತ್ಯ ಕಿರಣವ್ರಜಗಳನ್ನು ಮೇಲಕ್ಕೆ ಹೊಡೆದುಕೊಂಡು ಹೋಗುತ್ತಾನೆ- "ಉದಾಜತ್" - ದೇವತೆಗಳ ಸ್ವಗೃಹವಾದ ವಾರುಣ ವಿಸ್ತಾರ ಸ್ವರೂಪದ ಸತ್ಯಪ್ರಜ್ಞೆಯತ್ತ ಕರೆದೊಯ್ಯುತ್ತಾನೆ. ನಮ್ಮ ಈ ಪ್ರಜ್ಞಾತ ಜೀವನವೊಂದು ಬೆಟ್ಟ (ಅದ್ರಿ) ; ಅದರಲ್ಲಿ ಉತ್ತರೋತ್ತರವಾದ ಅನೇಕ ಸ್ತರಗಳೂ ಪ್ರಸ್ಥಭೂಮಿಗಳೂ ("ಸಾನೂನಿ"[1]) ಇರುತ್ತವೆ. ಅವಮಾನಸದ ಗುಹೆ ಕೆಳಗಿದೆ. ನಾವು ಮೇಲಕ್ಕೆ ಹತ್ತುತ್ತೇವೆ - ಪರಮ ಸತ್ಯಾನಂದ ದೇವತೆಯೆಡೆಗೆ ಏರುತ್ತೇವೆ - ಅಲ್ಲಿ ಅಮರತ್ವದ ಪೀಠಗಳು (ಆಸನಗಳು) ಇರುತ್ತವೆ- "ಯತ್ರಾಮೃತಾಸ ಆಸತೇ".[2]

ಅಶ್ವಿಗಳ ರಥದ ಈ ಮೇಲ್ಮುಖದ ಚಲನೆಯಿಂದ, ಅದು ಮೇಲೆತ್ತಲ್ಪಟ್ಟ ಮತ್ತು ಪರಿವರ್ತಿತ ತೃಪ್ತಿಗಳ ಹೊರೆ ಹೊತ್ತು ಮೇಲೇರುವುದರಿಂದ ನಮ್ಮಲ್ಲಿ ನಮ್ಮ ಬಾಳಿನ ಜಗತ್ತುಗಳನ್ನು ಆವರಿಸಿದ ಇರುಳ್ ಮುಸುಕು ಚಾಪೆಯಂತೆ ಸುರುಳಿಯಾಗಿ ಸುತ್ತಿ ಹೊರಟು ಹೋಗುತ್ತದೆ. ಈ ಮನ-ಪ್ರಾಣ-ದೇಹಗಳ ಜಗತ್ತುಗಳೆಲ್ಲವೂ ಪರಮಸತ್ಯ ಸೂರ್ಯನ ಕಿರಣಗಳಿಗೆ ಮುಖವೊಡ್ಡಿ ನಿಂತಿವೆ. ರಜಸ್ಸೆಂಬ ನಮ್ಮ ಈ ಕೆಳಜಗತ್ತು ವಿಸ್ತರಿತವಾಗಿ, ಈ ಉಜ್ವಲನೆಯಿಂದ ತನ್ನ ಸರ್ವಶಕ್ತಿಗಳಲ್ಲೂ ಹೊಸರೂಪ ತಾಳಿ ಹೊಸ ಸಂತೃಪ್ತಿಗಳನ್ನು ಹೊಂದಿ, ಸ್ವರ್ರೆಂಬ ಪ್ರಾತಿಭೇಯ ಮನದ ಹೊಳಪಿನ ಪ್ರಭೆಯೊಳ ಹೊಕ್ಕು ಸ್ವರ್‌ಗೃಹೀತ ಉನ್ನತತರ ಜ್ಯೋತಿಯನ್ನು ಸೇರುವುದು. ಮನ, ಕರ್ಮ, ಪ್ರಾಣ, ಭಾವನೆ, ಭೌತಸತ್ತೆಗಳೆಲ್ಲವೂ ದಿವ್ಯ ಸೂರ್ಯನ ಶಕ್ತಿ ಸಂತೋಷಗಳಿಂದಲೂ ಪ್ರತಿಭೆ ವೈಭವಗಳಿಂದಲೂ ತುಂಬಿ ಹೋಗುತ್ತವೆ- "ತತ್ ಸವಿತುರ್ ವರೇಣ್ಯಂ ಭರ್ಗೋ ದೇವಸ್ಯ"[3].

೧. ಸಾನು=ತಪ್ಪಲು, ಬೆಟ್ಟದ ಇಳಿಜಾರು ಭೂಮಿ= Low Land as well as Table Land. Elevation=Table Land, ಅಧಿತ್ಯಕೆ, ಪ್ರಸ್ಥಭೂಮಿ - ಅನು.

೨. R.V. IX. 15.2

೩. ಗಾಯತ್ರಿಯ ದಿವ್ಯಪದ ಸಂಹತಿ (RV. III 62.10).

ನೀಚವಾದ ಮಾನಸಿಕ ಇರವು ಉನ್ನತತರ ದಿವ್ಯತತ್ತ್ವದ ಪ್ರತಿಮೆಯಾಗಿ, ಪ್ರತಿಬಿಂಬವಾಗಿ, ಮಾರ್ಪಡುವುದು - "ಅಪೋರ್ಣುವಂತಸ್‌ತಮ ಆ ಪರೀವೃತಂ, ಸ್ವರ್ ಣ ಶುಕ್ರಂ ತನ್ವಂತ ಆ ರಜಃ"

ಈ ಪದ್ಯವು ಅಶ್ವಿನಿಗಳ ಅಚ್ಚುಕಟ್ಟಾದ ಮತ್ತು ಕೊನೆಯದಾದ ಚಲನೆಯ ವರ್ಣನೆಯನ್ನು ಮುಗಿಸುತ್ತದೆ. ಮೂರನೆಯದರಲ್ಲಿ ವಾಮದೇವ ಋಷಿಯು ತನ್ನ ಉದ್ಗಮನದತ್ತ ತಿರುಗುತ್ತಾನೆ, ತನ್ನ ಸ್ವಂತದ ಸೋಮಾಹುತಿಯತ್ತ ಹೊರಳುತ್ತಾನೆ, ತನ್ನ ಜಲಯಾನ ಮತ್ತು ಯಜ್ಞಗಳತ್ತ ವಾಲುತ್ತಾನೆ ; ಅದಕ್ಕವನು ಬ್ರಹ್ಮಾನಂದೀಯ ಮತ್ತು ವೈಭವಿಕ ಕಾರ್ಯವೆಂದು ಹಕ್ಕಿನಿಂದ ಹೇಳುತ್ತಾನೆ. ಅಶ್ವಿಗಳ ಬಾಯಿಗಳಿಗೆ ಮಾಧುರ್ಯವನ್ನೀಂಟಿಸುತ್ತಾನೆ ; ತನ್ನ ಯಜ್ಞದಲ್ಲಿ ಆಗ (ಹಾಗಾದರೆ) ಅದನ್ನವರೀಂಟಲಿ- "ಮಧ್ವಃ ಪಿ ಬತಂ ಮಧುಪೇಭಿರ್ ಆಸಭಿಃ". ಜೇನಿಗಾಗಿ ಅವರು ತಮ್ಮ ತೇರನ್ನು ಹೂಡಲಿ ಅವರ ತೇರಾದರೋ ಬಹಳ ಜನಪ್ರಿಯವಾದುದು - "ಉತ ಪ್ರಿಯಂ ಮಧುನೇ ಯುಂಜಾಥಾಂ ರಥಂ". ಮಾನವನ ಚಲನೆಗಾಗಿ, ಅವನ ಪ್ರಗತಿಪರ ಚಟುವಟಿಕೆಗಾಗಿ, ಅವನ ಸರ್ವಮಾರ್ಗಗಳಲ್ಲೂ ಆನಂದದ ಆ ಜೇನಿನ, ಆ ಮಾಧುರ್ಯದ ಆ ಮೋದವನ್ನು ಅಶ್ವಿಗಳು ಹಸರಿಸುತ್ತಾರೆ - "ಆವರ್ತನೀಂ ಮಧುನಾ ಜಿನ್ವಥಃ, ಪಥಃ". ಏಕೆಂದರೆ ಅವರು ಚೀಲದ ತುಂಬಾ ಜೇನುತುಪ್ಪ ತುಂಬಿಕೊಂಡು ಅದನ್ನು ಸುತ್ತೆಲ್ಲಾ ಹರಿಯಬಿಡುತ್ತಾ ಹೋಗುತ್ತಾರೆ- "ದೃತಿಂ ವಹೇಥೇ ಮಧುಮಂತಂ ಅಶ್ವಿನಾ". ಅಶ್ವಿನಿಗಳ ಕಾರ್ಯದಿಂದ ಬ್ರಹ್ಮಾನಂದದತ್ತ ಹೋಗುವ ಮಾನವನ ಪ್ರಗತಿಯೇ ಬ್ರಹ್ಮಾನಂದಮಯವಾಗುತ್ತದೆ. ಅವನ ಕಷ್ಟ ಕಾರ್ಪಣ್ಯಗಳೆಲ್ಲಾ ಹೋರಾಟ-ದುಡಿಮೆಗಳೆಲ್ಲಾ ಒಂದು ದಿವ್ಯಾಹ್ಲಾದದಿಂದ ತುಂಬುತ್ತದೆ. ವೇದದಲ್ಲಿ ಹೇಳಿದಂತೆ ಪರಮಸತ್ಯದಿಂದಲೇ ಪರಮಸತ್ಯದೆಡೆಗೆ ಹೋಗುವುದು - ಅಂದರೆ- ಪರಮಸತ್ಯದ ವರ್ಧಮಾನ ವಿಧಿಯಂತೆ ನಮ್ಮ ಮಾನಸ-ಭೌತಿಕ ಪ್ರಜ್ಞಾಸ್ತರಗಳಲ್ಲಿ ಆ ವಿಧಿಯು ಹೋಗುವುದರಿಂದ ಕೊನೆಯಲ್ಲಿ ನಾವು ಮನ-ದೇಹಪ್ರಜ್ಞೆಗಳನ್ನು ದಾಟಿ ಅತಿಮಾನಸ ಸತ್ಯವನ್ನು ತಲುಪುತ್ತೇವೆ. ಆದ್ದರಿಂದ ಇಲ್ಲಿ ಆನಂದದಿಂದಲೇ ಆನಂದದತ್ತ ಪ್ರಗತಿ ಎಂದು ಸೂಚಿಸಲಾಗಿದೆ - ದಿವ್ಯವಾದ ಒಂದು ಹರ್ಷವಾಹಿನಿಯಿಂದ ಅರ್ಥಾತ್-ಅದು ನಮ್ಮ ಅಂಗಾಂಗಗಳೆಲ್ಲಾ ತುಂಬಿಕೊಳ್ಳುವು-ದರಿಂದ, ನಮ್ಮ ಎಲ್ಲಾ ಕರ್ಮಗಳನ್ನೂ ವ್ಯಾಪಿಸುವುದರಿಂದ, ನಾವು ಅತಿಮಾನಸಪ್ರಜ್ಞೆಯ ಬ್ರಹ್ಮಾನಂದವನ್ನು ಸೇರುವೆವು.

ಉದ್ಗಮನದ ಚಲನೆಯಲ್ಲಿ ಅಶ್ವಿನಿಗಳ ರಥವನ್ನೆಳೆವ ಅಶ್ವಗಳು ಹಕ್ಕಿಗಳಾಗುತ್ತವೆ, ಹಂಸಗಳಾಗುತ್ತವೆ - "ಹಂಸಾಃ" - ವೇದದಲ್ಲಿ ಹಕ್ಕಿಯೊಂದು ಸಂಕೇತ ; ಪದೇ ಪದೇ ಮುಕ್ತವಾಗಿ ಉದ್ಗಮಿಸುತ್ತಿರುವ ಜೀವಾತ್ಮದ ಸಂಕೇತ ; ಇತರ ಸಂದರ್ಭಗಳಲ್ಲಿ ಹಾಗೆ ಮುಕ್ತವಾದ ಕ್ರಿಯಾಶಕ್ತಿಗಳ ಉತ್ಪತನದ ಸಂಕೇತ - ಆ ಉತ್ಪತನವು ನಮ್ಮ ಸತ್ತೆಯ ಶಿಖರಗಳತ್ತ ; ಅಗಲವಾಗಿ, ಪ್ರತಿಬಂಧಕವಿಲ್ಲದೆ, ರೆಕ್ಕೆ ಬೀಸುತ್ತಾ ಸಾಮಾನ್ಯವಾದ ಪ್ರಮಿತ ಪ್ರಪಂಚದ ವ್ಯವಹಾರಗಳಲ್ಲಿ ಪಾಲುಗೊಳ್ಳದೆ ಹಾರುವ ಹಕ್ಕಿ ಅಥವಾ ಶ್ರಮದಿಂದ ನಾಗಾಲೋಟ ಓಡುವ ಜೈವಿಕ ಕ್ರಿಯಾಶಕ್ತಿ ಸ್ವರೂಪದ ಕುದುರೆ - ಅಶ್ವ. ಅಶ್ವ-ಪಕ್ಷಿಗಳು ಮುಮುಕ್ಷುವಿನ ಪ್ರತೀಕಗಳೆಂದು ತಾತ್ಪರ್ಯ- ಮೋಕ್ಷವು ನಮ್ಮ ಆತ್ಯಂತಿಕ ಸತ್ತೆ, ಅತಿಮಾನಸ ಸತ್ಯಪ್ರಜ್ಞಾಲೀನತೆ. ದಿವ್ಯ ಪ್ರಹ್ಲಾದದ ಒಡೆಯರಾದ ಅಶ್ವಿಗಳ ತೇರೆಳೆವ (ಮುಕ್ತರಥ ನಡೆಸುವ) ಕ್ರಿಯಾಶಕ್ತಿಗಳು ಇಂತಿವೆ. ಯಾವಾಗ? ನಮ್ಮ ಮೇಲೆ ಪರಮ ಸತ್ಯಸೂರ್ಯನು ಮುಂಬೆಳಗನ್ನು ಚೆಲ್ಲಿದಾಗ. ಈ ರೆಕ್ಕೆ ಹಾರಾಟದಲ್ಲಿ - "ಮಧುಮಂತಃ"- ಕೋಶೋತ್ಪಾವಿತ ಮಧುವೃಷ್ಟಿ ಇದ್ದೇ ಇರುತ್ತದೆ. ಈ ದಿವ್ಯ ಕ್ರಿಯಾಶಕ್ತಿಗಳು ಅಪ್ರತಿಭಟನೀಯ,

ಅಪ್ರತಿಹತ - "ಅಸ್ರೃಧಃ" ; ತಮ್ಮ ಉಡ್ಡಯನದಲ್ಲಿ ಅವಕ್ಕೆ ಯಾವ ಅಪಾಯವೂಸಂಭವಿಸದು ಅಥವಾ ಅವೆಂದೂ ಅನೃತಮಯ ಅಥವಾ ಹಾನಿಕರ ಹಾರಾಟವನ್ನು ಮಾಡುವುದಿಲ್ಲ. ಆ ಶಕ್ತಿಪಕ್ಷಿಗಳು ಬಂಗಾರದ ರೆಕ್ಕೆಗಳನ್ನುಳ್ಳಂಥವು-"ಹಿರಣ್ಯ ಪರ್ಣಾಃ". ಚಿನ್ನವು ಸೂರ್ಯ ಪ್ರಕಾಶದ ಸಾಂಕೇತಿಕ ಬಣ್ಣ. ಈ ಹಂಸಗಳೂ ದಿವ್ಯಕ್ರಿಯಾಶಕ್ತಿಗಳ, ದಿವ್ಯಾಶ್ವಗಳ ಪರ್ಣಗಳು ಯಾ ರೆಕ್ಕೆಗಳು. ಯಾವಾಗ? ಅವು ಪರಿಪೂರ್ಣ, ತೃಪ್ತ ಹಾಗೂ ಚಲನಬಲ ಸಂಪನ್ನವಾದಾಗ ; ಆ ರೆಕ್ಕೆಗಳು ಸೂರ್ಯನ ಥಳಥಳಿಸುವ ಜ್ಞಾನದಿಂದ ಪರಿಪೂರ್ಣ, ಪರಿತೃಪ್ತ ಎನ್ನಿಸಿರುತ್ತವೆ. ಏಕೆಂದರೆ ಈ ಹಕ್ಕಿಗಳು ಉಷೆಯೊಡನೆಯೇ ಎಚ್ಚರ ಹೊಂದುವಂಥವುಗಳು. ಇವು (ಗರುತ್ಮಂತರು) ರೆಕ್ಕೆಯುಳ್ಳ ಕ್ರಿಯಾಶಕ್ತಿಗಳು - ತಮ್ಮ ಗೂಡುಗಳಿಂದ ಬರುವುದು, ಸ್ವರ್ಗಪುತ್ರಿ ನಮ್ಮ ಮಾನವ್ಯ ಮನೋಧರ್ಮವನ್ನು (ಅದರ ನೆಲೆಯನ್ನು) ಮೆಟ್ಟಿ ಒತ್ತಿದಾಗಲೇ - "ದಿವೋ ಅಸ್ಯ ಸಾನವಿ". ವೇಗವಾಗಿ ಏರಿ ಹಾರುವ ಯಮಳರ ತೇರೆಳೆವ ಹಂಸಗಳು ಈ ಬಗೆಯವುಗಳು - "ಹಂಸಾಸೋ ಯೇವಾಂ ಮಧುಮಂತೋ ಅಸ್ರೃಧೋ ಹಿರಣ್ಯಪರ್ಣಾ ಉಹುವ ಉಷರ್‌ಬುಧಃ"

ಮಧುಮಯವಾದ ಈ ಸಪಕ್ಷ ಕ್ರಿಯಾಶಕ್ತಿಗಳು ಏರುತ್ತಲೇ, ನಮ್ಮ ಮೇಲೆ ಸ್ವರ್ಗಜಲರಾಶಿಯನ್ನು, ಉನ್ಮಾನಸಪ್ರಜ್ಞೆಯ ವೃಷ್ಟಿಯನ್ನು, ಸುರಿಸುತ್ತವೆ. ಅವು ಆನಂದೋದ್ರೇಕದ ಮೂಲ ಪ್ರವೃತ್ತಿಯೊಡನಿವೆ ; ಉಕ್ತ ಭಾವೋದ್ರೇಕವು ತನ್ನ ಅಮರ್ತ್ಯ ಮದ್ಯದ ದಿವ್ಯೋನ್ಮಾದದಿಂದ ಉಚ್ಛೃಂಖಲ, ಅಲೌಕಿಕ, ಲೋಕವಿಸ್ಮಾರಕ ಸ್ವರೂಪದ್ದಾಗಿರುತ್ತದೆ. "ಉದ ಪ್ರುತೋ ಮಂದಿನೋ ಮಂದಿನಿಸ್ಪೃಶಃ"- ಉಕ್ತ ಮಧುಮತ್ತ ಅಶ್ವ ಕ್ರಿಯಾ ಶಕ್ತಿಗಳು ಮೇಲೆ ಹೇಳಿದ ಆನಂದೋದ್ರೇಕದ ಮೂಲಕ ಸತತವೂ, ತದ್ವತ್, ಅತಿಮಾನಸ ಪ್ರಜ್ಞಾ ಸಂಬಂಧವುಳ್ಳವುಗಳಾಗಿರುತ್ತವೆ. ಅಂಥ ಅಶ್ವಶಕ್ತಿನೀತ ರಥಾರೂಢ ದಿವ್ಯಾಹ್ಲಾದಾಧಿಪತಿಗಳು ಋಷಿಯ ಸೋಮಾಹುತಿ ಗ್ರಹಣಕ್ಕಾಗಿ, ಜೇನುತುಪ್ಪದ ತೊಟ್ಟುಗಳಿಗಾಗಿ ಜೇನುಹುಳುಗಳು ಬರುವಂತೆ ಬರುತ್ತಾರೆ - ಮಧ್ವೋ ನ ಮಕ್ಷಃ ಸವನಾನಿ ಗಚ್ಛತಃ". ಅವರೇ ಸ್ವತಃ ಮಾಧುರ್ಯ ಮಾಡುವವರು ; ಜೇನು ಹುಳುಗಳಂತೆ, ಮತ್ತೂ ಹೆಚ್ಚಿನ ಸಂತಸಕ್ಕಾಗಿ ಏನಾದರೂ ಅದರಲ್ಲಿದ್ದೀತೆಂದು ತಾವೇ ಮಾಡಿದ ಮಧುವಿನತ್ತ ಆ ದೇವತಾ ಶಕ್ತಿಗಳೇ ಹಾರುತ್ತವೆ.

ಯಜ್ಞದಲ್ಲಿ ಆಗಲೇ ವರ್ಣಿಸಲಾದ ಅಶ್ವಿಗಳ ಉದ್ಗಮನದ ಫಲವಾಗಿ ಉಂಟಾದ ಸಾಮಾನ್ಯ ಜ್ಯೋತಿಃಸ್ಫುರಣ (ಪ್ರಬೋಧೋದಯ) ಎಂಬುದು ಅಗ್ನಿಯ ಬೆಂಕಿಗಳ ನೆರವಿನಿಂದ ಫಲಿಸುವಂತೆ ಮಾಡಲಾಗುತ್ತದೆ. ದಿವ್ಯ ಸಂಕಲ್ಪದ ಜ್ವಾಲೆಗಳು, ಆತ್ಮದಲ್ಲಿ ಉರಿಯುತ್ತಿರುವ ದಿವ್ಯ ಪ್ರಣೋದವು, ಕೂಡಾ ಕೋಡಿವರಿವ ಮಧುರಸದಿಂದ ಒದ್ದೆಯಾಗುವುವು ; ಆದ್ದರಿಂದ ಉಕ್ತ ಬೆಂಕಿಗಳು ಯಜ್ಞ[1] ನೇತೃತ್ವವೆಂಬ ತಮ್ಮ ಮಹಾ ಕರ್ತವ್ಯವನ್ನು ಪ್ರತಿದಿನವೂ ಪರಿಪೂರ್ಣವಾಗಿ ಮಾಡಿ, ಕ್ರಮಗತಿಯಿಂದ ಅದರ ಧ್ಯೇಯದತ್ತ ಯಾಜಕನು ಹೋಗುವಂತೆ ಮಾಡುತ್ತವೆ. ಆ ಪ್ರಗತಿಗಾಗಿ ಅವು (ಅಗ್ನಿಯ ಬೆಂಕಿಗಳು) ತಮ್ಮ ಜ್ವಲ ಜಿಹ್ವೆಗಳಿಂದ ಅಶ್ವಿಗಳ ದೈನಂದಿನ ಸಂದರ್ಶನಕ್ಕಾಗಿ ಅವರನ್ನು ಒಲಿಸಿಕೊಳ್ಳುತ್ತವೆ. ಆ ಅಶ್ವಿಗಳು ಪ್ರಾತಿಭ ಪ್ರಜ್ಞಾಸ್ಫುರಣಗಳಿಂದ ಲಬ್ಧವಾದ ಬೆಳಕಿನಿಂದ ಪಜ್ಜಳಿಸುತ್ತಾ ಅವನ್ನೆತ್ತಿ ತಮ್ಮ ಮಿರಿಮಿರಿ ಮಿಂಚುವ ಕ್ರಿಯಾಶಕ್ತಿಯಿಂದ[2] ಮೇಲೊಯ್ಯುತ್ತಾರೆ. "ಸ್ವಧ್ವರಾಸೋ ಮಧು ಮಂತೋ ಅಗ್ನಯ ಉಸ್ರಾ ಜರಂತೇ ಪ್ರತಿವಸ್ತೋರ್ ಅಶ್ವಿನಾ."

---

೧. ಅಧ್ವರ=ಯಜ್ಞ-ಇದೊಂದು ಗುಣವಾಚಕ. ಆದ್ದರಿಂದ ಅಧ್ವರಯಜ್ಞವೆಂಬುದು •ಇದಿ ಶಬ್ದ=ಹಾದಿ ಹಿಡಿದುಹೋಗುವ ಯಾಜ್ಞಿಕ ಕರ್ಮ=ಆ ಯಜ್ಞವು ಕ್ರಮಗತಿಯ ಅಥವಾ ಪ್ರಯಾಣದ ಸ್ವರೂಪವುಳ್ಳದ್ದು. ದಿವ್ಯ ಸಂಕಲ್ಪನಾದ ಅಗ್ನಿಯು ಯಾತ್ರಿಕರ ನಾಯಕನು.

೨. ಶವಿರಯಾ ಧಿಯಾ-ಋಗ್ವೇದ-I.೩.೨

ಅಗ್ನಿಯ ಈ ಆಕಾಂಕ್ಷೆಯು, ಯಾಜಕನು ತನ್ನ ಶುದ್ಧ ಹಸ್ತಗಳಿಂದ ಸಂಪೂರ್ಣ ಸೂಕ್ಷ್ಮದೃಷ್ಟಿಯಿಂದ ಹಾಗೂ ತನ್ನಾತ್ಮದ ಬಲದಿಂದ ಯಾತ್ರಾಂತವನ್ನು ತಲುಪಲು ಸಮರ್ಥನಾದಾಗ - ಎಂಥ ವಿಘ್ನಗಳು ಎದುರಾದರೂ ಅವುಗಳನ್ನು ಖಂಡಿಸಿ, ವಿರೋಧಿಗಳನ್ನು ಹತ್ತಿಕ್ಕಿ ಅಮೃತೀಕರಣದ ಮದ್ಯವನ್ನು ಹಿಂಡುಗಲ್ಲುಗಳಿಂದ ಹಿಂಡಿ ತೆಗೆದು ಆ ಕಲ್ಲುಗಳು ಕೂಡಾ ಅಶ್ವಿಗಳ ಮಧುವಿನಿಂದ ತುಂಬುವಂತೆ ಮಾಡಿದಾಗ -ಪೂರ್ತಿಗೊಳ್ಳುತ್ತದೆ- "ಯನ್ ನಿಕ್ತ ಹಸ್ತಸ್ ತರಣಿರ್ ವಿಚಕ್ಷಣಃ, ಸೋಮಂಸುಪಾವ ಮಧುಮಂತಂ ಅದ್ರಿಭಿಃ". ಏಕೆಂದರೆ, ವ್ಯಕ್ತಿಯ ವಿಷಯಭೋಗವು ಅಶ್ವಿಗಳ ತ್ರಿಪುಟ ತೃಪ್ತಿಗಳಿಂದ ಮತ್ತು ಚತುರ್ಥವಾದ ಪರಮಸತ್ಯದಿಂದ ಸುರಿವ ಆಹ್ಲಾದದಿಂದ ಪೂರೈಸಲ್ಪಡುತ್ತದೆ. ಯಾಜ್ಞಿಕನ ಶುಚಿರ್ಭೂತ ಕೈಗಳು[೩] ("ನಿಕ್ತಹಸ್ತಃ") ಬಹುಶಃ ಸಾಂಕೇತಿಕವಾಗಿ ಪವಿತ್ರೀಕೃತ ಮಾನವನನ್ನು ಪ್ರತಿನಿಧಿಸುತ್ತವೆ ; ಪೂರ್ತ ಜೈವಿಕ ಶಕ್ತಿಯಿಂದ ಆಹ್ಲಾದಾನುಭವದ ಅರ್ಹತೆ ಬರುತ್ತದೆ ; ಸ್ಪಷ್ಟವಾದ ಮಾನಸದರ್ಶನದ ಪ್ರಣೋದ ("ವಿಚಕ್ಷಣ") ಎಂಬುದು ಸತ್ಯಪ್ರಬೋಧಿತ ಮನದ ಗುರುತು. ಇವೇ ಮನಃಸ್ಥಿತಿಗಳು-ಮನ, ಜೀವ (ಪ್ರಾಣ) ಮತ್ತು ಕಾಯ ; ಇವುಗಳಲ್ಲಿ ಮಧುವು ತುಂಬಿ ಹರಿಯುವುದು ಅಶ್ವಿಗಳ ತ್ರಿಪುಟ ತೃಪ್ತಿಗಳಿಂದ.

ಯಾಜ್ಞಿಕನು ಹೀಗೆ ಯಜ್ಞದಲ್ಲಿ ಮಧುಮಯ ಆಹ್ಲಾದಕ ವಸ್ತುಗಳನ್ನು ಹಿಂಡಿ ಹುಯ್ದಾಗ ದಿವ್ಯ ಸಂಕಲ್ಪದ ಜ್ವಾಲೆಗಳು ಹತ್ತಿರದಿಂದಲೇ ಅವುಗಳನ್ನು ಕುಡಿಯಬಲ್ಲವು. ಆಗ ಅವರನ್ನು ಬಲಿದೆ ಅಥವಾ ದೂರದ ಹಾಗೂ ದುರ್ಗಮವಾದ ಪ್ರಜ್ಞಾಸ್ತರದಿಂದ ಕರೆದುಕೊಂಡು ಬರಬೇಕಾಗಿಲ್ಲ. ಆದುದರಿಂದ ಆ ಅಶ್ವಿಗಳು ಕೂಡಲೇ ನಿರ್ವಿಘ್ನವಾಗಿ ಕುಡಿದು ಉತ್ಸಾಹ ನಿರ್ಭರ ಪ್ರಣೋದವಂತರಾಗುವರು, ವೇಗವಂತರಾಗುವರು ಮತ್ತು ಓಡಿ, ಆಡಿ ನಮ್ಮ ಇಡೀ ಇರವಿನಲ್ಲಿ ತುಂಬಿಕೊಂಡು ನಮ್ಮ ಅವಪ್ರಜ್ಞೆಯನ್ನು ವಿಸ್ತರಿಸಿ, ತೇಜಃಪುಂಜವಾದ ಜ್ಯೋತಿರ್ಮಯ ಮನದ ಪ್ರಪಂಚದ ಪ್ರತಿಮೆಯನ್ನಾಗಿ ಪರಿವರ್ತಿಸುತ್ತಾರೆ - "ಆಕೇನಿಪಾಸೋ ಅಹಭಿರ್ ದವಿಧ್ವತಃ ಸ್ವರ್ಣಶುಕ್ರಂ ತನ್ವಂತ ಆ ರಜಃ". ಪ್ರಯುಕ್ತವಾದ ಈ ಸೂತ್ರವು ೨ನೆಯ ಋಕ್ಕಿನಿಂದ ಪುನರಾವರ್ತಿತವಾಗಿದೆ - ಅದರಲ್ಲಿ ಯಾವ ಬದಲಾವಣೆಯನ್ನೂ ಮಾಡಲಾಗಿಲ್ಲ. ಆದರೆ ಇಲ್ಲಿ ಅದು ದಿವ್ಯ ಸಂಕಲ್ಪದ ಜ್ವಾಲೆಗಳು ಯಾ ಚತುಷ್ಪುಟ ತೃಪ್ತಿಯು ಕೆಲಸಮಾಡುವ ಕರ್ತ. ಅಲ್ಲಿ ದೇವತೆಗಳ ನಿರ್ವಿಘ್ನ ಉಡ್ಡಯನವು ಅಪ್ರಯತ್ನತಃ ಕೇವಲ ದಿವ್ಯಜ್ಯೋತಿ, ಸ್ವರ್ಣದಿಂದ ಸಾಗುತ್ತದೆ, ಇಲ್ಲಾದರೋ ಆ ಉಡ್ಡಯನಕ್ಕೆ (ಉದ್ಗಮನಕ್ಕೆ) ಯಾಜ್ಞಿಕನ ದೃಢಶ್ರಮವೂ ಮಹತ್ವಾಕಾಂಕ್ಷೆಯೂ ಯಜ್ಞದಲ್ಲಿ ಅಗತ್ಯವಾಗಿದೆ ; ಏಕೆಂದರೆ ಆಗ ಅದು ಕಾಲದಿಂದ, ದಿನದಿಂದ, ಮುಗಿಯಬೇಕಾದ ಕೆಲಸವೆನ್ನಿಸುತ್ತದೆ - "ಅಹಭಿ": - ಪರಸತ್ಯದ ಉತ್ತರೋತ್ತರ ಉದಯ ಆಗ ಆಗಬೇಕಾಗುತ್ತದೆ. ಅದು ಒಂದಾದ ಮೇಲೊಂದರಂತೆ ರಾತ್ರಿಯನ್ನು ಗೆಲ್ಲಬೇಕಾಗುತ್ತದೆ ; ಉಷಾಸೋದರಿಯರ ಅವಿಚ್ಛಿನ್ನ ಉತ್ತರೋತ್ತರೋದಯದಿಂದಾಗಬೇಕಾಗುತ್ತದೆ. ಇದು ದಿವ್ಯೋಷೆಯನ್ನು ಕುರಿತ ಸೂಕ್ತದಲ್ಲಿ ಆಗಲೇ ಬಂದಿದೆ. ಪಳಚ್ಚನೆ ಹೊಳೆದ ಬೆಳಕಿನಿಂದ, ಥಟ್ಟನೆ ಮೂಡಿದ ಪ್ರಬೋಧದಿಂದ, ಬಂದ ಎಲ್ಲವನ್ನೂ ಮಾನವನು ಒಮ್ಮೆಲೇ ಧರಿಸಲಾರನು, ಹಿಡಿದಿಟ್ಟುಕೊಳ್ಳಲಾರನು; ಅದು ಪದೇ ಪದೇ ಪುನರಾವರ್ತಿತವಾದಾಗ ಕ್ರಮಶಃ ಅವನು ಆ ಬೆಳಕಿನಲ್ಲಿ ಬೆಳೆಯಬಲ್ಲವನಾಗುವನು.

---

೩. ಕೈ ಅಥವಾ ತೋಳು ಅನೇಕಸಲ, ಸಾಂಕೇತಿಕ-ಅದರಲ್ಲೂ ಇಂದ್ರನ ಎರಡು ಹಸ್ತಗಳೋ ಬಾಹುಗಳೋ ಉಕ್ತವಾದಾಗ.

ಆದರೆ ದಿವ್ಯ ಸಂಕಲ್ಪದ ಅಗ್ನಿಗಳಷ್ಟೇ ಅಲ್ಲದೆ, ಇತರ ಶಕ್ತಿಗಳೂ ಅವಪ್ರಜ್ಞೆಯ ಮಾರ್ಪಾಡಿಗೆ ಅಗತ್ಯ - ಅವು ಕೆಲಸ ಮಾಡಬೇಕು. ಪರಸತ್ಯದ ಸೂರ್ಯನೂ ತನ್ನ ಪ್ರಭಾಮಯ ಮಾರ್ಗದಲ್ಲಿ ರಥವೇರಿ ಹೊರಡುತ್ತಾನೆ-"ಸೂರ್ಯಶ್ಚಿದ್ ಅಶ್ವಾನ್ ಯುಯುಜಾನ ಈಯತೇ". ಅಶ್ವಿಗಳೂ ಮಾನವಪ್ರಜ್ಞೆಗಾಗಿ ಜ್ಞಾನವನ್ನು ತೆಗೆದುಕೊಂಡು ಹೊರಡುತ್ತಾರೆ. ಆ ಜ್ಞಾನವು ಎಲ್ಲ ಪ್ರಗತಿಮಾರ್ಗಗಳನ್ನೂ ಕುರಿತದ್ದು. ಅದರಿಂದ ಸಾಮಶ್ರುತ್ಯದ ಬಹುಪಾರ್ಶ್ವೀಯ ಪ್ರಗತಿಯ ಚಲನೆಯು ಸಂಪೂರ್ಣವಾಗಲೆಂಬುದೇ ಉದ್ದೇಶ. ಬಹುಮಾರ್ಗಗಾಮಿಯದ ಈ ಚಲನೆಯನ್ನು ದಿವ್ಯಜ್ಞಾನದ ಬೆಳಕಿನೊಡನೆ ಕೂಡಿಸುವುದು ತನ್ನ ಸ್ವೇಚ್ಛಾಧೀನ ಸ್ವವ್ಯವಸ್ಥೆಯನ್ನು ತನ್ನ ಕಾರ್ಯದಲ್ಲಿ ಮಾಡುವ ಪ್ರಕೃತಿಯು ;-ಸಂಕಲ್ಪವೂ, ಜ್ಞಾನವೂ ಕೂಡಿದೊಡನೆಯೇ ಆಕೆ ಆ ಪೂರ್ಣ ಸಾಮಶ್ರುತ್ಯವುಳ್ಳ, ಪೂರ್ಣ ಸ್ವಪ್ರಜ್ಞೆಯ ಯಾ ಪ್ರಜ್ಞಾತ ಆತ್ಮಪ್ರಜ್ಞೆಯ, ಪ್ರಾತಿಭವಾಗಿ ಮಾರ್ಗದರ್ಶಿತ ಕೆಲಸವನ್ನು ಮಾಡುತ್ತಾಳೆ. - "ವಿಶ್ವಾನ್ ಅನು ಸ್ವಧಯಾ ಚೇತಥಸ್ಪಥಃ".

ವಾಮದೇವನು ತನ್ನ ಸೂಕ್ತವನ್ನು ಮುಗಿಸುತ್ತಾನೆ. ಅದರ ಹೆಚ್ಚಿನ ಪ್ರಕಾಶದೊಡನೆ ಅವನು ಆ ಚಂಚಲ್ವಿಚಾರವನ್ನು ಗಟ್ಟಿಯಾಗಿ ಹಿಡಿದಿಟ್ಟುಕೊಳ್ಳುವುದರಲ್ಲಿ ಸಮರ್ಥನಾಗಿದ್ದಾನೆ ; ಮತ್ತು ಮಂತ್ರಕ್ಕಿರುವ ರೂಪಿಸುವ ಹಾಗೂ ನೆಲೆ ನಿಲ್ಲಿಸುವ ಶಕ್ತಿಯಿಂದ ಅವನು ತನ್ನಲ್ಲೇ ರಥವನ್ನು ವ್ಯಕ್ತಗೊಳಿಸಿಕೊಂಡು ಅಶ್ವಿಗಳ ಅಮರ್ತ್ಯ ಆಹ್ಲಾದ ಚಲನೆಗೆ ಅನುಕೂಲ ಮಾಡಿಕೊಟ್ಟಿದ್ದಾನೆ ; ಒಂದು ಆನಂದದ ಚಲನೆಯೆಂಬುದು ಹಳೆಯದಾಗದು, ಮಾಸದು, ಬರಿದಾಗದು ಯಾ ಸುಸ್ತಾಗದು - ಅದು ಕಾಲಾತೀತ, ಅಕ್ಷಯ್ಯ ಮತ್ತು ಅಮರ್ತ್ಯ, "ಅಜರಃ"-ಏಕೆಂದರೆ, ಅದು ಮುಕ್ತವೂ, ಪೂರ್ಣವೂ ಆದ ಕ್ರಿಯಾಶಕ್ತಿಗಳಿಂದ ಎಳೆಯಲ್ಪಟ್ಟ ತೇರಿನದು ; ಪ್ರಮಿತ, ಬೇಗ ಸುಸ್ತಾಗುವ, ಕೂಡಲೇ ಹೇಳಿದ್ದನ್ನು ಕೇಳದ ಮಾನವ್ಯ ಪ್ರಾಣಪ್ರಜ್ಞೆಯ ರೂಪದ ಕುದುರೆಗಳಿಂದ ಅದು ಎಳೆಯಲ್ಪಟ್ಟಿಲ್ಲ - "ಪ್ರ ವಾಂ ಅವೋಚಂ ಅಶ್ವಿನಾ ಧಿಯಂಧಾಃ, ರಥಃ ಸ್ವಶ್ವೋ ಅಜರೋಯೋ ಅಸ್ತಿ". ಈ ಚಲನೆಯಲ್ಲಿ ಕ್ಷಣಾರ್ಧದಲ್ಲಿ ಅವು ಕೆಳ ಪ್ರಜ್ಞಾಸ್ತರಗಳ ಲೋಕಗಳನ್ನೆಲ್ಲಾ ತಿರುಗಿ ಬರುವುವು - ಆ ಲೋಕಗಳನ್ನು ತಮ್ಮ ಸವೇಗ ಬೆಳಕಿನಿಂದ ಮುಚ್ಚಿ ಮಾನವನಲ್ಲಿರುವ (ನಿಗೂಢ) ವೈಶ್ವತ್ರಿಕ ಭೋಗಸ್ಥಾನಕ್ಕೆ ಸೇರುತ್ತವೆ- ಅವು ಅವನು ಕೊಟ್ಟ ಸೋಮಾಹುತಿಗಳಿಂದ ತುಂಬಿರುತ್ತವೆ ; ಅವನ್ನು ಪ್ರವೇಶಿಸಿರುತ್ತವೆ ; ವಿರೋಧಿಗಳನ್ನು ಹಿಮ್ಮೆಟ್ಟಿಸಿರುತ್ತವೆ ಮತ್ತು ಮಹಾಧ್ಯೇಯವನ್ನು ತಲುಪುತ್ತವೆ : "ಯೇನ ಸದ್ಯಃ ಪರಿ ರಜಾಂಸಿ ಯಾಥೋ ಹವಿಷ್ಮಂತಂ ತರಣಿಂ ಭೋಜಂ ಅಚ್ಛ".



# XI

# ಅಮರ್ತ್ಯತೆಯ ರಚನಕಾರರಾದ ಋಭುಗಳು

## ಋಗ್ವೇದ I.20

**ಅಯಂ ದೇವಾಯ ಜನ್ಮನೇ ಸ್ತೋಮೋ ವಿಪ್ರೇಭಿರಾಸಯಾ ।**
**ಅಕಾರಿ ರತ್ನ ಧಾತಮಃ ॥ ೧ ॥**

೧. ಎಲವೋ, ಸ್ಫೂರ್ತ (ಪ್ರಬೋಧಿತ) ಮನಗಳಿಂದ ಬಾಯುಸಿರಿನ ಮೂಲಕ ದಿವ್ಯಜನ್ಮಕ್ಕೆ ಕೊಟ್ಟ ದೃಢೀಕರಣವು ಪೂರ್ಣವಾಗಿ ಪರಮಾಹ್ಲಾದವನ್ನು ಕೊಡುತ್ತದೆ.

**ಯ ಇಂದ್ರಾಯ ವಚೋಯುಜಾ ತತಕ್ಷುರ್ಮನಸಾ ಹರೀ ।**
**ಶಮೀಭಿರ್ಯಜ್ಞ ಮಾಶತ ॥ ೨ ॥**

೨. ಇಂದ್ರನ ಪಜ್ಜಳಿಸುವ ಎರಡು ಕುದುರೆಗಳು ವಾಗ್ದೇವಿಯಿಂದ ರಥದ ನೊಗಕ್ಕೆ ಕಟ್ಟಲ್ಪಟ್ಟಂಥವು. ಅವನ್ನು ಇಂದ್ರನಿಗಾಗಿ ಮನಸ್ಸು ನಿರ್ಮಿಸಿತು . ಕರ್ಮ ನಿರ್ವಹಣೆಯ ಮೂಲಕ ಅವೂ ಯಜ್ಞದಲ್ಲಿ ಸುಖಪಡುತ್ತವೆ.

**ತಕ್ಷನ್ನಾ ಸತ್ಯಾಭ್ಯಾಂ ಪರಿಜ್ಮಾನಂ ಸುಖಂ ರಥಂ ।**
**ತಕ್ಷಂ ಧೇನುಂ ಸಬರ್ದುಘಾಂ ॥ ೩ ॥**

೩. ಜಲಯಾನದ ಯಮಳಾಧಿಪತಿಗಳಿಗಾಗಿ ಅವರ ಸುಖಕರ ರಥವನ್ನು ಅವರು ನಿರ್ಮಿಸಿದರು. ಆ ರಥವು ವಿಶ್ವವ್ಯಾಪಕ ಚಲನೆಯುಳ್ಳದ್ದು ; ಅವರು ಸಾಕುವ ದನವನ್ನೂ ನಿರ್ಮಿಸಿದರು - ಅದು ಮಧುರ ಕ್ಷೀರವನ್ನು ಕೊಡುತ್ತದೆ.

**ಯುವಾನಾ ಪಿತರಾ ಪುನಃ ಸತ್ಯಮಂತ್ರಾ ಋಜೂಯವಃ ।**
**ಋಭವೋ ವಿಷ್ಟ್ಯಕ್ರತ ॥ ೪ ॥**

೪. ಓ ಋಭುಗಳೇ, ನಿಮ್ಮ ವ್ಯಾಪ್ತಿಯಲ್ಲಿ ನಿಮ್ಮ ಜನನೀಜನಕರನ್ನು ಮತ್ತೆ ಜವ್ವನಿಗರನ್ನಾಗಿ ಮಾಡಿದಿರಿ - ನೀವು ನೇರದಾರಿಯನ್ನು ಹುಡುಕುವವರು ಮತ್ತು ನಿಮ್ಮ ಮನದ ಅನಿಸಿಕೆಗಳಲ್ಲಿ ಪರಸತ್ಯವನ್ನು ಹೊಂದಿರುವಿರಿ.

**ಸಂವೋ ಮದಾಸೋ ಅಗ್ಮತೇಂದ್ರೇಣ ಚ ಮರುತ್ವತಾ ।**
**ಆದಿತ್ಯೇಭಿಶ್ಚ ರಾಜಭಿಃ ॥ ೫ ॥**

೫. ಮದ್ಯದ ಉಲ್ಲಾಸವು ಸಂಪೂರ್ಣವಾಗಿ ನಿಮ್ಮಲ್ಲಿ ಉಂಟಾಗುತ್ತದೆ. ನಿಮ್ಮ ಜೊತೆಗಿರುವ ಮರುತ್ಸಮೇತನಾದ ಮತ್ತು ಅದಿತಿಸುತರಾದ ರಾಜರೊಡನಿರುವ ಇಂದ್ರನಲ್ಲೂ ಉಂಟಾಗುತ್ತದೆ.

**ಉತತ್ಯಂ ಚಮಸಂ ನವಂ ತ್ವಷ್ಟುರ್ದೇವಸ್ಯ ನಿಷ್ಕೃತಂ ।**
**ಅಕರ್ತ ಚತುರಂ ಪುನಃ ॥ ೬ ॥**

೬. ಈ ಹೊಸದಾದ ಹಾಗೂ ಪೂರ್ಣಗೊಳಿಸಲ್ಪಟ್ಟ ತ್ವಷ್ಟಕೃತ ತಟ್ಟೆಯನ್ನು ನೀವು ನಾಲ್ಕನ್ನಾಗಿ ಮಾಡಿದಿರಿ.

**ತೇನೋ ರತ್ನಾನಿ ಧತ್ತನತ್ರಿರಾ ಸಾಪ್ತಾನಿ ಸುನ್ವತೇ ।**
**ಏಕಮೇಕಂ ಸುಶಸ್ತಿಭಿಃ ॥ ೭ ॥**

೭. ಆದುದರಿಂದ , ನಮಗಾಗಿ ತ್ರಿಸಪ್ತ (ಮೂರೇಳು) ಆನಂದೋದ್ರೇಕಗಳನ್ನು ಸ್ಥಿರಗೊಳಿಸಿರಿ - ಅವುಗಳಲ್ಲಿ ಪ್ರತಿಯೊಂದನ್ನೂ ಪ್ರತ್ಯೇಕವಾಗಿ ಅವುಗಳ ಪರಿಪೂರ್ಣ ವ್ಯಕ್ತೀಕರಣಗಳಿಂದ ಸಂಸ್ಥಾಪಿಸಿರಿ.

**ಅಧಾರಯಂತ ವಹ್ನಯೋ ಭಜಂತ ಸುಕೃತ್ಯಯಾ ।**
**ಭಾಗಂ ದೇವೇಷು ಯಜ್ಞಿಯಂ ॥ ೮ ॥**

೮. ದೇವತೆಗಳ ನಡುವೆ ಅವರು ಯಾಜ್ಞಿಕ ಹವಿರ್ಭಾಗದ ಆಸ್ವಾದವನ್ನು ತಮ್ಮ ಕಾರ್ಯಗಳಲ್ಲಿಯ ಪೂರ್ಣತೆಯಿಂದ ವಿಭಜಿಸಿ ಸ್ಥಿತಿಯಲ್ಲಿರಿಸಿ ತಮ್ಮಲ್ಲೇ ಹಿಡಿದಿಟ್ಟುಕೊಂಡರು.



# ವ್ಯಾಖ್ಯಾನ

ಋಭುಗಳು ಸೂರ್ಯನ ಕಿರಣಗಳೆಂದು ಸೂಚಿಸಲಾಗಿದೆ. ವರುಣ, ಮಿತ್ರ, ಭಗ, ಅರ್ಯಮರಂತೆ ಪರಸತ್ಯ ಸಂಕೇತವಾದ ಸೂರ್ಯಜ್ಯೋತಿಯ ಶಕ್ತಿಗಳವರೆಂಬುದು ನಿಜ. ಆದರೆ ವೇದದಲ್ಲಿ ಅಮರ್ತ್ಯತೆಯ ನಿರ್ಮಾಪಕರಾದ ಕುಶಲಕಲೆಗಾರರೆಂಬುದು ಅವರ ವಿಶಿಷ್ಟ ಲಕ್ಷಣ. ಜ್ಞಾನಬಲದಿಂದಲೂ ತಮ್ಮ ಆ ಕರ್ಮ ಪೂರ್ಣತೆಯಿಂದಲೂ ಮೊದಲು ಮನುಜರೇ ಆಗಿದ್ದ ಅವರು ಅನಂತರ ದೇವತಾಸ್ಥಿತಿಯನ್ನು ಸಾಧಿಸಿಕೊಂಡವರು ಎಂದು ಚಿತ್ರಿಸಲಾಗಿದೆ. ತಮ್ಮ ದೈವಿಕ ಹಕ್ಕಿನಂತೆ ತಾವು ಸಂಪಾದಿಸಿದ ದಿವ್ಯ ಪ್ರಕಾಶದ ಹಾಗೂ ದಿವ್ಯ ಜ್ಞಾನದ ಸ್ಥಿತಿಯನ್ನು ಮನುಜನು ಪಡೆಯುವಂತೆ ಇಂದ್ರನು ಮಾಡ ಹೊರಟಾಗ ಅವನಿಗೆ ನೆರವೀಯುವುದೇ ಅವರ ಕರ್ತವ್ಯವು. ಅವರನ್ನು ಸಂಬೋಧಿಸಿದ ಸೂಕ್ತಗಳು ವೇದದಲ್ಲಿ ವಿರಳ ಮತ್ತು ಮೊದಲ ನೋಟಕ್ಕೆ ಅವು ಅತ್ಯಂತ ಸಂದಿಗ್ಧಾರ್ಥವುಳ್ಳವುಗಳಾಗಿ ತೋರುತ್ತವೆ. ಏಕೆಂದರೆ, ಆ ಸೂಕ್ತಗಳ ತುಂಬಾ ಕೆಲವು ರೂಪಕೋಕ್ತಿಗಳಿವೆ ಮತ್ತು ಕೆಲ ಸಂಕೇತಗಳು ಯಾವಾಗಲೂ ಪುನರುಕ್ತವಾಗಿವೆ. ಆದರೆ ಒಮ್ಮೆ ವೇದದ ಮುಖ್ಯ ಸೂಚಕಗಳು ಗೊತ್ತಾಗಿಬಿಟ್ಟವೆಂದರೆ, ತದ್ವಿರುದ್ಧವಾಗಿ ಆ ಸಂಕೇತಗಳು ಅತ್ಯಂತ ಸ್ಪಷ್ಟವೂ ಸರಳವೂ ಆಗುವುವಲ್ಲದೆ, ಅವು ವೈದಿಕ ಅಮರ್ತ್ಯತೆಯ (ಅಮರತೆಯ) ಸಮನ್ವಿತ ಮತ್ತು ಆಕರ್ಷಕ ಶ್ರುತಿ ಪ್ರಮಾಣದ ಮೇಲೆ ಸ್ಪಷ್ಟ ಬೆಳಕು ಬೀರುವ ಕಲ್ಪನೆಯಾಗಿ ಪರಿವರ್ತಿಸಲ್ಪಡುತ್ತವೆ.

ಋಭುಗಳು ಜ್ಯೋತಿಃಶಕ್ತಿಗಳು. ಅವು ಭೌತ ಪದಾರ್ಥಗಳಿಗಿಳಿದು ಬಂದಂಥವುಗಳು ಮತ್ತು ಅಲ್ಲಿ ಮಾನವ್ಯ ಕೌಶಲ ವಿಶೇಷಗಳಾಗಿ ಹುಟ್ಟಿ ದಿವ್ಯ ಹಾಗೂ ಅಮರ ಸ್ವರೂಪಿಗಳಾಗಬೇಕೆಂದು ಸತತವಾಗಿ ಹಾರೈಸುತ್ತಿರುವವುಗಳು. ಈ ಲಕ್ಷಣದಲ್ಲಿ ಸುಧನ್ವಪುತ್ರರೆಂದು[೧] ಆ ಋಭುಗಳನ್ನು ಕರೆಯಲಾಗಿದೆ. ಅದು ಪೈತೃಕನಾಮ ; ಅದು ಅವರ ಹುಟ್ಟಿನ ದೃಷ್ಟಾಂತ ಕಥೆ ಮಾತ್ರ - ಅಂದರೆ ಭೌತದ ಪೂರ್ಣ ಶಕ್ಯತೆಯನ್ನು ಮಿಂಚುವ ಕ್ರಿಯಾಶಕ್ತಿಯು ಮುಟ್ಟಿದ್ದರಿಂದ ಋಭುಗಳು ಹುಟ್ಟಿದರಂತೆ. ಆದರೆ ಅವರ ನಿಜಸ್ವಭಾವದಲ್ಲಿ ಅವರು ಈ ಮಿಂಚುವ ಕ್ರಿಯಾಶಕ್ತಿಗಳಿಂದ ಜನಿಸಿದವರು ಮತ್ತು ಕೆಲವು ಸಲ ಹಾಗೇ ಅವರನ್ನು ಕರೆಯಲಾಗಿದೆ. ಋಭುವು "ಇಂದ್ರಾಪತ್ಯ, ಜ್ಯೋತಿಷ್ ಪ್ರಣೋದದ ಮೊಮ್ಮಗ" (IV.37.4) ಎನ್ನಲಾಗಿದೆ. ಮಾನವನಲ್ಲಿರುವ ದಿವ್ಯಮನವೆನ್ನಿಸಿದ ಇಂದ್ರನು ಪ್ರಜ್ವಲ ಪ್ರಣೋದಜಾತನು - ಅಗ್ನಿಯು ಶುದ್ಧ ಪ್ರಣೋದಜಾತನಾಗಿರುವ ಹಾಗೆ. ದಿವ್ಯ ಮನನಾದ ಇಂದ್ರನಿಂದಲೇ ಅಮರ್ತ್ಯತ್ವಾಪೇಕ್ಷೆಯು ಮಾನವನಲ್ಲಿ ಉಂಟಾಗುತ್ತದೆ ಎಂಬುದಿಲ್ಲಿ ಗಮನಾರ್ಹವಾಗಿದೆ.

---

೧. "ಧನ್ವನ್" ಎಂಬುದಿಲ್ಲಿ ಬಿಲ್ಲಿನ ಅರ್ಥವನ್ನು ಹೇಳುವುದಿಲ್ಲ - ಆದರೆ ಭೌತ ಪದಾರ್ಥದ ಘನಕ್ಷೇತ್ರ ಯಾ ಮರುಕ್ಷೇತ್ರ ಎಂಬುದಿಲ್ಲಿ ಅದಕ್ಕೆ ಉಚಿತವಾದ ಅರ್ಥ. ಇದನ್ನು ಕೆಲವೆಡೆ ಗುಡ್ಡ (ಬೆಟ್ಟ) ಯಾ ಬಂಡೆ ಎಂದೂ ಅವುಗಳಿಂದ ಜಲಗಳೂ ಕಿರಣಗಳೂ ಹೊರಬೀಳುವುವೆಂದೂ ವರ್ಣಿಸಲಾಗಿದೆ.

ಋಭುತ್ರಯದ ನಾಮಗಳು ಆ ಋಭುಗಳ ಜನನಾನುಕ್ರಮವಾಗಿವೆ. (೧) ಋಭು ಯಾ ಋಭುಕ್ಷಂ = ಕುಶಲ ಜ್ಞಾತಾರ ಯಾ ಜ್ಞಾನದಲ್ಲಿ ರೂವಾರಿ ; (೨) ವಿಭ್ವ ಯಾ ವಿಭು = ವ್ಯಾಪಕನು, ಸ್ವತನ್ತ್ರಾನನು ಮತ್ತು (೩) ವಾಜ = ಸಂಪೂರ್ಣತೆ ಯಾ ಹೇರಳ ಶ್ರೇಯಃ ಸಮೃದ್ಧಿ. ಅವರ ಹೆಸರುಗಳು ಅವರ ವಿಶಿಷ್ಟ ಸ್ವಭಾವಗಳ ಸೂಚಕಗಳಾಗಿವೆ, ಕರ್ತವ್ಯಗಳ ಕುರುಹುಗಳಾಗಿವೆ. ಆದರೆ ಅವರು ನಿಜವಾಗಿಯೂ ತ್ರಿಮೂರ್ತಿಗಳು ; ಆದ್ದರಿಂದ ಋಭುಗಳೆಂದು ಸಾಮಾನ್ಯವಾಗಿ ರೂಢಿತಃಅವರನ್ನು ಕರೆದರೂ ಹಾಗೆಯೇ ವಿಭುಗಳೆಂದೂ ವಾಜರೆಂದೂ ಅವರನ್ನು ಕರೆಯಲಾಗಿದೆ. ಹಿರಿಯನಾದ ಋಭುವು ಮಾನವನ ಮನವನ್ನು ಹೊಕ್ಕ ಮೊದಲಿಗ. ಅವನಿಂದ ಮಾನವನು ತನ್ನ ವಿಚಾರವನ್ನು ರೂಪಿಸಿಕೊಂಡು ಅಮರ್ತ್ಯತೆಯ ಸ್ವರೂಪಗಳನ್ನು ರಚಿಸುತ್ತಾನೆ ; ಈ ರಚನೆಗೆ ವಿಭ್ವನು ವ್ಯಾಪಕತೆಯನ್ನೀಯುತ್ತಾನೆ ; ಕನಿಷ್ಟನಾದ ವಾಜನು ಇಡೀ ಕರ್ಮಕ್ಕೆ ಬೇಕಾದ ದಿವ್ಯ ಕಾಂತಿಯ ಹಾಗೂ ಸತ್ವದ ಸಮೃದ್ಧಿಯನ್ನೀಯುತ್ತಾನೆ. ಅಮರ್ತ್ಯತೆಯ ಈ ಕರ್ಮಗಳೂ ರೂಪಗಳೂ ಋಭುಗಳಿಂದ ಫಲಿಸುತ್ತವೆ - ಅವರಿಂದಲೇ ಕಾರ್ಯವು ಪೂರ್ತಿಯಾಗುತ್ತದೆ. ಇಂಥ ಕಾರ್ಯಗಳೂ ನಿರ್ಮಿತಿಗಳೂ ಅಮರ್ತ್ಯತೆಯವುಗಳು. ಇವುಗಳನ್ನು ಅವರು ಫಲಿತಗೊಳಿಸುತ್ತಾರೆ. ಇವು ಸತತವಾಗಿ ಪುನರಾವೃತ್ತಿ ಹೊಂದುತ್ತಿರುತ್ತವೆ. ಅದಕ್ಕೆ ಕರ್ತೃವು ಮಹಾವಿಚಾರ ಪ್ರಣೋದವು. ಕ್ಷೇತ್ರವೂ ವಸ್ತುವೂ ಮಾನವನ ಮನಸ್ಸು. ಅವನ್ನು ಶಕ್ತಿಯಿಂದ ಸಾಧಿಸಲಾಗುತ್ತದೆ. ಸರ್ಜನಾತ್ಮಕತೆಯಲ್ಲೂ ಫಲಪ್ರದತೆಯಲ್ಲೂ ಅವು ಪೂರ್ಣತೆಯನ್ನು ಪಡೆಯುತ್ತವೆ. - "ಸ್ವಪಸ್ಯ ಯಾ ಸುಕೃತ್ಯಯಾ" - ಅಮರ್ತ್ಯತೆಯ ಸಾಧನೆಗಿವು ಅನಿವಾರ್ಯವಾದ ಉಪಾಧಿಗಳು. ಅಮರ್ತತ್ಯತೆಯ ಕುಶಲ ಕಲೆಗಾರರ ಈ ನಿರ್ಮಿತಿಗಳು, ಪ್ರಸ್ತುತ ಸೂಕ್ತದಲ್ಲಿ ಸಂಕ್ಷಿಪ್ತವಾಗಿ ತಾತ್ಪರ್ಯಿಸಿ ಹೇಳಲಾಗಿರುವಂತೆ, ಇಂದ್ರನ ಅಶ್ವಗಳು, ಅಶ್ವಿಗಳ ತೇರು, ಸಿಹಿವಾಲ್ಕರೆವ ಹಸು, ವಿಶ್ವಪಿತೃಗಳ ಯೌವನ ಎಂಬಿವು ವಸ್ತು ನಿರ್ಮಾಪಕನಾದ ತ್ವಷ್ಟೃವಿನಿಂದ ಮೂಲತಃ ತಯಾರಾದ ದೇವತಾಪಾನಪಾತ್ರೆಯ ಚಾತುರೀಕರಣ.

ಈ ಸೂಕ್ತವು ತನ್ನ ಉದ್ದೇಶ ಸೂಚನೆಯೊಂದಿಗೆ ಆರಂಭವಾಗುತ್ತದೆ. ಇದು ಋಭುಶಕ್ತಿಯ ಸಮರ್ಥನೆ. ಈ ಸಮರ್ಥನೆಯು ದಿವ್ಯಜನ್ಮಕ್ಕಾಗಿ ಮಾಡಿದ್ದು ; ಮತ್ತು ಋಭುಗಳು ಜನಿಸಿದ ದಿವ್ಯ ಜ್ಯೋತಿಯನ್ನು ಧರಿಸಿದ ಹಾಗೂ ಲಬ್ಧ ಪ್ರಬೋಧಮನಸ್ಕರಾದ ಮಾನವರಿಂದ ಮಾಡಲ್ಪಟ್ಟದ್ದು. ಇದು ಬಾಯುಸಿರಿನಿಂದಾದದ್ದು- ಆ ಉಸಿರೇ ಪ್ರಪಂಚದಲ್ಲಿಯ ಜೈವಿಕ ಶಕ್ತಿಯು. ದಿವ್ಯ ಜೀವನದ[೧] (ಏಳು ಮೂರಲೆಯ) ಮೂರೇಳರ ಆನಂದೋದ್ರೇಕವನ್ನು - ಬ್ರಹ್ಮಾನಂದದ ಸಮಗ್ರ ಉನ್ಮೋದವನ್ನು ಮಾನವಾತ್ಮದಲ್ಲಿ ಖಾತ್ರಿಯಾಗಿ ನೆಲೆ ನಿಲ್ಲಿಸುವುದೇ ಈ ಋಭುಶಕ್ತಿ ಸಮರ್ಥನೆಯ ಉದ್ದೇಶ.

ಈ ದಿವ್ಯ ಜನನವು ಋಭುಗಳಿಂದ ಪ್ರತಿನಿಧಿಸಲ್ಪಟ್ಟಿದೆ. ಅವರು ಒಮ್ಮೆ ಮಾನವರಾಗಿದ್ದು ಆಮೇಲೆ ಅಮರರಾದವರು. ವಿಶ್ವಯಜ್ಞದ ತುತ್ತತುದಿಯಾದ ಊರ್ಧ್ವಮುಖ ಮಾನವವಿಕಾಸದ ಮಹಾಕಾರ್ಯವನ್ನು ಪೂರ್ತಿಗೊಳಿಸುವುದರಿಂದ ಈ (ಸುಜಾತರಾದ) ಋಭುಗಳೂ ದಿವ್ಯಶಕ್ತಿಗಳೊಡನೆ ಯಾಗದಲ್ಲಿ ತಮ್ಮ ಹವಿರ್ಭಾಗವನ್ನು ಪಡೆದಿದ್ದಾರೆ. ಅವರು ನಿರ್ಮಾಪಕ ಬಲವುಳ್ಳ ಉದಾತ್ತೀಕೃತ ಮಾನವ್ಯ ಕ್ರಿಯಾಶಕ್ತಿಗಳು-ಊರ್ಧ್ವಗಮನದ ಆಧಾರ ಶಕ್ತಿಗಳು. ಅವರು ಮಾನವನ ದಿವ್ಯೀಕರಣದ (ದೈವೀಕರಣ) ದೇವತಾಕಾರ್ಯದಲ್ಲಿ ಸಹಾಯ ಮಾಡುವವರು. ಅವರ ಸಿದ್ಧಿಗಳಲ್ಲೆಲ್ಲಾ

---

೧. "ಅಯಂ ದೇವಾಯ ಜನ್ಮನೇ, ಸ್ತೋಮೋ ವಿಪ್ರೇಭಿ ರಾಸಯಾ ; ಅಕಾರಿ ರತ್ನಧಾತಮಃ"

ಕೇಂದ್ರಸ್ಥಾನವುಳ್ಳದ್ದೆಂದರೆ-ಇಂದ್ರನ ತೇಜೋಮಯ ಅಶ್ವದ್ವಯದ ನಿರ್ಮಾಣ (ಸರ್ಜನ) ತೇರಿನ ಚಲನೆಗಾಗಿ ವಾಗ್ದೇವಿಯು ಕಟ್ಟಿದ ಹಯದ್ವಯ - ಮಂತ್ರದಿಂದ ನೊಗಕ್ಕೆ ಹೂಡಲಾದ ವಾಜಿದ್ವಯ, ಹಾಗೇ ಮನಸ್ಸು ನಿರ್ಮಿಸಿದ ತುರಗದ್ವಯ ! ಪ್ರಬುದ್ಧ ಯಾ ಪ್ರಜ್ವಲ ಮನದ ಮುಕ್ತ ಸಂಚಾರಕ್ಕೆ ಮಾನವನಲ್ಲಿರುವ ದಿವ್ಯ ಮಾನಸವು ಮಿಕ್ಕೆಲ್ಲಾ ಅಮರ್ತ್ಯೀಕರಿಸುವ ಕೆಲಸಗಳಿಗೂ[೭] ಉಪಾಧಿ, ಅಪರಿಹಾರ್ಯ ಕಾರಣ.

ಅಶ್ವಿಗಳ ರಥವನ್ನು ರಚಿಸುವುದು ಋಭುಗಳ ಎರಡನೆಯ ಕೆಲಸ - ಅಶ್ವಿನೀ ದೇವತೆಗಳು ಮಾನವ ಪ್ರಯಾಣದ ನಿಯಾಮಕ ಒಡೆಯರು. ಮಾನವನಲ್ಲಿಯ ಆನಂದದ ಸುಖವಾದ ಆ ಚಲನೆಯು ವಿಶ್ವವ್ಯಾಪಕ ; ಅದರ ಕಾರ್ಯದಿಂದ, ಅದು ಜಗಗಳು ಸತ್ತಾಸ್ತರಗಳು ಇವುಗಳನ್ನು ಸರ್ವತ್ರ ತುಂಬಿಕೊಂಡು ಬಿಡುವಂಥವುಗಳು. ಆ ಕಾರ್ಯವು, ಆರೋಗ್ಯ, ಯೌವನ, ಬಲ, ಭೌತಿಕ ಮಾನವನ ಪೂರ್ಣತೆ, ಭೋಗ ಪಾತ್ರತೆ ಮತ್ತು ಜೈವಿಕ ಕಾರ್ಯಾರ್ಹತೆ. ಇವುಗಳನ್ನೂ ಹಾಗೂ ಮನೋಜೀವಿಗೆ ಸಂತುಷ್ಟ ಕ್ರಿಯಾಶಕ್ತಿಯನ್ನೂ ತರುತ್ತದೆ-ಒಂದೇ ಮಾತಿನಲ್ಲಿ ಹೇಳುವುದಾದರೆ, ಮಾನವನ ಸರ್ವಾಂಗಗಳಿಗೂ ಸತ್ತೆಯ ಶುದ್ಧ ಬೆಳಕಿನ ಪ್ರಣೋದವನ್ನು ತಂದು ಕೊಡುತ್ತದೆ.[೮]

ಋಭುಗಳ ಮೂರನೆಯ ಕೆಲಸವೆಂದರೆ, ಸಿಹಿವಾಲ್ಕರೆವ ದನವನ್ನು ನಿರ್ಮಿಸುವುದು. ಅದನ್ನು ಮುಚ್ಚಿದ ಚರ್ಮದಿಂದ ಈ ದನವನ್ನು ಹಡೆಯಲಾಯಿತೆಂದು ಬೇರೆ ಕಡೆ ಹೇಳಿದೆ. ಆ ಚರ್ಮ ಕವಚವೆಂದರೆ, ಪ್ರಕೃತಿಯ ಹೊರ ಚಲನೆ ಮತ್ತು ಕಾರ್ಯಗಳ ಸ್ವರೂಪದ ಮುಸುಕು - ಋಭುಗಳಾ ಮುಸುಕನ್ನು ತೆರೆದರು. ಪೋಷಕ ಹಸುವೆಂದರೇ ವೈಶ್ವತ್ರಿಕ ರೂಪಗಳು ಮತ್ತು ವೈಶ್ವತ್ರಿಕ ಚಲನ ಚೋದನೆ-"ವಿಶ್ವಜುವಂ ವಿಶ್ವರೂಪಾಂ" - ಇನ್ನೊಂದು ವಿಧವಾಗಿ ಹೇಳುವುದಾದರೆ, ಆ ಅಕಳೇ ಪ್ರಥಮ ವಿಕಿರಣವು - ಅದಿತಿಯು, ಅನಂತಪ್ರಜ್ಞೆಯು - ಅಪ್ರಮೇಯ ಸತ್ತಾತ್ಮಕನ ಅನುಪಾಧಿಕ ಪ್ರಜ್ಞೆಯು - ಸರ್ವಲೋಕಗಳ ತಾಯಿಯು. ಪ್ರಕೃತಿಯ ಮುಸುಕಿನ ಅದೃಶ್ಯ ಚಲನೆಯಿಂದ ಋಭುಗಳು ಆ ಪ್ರಜ್ಞೆಯನ್ನು ಹೊರತಂದರು. ಅವರಿಂದಲೇ ನಮ್ಮಲ್ಲಿ ಆ ದನದ ಆಕೃತಿಯೊಂದು ನಿರ್ಮಿಸಲ್ಪಟ್ಟಿತು. ದ್ವಿತ್ವದ ಶಕ್ತಿಯ ಕಾರ್ಯದಿಂದ ಆ ದನವನ್ನು ಅದರ ಕರುವಿನಿಂದ ಪ್ರತ್ಯೇಕಿಸಲಾಯಿತು. ಅದರ ಕರುವೆಂದರೆ ಕೆಳಲೋಕದ (ಅಧಃ ಪ್ರಪಂಚದ) ಜೀವಾತ್ಮನು. ಋಭುಗಳು ಈ ಜೀವಾತ್ಮನನ್ನು ಅದರ ಅನಂತ ತಾಯಿಯಾದ ಅದಿತಿಯ[೯] ಸತತ ಸಂಪರ್ಕದಲ್ಲಿ ಪುನಃ ಇಡಿಸುತ್ತಾರೆ.

ಋಭುಗಳ ಇನ್ನೊಂದು ಮಹಾಕಾರ್ಯವೆಂದರೆ, ಜಗತ್ತಿನ ವೃದ್ಧಮಾತಾಪಿತೃಗಳಾದ ಸ್ವರ್ಗ-ಮರ್ತ್ಯಗಳನ್ನು (ದ್ಯಾವಾಪೃಥಿವಿಯರನ್ನು) ಪುನಃ ಜವ್ವನಿಗರನ್ನಾಗಿ ಮಾಡುವುದು. ಹೇಗೆ? ತಮ್ಮ ಪೂರ್ವಕರ್ಮಬಲದಿಂದ ; ಇಂದ್ರಜ್ಯೋತಿಯಿಂದ ಆ ಕರ್ಮಗಳು ನಡೆದದ್ದು - ಅಶ್ವಿಗಳ ಚಲನೆಯಿಂದ ಆ ಕರ್ಮಕ್ಕೆ ಬಲ ಬಂದಿತ್ತು. ಪೋಷಕ ದನದ ಹಾಲಿನಿಂದ ಆ ಶಕ್ತಿ ಋಭುಗಳ ಕರ್ಮಕ್ಕೆ ದೊರಕಿತ್ತು. "ದ್ಯೌ" ಅಥವಾ ಸ್ವರ್ಗವು ಮಾನಸಪ್ರಜ್ಞೆ, ಪೃಥಿವಿಯು ಭೌತಿಕ ಪ್ರಜ್ಞೆಯು.

---

೭. "ಯ ಇಂದ್ರಾಯ ವಚೋಯುಜಾ ತತಕ್ಷುಃ, ಮನಸಾ ಹರಿ ; ಶಮಿಭಿರ್ ಯಜ್ಞಮಾಶತ."

೮. "ತಕ್ಷನ್ ನಾಸ್‌ತ್ಯಾಭ್ಯಾಂ ಪರಿಜ್ಮಾನಂ ಸುಖಂ ರಥಂ"

೯. "ತಕ್ಷನ್ ಧೇನುಂ ಸ ಬರ್ದುಘಾಂ". ಮಿಕ್ಕ ವಿವರಗಳಿಗೆ ಋಗ್ವೇದ IV.33.4.8 ; IV . 36.4 ರಗಳಿಗೆ ಇತ್ಯಾದಿಗಳನ್ನು ನೋಡಿರಿ.

ಈ ಪ್ರಜ್ಞಾದ್ವಯವು ಬಹುಕಾಲ ಏಕೀಕೃತವಾಗಿ ಬಿದ್ದಿದ್ದವೆಂದು ಹೇಳಲಾಗಿದೆ, ಜರಾಜರ್ಜರಿತವಾಗಿ ಈಯೆರಡು ಪ್ರಜ್ಞೆಗಳು ನೆಲಕಚ್ಚಿ ಉರುಳಿಬಿದ್ದಿದ್ದವಂತೆ - ನೆಲಕ್ಕುರುಳಿದ ಯೂಪಸ್ತಂಭಗಳಂತೆ. ಅವು ಸವೆದು ಸಾಕಾಗಿ ನರಳುತ್ತಿದ್ದವಂತೆ. ಆಗ ಋಭುಗಳು ಸೂರ್ಯಗೃಹಕ್ಕೆ ಏರಿ ಹೋಗಿ ಸೂರ್ಯಸತ್ಯದ ಅಪ್ರಚ್ಛನ್ನ ವೈಭವದಲ್ಲಿ ಸೂರ್ಯನಿರುವುದನ್ನು ಕಂಡು ಅಲ್ಲಿ ಹನ್ನೆರಡು ದಿನಗಳವರೆಗೆ ನಿದ್ರಿಸಿ, ಆಮೇಲೆ ಭೂಮ್ಯಾಕಾಶಗಳಲ್ಲಿ ಸಂಚರಿಸಿ ಪರಸತ್ಯದ ಹೇರಳ ವೃಷ್ಟಿಧಾರೆಗಳಿಂದ ಅವನ್ನು ತುಂಬಿ, ಸಾಕಿ ಆ ಭೂಮ್ಯಾಕಾಶಗಳಿಗೆ - ಮರ್ತ್ಯಾಮರ್ತ್ಯ ಲೋಕಗಳಿಗೆ - ಪ್ರಾಯವನ್ನೂ, ಯುವಶಕ್ತಿಯನ್ನೂ, ಬಲವನ್ನೂ ಕೊಡಿಸಿದರು. ಋಭುಗಳು ತಮ್ಮ ಕಾರ್ಯದಿಂದ ಸ್ವರ್ಗವನ್ನು ವ್ಯಾಪಿಸುತ್ತಾರೆ ; ನಮ್ಮ ಮಾನಸ ಪ್ರಜ್ಞೆಗೆ[೩] ದಿವ್ಯ ಪುಷ್ಟಿಯನ್ನುಂಟು ಮಾಡುತ್ತಾರೆ. ಬಲವನ್ನು ನೀಡುತ್ತಾರೆ.[೪] ಪರಸತ್ಯ ಸೌಧದಿಂದ ಅವರು ತಮ್ಮ ಕರ್ಮದ ಕರಾರಾದ ಪೂರ್ಣತೆಯನ್ನೂ ಸತ್ಯದ ಋಜುಮಾರ್ಗವನ್ನೂ ಹಾಗೂ ಸ್ವತಃ ಸತ್ಯವನ್ನೂ, ಅದರ ಇತರ ನಿರಪೇಕ್ಷವಾದ ಸರ್ವವಿಚಾರಗತ, ಮಂತ್ರಗತ, ಪರಿಣಾಮಕತೆಯನ್ನೂ ಮಾನವ ಮಾನಸಿಕತೆಯಲ್ಲಿ[೫] ಫಲಿಸುವಂತೆ ಮಾಡುತ್ತಾರೆ. ಈ ಶಕ್ತಿಯನ್ನು ಹೊತ್ತುಕೊಂಡು ಅವರು ವ್ಯಾಪಕವಾಗಿ ನೀಚ ಪ್ರಪಂಚವನ್ನು (ತಮ್ಮ ಉಚ್ಚ ಪ್ರಪಂಚದಿಂದ ಇಳಿದು) ಹೊಕ್ಕು ಅಮರ್ತ್ಯತೆಯ ಅಮೃತರಸ ಸಾರವನ್ನು ಅದರಲ್ಲಿ ಸುರಿಯುತ್ತಾರೆ.[೬]

ಋಭುಗಳು ಮಾನವ ಯಜ್ಞದಲ್ಲಿ ತಮ್ಮ ಕರ್ಮದಿಂದ ಪಡೆದ ಆನಂದೋದ್ರೇಕಗಳನ್ನು ಅಮರ್ತ್ಯತೆಯ ಸಾರದ ಮದ್ಯದೊಡನೆ ತರುತ್ತಾರೆ. ಅವರೊಡನೆ ಯಜ್ಞವೇದಿಕೆಯಲ್ಲಿ ಇಂದ್ರನೂ ಮರುತ್ತುಗಳೂ ಅರ್ಥಾತ್ ದಿವ್ಯ ಮನವೂ ಅದರ ವಿಚಾರ ಪ್ರಣೋದಗಳೂ - ಮತ್ತು ನಾಲ್ಕು ಜನ ಮಹಾರಾಜರೂ ಅರ್ಥಾತ್ ಅದಿತಿ ಪುತ್ರರಾದ (ಅನಂತ ಪುತ್ರರಾದ) ವರುಣ, ಮಿತ್ರ, ಅರ್ಯಮ, ಭಗರೂ ಅರ್ಥಾತ್ ಪರಸತ್ಯದ ಪಾವಿತ್ರ್ಯ ಮತ್ತು ಪ್ರೇಮ-ಜ್ಯೋತಿ-ಸಾಮರ್ಥ್ಯಗಳೂ ಅದರ ಶಕ್ತಿ ಮತ್ತು ಆಕಾಂಕ್ಷೆಗಳೂ ಅದರ ಶುದ್ಧವೂ ಸುಖಕರವೂ ಆದ ವಸ್ತುಭೋಗವೂ - ಬಂದು ಕುಳಿತುಕೊಳ್ಳುತ್ತಾರೆ.[೭]

ಆ ಯಜ್ಞದಲ್ಲಿ ದೇವತೆಗಳು ನಾಲ್ಕು ಬಟ್ಟಲುಗಳಲ್ಲಿ ಕುಡಿಯುತ್ತಾರೆ "ಚಮಸಂ ಚತುರ್ವಯಂ" (IV.36.4) ಏನನ್ನು?. ಅಮೃತ ಧಾರೆಗಳನ್ನು. ಏಕೆಂದರೆ ಮೊದಲು ತ್ವಷ್ಟವು ವಸ್ತು ನಿರ್ಮಾಪಕನಾಗಿ ಮನುಜನಿಗೆ ಕೊಟ್ಟದ್ದು ಒಂದೇ ಬಟ್ಟಲನ್ನು (ತಟ್ಟೆಯನ್ನು) ಅರ್ಥಾತ್ ಭೌತಪ್ರಜ್ಞೆ, ಭೌತ ಶರೀರ, ಈ ದ್ವಂದ್ವದಲ್ಲೇ ಸತ್ತಾಹ್ಲಾದವನ್ನು ದೇವರಿಗೆ ಅವನು ಅರ್ಪಿಸಬೇಕಾಗಿತ್ತು. ಋಭುಗಳ ಶಕ್ತಿಯಾದ ಮಿಂಚರಿವು ಪುನರ್ನಿರ್ಮಿತವಾಗುವಾಗ ಋಭುಗಳು ಮಾನವನಲ್ಲಿ ಆ ದ್ವಂದ್ವದಿಂದ, ಅದನ್ನೇ ಮೂಲದ್ರವ್ಯವನ್ನಾಗಿ ಮಾಡಿಕೊಂಡು, ನಾಲ್ಕು ಸ್ತರಗಳಾದ ಭೌತಪ್ರಜ್ಞೆ, ಜೈವಿಕಪ್ರಜ್ಞೆ, ಮನಃಪ್ರಜ್ಞೆ ಮತ್ತು ಕಾರಣ ಯಾ ಆದರ್ಶ ಶರೀರ ಪ್ರಜ್ಞೆ ಎಂಬಿವನ್ನು ಹೊಸದಾಗಿ ಸಿದ್ಧ ಮಾಡಿದರು. ಮೊದಲಿದ್ದ

---

೩. ಋಗ್ವೇದ IV.33.2, 3, 7 ; IV.36.1, 3.; I. 161.7

೪. ಋಗ್ವೇದ IV.33.1,2.

೫. ಋಗ್ವೇದ V.36.3

೬. "ಯುವಾನಾ ಪಿತರಾ ಪುನಃ, ಸತ್ಯಮಂತ್ರಾ ಋಜೂಯವಃ ಋಭವೋ ವಿಷ್ಟ್ಯಕ್ರತ".

೭. "ಸಂವೋ ಮದಾಸೋ ಅಗ್ಮತ ಇಂದ್ರೇಣಚ ಮರುತ್ವತಾ ಆದಿತ್ಯೇಭಿಶ್ಚ ರಾಜಭಿಃ".

ಭೌತತ್ವದ ಜೊತೆಗೆ ಮತ್ತೆ ಮೂರು ಸೇರಿ ನಾಲ್ಕು ಪ್ರಜ್ಞೆಗಳಾದವು[೧] - ಅವೇ ಉಕ್ತ ನಾಲ್ಕು ಬಟ್ಟಲುಗಳು.

ಋಭುಗಳು ನಾಲ್ಕು ತಟ್ಟೆಗಳನ್ನು ಮಾನವನಿಗೆ ಮಾಡಿ ಕೊಟ್ಟಿದ್ದರಿಂದ ಅವನು ಪರಸತ್ಯ ಪ್ರಜ್ಞೆಯಲ್ಲಿ ಬದುಕಲು ಸಾಧ್ಯವಾಯಿತು. ಪೂರ್ಣತಾ ಸಿದ್ಧಿ ಹೊಂದಿದ ನರನಲ್ಲಿ ಅವರು ಮೂರೇಳು (ಏಳುಮೂರು) ಪರಮೋಚ್ಚ ಸತ್ತಾನಂದೋದ್ರೇಕವನ್ನು ಸುರಿದಾಗ, ಅವನು ಮಾನಸ, ಜೈವಿಕ ಮತ್ತು ಶಾರೀರಿಕ (ಭೌತಿಕ) ಪ್ರಜ್ಞೆಗಳಲ್ಲಿ ಅದನ್ನು ದೃಢಪಡಿಸಿ ಇಟ್ಟುಕೊಳ್ಳಲು ಶಕ್ತನಾದನು. ಇವುಗಳಲ್ಲಿಯ ಪ್ರತಿಯೊಂದರ ಪ್ರತ್ಯೇಕ, ಸದ್ಯೋ ನಿರಪೇಕ್ಷ (ಸರ್ವತಂತ್ರ ಸ್ವತಂತ್ರ) ಆನಂದೋದ್ರೇಕವನ್ನೂ ಪೂರ್ಣವಾಗಿ ಮಾನವನಿಗವರು ಕೊಡಬಲ್ಲವರಾದರು-ಅಷ್ಟೇ ಅಲ್ಲ - ಅವೆಲ್ಲವನ್ನೂ ಸಂಯುಕ್ತ ಇಡಿಯಾಗಿಯೂ ಕೊಡಬಲ್ಲವರಾದರು.[೨]

ಋಭುಗಳಿಗೆ ಈ ಎಲ್ಲಾ ಸತ್ತಾನಂದ ಪ್ರವಾಹಗಳನ್ನೂ ಹಿಡಿದು ಮಾನವನ ಮನದಲ್ಲಿ ನಿಲ್ಲಿಸುವ ಶಕ್ತಿಯಿದೆ ; ಮತ್ತು ಆಯಾ ದೇವನಿಗೆ (ದೇವತೆಗೆ) ಸಲ್ಲಬೇಕಾದ ಭಾಗವನ್ನು ಅವರವರು ಪ್ರತ್ಯಕ್ಷರಾದಾಗ, ತಮ್ಮ ಕೆಲಸದ ಪೂರ್ಣತೆಯ ದೆಸೆಯಿಂದ ಅವರು ಹಂಚಿಕೊಡಲೂ ಶಕ್ತರಾದರು. ಅಂಥ ಪರಿಪೂರ್ಣ ವಿಭಜನೆಯು ಪರಿಣಾಮಕರವಾದ ಯಜ್ಞದ ಸಮಗ್ರ ಕರ್ಮವೆನ್ನಿಸುತ್ತದೆ.[೩]

ಋಭುಗಳಂಥವರು ; ಅವರನ್ನು ಮಾನವ್ಯ ಯಜ್ಞಕ್ಕೆ ಆಹ್ವಾನಿಸಲಾಗುತ್ತದೆ. ಆಗ ಅವರು ಬಂದು ತಮಗೆ ಮಾಡಿಕೊಂಡಂತೆಯೇ ಮಾನವನಿಗೂ ಅವರು ಅಮರ್ತ್ಯತೆಯ ವಸ್ತುಗಳನ್ನು ಮಾಡಿಕೊಡುತ್ತಾರೆ - ಅಂದರೆ ಮಾತ್ರ ಯಾಜಕನು "ಅನಂತತಾಪೂರ್ಣನೂ ಕಷ್ಟಕರ್ಮಾರ್ಹಶಕ್ತಿ ಸಂಪನ್ನನೂ ವೀರನೂ ಯುದ್ಧದಲ್ಲಿ ಶತ್ರುಹೃದಯ ಭೇದಕನೂ ಆನಂದೋತ್ಕರ್ಷಧಾರಣ ಶಕ್ತನೂ ವಾಜ-ವಿಭ-ಋಭು ಬೆಳೆಸಿ ಈಯುವ ಎಲ್ಲಾ ಕ್ರಿಯಾಶಕ್ತಿಗಳನ್ನೂ ನಿಯಂತ್ರಿಸಬಲ್ಲವನೂ ಆಗುವನು. ಏಕೆಂದರೆ, ನೀವೆಲ್ಲರೂ ದ್ರಷ್ಟಾರರು, ಚಿಂತಕರು ಮತ್ತು ಸ್ಪಷ್ಟದರ್ಶಿಗಳು ; ಹೀಗಿರುವಾಗ ನಮ್ಮಾತ್ಮದ ಈ ವಿಚಾರದಿಂದ ನಮ್ಮ ಜ್ಞಾನವನ್ನು ನಿಮಗೆ ಸಾರಿ ಹೇಳುತ್ತೇವೆ. "ನಮಗಿತ್ತ ಈ ಜ್ಞಾನದಿಂದ ನೀವು ನಮ್ಮ ವಿಚಾರಗಳೊಡನೆ ಸಂಚರಿಸಿ ನಮಗಾಗಿ ಎಲ್ಲ ಮಾನವ್ಯ ಸುಖಸಂತೋಷಗಳನ್ನೂ ಕೊಡಿರಿ - ಅರ್ಥಾತ್ - ಹೊಳೆವ ಹೇರಳ ಶ್ರೇಯಃ ಸಮೃದ್ಧಿ ಮತ್ತು ಚೀಜ ನೆಡುವ ಪ್ರಣೋದ ಮತ್ತು ಸರ್ವೋಚ್ಚ ಸೌಕರ್ಯ ಶುಭಗಳನ್ನು ಸಿದ್ಧಮಾಡಿರಿ. ಇಲ್ಲೇ ಅಪತ್ಯ, ಇಲ್ಲೇ ಶುಭ ಸೌಕರ್ಯ, ಇಲ್ಲೇ ಸ್ಫೂರ್ತಿಯ ಮಹಾಕ್ರಿಯಾಶಕ್ತಿ-ಇವುಗಳನ್ನು ನಿಮ್ಮ ಪ್ರಹ್ಲಾದ ಸ್ಥಿತಿಯಲ್ಲಿ ದೊರಕಿಸಿ ಕೊಡಿರಿ. ಓ ಋಭುಗಳೇ ನಮ್ಮ ಪ್ರಜ್ಞೆಯಲ್ಲಿ ನಾವು ಜಾಗರಿತರಾಗುವ ಅತಿಮಾನುಷ ಆ ಸುಸಂಪನ್ನ ವೈವಿಧ್ಯಮಯ ಅಪಾರ ಆನಂದಸಾಗರವನ್ನು ದೊರಕಿಸಿಕೊಡಿರಿ.[೧]



---

೧. "ಉತತ್ಯಂ ಚಮಸಂ ನವಂ, ತ್ವಷ್ಟುರ್ ದೇವಸ್ಯ ನಿಷ್ಕೃತಂ ; ಅಕರ್ತ ಚತುರಃ ಪುನಃ."

೨. "ತೇ ನೋ ರತ್ನಾನಿ ಧತ್ತನ, ತ್ರಿರ್ ಆ ಸಾಪ್ತಾನಿ ಸುನ್ವತೇ ; ಏಕಮೇಕಂ ಸುಶಸ್ತಿಭಿಃ."

೩. "ಆಧಾರಯಂತ ವಹ್ನಯೋಽಭಜಂತ ಸುಕೃತ್ಯಯಾ ; ಭಾಗಂ ದೇವೇಷು ಯಜ್ಞಿಯಂ."

೧. ಋಗ್ವೇದ IV.36.6-9

# XII

# ಸರ್ವವ್ಯಾಪಕನಾದ ವಿಷ್ಣುದೇವನು

## ಋಗ್ವೇದ I.154

**ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ।**
**ಯಃ ಪಾರ್ಥಿವಾನಿ ವಿಮಮೇ ರಜಾಂಸಿ ।**
**ಯೋ ಅಸ್ಕಭಾಯದುತ್ತರಂ ಸಧಸ್ಥಂ**
**ವಿಚಕ್ರಮಾಣ ಸ್ತ್ರೇ ಧೋರು ಗಾಯಃ ॥ ೧ ॥**

೧. ಈಗ ನಾನು ವಿಷ್ಣುವಿನ ಬಲಿಷ್ಠ ಕರ್ಮಗಳನ್ನು ಸಾರುತ್ತೇನೆ; ಪಾರ್ಥಿವ ಜಗತ್ತುಗಳನ್ನವನು ಅಳೆದವನು ; ನಮ್ಮ ಆತ್ಮಸಿದ್ಧಿಯ ಉನ್ನತತರ ಪೀಠವನ್ನವನು ಎತ್ತಿ ಹಿಡಿದವನು ಮತ್ತು ತನ್ನ ವೈಶ್ವತ್ರಿಕ ಚಲನೆಯ ಮೂರು ಹೆಜ್ಜೆಗಳಲ್ಲಿ ವಿಸ್ತಾರವಾಗಿ ತಿರುಗುವವನು.

**ಪ್ರತದ್ವಿಷ್ಣುಃ ಸ್ತವತೇ ವೀರ್ಯೇಣ ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ ।**
**ಯಸ್ಯೋರುಷು ತ್ರಿಷು ವಿಕ್ರಮಣೇಷ್ವಧಿಕ್ಷಿಯಂತಿ ಭುವನಾನಿ ವಿಶ್ವಾ ॥ ೨ ॥**

೨. ತನ್ನ ಬಲಿಷ್ಠತೆಯಿಂದ ವಿಷ್ಣುವು ಉನ್ನತ ಸ್ತರದಲ್ಲಿ ನೆಲೆ ನಿಲ್ಲುತ್ತಾನೆ. ಅವನು ಒಂದು ಭಯಂಕರ ಸಿಂಹದಂತಿದ್ದಾನೆ. ಕಠಿನ ಸ್ಥಲ ಸಂಚಾರಿಯಾಗಿದ್ದಾನೆ. ಹೌದು - ಅವನ ವಾಸಸ್ಥಳವು ಪರ್ವತದ ತುದಿಯಲ್ಲಿದೆ. ಅವನ ಮೂರು ವಿಸ್ತಾರವಾದ ಚಲನೆಗಳಲ್ಲಿ ಎಲ್ಲ ಜಗತ್ತುಗಳೂ ಇರಲು ಅವಕಾಶ ಪಡೆಯುತ್ತವೆ.

**ಪ್ರವಿಷ್ಣವೇ ಶೂಷಮೇತು ಮನ್ಮ ಗಿರಿಕ್ಷಿತ ಉರುಗಾಯಾಯ ವೃಷ್ಣೇ ।**
**ಯ ಇದಂ ದೀರ್ಘಂ ಪ್ರಯತಂ ಸಧಸ್ಥಮೇಕೋ ವಿಮಮೇ ತ್ರಿಭಿರಿತ್ಪದೇಭಿಃ ॥ ೩ ॥**

೩. ವಿಷ್ಣುವು ಸರ್ವವ್ಯಾಪಿ, ಎಲ್ಲೆಲ್ಲೂ (ವಿಸ್ತಾರವಾಗಿ) ತಿರುಗುವವನು, ಅವನೊಬ್ಬ ವೃಷಭ ; ಅವನ ವಾಸಸ್ಥಳವು ಪರ್ವತದ ಮೇಲಿದೆ. ಅವನು ತನ್ನ ಮೂರೇ ಮೂರು ಹೆಜ್ಜೆಗಳಿಂದ ನಮ್ಮ ವಿಶಾಲವಾದ ಮತ್ತು ಉದ್ದವಾದ ಆತ್ಮ ಸಿದ್ಧಿಗಳ ಪೀಠವನ್ನು ಒಬ್ಬನೇ ಒಬ್ಬನಾಗಿ ಎಲ್ಲಾ ಅಳೆದು ಮುಗಿಸಿದ್ದಾನೆ. ಅಂಥ ವಿಷ್ಣುವಿನೆಡೆಗೆ ನಮ್ಮ ಬಲವೂ ವಿಚಾರವೂ ಮುನ್ನಡೆಯಲಿ.

**ಯಸ್ಯತ್ರೀ ಪೂರ್ಣಾಮಧುನಾ ಪದಾನಿ ಅಕ್ಷೀಯಮಾಣಾ ಸ್ವಧಯಾ ಮದಂತಿ ।**
**ಯ ಉತ್ರಿಧಾತು ಪೃಥಿವೀ ಮುತದ್ಯಾಂ ಏಕೋದಾಧಾರಭುವನಾನಿವಿಶ್ವಾ ॥ ४ ॥**

४. ವಿಷ್ಣುವಿನ ಮೂರು ಹೆಜ್ಜೆಗಳು ಮಧುಮದ್ಯದಿಂದ ತುಂಬಿವೆ ಮತ್ತು ಅವು ನಾಶ ಹೊಂದುವುದಿಲ್ಲ. ಆದರೆ ತಮ್ಮ ಸ್ವಭಾವಾನುಸಾರವಾಗಿ ತಮ್ಮ ಸಾಮಶ್ಯತ್ಯದಿಂದ ಅವುಗಳ ಆನಂದೋದ್ರೇಕವುಳ್ಳವುಗಳಾಗಿವೆ. ಹೌದು, ಅವನು ಒಬ್ಬನೇ ಆದುದರಿಂದ ಮೂರುತತ್ವಗಳನ್ನೂ ಭೂಮ್ಯಾಕಾಶ ಮತ್ತು ಎಲ್ಲ ಜಗಗಳನ್ನೂ ಹೊತ್ತಿದ್ದಾನೆ.

**ತದಸ್ಯ ಪ್ರಿಯ ಮಭಿಪಾಥೋ ಅಶ್ಯಾಂ ನರೋ ಯತ್ರ ದೇವಯವೋ ಮದಂತಿ ।**
**ಉರುಕ್ರಮಸ್ಯ ಸಹಿ ಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ॥ ೫ ॥**

೫. ಎಲ್ಲಿ ಆನಂದೋದ್ರೇಕವನ್ನು ಪಡೆಯಲು ಜೀವಾತ್ಮಗಳು ಬಯಸುತ್ತವೆಯೋ ಪರಮಹ್ಲಾದವನ್ನು ಪಡೆಯಲಿಚ್ಛಿಸುವುವೋ ವಿಷ್ಣುವಿನ ಅಂಥ ಚಲನ ಧ್ಯೇಯವನ್ನು ನಾನು ಪಡೆದು ಅನುಭವಿಸುವಂತಾಗಲಿ. ಏಕೆಂದರೆ ಎಲ್ಲೆಲ್ಲೂ ತಿರುಗುವ ವಿಷ್ಣುವಿನ ಉನ್ನತತಮ ಹೆಜ್ಜೆಯಲ್ಲಿ ಆ ಮಾನವ ಮಿತ್ರನು ಮತ್ತು ಮಾಧುರ್ಯೋತ್ಸನು ಇದ್ದಾನೆ.

**ತಾವಾಂ ವಾಸ್ತೂನ್ಯುಶ್ಮಸಿ ಗಮಧ್ಯೈ ಯತ್ರಗಾವೋ ಭೂರಿ ಶೃಂಗಾ ಅಯಾಸಃ ।**
**ಅತ್ರಾಹ ತದುರುಗಾಯಸ್ಯವೃಷ್ಣಃ ಪರಮಂ ಪದಮವ ಭಾತಿ ಭೂರಿ ॥ ೬ ॥**

೬. ಓ ಯಮಳರೇ, ನಿಮ್ಮ ವಾಸಸ್ಥಳಗಳವು ; ನಮ್ಮ ಪ್ರಯಾಣ ಅಲ್ಲಿಗೇ. ಅಲ್ಲಿ ಬಹಳ ಕೋಡುಗಳುಳ್ಳ ದಿವ್ಯಜ್ಯೋತಿವ್ರಜಗಳು ಪ್ರಯಾಣಿಸುತ್ತಿವೆ. ಬೇಕಾದಲ್ಲಿ ತಿರುಗುವ ವಿಶ್ವಚಾಲಿಯಾದ ವಿಷ್ಣುವು ಇಲ್ಲಿ ಅದರ ಬಹುಮುಖ ಆಯಾಮತೆಯಲ್ಲಿ ಕೆಳಮುಖವಾಗಿ ಹೊಳೆಯುತ್ತಿದ್ದಾನೆ.



# ವ್ಯಾಖ್ಯಾನ

ಈ ಸೂಕ್ತದ ದೇವತೆಯು ವಿಷ್ಣು ; ಅವನು ವಿಶ್ವವ್ಯಾಪಿ. ಋಗ್ವೇದದಲ್ಲಿ ಅನಂತರದ ಮತದಲ್ಲಿ ಮಹತ್ವವನ್ನಿತ್ತ ರುದ್ರನಿಗೂ ವಿಷ್ಣುವಿಗೂ ಅಪ್ರತ್ಯಕ್ಷವಾದ ಅತಿನಿಕಟ ಸಂಬಂಧ ಅಥವಾ ಐಕ್ಯ ಸಂಬಂಧವೇ ಇದೆ ಎನ್ನಬಹುದಾಗಿದೆ. ರುದ್ರನು ಭಯಂಕರನೂ ಹಿಂಸಾಶೀಲನೂ ಆದ ದೇವತೆ ; ಆದರೆ ಅವನಲ್ಲಿ ಶಿವತ್ವದ ಅಂಶವೂ ಇದೆ - ಅದು ವಿಷ್ಣುವಿನ ಅತ್ಯುನ್ನತ ಆನಂದಮಯ ಸತ್ಯತೆಗೆ ಸರಿದೊರೆಯಾಗಿದೆ. ರುದ್ರನಿಗೆ ಸಾಮಾನ್ಯವಾಗಿ ತಕ್ಕದ್ದೆನಿಸಬಹುದಾದ "ಭಯಂಕರ ಸಿಂಹದಂತೆ ದುಷ್ಟ, ಕಷ್ಟ ಸ್ಥಳಗಳಲ್ಲಿ ಸಂಚಲಿಸುವವನೆಂಬ" ವರ್ಣನೆಯು ಪ್ರಸ್ತುತ ಸೂಕ್ತದಲ್ಲಿ ವಿಷ್ಣುವಿಗೆ ಅನ್ವಯಿಸಲಾಗಿದೆ. ಈ ಬಲಿಷ್ಠ ಹಿಂಸ್ರ ಲಕ್ಷಣವು ವಿಷ್ಣುವಿನ ಮಾನವ ಸ್ನೇಹಪರತೆಯನ್ನೂ ದೇವತಾ ಸಹಾಯಕ ಗುಣವನ್ನೂ ನೆರಳಮರೆಯಲ್ಲಿ ನೂಕಿದೆ. ವೇಗಾರ್ಭಟಗಳಿಂದ ರಣಕಹಳೆಗೆಚ್ಚರಾಗುವ ಮರುತ್ತುಗಳಿಗೆ ರುದ್ರನು ತಂದೆ. ಐದನೆಯಮಂಡಲದ ಕೊನೆಯ ಸೂಕ್ತದಲ್ಲಿ "ಏವಯಮರುತ್" ಎಂದು ಕರೆಯಲಾಗಿದೆ ; ಅಂದರೆ, ವಿಷ್ಣುವು ಮರುತ್ತುಗಳ ಹುಟ್ಟಿನಾಕರವೆಂದೂ ಅವರ ಬೆಳವಣಿಗೆಗೆ ಕಾರಣನೆಂದೂ ಅವನೇ ಸ್ವತಃ ಅವರ ರಣಾಸಕ್ತ ಪ್ರಣೋದಗಳ ಯಾ ಸೈನ್ಯಗಳ ಸಾಮಗ್ರ್ಯನೂ ಐಕ್ಯನೂ ಎಂದು ತಿಳಿಯಬೇಕು. ರುದ್ರನು ದೇವ ಯಾ ದೇವತೆ ; ಅವನು ವಿಶ್ವದಲ್ಲಿ ಮೇಲೇರುತ್ತಾ ಹೋಗುವವನು ; ವಿಷ್ಣುವೂ ಅದೇ ದೇವ ಯಾ ದೇವತೆ ; ಉದ್ಗಮನ ಪರಶಕ್ತಿಗಳನ್ನು ಎಚ್ಚರಿಸಿ ನೆರವೀವವನು.

ಯುರೋಪೀಯ ವಿದ್ವಾಂಸರು ವಿಷ್ಣು-ರುದ್ರರು ಸಣ್ಣ ದೇವತೆಗಳೆಂದೂ ಅವರ ಸ್ಥಾನ ಅಷ್ಟು ಮಹತ್ವದ್ದಲ್ಲವೆಂದೂ ಇಂದ್ರಾಗ್ನಿಗಳು ಇವರಿಗಿಂತ ಮೇಲಿನವರೆಂದೂ ಪುರಾಣ ದೇವತಾ ಶಾಸ್ತ್ರವು ಇವರನ್ನು ದೊಡ್ಡವರನ್ನಾಗಿ ಮಾಡಿದ್ದು ಆಮೇಲೆ ಎಂದೂ ಅಭಿಪ್ರಾಯ ಪಟ್ಟದ್ದುಂಟು. ಈಗಲೂ ಕೆಲವರು ವಿದ್ವಾಂಸರು ಶಿವಕಲ್ಪನೆ ಇತ್ತೀಚಿನದೆಂದೂ ದ್ರಾವಿಡರಿಂದ ಕಡ ತೆಗೆದುಕೊಂಡದ್ದೆಂದೂ ಆರ್ಯ ಸಂಸ್ಕೃತಿ ದಾಳಿ ಮಾಡಿದ್ದರ ವಿರುದ್ಧ ಇದು ಮೂಲದೇಶಿಯ ಸಂಸ್ಕೃತಿಯ ಪಾಕ್ಷಿಕ ಜಯವೆಂದೂ ಅಥವಾ ವೈದಿಕ ಧರ್ಮದ (ಆರ್ಯ ಸಂಸ್ಕೃತಿಯ) ಪಾಕ್ಷಿಕ ಗೆಲುವೆಂದೂ ನಂಬುತ್ತಾರೆ. ಈ ಅಭಿಪ್ರಾಯವು ತಪ್ಪು. ಇಂಥ ತಪ್ಪುಗಳು ವೈದಿಕ ವಿಚಾರದ ಸಂಪೂರ್ಣ ಅಪಾರ್ಥ ಮಾಡಿಕೊಂಡದ್ದರ ಫಲ. ಇದಕ್ಕೆ ಪ್ರಾಚೀನ ಬ್ರಾಹ್ಮಣೀಯ ಕರ್ಮಕಾಂಡವು ಕೆಲ ಮಟ್ಟಿಗೆ ಕಾರಣ - ಇದನ್ನು ಯುರೋಪೀಯ ವಿದ್ವತ್ತೆಯು ವೈದಿಕ ದೇವತಾಕಾಂಡದ ಚಿಕ್ಕದಾದ ಬಾಹ್ಯಾಂಶದಿಂದ ಎತ್ತಿಕೊಂಡು ಅತಿಶಯಿಸಿ ಹೊಸದಾದ ಅಪಾರ್ಥ ಸ್ವರೂಪವನ್ನು ಇದಕ್ಕೆ ಕೊಡಲಾಯಿತು.

ವೈದಿಕ ದೇವತೆಗಳ ಪ್ರಾಮುಖ್ಯವನ್ನು ಆಯಾ ದೇವತೆಗಳಿಗೆ ಮೀಸಲಾದ ಸೂಕ್ತಗಳ ಸಂಖ್ಯೆಯಿಂದಲಾಗಲಿ, ಋಷಿಗಳ ವಿಚಾರಗಳಲ್ಲಿ ಎಷ್ಟು ಸಲ ಆಯಾ ದೇವತೆಗಳನ್ನು ಆಹ್ವಾನಿಸಲಾಗಿದೆ ಎಂಬುದರಿಂದಾಗಲಿ ಅಳೆಯಬಾರದು. ಆಯಾ ದೇವತೆಗಳು ಮಾಡುವ ಕರ್ತವ್ಯಗಳಿಂದ ಅಳೆಯಬೇಕು. ಬಹುಸಂಖ್ಯಾತ ಸೂಕ್ತಗಳಿಂದ ಆಹೂತರಾದ ಇಂದ್ರಾಗ್ನಿಗಳು ವಿಷ್ಣುರುದ್ರರಿಗಿಂತ ಹೆಚ್ಚಿನವರಲ್ಲ. ಆದರೆ ಅಂತರ್-ಬಹಿಃ ಪ್ರಪಂಚಗಳಲ್ಲಿ ವಿಷ್ಣು-ರುದ್ರರು ಮಾಡುವ ಕರ್ತವ್ಯಗಳು ಅತ್ಯಂತ ಸಕ್ರಿಯ ಪ್ರಧಾನ ಮತ್ತು ಯೋಗಿಗಳ ಮಾನಸಶಾಸ್ತ್ರೀಯ ಶಿಸ್ತಿಗೆ ನೇರವಾಗಿ ಪರಿಣಾಮಕಾರಿಗಳಾಗಿವೆ. ಇದೇ ಅವರ ಪ್ರಾಮುಖ್ಯಕ್ಕೆ ಕಾರಣವು. ರುದ್ರ ಪುತ್ರರಾದ ಮರುತ್ತುಗಳು ಅವರ ಭಯಂಕರ ಬಲಿಷ್ಠ, ತಂದೆಗಿಂತ ಹೆಚ್ಚಿನವರಲ್ಲ. ಆದರೂ ಇತರ ದೇವತೆಗಳೊಡನೆ ಅವರನ್ನು ವಿಷ್ಣು-ರುದ್ರರಿಗಿಂತ ಹೆಚ್ಚು ಸಲ (ಕರೆಯಲಾಗಿದೆ) ಪ್ರಸ್ತಾಪಿಸಲಾಗಿದೆ. ಏಕೆಂದರೆ ವೈದಿಕ ಶಿಸ್ತಿನಲ್ಲಿ (ಉಪಾಸನಾಯಜ್ಞ, ಪರಂಪರೆಯಲ್ಲಿ) ಮರುತ್ತುಗಳು ಮಾಡುವ ಕರ್ತವ್ಯಗಳು ಸತತ ಮತ್ತು ಸದ್ಯೋಽವಶ್ಯಕ. ಹಾಗಲ್ಲದೆ ವಿಷ್ಣು, ರುದ್ರ, ಬ್ರಹ್ಮಣಸ್ಪತಿ ಎಂಬ ಮುಂದಿನ ಪುರಾಣಗಳ ಮೂಲಸ್ತಂಭಗಳಾದ ವಿಷ್ಣು-ಶಿವ-ಬ್ರಹ್ಮರೆಂಬ ತ್ರಿಮೂರ್ತಿಗಳು ವೈದಿಕ ಕರ್ಮದ ಉಪಾಧಾನಗಳನ್ನು ಒದಗಿಸುತ್ತಾರೆ ಮತ್ತು ಹೆಚ್ಚು ಉಪಸ್ಥಿತ ಹಾಗೂ ಸಕ್ರಿಯ ದೇವತೆಗಳ ಹಿಂದೆ ನಿಂತು ಆ ಕರ್ಮಕ್ಕೆ ನೆರವು ನೀಡುತ್ತಾರೆ. ಆದರೆ ಈ ದೇವತಾದ್ವಯವು ಆ ಕರ್ಮಕ್ಕೆ ಕಡಿಮೆ ನಿಕಟವರ್ತಿಗಳು ಮತ್ತು ತೋರಿಕೆಗೆ ಅದರ ದೈನಿಕ ಚಲನೆಯಲ್ಲಿ ಅಷ್ಟು ಸತತ ಸಂಬಂಧಗಳನ್ನು ಹೊಂದಿರುವಂತೆ ಕಾಣುವುದಿಲ್ಲ.

ಬ್ರಹ್ಮಣಸ್ಪತಿಯು ಮಂತ್ರಬಲದಿಂದ ಸೃಷ್ಟಾರನಾದವನು. ಅವನು ಅಪ್ರಜ್ಞಾತ ಸಾಗರದ ಕತ್ತಲಿನಿಂದ ದೃಶ್ಯ ವಿಶ್ವವನ್ನೂ ಬೆಳಕನ್ನೂ ಕರೆಯುತ್ತಾನೆ ಮತ್ತು ಪ್ರಜ್ಞಾತ ಸತ್ತೆಯ ಆಕೃತಿಗಳ ಉದ್ಗಮನವನ್ನು ಅವುಗಳ ಪರಮ (ಚರಮ) ಧ್ಯೇಯದತ್ತ ಮೇಲಕ್ಕೆ ವೇಗವಾಗಿ ಧಾವಿಸುವಂತೆ ಮಾಡುತ್ತಾನೆ. ಬ್ರಹ್ಮಣಸ್ಪತಿಯ ಈ ಸರ್ಜನಾತ್ಮಕ ಲಕ್ಷಣದಿಂದ ಅನಂತರ ಸೃಷ್ಟಿಕರ್ತನಾದ ಬ್ರಹ್ಮನ ಕಲ್ಪನೆ ಮೂಡಿ ಬಂದಿತು.

ಬ್ರಹ್ಮಣಸ್ಪತಿಯ ನಿರ್ಮಿತಿಗಳ ಊರ್ಧ್ವಗತಿಗೆ ರುದ್ರನು ಪ್ರಣೋದವನ್ನು ಒದಗಿಸುತ್ತಾನೆ. ವೇದದಲ್ಲಿ ರುದ್ರನನ್ನು ಸ್ವರ್ಗದ ಬಲಾಢ್ಯನು ಎಂದು ಕರೆಯಲಾಗಿದೆ. ಆದರೆ ಅವನು ತನ್ನ ಕಾರ್ಯವನ್ನು ಬುವಿಯಲ್ಲಿಯೇ ಆರಂಭಿಸುತ್ತಾನೆ ಮತ್ತು ನಮ್ಮ ಊರ್ಧ್ವಗಮನದ ಪಂಚಸ್ತರವನ್ನಾಧರಿಸಿದ ಯಜ್ಞವನ್ನು ಮಾಡಿಸುತ್ತಾನೆ. ಅವನು ಹಿಂಸಾಪರನು, ಪ್ರಜ್ಞಾತನನ್ನು ಊರ್ಧ್ವಮುಖ ವಿಕಾಸಕ್ಕೊಯ್ಯುವವನು. ಅವನ ಪ್ರಣೋದವು ಸರ್ವದುಷ್ಟ ಶಕ್ತಿಗಳನ್ನೂ ದಮನ ಮಾಡುವುದು ; ಪಾಪಿಯನ್ನು ಹೊಡೆದುರುಳಿಸುತ್ತದೆ, ಶತ್ರುವನ್ನು ಬಡಿದುರುಳಿಸುತ್ತದೆ. ಅಪರಿಪೂರ್ಣತೆಯನ್ನು ರುದ್ರನು ಸಹಿಸನು. ಎಡಹುವುದನ್ನು ಒಪ್ಪನು. ಅವನಷ್ಟು ಭಯಂಕರ ದೇವರಿನ್ನೊಬ್ಬನಿಲ್ಲ. ಅವನ ಬಗ್ಗೆ ಮಾತ್ರ ವೈದಿಕ ಋಷಿಗಳಿಗೆ ನಿಜವಾದ ಹೆದರಿಕೆಯಿದೆ. ಅಗ್ನಿಯು ಪೌರಾಣಿಕ ಸ್ಕಂದನ ಮೂಲನಾದ ಕುಮಾರನು ; ಭೂಮಿಯಲ್ಲಿ ಈ ರುದ್ರನ ಪ್ರಣೋದದ ಮಗನು. ಮರುತ್ತುಗಳು ಜೈವಿಕ ಶಕ್ತಿಗಳು-ಹಿಂಸೆಯಿಂದ ಅವರು ತಮಗೆ ತಾವೇ ಬೆಳಕನ್ನು ಮಾಡಿಕೊಳ್ಳುತ್ತಾರೆ - ಅವರೂ ರುದ್ರನ ಮಕ್ಕಳೇ ಆಗಿದ್ದಾರೆ. ರುದ್ರ ಮಾಡಿದ ಮೊದಲ ಅಸ್ಪಷ್ಟ ಪಾರ್ಥಿವ ಸೃಷ್ಟಿಯನ್ನು ಅಗ್ನಿಯೂ ಮರುತ್ತುಗಳೂ ಭೀಕರ ಕಾಳಗವೆಸಗಿ ಅದನ್ನು ಜ್ಯೋತಿರ್ಮಯ ಪ್ರಪಂಚಗಳ ವಿಚಾರ ಸ್ವರ್ಗದತ್ತ ಒಯ್ಯುತ್ತಾರೆ. ಆದರೀ,

ಹಿಂಸಕನೂ ಬಲಾಢ್ಯನೂ ಆದ ರುದ್ರನು ನ್ಯೂನ ನಿರ್ಮಿತಿಗಳೆಲ್ಲವನ್ನೂ ಒಡೆದು ಒಳ ಹೊರಬಾಳಿನ ಗುಂಪುಗಳೆಲ್ಲವನ್ನೂ ಛಿನ್ನ ಬಿನ್ನ ಮಾಡುವವನಾದರೂ ಆತನು ದಯಾಮಯ ಲಕ್ಷಣನೂ ಆಗಿದ್ದಾನೆ. ಅವನು ಅತ್ಯುಚ್ಚ ವೈದ್ಯನು. ವಿರೋಧಿಸಿದರೆ ಅವನು ನಾಶ ಮಾಡುವನು, ಸಹಾಯಕ್ಕೆ ಕರೆದರೆ ಮತ್ತು ತೃಪ್ತಿಗೊಳಿಸಿದರೆ ಅವನು ಎಲ್ಲ ಗಾಯಗಳನ್ನೂ ಎಲ್ಲ ದುಃಶಕ್ತಿಗಳನ್ನೂ ಎಲ್ಲ ನರಳಿಕೆಗಳನ್ನೂ ಪರಿಹರಿಸುವನು. ನಮಗೆ ಯುದ್ಧ ಪ್ರಣೋದವಿದ್ದರೆ ಅದು ಅವನು ಕೊಟ್ಟವರ ; ಹಾಗೆ ಕೊನೆಗೆ ದೊರಕುವ ಆಹ್ಲಾದ - ಶಾಂತಿಗಳೂ ಅವನೀವ ವರಗಳೇ. ಈ ಲಕ್ಷಣಗಳೆಲ್ಲಾ ಪುರಾಣದ ಶಿವ-ರುದ್ರನ ವಿಕಾಸದ ಕರಡು ಮೂಲದ್ರವ್ಯಗಳು- ಈ ವೈದಿಕ ದೇವತೆಯು ಲಯಕಾರಿ ಮತ್ತು ರೋಗಹಾರಿ, ಶುಭ ಮತ್ತು ಭಯಂಕರ, ವಿಶ್ವಗಳಲ್ಲಿ ಕಾರ್ಯ ಮಾಡುವ ಪ್ರಣೋದಗಳ ಒಡೆಯ, ಮಹಾಯೋಗಿ ಮತ್ತು ಅಸೀಮ ಸ್ವಾತಂತ್ರ್ಯವನ್ನೂ ಶಾಂತಿಯನ್ನೂ ಅನುಭವಿಸುವವನು.

ಬ್ರಹ್ಮಣಸ್ಪತಿಯ ಸೃಷ್ಟಿಗಳಿಗೂ ರುದ್ರ ಪ್ರಣೋದದ ಕಾರ್ಯಗಳಿಗೂ ಬೇಕಾದ ಅಕ್ರಿಯ ಮೂಲದ್ರವ್ಯಗಳಾದ ಆಕಾಶ (ಸ್ಥಳಾವಕಾಶ), ಜಗತ್ತುಗಳ ಕ್ರಮಬದ್ಧ ಚಲನೆಗಳು, ಏರಿಕೆಯ ಪ್ರಜ್ಞಾಸ್ತರಗಳು ಮತ್ತು ಪರಮೋಚ್ಚ ಧ್ಯೇಯ-ಇವುಗಳನ್ನು ವಿಷ್ಣುವು ಪೂರೈಸುತ್ತಾನೆ. (ಸರಬರಾಯಿ ಮಾಡುತ್ತಾನೆ). ವಿಷ್ಣುವು ಮೂರು ದಾಪು ಹೆಜ್ಜೆಗಳನ್ನಿಟ್ಟಿದ್ದಾನೆ ಮತ್ತು ಆ ತ್ರಿಪದಗಳು ನಿರ್ಮಿಸಿದ ಆಕಾಶದಲ್ಲಿ ವಿಶ್ವಗಳೆಲ್ಲವನ್ನೂ ಸಂಸ್ಥಾಪಿಸಿದ್ದಾನೆ. ಈ ಪ್ರಪಂಚಗಳಲ್ಲಿ ಈ ಸರ್ವವ್ಯಾಪಿಯು ಇರುತ್ತಾನೆ ಮತ್ತು ದೇವತೆಗಳ ಕಾರ್ಯಗಳಿಗೆ ಹಾಗೂ ಚಲನೆಗಳಿಗೆ ಕಡಿಮೆ ಯಾ ಹೆಚ್ಚು ಅವಕಾಶವನ್ನು ಕೊಡುತ್ತಾನೆ. ಇಂದ್ರನು ವೃತ್ರಸಂಹಾರಕ್ಕಿಂತ ಮೊದಲು ವಿಷ್ಣುವನ್ನು ಪ್ರಾರ್ಥಿಸುತ್ತಾನೆ. ವಿಷ್ಣುವು ಅವನ ಸ್ನೇಹಿತನು ಮತ್ತು ಮಹಾಪರ್ಷಣದ ಯುದ್ಧದಲ್ಲಿ ಸಹಯೋಧ ; (I.22.19) : "ಹೇ ವಿಷ್ಣೋ, ಈ ನಿನ್ನ ಚಲನೆಯಲ್ಲಿ ನೀನು ಅತ್ಯಂತ ವಿಸ್ತಾರವಾಗಿ ತಿರುಗಾಡು (IV.18.11) ಮತ್ತು ಆ ಆಯಾಮದಲ್ಲಿ ಇಂದ್ರನು ಪರಿಮಿತಗೊಳಿಸಬಂದ ಹಾಗೂ ಮುಸುಕೆಳೆಯಬಂದ ವೃತ್ರನನ್ನು ಸಂಹರಿಸುತ್ತಾನೆ. ವಿಷ್ಣುವಿನ ಪರಮಪದವು ಅತ್ಯುಚ್ಚವಾದುದು - ಅದು ಆನಂದ ಮತ್ತು ಜ್ಯೋತಿಗಳ ತ್ರಿಪುಟ ಲೋಕವು ("ಪರಮಂ ಪದಂ") - ಅದನ್ನು ವಿವೇಕಿಗಳು ಹೊಳೆವ ದಾರ್ಶನಿಕ ದೃಷ್ಟಿಯಂತೆ ಸ್ವರ್ಗದಲ್ಲಿ ವಿಸ್ತೃತವಾದುದನ್ನಾಗಿ ಕಾಣುತ್ತಾರೆ (I.22.20). ವಿಷ್ಣುವಿನ ಈ ಪರಮೋನ್ನತ ಪದವೇ ವೈದಿಕ ಪ್ರಯಾಣದ ಧ್ಯೇಯ (ತಲುಪುದಾಣ). ಇಲ್ಲಿ ಕೂಡಾ ವೈದಿಕ ವಿಷ್ಣುವು ಪೌರಾಣಿಕ ನಾರಾಯಣನ ಪೂರ್ವ ಸ್ವರೂಪ ಮತ್ತು ಸಾಕಷ್ಟು ಜನ್ಮ ಮೂಲನು ; ಈತನು ಸ್ಥಿತಿಕಾರಿ ಮತ್ತು ಪ್ರೇಮದ ಒಡೆಯನು.

ನಿಜವಾಗಿಯೂ ವೇದದ ಮೂಲಭೂತ ಕಲ್ಪನೆಯು ಪೌರಾಣಿಕವಾದ ತ್ರಿಮೂರ್ತಿ ವ್ಯವಸ್ಥೆಯನ್ನು ನಿಷೇಧಿಸುತ್ತದೆ, ಮಿಕ್ಕ ಕೆಳದೇವತೆಗಳನ್ನೂ ನಿರಾಕರಿಸುತ್ತದೆ. ವೇದದ ಋಷಿಗಳಿಗೆ ಒಬ್ಬನೇ ಒಬ್ಬ ದೇವನಿದ್ದಾನೆ - ವಿಷ್ಣು, ರುದ್ರ, ಬ್ರಹ್ಮಣಸ್ಪತಿ, ಅಗ್ನಿ, ಇಂದ್ರ, ವಾಯು, ಮಿತ್ರ, ವರುಣರೆಲ್ಲರೂ ಆಕೃತಿಗಳು ಹಾಗೂ ವೈಶ್ವ ಲಕ್ಷಣಗಳು. ಈ ಅಷ್ಟ ದೇವತೆಗಳಲ್ಲಿ ಪ್ರತಿಯೊಬ್ಬನೂ ಪೂರ್ಣನಾದ, ಇತರ ದೇವತೆಗಳನ್ನೆಲ್ಲಾ ಒಳಗೊಂಡ ಮಹಾದೇವನು. ಅರ್ಥಾತ್ ಈ ಅಷ್ಟನಾಮದೇಯಗಳೂ ಏಕಮೇವಾದ್ವಿತೀಯ ನಿರ್ಲಿಂಗ ಬ್ರಹ್ಮದವೆಂದು ತಾತ್ಪರ್ಯವು. ಋಕ್ಕುಗಳಲ್ಲಿ ಅಸ್ಪಷ್ಟವಾಗಿ ಉಳಿಸಿದ ಏಕಾ- ದ್ವಿತೀಯ ಪರಮೇಶ್ವರನ

ಕಲ್ಪನೆಯನ್ನು ಸಂಪೂರ್ಣವಾಗಿ ಪ್ರಕಟಪಡಿಸಿದ್ದು ಉಪನಿಷತ್ತು. ನಪುಂಸಕಲಿಂಗದ "ತತ್" ಅದೇ; ಅದೇ ಅದ್ವಿತೀಯ ಅರ್ಥಾತ್ ಒಂದೇ ಒಂದಾದ ಸತ್ತಾಸತ್ಯ (ಸತ್ಯ, ಜ್ಞಾನ, ಅನಂತ, ಸತ್, ಚಿತ್, ಆನಂದ). ಇತರ ದೇವತೆಗಳ ಕರ್ಮಕಾಂಡೀಯ ಪರಿಸೀಮನ (ಉಪಾಧಿಬದ್ಧತೆ) ಮತ್ತು ಅವರ ಉತ್ತರೋತ್ತರ ನಿಖರತೆಗಳು ಅವರನ್ನು ಮಾನವ್ಯ ಯಾ ವೈಯಕ್ತಿಕ ಲಕ್ಷಣಗಳಿಂದ ಬೆಳೆದುಬರುತ್ತಿದ್ದ ಪುರಾಣ ವಟವೃಕ್ಷವು ಅವರನ್ನು ಅಧಃಪಾತಕ್ಕಿಳಿಸಿ ಬಹಳ ಬಳಿಕೆಯಲ್ಲಿರದ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಹಿಂದು ದೇವತಾಶಾಸ್ತ್ರದ ಸೂತ್ರವನ್ನಾಗಿ ಮಾಡಲಾಯಿತು.

ದೀರ್ಘತಮಸ್ ಔಚಥ್ಯನ ವಿಷ್ಣು ಸೂಕ್ತದಲ್ಲಿ ವಿಶ್ವವ್ಯಾಪಿ ವಿಷ್ಣುವಿನ ತ್ರಿವಿಕ್ರಮತ್ವವನ್ನು ಪ್ರಧಾನಿಸಿ ವರ್ಣಿಸಲಾಗಿದೆ - ಅವನ ಮೂರು ದಿವ್ಯ ಹೆಜ್ಜೆಗಳೇ ಅಲ್ಲಿ ಮಹತ್ವಪೂರ್ಣವೆನ್ನಿಸಿವೆ. ಅವನಿಟ್ಟ ಪದತ್ರಯವು ಅವನ ಮಹಾಕಾರ್ಯ, ಮಹಾವಿಕ್ರಮ ಎನ್ನಿಸಿದೆ. ಅನಂತರದ ಅವಧಿಯ ದೇವತಾ ಪುರಾಣದ ಕಲ್ಪನೆಯನ್ನು ನಮ್ಮ ಮನಸ್ಸಿನಿಂದ ತೊಡೆದು ಹಾಕಬೇಕು. ವೇದದಲ್ಲಿ ವಾಮನಾವತಾರ ಇಲ್ಲ, ಮಹಾಜಟ್ಟಿಗ ಬಲಿ ಇಲ್ಲ, ತ್ರಿವಿಕ್ರಮಗಳಿಲ್ಲ, ಸ್ವರ್ಗ, ಮರ್ತ್ಯ, ಪಾತಾಳಗಳನ್ನು ತ್ರಿವಿಕ್ರಮನು ತನ್ನ ಮೂರು ಹೆಜ್ಜೆಗಳನ್ನು ಇಟ್ಟು (ಬಲಿಯ ತಲೆಯ ಮೇಲೆ ಕಾಲಿಟ್ಟು ಅವನೊಡನೆ ಪಾತಾಳವನ್ನು ಅಕ್ರಮಿಸಿ) ಮೆರೆದ ಕಲ್ಪನೆಗಳಿಗೆ ವೇದದಲ್ಲಿ ಸ್ಥಾನವಿಲ್ಲ. ವೇದದಲ್ಲಿ ವಿಷ್ಣುವಿಟ್ಟ ಮೂರು ಹೆಜ್ಜೆಗಳೆಂದರೆ, ಬುವಿ, ಬಾನು (ಸಗ್ಗ) ಮತ್ತು ತ್ರಿಧಾತು[೧] ಎನ್ನುತ್ತಾನೆ ದೀರ್ಘತಮಸ್. ಅದು ತ್ರಿಪುಟ ಸೂತ್ರ, ಸ್ವರ್ಗೋತ್ತರ ಯಾ ಅದರ ಮೇಲೆ[೨], ಅದರ ಅತ್ಯುನ್ನತ ಮಟ್ಟವೆಂದು ಅಧ್ಯಾರೋಪಿತವಾದದ್ದು ; "ನಾಕಸ್ಯ ಪೃಷ್ಠೇ" (I.125.5) ಈ ಚತುರ್ಥ ಲೋಕವು ವಿಷ್ಣುವಿನ ಮೂರನೆಯ ಹೆಜ್ಜೆ, ಸರ್ವವ್ಯಾಪಿಯಾದ ಅವನ ಅತ್ಯುನ್ನತ ಪೀಠ.

ವಿಷ್ಣುವು ವಿಶ್ವಸಂಚಾರಿ, ವಿಶಾಲ ಸಂಚಾರಿ ; ಅವನು ದೇಶಾಂತರಸ್ಥನು. ಈಶೋಪನಿಷತ್ತಿನ ಭಾಷೆಯಲ್ಲಿ "ಸಪರ್ಯಗಾತ್- ತ್ರಿಪುಟವಾಗಿ ತನ್ನನ್ನೇ ತಾನು ವಿಸ್ತರಿಸಿಕೊಂಡ ದ್ರಷ್ಟಾರ, ಚಿಂತಕ - ದ್ರಷ್ಟಾರನಾಗಿರುವುದು ಅತಿಮಾನಸ ಆನಂದದಲ್ಲಿ, ಮಾನಸದ ಸ್ವರ್ಗದಲ್ಲಿ ಮತ್ತು ಭೌತಪ್ರಜ್ಞೆಯ ಪ್ರಥ್ವಿಯಲ್ಲಿ - "ತ್ರೇಧಾ ವಿಚಕ್ರಮಾಣಃ". ಆ ತ್ರಿಪದಗಳಲ್ಲಿ ಅವನು ಅಳೆದನು, ಅವುಗಳ ಎಲ್ಲಾ ಆಯಾಮಗಳಲ್ಲಿ ಎಲ್ಲಾ ಪಾರ್ಥಿವ ಪ್ರಪಂಚಗಳನ್ನು ನಿರ್ಮಿಸಿದವನು ; ಏಕೆಂದರೆ ವೈದಿಕ ಕಲ್ಪನೆಯಲ್ಲಿ ನಾವಿರುವ ಭೌತಿಕ ಪ್ರಪಂಚವು ಅನೇಕ ಹೆಜ್ಜೆಗಳಲ್ಲಿ ಒಂದು. ಆ ಹೆಜ್ಜೆಗಳು ಮಾನಸಾತೀತವಾದ ಜೈವಿಕ, ಮಾನಸಿಕ ಲೋಕಗಳಿಗೆ ಒಯ್ಯುವುವು ಮತ್ತು ಅವುಗಳನ್ನು ಎತ್ತಿ ಹಿಡಿಯುವುವು. ಪೃಥ್ವಿಯು ಮೂರ್ತ (ಭೌತ, ಜಡ), ಅಂತರಿಕ್ಷವು ವಾಯುವಿನ ಜೈವಿಕ ಪ್ರಪಂಚ-ವಾಯುವು ಉತ್ಕ್ರಿಯ ಜೀವತತ್ವದ ಒಡೆಯ ; ತ್ರಿಪುಟ ಸ್ವರ್ಗ ಮತ್ತು ಅದರ ಮೂರು ತೇಜೋಮಯ ಶಿಖರಗಳು ("ತ್ರೀಣಿರೋಚನಾ") ಎಂದರೆ ಇವೇ. ಈ ಸ್ವರ್ಗಗಳು

---

೧. ತ್ರಿಧಾತು = ತ್ರಿಭಾಗ, ತ್ರಿಗುಣ (having three parts, threefold, R.V.) ತ್ರಿಲೋಕ=(the triple world, R.V)-See page 458-459- Eng-Skt. Dict. By Sir M.M.Williams - ಅನುವಾದಕ.

೨. ಪಾತಾಳ, ಮರ್ತ್ಯ, ಸ್ವರ್ಗಗಳ ಮೇಲೆ ಇರುವುದು ತ್ರಿಧಾತುಲೋಕವೆಂದು ತಾತ್ಪರ್ಯ -ಅನುವಾದಕ.

ಋಷಿಯು ವರ್ಣಿಸುವಂತೆ ಹೆಜ್ಜೆನ, ಮೇಲ್ಮಟ್ಟದ, ಸಾಫಲ್ಯ ಪೀಠ. ಭೂಮಿ, ಅಂತರಿಕ್ಷ ಮತ್ತು ಸ್ವರ್ಗಗಳು ಪ್ರಜ್ಞಾತನ ಕ್ರಮಿಕ, ಪ್ರಗತಿಪರ, ಸಾಫಲ್ಯದ ತ್ರಿಪುಟ ಸ್ಥಲ-ತ್ರಿಷಧಸ್ಥ (I.156.5) ; ಭೂಮಿಯ ಕೆಳಪೀಠ, ಜೈವಿಕ ಜಗವು ಮಧ್ಯಪೀಠ ಮತ್ತು ಸ್ವರ್ಗವು ಇವುಗಳಿಗಿಂತ ಮೇಲಿರುವ ಪೀಠ. ಈ ಮೂರೂ ವಿಷ್ಣುವಿನ ತ್ರಿಪದಾಧಾನದಲ್ಲಿವೆ.[೩]

ಆದರೆ ಇನ್ನಷ್ಟಿವೆ : ಆತ್ಮಸಿದ್ಧಿಯ ಲೋಕವೂ ಇದೆ - ಅದು ವಿಷ್ಣುವಿನ ಉನ್ನತತಮ ಪದಾಧಾನ ಪೀಠ. ಎರಡನೆಯ ಋಕ್ಕಿನಲ್ಲಿ ದ್ರಷ್ಟಾರನು ಅದನ್ನು ಬರಿ "ಅದು" ಎಂದು ಬಿಟ್ಟಿದ್ದಾನೆ. ಆ "ಅದು" ಎಂಬುದು ಇನ್ನೂ ಮುಂದೆ ಹೋಗಿ ವಿಷ್ಣುವಿನ ದಿವ್ಯಬಲದಿಂದ ತೃತೀಯ ಪದಾಧಾನದ ಮೂಲಕ ದೃಢಪಡಿಸಲ್ಪಟ್ಟ ಯಾ ದೃಢವಾಗಿ ಪ್ರತಿಷ್ಠಾಪಿತವಾದ ("ಪ್ರಸ್ತವತೇ") ಸ್ಥಲ, ಪೀಠ, ಪರಮಪದ. ಅನಂತರ ವಿಷ್ಣುವನ್ನು ಬಣ್ಣಿಸಿದ ಭಾಷೆಯು ಭಯಂಕರನಾದ ರುದ್ರನಲ್ಲಿ ವಿಷ್ಣುವಿನ ಸಾರಭೂತ ಐಕ್ಯವನ್ನು ಸೂಚಿಸುತ್ತದೆ. ರುದ್ರನು ಉಗ್ರ. ಅಪಾಯಕರ ಸಿಂಹ ; ಪ್ರಪಂಚಗಳ ವಿಕಾಸದಲ್ಲಿ ಪ್ರಾಣಿನಾಥ, "ಪಶುಪತಿ" ಎನ್ನಿಸಿ ಅವನಿರುವ ಸತ್ತಾಪರ್ವತದ ತುದಿಯಿಂದ ಊರ್ಧ್ವಕ್ಕೆ ಹೊರಟು, ಹೆಚ್ಚು ಹೆಚ್ಚು ಕಷ್ಟಕರ, ದುರ್ಗಮ ಸ್ಥಳಗಳನ್ನು ಏರಿ ಕೊನೆಯಲ್ಲಿ ಶಿಖರಗಳನ್ನೇರಿ ನಿಲ್ಲುತ್ತಾನೆ. ಹೀಗೆ ವಿಷ್ಣುವಿನ ವಿಸ್ತಾರವಾದ ಮೂರು ಚಲನೆಗಳಲ್ಲಿ ಪಂಚಪ್ರಪಂಚಗಳೂ ಅವುಗಳಲ್ಲಿಯ ಸೃಷ್ಟ ಪದಾರ್ಥಗಳೂ ತಮ್ಮ ವಸತಿಗಳನ್ನು ಮಾಡಿಕೊಂಡಿವೆ. ಸ್ವರ್ಗ ಮತ್ತು "ಅದು" ಎಂದ ಆನಂದ ಜಗತ್ತು ಎಂಬಿವೇ ವಿಷ್ಣುವಿನ ಮೂರು ಹೆಜ್ಜೆಗಳು. ಭೂಮ್ಯಾಕಾಶಗಳ (ಮರ್ತ್ಯ-ಸ್ವರ್ಗಗಳ) ನಡುವೆ ಅಂತರಿಕ್ಷವಿದೆ. ಅಂತರಿಕ್ಷವು ಜೈವಿಕ ಪ್ರಪಂಚವು ; ಅಕ್ಷರಾರ್ಥಾನುಸಾರವಾಗಿ "ಮಧ್ಯಸ್ಥ ವಸತಿ ಸ್ಥಲ" ಎಂದರ್ಥ. ಸ್ವರ್ಗಕ್ಕೂ ಆನಂದಲೋಕಕ್ಕೂ ನಡುವೆ ಇನ್ನೊಂದು ವಿಶಾಲವಾದ ಅಂತರಿಕ್ಷವಿದೆ, ಮಧ್ಯಮಲೋಕವಿದೆ - ಅದೇ ಮಹರ್‌ಲೋಕ, ವಸ್ತುಗಳ ಅತಿಮಾನಸ ಸತ್ಯದ ಪ್ರಪಂಚವು.[೧]

ಮಾನವನ ಪ್ರಣೋದ-ವಿಚಾರಗಳು, ಬಲಾಢ್ಯನಾದ ರುದ್ರನಿಂದ ಹೊರಟ ಪ್ರಣೋದ ಮತ್ತು ಮಂತ್ರದ ಸರ್ಜನಶೀಲ ಒಡೆಯನಾದ ಬ್ರಹ್ಮಣಸ್ಪತಿಯಿಂದ ಹೊರಟ ವಿಚಾರ-ಇವು ಮಹಾಯಾನದಲ್ಲಿ ಮುನ್ನುಗ್ಗಬೇಕು ಅಥವಾ ಪರ್ವತ ಶೃಂಗದಲ್ಲಿ ನಿಂತಿರುವ, ತುತ್ತ ತುದಿಯಲ್ಲಿರುವ, ಧ್ಯೇಯ (ಗುರು) ಸ್ಥಳದಲ್ಲಿರುವ, ವಿಷ್ಣುವಿನತ್ತ ಹೋಗಬೇಕು. ಅವನೇ ಈ ವಿಸ್ತಾರವಾದ ವಿಶ್ವವ್ಯಾಪಕ ಚಲನೆ. ಜಗತ್ತಿನ ವೃಷಭನು ಅವನೇ, ಜಗದ್‌ಭೋಗಿ ಅವನೇ, ಎಲ್ಲ ಪ್ರಣೋದದ ಕ್ರಿಯಾಶಕ್ತಿಗಳಲ್ಲಿ ವೀರ್ಯಾಧಾನ ಮಾಡುವವನು ಅವನೇ-ಹಾಗೇ ವಿಚಾರದ ಗುಂಪುಗಳ ಗೋವ್ರಜಗಳಲ್ಲಿ ಗರ್ಭಾದಾನ ಮಾಡುವವನು ಅವನೇ. ನಮ್ಮ ಆತ್ಮ ಸಾಫಲ್ಯದ ಲೋಕವೆಂದು ತೋರುವ ಈ ದೂರಸ್ಥ, ವಿಸ್ತೃತ ದೇಶವು (ಆಕಾಶವು), ಮಹಾಯಜ್ಞದ ತ್ರಿಪುಟ

---

೩. "ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ;ಯೋ ಅಸ್ಕ ಭಾಯದ್ ಉತ್ತರಂ ಸದಸ್ಥಂ ವಿಚಕ್ರಮಾಣಸ್ತ್ರೇ ಧೂರೂ ಗಾಯಃ".

೧. "ಪ್ರತದ್ವಿಷ್ಣುಃ ಸ್ತವತೇ ವೀರ್ಯೇಣ, ಮೃಗೋನ ಭೀಮಃ ಕುಚರೋ ಗಿರಿಷ್ಠಾಃ, ಯಸ್ಯೋರು ಷು ತ್ರಿಷು ವಿಕ್ರಮಣೇಷು ಅಧಿಕ್ಷಿಯಂತಿ ಭುವನಾನಿ ವಿಶ್ವಾ".

ವೇದಿಕೆಯಾಗಿದೆ. ಸರ್ವಬಲಸಂಪನ್ನ ಅನಂತನು[೧] ಅದು ಹಾಗಾಗುವಂತೆ ಕೇವಲ ಮೂರು ಹೆಜ್ಜೆಗಳಿಂದ ಅಳೆದು ನಿರ್ಮಿಸಿದನು.

ಈ ಮೂರೂ ಮಧುಮದ್ಯಪೂರ್ಣವಾಗಿವೆ ; ಸತ್ತಾನಂದವೇ ಆ ಮಧುಮದ್ಯವಾಗಿದೆ. ಈ ಎಲ್ಲವುಗಳನ್ನೂ ವಿಷ್ಣುವು ತುಂಬಿದ್ದಾನೆ ; ಯಾವುದರಿಂದ ? ತನ್ನ ದಿವ್ಯ ಸತ್ತಾನಂದದಿಂದ. ಅದರಿಂದ ಅವೆಲ್ಲವೂ ಸದಾಕಾಲ ಉಳಿಸಲ್ಪಟ್ಟಿವೆ ಮತ್ತು ಅವೆಂದೂ ವ್ಯರ್ಥವ್ಯಯವೆನ್ನಿಸವು, ವಿನಾಶ ಹೊಂದವು ; ಆದರೆ ತಮ್ಮ ನೈಸರ್ಗಿಕ ಚಲನೆಯ ಸ್ವಗತ ಸಾಮಶ್ರುತ್ಯದಲ್ಲಿ ಯಾವಾಗಲೂ ನಿಷ್ಫಲವಾಗದ ಆನಂದೋದ್ರೇಕವನ್ನು ಮತ್ತು ತಮ್ಮ ವಿಶಾಲವೂ ಅಸೀಮವೂ ಆದ ಅಸ್ತಿತ್ವದ ಅವಿನಾಶಿ ಮದೋನ್ಮಾದವನ್ನು ಹೊಂದಿರುತ್ತವೆ. ಅದನ್ನು ವಿಷ್ಣುವು ಎತ್ತಿ ಹಿಡಿದಿರುತ್ತಾನೆ, ಜೀಳದಂತೆ ಹೊತ್ತುಕೊಂಡಿರುತ್ತಾನೆ-ನಷ್ಟವಾಗದಂತೆ ಕಾಯ್ದಿಡುತ್ತಾನೆ. ಅವನು ಒಬ್ಬನೇ, ಏಕಾಕಿ-ಏಕಮಾತ್ರ ಮಹಾದೇವ ದೇವರಾಜನು. ಅವನು ನಾವು ಆನಂದ ಲೋಕದಲ್ಲಿ ಪಡೆಯುವ ದಿವ್ಯವಾದ ಮುಮ್ಮಡಿ ತತ್ವಗಳನ್ನು ತನ್ನ ಇರುವಿಕೆಯಲ್ಲಿ ಹಿಡಿದಿಟ್ಟುಕೊಂಡಿರುತ್ತಾನೆ. ಭೂಲೋಕದಲ್ಲಿ ನಮ್ಮ ಮೂಲಾಧಾರವಿದೆ. ನಮ್ಮಲ್ಲಿರುವ ಮಾನಸಪುರುಷನು ಸ್ವರ್ಗವನ್ನು ಮುಟ್ಟುತ್ತಾನೆ. ಆತನು ಈ ಪಂಚ ಪ್ರಪಂಚವೆಲ್ಲವನ್ನೂ ಎತ್ತಿ ಹಿಡಿಯುತ್ತಾನೆ, ಹೊರೆಯುತ್ತಾನೆ, ಪಾಲಿಸುತ್ತಾನೆ, ಪೋಷಿಸುತ್ತಾನೆ.[೨] ತ್ರಿಧಾತುಸತ್ತೆಯ ತ್ರಿಪುಟ ದ್ರವ್ಯವು ಎಂದರೆ ವೇದಾಂತ ಹೇಳುವಂಥ ಸಚ್ಚಿದಾನಂದ. ವೇದದ ಸಾಮಾನ್ಯ ಭಾಷೆಯಲ್ಲಿ ಅದು ವಸು=ದ್ರವ್ಯ=ಊರ್ಜ್=ನಮ್ಮ ಸತ್ತೆಯ ವ್ಯಾಪಕ ಪ್ರಣೋದ=ಪ್ರಿಯಂ ಯಾ ಮಯಸ್=ನಮ್ಮ ಅಸ್ತಿತ್ವದಲ್ಲೇ ಸಾರಭೂತವಾಗಿರುವ ಪ್ರಹ್ಲಾದ ಮತ್ತು ಪ್ರೇಮ. ಈ ಮೂರರಲ್ಲಿ ನಾವು ಇರುವುದೆಲ್ಲಾ ರಚಿತವಾಗಿದೆ. ನಮ್ಮ ಪ್ರಯಾಣದ ಕೊನೆಯಲ್ಲಿ ನಾವು ಸೇರುವ ಅಂತ್ಯಸ್ಥಲದಲ್ಲಿ, ಗುರಿಯಲ್ಲಿ, ಅವುಗಳ ಪೂರ್ಣತೆಯನ್ನು ಪಡೆಯುತ್ತೇವೆ.

ಆ ಗುರಿಯಾದರೋ ಆಹ್ಲಾದವು - ವಿಷ್ಣುವಿನ ಮೂರು ದಾಟು ಹೆಜ್ಜೆಗಳಲ್ಲಿ ಕೊನೆಯದು. ಋಷಿಯು ಅನಿಶ್ಚಿತಾರ್ಥಕವಾದ ತತ್ತನ್ನು ತೆಗೆದುಕೊಂಡು ಅದರಿಂದ ಅದನ್ನು ಮೊದಲು ಸೂಚಿಸಿದ್ದಾನೆ. ಅದು ವಿಷ್ಣುವಿನ ಚಲನದ ಗುರಿಯಾದ ಆಹ್ಲಾದವನ್ನು ಸೂಚಿಸಿತು. ಅದನ್ನವನು ಮೊದಲು ಅನಿಶ್ಚಿತವಾಗಿ ಸೂಚಿಸಿದ್ದನು. ಅದು ಆನಂದ-ಮೇಲೇರುತ್ತಿರುವ ನರನಿಗೆ ದಿವ್ಯಾಹ್ಲಾದವನ್ನು ಆಸ್ವಾದಿಸುವ ಜಗತ್ತು. ಅಲ್ಲಿ ಅವನು ಅನಂತ ಪ್ರಜ್ಞೆಯ ಪೂರ್ಣ ಕ್ರಿಯಾಶಕ್ತಿಯನ್ನು ವಶಪಡಿಸಿಕೊಂಡು ತನ್ನ ಅನಂತ ಸತ್ತೆಯನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ ; ಅಲ್ಲಿ ಸತ್ತೆಯ ಉನ್ನತ ಸ್ತರಸ್ಥ ಮಧುಮದ್ಯದ ಆಕರವನ್ನು ಕಾಣುತ್ತಾನೆ. ಆ ಸತ್ತೆಯಿಂದ ವಿಷ್ಣುವಿನ ತ್ರಿವಿಕ್ರಮಗಳು (ತ್ರಿಪದನ್ಯಾಸಗಳು) ತುಂಬಿವೆ. ಅಲ್ಲಿ ಮಹಾದೇವ ತತ್ವವನ್ನು ಬಯಸಿ ಹುಡುಕುವವರು ಆ ಮಾಧುರ್ಯಮಯ ಮದ್ಯದ ಅತ್ಯಂತ ಆಹ್ಲಾದೋದ್ರೇಕದಲ್ಲಿ ಬದುಕುತ್ತಾರೆ. ಆ ಅತ್ಯುಚ್ಚ ಪದದಲ್ಲಿ ಅಗಲವಾಗಿ ಚಲಿಸುವ ವಿಷ್ಣುವಿನ ಉನ್ನತತಮ ಪೀಠದಲ್ಲಿ

---

೧. "ಪ್ರವಿಷ್ಣವೇ ಶೂಷಮೇತು ಮನ್ಮ, ಗಿರಿಕ್ಷಿತ ಉರುಗಾಯಾಯ ವೃಷ್ಣೇ : ಯ ಇದಂದೀರ್ಘಂ ಪ್ರಯತಂ ಸಧಸ್ಥಂ, ಏಕೋ ವಿಮಮೇ ತ್ರಿಭಿರಿತ್ ಪದೇಭಿಃ".

೨. "ಯಸ್ಯ ತ್ರೀ ಪೂರ್ಣಾ ಮಧುನಾ ಪದಾನಿ, ಅಕ್ಷಿಯ ಮಾಣಾ ಸ್ವಧಯಾಮದಂತಿ ;ಯ ಉ ತ್ರಿಧಾತು ಪೃಥಿವೀ ಮುತ ದ್ಯಾಂ, ಏಕೋ ದಾಧಾರ ಭುವನಾನಿ ವಿಶ್ವಾ."

ದಿವ್ಯ ಮಾಧುರ್ಯದ ಆಕರವೆನ್ನಿಸಿದ ಜೇನುವೆಂಡದ ಬುಗ್ಗೆ ಇದೆ. ಏಕೆಂದರೆ, ಅಲ್ಲಿ ವಾಸಿಸುವವನು ಮಹಾದೇವನು-ಜೀವಾತ್ಮಗಳ ಪೂರ್ಣ ಸ್ನೇಹಿತನು, ಪ್ರೇಮಿಯು- ಆ ಜೀವಾತ್ಮಗಳು ಅವನನ್ನೇ ಬಯಸುತ್ತಾರೆ - ಆ ಅವನ ಪದವು ಅವನ ಅಚಲವೂ ಅತ್ಯಂತ ಪೂರ್ಣವೂ ಆದ ಸತ್ಯತೆ - ಅದಕ್ಕೆ ವೈಶ್ವತ್ರಿಕವಾಗಿ ತಿರುಗಾಡುವ ಮಹಾದೇವಾಧೀಶನು ವಿಶ್ವದಲ್ಲಿ ಏರಿ ತಲುಪುತ್ತಾನೆ.[೧]

ಇವರು ಇಬ್ಬರು-ಇಲ್ಲಿ ಚಲನಕರ್ತನಾದ ವಿಷ್ಣುವು - ಅಲ್ಲಿ ಸಾರ್ವಕಾಲಿಕವಾಗಿ, ಸ್ಥಿರ ಆನಂದಭೋಗಿಯಾದ ಮಹಾದೇವನು ; ಮತ್ತು ಅವರ ಆ ಅತ್ಯುನ್ನತ ವಾಸಸ್ಥಲಗಳೇ ಸಚ್ಚಿದಾನಂದದ ಮುಮ್ಮಡಿಯ ಪ್ರಪಂಚವು. ನಾವು ಬಯಸುವುದದನ್ನು - ಅದೇ ನಮ್ಮ ಮಹಾಯಾನದ ಗುರಿಯು-ಅದೇ ಈ ಮಹಾ ಊರ್ಧ್ವಮುಖವಾದ ಚಲನವು. ಇಲ್ಲಿಗೇ ಪ್ರಜ್ಞಾತ ವಿಚಾರ ಭೂರಿಶೃಂಗ ಗೋವ್ರಜಗಳು ಬರುವುದು. ಆ ವ್ರಜಗಳೆಂದರೆ ಪ್ರಜ್ಞಾತ ಮಹಾವಿಚಾರವು-ಪ್ರಜ್ಞಾತ ಪ್ರಣೋದವೂ ಆ ವಿಚಾರದೊಡನೆ ಈ ಕಡೆಗೇ ಚಲಿಸುತ್ತವೆ. ಇದೇ ಗುರಿ, ಇದೇ ಅವರ ವಿಶ್ರಾಮಧಾಮವು. ಈ ಪ್ರಪಂಚಗಳಲ್ಲಿ ಇಲ್ಲಿರುವ ನಮ್ಮ ಮೇಲೆ ಅವು ತಮ್ಮ ದೃಷ್ಟಿಯನ್ನು ಹಾಯಿಸಿದಾಗ - ವಿಶಾಲವೂ ಸಮಗ್ರವೂ ಅಪ್ರಮಿತವೂ ಆದ ಅತ್ಯುನ್ನತ ಪದವಿನ್ಯಾಸದ ಹೊಳಹಿರುತ್ತದೆ. ಈ ಹೊಳಹೇ ಎಲ್ಲೆಲ್ಲೂ ತಿರುಗುವ ವೃಷಭನ ಅತ್ಯುನ್ನತ ಪೀಠವು. ಈ ವೃಷಭನು ಈ ಬಹುಶೃಂಗಿ ದನಗೋಲೆಗಳ ನೇತಾರನಾದ, ಸರ್ವವ್ಯಾಪಿಯಾದ, ವಿಶ್ವೇಶ್ವರನಾದ, ನಮ್ಮ ಜೀವಾತ್ಮಗಳನ್ನು ಪ್ರೀತಿಸುವ ಸ್ನೇಹಿತನಾದ, ವಿಶ್ವೋತ್ತರ (ಅತಿಮಾನಸ) ಸತ್ತೆಯ ಒಡೆಯನಾದ ಮತ್ತು ವಿಶ್ವೋತ್ತರ ಆಹ್ಲಾದದ ಯಜಮಾನನಾದ ವಿಷ್ಣುವು.[೨]



---

೧. ತದಸ್ಯಪ್ರಿಯಂ ಅಭಿಪಾಥೋ ಅಸ್ಯಾಂ, ನರೋ ಯತ್ರ ದೇವಯವೋ ಮದಂತಿ ; ಉರುಕ್ರಮಸ್ಯ ಸಹಿ ಬಂಧುರಿತ್ಥಾ, ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ।

೨. ತಾವಾಂ ವಾಸ್ತೂನಿ ಉಶ್ಮಸಿ ಗಮಧ್ಯೈ, ಯತ್ರಗಾವೋ ಭೂರಿಶೃಂಗಾ ಅಯಾಸಃ ಅತ್ರಾಹ ತದುರು ಗಾಯಸ್ಯ ವೃಷ್ಣಃ, ಪರಮಂ ಪದಂ ಅವಭಾತಿ ಭೂರಿ.

# XIII

# ಆಹ್ಲಾದ ಅಮೃತತತ್ವಗಳ ಒಡೆಯನಾದ ಸೋಮನು

## ಋಗ್ವೇದ IX.83

**ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ।**
**ಅತಪ್ತ ತನೂರ್ನ ತದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್ಸಮಾಶತ ॥ ೧ ॥**

೧. ಹೇ ಆತ್ಮೇಶ್ವರ, ಶುದ್ಧೀಕರಣದ ಸಾರಣಿಗೆಯನ್ನು ನಿನಗಾಗಿ ಅಗಲವಾಗಿಟ್ಟಿದ್ದೇನೆ. ಪ್ರಾಣಿಯಲ್ಲಿ ಸಂಭವಿಸಿದ ನೀನು ಅವನ ಅಂಗಾಂಗಗಳನ್ನೆಲ್ಲಾ ವ್ಯಾಪಿಸಿದ್ದೀಯೆ. ಅಪಕ್ವನು ಹರ್ಷಾಸ್ವಾದ ಮಾಡನು. ಏಕೆಂದರೆ, ಅವನ ಶರೀರವು ಬೆಂಕಿಯ ಉಷ್ಣತೆಯಲ್ಲಿ ಪಳಗಿದ್ದಲ್ಲ. ಅಗ್ನಿತಪ್ತರು ಮಾತ್ರ ಸಹನೆಯಿಂದ ಅನುಭೋಗಿಸಲು ಶಕ್ತರಾಗುತ್ತಾರೆ (ಅಗ್ನಿಜ್ವಾಲಾ ತಪ್ತರಿಲ್ಲಿ ಯಾಜಕರು).

**ತಪೋಷ್ಪವಿತ್ರಂ ವಿತತಂ ದಿವಸ್ಪದೇ ಶೋಚಂತೋ ಅಸ್ಯ ತಂತವೋ ವ್ಯಸ್ಥಿರನ್ ।**
**ಅವಂತ್ಯಸ್ಯ ಪವೀತಾರಮಾಶವೋ ದಿವಸ್ಪೃಷ್ಠಮಧಿ ತಿಷ್ಠಂತಿ ಚೇತಸಾ ॥ ೨ ॥**

೨. ಸಗ್ಗದ ಪೀಠದಲ್ಲಿ ಯಾರ ತಾಪವು ಶುದ್ಧೀಕೃತವಾಗಿದೆಯೋ ಆ ಸೋಸುವವನ ತಾಪವು (ಉಷ್ಣವು) ಹರಡಲ್ಪಟ್ಟಿದೆ ; ಅದರ ದಾರಗಳು ಹೊಳೆಯುತ್ತಾ ಬಿತ್ತರಿಸಲ್ಪಟ್ಟಿವೆ. ಅವನನ್ನು ಶುದ್ಧೀಕರಿಸಿದವನ ಜೀವವನ್ನವನು ತನ್ನ ಸವೇಗ ಆನಂದೋದ್ರೇಕಗಳಿಂದ ಪೋಷಿಸುತ್ತಾನೆ. ಈ ಸಗ್ಗದ ಮೇಲ್ಮಟ್ಟಕ್ಕಾತನು ಪ್ರಜ್ಞಾತಹೃದಯದ ಮೂಲಕ ಏರುತ್ತಾನೆ.

**ಅರೂರುಚದುಷಸಃ ಪೃಶ್ನಿರಗ್ರಿಯ ಉಕ್ಷಾಬಿಭರ್ತಿ ಭುವನಾನಿ ವಾಜಯುಃ ।**
**ಮಾಯಾವಿನೋ ಮಮಿರೇ ಅಸ್ಯಮಾಯಮಾ ನೃಚಕ್ಷಸಃ ಪಿತರೋಗರ್ಭಮಾದಧುಃ ॥ ೩ ॥**

೩. ಇದೇ ಮಹೋನ್ನತ, ಬಹು ವರ್ಣಬಿಂದುಮಯ ವೃಷಭವು. ಈ ವೃಷಭವು ಉಷಸ್ಸುಗಳು ಉದಯಿಸುವಂತೆ ಮಾಡುತ್ತದೆ. ಇದೇ ಪುರುಷತತ್ವ - ಇದು ಪರಿವರ್ತನಶೀಲ ಪ್ರಪಂಚಗಳನ್ನು ಹುಟ್ಟಿಸಿ ಅನಂತವನ್ನರಸುತ್ತದೆ.

ನಿರ್ಮಾಪಕ ಶಕ್ತಿಯುಳ್ಳ ಪಿತೃಗಳು ಆ ವೃಷಭದ ಜ್ಞಾನಶಕ್ತಿಯಿಂದಲೇ ಅದಕ್ಕೊಂದು ರೂಪವನ್ನು ಕೊಟ್ಟರು. ದರ್ಶನದಾರ್ಢ್ಯವುಳ್ಳ ಆ ಪಿತೃಗಳು ಹುಟ್ಟಲಿರುವ ಮಗುವನ್ನಾಗಿ ಅದನ್ನು ರೂಪಿಸಿದರು.

**ಗಂಧರ್ವ ಇತ್ಥಾ ಪದಮಸ್ಯ ರಕ್ಷತಿ ಪಾತಿ ದೇವಾನಾಂ ಜನಿಮಾನ್ಯದ್ಭುತಃ ।**
**ಗೃಭ್ಣಾತಿ ರಿಪುಂ ನಿದಯಾ ನಿಧಾಪತಿಃ ಸುಕೃತ್ತಮಾ ಮಧುನೋ ಭಕ್ಷಮಾಶತ ॥ ೪ ॥**

೪. ಗಂಧರ್ವ ರೂಪದ ಈ ವೃಷಭದೇವನು ತನ್ನ ನಿಜಪೀಠವನ್ನು ಕಾಯ್ದುಕೊಳ್ಳುತ್ತಾನೆ. ಅತಿ ಆಶ್ಚರ್ಯಕರನೂ ಸಮುನ್ನತನೂ ಆದ ಈ ಅದ್ವಿತೀಯನು ದೇವತೆಗಳ ಜನ್ಮಗಳನ್ನು ಸುಸ್ಥಿತಿಯಲ್ಲಿಡುತ್ತಾನೆ. ಒಳರಚನೆಯ ಒಡೆಯನಾದ ಈ ವೃಷಭೇಶ್ವರನು ತನ್ನ ಆ ಅಂತಾರಚನೆಯ ಮೂಲಕ ತನ್ನ ರಿಪುಗಳನ್ನು ಹಿಡಿಯುತ್ತಾನೆ. ಕರ್ಮಪರಿಣತಿಯಲ್ಲಿ ಪೂರ್ಣತ್ವ ಪಡೆದವರು ಈತನ ಮಧುಮಾಧುರ್ಯವನ್ನು ಸವಿಯುತ್ತಾರೆ.

**ಹವಿರ್ ಹವಿಷ್ಮೋ ಮಹಿಸದ್ಮದೈವ್ಯಂ ನಭೋವಸಾನಃ ಪರಿಯಾಸ್ಯಧ್ವರಂ ।**
**ರಾಜಾ ಪವಿತ್ರ ರಥೋ ವಾಜಮಾರುಹಃ ಸಹಸ್ರ ಭೃಷ್ಟಿರ್ಜಯಸಿ ಶ್ರವೋ ಬೃಹತ್ ॥ ೫ ॥**

೫. ಹೇ ಸೋಮನೇ, ನಿನ್ನಲ್ಲಿ ಆಹಾರವಿದೆ, ಆ ದಿವ್ಯ ಆಹಾರವೇ ನೀನು ; ನೀನೇ ಆ ವಿಶಾಲವಾದ ದಿವ್ಯ ಗೃಹವು ; ಸ್ವರ್ಗವನ್ನು ವಸ್ತ್ರವನ್ನಾಗಿ ಧರಿಸಿ ನೀನು ಯಜ್ಞಪ್ರಯಾಣವನ್ನು ಆವರಿಸಿದ್ದೀಯೆ. ಪವಿತ್ರಗೊಳಿಸುವ ಜರಡಿ ಹಿಡಿದ ರಾಜನೇ ನಿನ್ನ ರಥವನ್ನೇರಿ ನೀನು ಹೇರಳ ಶ್ರೇಯೋಭಿವೃದ್ಧಿ ಸ್ತರವನ್ನು ಏರುವೆ ; ನಿನ್ನ ಸಹಸ್ರ ಜ್ವಲ ಜ್ವಾಲೆಗಳಿಂದ ಯಾ ಉರಿವ ಹೊಳಪುಗಳಿಂದ ನೀನು ವಿಶಾಲ ಜ್ಞಾನವನ್ನು ಗೆಲ್ಲುತ್ತೀಯೆ.



# ವ್ಯಾಖ್ಯಾನ

ವೈದಿಕ ಆರಾಧನೆಯು ಇಂದಿನ ಅರ್ಥಮರ್ಯಾದಾನುಸಾರವಾಗಿ "ಮೋನೋಥೀಂಯಿಸಂ"= ಏಕದೇವತಾವಾದವಾಗಿರಲಿಲ್ಲ. ಆದರೆ ಸತತವಾಗಿ ವೈದಿಕ ಋಷಿಗಳು, ಸರಳವಾಗಿ, ಎಷ್ಟೋ ಸಲ ಎದ್ದು ಕಾಣುವಂತೆ, ಕೆಲವೆಡೆ ಜಟಿಲ ಸಂಕೀರ್ಣ ಶೈಲಿಯಲ್ಲಿ, ತಾವು ಆಹ್ವಾನಿಸುವ ಅನೇಕ ದೇವತೆಗಳೆಲ್ಲಾ ಒಂದೇ ಒಂದು ದೇವತೆ ಎಂಬ ಅಂತರ್ಗತ ವಿಚಾರವನ್ನು ಅಭಿಜ್ಞಾಪಿಸುತ್ತಲೇ ಬಂದಿದ್ದಾರೆ - ಈ ಏಕಮೇವಾದ್ವಿತೀಯಂ ದೇವರು ನಾನಾ ನಾಮವುಳ್ಳವನೂ ನಾನಾ ಲಕ್ಷಣ ಸಂಪನ್ನನೂ ಆ ಅನೇಕ ದಿವ್ಯ ವ್ಯಕ್ತಿತ್ವಗಳ ಮೂಲಕ ಪ್ರಚ್ಛನ್ನನಾಗಿ ಮಾನವನ ಹತ್ತಿರ ಬರುತ್ತಾನೆ. ಪಾಶ್ಚಾತ್ಯ ವಿದ್ವಾಂಸರು ಈ ಮತಧಾರ್ಮಿಕ ಮನಃಪ್ರಣಾಳಿಯಿಂದ ಗಲಿಬಿಲಿಗೊಳಗಾಗಿ ಇದನ್ನು ವಿವರಿಸಲೆಂದು ವೈದಿಕ "ಹೆನೋಥೀಂಯಿಸಂ" ಎಂಬ ವಾದವನ್ನು ಕಲ್ಪಿಸಿದರು. ಆದರಿದು ಭಾರತೀಯ ಮನಃಪ್ರಣಾಳಿಗೆ ಅನವಶ್ಯಕ. ಭಾರತೀಯರಿಗೆ ಏಕದೇವನು ಅನೇಕ ನಾಮರೂಪ ಗುಣಗಳನ್ನು ತಾಳುವುದು ತೀರಾ ಸಹಜವಾದುದೆಂದು ತೋರುತ್ತದೆ. ಪಾಶ್ಚಾತ್ಯರು ಮೊದಲು ವೈದಿಕ ಋಷಿಗಳೆಲ್ಲಾ ಬಹು ದೇವತಾರಾಧಕರು ಎಂದು ತಿಳಿದರು. ಆದರೆ ಆರಾಧನೆಯ ಕಾಲದಲ್ಲಿ ಯಾರು ಆರಾಧ್ಯನೋ ಅವನೇ "ಏಕ ಏವ ಅದ್ವಿತೀಯಃ"! ಅವನು ಸರ್ವಾಧಿಕನೋ ನಿರಸ್ತೇತರ ದೇವನೋ ಆಗಿರುವುದು ವರ್ಣಿತವಾಗಿರುತ್ತದೆ. ಈ "ಹೆನೊಥೀಂಯಿಸಂ" ಸೃಷ್ಟವಾದದ್ದು ಪರದೇಶೀಯ ಮನೋಧರ್ಮಕ್ಕೆ ಸಹಜ. ಪರದೇಶೀಯರಿಗೆ ಒಂದೇ ಒಂದಾದ ದಿವ್ಯ ಸತ್ತೆಯು ಅನೇಕ ನಾಮರೂಪಗಳಲ್ಲಿ ಅವತರಿಸುವದೆಂಬುದೂ ಆಯಾ ಅವತಾರದ ಪ್ರತ್ಯೇಕ ಆರಾಧನೆಯಲ್ಲಿ ಅದೇ ಏಕೇವ ಸರ್ವಾಧಿಕ ದೇವತೆಯೆಂದು ಆರಾಧಕನು ಭಾವಿಸುತ್ತಾನೆಂಬುದೂ ಅರ್ಥವಾಗಲೂ ಇಲ್ಲ- ಒಪ್ಪಿಗೆಯಾಗಲೂ ಇಲ್ಲ. "ಈ ಹೆನೋಥೀಂಯಿಸಂ" ಎಂಬುದನ್ನು ಅವರು ಕೃತಕವಾಗಿ ನಿರ್ಮಿಸಿದುದು ಭಾರತೀಯರ ಕಲ್ಪನೆಯಾದ ಒಂದೇ ಒಂದು ತತ್ ಎಂಬ ದಿವ್ಯಾಸ್ತಿತ್ವವು ಅನೇಕ ನಾಮರೂಪಗಳಿಂದ ಅಭಿವ್ಯಕ್ತವಾಗುವ ಮತ್ತು ಆಯಾ ನಾಮರೂಪದಲ್ಲಿ ಪ್ರತ್ಯಕ್ಷನಾದಾಗ ಆ ದೇವನೇ ಸರ್ವೋತ್ತಮನೆಂದು ಆರಾಧಿಸುವ, ಏಕ ಏವ ಅದ್ವಿತೀಯ ಎಂದು ಪೂಜಿಸುವ ಪದ್ಧತಿಯು ಅರ್ಥವಾಗದೆ ಅದಕ್ಕೇನಾದರೂ ವಿವರಣೆ ಕೊಡಬೇಕೆಂಬ ವಿದೇಶೀಯ ಮನೋಧರ್ಮದಿಂದ. ಪೌರಾಣಿಕ ಮತಧರ್ಮಗಳಿಗೆ ದೇವರ ಈ ಕಲ್ಪನೆಯೇ ಬುನಾದಿ. ಇದು ಆಗಲೇ ವೈದಿಕ ಪಿತೃ ಪಿತಾಮಹರ ಸಂಸ್ಕೃತಿಯ ಸ್ವತ್ತಾಗಿತ್ತು.

ವೇದಾಂತದ ಬ್ರಹ್ಮ ಕಲ್ಪನೆಯು ಆಗಲೇ ವೇದದಲ್ಲಿ ಬೀಜರೂಪದಲ್ಲಿತ್ತು. ಅದು ಅಜ್ಞೇಯವೂ ಕಾಲಾತೀತವೂ ಸತ್ತಾಮಾತ್ರ ಸ್ವರೂಪವುಳ್ಳದ್ದೂ ಸರ್ವೋಚ್ಚವೂ-ಇಂದು-ನಾಳೆ ಅಲ್ಲದುದೂ ದೇವತೆಗಳ ಚಲನೆಯಲ್ಲಿ ಚಲಿಸುತ್ತಿರುವುದೂ ಆದರೆ ಮನಸ್ಸಿನ ಶೋಧ ಪ್ರಯತ್ನಕ್ಕೆ

ಸಿಗದೆ ಅದೃಶ್ಯವಾಗುವ ಸ್ವಭಾವವುಳ್ಳದ್ದೂ ಆದ ತತ್ ಎಂಬುದನ್ನು ಮನ್ನಿಸಿತ್ತು. (I.170.1) ಅದನ್ನು ನಪುಂಸಕಲಿಂಗದಲ್ಲಿಡಲಾಗಿತ್ತು. - ಅದನ್ನು ತತ್ ಎನ್ನಲಾಗುತ್ತಿತ್ತು. ಅದನ್ನನೇಕ ಸಲ ಅಮೃತತತ್ವದೊಡನೆ ಏಕೀಕರಿಸಿ ಹೇಳಲಾಗುತ್ತಿತ್ತು. ಅಮೃತತ್ವವು (ಅಮರ್ತ್ಯತೆಯು) ಸರ್ವೋಚ್ಚ ತ್ರಿಪುಟ ತತ್ವ, ನಿಃಸ್ಸೀಮ ಆನಂದವು. ಆ ಆನಂದವನ್ನು ಮಾನವನು ಬಯಸುತ್ತಾನೆ.

ಬ್ರಹ್ಮನು ಅಚಲ ಮತ್ತು ದೇವತೆಗಳೆಲ್ಲರ ಏಕಾತ್ಮನು. "ಅಚಲನು ವೈಶಾಲ್ಯವಾಗಿ ಜನಿಸಿದನು ಅದಿತಿ ಎಂಬ ಗೋಸ್ಥಾನದಲ್ಲಿ, ಗೋಪೀರದಲ್ಲಿ.... ಅಪರಂಪಾರನಾದ ಅವನು ಒಬ್ಬನೇ ಒಬ್ಬನಾದ ಮತ್ತು ಸರ್ವ ದೇವತೆಗಳ ಮಹಾ ಬಲಿಷ್ಠತೆ (III.55.1) ಅದೊಂದೇ ಇರವು - ಅದಕ್ಕೇ ಋಷಿಗಳು (ದ್ರಷ್ಟಾರರು) ಇಂದ್ರ, ಮಾತರಿಶ್ವನ್, ಅಗ್ನಿ ಎಂಬಂಥ ವಿವಿಧ ಹೆಸರುಗಳನ್ನು ಕೊಟ್ಟಿದ್ದಾರೆ. (I.164.46).

ಈ ಬ್ರಹ್ಮವು ಒಂದೇ ಒಂದಾದ ಸತ್ತೆ- ಅವೈಯಕ್ತಿಕವಾಗಿ ಹೀಗೆ ಅಭಿಹಿತ, ನಪುಂಸಕಲಿಂಗದಲ್ಲಿ ನಿಹಿತ, ದೇವನೆಂದು ಕಲ್ಪಿತ, ಮಹೋನ್ನತ ದೇವತಾತತ್ವವೆಂದು ಕೂಡಾ ಅಭಿಜ್ಞಾತ - ಸರ್ವವಸ್ತುಗಳ ತಂದೆ - ಭೂಲೋಕದಲ್ಲಿ ಅದು ಮಾನವ ಜೀವಾತ್ಮದಲ್ಲಿ ಮಗನಾಗಿ ಜನಿಸುತ್ತದೆ. ಹೊರದೋರುತ್ತದೆ. ಅದು ಆನಂದಮಯವು, ಅದರೆಡೆಗೆ ದೇವರುಗಳ ಚಲನೆ ಮೇಲೇರುತ್ತಾ ಹೋಗುತ್ತದೆ. ಏಕಕಾಲದಲ್ಲಿ ಅದು ಸ್ತ್ರೀ ಮತ್ತು ಪುರುಷ ಎನ್ನಿಸಿ ಆವಿರ್ಭವಿಸುತ್ತದೆ. ("ವೃಷಂ, ಧೇನು"). ಪ್ರತಿಯೊಬ್ಬ ದೇವತೆಯೂ ಒಬ್ಬನೇ ಒಬ್ಬನಾದ ನಪುಸಂಕಲಿಂಗದ ಬ್ರಹ್ಮದೈವದ ವ್ಯಕ್ತಿತ್ವದ ಅಭಿವ್ಯಂಜನೆ, ಯಾವುದಾದರೊಂದು ಲಕ್ಷಣ, ಒಂದು ಅಂಶ ಒಂದು ಮುಖ. ಆ ಯಾವದಾದರೊಂದು ನಾಮದಿಂದ, ಲಕ್ಷಣದಿಂದ, ಇಂದ್ರನ ಮೂಲಕ, ಅಗ್ನಿಯ ಮೂಲಕ, ಸೋಮನ ಮೂಲಕ ನರನು ಆ ಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. ಆ ದೇವತೆಗಳಲ್ಲಿ ಪ್ರತಿಯೊಬ್ಬನೂ ತನ್ನಲ್ಲೇ ಸರ್ವದೇವತೆ ಮತ್ತು ಕೇವಲ ತನ್ನ ಎದುರಿನಲ್ಲಿ ಯಾ ಲಕ್ಷಣದಲ್ಲಿ ನಮಗೆ ಭಿನ್ನವಾಗಿ ತೋರಿದರೂ ಅದು ತನ್ನೊಳಗೆ ಎಲ್ಲ ದೇವತೆಗಳನ್ನೂ ತುಂಬಿಕೊಂಡಿರುತ್ತದೆ.

ಹೀಗೆ ಅಗ್ನಿಯನ್ನು ಸರ್ವೋತ್ತಮ ಮತ್ತು ಸರ್ವದೇವಾತ್ಮಕ ಸರ್ವದೇವ ಸ್ವರೂಪ- ಎಂದು ಸೂಕ್ತಿಸಲಾಗಿದೆ. "ಎಲೈ ಅಗ್ನಿಯೇ, ನೀನು ವರುಣನು-ಹುಟ್ಟಿದಾಗ. ಚೆನ್ನಾಗಿ ಹೊತ್ತಿಸಿದಾಗ ನೀನು ಮಿತ್ರನಾಗುವೆ. ಹೇ ಪ್ರಣೋದ ಪುತ್ರನೇ, ಎಲ್ಲ ದೇವರುಗಳೂ ನಿನ್ನಲ್ಲಿದ್ದಾರೆ - ನೀನು ಯಾಜಕನಿಗೆ ಇಂದ್ರನು. ಕುಮಾರಿಯರ ಹೆಸರಿನಲ್ಲಿದ್ದಾಗ ನೀನು ಗುಪ್ತಿಯನ್ನು ಹೊತ್ತಂಥ ಅರ್ಯಮನು ಆಗುವೆ. ಗೃಹಿಣೀ ಗೃಹಸ್ಥರ ಮನಸ್ಸನ್ನು ನೀನು ಒಂದುಮಾಡಿದಾಗ ಮತ್ತು ಮಿತ್ರನು ಸುಪ್ರತಿಷ್ಠಿತನಾದಾಗ ನಿನ್ನನ್ನವರು ಪ್ರಭಾಮಯನಾಗಿ ಹೊಳೆವಂತೆ ಮಾಡುತ್ತಾರೆ. ಏಕೆಂದರೆ, ಓ ರುದ್ರನೇ ನಿನ್ನ ವೈಭವ ವೃದ್ಧಿಗಾಗಿ ಮರುತ್ತುಗಳು ತಮ್ಮ ಒತ್ತಡದಿಂದ, ಹೊಳೆಯುವಂತೆ ಮಾಡುತ್ತಾರೆ. ಅದೇ ನಿನ್ನ ಪ್ರಜ್ವಲ, ವೈವಿಧ್ಯಪೂರ್ಣವಾದ ಜನನ. ವಿಷ್ಣುವಿನ ಪರಮಪದದಲ್ಲಿ ನೀನು ಕಿರಣಗಳ ಗುಪ್ತನಾಮವನ್ನು (ದನಗಳು "ಗೋನಾಂ") ರಕ್ಷಿಸುವೆ. ನಿನ್ನ ವೈಭವದಿಂದ ಎಲೈ ದೇವನೇ, ದೇವತೆಗಳಿಗೆ ಸದ್ದರ್ಶನ ಸಿದ್ಧಿಸುತ್ತದೆ. ಸರಿಯಾದ ದೃಷ್ಟಿ ಶಕ್ತಿ ಬರುತ್ತದೆ. ಮತ್ತು ಅವರು (ಈ ವಿಶಾಲ ಸೃಷ್ಟಿಯ) ಗುಣಿತ ಸಂಖ್ಯಾತ ವಸ್ತುಗಳನ್ನು ತಮ್ಮಲ್ಲಿ ಧರಿಸಿಯೂ ಅಮೃತತ್ವವನ್ನು ಆಸ್ವಾದಿಸುತ್ತಾರೆ. ಅವರಲ್ಲಿ ಮನುಷ್ಯರು ಅಗ್ನಿಯನ್ನು ಹೊತ್ತಿಸುತ್ತಾರೆ, ಯಜ್ಞ ಪುರೋಹಿತನನ್ನಾಗಿ ಮಾಡುತ್ತಾರೆ

- ಅಮೃತತ್ವವು ಬೇಕೆನ್ನಿಸಿದಾಗ. ದೇವತೆಗಳಾಗವರು ಇರವಿನ ಸ್ವಾಭಿವ್ಯಕ್ತಿಯನ್ನು ವಿತರಣ ಮಾಡುತ್ತಾರೆ... ನಿನ್ನ ಜ್ಞಾನದಲ್ಲಿ ಪಿತೃವನ್ನು ಜಿಡಿಸು ಮತ್ತು ಪಾಪಾಂಧಕಾರಗಳನ್ನು ದೂರಕ್ಕೆ ಅಟ್ಟು. ನಿನ್ನ ಮಗನಾಗಿ ನಮ್ಮಲ್ಲಿ ಹುಟ್ಟಿದ ಆ ತಂದೆಯನ್ನು ಪಾಪ-ಅಜ್ಞಾನಗಳಿಂದ ಮುಕ್ತಗೊಳಿಸೋ ಹೇ ಪ್ರಣೋದಾಪತ್ಯನೇ! (V.3) ಇಂದ್ರನನ್ನೂ ಹೀಗೆ ಸೂಕ್ತಿಸಲಾಗಿದೆ ಮತ್ತು ವಾಮದೇವನ ಈ ಒಂಬತ್ತನೆಯ ಮಂಡಲದ ಎಂಬತ್ತೂರನೆಯ ಸೂಕ್ತದಲ್ಲಿ -ಮಿಕ್ಕ ಹಲವಾರು ಸೂಕ್ತಗಳಲ್ಲಿ-ಯಂತೆಯೇ ಸೋಮನೂ ತನ್ನ ವಿಶಿಷ್ಟ ಕರ್ತವ್ಯಗಳನ್ನು ದಾಟಿ ಸರ್ವೋತ್ತಮ ದೇವನಾಗಿ ಪ್ರಕಟವಾಗುತ್ತಾನೆ.

ಸೋಮನು ಆಹ್ಲಾದಮದ್ಯದ ಅಧಿಷ್ಠಾನ ದೇವತೆ. ಆ ಆಹ್ಲಾದವೇ ಅಮರ್ತ್ಯತ್ವವು. ಅಗ್ನಿಯಂತೆಯೇ ಅವನು ಸಸ್ಯಾಂತರ್ಗತನಾಗಿದ್ದಾನೆ ; ಭೂಜಾತಗಳಲ್ಲೆಲ್ಲಾ ಇದ್ದಾನೆ; ಜಲಗಳಲ್ಲೂ ಇದ್ದಾನೆ. ಬಾಹ್ಯಯಜ್ಞದಲ್ಲಿ ಬಳಸುವ ಸೋಮಮದ್ಯವು ಈ ಆಹ್ಲಾದಮದ್ಯದ ಸಂಕೇತವು. ಅದ್ರಿಯಿಂದ, ಗ್ರಾವದಿಂದ, ಒತ್ತುಗಲ್ಲುಗಳಿಂದ ಅದು ಜಜ್ಜಲ್ಪಟ್ಟು ಆ ಲತೆಯನ್ನು ಹಿಂಡುವುದರಿಂದ ಬರುತ್ತದೆ. ಆ ಜಜ್ಜುಗಲ್ಲು ಸಾಂಕೇತಿಕವಾಗಿ ಸಿಡಿಲಿಗೆ ನಿಕಟ ಸಂಬಂಧವುಳ್ಳದ್ದಾಗಿದೆ. ಇಂದ್ರನು ಮಾಡಿದ ವಿದ್ಯುತ್ ಪ್ರಣೋದವೂ "ಅದ್ರಿಯೇ". ಇಂದ್ರಾಯುಧದ ಮಿಂಚು-ಗುಡುಗುಗಳ ಜೊತೆಗೇ ವೇದ ಸೂಕ್ತಗಳು ಈ ಕಲ್ಲಿಗೆ ಮಿಂಚುವ ಸಿಡಿಲುಗಳಿವೆ ಎನ್ನುತ್ತವೆ. ಒಮ್ಮೆ ಹಿಂಡಿತೆಗೆದ ಮೇಲೆ ಸತ್ತಾಹ್ಲಾದ ಸ್ವರೂಪದ ಸೋಮನನ್ನು ಪವಿತ್ರದಿಂದ ಯಾ ಜರಡಿಯಿಂದ, ಸೋಸಿ ಶುದ್ಧ ಮಾಡಬೇಕು ಮತ್ತು ಆ ಜರಡಿಯ ಮೂಲಕ ಚಮುವೆಂಬ ಮದ್ಯಪಾತ್ರದೊಳಗೆ ಅವನು ತನ್ನ ಪಾವಿತ್ರ್ಯ ಧಾರೆಯನ್ನು ಸುರಿಸುತ್ತಾನೆ. ಆ ಚಮುವಿನಲ್ಲಿ ತುಂಬಿಕೊಂಡು ಸೋಮರಸವನ್ನು ಯಜ್ಞಕ್ಕೆ ತರಲಾಗುತ್ತದೆ. ಅಥವಾ ಅವನನ್ನು ಭರಣಿಗಳಲ್ಲಿ ತುಂಬಿ ಇಡಲಾಗುತ್ತದೆ - (ಕಲಶ-ಭರಣಿ). ಏಕೆ? ಇಂದ್ರನಿಗೆ ಕುಡಿಯಲಿಕ್ಕಾಗಿ. ಅಥವಾ ಕೆಲವೊಮ್ಮೆ ಪಾನಪಾತ್ರೆಯ ಸಂಕೇತತೆಯನ್ನು ಉಪೇಕ್ಷಿಸಿ ಸೋಮನು ನೇರವಾಗಿ ಆಹ್ಲಾದ ನದಿಯಾಗಿ ದೇವರ ಪೀಠದತ್ತ ಅರ್ಥಾತ್ ಅಮೃತತ್ವದ ಮನೆಯತ್ತ ಹರಿಯುವವನೆಂದು ವರ್ಣಿಸಿದ್ದುಂಟು. ಇವೆಲ್ಲಾ ಸಂಕೇತಗಳೆಂಬುದು ಒಂಬತ್ತನೆಯ ಮಂಡಲದ ಬಹುಸಂಖ್ಯಾತ ಸೂಕ್ತಗಳಲ್ಲಿ ಸ್ಪಷ್ಟವಾಗುತ್ತದೆ - ಉಕ್ತ ಸೂಕ್ತಗಳೆಲ್ಲಾ ಸೋಮ-ವಿಷಯಕವಾದವುಗಳು. ಉದಾ: ಮಾನವನ ಭೌತಿಕ ಘಟವನ್ನು (ದೇಹವನ್ನು) ಭರಣಿಯೆಂದು ಕರೆಯಲಾಗಿದೆ ; ಅದರಲ್ಲಿ ಸೋಮವನ್ನು ತುಂಬಿಡುವುದು ಉಲ್ಲಿಖಿತ. "ದಿವಸ್ಪದದಲ್ಲಿ"=-ಸ್ವರ್ಗಪೀಠದಲ್ಲಿ ಹಾಗೆ ಶುದ್ಧೀಕೃತನಾದ ಸೋಮನನ್ನು ಚೆಲ್ಲಿ ಬಿಡಲಾಗುವುದೆಂದೂ ಹೇಳಲಾಗಿದೆ.

ಸೂಕ್ತವು ಮದ್ಯ ಸೋಸುವ ಮತ್ತು ಅದನ್ನು ಭರಣಿಗೆ ತುಂಬುವ ಭೌತಿಕ ಸಂಗತಿಗಳ ಅಲಂಕಾರ ಪ್ರತಿಮೆಗಳಿಂದ ಆರಂಭವಾಗುತ್ತದೆ. ಸಾರಣಿಗೆ (ಜರಡಿ) ಯಾ ಶುದ್ಧೀಕರಣ ಸಾಧನವು ಸ್ವರ್ಗಪೀಠದಲ್ಲಿ (ಸಗ್ಗದ ಮಣೆಯಲ್ಲಿ) ಇಟ್ಟಿರುವುದು ಅಗಲ ಮಾಡಲು ಬರುವ ಜ್ಞಾನ ಪ್ರಬುದ್ಧವಾದ ಮನಸ್ಸು ಅರ್ಥಾತ್ ಅದು ಚೇತಸ್ಸಾಗಿರಬೇಕು. ಮಾನವನ ಮನೋದೈಹಿಕ ಯಂತ್ರವು ಜೀವದ್ದೇಹವು, ಭರಣಿಯಿಂದ ಸಂಕೇತಿತವಾಗಿರಬೇಕು. "ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ" - ಸೋಸುವ ಜರಡಿಯನ್ನು ನಿನಗಾಗಿ ಅಗಲಿಸಿ ಇಡಲಾಗಿದೆ - ಓ ಜೀವಾತ್ಮೇಶ್ವರ, "ಪ್ರಭುರ್ ಗಾತ್ರಾಣಿ ಪರ್ಯೇಷಿ ವಿಶ್ವತಃ=ವ್ಯಾಕೃತನಾಗಿ ನೀನು ನಮ್ಮ ಸರ್ವಾವಯವಗಳಲ್ಲಿ ತುಂಬಿಕೊಂಡಿರುವೆ, ಹೊಕ್ಕಿರುತ್ತೀಯೆ. ಸೋಮನನ್ನಿಲ್ಲಿ ಬ್ರಹ್ಮಣಸ್ಪತಿಯೆಂದು ಕರೆಯಲಾಗಿದೆ.

ಈ ಪದವನ್ನು ಕೆಲಸಲ ಇತರ ದೇವತೆಗಳಿಗೂ ಅನ್ವಯಿಸಲಾಗುತ್ತದೆ; ಆದರೆ ಸಾಮಾನ್ಯವಾಗಿ ಬೃಹಸ್ಪತಿಗೇ ಈ ಪದವು ಮೀಸಲು -ಬೃಹಸ್ಪತಿಯು ಮಂತ್ರಾಧಿಪತಿಯು. ವೇದದಲ್ಲಿ ಬ್ರಹ್ಮನು ಆತ್ಮ ಯಾ ಆತ್ಮಪ್ರಜ್ಞೆ - ಅದು ವಸ್ತುಗಳ ಗುಪ್ತ ಹೃದಯದಿಂದ ಹೊರಜೀಉತ್ತದೆ. ಆದರೆ ಅದಕ್ಕಿಂತ ಹೆಚ್ಚು ಸಾರಿ, ಸರ್ಜನಶೀಲ, ಸ್ಫೂರ್ತ, ಗುಪ್ತ ಸತ್ಯಪೂರ್ಣ, ಎನ್ನಿಸಿ ಪ್ರಜ್ಞೆಯಿಂದ ಹೊರಗೆ ಹೊರಟು "ಮನ್ಮ" ಅಥವಾ ಮನೋವಿಚಾರವಾಗಿ ಪರಿವೃತ್ತವಾಗುವುದು. ಇಲ್ಲಿ ಇದು ಆತ್ಮಾರ್ಥಕವೇ ಆಗಿ ತೋರುತ್ತದೆ. ಆನಂದೇಶ್ವರನಾದ ಸೋಮನು ಆತ್ಮವನ್ನು ಆಸ್ತಿಯನ್ನಾಗಿ ಉಳ್ಳ ನಿಜವಾದ ಸ್ರಷ್ಟಾರನು - ಆ ಆತ್ಮದ ಸ್ವತ್ತಿನಿಂದ ದಿವ್ಯ ಸೃಷ್ಟಿಯೊಂದನ್ನು ಮಾಡುತ್ತಾನೆ. ಅವನಿಗೆ ಪ್ರಬುದ್ಧವಾದ ಮನಸ್ಸೂ ಹೃದಯವೂ ಪವಿತ್ರೀಕರಣದ ಒಂದು ಶರಣಿಯಾಗಿವೆ (ಸಲಕರಣೆಯಾಗಿದೆ). ಅದರಲ್ಲಿರುವ ಪ್ರಜ್ಞೆಯು ಎಲ್ಲಾ ಸಂಕೋಚ-ದ್ವೈತಗಳಿಂದ ಮುಕ್ತವಾಗಿರುವುನಸ ಜೀವನದ ಪೂರ್ಣ ಪ್ರವಾಹವನ್ನು ಸ್ವೀಕರಿಸಿ, ಅದನ್ನು ನಿಜ ಇರವಿನ ಶುದ್ಧಾಹ್ಲಾದವನ್ನಾಗಿ, ದಿವ್ಯಾಹ್ಲಾದವನ್ನಾಗಿ, ಅಮರ್ತ್ಯಾನಂದನವನ್ನಾಗಿ ಮಾಡಲೆಂದೇ ರೂಪಿತವಾದದ್ದು.

ಹಾಗೆ ಸ್ವೀಕೃತವಾದ ಕಾಳು-ಜೊಳ್ಳುಗಳನ್ನು ಬೇರ್ಪಡಿಸಲಾದ, ಗಾಳಿಸಿದ, ಜೀವನ ಸೋಮಮಧ್ಯವು ಆನಂದವಾಗಿ ಮಾರ್ಪಡಿಸಲ್ಪಟ್ಟು ಭರಣಿಯೊಳಗೆ ಸುರಿದು ತುಂಬಿಕೊಂಡಂತೆ ಮಾನವ ಶರೀರ ಯಂತ್ರದ ಸರ್ವಾವಯವಗಳಲ್ಲೂ ಹೊಕ್ಕು ಅವುಗಳೆಲ್ಲವುಗಳ ಮೂಲಕವೂ ಹರಿಯುತ್ತದೆ. ಅವುಗಳ ಸರ್ವಾಯವಗಳ ಭಾಗಗಳಲ್ಲೂ ಹರಿಯುತ್ತದೆ. ಘನಮದ್ಯಸಾರದಿಂದ ಮಾನವ ಶರೀರವು ತತ್‌ಸ್ವರ್ಶಪೂರ್ಣವೂ ಉತ್ಸಾಹ ಪೂರ್ಣವೂ ಆಗುತ್ತಾ ಹೋದ ಹಾಗೆ, ಭೌತಿಕ ಘಟಕಗಳೆಲ್ಲವೂ ದಿವ್ಯಾನಂದ ಸ್ಪರ್ಶದಿಂದಲೂ ಉತ್ತೇಜನದಿಂದಲೂ ತುಂಬಿ ಹೋಗುವುದು. "ಪ್ರಭು-ವಿಭು" ಶಬ್ದಗಳು ವೇದದಲ್ಲಿ ಮೊದಲು ಒಡೆಯ ಎಂಬ ಅರ್ಥದಲ್ಲಿ ಬಳಸುತ್ತಿರಲಿಲ್ಲ. ಆದರೆ ಪ್ರಚೇತಸ್ಸಿನಂತೆ ಮತ್ತು ವಿಚೇತಸ್ಸಿನಂತೆ ಅಥವಾ ಪ್ರಜ್ಞಾನ-ವಿಜ್ಞಾನಗಳಂತೆ ಒಂದು ಸ್ಥಿರ ಮಾನಸಶಾಸ್ತ್ರೀಯ ಅರ್ಥದಲ್ಲಿ ಅರ್ಥಾತ್ ಪ್ರಜ್ಞೆಯ ಎದುರಿಗೆ ಅಸ್ತಿತ್ವಕ್ಕೆ ಬರುವುದು ಮತ್ತು ವ್ಯಾಪಕವಾಗಿ ಅಸ್ತಿತ್ವಕ್ಕೆ ಬರುವುದು ಎಂಬ ಇರುವಿಕೆಯಿಂದ ಭಿನ್ನವಾದ ಆಗುವಿಕೆಯ ಅರ್ಥಭೇದಗಳಲ್ಲಿ ಬಳಸಲಾಗುತ್ತಿತ್ತು. ಈ ಆಗುವಿಕೆಯು ಒಂದು ವೈಯಕ್ತಿಕ ಅನುಭವ ಯಾ ಒಂದು ನಿಶ್ಚಿತ ಬಿಂದುಸ್ಥಲದಲ್ಲಿ ಘನೀಭೂತವಾದದ್ದು (ಪ್ರಭು) ; ಮತ್ತು ಇಡೀ ಸತ್ತೆಯನ್ನು ಆವರಿಸುವ ಆನಂದಸ್ವರೂಪವನ್ನು ತಾಳಿದ ಮೇಲೆ ಅದು "ವಿಭು" ಎನ್ನಿಸುತ್ತದೆ.

ಆದರೆ ದಿವ್ಯಾಹ್ಲಾದದ ಆಗ ಈಗ ತರ್ಜನಶೀಲವಾಗುವ ಮತ್ತು ಸುಪ್ತವಾದ ಆನಂದೋದ್ರೇಕವನ್ನು ಹಿಡಿದು ನೆಲೆ ನಿಲ್ಲಿಸಿ ಅನುಭೋಗಿಸಬಲ್ಲ ಮಾನವ್ಯ ಶರೀರ ಘಟಕವು ವಿರಳ-ಪ್ರತಿಯೊಂದಕ್ಕೂ ಅದು ಸಾಧ್ಯವಾಗದು- "ಅತಪ್ತ ತನುರ್ ನ ತದ್ ಆಮೋ ಅಶ್ನುತೇ" = ಯಾರು ಅಪಕ್ವನೋ ಯಾರ ಶರೀರವು ತಪ್ತವಾಗಿಲ್ಲವೋ ಅವನು ಆಸ್ವಾದಿಸಲಾರ ಮತ್ತು ಭೋಗಿಸಿ ಆಹ್ಲಾದಿಸಲಾರನು. "ಶೃತಾಸ ಇದ್ ವಹಂತಸ್ ತತ್ ಸಮಾಶತ"= ಬೆಂಕಿಯಲ್ಲಿ ಬೆಂದವರು ಮಾತ್ರ ಆ ಆನಂದೋದ್ರೇಕವನ್ನು ಹೊರಬಲ್ಲರು ಮತ್ತು ಅನುಭೋಗಿಸಬಲ್ಲರು. ದಿವ್ಯ ಜೀವನದ ಮದ್ಯವು ಮಾನವ್ಯ ಶರೀರದಲ್ಲಿ ಸುರಿಯಲ್ಪಟ್ಟಾಗ ಅದೊಂದು ಬಲಿಷ್ಠವೂ ಅತಿವೇಲಾವಾಹಿಯೂ ಮತ್ತು ತರ್ಜನ-ತಾಡನಶೀಲ ಭಾವೋದ್ರೇಕವು. ಅನುಭವ, ಅತಿಕಷ್ಟ,

ಅತ್ಯುಗ್ರ ಅಗ್ನಿಜ್ವಾಲಾ ಹತಿಗಳನ್ನು ಜೀವನದಲ್ಲಿ ಅನುಭವಿಸಿ ಪಡೆದ ಬಲಿಷ್ಠ ಸಹನೆಯಿಂದ ಪಳಗದಿರುವ (ಸಿದ್ಧವಾಗಿರದ), ಅವಯವ ಸಂಘಟನವು (ಶರೀರವು), ಆ ಆನಂದ ಸಾಗರದ ಮಹಾಪ್ರವಾಹದ ರಂಗತರಂಗಗಳ ತಾಂಡವವನ್ನು ಧಾರಣೆ ಮಾಡಲಾರದು : ಕುಂಬಾರನ ಆವಿಗೆಯಲ್ಲಿ ಚೆನ್ನಾಗಿ ಬೇಯದ ಹಸಿ ಮಣ್ಣಿನ ಪಾತ್ರೆಯು ಸೋಮರಸವನ್ನು ತುಂಬಿಟ್ಟುಕೊಳ್ಳಲಾರದು ; ಅದು ಒಡೆದು ಹೋಗಿ ಅಮೂಲ್ಯ ರಸವನ್ನು ಚೆಲ್ಲಿ ಬಿಡುತ್ತದೆ. ಆದುದರಿಂದ ಮಾನವನ ಭೌತಿಕ ದೇಹಯಂತ್ರವು (ದೇಹಭಾಂಡವು) ಅಸಿದ್ಧವಾಗಿರುವಾಗ ಅವನು ಅದನ್ನಾಶಿಸಬಾರ-ದೆಂಬುದು ತಾತ್ಪರ್ಯವು. ಈ ಸಾರವತ್ತಾದ ಆನಂದ ಮದ್ಯವನ್ನು ಕಷ್ಟ ನಷ್ಟಗಳನ್ನನುಭವಿಸಿ, ಜೀವನದ ಚಿತ್ರಹಿಂಸಾಕರವಾದ ಕಾವನ್ನು ಗೆದ್ದು ಗುಪ್ತವೂ ಆಗ್ನೇಯವೂ ಆದ ಉಷ್ಣತೆಯಿಂದ ತಯಾರಿಸಿದ್ದಾಗಿರಬೇಕು. ಇಲ್ಲವಾದರೆ, ಮಾನವನ ಪ್ರಜ್ಞಾತ ಇರವು ಅದನ್ನು ಹಿಡಿದಿಟ್ಟು-ಕೊಳ್ಳಲಾರದು - ಅದು ಚೆಲ್ಲಿ ಹೋಗುತ್ತದೆ ಮತ್ತು ಅದನ್ನವನು ರುಚಿ ನೋಡುವ ಮೊದಲೇ ಕಳೆದುಕೊಳ್ಳುತ್ತಾನೆ. ತಯಾರಿಸಿದ ಮರುಕ್ಷಣದಲ್ಲೇ ಅದು ಅವನ ಕೈತಪ್ಪಿ ಮಾಯವಾಗಿ ಹೋಗಬಹುದು. ಅಥವಾ ಅದು ಮಾನಸಿಕವಾಗಿ ಒಡೆದು ಹೋಗಿ, ಮುಟ್ಟಿದ ಕೂಡಲೇ ದೈಹಿಕವಾಗಿ (ಭೌತಿಕವಾಗಿ) ಚೂರು ಚೂರಾಗಿ ನಿಃಶೇಷವಾಗಬಹುದು.

ಈ ಘನಸಾರ ಸಂಪನ್ನವೂ ಜ್ವಲದಗ್ನಿ ಸ್ವರೂಪವುಳ್ಳದ್ದೂ ಆದ ಮದ್ಯವನ್ನು ಶುದ್ಧೀಕರಿಸಿ, ಸ್ವರ್ಗಪೀಠದಲ್ಲಿ ಸ್ವೀಕರಿಸುವುದಕ್ಕಾಗಿ ಹರಹಿ ಇಡಲಾಗಿದೆ- "ತಪೋಷ್ಪವಿತ್ರಂ ವಿತತಂ ದಿವಸ್ಪದೇ"- ಅದರ ನೂಲುಗಳೆಲ್ಲಾ ನಾರುಗಳು - ಅವಷ್ಟೂ ಶುದ್ಧ ಬೆಳಕು - ಅವು ಕಿರಣಗಳಂತೆ ಎದ್ದು ಹೊರಬೀಳುವುವು : "ಶೋಚಂತೋ ಅಸ್ಯ ತಂತವೋ ವ್ಯಸ್ಥಿರನ್". ಈ ನಾರುಗಳ ಮೂಲಕ ಮದ್ಯವು ಧಾರಾಕಾರವಾಗಿ ಹೊರಬರಬೇಕು. ಈ ಪ್ರತಿಮಾನ ಸಂಕೇತವು ಶುದ್ಧೀಕೃತವಾದ ಮಾನಸಿಕ ಹಾಗೂ ಭಾವನಾತ್ಮಕ ಪ್ರಜ್ಞೆಯನ್ನು ಸೂಚಿಸುತ್ತದೆ. ಮಾನಸ-ಭಾವನಾ ಪ್ರಜ್ಞೆಯು ಎಂದರೆ ಹೃದಯ, ಚೇತಸ್ಸು- ಅದರ ವಿಚಾರ ಮತ್ತು ಭಾವನೆಗಳು (ಸೋಮಲತೆಯ) ನೂಲು (ದಾರ) ಯಾ ನಾರುಗಳು. ದ್ಯೌ ಅಥವಾ ಸ್ವರ್ಗವು ಶುದ್ಧವಾದ ಮಾನಸತತ್ವವು - ಅದು ನಾಡಿಗಳ (ನರಗಳ) ಮತ್ತು ದೇಹದ ಅನುಕ್ರಿಯೆ (ಪ್ರತಿಕ್ರಿಯೆ)ಗಳಿಗೆ ಒಳಪಟ್ಟಿರುವುದಿಲ್ಲ. ಸ್ವರ್ಗಪೀಠದಲ್ಲಿ (=ಜೈವಿಕ ಹಾಗೂ ಭೌತಿಕ ಪ್ರಜ್ಞೆಯಿಂದ ಭಿನ್ನವಾದ ಶುದ್ಧ ಮಾನಸಸತ್ತೆಯಲ್ಲಿ) ವಿಚಾರಗಳೂ ಭಾವನೆಗಳೂ ನಿಜ ಪ್ರತ್ಯಕ್ಷದ ಶುದ್ಧ ಕಿರಣಗಳೂ ಸುಖಕರವಾದ ಮಾನಸ ಚೈತನ್ಯದ ತರಂಗಗಳೂ (ಕಂಪನದ ಅಲೆಗಳೂ) ಆಗಿ ರೂಪಾಂತರ ಹೊಂದುತ್ತವೆ. ಅವುಗಳು ನಾವೀಗ ಹೊಂದಿರುವ ತೊಂದರೆಗೊಳಗಾದ ಹಾಗೂ ಮಲಿನವಾದ ಮಾನಸಿಕ, ಭಾವನಾತ್ಮಕ ಹಾಗೂ ಸಂವೇದನಾತ್ಮಕ ಅನುಕ್ರಿಯೆಗಳಿಗೆ ಆದೇಶವಾಗಿ (ಬದಲಿಯಾಗಿ) ನಿಲ್ಲುತ್ತವೆ. ಸಂಕುಚಿತವಾಗಿ, ಕಂಪಿತವಾಗಿ, ಸ್ವರಕ್ಷಣೆಗಾಗಿ, ನೋವುನುಲಿಗಳಿಂದ ಪಾರಾಗಲು ಮತ್ತು ಅನುಭವದ ಅತಿರೇಕದ ಆಕಸ್ಮಿಕ ಹೊಡೆತಗಳಿಂದ ತಪ್ಪಿಸಿಕೊಳ್ಳಲು ಒದ್ದಾಡುವ ಸ್ಥಿತಿಯಿಂದ ಮುಕ್ತವಾಗಿ ನಮ್ಮ ಮಾನಸಾಂಶಗಳು ಸ್ವತಂತ್ರವೂ, ಬಲಿಷ್ಠವೂ, ಪ್ರಖರವೂ ಆಗಿ, ಶಕ್ಯವಿರುವ ಎಲ್ಲ ವಿಶ್ವಾನುಭವಗಳ ಸಂಪರ್ಕಗಳನ್ನು ಸ್ವೀಕರಿಸಿ, ದಿವ್ಯಾನಂದೋದ್ರೇಕದ ರೂಪಕ್ಕೆ ತಿರುಗಿಸಲು ಬೇಕಾದ ಹಾಗೆ ಸುಖವಾಗಿ ಆಯಾಮವನ್ನು ಪಡೆಯುತ್ತವೆ, ವಿಸ್ತೃತವಾಗುತ್ತವೆ, ವಿಶಾಲವಾಗುತ್ತವೆ. ಆದುದರಿಂದ "ದಿವಸ್ಪದೇ" =ಸ್ವರ್ಗಪೀಠದಲ್ಲಿ ಸೋಮಶೋಧಕ ಸಾರಣಿಗೆಯು ಸೋಮವನ್ನು ಸ್ವೀಕರಿಸಲೆಂದು ಅಗಲಗೊಳಿಸಲ್ಪಟ್ಟು ಇಡಲಾಗಿದೆ.

ಈ ಪ್ರಕಾರವಾಗಿ ಸ್ವೀಕೃತವೂ ಪವಿತ್ರೀಕೃತವೂ ಆದ ಈ ಹರಿತವಾದ ಹಿಂಸೋದ್ರೇಚಕ ರಸಗಳು - ಆಗಿಂದಾಗ ತಲೆತಿರುಗಿಸುವ ಮದ್ಯಶಕ್ತಿಗಳು - ಮನೋದೇಹಗಳನ್ನೀಗ ನೋಯಿಸುವುದಿಲ್ಲ, ಅತ್ತಿತ್ತ ಚೆಲ್ಲುವುದಿಲ್ಲ. ಸೋರಿ (ಕಳೆದು) ಹೋಗುವುದಿಲ್ಲ ; ಹಾಗಲ್ಲದೆ ಇವು ತಮ್ಮನ್ನು ಸೋಸಿದ ನಮ್ಮನ್ನು ಪೋಷಿಸಿ ವೃದ್ಧಿಗೊಳಿಸುವುವು ("ಅವಂತಿ") ಮನ-ದೇಹಗಳನ್ನು ಕಾಯುವುವು, ಸಂವರ್ಧಿಸುವುವು, "ಅವಂತ್ಯಸ್ಯ ಪವೀತಾರಂ ಆಶವಃ". ಸೋಸಿದವನನ್ನು ಅವನ ಎಲ್ಲ ಮಾನಸಿಕ, ಭಾವನಾತ್ಮಕ, ಸಂವೇದನಾತ್ಮಕ ಮತ್ತು ಭೌತಿಕ (ಶಾರೀರಿಕ) ಅಸ್ತಿತ್ವದ ಸಂತೋಷದಲ್ಲಿ ಸಮೃದ್ಧನನ್ನಾಗಿ ಮಾಡಿ, ಶುದ್ಧೀಕೃತ ಹಾಗೂ ಆನಂದಮಯ ಹೃದಯದ ಮೂಲಕ, ಇವು ಎದ್ದು ಹೊರಟು ಅತ್ಯುನ್ನತ ಸತ್ತಾಸ್ತರವನ್ನು, ಸ್ವರ್ಗದ ಮೇಲ್ವಾಸನ್ನು ಸೇರುತ್ತವೆ. ಅಲ್ಲಿ ಪ್ರತಿಭಾನ, ಸ್ಫುರಣ, ಆವಿರ್ಭವನಗಳ ಶಕ್ತಿಯುಳ್ಳ ಮನಸ್ಸು ಬೃಹತ್ತಿನ ಅನಂತದಲ್ಲಿ ಮುಕ್ತಿ ಹೊಂದುವುದು- (ಬೃಹತ್= ಅಪರಂಪಾರ ವೈಶಾಲ್ಯ ; "ದಿವಸ್ಪೃಷ್ಠಂ ಅಧಿತಿಷ್ಠಂತಿ ಚೇತಸಾ").

ಇಲ್ಲಿಯವರೆಗೆ ಋಷಿಯು ಸೋಮನನ್ನು ಅವೈಯಕ್ತಿಕ ಆವಿರ್ಭಾವವನ್ನಾಗಿ ಚಿತ್ರಿಸಿದ್ದಾನೆ ; ಉಕ್ತ ಆವಿರ್ಭಾವವೇ ಆನಂದ, ದಿವ್ಯ ಜೀವನ ಸಂತೋಷ ; ಅದಿರುವುದೀಗ ಮಾನವನ ಪ್ರಜ್ಞಾತ ಅನುಭವದಲ್ಲಿ. ಈಗ ಅವನು ದಿವ್ಯ ಆವಿರ್ಭಾವದಿಂದ ದಿವ್ಯ ಪುರುಷನತ್ತ ತಿರುಗುತ್ತಾನೆ : ಇದು ವೇದ ಋಷಿ ಸಹಜ. ಆ ಕ್ಷಣ ಸೋಮನು ಸರ್ವೋನ್ನತ ವ್ಯಕ್ತಿಯಾಗಿ ತೋರುತ್ತಾನೆ, ಅವನೀಗ ಉಚ್ಚ ವಿಶ್ವದೇವನು. ಅವನು ಉಷಸ್ಸುಗಳು ಹೊಳೆಯುವಂತೆ ಮಾಡುತ್ತಾನೆ. ಆ ಚಿತ್ರ ವಿಚಿತ್ರ ವರ್ಣನು, "ಅರೂರು ಚದ್ ಉಷಸಃ ಪೃಶ್ನಿರ್ ಅಗ್ರಯಃ" ಮತ್ತು "ಉಕ್ಷಾಬಿಭರ್ತಿ ಭುವನಾನಿ ವಾಜಯುಃ"= ಆ ವೃಷಭನು ಜಗತ್ತುಗಳ ಹೊಣೆಯನ್ನು ಹೊರುತ್ತಾನೆ. -ಅನಂತ ಸಮೃದ್ಧಿಯನ್ನು ಬಯಸುತ್ತಾನೆ. ಪ್ರಶ್ನಿ ಶಬ್ದಕ್ಕೆ ಬಣ್ಣಬಣ್ಣದ ಚುಕ್ಕೆಗಳುಳ್ಳ ಎಂಬರ್ಥವಿದೆ. ಅದನ್ನು ಪುಂಸ್ತ್ವದ ಕ್ರಿಯಾಶಕ್ತಿಗೆ ಸಂಕೇತನಾದ ವೃಷಭನಿಗೂ ಸ್ತ್ರೀತ್ವದ ಕ್ರಿಯಾಶಕ್ತಿಗೆ ಸಂಕೇತವಾದ ಧೇನುವಿಗೂ ಅನ್ವಯಿಸಲಾಗುತ್ತದೆ. ಅದು ಇತರ ಎಲ್ಲ ಶ್ವೇತ, ಶುಕ್ರ, ಹರಿ, ಹರಿತ್, ಕೃಷ್ಣ, ಹಿರಣ್ಯಯ ಎಂಬ ಬಣ್ಣಗಳಂತೆ ಗುಣ, ಮನೋವೃತ್ತಿ ಇತ್ಯಾದಿಗಳನ್ನು ಸಂಕೇತಿಸುತ್ತದೆ - ಇದು ವೇದ ಸಹಜ ; ಇದು ಯೋಗಿಗಳ ಭಾಷಾ ಶೈಲಿ. ಚಿತ್ರವರ್ಣದ ವೃಷಭನು ದೇವನು-ತನ್ನ ಅವತಾರಗಳ ವೈವಿಧ್ಯದಲ್ಲವನು ಬಹುವರ್ಣೀಯ. ಸೋಮನು ಅಂಥ ಪ್ರಥಮ ಚಿತ್ರ ವೃಷಭನು; ಅವನು ಪರಿವರ್ತನ ಪ್ರಪಂಚದ ಜನಕನು. ಈ ಪ್ರಪಂಚಗಳನ್ನೆಲ್ಲಾ ಅವನು ಉಪಸ್ಥಿತಿಗೆ ತರುವುದು ಆನಂದದಿಂದ, ಅವೆಲ್ಲಾ ಹೊರಡುವ ಸರ್ವಾನಂದಮಯ ತತ್ವದಿಂದ ; ಸತ್ತಾವೈವಿಧ್ಯಕ್ಕೆ ಆನಂದವೇ ಜನನೀಜನಕ. ಅವನೇ ಉಕ್ಷನ್=ವೃಷನ್= ವೃಷಭನು = ಹರಡುವವನು, ಜನಕನು, ಗರ್ಭಧಾರಣೆ ಮಾಡಿಸುವವನು, ಅಪಾರ ಸಮೃದ್ಧಿಯ ತಂದೆ, ಎತ್ತು, ಗಂಡು. ನಿಸರ್ಗವೆಂಬ ಪ್ರಜ್ಞಾ ಪ್ರಣೋದ ರೂಪದ ಧೇನುವಿನ ಕ್ಷೇತ್ರದಲ್ಲಿ ಬೀಜಾವಾಪಮಾಡಿ ತನ್ನ ಅನಂತವೀರ್ಯದ ಮೂಲಕ ಲೋಕಗಳನ್ನು ಸೃಜಿಸಿ ಸಾಕುವವನು. ಉಷೆ ಬೆಳಗುವಂತೆ ಮಾಡುವವನವನು - ಉಷೋ ಗಣವು ಮಾತೃಗಣ, ಪ್ರಾತಿಭೇಯ, ವಿಕಿರಣಕರನಾದ ಸೂರ್ಯನ ಗೋವ್ರಜಗಳ ಮಾತೃಸಮೂಹ. ಸೋಮಪುಂಗವನು ಹೇರಳಶ್ರೇಯಃ ಸಮೃದ್ಧಿಯನ್ನು ಬಯಸುತ್ತಾನೆ. ಅಂದರೆ ಸತ್ತಾಪೂರ್ಣತೆಯನ್ನು - ಪ್ರಣೋದ, ಪ್ರಜ್ಞೆ, ದಿವ್ಯಾನಂದಕ್ಕೆ ಅನಿವಾರ್ಯವಾದ ದೇವತಾ ಸಹಜವಾದ ಐಶ್ವರ್ಯ - ಇವೇ ಆ ಸತ್ತಾಪೂರ್ಣತೆಯ ಅಂಗಗಳು. ಇನ್ನೊಂದು ವಿಧವಾಗಿ ಹೇಳುವುದಾದರೆ, ಆನಂದದ ಪ್ರಭುವೇ

ನಮಗೆ ಅಮರ್ತ್ಯತೆಯನ್ನು ಪಡೆಯಲು ಬೇಕಾದ ಪರಮ ಸತ್ಯದ ತೇಜೋರಾಶಿಯನ್ನೂ ಅಪಾರ ಶ್ರೇಯಃ ಸಮೃದ್ಧಿಯನ್ನೂ ಕೊಡತಕ್ಕವನು.

ಪರಸತ್ಯವನ್ನು ಕಂಡುಹಿಡಿದ ನಮ್ಮ ಪಿತೃಪಿತಾಮಹರು ಸೋಮನ ಮಾಯೆ ಎಂಬ ಸರ್ಜನಾತ್ಮಕ ಜ್ಞಾನವನ್ನು ಪಡೆದರು ಮತ್ತು ಆ ಆದರ್ಶದಿಂದ ಹಾಗೂ ಮಹೋನ್ನತ ದೇವತೆಯ ಕಲ್ಪನಾಜನಕ ಪ್ರಜ್ಞೆಯಿಂದ ಅವರು ಅವನ ಪ್ರತಿಮೆಯನ್ನು ಮಾನವನಲ್ಲಿ ಪ್ರತಿಮಿಸಿದರು. ಆ ದೇವತೆಯನ್ನು ಕುಲದಲ್ಲಿ ಅಜಾತಶಿಶುವನ್ನಾಗಿ ಪ್ರತಿಷ್ಠಾಪಿಸಿದರು. ಅವನು ಮಾನವನಲ್ಲಿಯ ದೇವತಾಬೀಜ-ಮಾನುಷ ಪ್ರಜ್ಞೆಯ ಚೀಲದಿಂದ (ಗರ್ಭದಿಂದ) ಅವನನ್ನು ಹೊರತರಬೇಕಾಗಿದೆ, ಪ್ರಸವಿಸುವಂತೆ ಮಾಡಬೇಕಾಗಿದೆ "ಮಾಯಾವಿನೋ ಮಮಿರೇ ಅಸ್ಯ ಮಾಯಯಾ ನೃಚಕ್ಷಸಃ ಪಿತರೋ ಗರ್ಭ ಆದಧುಃ" ಹಳೆಯ ಋಷಿಗಳೆ ಪಿತೃಗಳು, ವೈದಿಕ ಯೋಗ ಮಾರ್ಗವನ್ನು ಕಂಡುಹಿಡಿದಂಥವರು ಮತ್ತು ಈಗಲೂ ಆಧ್ಯಾತ್ಮಿಕವಾಗಿ ಉಪಸ್ಥಿತರಾಗಿದ್ದು ಕುಲದ ಭವಿಷತ್ ಸ್ಥಿತಿಯ ಆಗುಹೋಗುಗಳ (ಅಧ್ಯಕ್ಷರಾಗಿ) ನಿರೀಕ್ಷಕರಾಗಿರುವುದಲ್ಲದೆ, ದೇವತೆಗಳಂತೆ ಮಾನವನಲ್ಲಿ ಅವನ ಅಮರ್ತ್ಯತೆಗಾಗಿ ಕೆಲಸ ಮಾಡುತ್ತಿದ್ದಾರೆ ಎಂದು ನಂಬಲಾಗಿದೆ. ಅವರೇ ಋಷಿಗಳು, ಬಲವಾದ ದಿವ್ಯದರ್ಶನವನ್ನು ಪಡೆದವರು, "ನೃಚಕ್ಷಸಃ", ಪರಸತ್ಯದಾರ್ಶನಿಕರು - ಆ ದರ್ಶನದಿಂದ ಅವರು ಪಣಿಗುಪ್ತ ಧೇನುಗಳನ್ನು ಹುಡುಕಿದರು, "ರೋದಸೀ" ಎಂಬ ಮಾನಸಿಕ-ಭೌತಿಕ ಪ್ರಜ್ಞೆಗಳನ್ನು ದಾಟಿದರು, ಅಂಥ ಶಕ್ತಿಯನ್ನು ಮೊದಲೇ ಪಡೆದರು. ಅದರಿಂದ ಅವರು ಅತಿಮಾನಸ ಪ್ರಜ್ಞೆಯನ್ನು ತಲುಪಿದರು. ಅತಿಮಾನಸವು ಅಪಾರಸತ್ಯ ಮತ್ತು ಆಧ್ಯಾತ್ಮಿಕ ಆನಂದ-(I.36.7 ; IV.1. 13-18 ; IV. 2.15-18 ಇತ್ಯಾದಿ).

ಸೋಮನು ಗಂಧರ್ವನು-ಸಂತೋಷಗಳ ಗಣಗಳ ನಾಯಕನಾಗಿದ್ದಾನೆ, ದೇವನ ನಿಜಾಸನದ ಪಾಲಕನು, ಆನಂದದ ಪ್ರಜ್ಞಾಸ್ತರಸ್ವರೂಪನು : "ಗಂಧರ್ವ ಇತ್ಥಾ ಪದಂ ಅಸ್ಯ ರಕ್ಷತಿ". ಅವನು ಸರ್ವೋತ್ತಮ, ಉಳಿದ ಜೀವಿಗಳೆಲ್ಲರಿಂದ ಭಿನ್ನನಾಗಿ ಎದ್ದು ಕಾಣಿಸುವಂಥವನು - ಅವರೆಲ್ಲರ ಮೇಲಿನವನು, ತದ್ಭಿನ್ನನು, ಆಶ್ಚರ್ಯಕಾರಕನು, "ಅದ್ಭುತಃ" ಮತ್ತು ಅತಿವ್ಯಾಪಿ, ಅಂತರ್‌ಯಾಮಿ, ಸರ್ವಲೋಕಸ್ಥ, ಸರ್ವಲೋಕಾತೀತ ಹಾಗೂ ಆತನು ಆ ಲೋಕಗಳಲ್ಲಿ ದೇವತಾಜನನಗಳನ್ನು ಸಂರಕ್ಷಿಸುತ್ತಾನೆ, "ಪಾತಿ ದೇವಾನಾಂ ಜನಿಮಾನಿ ಅದ್‌ಭುತಃ". ವೇದದಲ್ಲಿ ದೇವತಾಜನನವೆಂಬುದು ಸಾಮಾನ್ಯ ಪದಸಂಹತಿ-ಅದರ ಅರ್ಥವೆಂದರೆ "ದಿವ್ಯ ತತ್ವಗಳು ವಿಶ್ವದಲ್ಲಿ ಅವತರಿಸುವುದು"- ಅದರಲ್ಲೂ ಸ್ವಕೀಯ ಬಹುರೂಪಗಳಲ್ಲಿ ದೇವಾತ್ಮವು ಮಾನವನಲ್ಲಿ ರೂಪಿತನಾಗುವುದು ಎಂಬುದು ಗಮನಾರ್ಹವಾಗಿದೆ. ಕೊನೆಯ ಪದ್ಯದಲ್ಲಿ ಋಷಿಯು ಮಾನವ ಪ್ರಜ್ಞೆಯಲ್ಲಿ ಜಗತ್‌ಸಂಸರ್ಗ ಹೊಂದಿದ ದೇವನು ದಿವ್ಯ ಶಿಶುವಾಗಿ ಹುಟ್ಟಲು ಸಿದ್ಧತೆ ನಡೆಸುವುದನ್ನು ಹೇಳಿದ್ದಾನೆ. ಇಲ್ಲಿ ಋಷಿಯು ಸೋಮನನ್ನು, "ಅದೇ ವೀರ್ ಮಾಯಾಃ" =ಅವಿದ್ಯೆ=ಯಾ ಭ್ರಾಂತಿ = ದುಃಸರ್ಜನಾತ್ಮಕಜ್ಞಾನ - ಎಂಬುದರಿಂದ ನಿರ್ಮಿತರಾದ ಅದಿವ್ಯ ಸ್ತೋಮ ಎಂಬ ಸ್ವರೂಪದ ಅನಾನಂದ ಶಕ್ತಿಗಳ, ಭೇದಶಕ್ತಿಗಳೆಂಬ (ದ್ವಿಷಃ, ಅರಾತೀಃ) ಶತ್ರುಗಳ, ದಾಳಿಯಿಂದ - ಲೋಕೋತ್ತರಸ್ಥನಾಗಿ ಮಾನವನಲ್ಲಿ ನಿರ್ಮಿತವಾಗಿರುವ ಆನಂದ ಪ್ರಪಂಚವನ್ನೂ ದಿವ್ಯಜ್ಞಾನದಿಂದ ಮನುಷ್ಯನಲ್ಲಿ ಜನಿಸಿರುವ ದೇವತಾ ತತ್ವಗಳನ್ನೂ ರಕ್ಷಿಸುವವನ್ನಾಗಿ ವರ್ಣಿಸಿದ್ದಾನೆ.

ಸೋಮನು ಈ ದಾಳಿಗಾರ ಹಗೆಗಳನ್ನು ಅಂತಃಪ್ರಜ್ಞೆಯ ಬಲೆಯಿಂದ ಹಿಡಿಯುತ್ತಾನೆ. ಇಂದ್ರಿಯಗಳಿಂದಲೂ ಮೇಲ್ಪೊರೆಯ ಬಗೆಯಿಂದಲೂ ದೊರೆವ ವ್ಯವಸ್ಥಿತ ಜಗದನುಭವಕ್ಕಿಂತ, ಜಗತ್ಸತ್ಯಕ್ಕಿಂತ, ಹೆಚ್ಚು ನಿಜವಾದ, ಸತ್ಯತರವಾದ, ಹಾಗೂ ಗಭೀರತರವಾದ ಅನುಭವ-ಸತ್ಯಗಳ ವ್ಯವಸ್ಥೆಯ ಯಜಮಾನನವನು. ಈ ಅಂತರ್‌ವ್ಯವಸ್ಥೆಯಿಂದಲೇ ಅವನು ಅನೃತ, ಅಸ್ಪಷ್ಟ, ಭಿನ್ನ ಭಾವಗಳ ಶಕ್ತಿಗಳನ್ನು ಹಿಡಿಯುತ್ತಾನೆ.-"ಗೃಭ್ಣಾತಿ ರಿಪುಂ ನಿಧಯಾ ನಿಧಾಪಿತಃ" - ಮತ್ತು ಅವುಗಳನ್ನು ಸತ್ಯದ, ಬೆಳಕಿನ ಮತ್ತು ಐಕ್ಯದ ನಿಯಮಗಳಿಗೆ ಒಳಪಡಿಸುತ್ತಾನೆ. ಆದುದರಿಂದ ಮನುಜರು ಈ ಅಂತಃಪ್ರಕೃತಿಯ ನಿಯಾಮಕನಾದ ಆನಂದೇಶನಿಂದ ರಕ್ಷಿತರಾಗಿ ತಮ್ಮ ಒಳನನ್ನಿ, ಒಳಒಂದುತನವನ್ನು ತಮ್ಮ ವಿಚಾರ ಹಾಗೂ ಕಾರ್ಯಗಳಿಗೆ ಹೊಂದಿಸಿಕೊಳ್ಳಲು ಶಕ್ತರಾಗುತ್ತಾರೆ ; ಅಲ್ಲದೆ ಇನ್ನು ಮುಂದೆ ಅವರು ಹೊರ ವಕ್ರತೆಯ ಪ್ರಣೋದಗಳಿಂದ ಮುಗ್ಗರಿಸಿ ಜಾಳದಿರುವವರಾಗುತ್ತಾರೆ. ಅವರು ನೆಟ್ಟಗೆ ನಡೆಯುತ್ತಾರೆ, ತಮ್ಮ ಕರ್ಮಗಳಲ್ಲವರು ಸಂಪೂರ್ಣ ಪೂರ್ಣತೆಯನ್ನು (ಅಚ್ಚುಕಟ್ಟುತನವನ್ನು) ಸಾಧಿಸುತ್ತಾರೆ ಮತ್ತು ಈ ಅಂತಃಕ್ರಿಯೆ ಹಾಗೂ ಬಹಿಃಕ್ರಿಯೆಗಳಿಂದ ಅಸ್ತಿತ್ವದ ಪೂರ್ಣ ಮಾಧುರ್ಯವನ್ನು ಸವಿಯ ಬಲ್ಲವರಾಗುತ್ತಾರೆ - ಈ ಸವಿಯೇ ಮಧು, ಆನಂದ, ಆತ್ಮದ ಆಹಾರ- "ಸುಕೃತ್ತಮಾ ಮಧುನೋ ಭಕ್ಷಮಾಶತ".

ಸೋಮನಿಲ್ಲಿ ಆಹುತಿಯಾಗಿ ಅವತರಿಸುತ್ತಾನೆ ; ಅವನಿಲ್ಲಿ ದಿವ್ಯಾಹಾರವು ; ಆನಂದ-ಅಮೃತತ್ವಗಳ ಮದ್ಯಸ್ವರೂಪನು - "ಹವಿಃ" ಮತ್ತು ದೇವನಾಗಿ ಅವನು ದಿವ್ಯಾಹುತಿಯ, ದಿವ್ಯಹವಿಸ್ಸಿನ ("ಹವಿಷ್ಕಃ") ಒಡೆಯನು. ಮೇಲೆ ಅವನು ವಿಶಾಲ ಮತ್ತು ದಿವ್ಯ ಪೀಠ - ಅತಿಮಾನಸ ಮಹಾನಂದ ಮತ್ತು ಮಹಾಸತ್ಯಗಳ ಸ್ವರೂಪವುಳ್ಳವನು ಅಥವಾ "ಬೃಹತ್" ಸ್ವರೂಪನು ; ಅವನಿಂದ ಮದ್ಯವು ನಮ್ಮತ್ತ ಇಳಿದು ಹರಿಯುತ್ತದೆ. ಭೌತ ಪ್ರಜ್ಞೆಯಿಂದ ಮಾನವನು ಅತಿಮಾನಸ ಪ್ರಜ್ಞೆಯನ್ನು ಮುಟ್ಟುವ ಪ್ರಗತಿಪರ ಮಹಾ ಪ್ರಯಾಣ ರೂಪದ ಯಜ್ಞದಲ್ಲಿ ಅವನು ಆನಂದಮದ್ಯವಾಗಿ ಹರಿದಾಡಿ ಪ್ರವೇಶಿಸುತ್ತಾನೆ. ಅವನದರ ಒಳಗೆ ಹೋಗುತ್ತಾನೆ, ಸುತ್ತುವರಿಯುತ್ತಾನೆ, ಆಗ ಅವನು ಸ್ವರ್ಗೀಯ ಆಕಾಶದ ಮೋಡವನ್ನು ಹೊದೆದಿರುತ್ತಾನೆ.- "ನಭಃ" - ಮಾನಸ ಪ್ರಜ್ಞಾತತ್ವವನ್ನು ಉಟ್ಟಿರುತ್ತಾನೆ- ಮುಸುಕನ್ನಾಗಿ ತನ್ನ ಮೇಲೆ ಎಳೆದುಕೊಂಡಿರುತ್ತಾನೆ "ಹವಿರ್ ಹವಿಷ್ಮೋ ಮಹಿ ಸದ್ಮ ದೈವ್ಯಂ ನಭೋ ವಸಾನಃ ಪರಿಯಾಸಿ ಅಧ್ವರಂ". ದಿವ್ಯಾಹ್ಲಾದವು ಮಾನಸಾನುಭವದ ರೂಪದ ಹೊಳೆವ ಮುಗಿಲಿನ ಮುಸುಕನ್ನು ಧರಿಸಿ ನಮ್ಮೆಡೆಗೆ ಬರುತ್ತದೆ.

ಈ ಸೂಕ್ತದಿಂದ ನಾನು ಋಗ್ವೇದದಿಂದಾಯ್ದು ಮಾಡುವ ಭಾಷಾಂತರಮಾಲೆಯನ್ನು ಮುಗಿಸುತ್ತೇನೆ. ಎಷ್ಟು ಸಂಕ್ಷಿಪ್ತವಾಗಿ ಸಾಧ್ಯವೋ ಅಷ್ಟು ಸಂಕ್ಷಿಪ್ತವಾಗಿ ವೈದಿಕ ದೇವತೆಗಳ ನಿಜವಾದ ಕರ್ತವ್ಯಗಳನ್ನೂ ವೈದಿಕಆರಾಧನಾವಿಧಿಯನ್ನೂ ವಿವರಿಸುವ ಸಂಕೇತಗಳ ವಿವರಣೆಯನ್ನೂ ಯಜ್ಞದ ಸ್ವರೂಪ ಮತ್ತು ಗುರಿಗಳನ್ನೂ ನಿಜವಾದ ಉದಾಹರಣೆಗಳಿಂದ ಅವುಗಳ ಅರ್ಥವ್ಯಾಖ್ಯಾನಗಳನ್ನೂ ಕೊಡುವುದೇ ನನ್ನ ಉದ್ದೇಶವು - ವೇದರಹಸ್ಯವೆಂದರಿಗೇ ಎಂಬುದನ್ನು ತೋರಿಸಿ ಕೊಡುವುದು ನನ್ನ ಗುರಿ. ಉದ್ದೇಶಪೂರ್ವಕವಾಗಿಯೇ ನಾನು ಕೆಲವೇ ಕೆಲವು ಸಂಕ್ಷಿಪ್ತವೂ ಸುಲಭವೂ ಆದ ಸೂಕ್ತಗಳನ್ನಾಯ್ದುಕೊಂಡೆನು. ಇನ್ನೂ ಹೆಚ್ಚಿನ ಮನೋನ್ಮೀಲಕ ಆಳವುಳ್ಳ, ಸೂಕ್ಷ್ಮತೆಯುಳ್ಳ ಮತ್ತು ಜಟಿಲ ಜಾಲವುಳ್ಳ ವಿಚಾರ ಮತ್ತು

ಪ್ರತಿಮಾವಳಿಗಳನ್ನುಳ್ಳ ಸೂಕ್ತಗಳನ್ನು ಬಿಟ್ಟು ಬಿಟ್ಟೆನು. ನಾನು ತೆಗೆದುಕೊಂಡ ಸೂಕ್ತಗಳು ಅವುಗಳಂತೆಯೇ ಇದ್ದರೂ ಮಾನಸಶಾಸ್ತ್ರೀಯ ಅರ್ಥವನ್ನು ಸರಳವಾಗಿ ಮತ್ತು ಪೂರ್ಣವಾಗಿ ನೋಡಿದ ಕೂಡಲೇ ಗೊತ್ತಾಗುವಂತಿವೆ. ಆದರೆ ಅವು ತಮ್ಮ ಅಪೂರ್ವತೆಯಿಂದಲೇ ಹಾಗೂ ಗಭೀರತೆಯಿಂದಲೇ ತಮ್ಮ ಯೌಗಿಕ ಹಾಗೂ ಪವಿತ್ರ ಪದ್ಯಲಕ್ಷಣವನ್ನು ತೆರೆದು ತೋರಿಸುತ್ತವೆ. ಈ ಉದಾಹರಣೆಗಳು ಓದುವ ಉಲ್ಲಾಸವುಳ್ಳ ತೆರೆದ ಮನಸ್ಸಿನ ಓದುಗನಿಗೆ ಇದರ ನಿಜಾರ್ಥವನ್ನು ತಿಳಿಯಲು ಸಾಕು- ಇದು ನಮ್ಮ ಅತ್ಯಂತ ಪ್ರಾಚೀನವೂ ಅತಿಶ್ರೇಷ್ಠವೂ ಆದ ಪದ್ಯಕಾವ್ಯವು. ಸಾಧಾರಣಾಂಶ ಬಹಳವಾಗಿರುವ ಇತರ ಸೂಕ್ತಗಳ ಭಾಷಾಂತರಗಳಿಂದ ಈ ಕಲ್ಪನೆಗಳು ಕೇವಲ ಕೆಲವೇ ಜನ ಋಷಿಗಳ ಅತ್ಯುನ್ನತ ಆಲೋಚನೆಗಳಷ್ಟೇ ಅಲ್ಲ - ಇವು ಋಗ್ವೇದದ ವ್ಯಾಪಕವಾದ ಅರ್ಥ ಮತ್ತು ಅದು ಕಲಿಸುವ ಪಾಠ ಎಂಬುದನ್ನು ತೋರಿಸಲಾಗುತ್ತದೆ.



# ಅತ್ರಿಗಳ ಸೂಕ್ತಗಳು

ಭಾಷಾಂತರಿತ ಅಗ್ನಿಸೂಕ್ತಗಳು (ಋಗ್ವೇದ V. 1 to 28) ಆಮೇಲೆ ಶ್ರೀ ಅರವಿಂದರಿಂದ ತಿದ್ದಲ್ಪಟ್ಟವು ಮತ್ತು "ಯೌಗಿಕ ಅಗ್ನಿಯ ಸೂಕ್ತಗಳು" ಎಂಬುದರಲ್ಲಿ ಸೇರಿಸಲ್ಪಟ್ಟಿವೆ. - ೨ ನೆಯ ಸಂಪುಟ-ವೇದದ ಪಾಠಗಳೊಡನೆ. ಇಲ್ಲಿರುವ ಬೆಲೆಯುಳ್ಳ ಟಿಪ್ಪಣಿಗಳಿಗೋಸ್ಕರ "ಆರ್ಯ" ಪತ್ರಿಕೆಯಲ್ಲಿ ಮೊದಲು ಮಾಡಿದ ಭಾಷಾಂತರಗಳನ್ನೇ ಕೊಡಲಾಗಿದೆ.

# ಮುನ್ನುಡಿ

ವೇದವನ್ನು ಭಾಷಾಂತರಿಸುವುದೆಂದರೆ ಅಸಾಧ್ಯವಾದ ಕಾರ್ಯವನ್ನು ಮಾಡಲು ಹೊರಟಷ್ಟೇ ಕಷ್ಟಕರ. ಏಕೆಂದರೆ, ಇಂಗ್ಲಿಷಿನಲ್ಲಿ ಅಕ್ಷರಾರ್ಥದ ಭಾಷಾಂತರ ಮಾಡಿದರೆ ಆ ಪ್ರಾಚೀನ ಪ್ರಾತಿಭ ದಾರ್ಶನಿಕರು ಇಟ್ಟುಕೊಂಡಿದ್ದ ಅರ್ಥವನ್ನೂ ಇಂಗಿತವನ್ನೂ ಸುಳ್ಳು ಮಾಡಿದ ಹಾಗಾಗುತ್ತದೆ-ಹಾಗಲ್ಲದೆ ವೇದದ ನಿಜವಾದ ಅರ್ಥವೆಲ್ಲವನ್ನೂ ಮೇಲೆದ್ದು ಬರುವಂತೆ ಭಾಷಾಂತರಿಸಿದರೆ ಅದು ಭಾಷಾಂತರವೆನ್ನಿಸದೆ ಅರ್ಥವಿವರಣೆ ಎನ್ನಿಸುತ್ತದೆ. ನಾನೀ ಇತ್ತುದಿಗಳಿಗೂ ನಡುವಿನದಾದ ದಾರಿಯನ್ನು ಹಿಡಿದಿದ್ದೇನೆ- ಇದು ಮುಕ್ತವೂ, ಜೀವಂತ ಅಂಗಾಂಗವನ್ನು ರಚಿಸಬಲ್ಲುದೂ ಆದ ಮಾರ್ಗ ; ಇದು ಮೂಲದ ತಿರುಹುಗಳನ್ನು ಅನುಸರಿಸಿಯೂ ಕೆಲವು ಅರ್ಥವಿವರಣಾತ್ಮಕ ಉಪಾಯಗಳನ್ನು-(ಸಂಕೇತ, ರೂಪಕೋಕ್ತಿಗಳಿಂದ ಹೊರ ಹೊಳೆಯಲು - ಆ ಮುಸುಕಿನಿಂದ ಹೊರಬೀಳಲು-ವೈದಿಕ ಸತ್ಯಕ್ಕೆ ಸಾಕಾಗುವಷ್ಟರ ಮಟ್ಟಿಗೆ ಮಾತ್ರ) ಬಳಸಿದ್ದೇನೆ.

ವೇದವೆಂಬುದು ರಹಸ್ಯ ಸಂಕೇತಗಳ ಗ್ರಂಥವು - ಕೇವಲ ಆಧ್ಯಾತ್ಮಿಕ ಸೂತ್ರಗಳ ಸಂಕೇತಗ್ರಂಥವೆಂದು ಕೂಡಾ ಹೇಳಬಹುದು ; ಅದು ಹಾಕಿಕೊಂಡದ್ದು ಕರ್ಮಕಾಂಡೀಯ ಪದ್ಯಕಾವ್ಯದ ಮುಸುಕನ್ನು : ಅಂತರರ್ಥವು ಮಾನಸಶಾಸ್ತ್ರೀಯ, ವೈಶ್ವತ್ರಿಕ, ಅವೈಯಕ್ತಿಕ ; ಅದು ಹೇಳಿಕೊಳ್ಳುವ ಅರ್ಥ ಮತ್ತು ಅಲಂಕಾರಗಳು ದೀಕ್ಷಿತರಿಗಷ್ಟೇ (ದೀಕ್ಷಾಬದ್ಧರಿಗಷ್ಟೇ) ಮೀಸಲು. ಅದು ಅಜ್ಞಾನಿಗಳಿಗೆ ಗೊತ್ತಾಗದ ಗೌಪ್ಯಬೋಧ. ಮೇಲೆ ಮೇಲೆ ನೋಡಿದರೆ ತೀರಾ ಸ್ಥೂಲವೂ ಒರಟೂ ನಿಕಟ ವೈಯಕ್ತಿಕವೂ ಶಿಥಿಲವಾಗಿ ಎಲ್ಲಾದರೊಮ್ಮೆ ಬರುವ ವಿಷಯಗಳಿಂದ ಕೂಡಿದ್ದೂ ಆಗಿ ತೋರುತ್ತದೆ ; ಇನ್ನಾವುವೋ ಅನುಕ್ತ ವಿಷಯಗಳನ್ನು ಸೂಚಿಸುತ್ತಿರುವಂತೆಯೂ ಕಾಣುತ್ತದೆ. ಈ ಶಿಥಿಲವಾದ ಹೊರ ಬುರುಕಿಯೊಳಗೆ ವೈದಿಕ ಕವಿಗಳು ಅರ್ಥದ ಕಷ್ಟಗಮ್ಯ ಅಂತಃಸಾರದಿಂದ ಭಿನ್ನವಾದ ಹಾಗೂ ಸ್ಪಷ್ಟವೂ ಸಮನ್ವಿತವೂ ಆದ ಸಂಗತಿಗಳನ್ನು ಕೆಲವೊಮ್ಮೆ ಜಾಗರೂಕತೆಯಿಂದ ವಿವರಿಸುತ್ತಾರೆ. ಆಗ ಅವರ ಭಾಷೆಯು ಗುಪ್ತಸತ್ಯ ಪ್ರಕಟನೆಗಾಗಿ ಯುಕ್ತಿಯಿಂದ ಹೆಣೆದ ಮುಸುಕಿನ ರೂಪವಾಗುತ್ತದೆ. ಅವರು ಅನೇಕ ವೇಳೆ ತಾವು ಬಳಸುವ ವೇಷಾಂತರ ಶೈಲಿಯ ಬಗ್ಗೆ ಉದಾಸೀನರಾಗಿದ್ದಾರೆ ಮತ್ತು ಅವರು ತಮ್ಮ ಸಾಧನವನ್ನು ಹೀಗೆ ಮೀರಿ ಮೇಲೇರಿದಾಗ, ಅಕ್ಷರಾರ್ಥ ಮತ್ತು ಬಾಹ್ಯ ಭಾಷಾಂತರ ಮಾಡಿದರೆ ಬರಡು ಹಾಗೂ ವಾಕ್ಯಗಳ ಆನುಕ್ರಮಿಕ ಅಸಂಬದ್ಧತೆ ಅಥವಾ ಅದೀಕ್ಷಿತ ಬುದ್ಧಿಗೆ ಅಪೂರ್ವ ಮತ್ತು ಮೂಲೆಗುಂಪಿನದು ಎನ್ನಿಸುವ ವಿಚಾರ ಹಾಗೂ ಭಾಷಾ ರೂಪಗಳು ಎದುರಾಗುತ್ತವೆ. ಅಲಂಕಾರಗಳೂ ಸಂಕೇತಗಳೂ ತಮ್ಮ ಗುಪ್ತ ಸಮಾನಾರ್ಥಕಗಳನ್ನು ಸೂಚಿಸುವಂತೆ ಹೇಳಿದಾಗ ಮಾತ್ರ ಆ ಅಸ್ಪಷ್ಟತೆಯಿಂದ ಪಾರದರ್ಶಕವೂ, ಸುಸಂಬದ್ಧವೂ ಆದ ಆಧ್ಯಾತ್ಮಿಕ, ಮಾನಸಶಾಸ್ತ್ರೀಯ ಮತ್ತು ಮತಧಾರ್ಮಿಕ ಕಲ್ಪನೆಗಳು ಹೊರಬೀಳುವುವು. ನಾನು ಪ್ರಯತ್ನಿಸಿದ್ದು ಈ ಸೂಚನಾ ಪದ್ಧತಿಯನ್ನು ಬಳಸಲು.

ಪ್ರತಿಯೊಂದಕ್ಕೂ ವಿಚಾರದ ಗೂಢಾರ್ಥಗರ್ಭಿತ ವ್ಯಾಖ್ಯಾನ ಹೇಳುವ ಶರ್ತಕ್ಕೊಳಪಟ್ಟು ಅಕ್ಷರಾರ್ಥದ ಭಾಷಾಂತರವನ್ನು ವಿಚಾರದ ಗುಪ್ತ ಸಂದೇಶದೊಡನೆ ಹಾಗೂ ಶಬ್ದಗಳ ನಿಜವಾದ ಅರ್ಥಗಳನ್ನುಳ್ಳ ಪುಟಗಟ್ಟಲೆ ವ್ಯಾಖ್ಯಾನಗಳೊಡನೆ ಮಾಡುತ್ತಾ ಹೋಗುವುದು ಸಾಧ್ಯವಾಗಿತ್ತು. ಆದರೆ ಅದು ಬಹಳ ದ್ರಾವಿಡ ಪ್ರಾಣಾಯಾಮದ ಕಷ್ಟಕರ ಕೆಲಸವಾಗುತ್ತಿತ್ತು. ಅಲ್ಲದೆ ಅದು ಪಂಡಿತನಿಗೂ ಸೂಕ್ಷ್ಮಜ್ಞ ವಿದ್ಯಾರ್ಥಿಗೂ ಮಾತ್ರ ಪ್ರಯೋಜನಕರವಾಗುತ್ತಿತ್ತು. ಅರ್ಥದ ಯಾವುದಾದರೊಂದು ರೂಪವು ಯೌಗಿಕ ಮತ್ತು ಅಲಂಕಾರಿಕ ಪದ್ಯವೊಂದರ ಅರ್ಥ ಮಾಡಲು ಬೇಕಾಗುವಷ್ಟು ವಸ್ತುಚಿಂತನಪರವಾದ ಬುದ್ಧಿಯ ವಿರಾಮವನ್ನು ನಮ್ಮ ಮೇಲೆ ಒತ್ತಾಯದಿಂದ ಹೇರುವಷ್ಟರ ಮಟ್ಟಿನ ಒಂದು ಅರ್ಥ ರೂಪವು ಬೇಕೇ ಬೇಕು. ಅಂಥ ರೂಪವನ್ನು ತರಲು ಕೇವಲ ಸಂಸ್ಕೃತ ಪದವನ್ನು ಇಂಗ್ಲಿಷಿಗೆ ಭಾಷಾಂತರ ಮಾಡಿ ಬಿಟ್ಟರೆ ಸಾಲದು ; ಅರ್ಥಪೂರ್ಣ ನಾಮ, ಸಾಂಪ್ರದಾಯಿಕ ಅಲಂಕಾರ, ಸಾಂಕೇತಿಕ ಪ್ರತಿಮೆ - ಇವೂ ಪದೇ ಪದೇ ಭಾಷಾಂತರಿಸಲ್ಪಡಬೇಕು.

ಪ್ರಾಚೀನ ಋಷಿಗಳು ಆಯ್ದ ಪ್ರತಿಮೆಗಳು (ರೂಪಕ ಚಿತ್ರಗಳು) ಆಧುನಿಕ ಮನವು ಸುಲಭವಾಗಿ ಗ್ರಹಿಸುವಂತಿದ್ದರೆ, ಯಾಜ್ಞಿಕ ಸಂಕೇತಗಳು ಈಗಲೂ ನಮಗೆ ಸುಪರಿಚಿತವಾಗಿದ್ದರೆ ಮತ್ತು ವೈದಿಕ ದೇವತಾನಾಮಗಳು ಈಗಲೂ ಅವುಗಳ ಮಾನಸಶಾಸ್ತ್ರೀಯ ಅರ್ಥವನ್ನು ಹೊಂದಿದ್ದರೆ-ಗ್ರೀಕ್, ಲ್ಯಾಟಿನ್ ಅಭಿಜಾತ ದೇವತೆಗಳಾದ ಅಪ್ರೋಡೈಟೆ ಯಾ ಏರೆಸ್, ವೀನಸ್, ಯಾ ಮಿನರ್ವಾ ಮುಂತಾದವುಗಳ ಹಾಗೆ ಅನ್ವರ್ಥವತ್ತಾಗಿದ್ದರೆ ಸುಸಂಸ್ಕೃತ ಯುರೋಪಿಯನ್ನರಿಗವು ತಿಳಿಯುವಂತೆ ಇದ್ದಿದ್ದರೆ ವಿವರಣಾತ್ಮಕ ಭಾಷಾಂತರದಂಥ ಉಪಾಯವನ್ನು ಬಿಟ್ಟು ಬಿಡಬಹುದಾಗಿತ್ತು. ಆದರೆ ಭಾರತವು ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಸಂಭವಿಸದ ಇನ್ನೊಂದು ತರಹದ ಸಾಹಿತ್ಯಿಕ ಹಾಗೂ ಮತಧಾರ್ಮಿಕ ವಕ್ರರೇಖೆಯನ್ನು ಅನುಸರಿಸಿತು. ಇತರ ದೇವತಾನಾಮಗಳು ವೈದಿಕ ದೇವತಾನಾಮಗಳಿಗೆ ಪರ್ಯಾಯವಾಗಿ ಬಂದವು ; ಅಥವಾ ಕೆಲ ವೈದಿಕ ದೇವತಾನಾಮಗಳು ಉಳಿದರೂ ಅವು ಹೊರರೂಪದಲ್ಲಿ ಮಾತ್ರ ಉಳಿದು ತಮ್ಮ ಅರ್ಥಪೂರ್ಣತೆಯಲ್ಲಿ ಕಡಿಮೆಯಾಗಿ ಹೋದವು. ವೈದಿಕ ಕರ್ಮಕಾಂಡವು ಬಹಳ ಮೂಲೆಗುಂಪಾಯಿತು. ತನ್ನ ಗಂಭೀರವಾದ ಸಾಂಕೇತಿಕ ಅರ್ಥವನ್ನು ಕಳೆದುಕೊಂಡಿತು. ಪ್ರಾಚೀನ ಆರ್ಯ ಋಷಿಗಳ ಸಂತಾನದವರಿಗೆ ಆ ಋಷಿಗಳ, ಆ ಆರ್ಯರ ಪಶುಪಾಲ, ಕ್ಷಾತ್ರ ಹಾಗೂ ಗ್ರಾಮೀಣ ಪ್ರತಿಮಾ ಕಲ್ಪನೆಗಳು (ಕಲ್ಪನಾ ಪ್ರತಿಮೆಗಳು) ಬಹಳ ಹಳೆಯ ಪರಾಕಿನವು, ಅನುಚಿತ ಅಥವಾ ಒಮ್ಮೆ ಅವು ಸ್ವಾಭಾವಿಕವೂ ಸುಂದರವೂ ಆಗಿದ್ದರೂ ಅವುಗಳು ತಮ್ಮ ಕಲ್ಪನಾ ಪ್ರಕಾರಕ್ಕೆ ಹಳೆ ಗಭೀರತರ ಅರ್ಥವನ್ನು ಹೊಳೆಯಿಸಲಾರವೆಂಬಂತೆ ತೋರಿದವು. ಪ್ರಾಚೀನ ರಾಜಗಾಂಭೀರ್ಯದ ಹಳೆಯ ಉಷಾ ಸೂಕ್ತಗಳು ನಮಗೇನೂ ತಿಳಿಯದವುಗಳೆಂಬ ಪ್ರಜ್ಞೆಯು ಮೂಡಿತು. ಪ್ರಾಚೀನ ಆರ್ಯರು (ಭಾರತೀಯರು) ಪ್ರಕಾಶದಿಂದಲೂ ಸಾಮಶ್ರುತ್ಯದಿಂದಲೂ ಆಧ್ಯಾತ್ಮಿಕವಾಗಿ ಮುಳುಗಿ ಮಿಂದ ಅಂಥ ಸೂಕ್ತಗಳನ್ನು ಅಸ್ಪಷ್ಟತೆಗಳ ಹಾಗೂ ಅಸಮಂಜಸತೆಗಳ ಕಗ್ಗಾಡಿನಲ್ಲಿ ಅರ್ಥಕ್ಕಾಗಿ ಕುರುಡನಂತೆ ತಡಕಾಡುವ ಪಂಡಿತನ ವಿಕಟ ಸೂಕ್ಷ್ಮಜ್ಞತೆಗೆ ಬಲಿಗೊಡಬೇಕಾಯಿತು.

ಕೆಲವೇ ಉದಾಹರಣೆಗಳು ಪೂರ್ವಾಪರ ಆರ್ಯರ ಚಿಂತನಗಳ ನಡುವಿನ ಅಂತರವನ್ನು ತೋರಿಸುತ್ತವೆ ಮತ್ತು ಅದು ಹೇಗೆ ಸ್ಪಷ್ಟವಾಯ್ತೆಂಬುದನ್ನು ವಿವರಿಸುತ್ತವೆ. "ಲಕ್ಷ್ಮಿ ಮತ್ತು ಸರಸ್ವತಿಯರು ಒಂದೇ ಮನೆಯಲ್ಲಿರಲೊಲ್ಲೆವೆಂದರು." ಯುರೋಪೀಯ ಓದುಗನಿಗೆ ಅದರ

ಸರಳವೂ ಅನಲಂಕೃತವೂ ಆದ ವಿಚಾರವು ತಿಳಿಯಬೇಕಾದರೆ ಅದಕ್ಕೆ ಒಂದು ಭಾಷಾಂತರ ಯಾ ಟಿಪ್ಪಣಿಯು ಬೇಕಾದೀತು. "ಐಶ್ವರ್ಯವೂ ಪಾಂಡಿತ್ಯವೂ ಎಂದೂ ಒಟ್ಟಿಗಿರಲಾರವು" ಎಂಬುದು ಉಕ್ತ "ಪದಸಂಹತಿಯ" ಸರಳಾರ್ಥವು. ಈ ಟಿಪ್ಪಣಿಯು ಯುರೋಪೀಯನಿಗೆ ಬೇಕಾದಂತೆ ಭಾರತೀಯನಿಗೆ ಬೇಕಾಗದು ; ಇವನಿಗೆ ಆಗಲೇ ಉಕ್ತ ವಾಕ್ಯದ ಅರ್ಥವು ಗೊತ್ತಿರುತ್ತದೆ. ಆದರೆ ಪೌರಾಣಿಕ, ಬ್ರಾಹ್ಮಣಿಕ ಪ್ರಾಚೀನ ಗ್ರಂಥಗಳಿಗೂ ಇನ್ನೊಂದು ಸಂಸ್ಕೃತಿ ಹಾಗೂ ಮತಧರ್ಮ ಆದೇಶವಾಗಿ ಬಂದಿದ್ದರೆ, ಸಂಸ್ಕೃತ ಭಾಷೆಯನ್ನು ಓದಿ ಅರ್ಥಮಾಡಿಕೊಳ್ಳುವವರಿಲ್ಲವಾಗಿದ್ದರೆ ಇಂಥ ಸುಪರಿಚಿತ "ಪದಸಂಹತಿ" ಭಾರತದಲ್ಲೂ ಯುರೋಪಿನಲ್ಲೂ ಅರ್ಥಹೀನವಾಗಿ ಹೋಗುತ್ತಿತ್ತು. ಆಗ ಯಾವನಾದರೊಬ್ಬ ಅಪ್ರತಿಹತ ವ್ಯಾಖ್ಯಾನಕಾರನು ಯಾ ವಿಕಟ ಸೂಕ್ಷ್ಮಜ್ಞ ಪಂಡಿತನು ನಮಗೆ ಸಂಪೂರ್ಣ ಸಮರ್ಪಕವೆಂದು ತೋರುವಂತೆ ಲಕ್ಷ್ಮಿಯು ಉಷೆ, ಸರಸ್ವತಿಯು ರಾತ್ರಿ ಎಂದೋ ಅವರಿಬ್ಬರೂ ಅಸಂಯೋಜ್ಯ ರಾಸಾಯನಿಕ ದ್ರವ್ಯಗಳೆಂದೋ ಅಥವಾ ಇನ್ನೂ ಏನೇನೋ ಎಂದೋ ಸಿದ್ಧಮಾಡಿ ತೋರಿಸುತ್ತಿದ್ದನು ! ವೇದದ ಪ್ರಾಚೀನ ಅರ್ಥಸ್ಪಷ್ಟತೆಗೆ. ಇಂಥ ಏನೋ ಒಂದು ಆಗಿಬಿಟ್ಟಿದೆ. ಅರ್ಥವು ಸತ್ತು ಹೋಗಿದೆ ಮತ್ತು ವಿಸ್ಮೃತವಾದ ಕಾವ್ಯರೂಪದ ಅಸ್ಪಷ್ಟತೆಯೊಂದು ಉಳಿದುಕೊಂಡಿದೆ. ಆದುದರಿಂದ "ಪರಸತ್ಯಮಾರ್ಗವನ್ನು ಹಿಡಿದು ವ್ರಜಗಳನ್ನು ಸರಮೆಯು ಹುಡುಕಿ ತೆಗೆಯುತ್ತಾಳೆ" ಎಂಬುದನ್ನು ಓದಿದಾಗ ಅಪರಿಚಿತ ಭಾಷೆಯದೆಸೆಯಿಂದ ಮನಸು ಸೋತು ನಿಂತುಬಿಡುತ್ತದೆ. ಸರಸ್ವತಿ ಪದವನ್ನು ಯುರೋಪೀಯನಿಗೆ ಭಾಷಾಂತರಿಸಿ ಕೊಡಬೇಕಾಗಿ ಬರುವಂತೆ ಅದನ್ನು ನಮಗೆ ಯಾರಾದರೂ ಭಾಷಾಂತರಿಸಿ ಕೊಡಬೇಕಾಗುತ್ತದೆ ; ಅದನ್ನು ಸರಳತರವೂ ನೂನಾಲಂಕೃತ ವಿಚಾರವೂ ಆಗುವಂತೆ ಮಾಡಿಕೊಡಬೇಕಾಗುತ್ತದೆ : "ಪ್ರತಿಭೆಯು ಪರಸತ್ಯ ಮಾರ್ಗದಿಂದ ಗುಪ್ತ ಹೊಳಹುಗಳಿಗೆ ಬಂದು ಮುಟ್ಟುತ್ತದೆ." ಸೂಚಕವಾವುದೂ ಇಲ್ಲದೆ ಉಷೆಯ ಹಾಗೂ ಸೂರ್ಯನ ಬಗೆಗೆ ನಾವು ವಿಚಿತ್ರ, ವಿಕಟ ಕಲ್ಪನೆಗಳ ಲೋಕದಲ್ಲಿ ಅಲೆಯುವೆವು ಅಥವಾ ಸ್ವರ್ಗ ಶುನಿಯಾದ ಸರಮೆಯಲ್ಲಿ ಅವಳು ದ್ರಾವಿಡ ರಾಷ್ಟ್ರಗಳಿಗೆ ಆರ್ಯರು ತಮ್ಮಿಂದ ಅವರು ಕದ್ದೊಯ್ದ ದನಕರುಗಳನ್ನು ಪುನಃ ಪಡೆಯಲು ರಾಜದೂತಿಯನ್ನಾಗಿ, ಇತಿಹಾಸಪೂರ್ವ ಕಾಲವೊಂದರಲ್ಲಿ, ಕಳುಹಲ್ಪಟ್ಟವಳು ಎಂದು ಕೂಡಾ ಊಹಿಸಬಹುದಾಗಿದೆ !

ಇಡೀ ವೇದವು ಇಂಥ ಪ್ರತಿಮಾಸಂಕೇತಗಳಿಂದ ತುಂಬಿರುವುದೆಂದು ಭಾವಿಸಲಾಗಿದೆ. ಇದರಿಂದ ಉಂಟಾದ ಅಸ್ಪಷ್ಟತೆ ಮತ್ತು ಬೌದ್ಧಿಕ ಗೊಂದಲ ಗಲಿಬಿಲಿಗಳು ಗಾಬರಿಗೊಳಿಸುವಷ್ಟಾಗಿದೆ. ಆದ್ದರಿಂದ ವಿವರಣಾತ್ಮಕವಲ್ಲದ ಭಾಷಾಂತರವು ಎಷ್ಟು ವ್ಯರ್ಥವೆಂಬುದು ಒಮ್ಮೆಲೇ ಸ್ಪಷ್ಟವಾಗುತ್ತದೆ. "ಉಷೆ ಮತ್ತು ರಾತ್ರಿ" ಒಂದು ಆಕರ್ಷಕ ವೈದಿಕ ಪದ್ಯವು ಹೇಳುತ್ತದೆ. "ಇಬ್ಬರು ಸೋದರಿಯರು, ಭಿನ್ನ ರೂಪದವರು, ಆದರೆ ಒಂದೇ ಮನೋಧರ್ಮವುಳ್ಳವರು - ಒಂದೇ ದಿವ್ಯ ಶಿಶುವಿಗೆ ಮೊಲೆಹಾಲನ್ನು ಉಣ್ಣಿಸುತ್ತಾರೆ." ಅಕ್ಷರಾರ್ಥಾಧಾರದಿಂದ ನಮಗಿಲ್ಲಿ ಏನೂ ಗೊತ್ತಾಗುವುದಿಲ್ಲ. ಉಷೆಯೂ ರಾತ್ರಿಯೂ ಭಿನ್ನರೂಪದವುಗಳು. ಆದರೆ ಅವರೇಕೆ ಒಮ್ಮನಸ್ಸಿನವರು? ಆ ಮಗು ಯಾವುದು? ಅದು ಅಗ್ನಿಯಾದರೆ, ಬೆಂಕಿಯಾದರೆ, ಒಬ್ಬರಾದ ಮೇಲೊಬ್ಬರಂತೆ ಉಷೆ-ರಾತ್ರಿಯರು ಆ ಮಗುವಿಗೆ ಸ್ತನ್ಯಪಾನ ಮಾಡಿಸುತ್ತಾರೆ ಎಂದರೆ ನಾವೇನು ಅರ್ಥಮಾಡಿಕೊಳ್ಳಬೇಕು? ಆದರೆ ವೈದಿಕ ಕವಿಯಿಲ್ಲಿ ಭೌತಿಕ ಉಷಾರಾತ್ರಿಯರನ್ನು ದೃಷ್ಟಿಯಲ್ಲಿಟ್ಟುಕೊಂಡಿಲ್ಲ. ಅವನು ತನ್ನ ಆಧ್ಯಾತ್ಮಿಕ ಅನುಭವದ ವಿಕಲ್ಪಗಳನ್ನು ದೃಷ್ಟಿಯಲ್ಲಿಟ್ಟುಕೊಂಡಿದ್ದಾನೆ-ತನ್ನ ಆಧ್ಯಾತ್ಮಿಕ ಅನುಭವದ ಉದಾತ್ತ, ಹಿರಣ್ಮಯ ಪ್ರಬೋಧೋದಯದ ಮತ್ತು ಅದು ಬಿದ್ದುಹೋದ ದಿನನಿತ್ಯದ ಅಪ್ರಬುದ್ಧ ಪ್ರಜ್ಞೆಗಳ

ಅವಧಿಗಳನ್ನು, ಆ ಏರಿಳಿತಗಳ ಲಯಗತಿಯನ್ನು, ತನ್ನ ಮನಸ್ಸಿನಲ್ಲಿಟ್ಟುಕೊಂಡಿದ್ದಾನೆ. ಅವನು ತನ್ನಲ್ಲಿಯ ದಿವ್ಯಜೀವನದ ಶಿಶುಬಲದ ಬೆಳವಣಿಗೆಯನ್ನು ಈ ಎಲ್ಲಾ ವಿಕಲ್ಪಗಳ ನಡುವೆ ಹಾಗೂ ಅವುಗಳ ಪರಿಸ್ಥಿತಿಗಳ ಪ್ರಣೋದದಿಂದ ಕೂಡಾ ಒಪ್ಪಿಕೊಳ್ಳುತ್ತಾನೆ. ಏಕೆಂದರೆ ಉಭಯ ಸ್ಥಿತಿಗಳಲ್ಲೂ ಪ್ರತ್ಯಕ್ಷಾಪ್ರತ್ಯಕ್ಷವಾಗಿ ಅದೇ ದಿವ್ಯಾಕಾಂಕ್ಷೆಯು ಮತ್ತು ಅದೇ ಔನ್ನತ್ಯೋನ್ಮುಖ ದುಡಿಮೆಯು ಕೆಲಸ ಮಾಡುತ್ತಿರುತ್ತವೆ. ಹೀಗೆ ವೈದಿಕ ಮನಸ್ಸಿಗೆ ಸ್ಪಷ್ಟವಾಗಿದ್ದ ಸೂಚಕ ಪ್ರತಿಮೆಯು ಪ್ರಕಾಶಮಯ, ಸೂಕ್ಷ್ಮ, ಗಭೀರ, ಸ್ಫುರತ್‌ಪ್ರಭೆ ಎನ್ನಿಸಿದ್ದರೆ - ಅವು ನಮಗೆ ಅರ್ಥಹೀನವೋ ಬಡವಾದವುಗಳೋ ಅರ್ಥದಲ್ಲಿ ಅಸಮನ್ವಿತವೋ ಆಗಿಯೂ ಅತಿಶಯಿಸಲ್ಪಟ್ಟ, ಕಪಟನಾಟಕಯುಕ್ತ ಮತ್ತು ಸಾಹಿತ್ಯಿಕ ರಚನಾ ವಿನ್ಯಾಸದಲ್ಲಿ ಅಲಂಕರಿಕವಾಗಿ  ಯದ್ವಾತದ್ವಾ ಆಗಿವೆ ಎಂಬಂತೆಯೂ ತೋರುತ್ತದೆ.

ಇದೇ ಮೇರೆಗೆ ಅತ್ರಿಕುಟುಂಬದ ದ್ರಷ್ಟಾರನು ಅಗ್ನಿಯನ್ನು ಕುರಿತು - "ಎಲೈ ಅಗ್ನಿಯೇ, ಯಜ್ಞಪುರೋಹಿತನೇ ನಮ್ಮನ್ನು ತಂತುಮುಕ್ತ (ಪಾಶಮುಕ್ತ) ರನ್ನಾಗಿ ಮಾಡು" ಎಂದು ಗಟ್ಟಿಯಾಗಿ ಅರಚಿಕೊಂಡಾಗಲೂ ಸ್ವಾಭಾವಿಕವಾದುದನ್ನಲ್ಲದೆ ಕುಸುರುಗೆಲಸ ತುಂಬಿದ ಪ್ರತಿಮೆಯನ್ನು (ರೂಪಕವಿಧಾನವನ್ನು) ಬಳಸುತ್ತಾನೆ. ಅವನು ತಂತುತ್ರಯವನ್ನು - ಮನ, ನಾಡಿ ಮತ್ತು ದೇಹಗಳ ಬಂಧನಗಳನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದಾನೆ. ಈ ಪಾಶತ್ರಯದಿಂದ ಜೀವಾತ್ಮನು ಬದ್ಧನಾಗಿ ವಿಶ್ವಯಜ್ಞದ ಬಲಿಪಶುವಾಗಿದ್ದಾನೆ. ಪುರುಷನ ಯಾಗದ ಯೂಪಸ್ತಂಭಕ್ಕೆ ಕಟ್ಟಿದ ವಧ್ಯ ಪಶುವಾಗಿದ್ದಾನೆ. ಅವನು ತನ್ನಲ್ಲಿ ಬೆಳೆಯುತ್ತಿರುವ ಬಲವನ್ನು, ಅಂತರ್ ಜ್ವಾಲೆಯನ್ನು (ಅದು ಅವನು ಕೊಟ್ಟದ್ದೆಲ್ಲವನ್ನೂ ಸ್ವೀಕರಿಸಿ ಅದನ್ನು ತನ್ನ ದೂರದ ದುರ್ಗಮ ಗೃಹಕ್ಕೆ ಒಯ್ಯುತ್ತದೆ) ಅದು ಅವನಿತ್ತ ಹವಿಸ್ಸೆಲ್ಲವನ್ನೂ, ತನ್ನ ಮನೆಯಾದ ಉನ್ನತಪೀಠಸ್ಥ ಸತ್ಯಕ್ಕೆ, ದೂರಸ್ಥ ತತ್ವಸ್ಥಾನಕ್ಕೆ, ಗುಪ್ತಜ್ಞಾನಕ್ಕೆ, ಅತ್ಯುಚ್ಚ ದೇವೇಶ್ವರನೆಡೆಗೆ ಒಯ್ಯುವುದನ್ನು ಆಲೋಚಿಸುತ್ತಿರುತ್ತಾನೆ. ಈ ಸಂಗತಿಗಳೆಲ್ಲಾ ನಮಗೆ ಇಲ್ಲವಾಗುತ್ತವೆ. ನಮ್ಮ ಮನಸ್ಸು ಕರ್ಮಕಾಂಡೀಯ ಯಜ್ಞದ ಮತ್ತು ಭೌತಿಕ ಹಗ್ಗದ ಕಲ್ಪನೆಗಳೆಂಬ ಪಿಶಾಚಗಳಿಂದ ಗ್ರಸ್ತವಾಗಿದೆ. ಅತ್ರಿಪುತ್ರನು ಯೂಪಸ್ತಂಭಕ್ಕೆ ಬದ್ಧನಾಗಿ (ಹಳೆಯ ಅನಾಗರಿಕ ಯಜ್ಞ ಸಂಸ್ಥೆಯಲ್ಲಿ) ತನ್ನನ್ನು ಬಿಡಿಸೆಂದು ಭೌತಿಕ ಮುಕ್ತಿಗಾಗಿ ಬೆಂಕಿಯ ದೇವತೆಯನ್ನು ಕೂಗಿ ಕರೆಯುತ್ತಾನೆ ಎಂದು ಬಹುಶಃ ಊಹಿಸುತ್ತೇವೆ !

ಸ್ವಲ್ಪ ಕಾಲ ಕಳೆದ ಮೇಲೆ ದ್ರಷ್ಟಾರನು ಪ್ರಜ್ವಲತರವಾಗುತ್ತಿರುವ ಮಹಾಜ್ವಾಲೆಯನ್ನು ಕುರಿತು "ಅಗ್ನಿಯು ವ್ಯಾಪಕ ಪ್ರಕಾಶದಿಂದ ಹೊಳೆಯುತ್ತಾನೆ ಮತ್ತು ತನ್ನ ಮಹತ್ತೆಯಿಂದ ಎಲ್ಲ ವಸ್ತುಗಳೂ ಅವತರಿಸುವಂತೆ (ಅಭಿವ್ಯಕ್ತವಾಗುವಂತೆ ವ್ಯಾಕೃತವಾಗುವಂತೆ), ಬೆಳಕಿಗೆ ಬರುವಂತೆ ಮಾಡುತ್ತಾನೆ" - ಎಂದು ಹಾಡುತ್ತಾನೆ. ನಾವೇನು ಅರ್ಥಮಾಡಬೇಕು? ಹೇಗೋ ಗೊತ್ತಿಲ್ಲ, ಅಂತೂ ಹಾಡುಗಾರನು ತನ್ನ ಬಂಧನದಿಂದ ಬಿಡುಗಡೆ ಹೊಂದಿ ಶಾಂತನಾಗಿ ತನ್ನನ್ನು ತಿನ್ನಬೇಕಾಗಿದ್ದ, ನುಂಗಿ ಬಿಡಬೇಕಾಗಿದ್ದ, ಯಜ್ಞಾಗ್ನಿಯ ಮಹಾಜ್ವಾಲೆಯನ್ನು ಮೆಚ್ಚಿ, ತನ್ನ ಅಪ್ರಬುದ್ಧ ಮನಸ್ಸಿನ ವೇಗವಾದ ಪರಿವರ್ತನಾ ವ್ಯವಸ್ಥೆಗಳತ್ತ ಆಶ್ಚರ್ಯಪಡುತ್ತಿದ್ದಾನೆ- ಎಂದು ನಾವು ಊಹಿಸಬೇಕೇ? "ವಿಶಾಲ ದಿವ್ಯ ಜ್ಯೋತಿ" ಎಂಬುದು ಸುಸ್ಥಿರ ಪದಸಂಹತಿ-ಯೋಗಿಗಳ ಭಾಷೆಯಲ್ಲಿ ಮಾನಸೋತ್ತರವಾದ ವಿಸ್ತಾರವೂ ಮುಕ್ತವೂ ಪ್ರಕಾಶಮಯವೂ ಆದ ಪ್ರಜ್ಞಾವಿಶೇಷವು ಎಂಬುದನ್ನು ಕಂಡುಕೊಂಡಾಗಲೇ ಋಕ್ಕಿನ ನಿಜವಾದ ಪಲ್ಲವಿ ಏನೆಂಬುದನ್ನು ಗ್ರಹಿಸಬಲ್ಲವರಾಗುವೆವು. ದ್ರಷ್ಟಾರನು ತನ್ನ ಮನ, ನಾಡೀ (ಪ್ರಾಣ), ದೇಹಗಳ ಪ್ರಜ್ಞಾಬಂಧದಿಂದ ತಾನು ಹೇಗೆ ಮುಕ್ತನಾದೆನೆಂಬುದನ್ನು ಸೂಕ್ತಿಸುತ್ತಿದ್ದಾನೆ. ಪಾಶತ್ರಯ ವಿಮೋಚನೆಯನ್ನು ಹೇಳುತ್ತಿದ್ದಾನೆ. ಕಟ್ಟಕಡೆಗೆ ಬಂಧತ್ರಯವನ್ನು ದಾಟಿ ತನ್ನಲ್ಲಿಯ

ಜ್ಞಾನ ಮತ್ತು ಸಂಕಲ್ಪಗಳು ಸರ್ವವಸ್ತುಗತವಾದ ಮಹಾಸತ್ಯದತ್ತ ಮೇಲೇರಿ ಹೋಗಿ ಆ ವಿಶ್ವೋತ್ತರ ಸತ್ಯವೆಂಬುದು ದ್ರಷ್ಟಾರನಿಗೆ ಒಂದು ಮಹಾಯಾಮದ ಪ್ರಬೋಧೋದಯ ರೂಪದಲ್ಲಿ ಸಾಕ್ಷಾತ್ಕಾರವಾಗುತ್ತದೆ.

ಆದರೆ ಈ ಗಭೀರವಾದ ಸ್ವಾಭಾವಿಕವಾದ ಅಂತರರ್ಥವನ್ನು ಭಾಷಾಂತರದಲ್ಲಿ ಇತರರ ಮನಸ್ಸಿಗೆ ಒಪ್ಪಿಗೆಯಾಗುವಂತೆ ತಿಳಿಸುವುದು ಹೇಗೆ? ಸವಿವರಣ ಭಾಷಾಂತರದಿಂದಲ್ಲದೆ ಬೇರೆ ವಿಧದಿಂದ ಹಾಗೆ ಮಾಡಲು ಸಾಧ್ಯವಿಲ್ಲ. "ಎಲೈ ದಿವ್ಯ ಸಂಕಲ್ಪವೇ, ನಮ್ಮ ಯಜ್ಞಪುರೋಹಿತನೇ, ನಮ್ಮ ಬಂಧನದ ಪಾಶಗಳನ್ನು ಸಡಿಲಿಸು" ಮತ್ತು "ಈ ಜ್ವಾಲೆಯು ಪರಸತ್ಯದ ವಿಶಾಲ ಮಹಾಜ್ಯೋತಿಯೊಂದಿಗೆ ಕೂಡಿಕೊಂಡು ಹೊಳೆದು ತನ್ನ ಮಹತ್ವದಿಂದ ಸರ್ವ ವಸ್ತುಗಳೂ ಪ್ರಕಟವಾಗುವಂತೆ ಮಾಡುತ್ತದೆ" ಎಂದಾಗಲಾದರೂ ಓದುಗನು ತಂತು (ಪಾಶ), ಬೆಳಕು, ಜ್ವಾಲೆ ಎಂಬ ಪದಗಳ ಆಧ್ಯಾತ್ಮಿಕ ಸ್ವರೂಪವನ್ನು ಗ್ರಹಿಸಲು ಶಕ್ತನಾಗುವನು ; ಆಗ ಅವನು ಈ ಪ್ರಾಚೀನ ಮಂತ್ರಗೀತದ ಅರ್ಥವನ್ನೂ ತಾತ್ಪರ್ಯವನ್ನೂ ಕೆಲಮಟ್ಟಿಗೆ ಭಾವಿಸಿಕೊಳ್ಳುವನು.

ಈ ಉದಾಹರಣೆಗಳಿಂದ ನಾನು ಹಿಡಿದ ಕ್ರಮವೇನೆಂಬುದು ಸ್ಪಷ್ಟವಾಗುವುದು. ನಾನು ಕೆಲವು ಸಲ ಪ್ರತಿಮಾಲಂಕಾರವನ್ನು ಗಣನೆಗೆ ತೆಗೆದುಕೊಂಡಿಲ್ಲ ; ಆದರೆ ಬಾಹ್ಯ ಸಂಕೇತದ ಇಡೀ ಸ್ವರೂಪವನ್ನೂ ಪೂರ್ತಿಯಾಗಿ ನಾಶಗೊಳಿಸುವಷ್ಟರ ಮಟ್ಟಿಗೆ ಅದನ್ನು ಉಪೇಕ್ಷಿಸಲಿಲ್ಲ ಅಥವಾ ಭಾಷಾಂತರಕ್ಕೆ ಬದಲಾಗಿ ವ್ಯಾಖ್ಯಾನವನ್ನು ಪ್ರತಿಯಾಗಿ ಇಡಲೂ ಹೋಗಲಿಲ್ಲ. ವೈದಿಕ ವಿಚಾರದ ಶ್ರೀಮದ್ರತ್ನಕವಚವನ್ನೂ ಅದರ ಅತಿಸುಂದರ ಆಭರಣಗಳನ್ನೂ ತೆಗೆದು ಹಾಕಿ ಅದರ ಬದಲಿಗೆ ಸಾಮಾನ್ಯ ಭಾಷೆಯ ಒರಟು ಉಡುಪನ್ನು ಉಡಿಸಿದ್ದರೆ ಅದು ಅನಪೇಕ್ಷಣೀಯವಾದ ಕೊಲೆಗೆಲಸವಾಗುತ್ತಿತ್ತು. ಆದರೆ ನಾನು ಸಾಧ್ಯವಿದ್ದಲ್ಲೆಲ್ಲಾ ಆ ವೈದಿಕ ಭಾಷಾ ಕವಚವನ್ನು ಆದಷ್ಟು ಮಟ್ಟಿಗೆ ಪಾರದರ್ಶಕವನ್ನಾಗಿ ಮಾಡಲು ಯತ್ನಿಸಿದ್ದೇನೆ. ದೇವತೆಗಳ, ರಾಜರ, ಋಷಿಗಳ ಹೆಸರುಗಳನ್ನು ಅವುಗಳ ಅರೆಮರೆಯ ಅರ್ಥಗಳಿಂದ ಹೊರತೆಗೆದಿಟ್ಟಿದ್ದೇನೆ. ಹಾಗೆ ಮಾಡದೆ ಹೋಗಿದ್ದರೆ ಆ ಅರ್ಥಗಳಿಗೆ ತೊಡಿಸಿದ ಮುಖವಾಡವು ಅಭೇದ್ಯವಾಗಿಯೇ ಉಳಿಯುತ್ತಿತ್ತು ; ಎಲ್ಲಿ ಪ್ರತಿಮೆ ಅನವಶ್ಯಕವೋ ಅಲ್ಲಿ ಅದನ್ನು ಬಿಟ್ಟು ಅದಕ್ಕೆ ಬದಲಾಗಿ ಮಾನಸಶಾಸ್ತ್ರೀಯ ಸಮಾನಾರ್ಥಕ ಪದಗಳನ್ನು ಬಳಸಿದ್ದೇನೆ. ಎಲ್ಲಿ ಅದು ಸುತ್ತುಮುತ್ತಲಿನ ಪದಗಳ ಮೇಲೆ ತನ್ನ ಬಣ್ಣವನ್ನು ಬೀರುತ್ತದೆಯೋ ಅಲ್ಲಿ ಮೂಲ ಪ್ರತಿಮೆಯ ಪರ್ಯಾಯವನ್ನಿಟ್ಟುಕೊಂಡೇ ಆ ಮಂತ್ರದ ಇಡೀ ಅರ್ಥದ ಜಟಿಲ ಜಾಲವನ್ನೇ ಅರ್ಥೈಸಿ ಹೇಳಿದ್ದೇನೆ. ಕೆಲವು ಸಲ ನಾನು ಒಂದೇ ಒಂದಕ್ಕೆ ಎರಡು ಭಾಷಾಂತರಗಳನ್ನು ಮಾಡಿದ್ದೂ ಉಂಟು. ಉದಾ : ಬೆಳಕು, ಕಿರಣ ಮತ್ತು ದನ ಎಂಬ ಮೂರೂ ಅರ್ಥಗಳನ್ನು ಕೊಡುವ ವೈದಿಕ ಪದ ಬಂದಾಗ ಪರಿಸ್ಥಿತಿಗಳನುಸಾರವಾಗಿ "ಬೆಳಕು" (Light) "ವಿಕಿರಣಗಳು" (radiances) "ಹೊಳೆವ ಗೋವ್ರಜಗಳು" (the shinning herds) "ಪ್ರಕಾಶಮಯ ದನಕರುಗಳು" (the radiant kine) "ಬೆಳಕು ವ್ರಜಮಾತೆ" (Light, mother of the herds) ಎಂಬುದಾಗಿ ಭಾಷಾಂತರಿಸಿದ್ದೇನೆ. ವೇದೋಕ್ತವಾದ ಸೋಮವೆಂಬ ಅಮೃತಸಾರವೆನ್ನಿಸಿದ ಮದ್ಯವನ್ನು "ಆಹ್ಲಾದ ಮದ್ಯ, ಆನಂದ ಮದ್ಯ" (Wine of delight) ಎಂದೂ "ಅಮರ್ತ್ಯತೆಯ, ಅಮೃತತ್ವದ, ಮದ್ಯ" (Wine of immortality) ಎಂದೂ ಭಾಷಾಂತರಿಸಿದ್ದೇನೆ.

ಇಡೀ ವೈದಿಕ ಭಾಷೆಯೇ ಒಟ್ಟಿನಲ್ಲಿ ಶಕ್ತಿಯುತ, ಗಣನೀಯ, ಅರ್ಥವಾಹಕ, ಸೂತ್ರಸ್ವರೂಪಿ, ಗ್ರಂಥಿತ, ವೀರ್ಯವತ್, ಅರ್ಥಸಾಂದ್ರ ಎನ್ನಿಸಿದೆ ; ಮತ್ತು ತನ್ನ ತಿರುಹುಗಳಲ್ಲಿ ಅದು ಬಹಳ ಜಾಗರಿತವಾಗಿ ಸ್ವಾಭಾವಿಕ ವಿಚಾರೋದ್ಧಯನವನ್ನು ಅನುಸರಿಸುತ್ತದೆಯಲ್ಲದೆ, ತಾರ್ಕಿಕ ಹಾಗೂ ಆಲಂಕಾರಿಕ ವಾಕ್ಯರಚನಾ ಪದ್ಧತಿಯ ಮಾಧ್ಯಮಿಕ ಪರಿವರ್ತನ ಸ್ತರಬಂಧದ ಸ್ಪಷ್ಟ ರೀತಿಯನ್ನೂ ನಯ-ನುಣುಪಿನ, ಎಚ್ಚರತಪ್ಪದ ರಚನಾ ಶೈಲಿಯನ್ನೂ ಅನುಸರಿಸುವುದಿಲ್ಲ. ಆದರೆ ಬದಲಾವಣೆ ಮಾಡದೆ ಅದನ್ನು ಹಾಗೆ ಹಾಗೇ ಇಂಗ್ಲಿಷಿಗೆ ಭಾಷಾಂತರಿಸಿದರೆ, ಅಂಥ ಇಂಗ್ಲಿಷು ಕಠಿನ, ಅನಿರೀಕ್ಷಿತಾಂತವುಳ್ಳ ಅಸ್ಪಷ್ಟ ಮತ್ತು ಹೆಣಭಾರದ ತಿರುಗಾಟದ ರೀತಿಯದಾದೀತು, ಹಾಗೂ ಮೂಲದ ಉಷಃಕಾಲೀನ ಉಲ್ಲಾಸವಿಲ್ಲದುದೂ ಬಲವಾದ ದಾಪುಗಾಲಿನ ಹೆಜ್ಜೆಯಿಡುವ ರೀತಿಯಿಂದ ಮುಕ್ತವಾದುದೂ ಆಗಿ ಬಿಟ್ಟೀತು.+ ಆದುದರಿಂದ ನಾನು ವೇದಭಾಷೆಯನ್ನು ಮೂಲದ ಅಭಿಪ್ರಾಯದ ತರ್ಕಸಾಮಂಜಸ್ಯವನ್ನಿಟ್ಟುಕೊಂಡೇ ಇಂಗ್ಲಿಷಿನ ಹಳತಿನಿಂದ ಹೊಸತಿಗೆ ಬರುವ ಮಧ್ಯಾವಸ್ಥೆಗಳ ರಚನಾ ಪದ್ಧತಿಯನ್ನೂ ರೀತಿ ಯೋಜನೆಗಳನ್ನೂ, ಅದರ ಸ್ವಾಭಾವಿಕತೆಗೆ ನಮ್ಯವಾಗಿ ಹೊಂದುವಂತೆ ರೂಪಿಸಿ ಎರಕ ಹೊಯ್ಯುವ ಕ್ರಮವನ್ನು ಅನುಸರಿಸಿದ್ದೇನೆ ; ಮತ್ತು ವೈದಿಕ ಪದಕ್ಕೆ ಶಬ್ದಕೋಶದ ಖಲ್ವಾಟ (ಬೋಳ್ತಲೆಯ) ಪರ್ಯಾಯ ಪದವನ್ನು ಕೊಡಹೋಗದೆ, ಅದಕ್ಕೂ ಹೆಚ್ಚು ಸ್ಪಷ್ಟತೆ ತರುವ ಪದಗಳನ್ನು (ಅಗತ್ಯವಿದ್ದಲ್ಲೆಲ್ಲಾ*) ಅದರ ಪೂರ್ಣಾರ್ಥವನ್ನು ಬಿಡಿಸಿ ಹೇಳುವುದರ ಸಲುವಾಗಿ ಮತ್ತು ಸುಸಾಂಗತ್ಯವನ್ನು ಬಿಂಬಿಸುವುದರ ಸಲುವಾಗಿ ಬಳಸಿದ್ದೇನೆ. ಉದ್ದಕ್ಕೂ ವೇದದ ಅಂತರರ್ಥವನ್ನು ಇಂದಿನ ಸುಸಂಸ್ಕೃತ ಬುದ್ಧಿಯುಳ್ಳವರಿಗೆ ಗ್ರಹಿಸಲು ಶಕ್ಯವಾಗಬೇಕೆಂಬ ಪ್ರಥಮ ಉದ್ದೇಶದ ಮೇಲೇ ಕಣ್ಣಿಟ್ಟುಕೊಂಡು ಬರೆಯುತ್ತಾ ಬಂದಿದ್ದೇನೆ.

ಎಲ್ಲಾ ಮಾಡಿದ ಮೇಲೆಯೂ ಕೆಲವು ಸಾಂದರ್ಭಿಕವಾದ ಉದಾಹರಣೆಗಳನ್ನು ಕೊಡುವುದು ಇನ್ನೂ ಅನಿವಾರ್ಯವಾಗಿ ಉಳಿದು ಹೋಗಿದೆ ; ಆದರೆ ನಾನು ಭಾಷಾಂತರವನ್ನು ಟಿಪ್ಪಣಿಗಳಿಂದ ಭಾರವಾಗುವಂತೆ ಮಾಡಲೂ ಇಲ್ಲ. ಉದ್ದುದ್ದದ ವಿವರಣೆಗಳನ್ನು ಕೊಡಲೂ ಹೋಗಲಿಲ್ಲ. ಪಾಂಡಿತ್ಯಾಂಶಗಳೆಲ್ಲವನ್ನೂ ಬಿಟ್ಟು ಬಿಟ್ಟಿದ್ದೇನೆ. ವೇದದಲ್ಲಿ ಸಂಶಯಾರ್ಥದ ಅನೇಕ ಶಬ್ದಗಳಿವೆ - ಕೆಲ ಉಕ್ತಿಗಳಿಗೆ ತಾತ್ಕಾಲಿಕವಾದ ಅಥವಾ ಊಹಾ ನಿರ್ಧಾರಿತವಾದ ಅರ್ಥಗಳಷ್ಟನ್ನೇ ಹೇಳಬಹುದು ; ಎರಡು ಅಥವಾ ಅದಕ್ಕೂ ಹೆಚ್ಚು ವಿವರಣೆಗಳಿಗೆ ಪಾತ್ರವಾದ ಪದ್ಯಗಳು ಕಡಿಮೆ ಸಂಖ್ಯೆಯಲ್ಲೇನೂ ಇಲ್ಲ. ಆದರೆ ಈ ತರಹದ ಭಾಷಾಂತರದಲ್ಲಿ ಪಂಡಿತರ ಕಠಿನಾರ್ಥ ವಿಶ್ಲೇಷಣೆಗೂ ಸಂದೇಹಜಾತ ಸಂಕುಚಿತತೆಗೂ ಸ್ಥಳವಿಲ್ಲ. ತಿಳಿದುಕೊಳ್ಳಬೇಕೆಂಬವನಿಗೆ, ಅಂಥ ಆಸಕ್ತ ಓದುಗನಿಗೆ, ಅನಿವಾರ್ಯವಾದ, ವೈದಿಕರ ಮುಖ್ಯ ವಿಚಾರದ ಸ್ಥೂಲ ರೂಪರೇಖೆಯನ್ನೂ ಕೊಟ್ಟಿದ್ದೇನೆ.

---

\+ ಶ್ರೀ ಅರವಿಂದರ ಇಂಗ್ಲಿಷ್ ವೈದಿಕ ಸಂಸ್ಕೃತ ಶೈಲಿಯ ಅನೇಕ ಗುಣಗಳನ್ನುಳ್ಳದ್ದಾದುದರಿಂದ ಅದರ ಕನ್ನಡ ಭಾಷಾಂತರವೂ ಅರವಿಂದ ಮೂಲದ ನಯನಾಜೂಕು, ಓಜಸ್ಸು, ಪ್ರಸಾದ, ಮಾಧುರ್ಯಗಳನ್ನು ಉಳಿಸಿಕೊಂಡೇ ಆದರೆ ಆದಷ್ಟು ತಿಳಿಯಾಗಿ ಮಾಡಲು ಯತ್ನಿಸಿಯೇ ಉದ್ದಕ್ಕೂ ಹೊರಟಿದೆ - ಮೂಲಾರ್ಥಕ್ಕೆ ಎಲ್ಲೂ ಅನ್ಯಾಯವಾಗಬಾರದೆಂದೇ ಕೆಲ ಗಡುಚಾದ ಕನ್ನಡ ಪದಗಳನ್ನು ಜೊತೆಜೊತೆಗೇ ಬಳಸಲಾಗಿದೆ - ಅನುವಾದಕ.

* ಸಹೃದಯ ವಿಮರ್ಶಕರಿಗೆ ಈ ಅಗತ್ಯಾನಗತ್ಯವಿವೇಕವು ಸಂಸ್ಕಾರ - (ಇಂಗ್ಲಿಷು ಹಾಗೂ ಕನ್ನಡ ಭಾಷೆಗಳ ಸಂಸ್ಕಾರ) ಬಲದಿಂದ ಹೊಳೆಯದಿರದು. - ಅನುವಾದಕ.

ಆತನು ವೈದಿಕ ಸೂಕ್ತಗಳ ಸಾಮಾನ್ಯ ಪ್ರವೃತ್ತಿಯನ್ನೂ ಸ್ಥೂಲ ಸೂಚನೆಗಳನ್ನೂ ಗ್ರಹಿಸುವ ನಿರೀಕ್ಷೆಯನ್ನಿಟ್ಟುಕೊಂಡಿರುತ್ತಾನೆ. ಇದಕ್ಕೂ ಹೆಚ್ಚು ಸಾಧ್ಯವಿಲ್ಲ. ಯೌಗಿಕ ಸಿದ್ಧಾಂತದ ಹೃದಯವನ್ನೇ ಹೊಕ್ಕು ನೋಡಬೇಕಾದರೆ ನಾವೇ ಆ ಹಳೆಯ ದಾರಿಯಲ್ಲಿ ಹೋಗಿರಬೇಕು ಮತ್ತು ಕಳೆದು ಹೋದ ಆ ಶಿಸ್ತನ್ನು ಪುನರುಜ್ಜೀವನಗೊಳಿಸಿಕೊಳ್ಳಬೇಕು, ಮರೆತ ಅನುಭವಗಳನ್ನು ಮತ್ತೆ ಪಡೆದುಕೊಳ್ಳಬೇಕು. ನಮ್ಮಲ್ಲಿ ಯಾರು ಆ ಆಳದಲ್ಲಿ ಹೊಕ್ಕು ಅಥವಾ ಜೀವಂತ ಶಕ್ತಿಯನ್ನು ಪಡೆದು ಯಶಸ್ವಿಯಾದಾರು? ಆಗುವ ಪ್ರತ್ಯಾಶೆಯನ್ನಾದರೂ ತಳೆಯಬಲ್ಲವರಾದಾರು? ಈ ಕಜ್ಜಣದ ಯುಗದಲ್ಲಿ ನಮ್ಮ ಪಿತೃಪಿತಾಮಹರ ಬೆಳಕನ್ನು ಮತ್ತೆ ಪಡೆದಾರು ಅಥವಾ ಮನ-ದೇಹಗಳೆಂಬ ಎರಡೂ ಆವಾರಕ ಅಂತರಿಕ್ಷಗಳನ್ನು ದಾಟಿ ಅನಂತ ಸತ್ಯದ ಹೊಳೆವ ತೇಜೋಲೋಕದ (ದೇವಲೋಕದ) ಒಳಹೊಕ್ಕಾರು? ಅಯೋಗ್ಯರಿಂದ ತಮ್ಮ ಜ್ಞಾನವನ್ನು ಮುಚ್ಚಿಡಲು ಋಷಿಗಳು ಯತ್ನಿಸಿದರು. ಏಕೆ? ಅತ್ಯುತ್ತಮರ ಭ್ರಷ್ಟತೆಯು ಅತ್ಯಧಮತ್ವಕ್ಕೆ ಲೋಕವನ್ನು ನೂಕೀತು ಎಂದೂ ಮಗುವಿಗೂ ಅಶಕ್ತನಿಗೂ ಬಲಿಷ್ಠ ಪರಿಣಾಮದ ಸೋಮಮದ್ಯವನ್ನು ಕುಡಿಸಿದರೆ ಅದಕ್ಕೆ ಹಾಗೂ ಅವನಿಗೆ ಕೇಡಾದೀತೆಂಬ ಹೆದರಿಕೆ ಅನಿವಾರ್ಯ ಎಂದೂ ಅವರು ನಂಬಿದ್ದಾರು. ಆದರೆ ಅವರ ಆತ್ಮಗಳು ಇನ್ನೂ ನಮ್ಮೊಡನೆ ಇದ್ದು ವಿರಳವಾದ ಆರ್ಯಾತ್ಮನೊಬ್ಬನನ್ನು ಈ ಮರ್ತ್ಯರ ಮಧ್ಯದಲ್ಲಿ ಕಾಣಬಹುದೆಂದು ಹುಡುಕುತ್ತಿರಬಹುದೇ? ಈ ಮರ್ತ್ಯರಾದರೋ ವಿಕಿರಣಶೀಲ ಸೂರ್ಯನ ಗೋವ್ರಜಗಳನ್ನು ಎಂದೆಂದೂ ನೆನಪು ಮಾಡಿಕೊಳ್ಳದೆ ತೃಪ್ತರಾಗಿ ಐಂದ್ರಿಯ ಜೀವನದ ಒಡೆಯರ ಕಾಳ್ಗವಿಯಲ್ಲಿ ಬಂಧಿತರಾಗಿಯೇ ಇರುತ್ತಾರೋ? ಅಥವಾ ಆ ವೈದಿಕ ಋಷಿಗಳು ತಮ್ಮ ತೇಜೋಮಯ ಪ್ರಪಂಚದಲ್ಲಿ ಮರುತ್ತುಗಳು ಪುನಃ ರಥಾರೂಢರಾಗಿ ಹೊರಗೆ ಬಂದು ಮೇಲಿಂದ ಕೆಳಗಿಳಿದು ನಮ್ಮ ಹತ್ತಿರ ಸಾರುತ್ತಾರೋ ಅಥವಾ ನಾಕದ ನದಿಗಳಾಚೆಯಿಂದ ಸ್ವರ್ಗಶುನಿಯು ಪುನಃ ವೇಗವಾಗಿ ಇಳಿದು ಬಂದು ಸ್ವರ್ಗೀಯ ಜಲಗಳ ಮೊಹರನ್ನು ಒಡೆದು, ಗವಿಗಳನ್ನು ಕಡಿದು ಚೂರುಚೂರು ಮಾಡಿ ವೈದ್ಯುತ ವಜ್ರಾಸ್ತ್ರಗಳಿಂದ ಅಮರ್ತ್ಯೀಕರಿಸುವ ಮಧ್ಯವನ್ನು ಮಾನವ ದೇಹದಲ್ಲಿ ಹಿಂಡಿತೆಗೆದು ಹಂಚುವುದಕ್ಕೆ ನೆರವೀಯಬಹುದೆಂದು ಭಾವಿಸಿದ್ದಾರೆಯೋ? ಯಾರು ಬಲ್ಲರು? ಅವರ ಗುಟ್ಟು ಅವರಲ್ಲೇ ಸುರಕ್ಷಿತವಾಗಿದೆ. ನಮ್ಮ ಕಣ್ಣನ್ನು ಕುರುಡು ಮಾಡುವ ನಶ್ವರ ಬಾಹ್ಯ ವೈಭವವಿರುವ, ನಮ್ಮ ಕಿವಿಗಳನ್ನು ಕಿವುಡು ಮಾಡುವ ಭೌತಿಕವೂ, ಯಾಂತ್ರಿಕವೂ ಆದ ಜ್ಞಾನವು ತನ್ನ ಜಯಭೇರಿಯನ್ನು ಮೊಳಗಿಸುತ್ತಿರುವ ಈ ಕಾಲದಲ್ಲಿ ಎಷ್ಟು ಜನರು ಬೌದ್ಧಿಕ ಹಾಗೂ ತಾರ್ಕಿಕ ಕುತೂಹಲ ದೃಷ್ಟಿಯನ್ನು ತಮ್ಮ ಪ್ರಾಚೀನ ಶಿಸ್ತಿನ ಮೇಲೆ, ಯೋಗಶಾಸ್ತ್ರದ ಮೇಲೆ ಬರೆದಿಟ್ಟ ಹಕ್ಕು-ಪದಗಳನ್ನು ಹೊಕ್ಕು ಅವುಗಳ ವಿಕಿರಣಶೀಲ ಅದ್ಭುತಗಳ ಹೃದಯವನ್ನು ಕಂಡಾರು? ಮುಸುಕು ತೆಗೆದ ಮೇಲೆಯೂ ವೇದರಹಸ್ಯವು ಇನ್ನೂ ರಹಸ್ಯವಾಗಿಯೇ ಉಳಿದಿದೆ.



# ಅಗ್ನಿಸೂಕ್ತಗಳು-೫

# ದಿವ್ಯ ಸಂಕಲ್ಪ ಪ್ರಣೋದನಾದ ಅಗ್ನಿ

ಈ ಅಗ್ನಿಯೆಂಬ ಉರಿದೇವನ ಹೆಸರು ನಿಷ್ಪನ್ನವಾದದ್ದು "ಅಗ್" ಎಂಬ ಧಾತುವಿನಿಂದ. ಆ ಧಾತುವಿನ ಅರ್ಥಗುಣವು = ಪ್ರಮುಖ ಪ್ರಣೋದ, ಅಥವಾ ಸ್ಥಿತಿ, ಕಾರ್ಯ, ಸಂವೇದನೆ ಯಾ ಚಲನೆ ಎಂಬುದರಲ್ಲಿಯ ಸಾಂದ್ರತೆ ಎಂದು ; ಆದರೆ ಈ ಮುಖ್ಯಾರ್ಥದ ಗುಣಗಳು ವಿವಿಧವಾಗಿವೆ. ಅಗ್+ನಿ = ಅಗ್ನಿ (ನಾಮಪದ). ಉರಿವ ಪ್ರಕಾಶ ಎಂಬುದು ಅದರ ಅರ್ಥವು. ಅದಕ್ಕೆ ಚಲನೆಯೆಂಬುದೂ ಒಂದು ಅರ್ಥ, ಅದು ಗತ್ಯರ್ಥಕವೂ ಹೌದು - ಹಾವಿನಂಥ ಹರೆಯುವ ಚಲನೆಯವನು ಅಗ್ನಿಯು. ಬಲ, ಪ್ರಣೋದ, ಎಂಬವೂ ಅಗ್ನಿಯ ಅರ್ಥಗಳು ; ಸೌಂದರ್ಯ, ರಾಜತೇಜ ಎಂಬವುಗಳೂ ಅಗ್ನಿಯ ಅರ್ಥವಿಶೇಷಗಳು- ನಾಯಕ, ಮುಖ್ಯ ಎಂದೂ ಅಗ್ನಿಯ ಅರ್ಥ. ಅದು ಕೆಲ ಭಾವನಾತ್ಮಕ ಬೆಲೆಗಳನ್ನೂ ಬೆಳೆಸಿತು. ಅವು ಸಂಸ್ಕೃತದಲ್ಲೀಗ ನಾಶವಾಗಿ ಹೋಗಿವೆ. ಆದರವು ಗ್ರೀಕ್ ಭಾಷೆಯಲ್ಲಿ ಉಳಿದಿವೆ = ಕ್ರೋಧಾವೇಶ ಒಂದರ್ಥ, ಇನ್ನೊಂದು ಆನಂದ ಮತ್ತು ಪ್ರೇಮ.

ವೈದಿಕಾಗ್ನಿಯು ದೇವತಾಶಕ್ತಿಗಳಲ್ಲಿ ಪ್ರಥಮನಾಗಿದ್ದಾನೆ. ಆದಿ ನಿರ್ಮಲ ಸ್ಥಿತಿಯ ಮತ್ತು ಪ್ರಧಾನ ದೇವತೆಯವನು. ಎಲ್ಲ ದೇವತಾ ಶಕ್ತಿಗಳೂ ವಿಶಾಲನೂ, ಗುಪ್ತನೂ ಆದ ದೇವನಿಂದ ಹುಟ್ಟಿದವುಗಳು. ಆ ಮಹಾದೇವನ ಪ್ರಜ್ಞಾತ ಪ್ರಣೋದದಿಂದ ಜಗಗಳು ಸೃಷ್ಟವಾದವು ; ಒಳಗಿಂದೊಳಗೆ ಅವನ್ನು ಅವನೇ ನಿಯಂತ್ರಿಸುತ್ತಾನೆ. ಅಗ್ನಿಯು ರೂಪ, ಆಕೃತಿ, ಬೆಂಕಿ, ಪ್ರಣೋದ ನಿರ್ಭರ ಉಷ್ಣತೆ ಮತ್ತು ಆ ಮಹಾದೇವನ ಪ್ರಜ್ವಲ ಸಂಕಲ್ಪ ಸ್ವರೂಪನು. ಜ್ಞಾನದ ಪ್ರಜ್ವಲ ಪ್ರಣೋದನಾಗಿ ಅಗ್ನಿಯು ಜಗಗಳನ್ನು ಕಟ್ಟಲು ಕೆಳಗಿಳಿದು ಬಂದವನು. ಆ ಜಗಗಳೊಳಗೆ ಗುಪ್ತ ದೇವತೆಯಾಗಿ ಅವನು ಕುಳಿತಿರುತ್ತಾನೆ ಮತ್ತು ಚಲನೆಯನ್ನೂ ಕಾರ್ಯವನ್ನೂ ಪ್ರಚೋದಿಸುತ್ತಾನೆ. ಈ ದಿವ್ಯ ಪ್ರಜ್ಞಾತ ಪ್ರಣೋದನು ಉಳಿದೆಲ್ಲಾ ದೇವತೆಗಳನ್ನೂ ಒಳಗೊಂಡಿರುತ್ತಾನೆ-ಚಕ್ರದ ಅಕ್ಷವು ಹಳಿಗಳನ್ನೊಳಗೊಂಡಂತೆ. ಕಾರ್ಯದ ಸರ್ವಪ್ರಭಾವವೂ ಅಸ್ತಿತ್ವದ ಬಲವೂ ರೂಪ ಸೌಂದರ್ಯವೂ ಬೆಳಕು-ಜ್ಞಾನಗಳ ರಾಜತೇಜವೂ ವೈಭವ- ಮಹತ್ತೆಗಳೂ ಅಗ್ನಿಯ ಅವತಾರಗಳು. ಜಗತ್ತಿನ ವಕ್ರತೆಗಳಿಂದ ಅವನು ಪೂರ್ಣವಾಗಿ ಮುಕ್ತನಾದ ಮೇಲೆ ಈ ಜ್ವಾಲಾ ಪ್ರಣೋದ ದೇವತೆ, ಪರಮ ಸತ್ಯದೆಡೆಗೊಯ್ಯುವ ಮಿತ್ರನಾಗುತ್ತಾನೆ. - ಪ್ರೇಮ-ಸಾಮಶ್ರುತ್ಯಗಳೆಂಬ ಸೌರ ದೇವತಾತತ್ವವಾಗುತ್ತಾನೆ.

ಆದರೆ ವೈದಿಕ ವಿಶ್ವದಲ್ಲಿ ಅಗ್ನಿಯು ದಿವ್ಯ ಪ್ರಚೋದದ, ದಿವ್ಯ ಸೈನ್ಯದ ಮುಂದಾಳಾಗಿ ಬರುತ್ತಾನೆ ; ಉರಿವ ಉಷ್ಣತೆ ಮತ್ತು ಬೆಳಕು ಎನ್ನಿಸಿ ಅವನು ಆಕೃತಿಗಳನ್ನು ನಿರ್ಮಿಸುತ್ತಾನೆ, ಎದುರುಜೀಳುತ್ತಾನೆ, ಒಳಹೋಗುತ್ತಾನೆ, ಆವರಿಸುತ್ತಾನೆ, ನುಂಗುತ್ತಾನೆ, ಪುನಾರಚಿಸುತ್ತಾನೆ - ಎಲ್ಲ ಭೌತಿಕ ವಸ್ತುಗಳನ್ನೂ! ಅವನೆಂದೂ ಎತ್ತೆತ್ತಲಿಂದಲೋ ಅಕಸ್ಮಾತ್ತಾಗಿ ಬಿದ್ದ ಬೆಂಕಿಯಲ್ಲ. ಅಗ್ನಿಯು ಪ್ರಚೋದ ಜ್ವಾಲೆ, ದಿವ್ಯ ಜ್ಞಾನದ ಬೆಳಕಿನ ಮೂಲ ಪ್ರವೃತ್ತಿಯು. ಅವನು ದ್ರಷ್ಟಾರನ ಸಂಕಲ್ಪ, ದ್ರಷ್ಟೃಸ್ವರೂಪದ ಸಂಕಲ್ಪ. ಆ ಸಂಕಲ್ಪವು ವಿಶ್ವವ್ಯಾಪಕವೂ ತನ್ನ ಕಾರ್ಯಗಳಲ್ಲಿ ಅಸ್ಖಲಿತವೂ ಆಗಿರುತ್ತದೆ. ತನ್ನ ಆವೇಶ-ಶಕ್ತಿಗಳಿಂದ ಅವನು ಏನು ಮಾಡಿದರೂ ಅದೆಲ್ಲಾ ಅವನಲ್ಲಡಗಿರುವ ಮಹಾಮೌನ ಶಕ್ತಿಯ ಬಲದಿಂದಲೇ-ಅಚಲ ಬ್ರಹ್ಮಸತ್ಯದ ಸಾಮರ್ಥ್ಯದಿಂದಲೇ. ಅವನು ಪರಮ ಸತ್ಯಪ್ರಜ್ಞೆಯುಳ್ಳ ಆತ್ಮನು; ಅವನೊಬ್ಬ ದ್ರಷ್ಟಾರ, ಪುರೋಹಿತ, ಕೆಲಸಗಾರ - ಮಾನವನಲ್ಲಿಯ ಅಮರ್ತ್ಯ ಕೆಲಸಗಾರ. ಅವನು ಕೆಲಸ ಮಾಡಲು ಹಿಡಿದ ಎಲ್ಲವನ್ನೂ ಶುದ್ಧೀಕರಿಸುವುದೇ ಅವನ ಉದ್ದೇಶವಾಗಿದೆ; ಅವನ್ನು - ಅವುಗಳ ಆತ್ಮವನ್ನು - ನಿಸರ್ಗದೊಡನೆ ಹೋರಾಡುತ್ತಿರುವಾಗ ಕತ್ತಲಿಂದ ಬೆಳಕಿಗೆ, ಕಷ್ಟ ಕಾರ್ಪಣ್ಯಗಳಿಂದ ಪ್ರೀತಿ - ಸಂತೋಷಗಳಿಗೆ, ಉಷ್ಣತೆ-ಕಷ್ಟ ಕರ್ಮಗಳಿಂದ ಶಾಂತಿ - ಆನಂದಗಳಿಗೆ ಮೇಲೆತ್ತಿಕೊಂಡೊಯ್ಯುವುದೇ ಅವನ ಸತತೋದ್ಯಮವು. ಅಂದರೆ ಅವನೇ ಬೃಹತ್‌ಸಂಕಲ್ಪ - ದೇವನ ಜ್ಞಾನ ಪ್ರಚೋದ. ಅವನೇ ಭೌತದ್ರವ್ಯ ಮತ್ತು ಅದರ ಆಕಾರಗಳೊಳಗಿರುವ ಗುಪ್ತ ನಿವಾಸಿಯು ; ದೃಶ್ಯನೂ, ಪ್ರಿಯತಮನೂ ಆದ ನರಾತಿಥಿ ಅವನು. ಜಗತ್ತಿನ ವಸ್ತುಗಳ ತೋರಿಕೆಯ (ಆಭಾಸಿಕ) ವಿಕೃತಚೇಷ್ಟೆ ಮತ್ತು ಗಲಿಬಿಲಿಗಳಲ್ಲಿ ಅವುಗಳಲ್ಲಡಗಿರುವ ಪರಸತ್ಯದ ನಿಯಮವನ್ನು (ವಿಧಿಯನ್ನು) ಕಾಯುವವನು ಅಗ್ನಿಯು. ಉಳಿದ ದೇವತೆಗಳು ಉಷೆಯೊಡನೆ (ನಿದ್ರೆಯಿಂದ) ಏಳುವವರು, ಆದರೆ ಅಗ್ನಿಯು ರಾತ್ರಿಯಲ್ಲೂ ಎಚ್ಚತ್ತಿರುತ್ತಾನೆ. ಚಂದ್ರ ತಾರೆಗಳಿಲ್ಲದ ಕಗ್ಗತ್ತಲಿನಲ್ಲೂ ಅವನು ತನ್ನ ದಿವ್ಯದೃಷ್ಟಿಯನ್ನು (ದಿವ್ಯ ದರ್ಶನವನ್ನು) ಇಟ್ಟುಕೊಂಡಿರುತ್ತಾನೆ. ಅಜ್ಞಾನ ಪ್ರಜ್ಞೆಯ ಹಾಗೂ ಅರ್ಧಜ್ಞಾನಪ್ರಜ್ಞೆಯ ವಸ್ತುಗಳಲ್ಲಿಯ ಸಾಂದ್ರತಮ ಅಸ್ಪಷ್ಟತೆಯಲ್ಲೂ ಅಗ್ನಿ ಸ್ವರೂಪದ ದಿವ್ಯ ಸಂಕಲ್ಪದ ಮತ್ತು ದಿವ್ಯ ಜ್ಞಾನದ ಜ್ವಾಲೆಯು ಕಂಡುಬರುತ್ತದೆ. ಅಸ್ಖಲಿತ ಕಾರ್ಯಕರ್ತನು ಅಲ್ಲಿದ್ದಾನೆ - ಎಲ್ಲಿ ಮಾರ್ಗದರ್ಶಕ ಮನದ ಪ್ರಜ್ಞಾತ ಬೆಳಕು ಇಲ್ಲವೋ ಅಲ್ಲಿ ಕೂಡಾ ಅವನು ಇದ್ದೇ ಇರುತ್ತಾನೆ.

ಅಗ್ನಿಯಿಲ್ಲದೆ ಯಾವ ಯಜ್ಞವನ್ನು ಮಾಡಲೂ ಸಾಧ್ಯವಿಲ್ಲ. ಏಕಕಾಲದಲ್ಲಿ ಆತನು ವೇದಿಕೆಯ ಮೇಲಿನ ಜ್ವಾಲೆ ಮತ್ತು ಹವಿಸ್ಸನ್ನು ಆಹುತಿ ಹಾಕುವ ಅಧ್ವರ್ಯು. ತನ್ನ ಇರುಳಿನಿಂದ ಎಚ್ಚತ್ತ ಮನುಷ್ಯನು ತನ್ನ ಬಯಕೆಯೂ ಗುರಿಯೂ ಆದ ದೂರದ ಅಮರ್ತ್ಯತೆಗೆ ಹೋಗಲೆಂದು ತನ್ನ ಒಳ-ಹೊರಗಣ ಕಾರ್ಯಗಳೆಲ್ಲವನ್ನೂ ಸತ್ಯತರ ಹಾಗೂ ಉಚ್ಚತರ ಸತ್ತೆಯುಳ್ಳ ದೇವತೆಗಳಿಗೆ ಅರ್ಪಿಸಲು ಸಂಕಲ್ಪಿಸುತ್ತಾನೆ. ಅವನು ಹೊತ್ತಿಸಬೇಕಾದದ್ದು ಊರ್ಧ್ವಗಾಮಿತ್ವದ ಆಕಾಂಕ್ಷೆಯ ಪ್ರಚೋದವನ್ನು , ಪ್ರಸಂಕಲ್ಪವನ್ನೂ ! ಈ ಬೆಂಕಿಗೆ ಆ ಯಜ್ಞವನ್ನು ತೆಗೆದೆಸೆಯಬೇಕು. ಏಕೆಂದರೆ, ಇದೇ ದೇವತೆಗಳಿಗೆ ಆಹುತಿಯಾಗಿ ಆ ಆಹುತಿಗೆ ಬದಲು ಆಧ್ಯಾತ್ಮಿಕ ಐಶ್ವರ್ಯವಾದ ದಿವ್ಯಜಲಗಳನ್ನು, ದಿವ್ಯಜ್ಯೋತಿಯನ್ನು, ದಿವ್ಯ ಸಾಮರ್ಥ್ಯವನ್ನು, ಸ್ವರ್ಗೀಯ ಮಳೆಯನ್ನು, ತಿರುಗಿ ಯಾಜಕನಿಗೆ ತಂದುಕೊಡುವಂಥದು. ಇದೇ ದೇವತೆಗಳನ್ನು ಕರೆದು ಯಜ್ಞಶಾಲೆಗೊಯ್ಯುವಂಥ ಯಜ್ಞವು. ತನ್ನ ಆಧ್ಯಾತ್ಮಿಕ ಪ್ರತಿನಿಧಿಯೆಂದು, ತನಗಿಂತ ಅಸ್ಖಲಿತಶೀಲನೆಂದು, ತಿಳಿದು, ಮಾನವನು ಅಗ್ನಿಯನ್ನು ತನ್ನ ಮುಂದೆ ಪುರೋಹಿತನನ್ನಾಗಿ ಇಟ್ಟುಕೊಳ್ಳುತ್ತಾನೆ. ಅಗ್ನಿಯಾದರೋ ದಿವ್ಯ ಸಂಕಲ್ಪ, ತನಗಿಂತ ಹೆಚ್ಚಿನ, ಮೇಲಿನ, ಅಪ್ರಮಾದಶೀಲನೆಂದೂ ತನಗಾಗಿ ಅವನು ಯಜ್ಞಕರ್ಮ

ಮಾಡುತ್ತಾನೆಂದೂ ಹವಿರಾಹುತಿಗಳನ್ನು ಪವಿತ್ರೀಕರಿಸುವನೆಂದೂ ತಾನು ದಿವ್ಯ ಕರ್ಮಕ್ಕೆ ಕರೆದ ದೇವತೆಗಳಿಗೆ ಅವುಗಳನ್ನು ತನ್ನ ಬಗೆಗಾಗಿ ಸಮರ್ಪಿಸುತ್ತಾನೆಂದೂ ತಿಳಿದು ಮಾನವನು, ಅಗ್ನಿಗೆ ಪೌರೋಹಿತ್ಯವನ್ನು ವಹಿಸಿಕೊಡುತ್ತಾನೆ. ಅಗ್ನಿಯು ಯಜ್ಞದ ನ್ಯಾಯವಾದ ಕ್ರಮವನ್ನೂ (ವ್ಯವಸ್ಥೆಯನ್ನೂ) ಋತುಮಾನವನ್ನೂ ಯಜ್ಞಪ್ರಗತಿಯನ್ನು ಮಾಡುತ್ತಾನೆಂದೂ ಯಾಜ್ಞಿಕ ವಿಕಾಸದ ಯಾತ್ರೆಯನ್ನು ಸರಿಯಾಗಿ ನಿರ್ವಹಿಸುವನೆಂದೂ ಮಾನವನ ತಿಳುವಳಿಕೆಯು. ಅಗ್ನಿಯ ಸಾಂಕೇತಿಕ ಪೌರೋಹಿತ್ಯದ ಈ ಮತ್ತು ಇತರ ವಿವಿಧ ಕರ್ತವ್ಯಗಳನ್ನು (ಕಾರ್ಯಕ್ರಮಗಳನ್ನು) ಹೇಗೆ ಬಾಹ್ಯಯಜ್ಞದಲ್ಲಿ ವಿವಿಧ ಪುರೋಹಿತರು ಪಾಲಿಸುವರೋ ಹಾಗೇ ಅವುಗಳನ್ನೆಲ್ಲಾ ಅಗ್ನಿಯೊಬ್ಬನೇ ಪಾಲಿಸುತ್ತಾನೆ.

ಅಗ್ನಿಯು ಯಜ್ಞದ ನೇತಾರನು. ಆ ಮಹಾಯಾನದಲ್ಲಿ ಅವನು ತಾಮಸ ಶಕ್ತಿಗಳ ದಾಳಿಯಿಂದ ಯಜ್ಞವನ್ನು ರಕ್ಷಿಸುತ್ತಾನೆ. ಈ ದಿವ್ಯ ಪ್ರಭಾವದ ಜ್ಞಾನವನ್ನೂ, ಉದ್ದೇಶವನ್ನೂ ಸಂಪೂರ್ಣವಾಗಿ ನಂಬಬಹುದು. ಅಗ್ನಿಯು ಮಿತ್ರನು, ಜೀವಾತ್ಮವತ್ಸಲನು ಮತ್ತು ದುರ್ದೇವತೆಗಳಿಗೆ ಜೀವಾತ್ಮನನ್ನು ವಶಪಡಿಸುವ ದ್ರೋಹವನ್ನು ಮಾಡನು. ಮಾನವ್ಯ ಅಜ್ಞಾನದಿಂದ ಆವೃತನಾಗಿ ರಾತ್ರಿಯಲ್ಲಿ (ಸತ್ಯದಿಂದ) ಬಹುದೂರದಲ್ಲಿ ಕುಳಿತಿರುವ ಮನುಷ್ಯನಿಗೂ ಈ ಜ್ವಾಲೆಯೊಂದು ಬೆಳಕು ; ಇದನ್ನು ಪೂರ್ತಿಯಾಗಿ ಹೊತ್ತಿಸಿದರೆ, ಇದು ಅನುಪಾತಾನುಸಾರವಾಗಿ ಮೇಲೆ ಮೇಲೆ ಹೋಗಿ ಪರಮಸತ್ಯದ ವಿಶಾಲಜ್ಯೋತಿಯಾಗಿ ವಿಸ್ತೃತವಾಗುವುದು. ಬೆಳಕಿನ ಸ್ವರ್ಗ ಎಂಬುದು ಜೀವಾತ್ಮನ ಆತ್ಯಂತಿಕ ಉನ್ನತ ಮನೆ. ಅದು ಉಜ್ವಲೋಕ, ನಿತ್ಯಸತ್ಯದಲ್ಲಿ ಸುಖವಾಗಿರುವ ಸ್ಥಳ ; ಅದು ಅನಂತ ಆನಂದದ ನೆಲೆಗಟ್ಟು; ಹೊಳೆವ ಅಮರರು ತಮ್ಮ ಸ್ವರ್ಗೀಯ ಅಧಿವೇಶನಗಳಲ್ಲಿ ಕುಳಿತು ಅಸೀಮ ಬ್ರಹ್ಮಾನಂದವನ್ನು ಕುಡಿಯುವರು. ಜ್ವಾಲಾ ಜ್ಯೋತಿಯನ್ನು ಹೊತ್ತಿಸಿದಾಗ ಅದು ಮೇಲಿರುವ ದಿವ್ಯ ಉಷೆ ಯತ್ತಸಾಗಿ ಅವಳನ್ನು ಸಂದರ್ಶಿಸುತ್ತದೆ - ಅದು ಹೋಗುವಾಗ ನಾಡೀ ಮಧ್ಯಲೋಕ ಹಾಗೂ ಮಾನಸಾಕಾಶಗಳ ಮೂಲಕ ಸಾಗಿ ಉಕ್ತ ಜೀವಾತ್ಮನನ್ನು ಜ್ಯೋತಿಃಸ್ವರ್ಗಕ್ಕೆ ತಲುಪಿಸುತ್ತದೆ.

ಇಲ್ಲಿ ಬೆಳಕೇನೋ ಗುಪ್ತವಾಗಿರುವುದು ನಿಜ. ಇತರ ದೇವತೆಗಳಂತೆ ಅಗ್ನಿಯೂ ವಿಶ್ವದ ಮಾತಾಪಿತೃಗಳ ಮಗುವಾಗಿ ಮೂರ್ತೀಕರಿಸಲ್ಪಟ್ಟಿದ್ದಾನೆ-ಆ ಮಾತಾಪಿತೃಗಳೆಂದರೆ ಸ್ವರ್ಗ ಮತ್ತು ಭೂಮಿ - ಭೂಮಿಯು ತಾಯಿ, ಆಕಾಶವು ತಂದೆ. ಸ್ವರ್ಗ-ಭೂಲೋಕಗಳಂತೆ ಮನಸ್ಸು ಮತ್ತು ದೇಹ, ಆತ್ಮ ಮತ್ತು ಭೌತಿಕ ನಿಸರ್ಗ ಎಂಬ ಜನಕರು. ಈ ಭೂಮಿಯು ತನ್ನ ಭೌತಿಕತೆಯಲ್ಲಿಯೇ ಅಗ್ನಿಯನ್ನು ಗುಪ್ತವಾಗಿ ಇಟ್ಟುಕೊಂಡಿದೆ ; ಅದು ಸ್ವರ್ಗದ (ತಂದೆಯ) ಪ್ರಜ್ಞಾತ ಕೆಲಸ ಮಾಡಲು ಅವನನ್ನು ಬಿಡುವುದಿಲ್ಲ. ತನ್ನೆಲ್ಲಾ ಬೆಳೆಗಳಲ್ಲೂ ಸಸ್ಯ, ಭೇಷಜ ಸಸ್ಯ, ವಿಶಿಷ್ಟ ವೃಕ್ಷಗಳಲ್ಲೂ ಅಗ್ನಿಯನ್ನು ಅಡಗಿಸಿ, ತನ್ನ ಉಷ್ಣತೆಯನ್ನು ತುಂಬಿಸಿ, ಆತ್ಮಾಹ್ಲಾದಕರ ವಸ್ತುಗಳನ್ನು ಜೀವಾತ್ಮಕ್ಕೆ ಕೊಡದಿದ್ದಾಳೆ. ಆದರೆ ಕೊನೆಯಲ್ಲಿ ಭೂಮಿತಾಯಿಯು ಅಗ್ನಿಯನ್ನು ಹೊರಬಿಡುತ್ತಾಳೆ ; ಅವಳು ಕೆಳಮಟ್ಟದ ಅಗ್ನ್ಯಾಕರ್ಷಕ ದೇವತೆ ; ದಿವ್ಯ ಮಾನಸ ಸತ್ತಾ ಸ್ವರೂಪದ ಸ್ವರ್ಗವು ಮೇಲ್ಮಟ್ಟದ ಅಗ್ನ್ಯಾಕರ್ಷಕ ದೇವತೆ. ಮೇಲಿನವನು ಕೆಳಗಿನವಳ ಮೇಲೆ ಒತ್ತಡ ತಂದಾಗ ಅಗ್ನಿಯು ಹುಟ್ಟುವನು. ಆದರೆ ಅದು ಒತ್ತಡದಿಂದ, ಒಂದು ತರಹದ ಕಡೆತದಿಂದ ಅವನು ಹುಟ್ಟುವುದು. ಆದುದರಿಂದಲೇ ಅವನನ್ನು ಪ್ರಣೋದಜಾತನೆನ್ನಲಾಗುತ್ತದೆ.

ಅಗ್ನಿ ಮೇಲೆದ್ದಾಗಲೂ ಹೊರಗೆ ಅವನು ತನ್ನ ಕಾರ್ಯಗಳಲ್ಲಿ ಅಸ್ಪಷ್ಟನು. ಅವನು ಮೊದಲು ಶುದ್ಧ ಸಂಕಲ್ಪನಾಗನು-ಅವನು ನಿಜವಾಗಿ ಯಾವಾಗಲೂ ಶುದ್ಧನಾಗಿದ್ದರೂ. ಆದರೆ ಅವನು ಮೊದಲಾಗುವುದು ಒಂದು ಜೈವಿಕ ಸಂಕಲ್ಪನಾಗಿ ; ನಮ್ಮಲ್ಲಿರುವ ಬದುಕುವ ಆಸೆಯಾಗಿ - ಧೂಮಾಚ್ಛಾದಿತ ಜ್ವಾಲೆಯಾಗಿ, ನಮ್ಮ ವಕ್ರತೆಯ ಮಗನಾಗಿ: ಆಗ ಅವನು ತನ್ನ ಹುಲ್ಲುಗಾವಲಲ್ಲಿ ಮೇಯುವ ಪ್ರಾಣಿ - ಭೂಮಿಜಗಳನ್ನೆಲ್ಲಾ ನುಂಗುವ ಆಸೆಯ ಒಂದು ಪ್ರಣೋದನಾಗಿ ಸಂಭವಿಸುತ್ತಾನೆ. ಅವನು ಹರಿಯುತ್ತಾನೆ, ಮುರಿಯುತ್ತಾನೆ, ಎಲ್ಲವನ್ನು ಮುಕ್ಕುತ್ತಾನೆ ಮತ್ತು ತಾನು ಮುಕ್ಕಿ ಬರಿಸಿದ ಕಣ್ಣೀರು ಹಾಗೂ ತನ್ನ ದಾಳಿಯಿಂದ ಹಾಳಾದ ವಸ್ತುಗಳ ಮೇಲೆ ಕರಿಯ, ಕರಕಲಾದ ಗೆರೆಯನ್ನು ದಾರಿಯುದ್ದಕ್ಕೂ ಬಿಟ್ಟಿರುತ್ತಾನೆ - ಭೂಮಿಯ ಹರ್ಷ-ವೈಭವಗಳನ್ನೆಲ್ಲಾ ಹೀಗೆ ಮಾರ್ಪಡಿಸುತ್ತಾನೆ- ಕಾಳ್ಗಿಚ್ಚಾಗಿ. ಆದರೆ ಈಯೆಲ್ಲದರಲ್ಲೂ ಒಂದು ಶುದ್ಧೀಕರಣ ಕಾರ್ಯವಿದೆ. ಯಾಜ್ಞಿಕನಲ್ಲಿ ಈ ಶುದ್ಧೀಕರಣದ ಪ್ರಜ್ಞೆ ಮೂಡುತ್ತದೆ - ಅವನಿಗೆ ತಿಳಿಯುತ್ತದೆ. ಅಗ್ನಿಯ ಹಸಿವು-ಆಸೆಗಳೇ ಅನಂತವ್ಯಾಪ್ತಿಯುಳ್ಳವುಗಳಾಗಿರುವುದರಿಂದ ಆ ಮೂಲಕ ಅವನು ಒಂದು ಉನ್ನತತರ ವೈಶ್ವತ್ರಿಕ ವ್ಯವಸ್ಥೆಗೆ ಸಿದ್ಧತೆ ನಡೆಸುತ್ತಾನೆ. ಅವನ ಆವೇಶ ದೂಮವು ಜಿತವಾಗಿ ಈ ಜೈವಿಕ ಸಂಕಲ್ಪವು- ಈ ಜೀವಿಸುವ ಜ್ವಾಲೋಪಮಾಕಾಂಕ್ಷೆಯು ಕುದುರೆಯಾಗಿ ನಮ್ಮನ್ನು ಉನ್ನತತಮ ಮಟ್ಟಗಳಿಗೆ ಒಯ್ಯುತ್ತದೆ - ಇದೇ ಉಷಸ್ಸುಗಳೆದುರು ನಾಗಾಲೋಟದಿಂದ ಓಡುವ ಬೆಳ್ಗುದುರೆಯು.

ಧೂಮಾಚ್ಛನ್ನ ಕಾರ್ಯವು ಮುಗಿತಾಯವಾದ ಕೂಡಲೇ ಅಗ್ನಿಯು ಗಗನಗಳಲ್ಲಿ ಎತ್ತರವಾಗಿ ಉರಿಯುತ್ತಾನೆ, ಶುದ್ಧ ಮನದ ಆಕಾಶವನ್ನಳೆಯುತ್ತಾನೆ, ಮತ್ತು ಸ್ವರ್ಗದ ಬೆನ್ನನ್ನು ಏರುತ್ತಾನೆ. ಆ ವಿರಳ ಪ್ರಜ್ಞಾಸ್ತರದಲ್ಲಿ ಅವನ ಉಜ್ವಲ ಪ್ರಣೋದವನ್ನು ತೃತ ಆಪ್ತ್ಯನು ತೆಗೆದುಕೊಂಡು ಎಲ್ಲ ದೌಷ್ಟ್ಯವನ್ನೂ ಅಜ್ಞಾನವನ್ನೂ ನಾಶಮಾಡುವ ಹರಿತವಾದ ಒಂದು ಆಯುಧವನ್ನಾಗಿ ಮಾಡುತ್ತಾನೆ. ಈ ದ್ರಷ್ಟಸಂಕಲ್ಪವು ಜ್ಞಾನೋನ್ಮೀಲನದ ಕಾವಲುಗಾರನಾಗುತ್ತದೆ - ಜೀವನದ ಹುಲ್ಲುಗಾವಲುಗಳಲ್ಲಿ ಮೇಯುತ್ತಿರುವ ಸೌರ ಗೋವ್ರಜಗಳು ವಿಭಜನ (ಭೇದ), ಅಂಧಕಾರ (ಅಜ್ಞಾನ)ಗಳ ಪುತ್ರರಿಂದ ಜ್ಞಾನಿಸಂಕಲ್ಪ ಸ್ವರೂಪದ ವೀರನ ಮೂಲಕ ರಕ್ಷಿಸಲ್ಪಡುತ್ತವೆ. ಆಗ ಆ ಅಗ್ನಿಯು ಅಮರ್ತ್ಯತೆಯನ್ನು ಪಡೆದು ಅದರ ಸತ್ಯ ನಿಯಮವನ್ನು ಸಂತೋಷ ವಿಧಿಯನ್ನು ಅಪಾಯಕ್ಕೊಳಗಾಗದ ಮಾನವ ಪ್ರಾಣಿಯಲ್ಲಿ ಇರುವಂತೆ ಮಾಡುತ್ತಾನೆ. ಕೊನೆಯಲ್ಲಿ ನಾವು ಎಲ್ಲ ವಕ್ರತೆಯಿಂದಲೂ ಪಾರಾಗಿ, ಸುಳ್ಳು - ತಪ್ಪುಗಳಿಂದ ಮುಕ್ತರಾಗಿ, ಕೆಳಮಟ್ಟದ, ಒಡಕಾದ, ಅಡ್ಡ ತಿರುಗುವ, ದಾರಿಯಿಂದ (ನೆಲದಿಂದ) ದೂರರಾಗಿ, ನೇರ ದಾರಿಯನ್ನು ಹಿಡಿದು ಉನ್ನತ ತೆರೆಮರೆಯಿಲ್ಲದ, ಪ್ರಜ್ಞಾಸ್ತರಗಳನ್ನು ಏರುತ್ತೇವೆ. ದಿವ್ಯ ಸಂಕಲ್ಪವೂ ದಿವ್ಯ ಜ್ಞಾನವೂ ಒಂದಾಗುತ್ತವೆ ; ಪೂರ್ಣೀಕೃತ ಜೀವಾತ್ಮದ ಪ್ರತಿಯೊಂದು ಒಳಒತ್ತಡವೂ ಸ್ವಾತ್ಮಸತ್ತೆಯ ಮುಖ್ಯ ಸತ್ಯದ ಪ್ರಜ್ಞೆಯನ್ನು ಪಡೆಯುತ್ತದೆ-ಪ್ರತಿಯೊಂದು ಕಾರ್ಯವೂ ಆ ಸ್ವಾತ್ಮ್ಯ ಪ್ರಜ್ಞೆಯನ್ನು ಪ್ರಜ್ಞಾತವಾಗಿ, ಸಂತೋಷದಿಂದ ಜಯಪ್ರದವಾಗಿ ತುಂಬಿಸಿಕೊಡುತ್ತದೆ. ಅಂಥ ದೇವತಾತತ್ವಕ್ಕೆ ವೈದಿಕಾಗ್ನಿಯು ಯಾಜ್ಞಿಕ ಆರ್ಯನನ್ನು ಏರಿಸುತ್ತದೆ. ಆ ದಿವ್ಯಾಮರ್ತ್ಯ ತತ್ವವು ಮನುಜನಲ್ಲಿ ಅವನ ಯಜ್ಞದಿಂದ ಗೆಲುವನ್ನು ಪಡೆಯುತ್ತದೆ. ಚಿಂತಕನೂ, ಯೋಧನೂ, ದುಡಿಮೆಗಾರನೂ ಆದ ನರನು ದ್ರಷ್ಟಾರನಾಗುತ್ತಾನೆ, ಸ್ವನಿಯಾಮಕನಾಗುತ್ತಾನೆ ಮತ್ತು ನಿಸರ್ಗದ ಮೇಲಿನ ಪ್ರಭುವಾಗುತ್ತಾನೆ.

ಸೊಗಸಾದ, ಶ್ರೀಮಂತವಾದ, ಪ್ರತಿಮಾಲಂಕಾರಗಳ ಮಾಲೆಯ ಈ ದಿವ್ಯ ಜ್ವಾಲೆಯನ್ನು ವೇದವು ವರ್ಣಿಸುತ್ತದೆ. ಅಗ್ನಿಯು ಸಂತೋಷೋದ್ರೇಕದ ಯಜ್ಞ ಪುರೋಹಿತ ; ಅವನು ಮಹಾ (ಸತ್ಯ) ದೇವನ ಸಂಕಲ್ಪ, ಯುವಕ. ಋಷಿ, ನಿರ್ನಿದ್ರ ರಾಜದೂತ, ಸದಾ ಜಾಗರಿತ ಗೃಹಜ್ವಾಲೆ, ಬಾಗಿಲಿರುವ ನಮ್ಮ ಮನೆಯ ಯಜಮಾನ, ಪ್ರೀತಿಯ ಅತಿಥಿ, ಪ್ರಾಣಿಗಳಲ್ಲಿರುವ ಒಡೆಯ, ಜ್ವಲದಲಕ ದ್ರಷ್ಟಾರ, ದಿವ್ಯಾಪತ್ಯ, ಶುದ್ಧನೂ ಬ್ರಹ್ಮಚಾರಿ ವ್ರತಸ್ಥನೂ ಆದ ದೇವತೆ, ಅಜಯ್ಯ ಯೋಧ, ಮಾನವ ಜನಗಳ ಮುಂದೆ ದಾರಿಯಲ್ಲಿ ಸಾಗುವ ನಾಯಕ, ಮರ್ತ್ಯರೊಳಮರ್ತ್ಯ, ಮಾನವನಲ್ಲಿ ನೆಲೆನಿಂತ ದೇವನಿಯುಕ್ತ ಕಾರ್ಯಕರ್ತ, ಜ್ಞಾನದಲ್ಲಿ ಅವಿಚ್ಛಿತ, ಸತ್ತೆಯಲ್ಲಿ ಅನಂತ, ಪರಮಸತ್ಯದ ವಿಶಾಲೋಜ್ವಲ ಸೂರ್ಯ, ಯಜ್ಞದ ರಕ್ಷಕ ಹಾಗೂ ಅದರ ಸೋಪಾನಗಳ ಸೂಕ್ಷ್ಮಾವಲೋಕನಕಾರ, ದಿವ್ಯದರ್ಶನ, ದಿವ್ಯಜ್ಯೋತಿ, ದಿವ್ಯ ಪ್ರತ್ಯಕ್ಷ ಮತ್ತು ಸುದೃಢ ತಳಪಾಯ, ಎನ್ನಿಸಿರುತ್ತಾನೆ. ವೇದದ ಉದ್ದಕ್ಕೂ ಈ ಅಗ್ನಿಸೂಕ್ತಗಳಲ್ಲಿಯೇ ಈ ಬಲಿಷ್ಠೋಜ್ವಲ ದೇವತೆಯ ಸೂಕ್ತಗಳಲ್ಲೇ ಕಾವ್ಯಸಹಜ ವರ್ಣನೆಯ ಅತಿ ಸೊಗಸನ್ನು, ಗಭೀರ ಮಾನಸಶಾಸ್ತ್ರೀಯ ಸೂಚನೆಗಳನ್ನು ಮತ್ತು ಯೋಗ ಸಮಾಧ್ಯುನ್ಮಾದದ ಉದಾತ್ತತೆಯನ್ನು ನಾವು ಕಾಣುತ್ತೇವೆ. ವೇದ ಕವಿಗಳ ಪ್ರಾತಿಭ ಕಲ್ಪನಾ ಶಕ್ತಿಗೆ ಈ ಅಗ್ನಿಯ ಜ್ವಾಲೆಯೇ, ಕೂಗೇ, ಬೆಳಕೇ, ಹುಚ್ಚು ಹಿಡಿಸಿತೆಂದು ಭಾಸವಾಗುತ್ತದೆ.

ಕವೀಯ ಪ್ರತಿಮಾಲಂಕಾರಗಳ ಈ ರಾಶಿಗಳ ನಡುವೆ ಕೆಲವು ಸಂಕೇತ ಲಕ್ಷಣಗಳನ್ನುಳ್ಳದ್ದಾಗಿವೆ ; ಅವು ಉಕ್ತ ದಿವ್ಯ ಜ್ವಾಲೆಗಳ ಬಹುಜನ್ಮಕತೆಯನ್ನು ಸೂಚಿಸುತ್ತವೆ; ಅವುಗಳನ್ನು ಅಸಾಧಾರಣ ವೈವಿಧ್ಯದಿಂದ ಪುನರುಲ್ಲೇಖಿಸಲಾಗಿದೆ. ಕೆಲವು ಸಲ ಅಗ್ನಿಯು ಸ್ವರ್ಗಪುತ್ರ, ಸ್ವರ್ಗ=ತಂದೆ=ದಿವ್ಯಮನ ಯಾ ದಿವ್ಯಾತ್ಮ. ಭೂಪುತ್ರನೆಂದೂ ಕೆಲವೆಡೆ ಹೇಳಿದೆ. ದೇಹವು ಭೌತಿಕ ಪ್ರಕೃತಿ ; ಕೆಲವೊಮ್ಮೆ ಆತನು ಸ್ವರ್ಗ-ಭೂಮಿಗಳೆಂಬ ಇಬ್ಬರು ತಾಯಂದಿರಿಂದ (ಮುಚ್ಚಳಗಳಿಂದ, ಪೆಟ್ಟಿಗೆಯಿಂದ) ಹುಟ್ಟಿದವನೆಂದು ಹೇಳಿದಾಗ ರೂಪಕ ವಿನ್ಯಾಸವು ಸ್ಪಷ್ಟತರವಾಗಿ ಮಾನಸಿಕ, ಆಂತರಾತ್ಮಿಕ ಮತ್ತು ಶಾರೀರಿಕ ಪ್ರಜ್ಞಾಸಂಕೇತವಾಗುತ್ತಾನೆ. ಅವನನ್ನು ಸಪ್ತ ಮಾತೃಜಾತನೆಂದೂ ಸೂಕ್ತಿಸಲಾಗಿದೆ. ಈ ಸಪ್ತ ಮಾತೃಗಳು ಯಾರು? ಸಪ್ತಲೋಕಗಳ ನೆಲೆಗಟ್ಟುಗಳು-

೧) ಅನಂತದ ಮೂರು ಆಧ್ಯಾತ್ಮಿಕ ತತ್ವಗಳು

೨) ಸಾಂತದ ಮೂರು ಕಾಲಿಕ ತತ್ವಗಳು

೩) ಅಂತರಿಕ್ಷ.

ಇವು ನಮ್ಮ ಪ್ರಜ್ಞಾತ ಇರವಿನ ಹೂರಣ. ಇವುಗಳ ಅಭಿವ್ಯಂಜನೆಯೇ ಅಗ್ನಿಯ ಪೂರ್ಣವಾದ ಹುಟ್ಟು. ಇತರ ದೇವತೆಗಳಂತೆಯೇ ಈ ಅಗ್ನಿಯೂ ಪರಮಸತ್ಯಜನೆಂದು ಹೇಳಲಾಗಿದೆ. ಪರಮಸತ್ಯವು ಏಕಕಾಲಕ್ಕೆ ಅವನ ಜನ್ಮಸ್ಥಳವೂ ಹೌದು, ವಾಸಸ್ಥಳವೂ ಹೌದು. ಕೆಲವು ವೇಳೆಗಳಲ್ಲಿ ಈಶ್ವರನಿಗಾಗಿ ಏಳು ಜನ ಪ್ರಿಯತಮೆಯರು ಅವನನ್ನು ಹುಟ್ಟಿಸಿದರೆಂದೂ ಹೇಳಲಾಗಿದೆ. ಇಲ್ಲಿ ಸೃಷ್ಟಿಯ ಮೂಲಹೇತುವಾದ ಆ ಇನ್ನೊಂದು ಶುದ್ಧ ಆನಂದ ತತ್ವವೆಂಬ ಮೂಲ ಆಕರಕ್ಕೆ ಸಂಕೇತವು ಹಿನ್ನೆಗೆದಿರುವಂತೆ ತೋರುತ್ತದೆ. ಅವನ ಒಂದು ರೂಪವು ಸೌರಪ್ರಭೆ ಮತ್ತು ಸೌರಜ್ವಾಲಿ ; ಇನ್ನೊಂದು ಸ್ವರ್ಣೀಯ ರೂಪವಿರುವುದು ವೈಶ್ವಮನದಲ್ಲಿ ; ಮೂರನೆಯದು ನದೀವಾಸಿಯಾದ ರೂಪವು. ರಾತ್ರಿ ಉಷಸ್ಸುಗಳು ಅಗ್ನಿಯ ಸೂತಿಕೆಯರು, ಜಿಜ್ಞಂತಿಯರು -ಆ ದಿವ್ಯ ಶಿಶುವಿಗೆ ಒಬ್ಬರಾದ ಮೇಲೊಬ್ಬರಂತೆ ನಮ್ಮ ಸಗ್ಗಗಳಲ್ಲಿ ಕುಳಿತು ಜ್ಞಾನಾಜ್ಞಾನ ದೇವತೆಗಳು ಮೊಲೆಯೂಡಿಸುತ್ತಾರೆ. ಆದರೂ ಅವನನ್ನು ನಿಗೂಢವಾಗಿ ಜೀವನ ದೇವತೆಯಾದ

(ಜೀವಾಧಿಪತಿಯಾದ) ಮಾತರಿಶ್ವನೇ ದೇವತೆಗಳಿಗಾಗಿ ಪಾರ್ಥಿವ ಪದಾರ್ಥಗಳಲ್ಲಿ, ಪಾರ್ಥಿವ ಪ್ರಾಣಿಗಳಲ್ಲಿ ಮಾನವ-ಸಸ್ಯ-ಪ್ರಾಣಿಗಳಲ್ಲಿ - ಮಹಾಬಲಿನಿಯರಾದ ಜಲದೇವತೆಗಳಲ್ಲಿ ಪ್ರತಿಷ್ಠಾಪಿಸಿದವನು. ಈ ಜಲದೇವಿಯರೇ ದ್ಯುಮಲ್ಲೋಕದ ಸಪ್ತಸಿಂಧುಗಳು=ಅವನ್ನು ಕಬಳಿಸಿದ ಹೆಬ್ಬಾವನ್ನು ಇಂದ್ರನೆಂಬ ದಿವ್ಯ ಮಾನಸ ಸ್ವರೂಪನು ಕೊಂದಾಗ ಸಗ್ಗದಿಂದ ಬುವಿಗೆ ಇಳಿದು ಬಂದ ವಾಹಿನಿಯರು. ಸಪ್ತ ಸಿಂಧುಗಳು ಸ್ವರ್ಗೀಯ ವಿಭೂತಿ ಸಮೇತರಾಗಿ ಪ್ರಭಾ ನಿರ್ಭರತೆಯಿಂದ ಇಳಿದು ಬರುತ್ತಿರುತ್ತವೆ. ಅವುಗಳ ಮೂಲ ಪ್ರಕೃತಿಯೇ (ಮೂಲ ಪ್ರವೃತ್ತಿಯೇ) ಪ್ರಸನ್ನತೆ, ಮಾಧುರ್ಯ - ಸಿಹಿಯಾದ ಹಾಲು, ಬೆಣ್ಣೆ ಮತ್ತು ಜೇನುತುಪ್ಪ. ಈ ಸಾಕು ತಾಯಂದಿರಾದ ಯಥೇಚ್ಛ ಹಾಲು ಕೊಡುವ ದನಗಳಿಂದ ಅಗ್ನಿ ಹುಟ್ಟುವುದು ಅವನ ಭೂತಲದ ಜನ್ಮಗಳಲ್ಲೆಲ್ಲಾ ಅತಿ ಹೆಚ್ಚಿನದು. ಜೀವನದ ಸವೇಗ ಹೆಂಗುದುರೆಗಳಾಗಿ ಅವು ಸಾಕಿದ್ದರಿಂದ ಅವನು ಒಮ್ಮಿಂದೊಮ್ಮೆ ತನ್ನ ದಿವ್ಯ ಮಹತ್ತೆಗೇರುತ್ತಾನೆ, ಸರ್ವಪ್ರಜ್ಞಾಸ್ತರಗಳನ್ನೂ ತುಂಬಿಕೊಳ್ಳುತ್ತಾನೆ. ಯಾವುದರಿಂದ? ತನ್ನ ವಿಸ್ತಾರವೂ ಪ್ರಭಾಮಯವೂ ಆದ ಅವಯವಗಳಿಂದ. ಅದರಿಂದ ಅವನು ಆಯಾ ಪ್ರಜ್ಞೆಗೆ ಅಗತ್ಯವಾದ ಲೋಕವನ್ನು (ರಾಜ್ಯವನ್ನು) ರೂಪಿಸಿ, ಮಾನವ ಜೀವಾತ್ಮನಲ್ಲಿ ದಿವ್ಯ ಸತ್ಯದ ಪ್ರತಿಮೆಯಾಗಿ ನೆಲೆ ನಿಲ್ಲುತ್ತಾನೆ.

ಈ ಪ್ರತಿಮೆಗಳ ಬಳಕೆಯ ವೈವಿಧ್ಯ ಹಾಗೂ ನಮ್ಯತೆಗಳು ಕೆಲವೊಮ್ಮೆ ವೇಗಯುಕ್ತ ಉತ್ತರೋತ್ತರಸ್ಥ, ಎನ್ನಿಸುವಂತೆ ಒಂದೇ ಸೂಕ್ತದಲ್ಲಿ ಕಂಡುಬರುತ್ತವೆ. ಇದು ಪ್ರಜ್ಞಾತ ಸಾಂಕೇತಿಕತೆಯ (ಸಂಕೇತಶಾಸ್ತ್ರದ) ಬಳಕೆಯ ಯುಗಕ್ಕೆ ಸೇರಿದ್ದಾಗಿದೆ. ಇದರಲ್ಲಿ ಪ್ರತಿಮೆಯು (ಪ್ರತಿರೂಪವು) ಘನೀಭೂತ ಉಪಮಾನವಾಗಿಲ್ಲ, ಹರಳುಗಳಂತೆ ಸಾಂದ್ರೀಕೃತವಾಗಿಲ್ಲ - ಇದು ಪುರಾಣದ ರೂಪಕಗಳ ಗಟ್ಟಿತನವನ್ನು ಹೊಂದಿರಲಿಲ್ಲ; ಆದರೆ ಯಾವಾಗಲೂ ತನ್ನ ಮೂಲ ಕಲ್ಪನಾಶಕ್ತಿಯ ಪ್ರಪಂಚದಲ್ಲಿ ತನ್ನ ಅರ್ಥವನ್ನು ಉಳಿಸಿಕೊಂಡು, ಇನ್ನೂ ನಮ್ಯವಾಗಿಯೇ ಇದ್ದು ನಮಗೆದುರಾಗುವ ಅಲಂಕಾರ ಮತ್ತು ನಿದರ್ಶಕ ಕಥೆಯಂತಿದೆ.

ಇಂದ್ರನಿಗೂ ಅಶ್ವಿನೀ ದೇವತೆಗಳಿಗೂ ಹೋಲಿಸಿದರೆ, ಅಗ್ನಿಗೆ ಸಂಬಂಧಿಸಿದ ನಿಜವಾದ ಐತಿಹ್ಯ ಕಥೆಗಳು ಬಹಳ ಕಡಿಮೆ. - ಅವಿಸ್ತೃತ ಅಲಂಕಾರೋಕ್ತಿಗಳೇ ಅಗ್ನಿ ಸಂಬಂಧದಲ್ಲಿ ಅಧಿಕವಾಗಿವೆ : ಇಂದ್ರಾಶ್ವಿಗಳಿಗೆ ಹೇರಳ ಪುರಾಣ ಕಥೆಗಳಿವೆ. ಅಗ್ನಿಯು ಇಂದ್ರನ ಐತಿಹ್ಯೋಕ್ತ ಕಾರ್ಯಗಳಲ್ಲಿ ಭಾಗವಹಿಸುತ್ತಾನೆ ; ಇಂದ್ರನ ಅಹಿನಾಶನದಲ್ಲಿ ಗೋವ್ರಜ ಪುನರಾದಾನದಲ್ಲಿ ಮತ್ತು ದಸ್ಯು ಸಂಹಾರದಲ್ಲಿ ಅವನು ಪಾಲುಗಾರನಾಗಿದ್ದಾನೆ. ಅವನ ಸ್ವಂತದ ಚಟುವಟಿಕೆಯು ವಿಶ್ವವ್ಯಾಪಕವಾಗಿದೆ. ಆದರೆ ಅತ್ಯುನ್ನತ ಮಹತ್ವವು ಅವನಿಗಿದ್ದರೂ ಅಥವಾ ಆ ಕಾರಣದಿಂದಲೋ ಏನೋ ಅವನಿಗೆ ಪ್ರತ್ಯೇಕವಾದ ಉದ್ದೇಶವಿಲ್ಲ ಮತ್ತು ಉಳಿದ ದೇವತೆಗಳಿಂದ ಅಗ್ರ ಪೂಜೆಯನ್ನು ಅವನು ಬಯಸುವುದಿಲ್ಲ. ಮಾನವನಿಗಾಗಿ ಕೆಲಸ ಮಾಡುವುದರಲ್ಲೇ ಅವನಿಗೆ ತೃಪ್ತಿಯಿದೆ ; ಜೊತೆಗೆ ಸಹಾಯಕರಾಗಿ ಮಾನವೋದ್ಧಾರಕ ದೇವತೆಗಳಿಗೂ ಅವನು ಕೆಲಸ ಮಾಡಿಕೊಡುತ್ತಾನೆ. ಅವನು ಆರ್ಯರ ಮಹಾಕಾರ್ಯವನ್ನು ಮಾಡುವಾತನು ಮತ್ತು ದ್ಯಾವಾ ಪೃಥಿವಿಗಳ ನಡುವೆ ಶುದ್ಧನೂ ಉದಾತ್ತನೂ ಆದ ಮಧ್ಯಸ್ಥನಾಗಿದ್ದಾನೆ, ಸಂಪರ್ಕ ಸಾಧನನಾಗಿದ್ದಾನೆ. ಆತನು ಅನಾಸಕ್ತನು, ನಿರ್ವಿದ್ರನು, ಅಜಯ್ಯನು, ದಿವ್ಯ ಸಂಕಲ್ಪ ಪ್ರಣೋದನು. ಜಗತ್ತಿನಲ್ಲಿ ಸರ್ವಪದಾರ್ಥಸ್ಥ ವೈಶ್ವಾನರನಾಗಿ (ವಿಶ್ವಾತ್ಮನಾಗಿ) ಮಹಾಶಕ್ತಿಯಾಗಿ ಕೆಲಸ ಮಾಡುತ್ತಿದ್ದಾನೆ ; ಅಗ್ನಿಯು ವೈಶ್ವಾನರ = ಅತಿಮಹತ್ವದ,

ಅತಿ ಸಾಮರ್ಥ್ಯಸಂಪನ್ನ, ಅತ್ಯುಜ್ವಲ ಮತ್ತು ಅತ್ಯಂತ ಅವೈಯಕ್ತಿಕ ದೇವತೆಯಾಗಿದ್ದಾನೆ - ಇನ್ನಾವ ವೈಶ್ವ ದೇವತೆಗಳೂ ಹೀಗಿಲ್ಲ.

ಅಗ್ನಿ ಎಂಬ ಹೆಸರನ್ನು ಇಲ್ಲಿ ಶಕ್ತಿ ಎಂದು ಭಾಷಾಂತರಿಸಲಾಗಿದೆ. ಶಕ್ತಿ = ಸಾಮರ್ಥ್ಯ = ಸಂಕಲ್ಪ = ದೈವ ಸಂಕಲ್ಪ (ಈಶ್ವರೇಚ್ಛೆ) ಅಥವಾ ಜ್ವಾಲೆ- ಸಂದರ್ಭಕ್ಕೆ ತಕ್ಕಂತೆ ಇಷ್ಟು ಪದಗಳನ್ನು ಅಗ್ನಿಗೆ ಪರ್ಯಾಯಗಳೆಂದು ಗಣಿಸಲಾಗಿದೆ. ಋಷಿಗಳ ಹೆಸರುಗಳನ್ನೂ ಅಗತ್ಯವಿದ್ದಲ್ಲೆಲ್ಲಾ ಕೊಡಲಾಗಿದೆ - ಅವುಗಳ ಅರ್ಥಪೂರ್ಣ ಮೌಲ್ಯವನ್ನು ಮೊದಲನೆಯ ಸೂಕ್ತದಲ್ಲಿ ಬಂದ - ಗವಿಷ್ಠಿರನ ಹೆಸರಿನ ಬಗೆಗೆ ಕೊಟ್ಟಂತೆ ಕೊಡಲಾಗಿದೆ. ಗವಿಷ್ಠಿರ=ಬೆಳಕಿನಲ್ಲಿ ಸ್ಥಿರ ಸಂಕಲ್ಪವುಳ್ಳವನು ; ಅಥವಾ ಅವನು ಸಾಮಾನ್ಯ ರೂಢಿಯ ಅತ್ರಿಯು. ಅತ್ರಿಯು ಭಕ್ಷಕನು ಯಾ ಪ್ರವಾಸಿ ; ಅಗ್ನಿಯೇ ಅತ್ರಿ ; ಏಕೆಂದರೆ ಅವನೇ ಅಂಗಿರಸನು ; ನುಂಗುವ ಬಯಕೆಯಿಂದ ಮತ್ತು ಜಗತ್ತಿನಲ್ಲಿರುವ ಆಕೃತಿಗಳನನ್ನುಭವಿಸಿ ಸಂತೋಷಪಡುವ ಇಚ್ಛೆಯಿಂದ ಮುಂದಕ್ಕೆ ಅವನು ಮುಕ್ತ ಸತ್ಯದತ್ತ ಮತ್ತು ತನ್ನ ಅನಂತಸತ್ತೆಯ ಒಡೆಯತನದಲ್ಲಿರುವ ಆತ್ಮದ ಆಹ್ಲಾದದತ್ತ ಮುನ್ನಡೆಯಿಡುತ್ತಾನೆ.



# ಮೊದಲ ಅಗ್ನಿ ಸೂಕ್ತ

## ಬೆಳಗಿನ ಯಜ್ಞದ ಸೂಕ್ತ

[ಉಷಃ ಕಾಲದಲ್ಲಿ ದಿವ್ಯ ಪ್ರಣೋದನಾದ ಅಗ್ನಿಯು ಪ್ರಜ್ಞಾತ ಕಾರ್ಯಕ್ಕಾಗಿ ಎಚ್ಚರ ಹೊಂದುವುದನ್ನು ಋಷಿಯು ಸೂಕ್ತಿಸುತ್ತಾನೆ. ತನ್ನ ಗುರಿಯಾದ ಪ್ರಕಾಶಮಯ ಸ್ವರ್ಗದತ್ತ ಏಳುತ್ತಾನೆ. ಹಾಗೆ ಏಳುವಾಗ ಸೂಕ್ಷ್ಮದರ್ಶನ ದೇವತೆಯು ಮಾಡಿಟ್ಟದ್ದೆಲ್ಲವನ್ನೂ ನುಂಗುತ್ತಾನೆ. ಉಕ್ತ ದೇವತೆಯು ಯಜ್ಞದ ವರಗಳನ್ನು (ದಾನಗಳನ್ನು) ವಿತರಣ ಮಾಡುತ್ತದೆ, ಯಜ್ಞ ಕಾರ್ಯಗಳನ್ನು ಹಂಚಿಕೊಡುತ್ತದೆ-ಶುದ್ಧ ಕ್ರಿಯಾಶಕ್ತಿಯಾಗುತ್ತದೆ ಮತ್ತು ನಮ್ಮ ಹಗಲುಗಳ ನೇತೃವಾಗಿ ವೈಶಾಲ್ಯ ಮತ್ತು ಪರಮಸತ್ಯಗಳತ್ತ ಏರಿ ಹೋಗುವುದು. ಪರಮಸತ್ಯದಿಂದ ಅಗ್ನಿಯು ನಮ್ಮೆರಡು ಅಂತರಿಕ್ಷಗಳನ್ನು ಹೊಸದಾಗಿ ನಿರ್ಮಿಸುತ್ತಾನೆ - ಅವೆಂದರೆ, ಅನ್ನಮಯ ಮನೋಮಯ ಕೋಶಗಳು (ಭೌತಿಕ - ಮಾನಸಿಕ ಪ್ರಜ್ಞೆಗಳು). ಇದು ನಮ್ಮ ಸ್ವರ್ಗಗಳಲ್ಲಿ ಅವನಿಗೆ ಮಾಡುವ ಹಿರಣ್ಯ ಸಂಸ್ಥಾಪನೆ, ಹಿರಣ್ಯ ಪ್ರತಿಷ್ಠಾಪನೆ.]

೧. ಜನಗಳು ಹೊತ್ತಿಸಿದುದರಿಂದ ಬಲಿಷ್ಠನು (ಬಲವು) ಎಚ್ಚತ್ತಿದ್ದಾನೆ. ಸಾಕುವ ಹಸುವಿನಂತೆ ತನ್ನೆಡೆಗೆ ಬರುವ ಉಷೆಯನ್ನವನು ಎದುರುಗೊಳ್ಳುತ್ತಾನೆ. ಸಾಮರ್ಥ್ಯ ದೇವತೆಗಳು ಅವನ ಹೊಳಪನ್ನು ಚಿತ್ತರಿಸಲು ಹೊರಟ ಹಾಗೆ ಅವನು ಪರಮಸತ್ಯವನ್ನು ಹೊಂದಿದವನು, ದುಡಿಮೆಗಾರರನ್ನೆತ್ತಿ ಹಿಡಿಯುವವನು ಮತ್ತು ಮಧ್ಯದಲ್ಲಿ ಅವನನ್ನು ಹೊತ್ತಿಸಲಾಗುತ್ತದೆ.

೨. ದೇವತಾರ್ಥವಾಗಿ ಮಾಡುವ ಯಜ್ಞಕ್ಕೆ ಅವನು ನಮ್ಮ ಆಹುತಿಯ ಪುರೋಹಿತನು. ತನ್ನಲ್ಲಿರುವ ನ್ಯಾಯವಾದ ಮನೋಧರ್ಮದಿಂದ ಬಲಿಷ್ಠನಾದ ಅವನು ನಮ್ಮ ಬೆಳಗುಗಳಲ್ಲಿ ಉದಾತ್ತೀಕೃತನಾಗಿ ಎದ್ದು ನಿಲ್ಲುತ್ತಾನೆ. ಅವನನ್ನು ಪೂರ್ಣವಾಗಿ ಹೊತ್ತಿಸಲಾಗಿದೆ. ಅವನು ಕೇಸುರಿ ಮೊತ್ತವಾಗಿ ಕಾಣಿಸುತ್ತಾನೆ. ಇಲ್ಲಿ ಒಂದು ಮಹಾದೇವ ತತ್ವವನ್ನು ಅಂಧಂ ತಮಸ್ಸಿನಿಂದ ಬಿಡುಗಡೆ ಮಾಡಲಾಗಿದೆ.

೩. ತನ್ನವರ ಸುದೀರ್ಘ ಸೂತ್ರದ ತೆಕ್ಕೆಯನ್ನವನು ಬಿಚ್ಚಿದಾಗ ಶುದ್ಧವಾದ ವಿಕಿರಣ ವ್ರಜಗಳಿಂದ[೧] ಬಲಿಷ್ಠನು (ಅಗ್ನಿಯು) ಶುದ್ಧವಾಗಿ ಹೊಳೆಯುತ್ತಾನೆ. ಏಕೆಂದರೆ ಸೂಕ್ಷ್ಮ ದರ್ಶಿನೀ ದೇವತೆಯು (ದಕ್ಷಿಣಾ ದೇವಿಯು) ಅಪಾರ ಶ್ರೇಯಃ ಸಮೃದ್ಧಿಯತ್ತ ಬೆಳೆಯುತ್ತಾಳೆ ಮತ್ತು ತನ್ನ ಕೆಲಸಕ್ಕೆ ಅವಳು ಹೂಡಲ್ಪಟ್ಟವಳು (ನಿಯುಕ್ತಳು). ಔನ್ನತ್ಯಕ್ಕೆ ಏರಿದ ಅವನು ಮೈಚಾಚಿ ಮಲಗಿದ ಅವಳನ್ನು ಆಹುತಿ ಪ್ರಜ್ವಲಿತವಾದ ತನ್ನ ಜ್ವಾಲಾ ರೂಪದ (ಜಿಹ್ವೆ)ಯಿಂದ ನುಂಗುತ್ತಾನೆ.

---

೧. ಉಷೆಯ ದನಗಳು ವಿಕಿರಣಗಳು. ದಕ್ಷಿಣೆಯು ದಿವ್ಯ ಸೂಕ್ಷ್ಮದರ್ಶನ ದೇವತೆ - ಅವಳಲ್ಲಿ ಉಷೆಯದೇ ಆದ ಒಂದು ರೂಪವಾಗಿದ್ದಾಳೆ.

೪. ಅಗ್ನಿ ದೇವತೆಯಲ್ಲಿ ಬೆಳೆಯುತ್ತಿರುವ ಮನಸ್ಸನ್ನುಳ್ಳ ಮಾನವರು ಬೆಳಕುಬೀರುವ[೨] ಸೂರ್ಯನಲ್ಲಿ ತಮ್ಮ ದರ್ಶನಗಳೆಲ್ಲಾ (ದೃಷ್ಟಿಗಳೆಲ್ಲಾ) ಕೇಂದ್ರೀಕೃತವಾಗುತ್ತಿರುವಾಗಲೇ ಸಂಪೂರ್ಣವಾಗಿ ದಿವ್ಯ ಸಂಕಲ್ಪದ ಜ್ವಾಲೆಯತ್ತ ಚಲಿಸುತ್ತಾರೆ. ವಿರುದ್ಧ ರೂಪದ ಇಬ್ಬರು ಉಷೆಯರು[೩] ಹೆರಿಗೆ ಮಾಡಿಸಿದಾಗ ಅವನು ಹಗಲುಗಳ ಎದುರು ಬಿಳಿಯ ಕುದುರೆಯಾಗಿ ಹುಟ್ಟುತ್ತಾನೆ.

೫. ಹೌದು ; ಅವನು ಹಗಲುಗಳೆದುರು ಜಿಷ್ಣುವಾಗಿ ಹುಟ್ಟಿದ್ದಾನೆ ; ಆರೋಗ್ಯ ಸುಖವುಳ್ಳ ಕೆಮ್ಮೊಗದ ಕೆಲಸಗಾರನಾದ ಅವನು ವಸ್ತುಗಳ ಸುಪ್ರತಿಷ್ಠಾಪಿತ ಆನಂದಗಳಲ್ಲಿ ಸುಪ್ರತಿಷ್ಠಿತನಾಗಿದ್ದಾನೆ. ಮನೆಯಾದ ಮೇಲೆ ಮನೆ ಹಿಡಿದು ಅವುಗಳಲ್ಲಿ ಏಳು[೪] ಆಹ್ಲಾದೋದ್ರೇಕಗಳನ್ನು ಸಮರ್ಥಿಸುತ್ತಾ ಆ ಬಲನು (ಬಲಿಷ್ಠನು), ಯಜ್ಞಕ್ಕೆ ಬಲವಾದ ಹವಿಸ್ಸನ್ನು ಹಾಕುವವನು, ತನ್ನ ಪೀಠವನ್ನು ಅಲಂಕರಿಸಿದ್ದಾನೆ.

೬. ತಾಯಿಯ[೫] ತೊಡೆಯ ಮೇಲೆ ಯಜ್ಞಕ್ಕೆ ಹೆದ್ದುತ್ತುಗಳನ್ನೀಯುವ ಪುರೋಹಿತನೆನ್ನಿಸಿದ ಬಲನು (ಅಗ್ನಿಯು)- ಆ ಮೈಮರೆಸುವ ಆನಂದದ ಪರಲೋಕದಲ್ಲಿ ತನ್ನ ಆಸನವನ್ನು ಸ್ವೀಕರಿಸಿದ್ದಾನೆ. ಆತನು ಯುವಕ ದ್ರಷ್ಟಾರನು, ಸ್ವಾನುಯಾಯಿಗಳ ನಡುವೆ ಎದ್ದು ಕಾಣುವವನು, ಪರಮಸತ್ಯವನ್ನು ಹೊಂದಿದವನು, ದುಡಿಮೆಗಾರರನ್ನೆತ್ತಿ ಹಿಡಿಯುವವನು ಮತ್ತು ಮಧ್ಯದಲ್ಲಿ ಅವನನ್ನು ಹೊತ್ತಿಸಲಾಗುತ್ತದೆ.

೭. ಅವನು ಅಧ್ವರ್ಯುವಾಗಿರುವುದರಿಂದ (ಆಹುತಿಗಳ ಪುರೋಹಿತನಾದುದರಿಂದ: ಆಹುತಿ=Oblation) (ದೇವತೆಗಳನ್ನು ಯಜ್ಞಕ್ಕೆ ಕರೆಯುವ ಹೋತೃವಾದುದರಿಂದ "ಅಗ್ನಿರ್ಹೋತಾ" ಎಂದು ಬೇರೆ ಕಡೆ ಹೇಳಿರುವುದರಿಂದ) ಮುಂದುವರಿಯುತ್ತಿರುವ ಯಜ್ಞಗಳಲ್ಲಿ ಹೊಳೆವ ಬಲನು ನಮ್ಮ ಪೂರ್ಣತ್ವವನ್ನು ಸಾಧಿಸಿಕೊಡುವುದರಿಂದ, ಅವನನ್ನು ಜನರು ಅಧೀನತಾ ಸೂಚಕ ನಮನಗಳಿಂದ ಹುಡುಕಬಯಸುತ್ತಾರೆ. ಏಕೆಂದರೆ ಪರಸತ್ಯದ ಶಕ್ತಿಯಲ್ಲಿ ಆತನು ನಮ್ಮ ಅಸ್ತಿತ್ವದ ಉಭಯ ಅಂತರಿಕ್ಷಗಳನ್ನೂ ರೂಪಿಸುತ್ತಾನೆ. ಅವನನ್ನವರು ಹಿಂಡಿ ಸ್ಪಷ್ಟತೆಯಿಂದ ಪ್ರಕಾಶಮಾನನನ್ನಾಗಿ ಮಾಡುತ್ತಾರೆ.[೬] ಅವನು ಜೀವನದ ಹೇರಳ ಶ್ರೇಯಃ ಸಮೃದ್ಧಿಯ ನಿತ್ಯನಾದ ಕುದುರೆಯಾಗಿದ್ದಾನೆ.

---

೨. ಅಂದರೆ, ಇತರ ನರರ ತಡಕಾಡುತ್ತಿರುವ ವಿಚಾರಗಳ ಬದಲು ಅವರ ಮನೋಧರ್ಮವನ್ನು ಜ್ಞಾನರೂಪದ ಹೊಳೆವ ದಿವ್ಯ ಸಂಕಲ್ಪಜ್ವಾಲೆ ರೂಪಕ್ಕೆ ಸೂರ್ಯನು ಪರಿವರ್ತಿಸುತ್ತಾನೆ.

೩. ಹಗಲು ಮತ್ತು ರಾತ್ರಿ ; ರಾತ್ರಿಯು ನಮ್ಮ ಭೌತಿಕ ಸ್ವಭಾವದ ಅಜ್ಞಾನವು.

೪. ನಮ್ಮ ಪ್ರತಿಯೊಂದು ಸ್ವಭಾವ ವಿಶೇಷದಲ್ಲೂ ತದರ್ಹವಾದ ಒಂದು ವಿಶಿಷ್ಟ ಆನಂದೋದ್ರೇಕವಿದೆ ; ಹಾಗೇ ನಮ್ಮ ಪ್ರತಿಯೊಂದು ಪ್ರಜ್ಞಾಸ್ತರದಲ್ಲೂ ಅರ್ಥಾತ್ ಪ್ರತಿಯೊಂದು ಮನೆಯಲ್ಲೂ ದೇಹದಲ್ಲೂ ಈ ಆನಂದೋದ್ರೇಕಗಳನ್ನು ಅಗ್ನಿಯು ಪ್ರತಿಷ್ಠಾಪಿಸುತ್ತಾನೆ.

೫. ತಾಯಿಯು ಇಲ್ಲಿ ನಾವಿರುವ ಭೂಮಿಯು ; ಪರಲೋಕವೆಂದರೆ ಅತಿಮಾನಸ ಅಸ್ತಿತ್ವವು.ಎರಡಕ್ಕೂ ನಡುವೆ ಇರುವುದು ಜೈವಿಕ ಮತ್ತು ಭಾವನಾತ್ಮಕ ಬಾಳು. ಇವೆಲ್ಲವುಗಳಲ್ಲೂ ಏಕಕಾಲದಲ್ಲಿ ಅಗ್ನಿಯು ಆವಿರ್ಭವಿಸುತ್ತಾನೆ.

೬. ಶುದ್ಧೀಕರಿಸಿದ ಬೆಣ್ಣೆ, ಬೆಳಕುದನದ ಹಾಲು ಮತ್ತು ಬೆಳಕಿಡಿದ ಮನಕ್ಕೆ ಬರುವ ಸಮೃದ್ಧ ಸ್ಪಷ್ಟತೆಯ ಸಂಕೇತ.

೮. . ಉಜ್ವಲನಾದ ಅವನನ್ನು ಉಜ್ಜಿ ಪ್ರಕಾಶಮಾನನನ್ನಾಗಿ ಮಾಡಲಾಗುತ್ತದೆ. ದ್ರಷ್ಟಾರನಿಂದ ಅವನು ಅಭಿವ್ಯಂಜಿಸಲ್ಪಟ್ಟಾಗ ತನ್ನ ಮನೆಯಲ್ಲೇ[೭] ಅವನು ಪುನರ್ನಿವೇಶಿತನಾಗುತ್ತಾನೆ. ಅವನು ನಮ್ಮ ಅನುಕೂಲನಾದ ಅತಿಥಿಯು. ಅವನು ಸಾವಿರ ಕೋಡಿನ ವೃಷಭನು ; ಏಕೆಂದರೆ, ಎಲೈ ಅಗ್ನಿಯೇ, ನೀನು ಅಂಥ ಪ್ರಣೋದ ನಿರ್ಭರನು ; ಓ ಬಲಿಷ್ಠನೇ, ಉಳಿದೆಲ್ಲವರಿಗಿಂತಲೂ ನೀನು ಹೆಚ್ಚಿನ ಪ್ರಭಾವಿಯು[೮].

೯. ಎಲೈ ಬಲಿಯೇ, ಉಳಿದೆಲ್ಲರನ್ನೂ, ನೀನು ಒಂದೇ ಮೆಟ್ಟಿಗೆ ಹಿಂದಕ್ಕೆ ಹಾಕುತ್ತೀಯೆ. ಯಾರಲ್ಲಿ ನೀನು ಅವತರಿಸುವೆಯೋ ನಿನ್ನ ಸೌಂದರ್ಯ ವೈಭವದಿಂದ ವ್ಯಕ್ತನಾಗುವೆಯೋ ಅವರಲ್ಲಿ ನೀನು ಅಪೇಕ್ಷಣೀಯನು, ಕಾರ್ಯಪೂರ್ಣನು, ಬೆಳಕಿನಲ್ಲಿ ವಿಸ್ತೃತನಾದವನು ಮತ್ತು ಮಾನವ ಜನರ ಪ್ರಿಯತಮ ಅತಿಥಿಯು.

೧೦. ಎಲೈ ಬಲರಾಜನೇ, ಯುವತಮ ಉತ್ಸಾಹಿಯೇ ಎಲ್ಲ ಜಗತ್ತುಗಳೂ ಅವುಗಳ ಜನರೂ ಹತ್ತಿರದಿಂದಲೂ ದೂರದಿಂದಲೂ ನಿನಗೆ ತಮ್ಮ ಹವಿಸ್ಸನ್ನು ತರುತ್ತಾರೆ. ಮನುಷ್ಯನ ಜ್ಞಾನದಲ್ಲಿ ಅವನ ಸುಖತಮ ಸ್ಥಿತಿಯ ನ್ಯಾಯಮನಸ್ಕತೆಯನ್ನು ನೋಡಲು ಎಚ್ಚರ ಹೊಂದು. ಹೇ ಬಲಿಷ್ಠನೇ, ಒಂದು ವೈಶಾಲ್ಯವು ನಿನ್ನ ಮಹಾನಂದಮಯವಾದ ಶಾಂತಿಯಾಗಿದೆ.

೧೧. ಎಲೈ ದ್ಯುಮತ್ ಸಂಕಲ್ಪನೇ, ಯಜ್ಞಾಧಿಪರೊಡನೆ, ನೀನು ನಿನ್ನ ಕಾಂತಿಮಯವಾದ ಪೂರ್ಣ ರಥವನ್ನು ಹತ್ತು! ನಿನಗೆ ವಿಶಾಲವಾದ ನಡುಜಗದ್ ಜ್ಞಾನವಿದೆ. (ಅಂತರಿಕ್ಷದ ಅರಿವಿದೆ) ಅದರ ಎಲ್ಲಾ ದಾರಿಗಳ ಪರಿಚಯವಿದೆ. ದೇವತೆಗಳನ್ನಿಲ್ಲಿಗೆ ನಮ್ಮ ಆಹುತಿಯನ್ನು ತಿನ್ನಲು ಕರೆದುಕೊಂಡು ಬಾ.

೧೨. ಮಹಾಯಾಮವನ್ನು ಪ್ರಕಟಿಸುವ ಹಿರಣ್ಮಯ ದೃಢೀಕರಣದಂತೆ ಸ್ವರ್ಗಗಳಲ್ಲಿಂತೋ ಅಂತೆಯೇ ದಿವ್ಯ ಸಂಕಲ್ಪದಲ್ಲಿಯೂ ತನ್ನ ಆತ್ಮ ಸಮರ್ಪಣೆಯಿಂದ ದಿವ್ಯಜ್ಯೋತಿಯಲ್ಲಿ ಮಹಾದಾರ್ಢ್ಯ ಸಂಪನ್ನನಾದ ಅಗ್ನಿಯು ಜ್ವಾಲಾಮಯವಾಗಿ ಏಳುತ್ತಾನೆ. ದ್ರಷ್ಟಾರನಿಗಾಗಿ, ಇಂದು ನಾವು ಉಚ್ಚರಿಸಿದ ಬುದ್ಧಿಯುಕ್ತ ವಾಕ್ಯಗಳಿಗಾಗಿ, ನಮ್ಮ ಪೂಜಾ ಮಂತ್ರಗಳಿಗಾಗಿ, ಗೋಪ್ರಜಗಳಲ್ಲಿ ಗರ್ಭಾಧಾನ ಮಾಡುವ ವೃಷಭಕ್ಕಾಗಿ ಉಕ್ತ ಪ್ರಕಾರವಾಗಿ ಅಗ್ನಿಯು ಎದ್ದೇಳುತ್ತಾನೆ.



೭. ತನ್ನ ಯುಕ್ತವಾದ ಮನೆಯೆನ್ನಿಸುವ ಪರಸತ್ಯದಲ್ಲಿ ಅಗ್ನಿಯು ಪುನಃ ಸ್ವಸ್ಥಾನಸ್ಥನಾಗುತ್ತಾನೆ.

೮. ಪರಸತ್ಯದ ಪ್ರಣೋದ-ಈ ಪೂರ್ಣಜ್ಞಾನಕ್ಕೆ ಸೇರಿದ ಪೂರ್ಣ ಕ್ರಿಯಾಶಕ್ತಿಯು.

೯. ಜೈವಿಕ ಯಾ ನಾಡೀಯ ಸ್ತರವು ನಮ್ಮ ಭೌತಿಕ ಜಗತ್ತಿನ ಮೇಲೇ ಇದೆ. ಅದರ ಮೂಲಕ ದೇವತೆಗಳು ಮಾನವರೊಡನೆ ಸಂಪರ್ಕಿಸಲು ಬರುತ್ತಾರೆ. ಆದರೆ ಅದರದ್ದು ಗಲಿಬಿಲಿಯ ವಿಸ್ತಾರ-ತೊಡಕಿನ ಜಟಿಲ ದಾರಿಗಳಲ್ಲಿ ಬಹಳ.

# ಎರಡನೆಯ ಅಗ್ನಿ ಸೂಕ್ತ

## ದಿವ್ಯ ಪ್ರಣೋದದ ಬಿಡುಗಡೆಗೆ ಸಂಬಂಧಿಸಿದ ಒಂದು ಸೂಕ್ತ

[ಪ್ರಕೃತಿ ಯಾ ನಿಸರ್ಗವು ತನ್ನ ಸಾಮಾನ್ಯ ಪರಿಮಿತ ಕಾರ್ಯಗಳಲ್ಲಿ ದಿವ್ಯ ಪ್ರಣೋದವನ್ನು ತನ್ನ ರಹಸ್ಯ ಸ್ಥಾನದಲ್ಲಿ ಅಥವಾ ಅವಮಾನಸ ಸತ್ತೆಯಲ್ಲಿ (ಪ್ರಜ್ಞೆಯಲ್ಲಿ) ಮುಚ್ಚಿಟ್ಟಿರುತ್ತದೆ. ಏಕಮೇವಾದ್ವಿತೀಯಂ ಆದ ಅನಂತದತ್ತ ಪ್ರಜ್ಞೆಯು ವಿಸ್ತಾರವಾಗಿ ತಲುಪಿದಾಗ ಅದು ಆವಿರ್ಭವಿಸುತ್ತದೆ - ಪ್ರಜ್ಞಾತ ಮನಸ್ಸಿಗಾಗಿ ಹುಟ್ಟಿ ಬರುತ್ತದೆ. ಉಚ್ಚತರ ಪ್ರಬೋಧದ ಸ್ಪಷ್ಟತೆಗಳನ್ನು ಈ ಬಲಿಷ್ಠನು (ಬಲಿ=ಅಗ್ನಿ) ಕಾಯಲು ಇಲ್ಲದಿರುವಾಗ ಇಟ್ಟುಕೊಂಡಿರಲು ಸಾಧ್ಯವಾಗುವುದಿಲ್ಲ. ಏಕೆಂದರೆ, ವಿರುದ್ಧ ಶಕ್ತಿಗಳು ಅವುಗಳನ್ನು ಕಸಿದುಕೊಂಡು ಹೋಗಿ ತಮ್ಮ ಗುಪ್ತ ಗುಹೆಯಲ್ಲಿ ಬಚ್ಚಿಡುತ್ತವೆ. ಮಾನವನಲ್ಲಿ ಅವತರಿಸಿ ಮೂಡುವ ದಿವ್ಯ ಸಂಕಲ್ಪವು ಸ್ವತಃ ಮುಕ್ತವಾಗಿದ್ದು ಜಗತ್ತಿನ ಯಜ್ಞಕ್ಕೆ ಪಶುವಾಗಿರುವುದನ್ನು ಬಿಡಿಸಿದಂತೆ ಅದು ಮಾನವನನ್ನು, ಅವನನ್ನು ಬಿಗಿದ ಪಾಶಗಳಿಂದ ಮುಕ್ತಗೊಳಿಸುತ್ತದೆ. ಇಂದ್ರಬೋಧೆಯಿಂದ ನಾವು ಅದನ್ನು ಪಡೆವೆವು ; ಇಂದ್ರನು ದಿವ್ಯಮನ ಮತ್ತು ಅದು ಬೆಳಕಿನ ಅವಿಚ್ಛಿನ್ನ ಅಲೆಯನ್ನು ರಕ್ಷಿಸುತ್ತದೆ ಹಾಗೂ ಅನೃತ ಶಕ್ತಿಗಳನ್ನು ಧ್ವಂಸ ಮಾಡುತ್ತದೆ - ಆಗ ಅನೃತ ಶಕ್ತಿಗಳು ತಮ್ಮ ಪರಿಮಿತಿಗಳಿಂದ ಆ ಪ್ರಬೋಧದ ವೃದ್ಧಿಯನ್ನು, ವಿಸ್ತೃತ್ವರ ಜ್ವಾಲೆಯನ್ನು ತಡೆಗಟ್ಟಲಾರದಂತಾಗುತ್ತವೆ. ಅದು ಮಿಂಚುವ ಸಗ್ಗದಿಂದ ದಿವ್ಯಜಲವನ್ನು ತರುತ್ತದೆ. ಆ ಜಲವಾದರೋ ಶತ್ರುಪೀಡೆಯಿಂದ ಮುಕ್ತವಾದ ದಿವ್ಯ ಸಂಪತ್ತು ; ಮತ್ತು ಉಕ್ತ ದಿವ್ಯ ಮನವು (ಇಂದ್ರನು) ಆತ್ಯಂತಿಕವಾದ ಶಾಂತಿಯನ್ನು ಪೂರ್ಣತೆಯನ್ನು ತಂದುಕೊಡುತ್ತದೆ.]

೧. ತನ್ನ ಗುಪ್ತಾಸ್ತಿತ್ವದಲ್ಲಿ ತರುಣಿಯಾದ ತಾಯಿಯು[೧] ಬೆಳಗೇ ಒತ್ತಿ ಹಿಡಿದ ದಿವ್ಯ ಬಾಲಕನನ್ನು ತಾನೇ ಇಟ್ಟುಕೊಂಡಿರುತ್ತಾಳೆ - ಅವನನ್ನು ಅವಳು ತಂದೆಗೆ ಒಪ್ಪಿಸುವುದಿಲ್ಲ. ಆದರೆ ಅವನ ಪ್ರಣೋದವು ಕಡಿಮೆಯಾಗುವುದಿಲ್ಲ. ವಸ್ತುಗಳ ಊರ್ಧ್ವಮುಖ ಕರ್ಮಗಳಲ್ಲಿ ಎದುರಿಗೇ[೨] ಅವನು ಪ್ರತಿಷ್ಠಾಪಿತನಾದುದನ್ನು ಜನರು ನೋಡುತ್ತಾರೆ.

೨. ಓ, ತರುಣಿಯಾದ ತಾಯೇ, ಈ ದಿವ್ಯ ಬಾಲಕನಾರು? ರೂಪದಲ್ಲಿ ನೀನು ಒತ್ತಿ ಹಿಡಿಯಲ್ಪಟ್ಟಾಗ ಯಾರನ್ನು ನಿನ್ನಲ್ಲೇ ಇಟ್ಟುಕೊಂಡಿದ್ದೀಯೆ? ಹಾಗೆ ಇಟ್ಟುಕೊಂಡರೂ ನಿನ್ನ

---

೧. ತಾಯ್ತಂದೆಯರೆಂದರೆ ಯಾವಾಗಲೂ ನಿಸರ್ಗ ಮತ್ತು ವಿಶ್ವಾತ್ಮ ಅಥವಾ ಭೌತಾಸ್ತಿತ್ವ ಮತ್ತು ಶುದ್ಧವಾದ ಮಾನಸಿಕ ಅಸ್ತಿತ್ವ.

೨. ಪುರೋಹಿತನಾಗಿ ಅಗ್ನಿಯು ಯಜ್ಞಕರ್ಮವನ್ನು ನೇತೃವಾಗಿ ನಡೆಸಿಕೊಡುವುದರಿಂದ.

ವಿಸ್ತಾರವು ಅವನಿಗೆ ಜನ್ಮ ಕೊಟ್ಟಿದೆಯಲ್ಲಾ? ಬಹಳ ಋತುಗಳವರೆಗೆ ಈ ದಿವ್ಯಬಾಲನು ನನ್ನ ಗರ್ಭದಲ್ಲಿ ಬೆಳೆದನು. ತಾಯಿ ಹಡೆದಾಗ ನಾನು ಅವನನ್ನು ಕಂಡೆನು.

೩. ಸತ್ತೆಯ ದೂರದ ಕ್ಷೇತ್ರದಲ್ಲಿ ಹಿರಣ್ಮಯತೇಜಸ್ಸಿನ ಕೋರೆ ದಾಡೆಗಳನ್ನುಳ್ಳವನನ್ನು ಕಂಡೆನು. ಅವನು ಬಣ್ಣದಲ್ಲಿ ಶುದ್ಧ ಹೊಳಪುಳ್ಳವನು- ಯುದ್ಧದ ಆಯುಧಗಳನ್ನು ರೂಪಿಸುತ್ತಿದ್ದನು. ನನ್ನ ಪ್ರತ್ಯೇಕ ಭಾಗಗಳಲ್ಲಿರುವ[೩] ಎಲ್ಲಾ ಅಮರ್ತ್ಯತೆಯನ್ನೂ ಅವನಿಗೆ ಕೊಡುತ್ತೇನೆ. ದೇವ ಮನಸ್ಕರಲ್ಲದವರು ಹಾಗೂ ಮಂತ್ರಹೀನರು[೪] ನನಗೇನನ್ನು ಮಾಡುವರು?

೪. ಜಾಜ್ವಲ್ಯಮಾನ ನಾನಾ ಸುಂದರ ರೂಪಗಳನ್ನು ಧರಿಸಿ ಉದ್ದಕ್ಕೂ ಸಾಲಾಗಿ ನಿಂತ ಸಂತುಷ್ಟ ಗೋವ್ರಜವನ್ನು ನಾನು ಆ ಕ್ಷೇತ್ರದಲ್ಲಿ ಕಂಡೆನು. ಯಾರೂ ಆ ಗೋಗಳನ್ನು ಹಿಡಿಯಲಾರರು - ಏಕೆಂದರೆ ಅಗ್ನಿಯು ಜನಿಸಿದ್ದನು. ಗೋಗಳಲ್ಲಿ ವೃದ್ಧವಾದವುಗಳೂ ಮತ್ತೆ ತರುಣ ಪ್ರಾಯವನ್ನು ತಾಳಿದವು.

೫. ದ್ಯುತಿವ್ರಜಗಳಿಂದ ನನ್ನ ಶಕ್ತಿಯನ್ನು ಯಾರು ವಿಚ್ಛೇದಿಸಿದರು? ಈ ಯುದ್ಧದಲ್ಲಿ ಅವರ ವಿರುದ್ಧವಾಗಿ ಯಾವ ರಕ್ಷಕನೂ ಇರಲಿಲ್ಲ, ಯಾವ ಕೆಲಸಗಾರನೂ ಇರಲಿಲ್ಲ. ನನ್ನಿಂದ ಅವನ್ನು ತೆಗೆದುಕೊಂಡು ಹೋದವರು ನನಗವನ್ನು ಮತ್ತೆ ಬಿಟ್ಟುಕೊಡಲಿ. ಏಕೆಂದರೆ ಆತನು (ಅಗ್ನಿಯು) ತನ್ನ ಪ್ರಜ್ಞಾತ ಪ್ರತ್ಯಕ್ಷಾನುಭವಗಳೊಂದಿಗೆ ನಾವು ಕಳೆದುಕೊಂಡ ಕಿರಣವ್ರಜಗಳನ್ನು ಅಟ್ಟಿಕೊಂಡು ಬರುತ್ತಾನೆ.

೬. ವಿರುದ್ಧ ಶಕ್ತಿಗಳಿಂದ ಮರ್ತ್ಯರಲ್ಲಿ, ಯಾವನಲ್ಲಿ ಪ್ರಾಣಿಗಳಲ್ಲಿ ಬದುಕುವುವೋ ಮತ್ತು ಪ್ರಾಣಿಗಳು ಯಾವನಲ್ಲಿ ಬದುಕುವುವೋ ಅವನು, ಆ ರಾಜನು, ಮುಚ್ಚಿಡಲ್ಪಟ್ಟಿದ್ದಾನೆ. ಸರ್ವಭಕ್ಷಕನ ಆತ್ಮವಿಚಾರಗಳು ಅವನನ್ನು ಬಿಡಿಸಲಿ : ಮುಚ್ಚಿಟ್ಟವರೇ ಮುಚ್ಚಿಡಲ್ಪಡಲಿ, ಬಂಧನದಲ್ಲಿಡಲಿ.

೭. ಆಹ್ಲಾದೇಶನಾದ ಶುನಃ ಶೇಫನು ಕೂಡ ಸಾವಿರ ಮಡಿಯ ಯೂಪಸ್ತಂಭಕ್ಕೆ ಯಜ್ಞದಲ್ಲಿ ಬಂಧಿಸಲ್ಪಟ್ಟನು ; ನೀನವನನ್ನು ಬಿಡಿಸಿದೆ ; ಹೌದು, ಅವನು ತನ್ನ ಕಾರ್ಯಗಳಿಂದ ಪೂರ್ಣತೆಯನ್ನು ಸಾಧಿಸಿದನು. ಆದುದರಿಂದ ನೀನು ನಮ್ಮ ನಡುವೆ ಇಲ್ಲಿ ನಿನ್ನ ಪೀಠವನ್ನು ಸ್ವೀಕರಿಸಿ, ಎಲೈ ಪ್ರಜ್ಞಾತ ದ್ರಷ್ಟಾರ ಜ್ವಾಲೆಯೇ. ನಮ್ಮ ಯಜ್ಞದ ಪುರೋಹಿತನೇ, ನಮ್ಮ ಬಂಧನದ ಪಾಶಗಳನ್ನು ಸಡಿಲಿಸು.

೮. ಸಿಟ್ಟು ಮಾಡಿಕೊಂಡು ನನ್ನಿಂದ ದೂರ ಹೋಗಬೇಡ! ದೇವತೆಗಳ ಕಾರ್ಯನಿಯಮವನ್ನು ಕಾಯುವವನು ನಿನ್ನ ಬಗೆಗೆ ನನಗೆ ತಿಳಿಸಿದನು ; ಇಂದ್ರನಿಗೆ ಗೊತ್ತಿತ್ತು ; ಅವನು ನಿನ್ನನ್ನು ಹುಡುಕಿ ಕಂಡುಕೊಂಡನು. ಅವನು ತನ್ನ ಜ್ಞಾನವನ್ನು ನನಗೆ ಕಲಿಸಿದ ಮೇಲೆ ನಾನು, ಎಲೈ ಜ್ವಾಲೆಯೇ, ನಿನ್ನೆಡೆಗೆ ಬಂದೆನು.

---

೩. ಗುಪ್ತವಾದ ಗೂಢಾರ್ಥ ಅಭಿವ್ಯಂಜಕ ಶಬ್ದ - ಅನಭಿವ್ಯಕ್ತಾರ್ಥವನ್ನು ಹೊರಪಡಿಸುತ್ತದೆ.

೪. ಅಮರ್ತ್ಯತಾದಾಯಕವಾದ ಸೋಮಮಧ್ಯವು ಅದನ್ನು ಮೂರು ಪಾಲು ಮಾಡಿ ದೇವತೆಗಳಿಗೆ ಕೊಡಲಾಗುತ್ತದೆ-ಮನ, ಪ್ರಾಣ, ದೇಹಗಳೆಂಬ ಮೂರು ಪ್ರಜ್ಞಾಸ್ತರಗಳ ಮೇಲಿಂದ.

೯. ಪರಮಸತ್ಯದ ವಿಶಾಲಪ್ರಭೆಯೊಡನೆ ಸಂಕಲ್ಪ ಜ್ವಾಲೆಯು ಹೊರಹೊಳೆಯುತ್ತದೆ ; ಮತ್ತು ಅವನ ಮಹತ್ವದಿಂದ ಎಲ್ಲ ವಸ್ತುಗಳೂ ವ್ಯಕ್ತವಾಗುವಂತೆ ಮಾಡುತ್ತಾನೆ. ಅವನು ಜ್ಞಾನದ[೫] ನಿರ್ಮಿತಿಗಳನ್ನು ಮೀರಿ ನಿಲ್ಲುತ್ತಾನೆ- ಆ ನಿರ್ಮಿತಿಗಳೆಲ್ಲಾ ಅದಿವ್ಯ ಮತ್ತು ಒಂದು ದುಶ್ಚಲನೆಯಿಂದಾ ದಂಥವುಗಳು ; ಅವನು ರಾಕ್ಷಸನನ್ನು ತಿವಿಯಲು ತನ್ನ ಕೋಡನ್ನು, ಮಸೆಯುತ್ತಿದ್ದಾನೆ.

೧೦. ನಮ್ಮ ಸ್ವರ್ಗಗಳಲ್ಲಿ ದಿವ್ಯ ಜ್ವಾಲೆಯ ಸ್ವರಗಳು ರಾಕ್ಷಸ ಸಂಹಾರಕ್ಕಾಗಿ ನಿಶಿತಾಯುಧಗಳಾಗಲಿ ತನ್ನ ಆನಂದೋದ್ರೇಕದಲ್ಲಿ ಅವನ ಕ್ರುದ್ಧ ಪ್ರಭೆಗಳು ಅವನ ಮುನ್ನಡೆಯನ್ನು ವಿರೋಧಿಸುವ ಎಲ್ಲವನ್ನೂ ಮುರಿದು ಹಾಕಲಿ. ಎಲ್ಲ ಕಡೆಯಿಂದಲೂ ನಮಗಡ್ಡಿಯೊಡ್ಡುತ್ತಿರುವ ಅದಿವ್ಯ ಕ್ರಿಯಾಶಕ್ತಿಗಳಿಗೆ ಅವನನ್ನು ಕೊಟ್ಟಿಗೆಯಲ್ಲಿ ಕೂಡಿಡಲು ಸಾಧ್ಯವಿಲ್ಲ.

೧೧. ಎಲೈ ನೀನು ಹುಟ್ಟಿದ್ದೇ ಬಹುರೂಪಿಯಾಗಿ - ನಾನೋ ಮನದಲ್ಲಿ ಪ್ರಬೋಧಿತನು, ತಿಳಿವಳಿಕೆಯನ್ನು ಸಾಧಿಸಿಕೊಂಡವನು, ಕೆಲಸಗಳಲ್ಲಿ ಅಚ್ಚುಕಟ್ಟಾಗಿರುವವನು; ಇಂಥ ನಾನು ನಿನಗೆ ತೇರಾಗಲೆಂದು ನಿನ್ನ ಸಮರ್ಥನೆಯ, ದೃಢೀಕರಣದ ಈ ಹಾಡನ್ನು ರಚಿಸಿದ್ದೇನೆ. ಎಲೈ ಬಲವಂತನೇ, ಅದಕ್ಕುತ್ತರವಾಗಿ ಸಂತುಷ್ಟನಾಗು. ಇದರಿಂದ ಲಸತ್‌ಸ್ವರ್ಗದ[೬] ಬೆಳಕನ್ನು ಹೊತ್ತಿರುವ ಜಲಗಳನ್ನು ನಾವು ಗೆದ್ದುಕೊಳ್ಳುತ್ತೇವೆ.

೧೨. ಬಲಿಷ್ಠ ಕಂಠದ[೭] ವೃಷಭನು ನಮ್ಮಲ್ಲಿ ವರ್ಧಿಸುತ್ತಾನೆ ಮತ್ತು ನಮ್ಮತ್ತ ಜ್ಞಾನಧನವನ್ನು[೮] ಅಟ್ಟಿಕೊಂಡು ಬರುತ್ತಾನೆ. ಆ ಧನವನ್ನು ನಮ್ಮ ಶತ್ರು ತಡೆಹಿಡಿದು ಇಟ್ಟುಕೊಂಡಿದ್ದನು ; ಅದನ್ನು ನಾಶ ಮಾಡುವ ಯಾವನೂ ಇಲ್ಲ. ಏಕೆಂದರೆ ಅಮರ್ತ್ಯ ಶಕ್ತಿಗಳು, ಯಜ್ಞ ವೇದಿಯನ್ನು ಅಗಲವನ್ನಾಗಿ ಮಾಡುವವನಿಗಾಗಿ, ಆಹುತಿಯನ್ನು ಕೈಯಲ್ಲಿ ಹಿಡಿದಿರುವವನಿಗಾಗಿ ನೀನು ಶಾಂತಿಯನ್ನು ಸಿದ್ಧಗೊಳಿಸು ಎಂದು ಬಲನಿಗೆ (ಅಗ್ನಿಗೆ) ಹೇಳಿವೆ.



೫ ಮಾಯೆ: ಮಾಯೆಗಳೆರಡು ಬಗೆಯವು - ದಿವ್ಯ, ಅದಿವ್ಯ ಎಂದು - ಸತ್ಯದ ನಿರ್ಮಿತಿಗಳು ಮತ್ತು ಅನೃತದ ನಿರ್ಮಿತಿಗಳು ಎಂದು.

೬. 'ಸ್ವರ್' ದಿವ್ಯ ಮನ; ಲಸತ್ ಸತ್ಯಕ್ಕೆ ಪವಿತ್ರವಾಗಿರುವುದು.

೭. ಅಥವಾ "ಬಹುಕಂಠ"

೮. ಪ್ರಭಾಮಯ ಗೋವ್ರಜಗಳೆಂಬ ಐಶ್ವರ್ಯವು.

# ಮೂರನೆಯ ಅಗ್ನಿ ಸೂಕ್ತ

## ಅತಿ ಹೆಚ್ಚಿನ ಒಳಿತನ್ನು ಗೆದ್ದ ದಿವ್ಯ ಪ್ರಣೋದ

[ದಿವ್ಯ ಸಂಕಲ್ಪ ಪ್ರಣೋದವು ಇತರ ಸರ್ವದೇವತಾ ಕೃತಿಗಳ ಆಕರ. ಆ ದೇವತೆಗಳ ಶಕ್ತಿಗಳು ಆವಿರ್ಭವಿಸುವಂತೆ ಅದು ಮಾಡುತ್ತದೆ. ಆ ಶಕ್ತಿಗಳೆಲ್ಲಾ ಆ ಪರಾಕಾಷ್ಠಾ ಸತ್ಯದ ಒಡೆಯನು ನಮ್ಮಲ್ಲಿ ಬೆಳೆಯುತ್ತಾ ಹೋದ ಹಾಗೆ ಬೆಳೆಯುತ್ತಾ ಹೋಗುತ್ತವೆ. ಈ ಬೆಳವಣಿಗೆಯು ಮುಗಿಯುವುದು ಆ ಪರಾಕಾಷ್ಠಾ ಸತ್ಯವನ್ನು ಸಾಧಿಸಿದ ಮೇಲೆ. ಅದರ ಪರಂಜ್ಯೋತಿ ಹಾಗೂ ಆನಂದಗಳಿಂದ ನಾನಾತ್ವದ ಈ ಪ್ರಪಂಚವು ನಿಂತಿರುತ್ತದೆ. ಪುನಃ ದುಃಶಕ್ತಿಯು ತನ್ನಲ್ಲಿ ಪ್ರಕಟವಾಗದಿರಲಿ ಮತ್ತು ನಮ್ಮಲ್ಲಡಗಿದ ಗುಪ್ತಾತ್ಮವು ಸರ್ವಜನಕವೆಂದೂ ನಮ್ಮ ಕರ್ಮಗಳ ಹಾಗೂ ವಿಕಾಸದ ಮಗುವೆಂದೂ ಆಗಿರುವುದರಿಂದ ಅದು ವಿಶಾಲವಾದ ಸತ್ಯಪ್ರಜ್ಞೆಗೆ ತುಂಬಿಕೊಳ್ಳಲು ಆಸ್ಪದ ಕೊಡುವಂತಾಗಲಿ ಎಂದು ಋಷಿಯು ಪ್ರಾರ್ಥಿಸುತ್ತಾನೆ. ನಾವು ಮುಗ್ಗರಿಸುವಂತೆ ಮಾಡುವ ಮತ್ತು ಸ್ವರ್ಗೈಶ್ವರ್ಯವನ್ನು ಅಪಹರಿಸಲು ಬರುವ ದುಃಶಕ್ತಿಗಳೆಲ್ಲವನ್ನೂ ಆ ದಿವ್ಯಜ್ಯೋತಿಯು ನಾಶ ಮಾಡುತ್ತದೆ.]

೧. ಎಲೆ ದಿವ್ಯ ಸಂಕಲ್ಪನೇ, ನೀನು ಹುಟ್ಟಿದಾಗ ನೀನೊಂದು ಮರುಭೂಮಿ[೧]ಯಾಗಿದ್ದೆ. ಸಂಪೂರ್ಣವಾಗಿ ಹೊತ್ತಿಸಿದ ಮೇಲೆ ನೀನು ಪ್ರೇಮವಾದೆ, ಪ್ರೀತಿಯಾದೆ.[೨] ಹೇ ಪ್ರಣೋದಸುತನೇ, ಸರ್ವದೇವರುಗಳೂ ನಿನ್ನಲ್ಲಿದ್ದಾರೆ. ನೀನೇ ಆಹುತಿ ಕೊಡುವ ಮರ್ತ್ಯನಿಗೆ ಮಹಾಮನೋಗತವಾದ[೩] ಶಕ್ತಿಯಾಗಿದ್ದೀಯೆ.

೨. ಸ್ವವ್ಯವಸ್ಥಾಪಕ ಪ್ರಕೃತಿಯ ಒಡೆಯನೇ ನೀನು ಮುಮುಕ್ಷುವಿನ[೪] ಬಲವಾಗಿ ನಿಲ್ಲುವೆ.

---

೧. ಅನಂತ ಸತ್ಯದ ಸಾಗರಸಮ ವಿಸ್ತಾರವನ್ನೂ ಲೋಕೋತ್ತರ ನೈರ್ಮಲ್ಯವನ್ನೂ ಪ್ರತಿನಿಧಿಸುವ ವರುಣನೇ ಆ ಮರುಭೂಮಿಯು.

೨. ಮಿತ್ರನು ಸರ್ವಂಕಷನಾದ ಸತ್ಯಸಾಮಶ್ರುತ್ಯನಾದುದರಿಂದ ಮತ್ತು ಸರ್ವಜೀವಿ ಮಿತ್ರನಾದುದರಿಂದ ಪ್ರೇಮನಾಥನಾಗಿರುತ್ತಾನೆ.

೩. ನಮ್ಮ ಜೀವನ ರಾಜ್ಯದ ರಾಜನೂ ಸ್ವರ್‌ಪತಿಯೂ ಆದ ಇಂದ್ರನು ; ಸ್ವರ್ ಎಂಬುದು ದಿವ್ಯ ಮಾನಸದ ಪ್ರಕಾಶಮಯ ಪ್ರಪಂಚವು.

೪. ಪರಮಸತ್ಯವನ್ನಪೇಕ್ಷಿಸುವ ಮತ್ತು ಅದಕ್ಕಾಗಿ ಕರ್ಮ ಮಾಡುವ ಶಕ್ತಿ ಸ್ವರೂಪ ಅರ್ಯಮನ್ (ಪರಮಸತ್ಯದ ಮೇಲಿನ ಅಪೇಕ್ಷೆ ಪೂರ್ಣವಾಗುವುದು ಮುಕ್ತಿಯಲ್ಲಿ. ಆದುದರಿಂದ ಅವನು ಮುಮುಕ್ಷು- ಅನುವಾದಕ.)

ಯಾವಾಗ? ನೀನು (ಅನೂಡ ನಿಷ್ಕಲಂಕ) ದಿವ್ಯ ಕುಮಾರಿಯರ[೫] ಗುಪ್ತನಾಮವನ್ನು ಧರಿಸಿದಾಗ. ಒಡೆಯನನ್ನೂ ಒಡತಿಯನ್ನೂ[೬] ನೀನು ಅವರ ಮನೆಯಲ್ಲಿ ಒಮ್ಮನದವರನ್ನಾಗಿ ಮಾಡಿದಂದು, ಅವಳ ಕಣ್ಣಲ್ಲಿರುವ ಪ್ರೇಮ ಪ್ರಕಾಶವನ್ನು[೭] ಸಂಪೂರ್ಣ ದೃಢಬುನಾದಿಯುಳ್ಳದ್ದನ್ನಾಗಿ ಮಾಡುವೆ.

೩. ಎಲೈ ಹಿಂಸೋನ್ಮುಖನಾದ ದೇವನೇ ನಿನ್ನ ವೈಭವವನ್ನು ಮೆರೆಯಿಸಲಿಕ್ಕೆಂದು ನಿರ್ದಿಷ್ಟ ಮಹಾ ವಿಚಾರಗಳ ಮಹಾಶಕ್ತಿಗಳು ನಿನ್ನನ್ನು ತಮ್ಮ ಒತ್ತಡದಿಂದ ನಿನ್ನ ಸುಂದರವೂ, ಸಮೃದ್ಧವೂ ಆಗಿರುವಂಥ ಶ್ರೀಮದ್ರಮ್ಯ[೮] ಜನನವನ್ನು ತಮ್ಮ ಒತ್ತಾಸೆಯಿಂದ ಪ್ರಕಾಶಿಸುವಂತೆ ಮಾಡುತ್ತವೆ ಮತ್ತು ಅವನೊಳಗೆ ಆ ವಿಷ್ಣುವಿನ ಉನ್ನತತಮ ದಾಟು ಹೆಜ್ಜೆಯು[೯] ಪ್ರತಿಷ್ಠಾಪಿಸಲ್ಪಟ್ಟಾಗ, ಅದರಿಂದ ನೀನು ದಿವ್ಯ ವಿಕಿರಣದ[೧೦] ಗೋವ್ರಜಗಳ ಗುಪ್ತನಾಮವನ್ನು ರಕ್ಷಿಸುತ್ತೀಯ.

೪. ನಿನಗೆ ಸರಿಯಾದ ದರ್ಶನವಿರುವುದರಿಂದ, ಎಲೈ ದೇವತಾತತ್ವಾತ್ಮನೇ, ನಿನ್ನ ವಿಭವದಿಂದ ಗುಣಿತ ಸಂಖ್ಯಾತ ಸತ್ತಾರೂಢರಾದ ದೇವತೆಗಳು ಅಮರ್ತ್ಯತಾ ರಸವನ್ನು ಆಸ್ವಾದಿಸುತ್ತಾರೆ ಮತ್ತು ಹವಿರ್ದಾತೃ ಪ್ರಣೋದದ ಪೀಠದಲ್ಲಿ ನರರು ಕುಳಿತುಕೊಳ್ಳುತ್ತಾರೆ ಹಾಗೂ ಬಯಸುತ್ತಾ ತಮ್ಮ ಸತ್ತೆಯ ಸ್ವಾಭಿವ್ಯಕ್ತಿಯನ್ನು ದೇವತೆಗಳಿಗೆ ಹಂಚುತ್ತಾರೆ.

೫. ನಿನಗಿಂತ ಮೊದಲು ಆಹುತಿ ಹಾಕುವ ಅರ್ಚಕನಾವನೂ ಹುಟ್ಟಲಿಲ್ಲ. ಹಾಗೇ ಯಜ್ಞ ನಿರ್ವಾಹಕ್ಕೆ ನಿನಗಿಂತ ಬಲಿಷ್ಠನಾದ ಯಾವನೂ ಇಲ್ಲ ; ಎಲೈ ದಿವ್ಯ ಜ್ವಾಲೆಯೇ ಪರಾಪ್ರಕೃತಿಯ ಸ್ವವ್ಯವಸ್ಥಾಪಕ ಶಕ್ತಿಯನ್ನುಳ್ಳ ನಿನಗಿಂತ ಅಧಿಕತರ ದಿವ್ಯ ವಿವೇಕ ಸಂಪನ್ನನಾವನೂ ಇಲ್ಲ ನಿಸರ್ಗದ ಸ್ವನಿಯಾಮಕ ಶಕ್ತಿಯನ್ನು ಹೊಂದಿದ್ದೀಯೆ. ಓ ದೇವಾಧೀಶನೇ, ನೀನು ಯಾರಿಗೆ ಅತಿಥಿಯಾಗುವೆಯೋ ಆತನಿಗೆ (ಆ ಆತಿಥೇಯ ಪ್ರಾಣಿಗೆ), ಮರ್ತ್ಯತೆಗೆ ಸೇರಿದ ಎಲ್ಲದರ ಮೇಲೂ ಯಜ್ಞಬಲದಿಂದ ಪ್ರಭುತ್ವ ದೊರಕುತ್ತದೆ.

೬. ಹೇ ದಿವ್ಯಜ್ವಾಲಾಮಾಲಿಯೇ, ನಿನ್ನ ಪೋಷಣೆಗೊಳಪಟ್ಟ ಮತ್ತು ನಿನ್ನಿಂದ ಜಾಗರಿತರಾದ (ಸದ್) ದ್ರವ್ಯ ಸಾಧಕರು ಆಹುತಿಪ್ರಧಾನದಿಂದ ಮೇಲುಗೈಯವರಾಗುತ್ತಾರೆ - ಈ ಮಹಾ ಹೋರಾಟದಲ್ಲಿರುವ ನಾವು ನಮ್ಮ ದಿನಮಾನಗಳಲ್ಲಿ[೧೧] ಜ್ಞಾನಾಗಮನ ಮಟ್ಟದಲ್ಲಿರುವ ನಾವು -

---

೫ ಇವು ಬಹುಶಃ ಆತ್ಮದ ಉನ್ನತತರ ಶಕ್ತಿಯಲ್ಲಿ ಐಕ್ಯವಾಗಲೆಂದು ನಮ್ಮ ಮುಮುಕ್ಷುತ್ವವು ಸಿದ್ಧತೆ ಮಾಡಬೇಕಾದ ಅಪಕ್ವ ವಿಕಿರಣಗಳು. ಅರ್ಯಮನು ಅವುಗಳ ಗೂಢಾರ್ಥವನ್ನು ತಿಳಿದಿದ್ದಾನೆ. ನಾಮ ಯಾ ನ್ಯೂಮೆನ್ ಜ್ಞಾನ ಪ್ರಕಾಶದೆಡೆಗೆ ಮುಖಮಾಡಿ ಪ್ರಕಟವಾದಾಗ ಅದು ಬರುವುದು ಮತ್ತು ಮಿತ್ರನು ಜೀವಾತ್ಮನನ್ನು ನಿಸರ್ಗವನ್ನೂ ಸಾಮಶ್ರುತ್ಯಗೊಳಿಸುತ್ತಾನೆ.

೬ ಪರಮಾತ್ಮ ಮತ್ತು ಪರಾಪ್ರಕೃತಿ ; ನರದೇಹವೇ ಸೌಧವು.

೭. ಮಿತ್ರನು.

೮. ಜ್ಯೋತಿಸ್ತಮಲೋಕವು. ಇತರ ಕಡೆಗಳಲ್ಲಿ ದ್ಯುಮಲೋಕಗಳಲ್ಲಿ ಅಗ್ನಿಯು ಸತ್ತೆಯಲ್ಲಿ ಅತ್ಯುನ್ನತ ಲೋಕಸ್ವರೂಪನಾಗುವನೆಂದು ಹೇಳಲಾಗಿದೆ.

೯. ಮಹಾಜ್ಯೋತಿ. ಮಹಾಸತ್ಯ ಮತ್ತು ಮಹಾಸೂರ್ಯರು ಬುನಾದಿಯಾಗಿರುವರು. ಭೂ ಸ್ವರ್ಗ ಸರ್ವೋಚ್ಚ ಲೋಕಗಳೇ, ಆ ಬುನಾದಿಯು, ಈ ತ್ರಿಲೋಕಗಳೆಂದರೆ ವಿಷ್ಣುವಿನ ತ್ರಿಪಾದ ಚಿಹ್ನೆಗಳು.

೧೦. ಪರಂಜ್ಯೋತಿಯ ಅತಿಪ್ರಜ್ಞಾತ ಪ್ರಪಂಚದಲ್ಲಿ ಜ್ಞಾನಬೋಧೋಯಗಳ ಅತ್ಯುನ್ನತ ದಿವ್ಯಾರ್ಥವಿದೆ.

೧೧. ಜೀವಾತ್ಮನಿಗೆ ಪರಂಜ್ಯೋತಿಯು ಸಂದರ್ಶನವೀಯುವ ಕಾಲಾವಧಿಗಳು.

ಹೇ ಪ್ರಣೋದ ಪುತ್ರನೇ, ಸುಖ ಸೌಕರ್ಯಗಳಿಂದ ನಾವು - ಮರ್ತ್ಯವೆಲ್ಲವನ್ನೂ ದಾಟಿ ಮುನ್ನಡೆಯುತ್ತೇವೆ.

೭. ಪಾಪವನ್ನೂ ನಮಗಂಟಿಸಲೆಳಸುವ ಹಾಗೂ ದುಷ್ಟತೆಯನ್ನು ವ್ಯಕ್ತಪಡಿಸಬಯಸುವ ಮತ್ತು ನಮ್ಮೊಳಗೆ ಗಡಿಮೀರಿ ಬಲಾತ್ಕಾರದಿಂದ ನುಗ್ಗಲು ಬಯಸುವ ಜೀವವನ್ನು ಹಿಡಿದು ನೀನು ಅದರ ದೌಷ್ಟ್ಯವನ್ನು ಅದರ ತಲೆಯ ಮೇಲೇ ತಿರುಗಿ ಹೇರು ; ಓ ಪ್ರಜ್ಞಾತ ಜ್ಞಾನಿಯೇ, ದ್ವೈತದ ಒತ್ತಡಕ್ಕೆ ತುತ್ತುಮಾಡಿದ ಅದರ ಶತ್ರುತ್ವದ ಸ್ವಾಭಿವ್ಯಕ್ತಿಯನ್ನು ಕೊಂದುಹಾಕು.

೮. ಓ ಮಹಾದೇವ, ನಮ್ಮ ಪೂರ್ವಜರು[೧೨] ನಮ್ಮ ಈ ಬೆಳಗಾಗಲಿರುವ ಇರುಳಿನಲ್ಲಿ ನಿನ್ನನ್ನು ದೂತನನ್ನಾಗಿ ಮಾಡಿಕೊಂಡರು ; ಮತ್ತು ನೀನು ಈ ದ್ರವ್ಯದಲ್ಲಿ ಮರ್ತ್ಯ ನಿವಾಸಿಗಳಿಂದ ಹೊತ್ತಿಸಲ್ಪಟ್ಟವನಾದ ದೇವಾಧಿದೇವನಾಗಿರುವದರಿಂದ ನೀನು ಅವರ ಆಹುತಿಗಳಿಂದಲೇ ಯಜ್ಞ ಮಾಡಿದರೂ ಎಲ್ಲ ಸುಖ ಸೌಕರ್ಯಗಳೂ ಬಂದು ಒಂದೆಡೆಯಲ್ಲಿ ಸೇರುವ ಸ್ಥಳದತ್ತ[೧೩] ಚಲಿಸುವೆ.

೯. ಓ ಪ್ರಣೋದ ಪುತ್ರನೇ, ನಿನ್ನ ಮಗನಾಗಿ ನಮ್ಮಲ್ಲಿ ಗರ್ಭೀಕೃತನಾದ ನಮ್ಮ ತಂದೆಯನ್ನು ನಿನ್ನ ಜ್ಞಾನಬಲದಿಂದ ದುಷ್ಟ ಶಕ್ತಿಗಳಿಂದ ದೂರದಲ್ಲಿಡು. ಎಲೈ ಪ್ರಜ್ಞಾತ (ಜಾಗರಿತ ಪ್ರಜ್ಞನಾದ) ನೀನು ಯಾವಾಗ ಆ ದರ್ಶನವನ್ನು ನಮಗಾಗಿ ಹೊಂದುವೆ (ದಯಪಾಲಿಸುವೆ)? ಹೇ ಪರಮಸತ್ಯಪ್ರಜ್ಞ ಸಂಕಲ್ಪನೇ, ಆ ಮಹಾಭಿ-ನಿಷ್ಕ್ರಮಣಕ್ಕೆ ಯಾವಾಗ ನಮ್ಮನ್ನು ಪ್ರೇರಿಸುವೆ?

೧೦. ಹೇ ಸದ್ ದ್ರವ್ಯಸಾರಸ್ಥನೇ, ಅವನನ್ನು ನೀನು ಅದನ್ನು ಸ್ವೀಕರಿಸುವಂತೆ ಮಾಡಿದಾಗ ಆ ನಿನ್ನ ವಿಶಾಲ ನಾಮ[೧]ವನ್ನು ಒಪ್ಪಿಕೊಳ್ಳುವಂತೆ ಮಾಡುವೆ. ನಮ್ಮಲ್ಲಿರುವ ದಿವ್ಯ ಸಂಕಲ್ಪವು ಆನಂದವನ್ನು ಆಶಿಸುತ್ತದೆ ಮತ್ತು ವರ್ಧಮಾನವಾಗಿ ಅದು ದೇವತಾತತ್ವದ[೨] ಪ್ರಣೋದದಿಂದ ಸಂಪೂರ್ಣವಾಗಿ ಅದನ್ನು ಗೆದ್ದುಕೊಳ್ಳುತ್ತದೆ.

೧೧. ಹೇ ದಿವ್ಯ ಸಂಕಲ್ಪನೇ, ಓ ತರುಣತಮ ಉತ್ಸಾಹನೇ, ಆರಾಧಕನನ್ನು ಎಲ್ಲ ಎಡರು-ದುಃಖ-ದೌರ್ಜನ್ಯಗಳಿಂದಾಚೆಗೆ ಒಯ್ಯುವೆ. ಏಕೆಂದರೆ, ನಮ್ಮನ್ನು ಹಿಂಸಿಸುವ, ತಮ್ಮ ಹೃದಯದಲ್ಲಿ ಕಳ್ಳರಾದ, ಬ್ರಹ್ಮಜ್ಞಾನರಹಿತ ಪ್ರತ್ಯಕ್ಷಾನುಭವವುಳ್ಳ ಮತ್ತು ಆದ್ದರಿಂದಲೇ ಮೂರ್ಖತೆಗೆ ಇಳಿದ ಪ್ರಾಣಿಗಳನ್ನು ನೀನು ನೋಡುತ್ತಿರುವೆ.

೧೨. ಎಲೈ, ನಮ್ಮೀಯೆಲ್ಲಾ ಪ್ರವಾಸ ಚಲನಗಳೂ ನಿನ್ನತ್ತ ಮುಖ ಮಾಡಿವೆ. ನಮ್ಮರಿವಿನಲ್ಲಿಯ ದೌಷ್ಟ್ಯವು ನಮ್ಮಂತರಾತ್ಮದೆದುರಿಗೆ ಸಾರಿ ಹೇಳಲ್ಪಟ್ಟಿದೆ ; ಎಲೈ ಅಗ್ನಿಯೇ, ಈ ದಿವ್ಯ ಸಂಕಲ್ಪವು ವರ್ಧಮಾನವಾಗುತ್ತಿರುವಾಗ ನಮ್ಮ ಸ್ವಾಭಿಪ್ರಾಯ ಪ್ರಕಟನೆಯಲ್ಲಿ ಈ ದಿವ್ಯ ಸಂಕಲ್ಪವು ದ್ರೋಹ ಮಾಡಲಾರದು ; ಅದೆಂದೂ ನಮ್ಮ ಶತ್ರುಗಳ ಕೈಗೆ ನಮ್ಮನ್ನು ಒಪ್ಪಿಸದು. !

❖ ❖

---

೧೨. ಗುಪ್ತವಿವೇಕವನ್ನು ಕಂಡುಹಿಡಿದ ಪ್ರಾಚೀನ ದ್ರಷ್ಟಾರರು.

೧೩. ಪರಾಕಾಷ್ಠಾ ಪ್ರಪಂಚದ ದಿವ್ಯಸತ್ಯ ಮತ್ತು ದಿವ್ಯಾನಂದ.

೧. ದಿವ್ಯ ಸತ್ಯಲೋಕವನ್ನು ಬೃಹದ್ವಿಸ್ತಾರ ಅಥವಾ ವಿಶಾಲ ಅಥವಾ ವಿಸ್ತೃತತಮ ಸತ್ಯ ಎಂದೂ ಕರೆಯಲಾಗುತ್ತದೆ.

೨. ದೇವ=ಸರ್ವೋನ್ನತ ದೇವತೆ.

# ನಾಲ್ಕನೆಯ ಅಗ್ನಿ ಸೂಕ್ತ

## ದಿವ್ಯ ಸಂಕಲ್ಪನು, ಪುರೋಹಿತನು, ಯೋಧನು ಮತ್ತು ನಮ್ಮ ಪ್ರಯಾಣನಾಯಕನು.

[ಅಗ್ನಿಯು ಜೀವಾತ್ಮದ ಉತ್‌ಪಥೋನ್ಮುಖ ಸತ್ತಾಸ್ತರಗಳ ಉತ್ತರೋತ್ತರ ಜನ್ಮಗಳೆಲ್ಲವನ್ನೂ ಬಲ್ಲ ಮತ್ತು ಮರ್ತ್ಯನು ಅಮರ್ತ್ಯನಾಗಿ ಬೆಳೆಯಲು ಬೇಕಾದ ಆಧ್ಯಾತ್ಮಿಕ ಗೂಢ ಹೊಳೆಹುಗಳನ್ನೂ ಹೊಸ ರೂಪ ತಾಳುವ ಅದರ ಸುತ್ತ ಕೌಶಲವನ್ನೂ ಹೆಚ್ಚುತ್ತ ಹೋಗುವ ಶ್ರೇಯಃ ಸಂಪತ್ತನ್ನೂ ಸುಜ್ಞಾನವನ್ನೂ ಶಕ್ತಿಯನ್ನೂ, ಪಾವಿತ್ರ್ಯವನ್ನೂ, ಅದರ ಉನ್ಮುಖವೂ ಪುರೋಮುಖವೂ ಆದ ಗಮನ ಎನ್ನಿಸಿರುವ ಯಜ್ಞಕ್ಕೆ ಒದಗಿಸಿಕೊಡುವ ಪುರೋಹಿತನಾದ ದಿವ್ಯ ಪ್ರಣೋದನು ; ಶತ್ರುವನ್ನೂ ಎದುರುಜೀಳುವವನನ್ನೂ ದುಷ್ಟಶಕ್ತಿಯನ್ನೂ ಅವನು ನಾಶ ಮಾಡುತ್ತಾನೆ ; ಅವರೆಲ್ಲರೂ ಹಿಡಿದಿಟ್ಟುಕೊಳ್ಳಲು ಯತ್ನಿಸುವ ಎಲ್ಲ ಸಂಪತ್ತನ್ನೂ ಜೀವಾತ್ಮಕ್ಕೆ ಒಗಿಸಿಕೊಡುತ್ತಾನೆ. ತ್ರಿಪುಟ ಶಾಂತಿಯನ್ನೂ ಭೌತಿಕ-ಜೈವಿಕ-ಮಾನಸಿಕವೆಂಬ ತ್ರಿಪುಟ ಧ್ಯೇಯ ಪೂರಣವನ್ನೂ ಅವನು ಮಾಡುತ್ತಾನೆ ಮತ್ತು ಅತಿಮಾನಸ ಸತ್ಯದ ಬೆಳಕಿನಲ್ಲಿ ಕಷ್ಟಪಟ್ಟು ದುಡಿದು ಮರ್ತ್ಯಸ್ತರದಿಂದಾಚೆಗಿನ ಅಮರ್ತ್ಯಪ್ರಜ್ಞಾಸ್ತರಕ್ಕೆ ಜೀವಾತ್ಮಗಳಾದ ನಮ್ಮನ್ನು ಒಯ್ದು ನಮ್ಮಲ್ಲಿ ಅಮರ್ತ್ಯ ಸುಖ ಸೌಕರ್ಯ ಸ್ಥಿತಿಯನ್ನು ನಿರ್ಮಿಸುತ್ತಾನೆ.]

೧. ಜಗತ್‌ಸಾರ ಸರ್ವಸ್ವದ ದೊರೆಗಳ ಒಡೆಯನಾದ ಬಲಸ್ವರೂಪನೇ, ನನ್ನ ಯಜ್ಞಗಳ ಪುರೋಗಮನದಲ್ಲಿ ನಿನ್ನೆಡೆಗೆ ನನ್ನ ದಿವ್ಯಹರ್ಷವನ್ನು ನಿರ್ದೇಶಿಸುತ್ತೇನೆ. ಎಲೈ ರಾಜನೇ, ನಿನ್ನ ಅಪಾರ ಶ್ರೇಯಃ ಸಂಪತ್ತನ್ನು ಸಮೃದ್ಧಗೊಳಿಸುವ ಮೂಲಕ ನಿನ್ನಿಂದ ನಾವು ನಮ್ಮ ಸಮೃದ್ಧಿಯನ್ನು ಪಡೆಯುವಂತಾಗಲಿ, ಗೆದ್ದುಕೊಳ್ಳುವಂತಾಗಲಿ - ಮರ್ತ್ಯ ಶಕ್ತಿಗಳ ದಾಳಿಗಳನ್ನು ಹಿಮ್ಮೆಟ್ಟಿಸುವಂತಾಗಲಿ.

೨. ನಿತ್ಯಯೌವನಸ್ಥ ಬಲ ಸ್ವರೂಪದ ಅಗ್ನಿಯೇ, ಹವಿರ್ವಾಹಕನಾದ (ಹುತವಹನಾದ) ನೀನು ನಮ್ಮ ಅಪ್ಪನು. ನೀನು ನಮ್ಮ ಇರವನ್ನೆಲ್ಲಾ ವ್ಯಾಪಿಸಿದ್ದೀಯೆ ಮತ್ತು ಬೆಳಕಿನಲ್ಲಿ ವಿಸ್ತಾರವುಳ್ಳವನೂ ದರ್ಶನದಲ್ಲಿ ಪೂರ್ಣತೆಯುಳ್ಳವನೂ ಆಗಿದ್ದೀಯೆ. ನಿನ್ನ ಒತ್ತಡದ (ಪ್ರೇರಣೆಯ) ಎಲ್ಲ ಬಲಗಳನ್ನು ಹೊತ್ತಿಸು. ಅವೆಲ್ಲಾ ನಮ್ಮ ಮನೆಯಲ್ಲಿರುವ[೧] ಒಡೆಯನಿಗೆ ಸಂಪೂರ್ಣವಾಗಿ ಸೇರಿದಂಥವುಗಳು. ನಿನ್ನ ಜ್ಞಾನ ಸ್ಫೂರ್ತಿಗಳೆಲ್ಲವನ್ನೂ ರೂಪಿಸಿ ಅವುಗಳನ್ನು ನಮ್ಮೆಡೆಗೆ ತಿರುಗಿಸು.

---

೧. ಅಗ್ನಿ ಇಲ್ಲಿ ಸರ್ವೋಚ್ಚ ಸಂಕಲ್ಪನು ; ನಮ್ಮಲ್ಲಿ ಸದಾ ಇರುವಂಥವನು ; ನಮ್ಮ ತಂದೆಯೂ ಇರವಿನ ಒಡೆಯನೂ ಆಗಿದ್ದಾನೆ. ಅವನು ದಿವ್ಯ ಸಂಕಲ್ಪದಿಂದಲೇ ನಮ್ಮಲ್ಲಿ ಮತ್ತು ದಿವ್ಯಜ್ಞಾನದಿಂದಲೇ ಕೆಲಸ ಮಾಡಬೇಕು.

೩. ಅಗ್ನಿಯೇ ನೀನು ದಿವ್ಯ ಸಂಕಲ್ಪನು, ಅರ್ಥಾತ್ ದ್ರಷ್ಟಾರ ಮತ್ತು ಮಾನವ ಜನಾಂಗಗಳಲ್ಲಿ ಇರುವ ಪ್ರಾಣಿತ್ವದ ಒಡೆಯ. ನೀನು ಶುದ್ಧನು, ಶುದ್ಧಿಕರನು. ನಿನ್ನ ಮಾನಸ ಸ್ಪಷ್ಟತೆಗಳಿಂದ ಸರ್ವಜ್ಞ ಸ್ವರೂಪದ ಆ ದಿವ್ಯ ಸಂಕಲ್ಪವು ನಿನ್ನಲ್ಲಿ ಆಹುತಿಕೊಡುವ ಪುರೋಹಿತತ್ತ್ವವನ್ನು ಧಾರಣೆ ಮಾಡಿಸಿರುತ್ತದೆ. ಏಕೆಂದರೆ, ಆ ಸರ್ವಜ್ಞನ ಸಂಕಲ್ಪವೇ ದೇವತೆಗಳಿಂದ ನಿನ್ನ ಅಪೇಕ್ಷಿತ ವರಗಳನ್ನು ದೊರಕಿಸಿಕೊಡುತ್ತದೆ.

೪. ಅಗ್ನಿಯೇ, ಸತ್ಯದರ್ಶಿನಿಯಾದ ದೇವತೆಯೊಡನೆ[೨] ಹೃದಯದಲ್ಲಿ ಒಂದಾಗಿ ಬೆಳಕಿನ ಸೂರ್ಯನ ಕಿರಣಗಳೊಡನೆ ದುಡಿದು ಪ್ರೀತಿಯಿಂದ ನಮ್ಮನ್ನು ಅಪ್ಪಿಕೋ. ಓ ಬಲವಂತನೇ, ನಮ್ಮಲ್ಲಿರುವ ನಿನ್ನ ಇಂಧನವನ್ನು ಹಾರ್ದಿಕವಾಗಿ ಸ್ವೀಕರಿಸು. ಹೇ ಜಾತವೇದ, ನಮ್ಮ (ಯಜ್ಞದ) ಆಹುತಿಗಳನ್ನು ತಿನ್ನಲೆಂದು ನಮ್ಮಲ್ಲಿಗೆ ದೇವತೆಗಳನ್ನು ಕರೆದುಕೊಂಡು ಬಾ.

೫. ಬಾಗಿಲಿರುವ ನಮ್ಮ ಮನೆಯಲ್ಲಿ ಹಂಗಾಮಿಯಾಗಿ ನೆಲೆಸಿರುವ ನೀನು ನಾವೆಲ್ಲಾ ಸ್ವೀಕರಿಸಿದ ಪ್ರಿಯ ಅತಿಥಿಯು. ಆದುದರಿಂದ ನಿನ್ನ ಎಲ್ಲ ಜ್ಞಾನಭಂಡಾರದೊಡನೆ ನೀನು ನಮ್ಮ ಯಜ್ಞಕ್ಕೆ ಬಾ. (ಹೇ ಜಾತವೇದಸ್) ನಮಗಿದಿರು ಚೀಳುವ ಈ ಎಲ್ಲ ಕರ್ಮದೇವತೆಗಳನ್ನೂ (ಕ್ರಿಯಾಶಕ್ತಿಗಳನ್ನೂ) ಸಂಹರಿಸು ಮತ್ತು ನಮಗೆ ಹಗೆಗಳಾಗಿ[೩] ನಿಲ್ಲುವ ಇವರ ಸುಖವಸ್ತುಗಳೆಲ್ಲವನ್ನೂ (ಕಸಿದುಕೊಂಡು) ನಮಗೆ ತಂದುಕೊಡು.

೬. ವಿಭಾಜಕನನ್ನು (ಒಡೆದಾಳುವವನನ್ನು) ನೀನು ಬೆನ್ನಟ್ಟಿ ಹೋಗಿ ಓಡಿಸು. ನಿನ್ನ ಶರೀರಕ್ಕೆ ಮುಕ್ತ ಸ್ಥಲವನ್ನು ಮಾಡಿಕೋ! ಎಲೈ ಪ್ರಚೋದಜಾತನೇ, ನೀನು ದೇವತೆಗಳನ್ನು ಅವರ ಗುರಿಗಳನ್ನು[೪] ಮುಟ್ಟಿಸಲು ಒಯ್ಯುವಾಗ ಹೇ ಬಲಿಯೇ, ನಮ್ಮ ಅಪಾರ, ಶ್ರೇಯಃ ಸಮೃದ್ಧಿಯ ಒಡೆಯತನವನ್ನು ರಕ್ಷಿಸು.

೭. ನಿನಗಾಗಿ ನಮ್ಮ ಮಂತ್ರ-ಹವಿರ್ಭಾಗಗಳಿಂದ ನಾವು ನಮ್ಮ ಯಜ್ಞವನ್ನು ಸರಿಯಾಗಿ ವ್ಯವಸ್ಥೆ ಮಾಡುವಂತಾಗಲಿ. ಶುದ್ಧೀಕರಿಸುವ ದಿವ್ಯ ಸಂಕಲ್ಪನೇ, ಹೇ ಶುದ್ಧ ಜ್ವಾಲಾ ಸ್ವರೂಪನೇ, ನಮ್ಮಲ್ಲಿ ಸರ್ವ ಅಪೇಕ್ಷಣೀಯ ವರಗಳನ್ನೂ ವ್ಯಾಪಕವಾಗಿ ನೆಲೆನಿಲ್ಲುವಂತೆ ಮಾಡು ; ನಮ್ಮಲ್ಲಿ ನಮ್ಮೆಲ್ಲ ಸಂಪತ್ತುಗಳ ಸಾರವನ್ನೂ ದೃಢೀಕರಿಸು.

೮. ಹೇ ಮಹಾಸಂಕಲ್ಪಶಕ್ತಿಯೇ, ಹೇ ಪ್ರಚೋದ ಸೂನುವೇ, ನಮ್ಮ ಯಜ್ಞಾಧಿವೇಶನದ ಜಗತ್‌ತ್ರಯದಲ್ಲೂ[೫] ನೀನು ವಾಸಿಸಿರುವೆ ; ನೀನು ನಮ್ಮ ಆಹುತಿಗಳಿಗಂಟಿಕೋ. ದೇವತ್ವದಲ್ಲಿ

---

೨. ಇಳಾದೇವಿ.

೩. ಮಾನವನ ಆತ್ಮವನ್ನು ಎದುರಿಸುವ ಶತ್ರುಶಕ್ತಿಗಳೆಲ್ಲವುಗಳ ಹತ್ತಿರವೂ ಕೆಲವು ಸಂಪತ್ತುಗಳಿರುತ್ತವೆ. ಅವು ಅವನಿಗೆ ಬೇಕಾದಂಥವುಗಳು. ತನ್ನ ಪೂರ್ಣಶ್ರೇಯಃ ಸಮೃದ್ಧಿಯನ್ನು ಪಡೆಯಲು ಅವನಿಗವು ಅಗತ್ಯವಾದುದರಿಂದ ಅವುಗಳನ್ನು ಆ ಶತ್ರು ಶಕ್ತಿಗಳಿಂದ ಕಸಿದುಕೊಂಡು ಬರಬೇಕಾಗಿದೆ.

೪. ಮಾನವನಲ್ಲಿ ಕೆಲಸ ಮಾಡುತ್ತಿರುವ ದೈವ ಸಂಕಲ್ಪ ಬಲವುಳ್ಳ ಪರಮಸತ್ಯದ ಹಾಗೂ ಪರಮಾನಂದದ ಗುರಿಗೆ ನಮ್ಮಲ್ಲಿರುವ ದಿವ್ಯಶಕ್ತಿಗಳು ಒಯ್ಯಲ್ಪಡುತ್ತವೆ.

೫. ಮಾನಸ, ಜೈವಿಕ, ಭೌತಿಕ ಎಂಬ ಮೂರು ಕೆಳ (ನೀಚ) ಜನ್ಮಗಳು. ಇವೆಲ್ಲವುಗಳ ಜ್ಞಾನವನ್ನೂ ನಮ್ಮೆಲ್ಲರ ಜನ್ಮಜ್ಞನಾದ ದಿವ್ಯ ಸಂಕಲ್ಪರೂಪನು ಅರಿತಿದ್ದಾನೆ. - ಆ ಮೂಲಕ ಆತನು ಏರುತ್ತಿರುವ ಯಜ್ಞವನ್ನು ಅತಿಮಾನಸಕ್ಕೊಯ್ಯಬೇಕು.

ತ್ರಿಪುಟಶಸ್ತ್ರ ಸಜ್ಜಿತವಾದ ನಿನ್ನ ಶಾಂತಿಯ ಮೂಲಕ ನಮ್ಮ ಕಾರ್ಯ ಮಾಡುವುದರಲ್ಲಿ ನಾವೂ ಪರಿಪೂರ್ಣರಾಗುವಂತಾಗಲಿ. ತ್ರಿಧಾ ಶಸ್ತ್ರ ಸಜ್ಜಿತನಾದ[೬] ನೀನು ನಮ್ಮನ್ನು ಕಾಪಾಡು.

೯. ಹೇ ಜನ್ಮಜ್ಞನೇ(ಜಾತವೇದಸ್ಸೇ) ಪ್ರತಿಯೊಂದು ಕಠಿನ ತಿರುವುಗಳನ್ನೂ ದಾಟುವಲ್ಲಿ ನಮ್ಮನ್ನು ಹೆಗಲೇರಿಸಿಕೋ. ಹೌದು. ನೀರ ಮೇಲೆ ನಮ್ಮನ್ನು ದಾಟಿಸಿ ಒಯ್ಯುವ ಹಡಗಿನಂತೆ ದೌಷ್ಟ್ಯದಲ್ಲಿ ಜೀಳದಂತೆ ನಮ್ಮನ್ನು ಹೊತ್ತುಕೊಂಡು ಒಯ್ಯು. ಎಲೈ ದಿವ್ಯ ಸಂಕಲ್ಪನೇ, ನೀನು ಸರ್ವವಸ್ತುಭಕ್ಷಕನೆಂಬುದನ್ನು ನಮ್ಮ ಶರಣಾಗತಿಯ ನಮನದ ಮೂಲಕ ನಾವು (ಆಗಲೇ) ಹೇಳಿದ್ದರಿಂದ ನಮ್ಮಲ್ಲಿ ನೀನು ಜಾಗರಿತನಾಗು - ನಮ್ಮ ಜೀವಾತ್ಮದ ತ್ರಿಪುಟ ಶರೀರ ಧಾರಣೆಯನ್ನು[೭] ನೀನು ಪೋಷಿಸುವವನಾಗು.

೧೦. ಯಜ್ಞ ಕರ್ಮಿಯಾದ ನನ್ನ ಹೃದಯದೊಡನೆ ನಾನು ನಿನ್ನನ್ನು ಧ್ಯಾನಿಸುತ್ತೇನೆ; ಮತ್ತು ಮರ್ತ್ಯನಾದ ನಾನು ಅಮರ್ತ್ಯನಾದ ನಿನ್ನನ್ನು ಆಮಂತ್ರಿಸುತ್ತೇನೆ. ಎಲೈ ದಿವ್ಯ ಸಂಕಲ್ಪನೇ, ಓ ಜನ್ಮಜ್ಞನೇ (ಜಾತವೇದನೇ), ನಮ್ಮಲ್ಲಿ ಜಯವನ್ನು ದೃಢೀಕರಿಸು, ನೆಲೆಗೊಳಿಸು, ಸ್ಥಿರಪಡಿಸು. ನನ್ನ ಯಜ್ಞಕರ್ಮಜಾತರಿಂದ ನಾನು ಅಮರ್ತ್ಯತೆಯನ್ನು, ಅಮರತ್ವವನ್ನು (ಅಮೃತತ್ವವನ್ನು) ಸವಿಯುವಂತಾಗಲಿ.

೧೧. ಹೇ ಜಾತವೇದಸ್, ಜನ್ಮಜ್ಞನೇ, ತನ್ನ ಯಜ್ಞಕರ್ಮಗಳಲ್ಲಿ ಪೂರ್ಣತೆ ಹೊಂದಿದವನಿಗಾಗಿ ನೀನು ಆ ಇನ್ನೊಂದು ಆನಂದಮಯ ಪ್ರಪಂಚವನ್ನು[೮] ನಿರ್ಮಿಸುವೆಯಲ್ಲಾ - ಆ ಮನುಷ್ಯನು ತನ್ನ ಜೀವನದ ವೇಗದಿಂದ, ಚುರುಕುತನದ ಚಟುವಟಿಕೆಗಳಿಂದ, ತುಂಬಿದ (ಬಂಧುವರ್ಗದವರಂತೆ ತುಂಬಿದ) ಸುಖದ ನೆಲೆಯನ್ನು ಮುಟ್ಟುತ್ತಾನೆ - ಆ ವರ್ಗವೇ ಅವನ ಬೆಳಕಿನ ದಿವ್ಯ ಜ್ಯೋತಿಯ, ಹಸುವಿಂಡುಗಳು, ಅವನ ಜೀವಾತ್ಮದ ಮಕ್ಕಳು - ಅವನ ಕ್ರಿಯಾಶಕ್ತಿಯ ಸೈನ್ಯಗಳು.[೯]



೬. ಮಾನಸ, ಜೈವಿಕ ಮತ್ತು ಭೌತಿಕ (ಶಾರೀರಿಕ) ಇರವಿನಲ್ಲಿ ಇರುವ ಪೂರ್ಣಶಾಂತಿ, ಸಂತೋಷ ಮತ್ತು ತೃಪ್ತಿ.

೭. ಭೌತ ಶರೀರವಲ್ಲದೆ ಜೈವಿಕ - ಮಾನಸ ಕೋಶಗಳೆಂಬ ಸಕಾಯಾವಸ್ಥೆಗಳಲ್ಲಿ ಯಾ ಜೀವಾತ್ಮನ ರೂಪಗಳಲ್ಲಿ.

೮. ಸತತವಾದ ವಿಸ್ತರಣ ಕ್ರಿಯೆಯಿಂದಲೂ ಸ್ವಪರಿಪೂರ್ಣಕ್ರಿಯೆಯಿಂದಲೂ ಜನನೀಯವಾಗ ತಕ್ಕ ರೂಪದಲ್ಲಿ ದಿವ್ಯ ಸಂಕಲ್ಪದಿಂದ ನಮ್ಮಲ್ಲಿ ಅತಿಮಾನಸ ಪ್ರಪಂಚವು ನಿರ್ಮಿತವಾಗಬೇಕಾಗಿದೆ.

೯. ವೇದದಲ್ಲಿ ಸತತವಾಗಿ ಬರುವ ಸಂಕೇತಗಳೆಂದರೆ ಕುದುರೆ, ಮಗ, ಹಸು, ವೀರ -ಎಂಬೀ ನಾಲ್ಕು. ಮಗಂದಿರು ಯಾ ಮಕ್ಕಳು ಎಂಬುವರು ದಿವ್ಯವ್ಯಕ್ತಿತ್ವವನ್ನು ರೂಪಿಸಿಕೊಡುವ ಹೊಸ ಜೀವಾತ್ಮಾಕೃತಿ ರಚನೆಗಳು. ನಮ್ಮಲ್ಲೆ ಸಂಭವಿಸುವ ನೂತನ ಜನ್ಮಗಳು. ವೀರರೆಂದರೆ ನಮ್ಮ ಮಾನಸ ಮತ್ತು ನೈತಿಕ ಕ್ರಿಯಾಶಕ್ತಿಗಳು- ಅವು ಅಜ್ಞಾನ, ಬೇದ (ವಿಭಜನೆ), ಕೇಡು ಮತ್ತು ಸುಳ್ಳುಗಳ ದಾಳಿಯನ್ನು ತಡೆಯುತ್ತವೆ, ಪ್ರತಿಭಟಿಸುತ್ತವೆ. ಜೈವಿಕ ಸೇನೆಗಳು (ಬಲಗಳು) ನಮ್ಮ ದಿವ್ಯ ಪ್ರಯಾಣದಲ್ಲಿ ನಮ್ಮನ್ನು ಹೊತ್ತು ಸಾಗಿಸುವ ಕ್ರಿಯಾಶಕ್ತಿಗಳು ; ಮತ್ತು ಆ ಕಾರಣದಿಂದ ಅವುಗಳನ್ನು ಅಶ್ವದಿಂದ ಸಂಕೇತಿಸಲಾಗಿದೆ. ಹಿಂಡುಗಳೋ ತಂಡಗಳೋ-ಅತಿಮಾನಸ ಸತ್ಯದಿಂದ ಹೊರಬಂದ ಪ್ರಕಾಶಾಂಶುಗಳು-ಪ್ರಕಾಶ ಸ್ವರೂಪದ (ಜ್ಞಾನ ಸ್ವರೂಪದ) ಸೂರ್ಯನಿಂದ ಬಂದು ಗುಂಪುಗುಂಪಾಗಿ ನಿಲ್ಲುವ ಕಿರಣಗಳು - ಬೆಳಕಿನ (ಪ್ರಕಾಶದ) ಸರಳುಗಳು.

# ಐದನೆಯ ಅಗ್ನಿ ಸೂಕ್ತ

## ದೇವತಾಹ್ವಾನದ ಸೂಕ್ತ

[ಈ ಸೂಕ್ತವು ದಿವ್ಯಜ್ವಾಲೆಯ ಮೂಲಕ ಮುಖ್ಯ ದೇವತೆಗಳನ್ನು ಯಜ್ಞಕ್ಕೆ ಆಹ್ವಾನಿಸುತ್ತದೆ. ಆ ಪಾತ್ರತೆಯಿಂದಲೇ ಪ್ರತಿ ದೇವತೆಯೂ ಆಮಂತ್ರಿಸಲ್ಪಡುತ್ತದೆ. ಆ ಪಾತ್ರತ್ವವು ಆಯಾ ದೇವತೆಯ ಕರ್ತವ್ಯ ಮತ್ತು ಅಗತ್ಯವನ್ನು ಅವಲಂಬಿಸಿದೆ - ಅಲ್ಲದೆ, ಜೀವಾತ್ಮನ ಪೂರ್ಣತ್ವ ಸಿದ್ಧಿಗೆ ನೆರವು ನೀಡುವುದನ್ನೂ ಅದರ ದಿವ್ಯತಾಭಿವೃದ್ಧಿ ಹಾಗೂ ದಿವ್ಯತಾಸಿದ್ಧಿಗೆ ಸಾಧನವಾಗುವ ಯೋಗ್ಯತೆಯನ್ನು ಆಧರಿಸಿದೆ.]

೧. ಸರ್ವಜನ್ಮಜ್ಞನಾದ ದಿವ್ಯ ಸಂಕಲ್ಪ ಸ್ವರೂಪದ, ಚೆನ್ನಾಗಿ ಹೊತ್ತಿಸಿದ, ಶುದ್ಧವಾಗಿ ಹೊಳೆವ ಜ್ವಾಲೆಗೆ ಹೃದಯ ವಿದ್ರಾವಕ ಸ್ಪಷ್ಟತೆಯನ್ನು ಸಮರ್ಪಿಸು.

೨. ಈ ಜ್ವಾಲಾ ಸ್ವರೂಪನು ದೇವತೆಗಳ ಶಕ್ತಿಗಳನ್ನು ವ್ಯಕ್ತ ಮಾಡುವಾತನು ; ಈತನು ಅದಮ್ಯನು ; ಇವನು ಸಂಕಲ್ಪದ ಮಾರ್ಗದಲ್ಲಿ ನಮ್ಮ ಈ ಯಜ್ಞವನ್ನು ಸಾಗಿಸಿಕೊಂಡು ಹೋಗುವವನು - ಈತನು ತನ್ನ ಕೈಗಳಲ್ಲಿ ಮಾಧುರ್ಯಮಧ್ಯವನ್ನು ಹಿಡಿದುಕೊಂಡು ಬರುವ ದ್ರಷ್ಟಾರನು.

೩. ಎಲೈ ಬಲಾತ್ಮಕನೇ, ನಮ್ಮ ಆರಾಧನೆಯಿಂದ ನಿನ್ನನ್ನು ಬಯಸಿ ಹುಡುಕುತ್ತಿದ್ದೇವೆ ; ನಮ್ಮ ಸಮಭಿವೃದ್ಧಿಗಾಗಿ ತನ್ನ ಸುಖಾವಹ ರಥಗಳಲ್ಲಿ[೧] ರಾರಾಜಿಸುತ್ತಾ ಪ್ರೀತಿ ಪಾತ್ರನಾಗಿ ದೇವ ಮಾನಸವು[೨] ಇಲ್ಲಿಗೆ ಬರುವಂತೆ ಮಾಡು.

೪. ನಿನ್ನನ್ನು ನೀನು ವಿಶಾಲವಾಗಿ ಹರಹಿಕೋ[೩] ; ಮೃದುವಾಗಿ, ದಪ್ಪವಾಗಿ, ಹೊಡೆದುಕೋ. ನಮ್ಮ ಪ್ರಬೋಧ ಧ್ವನಿಗಳನ್ನು ನಿನ್ನತ್ತ ಹಗುರವಾಗಿ ಹೋಗುವಂತೆ ಮಾಡು. ನೀನು ನಮ್ಮಲ್ಲಿ ಶುಕ್ಲನೂ, ಶುಚಿಯೂ ಆಗಿ ನಮಗೆ ಗಮ್ಯನಾಗಿ ಬಾ.

---

೧. ರಥಗಳಲ್ಲಿ ಎಂದು ಬಹುವಚನದಲ್ಲಿ ಹೇಳಿರುವುದು ತನ್ನ ಪೂರ್ಣತೆಯಲ್ಲಿರುವ ದಿವ್ಯ ಮಾನಸದ ಬಹುತೆರನಾದ ಚಲನೆಯನ್ನು ಸೂಚಿಸುವುದಕ್ಕಾಗಿ.

೨. ಇಂದ್ರನು.

೩. ಈ ಪದ್ಯವು ಇಂದ್ರನನ್ನು ಸಂಬೋಧಿಸಿ ಬರೆದದ್ದು. ಇಂದ್ರನು ದಿವ್ಯಮಾನಸದ ಶಕ್ತಿಯು. ಅತಿಮಾನಸ ಸತ್ಯದ ಪ್ರಬೋಧವು ಅವನ ಮೂಲಕವೇ ಪ್ರಕಟವಾಗುತ್ತದೆ. ಈ ಜ್ಯೋತಿರ್‌ದಾತನ ಮುನ್ನುಗ್ಗುವ ರಥಗಳಿಂದಲೇ ನಾವು ನಮ್ಮ ದಿವ್ಯ ಆಸ್ತಿಯನ್ನು ಪಡೆಯುವೆವು.

೫. ಹೇ ಅಗ್ನೇ,[೪] ದಿವ್ಯದ್ವಾರವನ್ನು ಜೀಸಿತೆಗೆ ; ನಮ್ಮ ವಿಕಾಸಕ್ಕೆ (ವಿಸ್ತರಣಕ್ಕೆ) ಸುಲಭ ಮಾರ್ಗವನ್ನು ತೋರಿಸಿಕೊಡು ; ನಮ್ಮನ್ನು ದೂರ ಒಯ್ಯು - ನಮ್ಮ ಯಜ್ಞವನ್ನು ತುಂಬಿಕೋ.

೬. ನಮ್ಮ ವಿಸ್ತಾರವಾದ ಇರವನ್ನು ಮತ್ತಷ್ಟು ವಿಸ್ತರಿಸುವ ಮತ್ತು ಸಾಕಷ್ಟು ಚೆನ್ನಾಗಿ ನಮ್ಮೆದುರಿರುವ ಪರಮಸತ್ಯದ ಮಹಾಬಲಿನಿಯರಾದ ಇರುಳು ಮತ್ತು ನಸುಕು[೫] (ಮುಂಬೆಳಗು) ಎಂಬ ತಾಯಂದಿರನ್ನು ನಾವು ಬಯಸುತ್ತೇವೆ.

೭. ಮತ್ತು ಎಲೈ ದಿವ್ಯ ಅರ್ಚಕರೇ, ಹೇ ಆರಾಧಿತ ಯಮಳರೇ ಈ ನಮ್ಮ ಯಜ್ಞಕ್ಕೆ ಪ್ರಾಣವಾಯುಮಾರ್ಗವನ್ನು ಹಿಡಿದು, ಬನ್ನಿರಿ.

೮. ಎಡಹದ[೬], ಆನಂದ ಜನನಿಯರಾದ, ಜ್ಞಾನದರ್ಶನ-ಜ್ಞಾನಸ್ಫೂರ್ತಿ-ಜ್ಞಾನವಿಸ್ತಾರಗಳಿಗೆ ಅಧಿದೇವತೆಯರಾದ ಮೂವರು ದೇವಿಯರು[೭] ಯಜ್ಞದ ವೇದಿಕೆಯ ದರ್ಭಾಸ್ತರಣಾಸನಗಳನ್ನು ಅಲಂಕರಿಸಲಿ.

೯. ಹೇ ವಸ್ತು ಪ್ರಷ್ಟಾರನೇ[೮], ಉದಾರನೇ, ನಮ್ಮಲ್ಲಿಗೆ ಬಾ ; ನಿನ್ನ ಸತ್ತೆಯಲ್ಲಿ ನೀನು ಸರ್ವವ್ಯಾಪಿಯಾಗಿದ್ದೀಯೆ. ನಿನ್ನ ಸರ್ವಪೋಷಕತ್ವದಲ್ಲಿ ಮತ್ತು ನಿನ್ನಲ್ಲಿ[೯] ಉತ್ತರೋತ್ತರ ಕಾಲೀನ ಯಜ್ಞಗಳಲ್ಲಿ ನಮ್ಮ ಮೇಲೇರಿಕೆಯನ್ನು (ಉತ್ತರಣವನ್ನು) ಬಲಪಡಿಸು.

---

೪. ಮಾನವನ (ಶಾಸ್ತ್ರೋಕ್ತ) ದುಡಿಮೆ ಮತ್ತು ದೇವೋನ್ಮುಖವಾದ ಮಹಾಕಾಂಕ್ಷೆಗಳೇ ಅವನು ಮಾಡುವ ಯಜ್ಞವು. ಇದನ್ನು ಗುಪ್ತವಾಗಿಟ್ಟ ಸ್ವರ್ಗೀಯ ರಾಜ್ಯಗಳ ತೆರೆವಾಗಿಲ ಮೂಲಕ ಪಯಣ ಮಾಡುವುದೆಂದು ಅಲಂಕಾರಿಕವಾಗಿ ಹೇಳಲಾಗಿದೆ. ವಿಕಾಸಶೀಲನಾದ ಜೀವಾತ್ಮನು ಉಕ್ತ ರಾಜ್ಯಗಳನ್ನು ಒಂದಾದ ಮೇಲೊಂದರಂತೆ ಗೆದ್ದುಕೊಳ್ಳುತ್ತಾ ಹೋಗುವನು.

೫. ನಮ್ಮ ರಾತ್ರಿ ಮತ್ತು ಹಗಲುಗಳು ಅನುಕ್ರಮವಾಗಿ ಒಂದಾದ ಮೇಲೊಂದರಂತೆ ಮತ್ತೆ ಮತ್ತೆ ಉದಯಾಸ್ತ ಹೊಂದುವ (ಬಂದು ಹೋಗುವ) ದಿವ್ಯ ಹಾಗೂ ಮಾನುಷ ಪ್ರಜ್ಞೆಗಳ ಸಂಕೇತಗಳು. ನಸುಕು (ಉಷೆ) ನಮ್ಮ ಪ್ರಜ್ಞಾತ ಇರವಿಗೆ ತರುವ ಎಲ್ಲವನ್ನೂ ನಮ್ಮ ಸಾಮಾನ್ಯ ಪ್ರಜ್ಞೆಯ (ವ್ಯಾವಹಾರಿಕ ಪ್ರಜ್ಞೆಯ) ಇರುಳು ಹಿಡಿದಿಟ್ಟುಕೊಂಡು ಸಜ್ಜುಗೊಳಿಸುತ್ತದೆ.

೬. ಅಥವಾ ಯಾರು ಅದೃಷ್ಟರೋ ಅವರು - ನಮ್ಮ ನರಳಾಟಕ್ಕೆ ಕಾರಣಗಳಾದ ಅಜ್ಞಾನ-ಅಂಧಕಾರಗಳಿಗೆ ಅದೃಶ್ಯರಾಗಿರುವವರು.

೭. ಇಳೆ, ಸರಸ್ವತಿ, ಮಹಿ ; ಅವರ ಕರ್ತವ್ಯಗಳನ್ನು ತಿಳಿಸಲು ಅವರ ಹೆಸರುಗಳನ್ನು ಅನುವಾದಿಸಲಾಗಿದೆ.

೮. ತ್ವಷ್ಟೃ ಯಾ ತ್ವಷ್ಟಾರನು.

೯. ವಸ್ತು ಪ್ರಷ್ಟವಾದ ದೇವಾಧಿದೇವನು ತಾನು ಸೃಷ್ಟಿಸಿದ್ದನ್ನೆಲ್ಲಾ ತನ್ನ ಅವಿಕಾರ್ಯ ಸ್ವಸತ್ತೆಯಿಂದಲೂ ವಿಕಾರ್ಯ ಸ್ವಾಸ್ತಿತ್ವದಿಂದಲೂ ವ್ಯಾಪಿಸುತ್ತಾನೆ. ಅದರಿಂದ ಜೀವಾತ್ಮನು ಬೆಳೆಯುವಂತೆ ತೋರುತ್ತಾನೆ-ಹಾಗೆ ಬೆಳೆದು ಹೊಸ ಆಕಾರಗಳನ್ನು ಧರಿಸುವಂತೆ ಕಾಣುತ್ತಾನೆ. ಮೊದಲನೆಯದರಿಂದ ದೇವಾಧಿದೇವನು ಅಂತರ್ಯಾಮಿಯಾದ ಸರ್ವೇಶ್ವರ ಮತ್ತು ಸೃಷ್ಟಿಕರ್ತ ಎನ್ನಿಸಿದರೆ, ಎರಡನೆಯದರಿಂದ ತನ್ನ ಕಾರ್ಯಗಳ (ಸೃಷ್ಟವಸ್ತುಗಳ) ದ್ರವ್ಯವೆಂದೂ ಎನ್ನಿಸುತ್ತಾನೆ, ಉಪಾದಾನ ಕಾರಣವೆಂದೂ ತೋರುತ್ತಾನೆ.

೧೦. ಓ ದಿವ್ಯಾನಂದನಾಥನೇ,[೧೦] ದೇವರುಗಳ ಗುಪ್ತನಾಮಗಳನ್ನು ಎಲ್ಲಿ ನೀನು ತಿಳಿದೆಯೋ ಆ ನಮ್ಮ ಗುರಿಗೆ[೧೧] ನಮ್ಮ ಹವಿರ್ಭಾಗಗಳು ಹೋಗುವಂತೆ ದಾರಿದೋರು.

೧೧. ದಿವ್ಯ ಸಂಕಲ್ಪಕ್ಕೆ ಮತ್ತು ಅನಂತ ವಿಸ್ತಾರದ ಅಧಿಪತಿಗೆ[೧೨] ಸ್ವಾಹಾಕಾರವು; ದೇವಮಾನಸಕ್ಕೆ, ದಿವ್ಯ ವಿಚಾರ ಶಕ್ತಿಗೆ[೧೩] ಸ್ವಾಹಾಕಾರವು ; ನಾವೀವ ಆಹುತಿ ಸ್ವರೂಪದ ಆಹಾರವು ದೇವತಾತತ್ವಗಳಿಗೆ ಸ್ವಾಹಾಕಾರವಾಗಲಿ.[೧೪]



೧೦. ಸೋಮನು

೧೧. ದಿವ್ಯ ಮುಕ್ತ ಸ್ಥಿತಿಯಾದ ಆನಂದ ; ಅದರಲ್ಲಿ ನಮ್ಮ ಇರವಿನ ಎಲ್ಲ ಶಕ್ತಿಗಳೂ ಅನಾವೃತವಾಗುತ್ತವೆ - ತಮ್ಮ ಪರಿಪೂರ್ಣ ದೇವತಾತ್ವದಲ್ಲಿ ರಾರಾಜಿಸುತ್ತವೆ. ಇಲ್ಲಿ ಅವೆಲ್ಲಾ ರಹಸ್ಯಮಯವೂ ನಮ್ಮಿಂದ (ನಮಗೆ ಗೊತ್ತಾಗದಂತೆ) ಅಡಗಿರುವುವೂ ಆಗಿರುತ್ತಿದ್ದವು.

೧೨. ವರುಣನು.

೧೩. ಮರುತ್ತುಗಳು = ನಮ್ಮ ಇರವಿನ ನಾಡೀಯ ಯಾ ಜೈವಿಕ ಶಕ್ತಿಗಳು. ಇವು ವಿಚಾರದಲ್ಲಿ ಜಾಗರಿತ ಅಭಿವ್ಯಕ್ತಿಯನ್ನು ಪಡೆಯುತ್ತವೆ - ಮತ್ತು ಇಂದ್ರನನ್ನು ಕುರಿತು ಹಾಡಿದ ಸೂಕ್ತಕಾರರಲ್ಲಿ ಅವನನ್ನು ಪಡೆಯುತ್ತವೆ ; ಅವನಾದರೋ ದೇವಮಾನಸ ಸ್ವರೂಪನು.

೧೪. ಅಂದರೆ, ದಿವ್ಯಜೀವನಕ್ಕೆ ನಾವು ಸಮರ್ಪಿಸಿದ ನಮ್ಮಲ್ಲಿರುವ ಎಲ್ಲವೂ ದಿವ್ಯ ಪ್ರಕೃತಿಯ ಸ್ವಪ್ರಕಾಶ ಮತ್ತು ಸ್ವ ಪ್ರಚೋದಗಳಾಗಿ ಪರಿಣಮಿಸಲಿ.

# ಆರನೆಯ ಅಗ್ನಿ ಸೂಕ್ತ

## ಪ್ರಯಾಣದ ನಾಗಾಲೋಟದ ಜ್ವಾಲಾಶಕ್ತಿಗಳು

[ದಿವ್ಯ ಸಂಕಲ್ಪದ ಸ್ವರೂಪವುಳ್ಳ ಅಗ್ನಿಯ ಜ್ವಾಲೆಗಳು ನಮ್ಮ ವರ್ಧಮಾನವೂ ಮುಂಜಿಗಿಯುವವುಗಳೂ ಆದ ಜೀವ-ಶಕ್ತಿಗಳ ಮನೆ ಮತ್ತು ಸಂಧಿಸುವ ಸ್ಥಲ. ಅವನ್ನು ಮಹೋನ್ನತ ಸೌಜನ್ಯ ಸತ್ವದೆಡೆಗೆ ನಾಗಾಲೋಟದಿಂದ ಓಡುವಂಥವುಗಳೆಂದು ಊಹಿಸಲಾಗಿದೆ. ದಿವ್ಯ ಸಂಕಲ್ಪವು ನಮ್ಮಲ್ಲಿ ಪ್ರೇರಣಾತ್ಮಕ ದಿವ್ಯ ಬಲವನ್ನು ನಿರ್ಮಿಸುತ್ತದೆ. ಆ ಬಲವು ಪಳಚ್ಚನೆ ಹೊಳೆದುದು ಮತ್ತು ಅಕ್ಷಯವಾದ ಪ್ರಣೋದ ಸ್ವರೂಪದ್ದು - ಅದೊಂದು ಜ್ವಾಲೆ - ಅದನ್ನು ಕುದುರೆಯೆಂದು ವರ್ಣಿಸಲಾಗಿದೆ. ಅದೆಂಥ ಕುದುರೆ? ಹೇರಳ ಸಂಪತ್ ಸ್ವರೂಪದ ಕುದುರೆ. ಅದು ನಮಗೆ ಸೌಜನ್ಯ ಸತ್ವವನ್ನು, ಸತ್ ಸುಖವನ್ನು, ತಂದುಕೊಡುತ್ತದೆ ಮತ್ತು ನಮ್ಮನ್ನು ಆ ಗುರಿಗೆ, ಒಯ್ದು ಮುಟ್ಟಿಸುತ್ತದೆ. ಅಗ್ನಿ ಜ್ವಾಲೆಗಳು ಯಜ್ಞದಿಂದ ಉತ್ಕರ್ಷ ಹೊಂದುವ ಮಾರ್ಗಗತ ವೇಗಗಾಮಿ ಅಶ್ವಗಳು;ಅವು ಅಪ್ರತಿಹತವಾಗಿ ತ್ವರೆಯಿಂದ ಸಾಗುತ್ತವೆ ಮತ್ತು ಹೆಚ್ಚು ತ್ವರಿತ ಗತಿಯಿಂದ ಯಾವಾಗಲೂ (ರೇಸು ಕುದುರೆಗಳಂತೆ) ಓಡುತ್ತವೆ - ಅವು ಕೊಟ್ಟಿಗೆಯಲ್ಲಿ ಅಡಗಿಸಿಟ್ಟ ಗುಪ್ತಜ್ಞಾನ ಮಯೂಖಗಳನ್ನು ಹೊರತರುತ್ತವೆ. ನಮ್ಮ ಯಾಜ್ಞಿಕ ಆಹುತಿಗಳಿಂದ ದಿವ್ಯ ಬಲಾತ್ಮಕನು ಮೈದುಂಬಿ ತೃಪ್ತನಾದೊಡನೆ ಅವುಗಳ ಸಂಪೂರ್ಣ ಪ್ರಣೋದವು ಅನುಗೃಹೀತವಾಗುತ್ತದೆ.]

೧. ಬಲಶಾಲಿಯಾದ ಅಗ್ನಿಯನ್ನು ನಾನು ಧ್ಯಾನಿಸುತ್ತೇನೆ ; ಅವನು ವಸ್ತುಸಾರ ನಿವಾಸಿ ಮತ್ತು ನಮ್ಮನ್ನು ಸಾಕುವ ಗೋವ್ರಜಗಳು ತಮ್ಮ ಮನೆಯಾದ ಅವನೆಡೆಗೆ ಹೋಗುತ್ತವೆ. ನಮ್ಮ ವೇಗಚರ ಕುದುರೆಗಳು[೧] ಅವನತ್ತ ಹೋಗುವುವು - ಹಾಗೇ ನಮ್ಮ ಹೇರಳ ಸಮೃದ್ಧಿಯ ಶಕ್ತಿಗಳೂ ತಮ್ಮ ಮನೆಯಾದ ಅವನಲ್ಲಿಗೆ ಹೋಗುತ್ತವೆ. ನೀನು ನಿನ್ನನ್ನು ದೃಢೀಕರಿಸುವವರಿಗಾಗಿ ನಿನ್ನ ಪ್ರೇರಣಾ ಪ್ರಣೋದವನ್ನು[೨] ತಾ.

---

೧. ವೇದದಲ್ಲಿ ಕುದುರೆಯು ಪ್ರಣೋದ ಸಂಕೇತ - ಹೆಚ್ಚಾಗಿ ಜೈವಿಕ ಪ್ರಣೋದದ ಸಂಕೇತವು. ಅದನ್ನು ಅಶ್ವತ್ =ರಣ ತುರಗ ಮತ್ತು ವಾಜಿನ್=ಪ್ರಯಾಣದ ಕುದುರೆ - ಅದರಲ್ಲೂ ನಮಗೆ ನಮ್ಮ ಆಧ್ಯಾತ್ಮಿಕ ಐಶ್ವರ್ಯವನ್ನು ಬೇಕಾದಷ್ಟು ತಂದು ಕೊಡುವ ಕುದುರೆ ಎನ್ನಿಸಿದೆ.

೨. ನಮ್ಮಿರವಿನ ಇರುಳಿನ ಮೂಲಕ ನಮ್ಮನ್ನು ದಿವ್ಯ ಪ್ರಕಾಶಲೋಕಕ್ಕೆ ಪ್ರಯಾಣ ಮಾಡಬಲ್ಲವರನ್ನಾಗಿ ಮಾಡುವ ಶಕ್ತಿಯು.

೨. ಅಗ್ನಿಯು ವಸ್ತುಸಾರದಲ್ಲಿರುವ ಬಲ ; ಯಾರಲ್ಲಿ ನಮ್ಮನ್ನು ಸಾಕುವ ಗೋವ್ರಜಗಳು ಬಂದು ಸೇರುವುವೋ[೩] ಯಾರಲ್ಲಿಗೆ ನಾಗಾಲೋಟದಿಂದ ನಮ್ಮ ವೇಗಬಾರಿ ಕಾಳೆಗ-ಕುದುರೆಗಳು ಹೋಗಿ ಸೇರಿಕೊಳ್ಳುವುವೋ ಯಾರಲ್ಲಿ ನಮ್ಮ ಪ್ರತಿಭಾವಂತ ದ್ರಷ್ಟಾರರು ನಮ್ಮ ಹುಟ್ಟನ್ನು ನಮ್ಮಲ್ಲಿ ಪೂರ್ಣಗೊಳಿಸಲು ಬರುವರೋ ಅವನನ್ನು ನಾನು ಅಭಿವ್ಯಂಜಿಸುತ್ತೇನೆ.

ನೀನು ನಿನ್ನನ್ನು ದೃಢೀಕರಿಸುವವರಿಗಾಗಿ ನಿನ್ನ ಪ್ರೇರಣಾ ಪ್ರಣೋದವನ್ನು ತಾ. ೩. ವಿಶ್ವಕರ್ಮಶೀಲನಾದ ಅಗ್ನಿಯು ಪ್ರಾಣಿಗೆ ತನ್ನ ಹೇರಳ ಶ್ರೇಯಃ ಸಮೃದ್ಧಿ ಸ್ವರೂಪದ ಕುದುರೆಯನ್ನು ಕೊಡುವನು - ಅವನು ದಿವ್ಯ ಸಂಕಲ್ಪ ಸ್ವರೂಪನು. ಆ ದಿವ್ಯ ಸಂಕಲ್ಪ ಸ್ವರೂಪನು ನಮ್ಮ ಸಮಗ್ರ ಅಸ್ತಿತ್ವದಲ್ಲಿ ಉದಯಿಸುವುದು, ನಮ್ಮಲ್ಲಿಯೇ ನಮಗೆ ಸುಖ ಸೌಕರ್ಯಗಳನ್ನು ಕೊಡಲು ; ಅದರಿಂದ ತೃಪ್ತನಾದ ಅವನು ಅಪೇಕ್ಷಣೀಯವಾದ ಸುಖ ಸಾಮ್ರಾಜ್ಯದತ್ತ ತೆರಳುತ್ತಾನೆ.

ನೀನು ನಿನ್ನನ್ನು ದೃಢೀಕರಿಸುವವರಿಗಾಗಿ ನಿನ್ನ ಪ್ರೇರಣಾ ಪ್ರಣೋದವನ್ನು ತಾ.

೪. ಎಲೈ ದೇವರೇ, ದಿವ್ಯಜ್ವಾಲೆಯೇ, ಪ್ರಕಾಶಮಾನನೇ, ಮುದುಕನಾಗದವನೇ, ಹೆಚ್ಚು ಪರಿಣಾಮಕರವಾದ ನಿನ್ನ ಕ್ರತುಪ್ರಣೋದವು ನಮ್ಮ ಸಗ್ಗಗಳಲ್ಲಿ ಉರಿದೆದ್ದಾಗ ನಾವು ನಿನ್ನ ಆ ಬೆಂಕಿಯನ್ನು ಹೊತ್ತಿಸುತ್ತೇವೆ.

ನೀನು ನಿನ್ನನ್ನು ದೃಢೀಕರಿಸುವವರಿಗಾಗಿ ನಿನ್ನ ಪ್ರೇರಣಾ ಪ್ರಣೋದವನ್ನು ತಾ.

೫. ದಿವ್ಯ ಸಂಕಲ್ಪನೇ, ಶುದ್ಧ ಶೋಭಾಕರ ಜ್ವಾಲೆಯೇ, ಪ್ರಬೋಧಕ ಮಂತ್ರ ಶಬ್ದದಿಂದ ಹೊಯ್ಯಲಾದ ಆಹುತಿಯು ನಿನ್ನದೇ ಆಗಿದೆ. ಎಲೈ ಪ್ರಾಣರಾಜ್ಯಾಧೀಶ್ವರನೇ, ಕರ್ಮಸಿದ್ಧಿಕಾರಕನೇ, ನೀನು ಆನಂದದಲ್ಲಿ ಪರಿಪೂರ್ಣನು.

ನೀನು ನಿನ್ನನ್ನು ದೃಢೀಕರಿಸುವವರಿಗಾಗಿ ನಿನ್ನ ಪ್ರೇರಣಾ ಪ್ರಣೋದವನ್ನು ತಾ.

೬. ಅವೇ ನಿನ್ನ ಜ್ವಾಲೆಗಳು-ಅವುಗಳಲ್ಲಿ ನಿನ್ನ ಇತರ ಜ್ವಾಲೆಗಳು ಪುಷ್ಟವಾಗುತ್ತವೆ; ಮತ್ತು ಅವು ಅಪೇಕ್ಷಣೀಯವಾದ ಎಲ್ಲ ಒಳಿತನ್ನೂ ಮುಂಬರಿಸುತ್ತವೆ. ಅವೇ ಸ್ಪರ್ಧಾಳುಗಳಂತೆ ಧಾವಿಸುವಂಥವು, ಅವೇ ಓಡುವಂಥವು ! ತುಂಡಿಲ್ಲದಂತೆ ಅವು ತಮ್ಮ ಪ್ರೇರಣಾನುಗುಣವಾಗಿ ತೇರೋಡಿಸಿಕೊಂಡು ಹೋಗುತ್ತವೆ.

ನೀನು ನಿನ್ನನ್ನು ದೃಢೀಕರಿಸುವವರಿಗಾಗಿ ನಿನ್ನ ಪ್ರೇರಣಾ ಪ್ರಣೋದವನ್ನು ತಾ.

೭. ಅವೇ ನಿನ್ನ ಉರಿವ ಕಿರಣಗಳು - ಎಲೈ ದಿವ್ಯ ಸಂಕಲ್ಪ ಸ್ವರೂಪನೇ - ಅವೇ ನಿನ್ನ ಅಪಾರ ಶ್ರೇಯಃ ಸಮೃದ್ಧಿಯ ಕುದುರೆಗಳು ಮತ್ತು ಅವು ವಿಸ್ತಾರದಲ್ಲಿ ಬೆಳೆಯುವುವು ; ತಮ್ಮ ಗೊರಸುಗಳ ಮೆಟ್ಟುಗೆಗಳಿಂದ ಯಾ ತುಳಿತಗಳಿಂದ ಪ್ರಕಾಶಮಯ ದನಕರುಗಳ[೪] ಹಟ್ಟಿಗಳನ್ನು ನಮ್ಮ ವಶಕ್ಕೆ ತಂದುಕೊಡುವುವು.

ನೀನು ನಿನ್ನನ್ನು ದೃಢೀಕರಿಸುವವರಿಗಾಗಿ ನಿನ್ನ ಪ್ರೇರಣಾ ಪ್ರಣೋದವನ್ನು ತಾ.

---

೩. ನಮ್ಮೆಲ್ಲಾ ಜ್ಞಾನ ಪ್ರಣೋದಗಳ ವರ್ಧಮಾನ ಶಕ್ತಿಗಳೂ ದಿವ್ಯಜ್ಞಾನ ಪ್ರಣೋದದ ಆವಿರ್ಭಾವದತ್ತ ಚಲಿಸಿ ಅದರಲ್ಲಿ ಒಂದಾಗಿ ಸಾಮಶ್ರುತ್ಯವನ್ನು ಪಡೆಯುತ್ತವೆ.

೪. ಇಂದ್ರಿಯ ಸಂವೇದನಾಧೀಶರು ದಿವ್ಯಸತ್ಯದ ಭಾಸಗಳನ್ನು ಅವಮಾನಸದೊಳಗಿಂದ ದೊಡ್ಡಿಗಳ ಗವಿಯಿಂದ ದನಗಳನ್ನು ಬಿಡಿಸಿ ತರುವಂತೆ ತರುವುದು - ಹಾಗೆ ತಂದ ಪ್ರಬೋಧೋದಯಗಳು.

೮. ಓ ದಿವ್ಯ ಸಂಕಲ್ಪನೇ, ನಿನ್ನನ್ನು ದೃಢೀಕರಿಸುವವರಿಗೆ ತಮ್ಮ ವಾಸಸ್ಥಳಗಳನ್ನು[೫] ಸರಿಯಾಗಿ ದೊರಕಿಸಿಕೊಳ್ಳುವ ಪ್ರೇರಣಾಬಲಗಳನ್ನು ತಂದುಕೊಡು. ನಿನ್ನನ್ನು ದೇವದೂತನನ್ನಾಗಿ ಪಡೆದವರು ನಾವೇ ಆಗಿ ಮನೆ ಮನೆಯಲ್ಲಿ ನಿನ್ನ ಪ್ರಾತಿಭ ಸೂಕ್ತವನ್ನು ಹಾಡುವಂತೆ ಮಾಡು.

(ಅಂಥ) ನೀನು ನಿನ್ನನ್ನು ದೃಢೀಕರಿಸುವವರಿಗಾಗಿ ನಿನ್ನ ಪ್ರೇರಣಾ ಪ್ರಣೋದವನ್ನು ತಾ.

೯. ಧಾವಿಸುವ ಸಂಪತ್ತಿನ ಎರಡು[೬] ಸೌಟುಗಳನ್ನೂ ನೀನು ನಿನ್ನ ಬಾಯಿಗೆ ಮುಟ್ಟುವಂತೆ ಮಾಡುತ್ತೀಯೆ. ಎಲೈ ಆನಂದದಲ್ಲಿ ಪೂರ್ಣನಾದವನೇ, ಹೊಳೆವ ಕಸುವಿನವನೇ ನಮ್ಮ ಮಾತುಗಳಲ್ಲಿ ನೀನು ಸಂಪೂರ್ಣವಾಗಿ ಹೊಟ್ಟೆ ತುಂಬಿಸಿಕೋ.

(ಅಂಥ) ನೀನು ನಿನ್ನನ್ನು ದೃಢೀಕರಿಸುವವರಿಗಾಗಿ ನಿನ್ನ ಪ್ರೇರಣಾ ಪ್ರಣೋದವನ್ನು ತಾ.

೧೦. ಹೀಗೆ ನಮ್ಮ ಮಂತ್ರಗಳ ಹಾಗೂ ಯಜ್ಞಗಳ ಬಲದಿಂದ ಅಡತಡೆಯಿಲ್ಲದೆ ಅವು ತೇರೇರಿ ಹೋಗಿ ಮಹಾಬಲನನ್ನು ನಿಯಂತ್ರಿಸುತ್ತವೆ. ಅಂಥವನು ನಮ್ಮಲ್ಲಿ ಸಂಪೂರ್ಣ ಕ್ರಿಯಾಶಕ್ತಿಯನ್ನು[೭] ನೆಲೆಗೊಳಿಸಲಿ - ಆ ವೇಗಯುಕ್ತ ನಾಗಾಲೋಟದ ಪ್ರಣೋದವನ್ನು[೮] ಪ್ರತಿಷ್ಠಿಸಲಿ.

(ಅಂಥ) ನೀನು ನಿನ್ನನ್ನು ದೃಢೀಕರಿಸುವವರಿಗಾಗಿ ನಿನ್ನ ಪ್ರೇರಣಾ ಪ್ರಣೋದವನ್ನು ತಾ.



---

೫. ಈ ಮುಂಬರಿವ ಪ್ರೇರಣೆಗಳೆಲ್ಲಾ ವಿಶ್ರಮಿಸಲು ಮತ್ತು ವಾಸಿಸಲು ಮಾಡಿಕೊಂಡ ಮನೆಯೆಂದರೆ ಅಗ್ನಿಗೃಹ. ಅಗ್ನಿಯ ಈ ಸ್ವಗೃಹವು ಸತ್ಯಪ್ರಪಂಚವೆನ್ನಿಸಿದ ಅತಿಮಾನಸಸ್ತರ ಸ್ವರೂಪದ ಸ್ಥಲ. ಅವು ನಮ್ಮನ್ನೊಯ್ಯುತ್ತವೆ ಅಲ್ಲಿಗೆ. ಹಾಗೆ ನಮ್ಮನ್ನೊಯ್ಯುವುದು ಸ್ತರದಿಂದ ಸ್ತರಕ್ಕೆ ; ದಿವ್ಯ ಮಂತ್ರವು ಒಂದಾದ ಮೇಲೊಂದರಂತೆ ಆ ಸ್ತರಗಳನ್ನು ತೆರೆಯುತ್ತ ಹೋಗುವುದು.

೬. ದಿವ್ಯ ಮತ್ತು ಮಾನವ್ಯ ಹರ್ಷವಾಗಿರಬಹುದು.

೭. ಹೋರಾಡುವ ಜೀವಾತ್ಮನ ವೀರತ್ವವು.

೮. "ಆಶು ಅಶ್ವಂ" = ಸವೇಗ ಅಶ್ವ ಶಕ್ತಿ ; ಎರಡು ಪದಗಳ ಮೇಲೆ ಆಟವಾಡಿದ ಸೂಕ್ತಕಾರನು ಇದರಿಂದ ವೇಗವಾದ ವಾಜಿವೇಗತ್ವ ಎಂಬ ಅರ್ಥವನ್ನು ಧ್ವನಿಸಿದ್ದಾನೆ.

# ಏಳನೆಯ ಅಗ್ನಿ ಸೂಕ್ತ

## ದಿವ್ಯ ಸಂಕಲ್ಪವು ಬಯಸುವುದು, ಭೋಗಿಸುವುದು, ಪ್ರಾಣಜೀವನದಿಂದ ಆನಂದ ಮತ್ತು ಜ್ಞಾನಗಳತ್ತ ಮುಂಬರಿಯುವುದು

[ಅಗ್ನಿಯನ್ನು ದಿವ್ಯ ಪ್ರಣೋದವೆಂದು ಸೂಕ್ತದಲ್ಲಿ ಹೇಳಲಾಗಿದೆ. ಅವನು ಮಾನವ ಜೀವಿಗೆ ಆನಂದವನ್ನೂ, ಸತ್ಯಾಂಶುವನ್ನೂ ಹಾಗೇ ನಮ್ಮ ಕತ್ತಲಿನ ರಾತ್ರಿಗೆ ಬೆಳಕನ್ನೂ ತರುವಂಥವನು. ಮನುಷ್ಯರನ್ನವನು ಅವರ ಕರ್ಮಗಳಲ್ಲಿ ತನ್ನ ಅನಂತ ಅರ್ಥಾತ್ ಅಗಣಿತ ಸ್ತರಗಳಿಗೆ ಕರೆದೊಯ್ಯುವನು. ಅವನು ತಾನು ಅನುಭೋಗಿಸಿ ಅನಂತರ ಆ ಪಾರ್ಥಿವ ಸುಖವಸ್ತುಗಳನ್ನು ಹರಿದೊಗೆಯುತ್ತಾನೆ. ಆದರೆ ಅವನ ರಾಶಿಗಟ್ಟಲೆಯ ಆಸೆಗಳೆಲ್ಲವೂ ಒಂದು ವೈಶ್ವತ್ರಿಕತೆಯನ್ನು ಮಾನವನಲ್ಲಿ ಸರ್ವವ್ಯಾಪಕವಾದ ಸ್ವಕೀಯ ದಿವ್ಯ ಗೃಹಗತ ಭೋಗವನ್ನು ನಿರ್ಮಿಸುವುದೇ ಆಗಿದೆ. ಭೋಕ್ತಾರನಲ್ಲಿ ಪ್ರಕೃತಿಯ ಪ್ರಗತಿಪರ ಚಲನೆಯಿಂದ ಕೊಡಲಿಯು ಕಾಡೊಳಗೆ ಹೊಕ್ಕು ಕಡಿಯುತ್ತಾ ಹೋಗುವಂತೆ ಆನಂದ ಸಿದ್ಧಿಗಾಗಿ ಮುಂಬರಿಯುವ ಪ್ರಾಣಿಯವನು. ಈ ಆವೇಶ ನಿರ್ಭರವಾದ ಭಾವನೆಯು ಮಾನವನ ಪ್ರಾಣಸತ್ತೆಯಾಗಿದೆ; ಅದು ಪರಮಸುಖ ಮತ್ತು ಶಾಂತಿಗಳಾಗಿ ಪರಿವರ್ತಿತವಾಗುವಂತೆ ಶುದ್ಧೀಕೃತವಾಗಬೇಕೆಂದೇ ಅವನು ಉಕ್ತ ಸತ್ತೆಯನ್ನು, ಭಾವನೆಯನ್ನು, ಮಾನವನಿಗೆ ಕೊಟ್ಟಿದ್ದಾನೆ ; ಅದರಲ್ಲವನು ಒಂದು ದಿವ್ಯಜ್ಯೋತಿಯನ್ನು, ಜ್ಞಾನವನ್ನೂ ಪ್ರತಿಷ್ಠಾಪಿಸುವುದಲ್ಲದೆ, ಒಂದು ದಿವ್ಯ ಆತ್ಮಜಾಗರ ಸ್ಥಿತಿಯನ್ನೂ ಸ್ಥಾಪಿಸುತ್ತಾನೆ.]

೧. ಹೇ ಸಹಧರ್ಮಚಾರಿಗಳೇ, ನಿಮ್ಮಲ್ಲಿ ಒಂದು ಸರ್ವನಿರಪೇಕ್ಷವಾದ (ಸರ್ವತಂತ್ರ ಸ್ವತಂತ್ರವಾದ) ಪ್ರೇರಣಾ ಪ್ರಣೋದವಿದೆ ; ತನ್ನೆಲ್ಲಾ ಹೇರಳ ಶ್ರೇಯಃ ಸಮೃದ್ಧಿಯನ್ನು ನಮ್ಮ ವಾಸಸ್ಥಳವಾದ[೧] ಈ ಜಗತ್ತುಗಳಲ್ಲಿ ವೆಚ್ಚ ಮಾಡುವ ಬಲ ಸ್ವರೂಪನಾದ ಅಗ್ನಿಗಾಗಿ ಪೂರ್ಣವಾಗಿ ದೃಢೀಕರಿಸುವ ಕರ್ಮವಿದೆ - ಅದೆಲ್ಲಾ ಪ್ರಣೋದಾಧಿಪತಿಗಾಗಿ, ಕ್ರಿಯಾಶಕ್ತಿಸುತನಿಗಾಗಿ ಇದೆ, ಉಕ್ತ ಅಗ್ನಿದೇವನಿಗಾಗಿ ಇದೆ.

೨. ಆ ಅಗ್ನಿದೇವನನ್ನು ಅತಿ ನಿಕಟವಾಗಿ ಸಂದರ್ಶಿಸಲು ಬರುವ ಯಾವ ಜೀವಾತ್ಮನೇ ಆಗಲಿ, ಅವನು ತನ್ನದಾದ ಆ ದೇವನ ಮನೆಯಲ್ಲಿ ಆನಂದಮಯನಾಗುತ್ತಾನೆ. ಬಲೋಪಾಸನೆಯಲ್ಲಿ ಪರಿಣತರಾದವರು ಕೂಡಾ ಅಗ್ನಿಜ್ವಾಲೆಯನ್ನು ಹೊತ್ತಿಸುತ್ತಾರೆ ಮತ್ತು ಹುಟ್ಟಿದ ಸರ್ವಪ್ರಾಣಿಗಳೂ ಅಗ್ನಿಯ ಪೂರ್ಣೋರ್ಧ್ವವಕ್ಕಾಗಿ ಕರ್ಮ ಮಾಡುತ್ತವೆ.

---

೧. ಅಥವಾ ಪ್ರಪಂಚದಲ್ಲಿರುವ ಜನರ ಮೇಲೆ

೩. ನಮ್ಮ ಪ್ರೇರಣಾ ಬಲಗಳನ್ನು ನಾವು ಸಂಪೂರ್ಣವಾಗಿ ಪಡೆದು ಅನುಭವಿಸುತ್ತಿರುವಾಗ ಮತ್ತು ಎಲ್ಲ ಮನುಷ್ಯರೂ ಯಜ್ಞವಾಗಿ ಆ ಎಲ್ಲವನ್ನೂ ಇಡಿಯಾಗಿ ಆಹುತಿ ಕೊಟ್ಟಾಗ ನಾನು ತನ್ನ ಪ್ರಬೋಧ ಹಾಗೂ ಲಸತ್ ಕ್ರಿಯಾಶಕ್ತಿಗಳಲ್ಲಿರುವ[೨] ಪರಮಸತ್ಯದ ಕಿರಣವನ್ನು ಪಡೆಯುತ್ತೇನೆ.

೪. ರಾತ್ರಿಯಲ್ಲಿ ಬಹುದೂರದಲ್ಲಿ ಕುಳಿತುಕೊಂಡಿರುವವನಿಗಾಗಿ ಕೂಡಾ ನಿಜವಾಗಿಯೂ ಅವನು (ಆ ಅಗ್ನಿಯು) ಬೆಳಕನ್ನು ಮೂಡಿಸುತ್ತಾನೆ - ಸ್ವತಃ ಅವನು ಅಕ್ಷಯನು, ಶುದ್ಧೀಕರಣ ಕರ್ತನು - ಅವನು ಆಹ್ಲಾದಾರಣ್ಯದ ದೊರೆಗಳನ್ನು[೩] ಹಿಂಡುತ್ತಾನೆ.

೫. ಅಗ್ನಿಯು ಸುತ್ತುವರಿದಿರಲು ಮನುಷ್ಯರು ಬೆವರು[೪] ಹರಿಸಿ ತಮ್ಮ ಕಷ್ಟಕರ ಕರ್ಮವನ್ನು ಮಾಡುತ್ತಾ ಹಾದಿಗಳಲ್ಲಿ ಹೋಗುವಾಗ ಹಾಗೂ ಅವನಿಗೆ ಆ ಬೆವರನ್ನು ಧಾರೆಯೆರೆದಾಗ (ಆಹುತಿಯಿತ್ತಾಗ) ಅವರು ವಿಸ್ತಾರವಾದ ಮೇಲ್ಬಾವಣಿಯನ್ನೇರಿ ಮೇಲ್ಮಟ್ಟಕ್ಕೇರಿ ಕುಳಿತ ಬಳ್ಳಿಗಳಂತೆ, ಅವನು ಆತ್ಮಾನಂದ ಪರವಶನಾಗಿರುವ[೫] ಕಾಲದಲ್ಲಿ ಮೇಲಕ್ಕೇರಿ[೬] ಅವನನ್ನು ಸೇರುತ್ತಾನೆ.

೬. ಸಾರ್ವದೇವನನ್ನು ನಮ್ಮಲ್ಲಿ ಪ್ರತಿಷ್ಠಾಪಿಸುವ ಉದ್ದೇಶದಿಂದ ಈ ರಾಶಿಗಟ್ಟಲೆ ಆಶೆಗಳನ್ನಿಟ್ಟುಕೊಂಡವನನ್ನು ಮರ್ತ್ಯನಾದ ಮಾನವನು ಗೊತ್ತುಮಾಡಿಕೊಳ್ಳಬೇಕು. ಏಕೆಂದರೆ ಆ ದೇವ ದೇವನು ಮುನ್ನಡೆದು ಸರ್ವಾಹಾರಗಳ ಮಧುರ ರುಚಿಯನ್ನು ನೋಡುವ ದಶೆಯನ್ನು ಮುಟ್ಟುತ್ತಾನೆ ಮತ್ತು ಮಾನವನಿಗಾಗಿ ಆ ಅಗ್ನಿಯು ಒಂದು ಮನೆಯನ್ನು ಕಟ್ಟುತ್ತಾನೆ.[೭]

೭. ಹೌದು, ನಾವು ಬದುಕುತ್ತಿರುವ ಈ ಮರುಭೂಮಿಯನ್ನವನು[೮] ಹರಿದು ಚೂರು ಚೂರು ಮಾಡುತ್ತಾನೆ. ಪ್ರಾಣಿಯು ತನ್ನ ಆಹಾರವನ್ನು ಹರಿದು ತಿನ್ನುವಂತೆ ಅವನಿದನ್ನು ತಿಂದು

---

೨. ಅಥವಾ ಬೆಳಕಿನ ಜ್ವಲತ್ ಪ್ರಣೋದದ ತತ್ಸತ್ಯದ

೩. ವನಸ್ಪತಿನ್ = ಮರಗಳು, ಕಾಡಿನ ಒಡೆಯರು, ಪೃಥ್ವಿಯ ಬೆಳೆಗಳು ಯಾ ನಮ್ಮ ಭೌತ ಅಸ್ತಿತ್ವ ಎಂದೂ ಅರ್ಥ. ಅಲ್ಲದೆ, ಆಹ್ಲಾದದ ದೊರೆಗಳೆಂದೂ ಅರ್ಥ. ಅಮರೀಕರಣದ ಮದ್ಯವನ್ನು ಉತ್ಪಾದಿಸುವ ವನಸ್ಪತಿಯೇ ಮಾದರಿಯ ವನಸ್ಪತಿ ಉಕ್ತ ಪದದ ಐದು ಶ್ಲೇಷಾರ್ಥಗಳೂ ಇಲ್ಲಿ ಗ್ರಾಹ್ಯವಾಗಿವೆ , ಅವುಗಳೆಲ್ಲಾ ಮಾದರಿಯಾದವನು ಸೋಮನೆಂಬ ವನಸ್ಪತಿಯು.

೪. ದ್ವಂದ್ವಾರ್ಥವುಳ್ಳದ್ದು ಬೆವರು (=ಸ್ವೇದ) ; (೧) ಬೆವರೆಂಬರ್ಥ ; (೨) ಹವಿಸ್ಸಿನ ಆಹುತಿಯ ಹೇರಳ ಸುರಿತ - ಎಂಬುದಿನ್ನೊಂದರ್ಥ.

೫. ಅಥವಾ ಸ್ವಯಂಜಯವಂತನಾಗಿ, ತಾನೇ ಸ್ವತಃ ಗೆದ್ದವನಾಗಿ.

೬. ಇವುಗಳೆಲ್ಲಾ ವಿಶಾಲವಾದ ಅಗಣಿತ ಮುಕ್ತ ಸತ್ತಾಸ್ತರಗಳು - ಇವು ಪರಮಸತ್ಯಾಧೃತಗಳಾದ ಇತರ ಕಡೆಗಳಲ್ಲಿ ಜನರ ದರ್ಶನ ಶಕ್ತಿಯನ್ನು ಗಡಿಮಿತಿಗೊಳಪಡಿಸಿ ಅವರ ಉತ್ತರೋತ್ತರ ಪ್ರಯಾಣವನ್ನು ತಡೆಯಲು ಅಡ್ಡಿ ಆತಂಕಗಳನ್ನು ತಂದೊಡ್ಡುತ್ತವೆ. ಅದರಿಂದ ಅವರ ಪ್ರಯಾಣದ ದಾರಿಯು ಸುಮುತ್ತುಳ್ಳದ ವಕ್ರ ಸ್ವರೂಪದ್ದಾಗುತ್ತವೆ.

೭. ಯಜ್ಞದ ಮೂಲಕ ಮಾನವನ ವಾಸಕ್ಕಾಗಿ ದೇವತೆಗಳಿಂದ ಮಾಡಲ್ಪಟ್ಟ ಮೇಲ್ತರಹದ ದಿವ್ಯ ಪ್ರಪಂಚ. ಈ ವಾಸಗೃಹವು ಸಂಪೂರ್ಣವಾದ ಪುಣ್ಯಲೋಕ - ಇದರಲ್ಲಿ ಮಾನವನ ಎಲ್ಲ ಮಾನವ್ಯ ಆಶೆಗಳೂ ಭೋಗಗಳೂ ಪರಿವರ್ತಿತವಾಗಿ ಲಯ ಹೊಂದುತ್ತವೆ. ಆದುದರಿಂದ ಶುದ್ಧಿಕಾರಕನಾದ ಅಗ್ನಿಯು ಭೌತಿಕ ಸತ್ತೆಯ ಎಲ್ಲರನ್ನೂ ಬಗೆಗಳನ್ನೂ ನುಂಗಿ ಅವುಗಳನ್ನು ಅವವುಗಳ ದಿವ್ಯ ಪರ್ಯಾಯ ಸ್ವರೂಪಗಳನ್ನಾಗಿ ಪರಿವರ್ತಿಸುತ್ತಾನೆ.

೮. ನದಿಗಳಿಂದ ಯಾ ಹೊಳೆಗಳಿಂದ ನೀರುಣ್ಣದ ಭೌತಿಕ ಸತ್ತೆಯು ಅತಿಮಾನಸ ಆನಂದ ಹಾಗೂ ಸತ್ಯಗಳಿಂದ ಹೊರಬಿದ್ದು ಪತಿತವಾಗುತ್ತದೆ, ಕೆಳಮಟ್ಟಕ್ಕೆ ಇಳಿಯುತ್ತದೆ.

ಹಾಕುತ್ತಾನೆ. ಕಾಡುಮೃಗದ ಗಡ್ಡವು ಚಿನ್ನದ ಬೆಳಕಿನದು - ಅದರ ವಿಷದಂತವೇ ಪಾವಿತ್ರ್ಯವು-ಅದರಲ್ಲಿರುವ ಪ್ರಣೋದವನ್ನು ಅದರ ಹೃದಯಗಳು ಬಾಧಿಸವು.

೮. ಆತನು (ಕಾಡುಮೃಗದಂತಿರುವ ಅಗ್ನಿಯು) ನಿಜವಾಗಿಯೂ ಶುದ್ಧನು. ಈ ಸರ್ವಭಕ್ಷಕನಿಗೆ ಪ್ರಕೃತಿಯು[೯] ಕೊಡಲಿಯ ಮೂಲಕ ಮರಗಳನ್ನು ಕ್ರಮವಾಗಿ ಕಡಿದು ಕೊಡುವಂತೆ ಅವನ ತಾಯಿಯಾಗಿ ಕಷ್ಟಪಟ್ಟು ಕಡಿದು ತಿನ್ನಿಸುತ್ತಾಳೆ - ಅವನನ್ನು ಹಡೆದವಳೇ ಅವಳು ಅವನು ತನ್ನ ಕೆಲಸಗಳನ್ನು ಮಾಡಲಿ ಮತ್ತು ದಿವ್ಯ ಭೊಗವನ್ನು[೧೦] ಭೋಗಿಸಲಿ ಎಂಬ ಉದ್ದೇಶದಿಂದ.

೯. ಹೇ ಬಲಸ್ವರೂಪಿಯೇ, ಓಡುತ್ತಿರುವ ಐಶ್ವರ್ಯವನ್ನು ಹಿಡಿದು ನಮ್ಮ ಮೇಲೆ ಹಿಂಡಿ ಸುರಿಸುವವನೇ, ನಿನಗೆ ಯಾವನಾದರೂ ಹರ್ಷಶಾಂತಿ ಸಂಪನ್ನನು[೧೧] ದೊರಕಿದರೆ - ಅಂಥ ಮರ್ತ್ಯನಲ್ಲಿ ಪ್ರಬೋಧವನ್ನು ಸಂಸ್ಥಾಪಿಸು. ಸ್ಫೂರ್ತಜ್ಞಾನವನ್ನು ನೆಲೆನಿಲ್ಲಿಸು ಮತ್ತು ಪ್ರಜ್ಞಾತ ಆತ್ಮನನ್ನು ನೆಡು.

೧೦. ಭೌತ ಅಸ್ತಿತ್ವದಲ್ಲಿ ಇದಕ್ಕಾಗಿ ಹುಟ್ಟಿದ ನಾನು ಕೊಡುವ ದಾನವೆಂದು ನನ್ನ ಭಾವನಾತ್ಮಕ ಮನವನ್ನೂ ಪ್ರಾಣಸತ್ತೆಯನ್ನೂ[೧೨] ಸ್ವೀಕರಿಸು. ಹೌದು, ಏ ಸಂಕಲ್ಪ ಸ್ವರೂಪನೇ, ಸರ್ವಭಕ್ಷಕನಾದ ಬೇದಕರನ್ನು[೧೩] ಸೋಲಿಸು. ಏಕೆಂದರೆ, ಭೇದಕರು ನಿನ್ನ ಪೂರ್ಣತೆಗೆ ಅನುಕೂಲ ಮಾಡಿಕೊಡರು. ನಿನ್ನ ಮೈಮೇಲೆ ಎರಗಿ ಜಿಗುವ ಇಂಥ ಜೀವಗಳನ್ನು ಹಣಿ.



---

೯. ಪುನಃ "ಸ್ವಧಿತಿ"ಗಿಲ್ಲಿ ಎರಡರ್ಥ.

(೧) ಕೊಡಲಿ ಅಥವಾ ತತ್ಸದೃಶವಾದ ಒಡೆಯುವ ಸಾಧನ.

(೨) ಪ್ರಕೃತಿಯ ಸ್ವಧರ್ಮಸಂಸ್ಥಾಪನಾ ಶಕ್ತಿ, "ಸ್ವಧಾ" ಇಲ್ಲಿಯ ಪ್ರತಿಮೆಯು ಕೊಡಲಿಯು ಕಾಡನ್ನು ಕಡಿಯುತ್ತ ಹೊಕ್ಕಂತೆ ನಮ್ಮ ಭೌತಿಕ ಕಾಡಿನ ಮೂಲಕ ದಿವ್ಯ ಪ್ರಣೋದವು ಮುಂಬರಿಯುವುದನ್ನು ಸಂಕೇತಿಸುತ್ತದೆ. ಆದರೆ ಆ ಕೊಡಲಿಯೊಂದರಲ್ಲಿ ಪ್ರಕೃತಿಯ ಸ್ವಾಭಾವಿಕ ಸಕ್ರಮ ವಿನ್ಯಾಸಶೀಲದ ಪ್ರಕೃತಿ=ಜಗತ್‌ಕ್ರಿಯಾಶಕ್ತಿ = ಈ ದಿವ್ಯ ಪ್ರಣೋದ ಸ್ವರೂಪದ ಕ್ರಿಯಾಶಕ್ತಿಸುತನಾದ ಅಗ್ನಿಯ ತಾಯಿ.

೧೦. ದಿವ್ಯಭೋಗ=ಭಗ=ಭಗದೇವತೆ=ಪರಸತ್ಯದ ಶಕ್ತಿಯಲ್ಲಡಗಿ ಕುಳಿತಿರುವ ಭೋಕ್ತಾರ.

೧೧. ಶಂ ಮತ್ತು ಶರ್ಮ ಎಂಬ ಪದಗಳು ವೇದದಲ್ಲಿ ಶಾಂತಿ-ಸಂತೋಷಗಳೆಂಬಂಥ ಅರ್ಥದಲ್ಲಿ ಬಳಸಲ್ಪಟ್ಟಿವೆ. ಶ್ರಮಸಿದ್ಧಿಯ ಫಲವು ಸಂತೋಷವು. ಶಮಿ=ಶ್ರಮಸಾಧ್ಯವಾದ ಯಜ್ಞವು. ಯುದ್ಧದ ಹಾಗೂ ಪ್ರಯಾಣದ ಶ್ರಮಗಳು ನಿಂತಾಗ ವಿಶ್ರಾಂತಿ - ಈ ವಿಶ್ರಾಂತಿಯು ಪುಣ್ಯಾತ್ಮ ಸ್ಥಿತಿ-ಇಲ್ಲಿ ಘರ್ಷಣ, ಪ್ರಯತ್ನಗಳಿಲ್ಲ.

೧೨. ಭಾವಾವೇಶದ ಮನ ಮತ್ತು ಪ್ರಾಣ ಎಂಬುದು ಇದರ ಅಕ್ಷರಾರ್ಥ. ಆದರೆ ಪಶುಪದಕ್ಕೆ ವೇದದ ಇತರ ಸಂದರ್ಭಗಳಲ್ಲಿ ಬೆಳಕನ್ನು ಸಂಕೇತಿಸುವ ಹಸುವೆಂಬ ಅರ್ಥವು ಸಾದು. ಆಗ ಭಾವನಾತ್ಮಕ ಮನ, ಪ್ರಾತಿಭ ಯಾ ಪ್ರಬುದ್ಧಮನ ಎಂಬ ತಾತ್ಪರ್ಯ ಹೊರಡುತ್ತದೆ. ಆದರೆ ಇಲ್ಲಿ ಮಾಡಿದ ಭಾಷಾಂತರವು ಸೂಕ್ತದ ಸಾಮಾನ್ಯಾರ್ಥಕ್ಕೆ ಹೆಚ್ಚು ಹೊಂದುತ್ತದೆ. ಹಾಗೇ ಅ ಪದದ ಪೂರ್ವಪ್ರಯೋಗಕ್ಕೂ ಹೆಚ್ಚು ಸಮಂಜಸವಾಗಿ ಹೊಂದಿಕೊಳ್ಳುತ್ತದೆ.

೧೩. ದಸ್ಯುಗಳು ಜೀವಾತ್ಮನ ಬೆಳವಣಿಗೆಯನ್ನೂ, ಏಕತೆಯನ್ನೂ ಧ್ವಂಸ ಮಾಡುವವರು ಮತ್ತು ಅವನ ದಿವ್ಯಶಕ್ತಿಯನ್ನೂ, ಸಂತೋಷವನ್ನೂ. ಜ್ಞಾನವನ್ನೂ ನಾಶ ಮಾಡಲು ಯತ್ನಿಸುವವರು. ಅವರು ಕತ್ತಲಿನ ಶಕ್ತಿಗಳು, ದನುತನೂಜರು, ವಿಭಕ್ತ (ನಾನಾತ್ವ) ಸತ್ತಾಸ್ವರೂಪದ ದಿತಿಯ ಮಕ್ಕಳು.

# ಎಂಟನೆಯ ಅಗ್ನಿ ಸೂಕ್ತ

## ಅಗ್ನಿಯು ದಿವ್ಯ ಸಂಕಲ್ಪ ಸ್ವರೂಪನು, ವೈಶ್ವತ್ರಿಕ ಸಂಕಲ್ಪ ಪೂರಕನು

[ಅನಾದಿಕಾಲದಿಂದ ನಡೆದು ಬಂದ ಮಹಾಪ್ರಯತ್ನ ಮತ್ತು ಮಹೋನ್ನತ ಆಶೆಯ ಸಾತತ್ಯವನ್ನು ಸಾರಿಹೇಳಿ ಋಷಿಯು ನಮ್ಮಲ್ಲಿರುವ ನಮ್ಮ ಗೃಹವಾಸಿಯಾದ ಯಜ್ಞ ಪುರೋಹಿತನಾದ, ಈ ಮನೆಯ ಯಜಮಾನನಾದ ಮತ್ತು ಅದರ ಎಲ್ಲ ರಾಶಿಗಟ್ಟಲೆಯ ವೈಶ್ವತ್ರಿಕ ಪ್ರೇರಣೆಯನ್ನು ಪೂರ್ಣಗೊಳಿಸುವ ಹಾಗೂ ಅದನ್ನು ಕಾರ್ಯದಲ್ಲೂ ಜ್ಞಾನದಲ್ಲೂ ಮುಂದೊಯ್ಯುವ ಅಗ್ನಿಯನ್ನು ಕುರಿತು ಸೂಕ್ತವನ್ನು ಹಾಡುತ್ತಾನೆ.]

೧. ಓ ದಿವ್ಯ ಸಂಕಲ್ಪನೇ, ನಮ್ಮಲ್ಲಿ ಪ್ರಣೋದದಿಂದ ನಿರ್ಮಿತನಾದವನೇ, ಪ್ರಾಚೀನ ಸ್ವರ್ಣಯುಗದವನೇ ನಿನ್ನನ್ನು ಪ್ರಾಚೀನ ಸ್ವರ್ಣಯುಗದ ಸತ್ಯ ಸಾಧಕರು ಸಂಪೂರ್ಣವಾಗಿ ಹೊತ್ತಿಸಿದ್ದು ಏಕೆಂದರೆ, ತಮ್ಮಲ್ಲಿ ಯಜ್ಞ ದೇವನಾದ, ಅಸಂಖ್ಯಾತ ಆಹ್ಲಾದಗಳ ದೆಸೆಯಿಂದ ಸರ್ವ[೧] ಸಂಸ್ಥಾಪಕನಾದ, ತಮ್ಮಲ್ಲಿ ಬಂದು ನೆಲೆಸಿದವನಾದ, ಗೃಹಪತಿಯಾದ ಮತ್ತು ಅತ್ಯಂತ ಅಪೇಕ್ಷಣೀಯನಾದ ನೀನು ಬೆಳೆಯಲಿ ಎಂಬ ಉದ್ದೇಶದಿಂದ.

೨. ಹೇ ದಿವ್ಯ ಸಂಕಲ್ಪನೇ, ನೀನು ಅತ್ಯುನ್ನತ[೨] ಅತಿಥಿ ಮತ್ತು ಗೃಹಪತಿ ; ನಿನ್ನ ಬೆಳಕಿನ ಸುಳಿಗೂದಲುಗಳಲ್ಲಿ ಜನತೆಗಳು ತಮ್ಮ ತಳಪಾಯವನ್ನು ಮಾಡಿಕೊಳ್ಳುತ್ತಾರೆ. ಏಕೆಂದರೆ, ನಿನ್ನಲ್ಲಿ ವಿಸ್ತಾರವಾದ ದರ್ಶನವಿದೆ, ನಿನ್ನಲ್ಲಿ ಅನೇಕಾನೇಕ ಆಕಾರಗಳಿವೆ, ನಮ್ಮ ಐಶ್ವರ್ಯದ ಅರ್ಕವಿದೆ, ಪೂರ್ಣಶಾಂತಿಯಿದೆ ಮತ್ತು ಪೂರ್ಣಸತ್ತೆ ಹಾಗೂ ಶತ್ರುನಾಶನ[೩] ಶಕ್ತಿಗಳಿವೆ.

೩. ಎಲೈ ದಿವ್ಯ ಸಂಕಲ್ಪನೇ, ತಮ್ಮ ಆರಾಧನೆಯ ಮೂಲಕ ಮಾನವ್ಯಜನತೆಗಳು ದೊರಕಿಸಿಕೊಳ್ಳಬಯಸುತ್ತಾರೆ. ಏಕೆ? ನೀನು ಯಜ್ಞ[೪] ಶಕ್ತಿಜ್ಞಾನ ಸಂಪನ್ನನಾಗಿರುತ್ತೀಯೆ;

---

೧. ಅಥವಾ "ಎಲ್ಲರನ್ನೂ ಪೋಷಿಸುವಂಥವನಾದ."

೨. "ಪ್ರಥಮ"= ಮೂಲಭೂತ ಮತ್ತು ಅತ್ಯುಚ್ಚ

೩. ರಿಪುಶಕ್ತಿಗಳು - ನಮ್ಮ ಬಾಳಿನ ಪೂರ್ಣತೆಯನ್ನೂ ಐಕ್ಯವನ್ನೂ ಒಡೆದು ಹಾಕುವವರು ; ಮತ್ತು ಅವರು ಮಾನವ ರೂಪದ ರಿಪುಗಳಲ್ಲ - ನ್ಯಾಯವಾಗಿ ನಮಗೆ ಸೇರಿರಬೇಕಾದ ಸಂಪತ್ತನ್ನು ಮಾನವೇತರರಾದ ಅವರೊಯ್ಯದಂತೆ ರಕ್ಷಿಸಿಕೊಳ್ಳಬೇಕು.

೪. ಅಥವಾ "ಆಹುತಿಹಾಕುವ ಪ್ರಕ್ರಿಯಾ ಕ್ರಮವು."

ಮತ್ತು ಯುಕ್ತಾಯುಕ್ತ ವಿವೇಕ ಸಂಪನ್ನನಾಗಿ ನಮಗೆಂದು ಸಂಪೂರ್ಣವಾಗಿ ಆನಂದವನ್ನು ತುಂಬಿಕೊಂಡಿರುತ್ತೀಯೆ. ನೀನು ನಮ್ಮ ಗುಪ್ತ ಸತ್ತೆಯಲ್ಲಿ ಆಸೀನನಾಗಿರುತ್ತೀಯೆ. ಎಲೈ ಪೂರ್ಣಭೋಗಿಯೇ, ವೈಶ್ವತ್ರಿಕ ದರ್ಶನ ಶಕ್ತಿಯಿಂದ ನೋಡಿ, ನಿನ್ನ ಅಗಣಿತ ಸ್ವರಗಳನ್ನು ಸುರಿದು (ಹುಯ್ದು), ಯಜ್ಞವನ್ನು ಸರಿಯಾಗಿ ಮಾಡಿ, ಸ್ಪಷ್ಟತೆಯ ವೈಭವದಿಂದ ಮಿರುಗುತ್ತಿರುವೆ.

೪. ಹೇ ದಿವ್ಯ ಸಂಕಲ್ಪನೇ, ನೀನು ವಸ್ತುಗಳಲ್ಲಿ ಅವವುಗಳ ವೈಶ್ವತ್ರಿಕ ನಿಯಮವನ್ನು ಪಾಲಿಸುತ್ತಿರುವೆ. ನಾವು ನಿನ್ನ ವಶವರ್ತಿತ್ವ ಸೂಚಕವಾದ ನಮಸ್ಕಾರದಿಂದ ನಿನ್ನತ್ತ ಸರಿಯುವೆವು ; ನಿನ್ನನ್ನು ಶಬ್ದಗಳಿಂದ ಅಭಿವ್ಯಂಜಿಸುತ್ತೇವೆ. ಆದುದರಿಂದ ಹೇ ಪ್ರಭಾವ ಸಂಪನ್ನ ದ್ರಷ್ಟಾರನೇ, ಒಪ್ಪಿಗೆಯಿತ್ತು ನಮಗೆ ಅಂಟಿಕೋ. ನೀನು ನಿನ್ನ ಸರಿಯಾದ ಪ್ರಬೋಧಗಳಿಂದ ಮರ್ತ್ಯರು ಜಯಿಸಿ[೫] ಉನ್ನತವಾಗಿ ಉರಿಯುವಂತೆ ಮಾಡಲ್ಪಟ್ಟಂಥವನು.

೫. ಓ ದಿವ್ಯ ಸಂಕಲ್ಪನೇ, ದೃಢೀಕೃತನಾದ ನೀನು ಗುಣಿತ ಸ್ವರೂಪನಾಗು - ಮಾನವನ ಪ್ರಕಾರ ನೀನು ಬಹುರೂಪ ಧಾರಿ. ಹಿಂದಿನಂತೆಯೇ ಇಂದೂ ನೀನು ಪ್ರತಿಯೊಬ್ಬನಿಗೂ ಅವನವನ ವಿಶಾಲ ಅಭಿವ್ಯಕ್ತಿಯನ್ನು ಪ್ರತಿಷ್ಠಾಪಿಸಿ ಕೊಡುತ್ತೀಯೆ. ನಿನ್ನ ಪ್ರಣೋದದಲ್ಲಿ ನೀನು ನಿನಗೆ ಆಹಾರವಾದ ಅನೇಕ ಸಾಮಗ್ರಿಗಳನ್ನು ಬೆಳಗುವೆ; ಮತ್ತು ನೀನು ಹಾಗೆ ಉರಿದೆದ್ದಾಗ ಯಾರೂ ನಿನ್ನನ್ನು ಹಿಂಸಿಸಲಾರರು.

೬. ಹೇ ದಿವ್ಯ ಸಂಕಲ್ಪನೇ ನೀನು ತರುಣತಮನು, ಉತ್ಸಾಹ ಶಕ್ತಿಸಂಪನ್ನನು; ದೇವತೆಗಳು ನಿನ್ನನ್ನು ಎತ್ತರಕ್ಕೆ ಹೊತ್ತಿಸಿದ್ದಾರೆ ಮತ್ತು ನೀನು ಮಾನವನಿಗೆ ಆ ದೇವತೆಗಳ ರಾಜದೂತನು. ಆದ್ದರಿಂದ ಮಾನವನೀವ ಆಹುತಿಗಳನ್ನು ಅವರಿಗೆ ಕೊಂಡೊಯ್ಯುವೆ. ನಿನ್ನ ವೇಗಗಳಲ್ಲಿ ನೀನು ವಿಸ್ತೃತ ; ನೀನು ಸ್ಪಷ್ಟತೆಯ ಸುತನು ; ಆಹುತಿಗ್ರಾಹಕನು - ಮಾನವನ ಮನವನ್ನು ಉತ್ತೇಜಿಸಲೆಂದು ಆ ದೇವತೆಗಳು ನಿನ್ನನ್ನು ಅವನಲ್ಲಿಟ್ಟಿದ್ದಾರೆ.

೭. ಎಲೈ ದಿವ್ಯ ಸಂಕಲ್ಪನೇ, ಆನಂದಾರ್ಥಿಗಳಾದ ಮಾನವರು ಸಂಪೂರ್ಣವಾಗಿ ನಿನ್ನನ್ನು ಎತ್ತರಕ್ಕೆ ಹೊತ್ತಿಸುತ್ತಾರೆ. ಅವರ ಸ್ಪಷ್ಟತೆಗಳನ್ನು ಸ್ವರ್ಗದೆದುರು[೬] ನೀನು ಉಣ್ಣುವೆ. ಆದುದರಿಂದ ನೀನು ಸಂವರ್ಧಿತನಾಗಿ ಬುವಿಯ ಉಷ್ಣತೆಯನ್ನು ಹಿಡಿದಿಟ್ಟುಕೊಂಡ ಅದರ ಬೆಳೆಗಳಿಂದ ಅಪಸೃತನಾಗಿ ಎಲ್ಲಾ ಭೂ ಜೀವನದ ಸವೇಗ ಚಲನೆಗಳಲ್ಲಿ ವಿಸ್ತಾರವಾಗಿ ನೀನು ಒಳಗೆ ಹೊಗುವೆ.



---

೫ "ಸಿದ್ಧಿ", ಕಣ್ಣಳನ್ನು ಕೋರೈಸುವಂಥ ಸ್ಥಿತಿ ಅಥವಾ ವೈಭವ, ಅದ್ಭುತಯಶಸ್ಸು.

೬ ಸ್ವರ್ಗ ಮತ್ತು ಭೂಲೋಕ ಅಥವಾ ಶುದ್ಧವಾದ ಮಾನಸಸತ್ತೆ ಮತ್ತು ಭೌತಿಕ ಪ್ರಜ್ಞೆ

# ಒಂಬತ್ತನೆಯ ಅಗ್ನಿ ಸೂಕ್ತ

## ಪ್ರಾಣತ್ವದಿಂದ ಮಾನವ್ಯಮನಸ್ಕತೆಗೇರುವ ದಿವ್ಯಸಂಕಲ್ಪ

[ಭೌತಿಕ ಪ್ರಜ್ಞೆಯ ಮೇಲೆ ಶುದ್ಧ ಮಾನಸಿಕದ ಕ್ರಿಯೆಯಿಂದ ದಿವ್ಯ ಸಂಕಲ್ಪವು ಜನಿಸುವುದನ್ನು ಋಷಿಯು ಹೇಳುತ್ತಾನೆ. ಮಾನವ ಮನದಲ್ಲಿ-ಅದರ ಸಾಮಾನ್ಯ ಮರ್ತ್ಯ ಸ್ಥಿತಿಯಲ್ಲಿ ದಿವ್ಯ ಸಂಕಲ್ಪದ ಜಟಿಲ ಕ್ರಿಯೆಯನ್ನು - ಅರ್ಥಾತ್ - ಭಾವನಾತ್ಮಕ, ನಾಡೀಯ ಮತ್ತು ಉದ್ರೇಚಕ ಎನ್ನಿಸಿದ ವಕ್ರ ಕ್ರಿಯೆಗಳನ್ನು ಮತ್ತು ನಶ್ವರ ಭೋಗಗಳನ್ನು ವಿವರಿಸುತ್ತಾನೆ ; ಮತ್ತು ನಮ್ಮಿರವಿನ ತೃತೀಯ ಸ್ತರದಲ್ಲಿ ಅದು ಆವಿರ್ಭವಿಸುವುದನ್ನೂ ಹಾಗೆ ಆವಿರ್ಭವಿಸಿ ಅದು ಮುಕ್ತಿಗೂ ಆತ್ಮಿಕ ಜಯಕ್ಕೂ ಕಾರಣವಾದ ಸುಸ್ಪಷ್ಟ ಕಾರ್ಯಕರ ಶಕ್ತಿಯಾಗಿ ರೂಪಿಸಲ್ಪಟ್ಟು ಹರಿತಗೊಳಿಸಲ್ಪಡುವುದನ್ನೂ ವಿಶದಪಡಿಸುತ್ತಾನೆ. ಹಾಗೆ ಅದು ಸ್ಪಷ್ಟವೂ ಕಾರ್ಯಕರವೂ ಆದ ಶಕ್ತಿಯಾಗಿ ನಿಲ್ಲುವುದು; ನಮ್ಮ ಮುಕ್ತಿ ಮತ್ತು ಆತ್ಮಜಯಗಳಿಗಾಗಿ. ಆ ದಿವ್ಯ ಸಂಕಲ್ಪಕ್ಕೆ ನಮ್ಮ ಎಲ್ಲ ಜನ್ಮಗಳು ಅಥವಾ ಪ್ರಜ್ಞಾಸ್ತರಗಳು ಗೊತ್ತಿರುತ್ತವೆ ಮತ್ತು ಆ ಸಂಕಲ್ಪ ಸ್ವರೂಪನು ಯಜ್ಞ ನೇತಾರನಾಗಿ ಆಹುತಿ ವಾಹಕನಾಗಿ, ಆನುಕ್ರಮಿಕ ಸತತ ಪ್ರಗತಿಯ ಮೂಲಕ ದಿವ್ಯ ಧ್ಯೇಯಸ್ಥಲ ಎನ್ನಿಸಿದ ಸ್ವಗೃಹಕ್ಕೆ ಯಜ್ಞವನ್ನೂ ಅದರ ಆಹುತಿಗಳನ್ನೂ ಒಯ್ಯುತ್ತಾನೆ.]

೧. ಹೇ ದೇವಾಧಿದೇವ, ಆಹುತಿಯ ಮೂಲಕ ಮರ್ತ್ಯರು ಹುಡುಕುವುದು ನಿನ್ನನ್ನು ; ಹೇ ದಿವ್ಯ ಸಂಕಲ್ಪನೇ, ಜನ್ಮಜ್ಞನಾದ ನಿನ್ನನ್ನು ಕುರಿತು ನಾನು ಧ್ಯಾನಿಸುತ್ತೇನೆ. ಆದುದರಿಂದ ತುಂಡಿಲ್ಲದೆ ನೀನು ನಮ್ಮ ಆಹುತಿಗಳನ್ನು ಹೊತ್ತುಕೊಂಡು ಹೋಗುವೆ.

೨. ಹವಿರ್ಭಾಗದಾತಾರನೂ ಯಜ್ಞವೇದಿಕೆಯಲ್ಲಿ ಆಸನ ಮಾಡಿಕೊಡುವವನೂ ತನ್ನ ಮನೆಗೆ ಹೋಗುವವನೂ ಆದ ದಿವ್ಯ ಸಂಕಲ್ಪನೇ ಅಹುತಿಯ ಪುರೋಹಿತನು; ಏಕೆಂದರೆ ಆತನಲ್ಲಿ ನಮ್ಮ ಯಜ್ಞ ಕರ್ಮಗಳೂ ಕೂಡುತ್ತವೆ ಮತ್ತು ಅವನಲ್ಲಿ ನಮ್ಮ ಪರಮಸತ್ಯದ ಸ್ಫೂರ್ತಿಗಳ ಹೇರಳಶ್ರೇಯಃ ಸಮೃದ್ಧಿಗಳು ಸಂಗಮಿಸುತ್ತವೆ.

೩. ಹೊಸದಾಗಿ ಹುಟ್ಟುವ ಶಿಶುವಿನಂತೆ ನೀನು ಎರಡು ಕರ್ಮಗಳಿಂದ[೧] ಹುಟ್ಟುವುದೂ ನಿಜ. ನೀನು ಮಾನವ ಜನತೆಗಳನ್ನು ಎತ್ತಿ ಹಿಡಿವವನೂ ಹೌದು - ಯಜ್ಞವನ್ನು ನೆಟ್ಟಗೆ ಕೊಂಡೊಯ್ಯುವವನೂ ನೀನೇ.

---

೧. ಎರಡು ಅರಣಿಗಳೇ ಬೆಂಕಿಯ ಕಿಡಿಯನ್ನು ಹಾರಿಸುವ ಒಣ ಪದಾರ್ಥಗಳು : ಅವುಗಳನ್ನು ಚಚ್ಚಿ (ಜಜ್ಜಿ) ಬೆಂಕಿಯನ್ನು ಉರಿದೆಬ್ಬಿಸಲಾಗುವುದು, ಹೊತ್ತಿಸಲಾಗುವುದು. ಸೂಕ್ತಸ್ಥ ಪದಕ್ಕೆ ಕರ್ಮಗಳೆಂದೂ ಅರ್ಥ ಮಾಡಬಹುದು ಮತ್ತು ಅದು ಅರ್ಯ ಪದಕ್ಕೆ ಸಂಬಂಧಿಸಿದೆ. ಸ್ವರ್ಗ-ಭೂಮಿಗಳು ಎರಡು ಅರಣಿಗಳು, ಅವು ಅಗ್ನಿಯನ್ನು ಉತ್ಪಾದಿಸುತ್ತವೆ. ಸ್ವರ್ಗವು ಅವನ ತಂದೆ ಮತ್ತು ಭೂಮಿಯು ಅವನ ತಾಯಿ.

೪. ಪ್ರಾಣಿಯೊಂದು ತನ್ನ ಹುಲ್ಲುಗಾವಲಿನಲ್ಲಿ ಮೇಯ್ದಂತೆ ನೀನು ಆಹ್ಲಾದದ ಅನೇಕ ಪ್ರರೋಹಗಳನ್ನು (ಬೆಳೆಗಳನ್ನು) ನುಂಗುವಾಗ ವಕ್ರತೆಯು[2] ಮಗನಾಗಿದ್ದರೂ ನಿನ್ನನ್ನು ಹಿಡಿಯುವುದು ಕಠಿನವೆಂಬುದೂ ನಿಜ.

೫. ಆದರೆ ಅನಂತರ ಧೂಮ್ರ ಭಾವಾವೇಶಗಳಿಂದ ಕೂಡಿದ ನಿನ್ನ ಆಗ್ನೇಯ ಕಿರಣಗಳು ಸಂಪೂರ್ಣವಾಗಿ ಒಟ್ಟಾಗುತ್ತವೆ. ಓ, ಆಗಲೇ ಕಮ್ಮಾರನು ತನ್ನ ಕಮ್ಮಟದಲ್ಲಿ ಬಡಿದು ರೂಪಿಸುವಂತೆ ತೃತೀಯಾತ್ಮನು[3] ನಮ್ಮ ಸಗ್ಗಗಳಲ್ಲಿ ಅವನನ್ನು ಬಡಿದು ರೂಪಿಸುತ್ತಾನೆ. ಕಮ್ಮಾರನಲ್ಲಿಯೇ ಅವನನ್ನು ಹರಿತವಾದ[4] ಆಯುಧವನ್ನಾಗಿ ಸವೆಯುತ್ತಾನೆ ಎಂಬಂತೆ ತೋರುತ್ತದೆ.

೬. ಹೇ ದಿವ್ಯ ಸಂಕಲ್ಪ ಸ್ವರೂಪನೇ, ಪ್ರೇಮನಾಥನ ವಿಸ್ತರಣೆಗಳಿಂದಲೂ ಅಭಿವ್ಯಕ್ತಿಗಳಿಂದಲೂ - ಶತ್ರುಗಳಿಂದ ಪೀಡಿತರಾಗಿರುವುದರಿಂದ, ಒಳಜಗಳಗಳಿಂದ ಮುತ್ತಲ್ಪಟ್ಟಿರುವ ನಾನು ಅರ್ಥಾತ್ ನಾವು ಆ ಪೀಡೆಯಿಂದ ಮುಕ್ತರಾಗಿ ಮರ್ತ್ಯರ ಈ ಎಡಹು ತಡಹುಗಳಿಂದಾಚೆಗೆ ಹೋಗುವಂತಾಗಲಿ.

೭. ಹೇ ದಿವ್ಯ ಸಂಕಲ್ಪನೇ, ಮಾನವಾತ್ಮರಾದ ನಮ್ಮಲ್ಲಿಗೆ ಆ ದಿವ್ಯ ಸುಖ ಸೌಕರ್ಯಗಳನ್ನು ತಂದುಕೊಡು ; ಓ ಪ್ರಣೋದ ನಿರ್ಭರನೇ, ಹಾದಿ ಹಿಡಿದಿರುವ ನಮ್ಮನ್ನು ಆತನು ಮುನ್ನೂಕಲಿ. ಅವನು ನಮ್ಮನ್ನು ಪೋಷಿಸಿ ಸಂವರ್ಧಿಸಲಿ. ಹಾಗೇ ಅವನು ನಮ್ಮಲ್ಲಿದ್ದು ಆ ದಿವ್ಯ ಸಮೃದ್ಧಿಯನ್ನು ಗೆದ್ದು ಕೊಡಲಿ, ಪೂರ್ಣತೆಯನ್ನು ದಯಪಾಲಿಸಲಿ. ರಣರಂಗದಲ್ಲಿ ನಮ್ಮೊಡನೆ ನೀನು ಭಟನಂತೆ ಬಾ - ಬಲದಿಂದ ನಾವು ಬಲಿಷ್ಠರಾಗೋಣ - ಬೆಳೆದು ನಿಲ್ಲೋಣ.



---

೨. ಅಕ್ಷರಶಃ- ವಕ್ರರು ಎಂದರ್ಥ. ಬಹುಶಃ ಏಳು ನದಿಗಳು ನಮ್ಮ ಇರವಿನ ಚಲನೆಗಳು -ಅವು ನಮ್ಮ ಮರ್ತ್ಯ ಜೀವನದ ತೊಡಕುಗಳ ಮೂಲಕ ಸುತ್ತಿ ಸುತ್ತಿ ಹೋಗುತ್ತವೆ ಎಂದು ಭಾವ.

೩. ತ್ರಿತ ಆಪ್ತ್ಯ = ತೃತೀಯ ಯಾ ತ್ರಿಪುಟ, ತ್ರಿಗುಣ, ಮೂರುಪಟ್ಟು ಅಥವಾ ಮುಮ್ಮಡಿ- ಎದ್ದು ಕಾಣುವಂತೆ ಮಾನಸ ಪ್ರಜ್ಞಾಸ್ತರದ ಪುರುಷನು. ಪರಂಪರೆಯಲ್ಲಿ ಅವನೊಬ್ಬ ಋಷಿಯು. ಅವನಿಗೆ ಅರ್ಥಪೂರ್ಣವಾಗಿ ಏಕ ಮತ್ತು ದ್ವಿತ (ಒಬ್ಬ ಮತ್ತು ಇಬ್ಬ) ಎಂಬ ಭೌತಿಕ ಹಾಗೂ ಜೈವಿಕರಾಗಿರಬಹುದಾದ ಸಹಚರರಾಗಿದ್ದಾರೆ. ಅವರೂ ಪುರುಷರು-ಪ್ರಾಣ ಪುರುಷ ಅಥವಾ ಉತ್‌ಕ್ರಿಯಾತ್ಮಕ ಎಂಬವನು ಎರಡನೆಯವನಾದ ದ್ವಿತನು. ವೇದದಲ್ಲಿ ತ್ರಿತ ಆಪ್ತನೊಬ್ಬ ದೇವತೆಯಾಗಿ ಕಾಣುತ್ತಾನೆ.

೪. ಮೂಲವು ಶೈಲಿಯಲ್ಲಿ ಹಾಗೂ ಸೂಚಕತೆಯಲ್ಲಿ ಪಿಂಡೀಕೃತ - ಸಾಮಾನ್ಯ ವೈದಿಕ ಪದ ಸಂಹತಿಯ ಅರ್ಥಗರ್ಭಿತ ಶಯ್ಯಾ ರಚನೆಯನ್ನೂ ಮೀರಿದ್ದಾಗಿದೆ : "ಯಾವಾಗ - ಓ - ತ್ರಿತನು ಸ್ವರ್ಗದಲ್ಲಿ ಕಮ್ಮಾರನಂತೆ ಯಾವಾಗ ಅವನನ್ನು ರೂಪಿಸುತ್ತಾನೋ ಆಗ, ಲಯವಾಗ ಹರಿತಗೊಳಿಸುವನೋ ಆಗ" ಎಂಬ ಪದಸಂಹತಿಯು ಉಕ್ತ ಪ್ರಕಾರದ್ದು. ಅರ್ಥವನ್ನು ಹೊರತರಲು ಇಂಗ್ಲಿಷಿನಲ್ಲಿ ನಾವು ಆ ಪದಸಂಹತಿಯನ್ನು (ಮೇಳನುಡಿಯನ್ನು) ವಿಸ್ತರಿಸಬೇಕಾಗುತ್ತದೆ.

# ಹತ್ತನೆಯ ಅಗ್ನಿ ಸೂಕ್ತ

## ಸಿದ್ಧಿಪಡೆದ ಕೀರ್ತಿಶಾಲಿ ಆತ್ಮಗಳ ಬಗೆಗಿನ ಸೂಕ್ತ

[ತ್ರಿಪುಟ ಶಕ್ತಿಯಾದ ಕ್ರಿಯಾಶಕ್ತಿ, ಜ್ಞಾನಶಕ್ತಿ ಮತ್ತು ಆಹ್ಲಾದಶಕ್ತಿಗಳಿಂದ ಕೆಲಸ ಮಾಡೆಂದು ದಿವ್ಯ ಜ್ವಾಲೆಯನ್ನು ಋಷಿಯು ಪ್ರಾರ್ಥಿಸುತ್ತಾನೆ. ಪರಮಸತ್ಯ ಮತ್ತು ಪರಮವಿಸ್ತಾರವನ್ನು ತಲುಪಿದ ಮಾನವ ಕುಲಜ ಕೀರ್ತಿಶಾಲಿ ಆತ್ಮಗಳ ಬಗೆಗೆ ಆತನು ಹೇಳುತ್ತಾನೆ. ಆ ಕೀರ್ತಿಶಾಲಿ ಆತ್ಮಗಳು ಎಂದರೆ ಉರಿಯುವ ಮತ್ತು ಎದುರಾಳುಗಳ ಮೈ ಮುರಿಯುವ ಜ್ವಾಲಾ ಕಿರಣಗಳು. ಅವುಗಳ ಮೂಲವು ಬಹಿರ್‌ವ್ಯಾಪಕ ಪ್ರಜ್ಞಾತ ಪ್ರಣೋದ, ಮಹಾದೇವತಾತತ್ವದ ಸತ್ವ ! ಅದು ನಮ್ಮಲ್ಲಿದ್ದು ದಿವ್ಯ ಪ್ರಭುತ್ವವನ್ನು ಏರಲು ಕೆಲಸ ಮಾಡುತ್ತಿದೆ. ಕೆಲವರು ಅಂಥ ಆತ್ಮಗಳಾಗಿದ್ದಾರೆ, ಇತರರು ಅಡ್ಡಿ-ಅಡಚಣೆಗಳಿಗೀಡಾದರೂ ಮುನ್ನಡೆದು ಬೆಳೆಯುತ್ತಿದ್ದಾರೆ. ಋಷಿಯು ಅಗ್ನಿಯ ಹೆಚ್ಚಿನ ದೃಢೀಕರಣವನ್ನು ಬಯಸುತ್ತಾನೆ ; ಏಕೆಂದರೆ ಎಲ್ಲರೂ ಸಮೃದ್ಧ, ಸರ್ವಂಕಷ ವೈಶ್ವತ್ರಿಕತೆಯತ್ತ ಮುನ್ನಡೆಯಲಿ ಎಂದು.]

೧. ಹೇ ಜ್ವಾಲೆ, ಹೇ ಕಿರಣ, ನಮ್ಮ ಪರಿಮಿತ ಸತ್ತೆಯಲ್ಲಿ ನಮಗಾಗಿ ಕ್ರಿಯಾಶಕ್ತಿ ಸಮೃದ್ಧವಾದ ಪ್ರಬೋಧವನ್ನು ಮಿಂಚಿಸು ; ಸರ್ವಂಕಷ ಸೌಲಭ್ಯದಿಂದ ಅಪಾರ ಶ್ರೇಯಃ ಸಮೃದ್ಧಲೋಕದತ್ತ ಹೋಗುವ ನಮ್ಮ ಹಾದಿಗೆ ಪ್ರಗತಿಪರವಾಗಿ ಅಂಟಿಕೋ.

೨. ಹೇ ಜ್ವಾಲೆ, ನೀನು ಸರ್ವೋಚ್ಚವಾದ ಆಶ್ಚರ್ಯಕರ ವಸ್ತುವಾಗಿದ್ದೀಯೆ. ಸ್ವ ಸಂಕಲ್ಪ ಬಲದಿಂದ ನಮ್ಮಲ್ಲಿ ಸೂಕ್ಷ್ಮದರ್ಶನ ಶಕ್ತಿಯ ಮಹತ್ತೆಯಾಗುವವನು ನೀನು. ಸರ್ವ ಸಮಶ್ರುತಿಕಾರಕ ಮಿತ್ರನು[೧] ಯಜ್ಞದಲ್ಲಿ ಕಾರ್ಯವನ್ನು ಪೂರೈಸಿ ದಿವ್ಯ ಪ್ರಭುತ್ವಕ್ಕೆ[೨] ಏರುವುದು ನಿನ್ನಿಂದಲೇ.

೩. ಓ ಮಹಾಬಲ, ನಿನ್ನನ್ನು ದೃಢೀಕರಿಸುವುದರ ಮೂಲಕ ನಮ್ಮ ಪೂರ್ಣತೆಯನ್ನು ಮುಂಬರಿಸುವ[೩] ಈ ಕೀರ್ತಿಶಾಲಿ ಜ್ಞಾನಾತ್ಮಗಳ ಸಮಭಿವೃದ್ಧಿಯನ್ನೂ ಮುನ್ನಡೆಯನ್ನೂ ಹೆಚ್ಚಿಸು.

---

೧. ಮಿತ್ರನು ಪ್ರೇಮಾಧಿಪತಿಯು, ನಮ್ಮಲ್ಲಿಯ ದಿವ್ಯ ಪ್ರಯತ್ನದ ಕೆಲಸಗಳಲ್ಲಿ ಸಾಮಶ್ರುತ್ಯವನ್ನು ಪ್ರವೇಶಿಸುವಂತೆ ಮಾಡುವವನು ಆತನು ; ಮತ್ತು ಹಾಗೆ ಮಾಡಿ ನಮ್ಮ ಮುನ್ನಡೆಯ ಪಂಕ್ತಿಗಳೆಲ್ಲವನ್ನೂ ಒಂದಿಸುತ್ತಾನೆ. ನಮ್ಮ ಯಜ್ಞದ ಎಲ್ಲ ಎಳೆಗಳನ್ನೂ ಕೂಡಿಸಿ ಜ್ಞಾನ, ಶಕ್ತಿ, ಆನಂದಗಳ ಅತ್ಯುನ್ನತ ಐಕ್ಯ ಸಿದ್ಧಿಸುವವರೆಗೆ ಕೆಲಸ ಮಾಡುತ್ತಾನೆ.

೨. ಅಸುರ್ಯಂ=ದೇವಶಕ್ತಿ, ಪ್ರಭುವಿನ ಒಡೆಯತನವನ್ನು ಸಾದಿಸುವ ಶಕ್ತಿ, ನಮ್ಮಲ್ಲಿರುವ ದಿವ್ಯ "ಅಸುರ"= ಬಲಪ್ರದವಾದ ಪ್ರಾಣ.

೩. ಅಥವಾ "ಸಾಧಿಸಿಕೊಡುವ".

೪. ಎಲೈ ಮಹಾಬಲ, ಎಲೈ ಮಹಾಹ್ಲಾದ, ಜೀವನದ ತ್ವರಿತ ಪ್ರಣೋದಗಳ ಸುಖಕರ ಸಮೃದ್ಧಿಯನ್ನು, ಶ್ರೀಮಂತಿಕೆಯನ್ನು, ಹೊಂದಿರುವವರು ಇವರು ; ಮತ್ತು ವಿಚಾರ ಗರ್ಭಿತ ಮಂತ್ರಗಳನ್ನು ಸುಖಕರ ಬೆಳಕನ್ನಾಗಿ ತಿರುಗಿಸುವವರು ಇವರೇ - ಈ ಆತ್ಮಗಳೇ ಪ್ರಭಾವಿಗಳು - ಇವರಲ್ಲಿ ವೀರ ಸಹಜ ಪ್ರಭಾವವಿದೆ- ಇವರಿಗೆ ಸ್ವರ್ಗದಲ್ಲಿ[೪] ಕೂಡಾ ವಿಸ್ತಾರವಿದೆ, ವೈಶಾಲ್ಯವಿದೆ, ಬೃಹತ್ತೆಯಿದೆ ; ಇವರಿಗಾಗಿ ಅದು ತಾನಾಗಿಯೇ ಪೂರ್ಣ ಕ್ರಿಯಾಪರವಾಗಿ ಜ್ಞಾನದತ್ತ ಕಣ್ತೆರೆಯುಸುತ್ತದೆ.

೫. ಇವೇ ಆ ಜ್ವಾಲಾಮಯ ಕಿರಣಗಳು - ಓ ಬಲಿಷ್ಠ, ಬಲ, ದಿವ್ಯ ಸಾಮರ್ಥ್ಯ - ಇವೇ ಹಿಂಸಾರ್ಭಟದಿಂದ ಉರಿದೇಳುವ ಜ್ವಾಲೆಗಳು ಮತ್ತು ಮಿಂಚುಗಳಂತೆ ದಶದಿಕ್ಕುಗಳಲ್ಲಿ ಧಾವಿಸುವ ವಿದ್ಯುಲ್ಲೇಖೆಗಳಂತೆ, ಅಪಾರ ಐಶ್ವರ್ಯ ವಿಸ್ತಾರದತ್ತ ಓಡುವ ರಣದ್ರಥಗಳಂತೆ ಕಾಣುವುವು ಇವೇ ಈ ಜ್ವಾಲಾಂಶುಗಳೇ.

೬. ಈಗ - ಓ ದಿವ್ಯೇಶ್ವರ ಬಲಸ್ವರೂಪನೇ - ಮೇಲೆ ಹೇಳಿದ ಮಹಾತ್ಮರ ಜೊತೆಗೇ ಅಡೆತಡೆಗಳಿಗೊಳಗಾದ (ದುರ್ದೈವಿ) ಶುದ್ಧಾತ್ಮರೂ ದಿವ್ಯ ವಿಸ್ತಾರವನ್ನು, ಅಗಲದಗಲವನ್ನು, ಸೇರುವಂತೆ ಮಾಡು ಮತ್ತು ಆತ್ಮ ಸಹಜ ಶ್ರೀಮದ್ ವೈಭವಗಳನ್ನು ಪಡೆಯುವಂತೆ ಮಾಡು. ಈ ನಮ್ಮ ಯಶಸ್ವಿ ಅರಿವಿನ ಆತ್ಮಗಳೂ ಈಯೆಲ್ಲ ಪ್ರದೇಶಗಳನ್ನು[೫] ಹೊಕ್ಕು ತಿರುಗಾಡುವಂತೆ ಮಾಡು - ಇನ್ನೂ ಆಚೆಗಿನ ಪ್ರದೇಶವನ್ನೂ ಇವರು ತಿರುಗಾಡುವ ಹಾಗೆ ಮಾಡು.

೭. ಓ ಮಹಾಬಲ, ಓ ಪ್ರಭಾವ ಸಮೃದ್ಧ ಮಹಾತ್ಮ, ನೀನು ದೃಢೀಕೃತನಾದ ಮೇಲೆ ಮತ್ತು ಆ ದೃಢೀಕರಣದ ಅವಧಿಯಲ್ಲಿ - ಹೇ ಆಹುತಿ ಪುರೋಹಿತನೇ - ನಮಗೆ ಸುಖ ಸೌಕರ್ಯಗಳನ್ನು, ಸುಲಭ ಸಮೃದ್ಧಿಜೀವನ ಸ್ಥಿತಿಯನ್ನು[೬] ತಂದುಕೊಡು. ಅದೆಂಥಾ ಜೀವನ ಸ್ಥಿತಿಯೆಂದರೆ, ನಿನ್ನನ್ನು ದೃಢೀಕರಿಸುವ ಎಲ್ಲರಿಗೂ ಸಿಕ್ಕುವ ಸರ್ವವ್ಯಾಪಕವಾದ ಪ್ರಣೋದ ಪೂರ್ಣತೆಯು ; ಅದರಿಂದ ಮತ್ತೆ ನಿನಗೆ ದೃಢೀಕರಣಪ್ರಾಪ್ತಿ ! ನಾವು ಬೆಳೆಬೆಳೆದು ಬಲಿಷ್ಠರಾಗುವ ಹಾಗೆ ಮಾಡಲೆಂದು ನಮ್ಮ ಕಾಳಗಗಳಲ್ಲಿ ನಮ್ಮೊಡನೆ ನೀನು ಶಿಸ್ತಿನಿಂದ ಹೆಜ್ಜೆ ಹಾಕುತ್ತಾ ನಡೆದು ಬಾ.



---

೪. ಅಂದರೆ, ಅದು ಅತಿಮಾನಸದ ವೈಶಾಲ್ಯವನ್ನು ಸಂಧಿಸಿ ಅದರಲ್ಲಿ ಅಂತರ್ಗತವಾಗುವ ಶುದ್ಧ ಮನಸ್ಸತೆಯ ಎತ್ತರಗಳು, ಶಿಖರಗಳು.

೫. ಮಾನಸ ಸತ್ತೆಯ ಸ್ವರ್ಗಗಳ ಪ್ರದೇಶಗಳನ್ನೆಲ್ಲಾ ನಾವು ನಮ್ಮ ಜಾಗರದಲ್ಲಿ ಪ್ರಜ್ಞೋದಯ ಕಾಲದಲ್ಲಿ - ತಬ್ಬಿಕೊಂಡು ಅನಂತರ ಅವುಗಳನ್ನು ದಾಟಿ ಹೋಗಬೇಕು, ಮೀರಿ ಹೋಗಬೇಕು.

೬. ದಿವ್ಯ ಆಸ್ತಿ ಪಾಸ್ತಿಗಳಿಂದ ಕೂಡಿದ ಆತ್ಮದಲ್ಲಿರುವ ಶ್ರೀಮಂತಿಕೆ ಮತ್ತು ಅಪಾರ ಆರ್ಜಿತಗಳು ಎಂದರೆ ಆಧ್ಯಾತ್ಮಿಕ ವೃದ್ಧಿ ಅಥವಾ ಸುಖ ಸಂಪತ್ತು - ಇದು ದಿವ್ಯಾನಂದದ ಅನಂತ ಆಕರದ ಪ್ರತಿಮೆ, ಪ್ರತೀಕ. ಈ ದಿವ್ಯಾನಂದದಿಂದ ಜೀವಿ ಇನ್ನೂ ಹೆಚ್ಚು ಶ್ರೀಮಂತವಾಗಿ ಸಜ್ಜಿತವಾದ ತನ್ನ ಸತ್ತೆಯ ವೈಶಾಲ್ಯಕ್ಕೆ ಮುನ್ನಡೆದು ಹೋಗುವುದು.

# ಹನ್ನೊಂದನೆಯ ಅಗ್ನಿ ಸೂಕ್ತ

## ದಿವ್ಯ ಪುರೋಹಿತನ ಮತ್ತು ಯಜ್ಞ ಜ್ವಾಲೆಗಳನ್ನು ಕುರಿತ ಸೂಕ್ತ

[ಋಷಿಯು ಜಾಗರಿತನಾಗಿ ಸೂಕ್ಷ್ಮ ಸಮೀಕ್ಷೆ ಮಾಡುತ್ತಿರುವ ಯಜ್ಞ ಜ್ವಾಲೆಯ ಹುಟ್ಟನ್ನು ಸೂಕ್ತಿಸುತ್ತಾನೆ. ಈ ಜ್ವಾಲೆಯೊಂದು ದರ್ಶನ ಮತ್ತು ಸಂಕಲ್ಪ ಶಕ್ತಿ - ಇದೊಂದು ದ್ರಷ್ಟಾರ-ಈ ದ್ರಷ್ಟಾರನ ಪ್ರಯತ್ನದ ಆವೇಶವು ಮಾನಸ ಸ್ವರ್ಗಗಳಲ್ಲಿ ಒಂದು ದಿವ್ಯಜ್ಞಾನವಾಗಿ ಪರಿವರ್ತಿತವಾಗುತ್ತದೆ. ಈ ದ್ರಷ್ಟ್ಯ ಸಂಕಲ್ಪವು ವಿಚಾರದ ಸ್ಫೂರ್ತ ಮಂತ್ರಗಳನ್ನು ಅಭಿವರ್ಧಿಸಬೇಕು. ಇದೊಂದು ಪ್ರಭಾವಾಕರ, ಪ್ರಣೋದ ಪುತ್ರ ; ಇದನ್ನು ಪ್ರಾಚೀನ ಮಹಾತ್ಮರು ಹುಡುಕಿ ತೆಗೆದು ಪಾರ್ಥಿವ ಪ್ರರೋಹಗಳಲ್ಲಿ ಅಡಗಿಸಿಟ್ಟರು-ಜೀವಾತ್ಮನು ಇಲ್ಲಿ ಭೋಗಿಸಬಯಸುವ ಎಲ್ಲ ಅನುಭವಗಳಲ್ಲಿಯೂ ಅವಿತಿಟ್ಟರು.]

೧. ಪ್ರಾಣರಕ್ಷಕನು ಜನಿಸಿದನು ; ಜಾಗರಿತ ಮತ್ತು ಪೂರ್ಣ ಸೂಕ್ಷ್ಮ ದೃಷ್ಟಿಯುಳ್ಳ ಜ್ವಾಲಾ ಸ್ವರೂಪನು ಹುಟ್ಟಿದನು. ಏಕೆ ? ಸುಖ ಸೌಕರ್ಯಗಳನ್ನು ಪಡೆಯಲೆಂದು ಹೊಸ ದಂಡಯಾತ್ರೆಯನ್ನು ಕೈಗೊಳ್ಳಲು. ಅವನ ಯುದ್ಧ ಮುಖವು ಸ್ಪಷ್ಟತೆಗಳದು- ಅವನು ತನ್ನ ವೈಶಾಲ್ಯವನ್ನು ಸ್ವರ್ಗಕ್ಕೆ ಮುಟ್ಟಿಸಲೆಂದು ಪ್ರಕಾಶಮಾನವಾಗಿ ಮಿಂಚುತ್ತಾನೆ, ದಿವ್ಯವಿಭೂತಿಗಳನ್ನು ತರುವವರಿಗಾಗಿ ಅವನು ಶುದ್ಧನಾಗಿರುತ್ತಾನೆ.

೨. ಯಜ್ಞದಲ್ಲಿ ದರ್ಶನವಾಗಿ ಇರಲೆಂದು ಜನರು ತ್ರಿಪುಟ ಪ್ರಪಂಚದ ಅಧಿವೇಶನದಲ್ಲಿ[೧] (ಅಗ್ನಿಯನ್ನು) ಬಹು ಎತ್ತರದಲ್ಲಿ ಹೊತ್ತಿಸಿದರು ; ಮತ್ತು ಹೋತಾರನು ಅವನನ್ನು ಎದುರಿಗಿಟ್ಟನು, ಯಜ್ಞಕುಂಡದಲ್ಲಿ ಕುಳ್ಳಿರಿಸಿದನು. ಅವನು ಒಂದು ರಥವನ್ನೇರಿ ಬರುವನು- ಯಾರೊಡನೆ? -ದಿವ್ಯ ಮನೋದೇವತೆಯಾದ ಇಂದ್ರನೊಡನೆ ಹಾಗೂ ಇತರ ದಿವ್ಯ ಶಕ್ತಿಗಳೊಡನೆ. ಹಾಗೆ ಬಂದ ಅಗ್ನಿಯು ಯಜ್ಞಾಸನದಲ್ಲಿ ಕುಳಿತುಕೊಳ್ಳುವನು-ಹೇಗೆ ? ಯಜ್ಞಕ್ಕಾಗಿ ಸಂಕಲ್ಪ ಬಲ ಸಂಪೂರ್ಣತೆಯಿಂದ ಆಹುತಿದಾತಾರನಾಗಿ.

೩. ನೀನು ಅಜಿತ. ನೀನು ಶುದ್ಧ[೨]; ನೀನು ಯಮಳ ಮಾತೃಸೂನು - ನೀನು ಸರ್ವತಃ ಪ್ರಕಾಶನಾದ ಸೂರ್ಯನಿಂದ ಸಂಮೋದ ಸಂಭೃತ ದ್ರಷ್ಟಾರನಾಗಿ ಉದಯಿಸಿದೆ. ಆ

---

೧. ನಮ್ಮ ಯಜ್ಞಾಧಿವೇಶನವು ನಡೆಯುವ ಮನ, ಪ್ರಾಣ, ದೇಹಗಳ ತ್ರಿಪುಟ ಪ್ರಜ್ಞಾಲೋಕವು ಅಥವಾ ಆತ್ಮ ಪೂರ್ಣತೆಯ ಸಾಧನೆಯು ಎಲ್ಲಿ ಮುನ್ನಡೆಯುವುದೋ ಅಲ್ಲಿ.

೨. ಅಥವಾ ಉಜ್ವಲಿದ್ದರೂ ಶುದ್ಧವಾಗಿರುವ.

ಮಾತೃಗಳು ನಿನ್ನನ್ನು ಸ್ಪಷ್ಟತೆಯಿಂದ ಸಂವರ್ಧಿಸಿದ್ದಾರೆ. ಹೇ ಜ್ವಾಲೆ ನಿನ್ನ ಆವೇಶ ಧೂಮವು ಸ್ವರ್ಗದಲ್ಲಿಯ ವಾಸಸ್ಥಳಗಳನ್ನು ತಲುಪಿದೊಡನೆಯೇ ತಾನೇ ದರ್ಶನವಾಗುವುದು.

೪. ಯಜ್ಞವನ್ನು ಪೂರ್ತಿಗೊಳಿಸುವ ಶಕ್ತಿಯೊಡನೆ ಆ ಜ್ವಾಲೆಯು (ಜ್ವಾಲ ಸ್ವರೂಪನು) ನಮ್ಮ ಯಜ್ಞಕ್ಕೆ ಬರಲಿ. ಆ ಜ್ವಾಲೆಯನ್ನು, ಉರಿಯನ್ನು, ಮನುಷ್ಯರು ತಮ್ಮ ವಾಸಸ್ಥಳದ ಎಲ್ಲ ಉಪಶಾಲೆಗಳಿಗೂ (ಕೋಣೆಗಳಿಗೂ) ತೆಗೆದುಕೊಂಡು ಹೋಗಲಿ. ಉಕ್ತ ಜ್ವಾಲಾ ಸ್ವರೂಪನು ನಮ್ಮ ದೂತನಾದನು ಮತ್ತು ನಮ್ಮ ಹುತವಹನಾದನು (ಆಹುತಿವಾಹಕನಾದನು). ಮನುಜರು ಜ್ವಾಲಾಸ್ವೀಕಾರ ಮಾಡಿದಾಗ ಅವರು ಮಾಡಿದ್ದು ದ್ರಷ್ಟ ಸಂಕಲ್ಪ ಸ್ವೀಕಾರವನ್ನು.

೫. ಹೇ ಜ್ವಾಲ ಸ್ವರೂಪನೇ, ಜೇನುತುಪ್ಪದಿಂದ[೩] ಸಂಪೂರ್ಣವಾಗಿ ತುಂಬಿರುವ ಈ ಮಂತ್ರ ಶಬ್ದವು ನಿನಗಾಗಿ. ಈ ವಿಚಾರವು ನಿನಗಾಗಿ ಮತ್ತು ಇದು ನಿನ್ನ ಹೃದಯದಲ್ಲಿ ಶಾಂತಿಯಾಗಲಿ, ಆನಂದವಾಗಲಿ. ಈ ದಿವ್ಯ ವಿಚಾರದ ಮಂತ್ರೋಚ್ಚಾರಗಳು ನಿನ್ನನ್ನು ತೃಪ್ತಿಪಡಿಸಿ ವೃದ್ಧಿಗೊಳಿಸುವುದೇ ಹೀಗೆ ಹೇಳಲು ಕಾರಣವು. ಇವು ನಿನ್ನನ್ನು ವೃದ್ಧಿಗೊಳಿಸುವುದಾದರೋ ಸಮುದ್ರವನ್ನು ಆ ಪೋಷಕ ಮಹಾ ನದಿಗಳು[೪] ತುಂಬಿ ಉತ್ಕರ್ಷಿಸುವ ಹಾಗೆ.

೬. ಏ ಉರಿಯೇ, ಪ್ರಭಾವದ[೫] ಆತ್ಮಗಳು ಗುಪ್ತ ಸ್ಥಲದಲ್ಲಿದ್ದ[೬] ನಿನ್ನನ್ನು ಕಂಡುಹಿಡಿದರು - ನೀನು ಸಂಮೋದವಸ್ತುವೆಲ್ಲದರಲ್ಲೂ ಅಡಗಿದ್ದ ನಿನ್ನ ಮೇಲಿನ ನಮ್ಮ ಒತ್ತಾಸೆಯಿಂದ, ಒತ್ತಡದಿಂದ, ನೀನು ಒಂದು ಬಲಿಷ್ಠ ಪ್ರಣೋದವಾಗಿ ಹುಟ್ಟಿದೆ. ಹೇ ಪ್ರಭಾವಸ್ವರೂಪನೇ, ಅವರು ನಿನ್ನನ್ನು ಪ್ರಣೋದಪುತ್ರನೆಂದುಕರೆದರು.



---

೩. ಮದುಮಯ ಸೋಮಮದ್ಯ - ವಸ್ತ್ವಾಂತರಂಗದ ಆನಂದತತ್ವದಿಂದ ಕೋಡಿವರಿದುದು.

೪. ಅತಿಮಾನಸ ಸತ್ತೆಯಿಂದ ಅವತರಿಸಿ ನಮ್ಮಿರವಿನ ಪ್ರಜ್ಞಾತ ಸಾಗರವನ್ನು ತುಂಬುವ ಸಪ್ತ ಸಿಂಧುಗಳು ಯಾ ಸಪ್ತಚಲನೆಗಳು ಅವನ್ನು ತಾಯಂದಿರೆಂದೂ ಪೋಷಕ ಗೋವುಗಳೆಂದೂ, ಸ್ವರ್ಗೀಯ ಮಹಾಬಲಿನಿಯರೆಂದೂ ಜ್ಞಾನಜಲಗಳೆಂದೂ ಸತ್ಯ ಪ್ರವಾಹಗಳೆಂದೂ ಮುಂತಾಗಿಯೂ ಕರೆಯಲಾಗುತ್ತದೆ. ಅವರನ್ನು ತಾಯಂದಿರೆನ್ನುತ್ತಾರೆ, ಸಾಕುವ ಹಸುಗಳೆನ್ನುತ್ತಾರೆ, ಸ್ವರ್ಗದ ಬಲಿಷ್ಠ ದೇವತೆಗಳೆನ್ನುತ್ತಾರೆ. ಜ್ಞಾನ ಜಲಗಳೆನ್ನುತ್ತಾರೆ ಮತ್ತು ಪರಸತ್ಯದ ಪ್ರವಾಹ ಎಂದು ಮುಂತಾಗಿ ಹೇಳುತ್ತಾರೆ.

೫ ಪ್ರಾಚೀನ ಸಪ್ತದ್ರಷ್ಟಾರರು ಯಾ ತಂದೆಯರು, ಅಂಗಿರಸ ಋಷಿಗಳು, ಅಗ್ನಿಸುತರು ಮತ್ತು ದ್ರಷ್ಟಸಂಕಲ್ಪದ ಮಾನವ್ಯ ಮಾದರಿಗಳು.

೬ ವಸ್ತುಗತವಾದ ಅವಮಾನಸದ ಹೃದಯ.

# ಹನ್ನೆರಡನೆಯ ಅಗ್ನಿ ಸೂಕ್ತ

## ಮಾನವನ ಸತ್ಯಸಾಧನಾಪೇಕ್ಷೆಯ ಸೂಕ್ತ

[ಋಷಿಯು ದಿವ್ಯ ಪ್ರಣೋದದ ಈ ಜ್ವಾಲೆಯನ್ನು ಆಮಂತ್ರಿಸುತ್ತಾನೆ. ಈ ಜ್ವಾಲೆಯು ಅತಿಮಾನಸ ಸತ್ಯದ ವಿಸ್ತಾರವಾದ ಪ್ರಭು. ಈ ಪರಮಸತ್ಯಪ್ರಜ್ಞನು ಆಮಂತ್ರಿತನಾದದ್ದೇಕೆ? ವಿಚಾರವನ್ನೂ ತದೀಯಮಂತ್ರವನ್ನೂ ಸ್ವೀಕರಿಸಿ, ಮಾನವನಲ್ಲಿ ಪರಮಸತ್ಯಪ್ರಜ್ಞಾವಂತನಾಗಿ ಪರಮಸತ್ಯದ ಅನೇಕ ಪ್ರವಾಹಗಳನ್ನು ಹೊರದೆಗೆಯಲೆಂದು. ಕೇವಲ ಬಲಪ್ರಣೋದದಿಂದಲ್ಲ - ಸತ್ಯಸಿದ್ಧಿಯು ದ್ವೈತ ನಿಯಮದಿಂದಂತೂ ಸಾಧ್ಯವೇ ಇಲ್ಲ ; ಅದರದು ಸತ್ಯದಿಂದ ಮಾತ್ರ ಸಾಧ್ಯ. ಆದರೆ ಅನೃತದೊಡನೆ ಹೋರಾಡಿ ಗೆಲ್ಲುವ ಮತ್ತು ನಮ್ಮನ್ನು ರಕ್ಷಿಸುವ ಈ ಪರಮ ಪ್ರಣೊದದ ಶಕ್ತಿಗಳಲ್ಲದೆ, ಈವರೆಗೆ ನಮಗೆ ನೆರವಿತ್ತ ಇತರ ಶಕ್ತಿಗಳೂ ಇವೆ. ಆದರೀ ಇತರ ಶಕ್ತಿಗಳು ಅನೃತ ಮೂಲಕ್ಕೇ ಅಂಟಿಕೊಂಡಿರುತ್ತವೆ. ಏಕೆಂದರೆ ಇವು ಮಾನವನ ವರ್ತಮಾನ ಸ್ವಾಭಿವ್ಯಕ್ತಿಯನ್ನೇ ಅಪ್ಪಿಕೊಂಡು ಈ ಮಟ್ಟದಿಂದ ಮುಂದಕ್ಕೆ ಏರಲು ಒಪ್ಪುವುದಿಲ್ಲ. ಇವು ತಮ್ಮ ಸ್ವೇಚ್ಛಾನುಸಾರವಾಗಿ ಸತ್ಯಶೋಧಕನಿಗೆ ವಕ್ರೋಪದೇಶವನ್ನೇ ಮಾಡುತ್ತವೆ. ಯಜ್ಞದಿಂದಲೂ ಆತ್ಮ ಸಮರ್ಪಣೆಯಿಂದಲೂ ಯಜ್ಞದಲ್ಲಿ ಮನುಷ್ಯನು ಸತತ ಮುಂಬರಿವ ಯಾತ್ರಿಕನಾಗಿ ತನ್ನನ್ನು ಮೀರಿರುವ ತನ್ನ ವಿಶಾಲ ವಾಸಸ್ಥಲ ಎನ್ನಿಸಿದ ಪರಮ ಸತ್ಯದ ಗೃಹವೂ ಪೀಠವೂ ಆದ ದಶೆಯನ್ನು ತನ್ನೆಡೆಗೆ ತನ್ನ ಹತ್ತಿರಕ್ಕೆ ತರುತ್ತಾನೆ.]

೧. ದಿವ್ಯ ಸಂಕಲ್ಪಕ್ಕೆಂದು, ಯಜ್ಞದ ಅಧಿಪತಿಗೆಂದು, ಮಹಾಬಲಿಷ್ಠನಿಗೆಂದು, ವಿಸ್ತಾರನಾದ ದೊರೆಗೆಂದು, ಪರಮ ಸತ್ಯ ಪ್ರಸಾರಕನಿಗೆಂದು ನನ್ನ ವಿಚಾರವನ್ನು ಆಹುತಿಯೆಂದು ನಿವೇದಿಸುತ್ತೇನೆ. ಮತ್ತು ಅದು ಜ್ವಾಲಾಮುಖದಲ್ಲಿ ಪವಿತ್ರೀಕೃತವಾದ ತಿಳಿವೆಣ್ಣೆಯಂತಿದೆ. ನನ್ನ ಮಂತ್ರೋಕ್ತಿಯನ್ನು[೧] ಅದು ಅದರ ದೊರೆಯನ್ನು[೨] ತಲುಪಲೆಂದು ಮುಂದಿಡುತ್ತಿದ್ದೇನೆ.

---

೧. ಮಾನಸ ಹಾಗೂ ಭೌತಿಕ ಅಸ್ತಿತ್ವಗಳ ವಿಭಜನೆ ಮತ್ತು ದ್ವೈತಗಳನ್ನು ಮೀರಿ ನಿಂತ ಗುಪ್ತವಾದ ಅತಿಮಾನಸ ಸತ್ಯದ ಆಕಾರವೂ ಅಭಿವ್ಯಕ್ತಿಯೂ ಆಗುವಂತೆ ವಿಚಾರವನ್ನೂ ಮಂತ್ರ ಶಬ್ದವನ್ನೂ ಪರಿವರ್ತಿಸುವುದೇ ವೈದಿಕ ವಿದ್ಯೆಯ ಕೇಂದ್ರ ಕಲ್ಪನೆ (ಧ್ಯೇಯ) ಮತ್ತು ಅದರ ಅದ್ಭುತಗಳ ಮೂಲಾಧಾರವಾಗಿದೆ.

೨. ವೃಷಭನು ; ವಿಚಾರವು ದೇವತಾತತ್ವದೆದುರು ಹೋಗಿ ಆತ್ಮಾರ್ಪಣೆ ಮಾಡಿಕೊಳ್ಳುವ ಹೊಳೆವ ದನದ ರೂಪದಲ್ಲಿ ಸಂಕೇತಿಸಲ್ಪಟ್ಟಿದೆ.

೨. ಓ ಪರಮಸತ್ಯದ ಪ್ರಜ್ಞಾತ ದ್ರಷ್ಟಾರನೇ, ನನ್ನ ಪ್ರಜ್ಞೆಯಲ್ಲಿ ಪರಮ ಸತ್ಯವೊಂದೇ ಪ್ರತ್ಯಕ್ಷಾನುಭವ ಪಡೆಯಲಿ ; ಹರಿವ ಹಲವು ಪ್ರವಾಹಗಳನ್ನು ಪರಮ ಸತ್ಯದಿಂದ ಅಪಸರಿಸು.[೩]-ನನ್ನ ಪ್ರಯಾಣವನ್ನು ಪ್ರಣೋದದಿಂದಲೂ ಅಲ್ಲ, ದ್ವೈತದಿಂದಲೂ ಅಲ್ಲ-ಹಾಗೆ ಹೊಳೆವ ಕಾರ್ಯಕರ್ತನ ಪರಮಸತ್ಯವನ್ನು[೪] ನಾನು ಸಾಧಿಸಲಾರೆ, ಪಡೆಯಲಾರೆ. ಆ ಕರ್ತ ಯಾವನು? ವೀರ್ಯಾಧಾನ ಮಾಡುವ ದೊರೆ ಅವನು.

೩. ಹೇ ದಿವ್ಯ ಸಂಕಲ್ಪನೇ, ನನ್ನಲ್ಲಿರುವ ಯಾವ ವಿಚಾರದಿಂದ ಪರಮಸತ್ಯದಿಂದ ಪರಮ ಸತ್ಯವನ್ನು ಹುಡುಕುತ್ತಾ ಹೊಸ ಮಂತ್ರೋಕ್ತಿಯ ಜ್ಞಾನವನ್ನು ಪ್ರೇರಿಸುವವನಾಗುತ್ತೀಯೆ? ಪರಮ ಸತ್ಯದ ಕಾಲಗಳನ್ನೂ ಋತುಗಳನ್ನೂ[೫] ಕಾಯುವ ಅಧಿಷ್ಠಾನ ದೇವತೆಯು ನನ್ನಲ್ಲಿ ಇರುವ ಎಲ್ಲವನ್ನೂ ಬಲ್ಲನು. ಆದರೆ ಅವನನ್ನು ನಾನರಿಯೆನು - ಸರ್ವಸುಖ ಸೌಕರ್ಯಾಧಿಪತಿಯಾದ ಆತನ ವಿಷಯ ನನಗೆ ಗೊತ್ತಿಲ್ಲ.

೪. ಹೇ ದಿವ್ಯ ಸಂಕಲ್ಪನೇ, ನಿನ್ನ ಶತ್ರುಬಂಧಕರಾದ ಅವರು ಯಾರು? ಆ ಹೊಳೆವವರು ಯಾರು? ಆ ಕಾಯ್ದುಕೊಂಡಿರುವವರು ಯಾರು? ಒಡೆಯತನ ಹಾಗೂ ಗೆಲುವುಗಳನ್ನು ಹುಡುಕುತ್ತಿರುವವರು ಯಾರು? ಓ ದಿವ್ಯೇಚ್ಛಾಸ್ವರೂಪನೇ, ಅನೃತದ ನೆಲೆಗಟ್ಟನ್ನು ರಕ್ಷಿಸುತ್ತಿರುವವರು ಯಾರು? ಪ್ರಸ್ತುತವಾದ[೬] ಮಂತ್ರವೊಂದರ ವಿಧಾಯಕರಾರು?

೫. ಇವರೆಲ್ಲಾ ನಿನ್ನ ಸಂಗಾತಿಗಳು - ಎಲೈ ದಿವ್ಯ ಸಂಕಲ್ಪಾತ್ಮಕನೇ - ಇವರು ನಿನ್ನನ್ನು ಬಿಟ್ಟು ಅಡ್ಡದಾರಿ ಹಿಡಿದವರು. ಮೊದಲಿನವರು ಅನುಕೂಲರಾಗಿದ್ದರು ಈಗ ಇವರು ಅನನುಕೂಲರಾಗಿದ್ದಾರೆ. ಋಜುತ್ವವನ್ನು ಅನ್ವೇಷಿಸುವವರಿಗೆ ವಕ್ರ ವಕ್ರವಾಗಿ ಮಾತಾಡಿ, ವಕ್ರೋಪದೇಶಗಳನ್ನು ಮಾಡಿ, ಇವರು ತಮಗೆ ತಾವೇ ಹಾನಿ ಮಾಡಿಕೊಳ್ಳುತ್ತಾರೆ.

೬. ಆದರೆ, ಎಲೈ ದಿವ್ಯ ಸಂಕಲ್ಪ ಸ್ವರೂಪನೇ, ಯಾರು ವಿಧೇಯತೆಯಿಂದ ಸಮರ್ಪಿಸಿ ನಿನ್ನ ಯಜ್ಞವನ್ನು ಬಯಸುವನೋ - ಅವನು ಹೊಳೆವ ಕರ್ತಾರನಾದ ವೀರ್ಯಾಧಾತೃವಿನ[೭] ಸತ್ಯವನ್ನು ಕಾಯುತ್ತಾನೆ. ಯಾವುದರಲ್ಲಿ ಯಾತ್ರಿಕ ಮಾನವನು ತನ್ನ ಪುರ

---

೩. ವಿರುದ್ಧ ಶಕ್ತಿಗಳಿಂದ ಅವು ಎಲ್ಲಿ ಅಡಗಿಸಲ್ಪಟ್ಟಿವೆಯೋ ಆ ಗಿರಿಗತವಾದ ಕಲ್ಲಿನಿಂದ, ಬಂಡೆಯಿಂದ.

೪. ನಮ್ಮ ಜೀವನದೊಳಗೆ ಅತಿಮಾನಸ ಅವತರಿಸುವುದನ್ನೂ ಸ್ವರ್ಗದ ಮಳೆಯಿಂದ ಸಂಕೇತಿಸಲಾಗಿದೆ. ಅದು ಸ್ವರ್ಗೀಯ ಸಪ್ತಸಿಂಧುಗಳನ್ನು ರಚಿಸಿತು - ಇವು ಪಾರ್ಥಿವ ಪ್ರಜ್ಞೆಗೆ ಮುಖವಾಗಿ ಕೆಳಗೆ ಹರಿಯುತ್ತವೆ ಎಂಬುದನ್ನು ಹಿಂದಿನ ವಾಕ್ಯ ತಿಳಿಸುತ್ತದೆ.

೫. ಕಾಲಾವಧಿಗಳು - ಕೆಲವೊಮ್ಮೆ ವರ್ಷಗಳೆಂದೂ ವರ್ಣಿತವಾಗಿವೆ- ಕೆಲವೆಡೆ ಯಜ್ಞಪ್ರಗತಿಯ ಸಾಂಕೇತಿಕ ದ್ವಾದಶ ಮಾಸಗಳೆಂದೂ ವರ್ಣಿಸಲ್ಪಟ್ಟಿವೆ.

೬. ಅಥವಾ "ಅನೃತಮಂತ್ರ, ಅಪಮಂತ್ರ" ಆ ಈ ಎರಡು ಸಂದರ್ಭಗಳಲ್ಲೂ ಅದು ಹೊಸ ಮಂತ್ರಕ್ಕೆ ವಿರುದ್ಧವಾದ ಹಳೆಯ ಅನೃತೋಕ್ತಿಯೆಂದೇ ಅರ್ಥವಾಗುತ್ತದೆ. ಹೊಸ ಮಂತ್ರವು ಅಗ್ನಿಯು ಸೃಷ್ಟಿಸಬೇಕಾದ ಜ್ಞಾನಕ್ಕೆ ಸಂಬಂಧಿಸಿದ ಪರಮ ಸತ್ಯ ವಿಷಯಕವಾದುದು.

೭. "ಹೊಳೆವ ವೃಷಭ ಅಥವಾ ಗಂಡು" - ಆದರೆ ಎರಡನೆಯ ಶಬ್ದವು ವೃಷ್ಟಿಕಾರಕ ಎಂಬ ಅರ್ಥವನ್ನೂ ಉಳ್ಳದ್ದಾಗಿದೆ - ವೀರ್ಯಾಧಾನ ಕರ್ತನೆಂದೂ ಸಮೃದ್ಧಿ ವಿತರಣಕಾರನೆಂದೂ ಕೆಲವೊಮ್ಮೆ ಬಲಿ ಹಾಗೂ ಅಪಾರ ಶ್ರೀಮಂತ ಎಂದೂ ಅದಕ್ಕರ್ಥಗಳಿವೆ. ಮೊದಲನೆಯದಕ್ಕೆ ಸಕ್ರಿಯ, ಚಲ ಎಂಬ ಅರ್ಥವಿರುವಂತೆ ತೋರುತ್ತದೆ.

ಪ್ರಯಾಣದಲ್ಲಿ ಮಾಡಲೆಂದು ಏನನ್ನು ಬಿಡಲಾಗಿದೆಯೋ[೮] ಅದನ್ನೂ ಹಿಡಿದು, ಎಲ್ಲವೂ ಪೂರ್ಣತೆಯನ್ನು ಮುಟ್ಟುವುದೋ ಆ ವಾಸಸ್ಥಳವು[೯] ಆ ವೀರ್ಯಾಧಾಯಕನ ಕೈಗೆ ಸಿಕ್ಕುವಂತಾಗಲಿ.



---

೮. ಕೆಲವೊಮ್ಮೆ ಈ ಜಗತ್ತನ್ನು ಉಚ್ಛಿಷ್ಟ, ಶೇಷ, ಅನವಶ್ಯಕವಾದ ಅಧಿಕಾಂಶ ಎಂದು ವರ್ಣಿಸಲಾಗಿದೆ. ಅದು ಮಾನಸದ ತ್ರಿಪುಟತ್ವದ ಹೊರಗಿನ (ಮಾನಸ, ಜೈವಿಕ, ಶಾರೀರಿಕ ಪ್ರಜ್ಞೆಗಳ ಹೊರಗಿನ) ಪ್ರಪಂಚವು. ಈ ತ್ರಿಪುಟ ಲೋಕವು ನಮ್ಮ ಸ್ವಾಭಾವಿಕ ಅಸ್ತಿತ್ವದ ಸ್ಥಿತಿಯು.

೯. ಅತಿಮಾನಸ ಸತ್ಯದ ಸ್ಥಲವು- ಸ್ವರ್‌ಲೋಕ- ಮಾನಸ ಸ್ವರ್ಗದಾಚೆಗಿನದು ಮತ್ತು ಭೌತಿಕ ಪೃಥಿವಿಗಿಂತಲೂ ಮೇಲಿನದು. ಆ ಸ್ಥಲದಲ್ಲಿ ಎಲ್ಲವೂ ಸಿದ್ಧಿಸುವುದು. ನಾವಿಲ್ಲಿ ಬಯಸಿ ಹೋರಾಡಿದ್ದೆಲ್ಲಾ ಅಲ್ಲಿ ಲಭ್ಯ. ಅದನ್ನು ವಿಶಾಲವಾದ ವಾಸಸ್ಥಾನವೆಂದೂ ಹೊಳೆವ ಹಸುಗಳ ವಿಶಾಲ ನಿರ್ಭೀತ ಹುಲ್ಲುಗಾವಲೆಂದೂ ವರ್ಣಿಸಲಾಗಿದೆ.

# ಹದಿಮೂರನೆಯ ಅಗ್ನಿ ಸೂಕ್ತ

## ದಿವ್ಯ ಸಂಕಲ್ಪಾತ್ಮಕನನ್ನು ದೃಢಪಡಿಸಲು ಹಾಡಿದ ಸೂಕ್ತ

[ಮನುಷ್ಯನಿಗಾಗಿ ಸ್ವರ್ಗಸ್ಪರ್ಶಮಾಡುವ ದಿವ್ಯ ಸಂಕಲ್ಪವನ್ನು ದೃಢೀಕರಿಸುವ ಮಂತ್ರೋಕ್ತಿಯ ಶಕ್ತಿಯನ್ನು ಋಷಿಯು ಘೋಷಿಸುತ್ತಾನೆ. ಮಂತ್ರದಿಂದ ನಮ್ಮಲ್ಲಿ ದೃಢೀಕೃತವಾದ ಆ ಸಂಕಲ್ಪವು ನಮ್ಮ ಯಜ್ಞದ ಪುರೋಹಿತನಾಗುವುದು ಮತ್ತು ನಮ್ಮಲ್ಲದು ದಿವೈಶ್ವರ್ಯಜೇತಾರನೆನ್ನಿಸುವುದದಲ್ಲದೆ, ಗೆಲ್ಲುವ ಕ್ರಿಯಾಶಕ್ತಿಯ ಅರ್ಜಕನೂ ಆಗುವುದು. ಈ ದೇವತಾತತ್ತ್ವವು ತನ್ನಿರವಿನಲ್ಲಿ ಮಿಕ್ಕೆಲ್ಲಾ ದೇವತೆಗಳನ್ನೂ ಒಳಗೊಂಡಿರುವುದು ಚಕ್ರದ ಅಕ್ಷವು ಹಳ್ಳಿಗಳನ್ನು ಒಳಗೊಂಡಿರುವುದನ್ನು ಹೋಲುತ್ತದೆ. ಆದುದರಿಂದ ಇದು ಆಧ್ಯಾತ್ಮಿಕ ಸುಖ ಸಾಮ್ರಾಜ್ಯದ ಎಲ್ಲ ವಿವಿಧ ಸಂಪತ್ತನ್ನೂ ನಮಗೆ ತಂದುಕೊಡುತ್ತದೆ.]

೧. ಹೇ ದಿವ್ಯ ಸಂಕಲ್ಪ ಸ್ವರೂಪಿಯೇ, ನಮ್ಮಲ್ಲಿ ಬೆಳಕನ್ನು ಮೂಡಿಸುವ ಮಂತ್ರವನ್ನು ಹೇಳುತ್ತಾ ನಿನ್ನನ್ನು ಆಮಂತ್ರಿಸುತ್ತೇವೆ ; ನಮ್ಮನ್ನು ಪ್ರಬೋಧಿಸುವ ಮಂತ್ರವನ್ನು ಉಚ್ಚರಿಸುತ್ತಾ ನಾವು ನಿನ್ನನ್ನು ಹೊತ್ತಿಸುತ್ತೇವೆ ; ನಮ್ಮಲ್ಲಿ ಪ್ರಬೋಧವನ್ನು ಹೊಳೆಯುವಂತೆಸಗುವ ಮಂತ್ರವನ್ನು ಉದ್ಗರಿಸುತ್ತಾ ನಾವು ಸಂವರ್ಧಿಸುತ್ತೇವೆ.

೨. ನಮಗಾಗಿ ನಮ್ಮ ದಿವ್ಯಜೀವನ ಸಾರವನ್ನು[೧] ಹುಡುಕಿ ಕೊಡುವ ಮತ್ತು ಸ್ವರ್ಗವನ್ನು ಮುಟ್ಟುವ ಸರ್ವ ಪರಿಣಾಮಕಾರಿ ದೇವತಾತತ್ತ್ವದ ಮಂತ್ರಸೂಕ್ತದ ದೃಢಿಕರಣವನ್ನು ನಾವು ಮನೋಬಲದಿಂದ ಹಿಡಿದಿಟ್ಟುಕೊಳ್ಳುತ್ತೇವೆ.

೩. ನಮ್ಮ ಮಂತ್ರಗಳನ್ನು ಆ ದಿವ್ಯ ಸಂಕಲ್ಪನು ಪ್ರೀತಿಯಿಂದ ಸ್ವೀಕರಿಸಲಿ - ಅವನಾದರೋ ಮಾನವರಲ್ಲಿ ಪುರೋಹಿತನು ; ದಿವ್ಯ ಜನರಿಗವನು ಈ ಯಜ್ಞವನ್ನು ಸಮರ್ಪಿಸಲಿ.

೪. ಹೇ ದಿವ್ಯ ಸಂಕಲ್ಪಾತ್ಮಕನೇ, ನೀನು ಬಹಳ ಅಗಲವಾಗಿರುವೆ - ನೀನು ನಮ್ಮ ಆಹುತಿಯ ಪುರೋಹಿತನು, ಅಪೇಕ್ಷಣೀಯನು ಮತ್ತು ಸುಪ್ರಿಯನು ; ತಮ್ಮ ಯಜ್ಞದ ರೂಪವನ್ನು ಮನುಷ್ಯರು ನಿನ್ನಿಂದಲೇ ವಿಸ್ತಾರವಾಗಿ ಹರಹುವರು.

---

೧. ಯಜ್ಞ ಮಾಡುವ ಉದ್ದೇಶವೇ ದಿವ್ಯ ಸಂಪದರ್ಜನೆಯಾಗಿದೆ.

೫. ಒಮ್ಮೆ ನಿನ್ನನ್ನು ಸರಿಯಾಗಿ ದೃಢೀಕರಿಸಿ ಬಿಡುವುದರಿಂದ ಪ್ರಾತಿಭಾತ್ಮರು ಅಭಿವೃದ್ಧರಾಗುತ್ತಾರೆ. ಎಲೈ ದಿವ್ಯ ಸಂಕಲ್ಪನೇ, ಅದರಿಂದ ನೀನು ಸಂಪೂರ್ಣವಾಗಿ ಹೇರಳ ಶ್ರೇಯಃ ಸಮೃದ್ಧಿಯನ್ನು ಗೆಲ್ಲುವೆ ; ಆದುದರಿಂದ ನೀನು ನಮಗಾಗಿ ಸಂಪೂರ್ಣ ವೀರ ಕ್ರಿಯಾಶಕ್ತಿಯನ್ನು ವೆಚ್ಚಮಾಡು.

೬. ಎಲೈ ದಿವ್ಯೇಚ್ಛಾ ಸ್ವರೂಪನೇ, ಗಾಳಿಯ ಅಚ್ಚು ಹಳಿಗಳನ್ನು ಒಳಗೊಂಡಂತೆ ನೀನು ನಿನ್ನ ಇರವಿನಲ್ಲಿ ಎಲ್ಲ ದೇವರುಗಳನ್ನೂ ಒಳಗೊಂಡಿರುವೆ ; ಆ ದೇವರುಗಳ ಐಶ್ವರ್ಯದ ವಿವಿಧ ಪ್ರಮೋದವನ್ನು ನೀನು ನಮಗೆ ತಂದುಕೊಡಬೇಕು.



# ಹದಿನಾಲ್ಕನೆಯ ಅಗ್ನಿ ಸೂಕ್ತ

## ಬೆಳಕನ್ನೂ ಸತ್ಯವನ್ನೂ ಹುಡುಕಿ ಕೊಡುವವನ ಕುರಿತ ಸೂಕ್ತ

[ಋಷಿಯು ಅಗ್ನಿಯನ್ನು ಯಜ್ಞ ಪುರೋಹಿತನೆಂದೂ ಅಂಧಕಾರ ಶಕ್ತಿಗಳ ಸಂಹಾರಕನೆಂದೂ ಸತ್ಯಸೂರ್ಯ ಪ್ರಪಂಚವನ್ನು ಕಂಡುಹಿಡಿದವನೆಂದೂ ಘೋಷಿಸಿದ್ದಾನೆ; ಅಲ್ಲದೆ ಅಗ್ನಿಯ ಲಸದ್ ವ್ರಜಗಳನ್ನೂ ಅವನ ದ್ಯುಮಜ್ಜಲಗಳನ್ನೂ ವರ್ಣಿಸಿದ್ದಾನೆ. ಅಗ್ನಿಯು ನಮ್ಮಲ್ಲಿ ಇರುವ ದ್ರಷ್ಟಾರ - ನ್ಯಾಯಭಾದ ವಿಚಾರ ಮತ್ತು ಮಾತುಗಳ ಸ್ಪಷ್ಟತೆಗಳಿಂದ ವರ್ಧಿತನು.]

೧. ಅವನನ್ನು ದೃಢಿಕರಿಸುವ ಮಂತ್ರದಿಂದ ದಿವ್ಯ ಜ್ವಾಲಾ ಸ್ವರೂಪನಾದವನನ್ನು ಎಚ್ಚರಿಸು ; ಆ ಅಮರ್ತ್ಯನನ್ನು ಹೊತ್ತಿಸು ; ಅವನು ನಮ್ಮ ಆಹುತಿಗಳನ್ನು ದೇವತಾತತ್ವಗಳಿಗೆ ನಿವೇದಿಸಲಿ.

೨. ದಿವ್ಯನೂ ಅಮರ್ತ್ಯನೂ ಮಾನವ ಪ್ರಾಣಿಯಲ್ಲಿ ಯಜ್ಞಕ್ಕೋಸ್ಕರ ಇರುವ ದೇವತೆಗಳಲ್ಲಿ ಅತಿ ಬಲಿಷ್ಠನೂ ಆದ ಅವನನ್ನು ಮರ್ತ್ಯ ಮನುಷ್ಯರು ತಮ್ಮ ಯಾತ್ರಿಕ ಯಜ್ಞಗಳಲ್ಲಿ ಬಯಸಲಿ ಮತ್ತು ಪೂಜಿಸಲಿ.

೩. ಸ್ಪಷ್ಟತೆಗಳು ತೊಟ್ಟಿಕ್ಕುತ್ತಿರುವ ಸೌಟಿನಿಂದ[1] ಮಾನವನ ಅವಿಚ್ಛಿನ್ನ ಸಂತಾನಗಳು ಅವನನ್ನು ಆರಾಧಿಸಲಿ ; ತಮ್ಮ ಆಹುತಿಯನ್ನು ಹೊತ್ತೊಯ್ಯಲಿ ಎಂದುಕೊಂಡು ಅವರು ಆ ದಿವ್ಯ ಸಂಕಲ್ಪಾತ್ಮಕನನ್ನು ಆರಾಧಿಸುತ್ತಾರೆ.

೪. ಹುಟ್ಟಿದೊಡನೆಯೇ ಆ ದಿವ್ಯಜ್ವಾಲಾಮಯನು ಹೊಳೆಯುತ್ತಾನೆ ಮತ್ತು ವಿನಾಶಕರನ್ನು[2] ಸಂಹರಿಸುತ್ತಾನೆ ; ಹೌದು ಬೆಳಕಿನಿಂದ ಕತ್ತಲನ್ನು ಬಡಿದು ಹಾಕುತ್ತಾನೆ ಮತ್ತು ಮಿಂಚುವ ಗೋವ್ರಜಗಳನ್ನನು[3] ಹುಡುಕಿ ತೆಗೆಯುತ್ತಾನೆ ಹಾಗೂ ಚಮತ್

---

೧. ಈ ಸೌಟು ಸತತವಾಗಿ ಮೇಲೆತ್ತುವ ಚಲನೆ. ಯಾವುದರ ಚಲನೆ? ಪರಮಸತ್ಯದ ಮತ್ತು ಪರಮಾತ್ಮನ ಬಗೆಗಿನ ಮಾವವ್ಯ ಮಹಾಕಾಂಕ್ಷೆಯ ಸಂಕೇತವು.

೨. ಗ್ರೀಕ್ ಸೂರ್ಯಭ್ರಾತರು, ರಾಕ್ಷಸರು - ನಮ್ಮ ಐಕ್ಯವನ್ನೂ ಪೂರ್ಣತೆಯನ್ನೂ ಒಡೆದುಹಾಕುವ ಜನರು ; ದಿತಿಜರು, ಪಾತಾಳ ಗುಹಾವಾಸಿಗಳು, ಅಂಧಕಾರ ಮಗ್ನರು.

೩. ವ್ರಜಗಳೂ ಜಲಗಳೂ ವೇದದ ಎರಡು ಪ್ರಮುಖ ಪ್ರತಿಮೆಗಳು ; ಮೊದಲನೆಯವು ದಿವ್ಯ ಸೂರ್ಯನ ಸಾಲಾಗಿ ಹೋಗುವ ಕಿರಣಗಳು -·ದ್ಯುಮತ್ ಪ್ರಜ್ಞೆಯ ಗೋಲೆಗಳು : ಎರಡನೆಯವುಗಳಾದ ಜಲಗಳು (ನೀರು) ದಿವ್ಯ ಯಾ ಅತಿಮಾನಸ ಸತ್ತೆಯ ಚಂಚಚ್ಚಲನೆ ಮತ್ತು ಪ್ರೇರಣೆ.

ಪ್ರಪಂಚವನ್ನು[೪] ಕಂಡುಹಿಡಿಯುತ್ತಾನೆ.

೫. ಅಗ್ನಿಯು ದಿವ್ಯ ಸಂಕಲ್ಪನಾಗಿ ನಮ್ಮ ಆರಾಧ್ಯ ವಸ್ತುವನ್ನು ಹುಡುಕಿ ಕೊಟ್ಟು ಅದರ ಸೇವೆ ಮಾಡುತ್ತಾ ; ದ್ರಷ್ಟಾರನಾಗಿ ಸ್ಪಷ್ಟತೆಗಳ ಮೇಲ್ವಾಸಿನೊಡನೆ ಆ ವಸ್ತುವಿನ ಕೈಂಕರ್ಯ ನಡೆಸಲಿ ; ಆತನು ಬರಲಿ- ಅವನು ನನ್ನ ಕರೆಗೆ ಓಗೊಡಲಿ.

೬. ತಮ್ಮ ಸ್ಪಷ್ಟತೆಗಳ ಆಹುತಿಗಳಿಂದ ಜನರು ದಿವ್ಯ ಸಂಕಲ್ಪವನ್ನು ಸಂವರ್ಧಿಸುತ್ತಾರೆ. ಅವರು ತಮ್ಮ ಕೆಲಸಗಳನ್ನು ಮಾಡುವ ವಿಶ್ವಕರ್ತಾರನನ್ನು ಪುಷ್ಟನನ್ನಾಗಿ ಮಾಡುತ್ತಾರೆ. ಹೇಗೆ? ತಮ್ಮ ದೃಢೀಕರಣ ಸೂಕ್ತಗಳಿಂದ. ಉಕ್ತ ದೃಢೀಕರಣ ಸೂಕ್ತಗಳು ವಿಚಾರವನ್ನು ಸಮುಚಿತ ಸ್ಥಲದಲ್ಲಿಡುತ್ತವೆ - ಅರ್ಥಾವಿರ್ಭಾವಕ ಮಂತ್ರವನ್ನು ಅನಾವರಿಸುತ್ತವೆ, ಹುಡುಕಿ ತೆಗೆಯುತ್ತವೆ.



---

೪. ಸ್ವರ್ = ದಿವ್ಯ ಸೌರ ಪ್ರಕಾಶ ಪ್ರಪಂಚವು. ನಾವು ಏರಿ ತಲುಪಬೇಕಾದ ಗುರಿ ಅದು ; ಮತ್ತು ಪಾತಾಳ ಗುಹೆಗಳಿಂದ ಹೊಳೆವ ದನಗಳ ಗುಂಪುಗಳನ್ನು ಬಿಡುಗಡೆ ಮಾಡಿದ ಮೇಲೆ ಅದರ ಫಲವಾಗಿ ದಿವ್ಯ ಸೂರ್ಯನ ಮೇಲೇರಿಕೆಯಾಗುತ್ತದೆ. ಅವನ ಉದಯದಿಂದ ದಿವ್ಯಸೌರ ಪ್ರಕಾಶ ಪ್ರಪಂಚದ ಸೃಷ್ಟಿಯಾಗುತ್ತದೆ. ಸ್ವರ್ವಾಸವೇ ಅತಿಮಾನಸ ಅಥವಾ ದಿವ್ಯ ಜೀವನ, ಪರಮಪದವಾಸ.

# ಹದಿನೈದನೆಯ ಅಗ್ನಿ ಸೂಕ್ತ

## ದಿವ್ಯ ಆಧಾರಸ್ತಂಭನಾದ ಜೇತಾರನ ಕುರಿತ ಸೂಕ್ತ

[ದ್ರಷ್ಟಾರನೆಂದೂ ಬಲಿಷ್ಠನೆಂದೂ ಆನಂದದ ಮತ್ತು ದಿವ್ಯ ಸತ್ಯದ ಆಧಾರನೆಂದೂ ಋಷಿಯು ದಿವ್ಯ ಸಂಕಲ್ಪ ಶಕ್ತಿಯನ್ನು ಕುರಿತು ಸೂಕ್ತ ರಚನೆ ಮಾಡುತ್ತಾನೆ. ಆ ದಿವ್ಯ ಸಂಕಲ್ಪದಿಂದ ಜನರು ಅತ್ಯುಚ್ಚಾಸನಸ್ಥ ದೇವತಾತತ್ವಗಳನ್ನು, ದೇವಾಧಿದೇವರುಗಳ ಸಾಮಿಪ್ಯವನ್ನು ಹೊಂದುತ್ತಾರೆ. ಉಕ್ತ ದ್ರಷ್ಟಾರನು ಸಿಂಹದಂತೆ ಶತ್ರು ಸೈನ್ಯವನ್ನು ಒಡೆದು ಹೊಕ್ಕು ಜೀವವು ತಳೆಯಬಹುದಾದ ಜನ್ಮಗಳನ್ನೂ ಅವತಾರಗಳನ್ನೂ ದೃಢಪಡಿಸುತ್ತಾನೆ ; ಜೀವಾತ್ಮನಲ್ಲಿ ಗುಪ್ತ ಅತಿಮಾನಸ ಸ್ತರವನ್ನು ರೂಪಿಸಿ ಅವನನ್ನು ಬಂಧಮುಕ್ತಗೊಳಿಸಿ ಧನ್ಯನನ್ನಾಗಿ ಮಾಡುತ್ತಾನೆ.]

೧. ಜ್ಞಾನ ವಿಷಯನಾದ, ಆಜ್ಞಾಪಕನಾದ, ದ್ರಷ್ಟಾರನಿಗೆ, ಜಯಿಗೆ, ಕೀರ್ತಿಮಂತನಿಗೆ ಉತ್ತಮ ಉನ್ನತ ಹಳೆಬನಿಗೆ, ನಾನು ಮಂತ್ರಾಹುತಿಯನ್ನು ತರುತ್ತೇನೆ. ಅವನು ಬಲಿಷ್ಠನು, ಆನಂದ ಪರಿಪೂರ್ಣನು, ಸ್ಪಷ್ಟತೆಗಳತ್ತ ಮುಂಬರಿದು ಹೋಗುವವನು - ಅವನೇ ಬಲ - ಅವನೇ ಆನಂದಧರ, ಅವನೇ ದ್ರವ್ಯಸಾರಧರ!

೨. ಸರ್ವದರ್ಶಿಯಾದ ಪರಮಸತ್ಯವನ್ನು ಅವರು ಪರಮಸತ್ಯದಿಂದಲೇ ಗ್ರಹಿಸುತ್ತಾರೆ, ಬೆಂಬಲಿಸುತ್ತಾರೆ - ಎಲ್ಲಿ?- ಯಜ್ಞ ಶಕ್ತಿಯಲ್ಲಿ, ಸರ್ವೋಚ್ಚ ಆಕಾಶದಲ್ಲಿ (ಸ್ವರ್ಗದಲ್ಲಿ) ; ತಮ್ಮಲ್ಲಿ ಜನಿಸಿದ ದೇವಯೋನಿಗಳಿಂದ ಜನಿಸದವರೆಡೆಗೂ ದೇವರತ್ತ ಕೊಂಡು ಹೋಗುತ್ತಾರೆ. ಆ ದೇವರಾದರೋ ಸ್ವರ್ಗಗಳನ್ನು ಎತ್ತಿ ಹಿಡಿದಿರುವ ನಿಯಮದಂತೆ ಯಾವಾಗಲೂ ಕುಳಿತಿರುವ ಶಕ್ತಿಗಳು.

೩. ಆ ದೇವರುಗಳು ತಮ್ಮಿಂದ ದೌರ್ಜನ್ಯವನ್ನು ದೂರ ಸರಿಸಿ ಜೀವದ ಅಗಲವಾಗಿ ಹರಹಿದ ರೂಪಗಳನ್ನು ಮತ್ತು ಕಾಯಗಳನ್ನು ಸೃಜಿಸುತ್ತಾರೆ - ಅವೆಲ್ಲಾ ವಿಸ್ತಾರವಾದ ಜನನಗಳು ಮತ್ತು ಅವಿನಾಶಿ ಅಭಿವ್ಯಕ್ತಿಗಳು - ಯಾರಿಗೆ? ಈ ಮೊಟ್ಟಮೊದಲ ಸಮುನ್ನತ ದೇವತೆಗೆ ; ಹೊಸದಾಗಿ ಹುಟ್ಟಿ ಈತನು ಏಕತ್ರ ಸಂಗಮಿಸುವ ನೆರೆಗಳಂತೆ ಸೇರುವ ಸೈನ್ಯವನ್ನು ಒಡೆದು ಒಳಹೊಗುತ್ತಾನೆ. ಅವರು ಇವನನ್ನು ಕೆರಳಿದ ಸಿಂಹವನ್ನು ಬೇಟೆಗಾರರು ಸುತ್ತುವರಿಯುವಂತೆ ಮುತ್ತುತ್ತಾರೆ.

೪. ನಿನ್ನ ವೈಶಾಲ್ಯದಲ್ಲಿ ನೀನು ದೃಢಾಧಾರ ಮತ್ತು ದೃಢದರ್ಶನಗಳೆಡೆಗೆ ಹೋಗುವುದರ ಜನನಗಳನ್ನು ನಿನ್ನ ಕೈಯಲ್ಲಿ ಹಿಡಿದಿರುತ್ತೀಯೆ - ಆದುದರಿಂದ ನೀನು ತಾಯಿಯಂತೆಯೂ ಇರುತ್ತೀಯೆ. ನೀನು ನಿನ್ನಲ್ಲಿ ಹಿಡಿದಿಟ್ಟುಕೊಂಡು ಒಂದಾದ ಮೇಲೊಂದರಂತೆ ಬರುವ ಅವತಾರಗಳನ್ನು (ಅಭಿವ್ಯಕ್ತಿಗಳನ್ನು, ಆವಿರ್ಭಾವಗಳನ್ನು) ಉಪಭೋಗಿಸುವಾಗ ವಿವಿಧ ಬಹುರೂಪಧರನಾಗಿ ಹೊರ ಹೊರಟು ಎಲ್ಲೆಲ್ಲೋ ತಿರುಗುವೆ.

೫. ನಮ್ಮ ಪೂರ್ಣತಾರಾಶಿಯು ನಿನ್ನ ಬಲದ ಅತಿಧೀರ್ಘ ಮಿತಿಯನ್ನು ಹೊಂದಲಿ. ಓ ದೇವರೇ, ಆ ಪೂರ್ಣತಾ ಸ್ಥಿತಿಯು ತನ್ನ ವಿಸ್ತಾರದಲ್ಲಿಯೂ ಸರ್ವಫಲದಾಯಕ ಬಹುರಾಶಿಯಲ್ಲಿಯೂ ಪರಮಾನಂದವನ್ನು ಎತ್ತಿ ಹಿಡಿಯುತ್ತಿರಬೇಕು. ನಾವು ಹೋಗುತ್ತಿರುವ ಗುಪ್ತವಾಸಸ್ಥಳವನ್ನು ನಿರ್ಮಿಸಿ ನಿನ್ನಲ್ಲೇ ಎತ್ತಿ ಹಿಡಿದು ನಿಂತವನು ನೀನು ; ಅವನನ್ನು ನೀನು ಜ್ಞಾನ ಪ್ರಪಂಚದಲ್ಲಿ ಎಚ್ಚರಿಸಿದುದರಿಂದ ನೀನು ಆ ಭೋಗಿಯನ್ನು ಅಗಲವಾದ ಹರಹಿನ ಧನ್ಯಸ್ಥಲದಲ್ಲಿ ಸುರಕ್ಷಿತವಾಗಿ ಇರುವಂತೆ ಉಳಿಸಿದೆ.



# ಹದಿನಾರನೆಯ ಅಗ್ನಿ ಸೂಕ್ತ

## ಅಪೇಕ್ಷಣೀಯವಾದ ಎಲ್ಲ ಒಳಿತನ್ನೂ ತರುವವನ ಕುರಿತ ಸೂಕ್ತ

[ಮಾನವನಲ್ಲಿಯ ದಿವ್ಯ ಸಂಕಲ್ಪವನ್ನು ಋಷಿಯು ಆಹುತಿಯೆಂದೂ ಬೆಳಕು, ಕಸುವು, ಸ್ಫೂರ್ತಜ್ಞಾನ ಮತ್ತು ಎಲ್ಲ ಅಪೇಕ್ಷಣೀಯ ಒಳಿತುಗಳನ್ನು ತರುವ ಪ್ರಾತಿನಿಧಿಕ - ಪುರೋಹಿತ - ಎಂದೂ ದೃಢಪಡಿಸುತ್ತಾನೆ ; ಏಕೆಂದರೆ, ಕರ್ಮಗಳ ಮೂಲಕ ಅವನು (ಸಿದ್ಧಿಯನ್ನು) ಪಡೆಯಲು ಬಯಸುವವನು ; ಅವನಲ್ಲಿ ಎಲ್ಲಾ ದೇವತೆಗಳ ಪ್ರಭಾವವೂ ಇದೆ ಮತ್ತು ಅವರ ಪ್ರಣೋದದ ಸಂಪೂರ್ಣ ಶ್ರೇಯಃ ಸಮೃದ್ಧಿಯಿದೆ.]

೧. ಬಹುವಿಸ್ತಾರವಾದ ಸಾಕಾರೋದಯವನ್ನು ಕುರಿತು ಮಂತ್ರದಿಂದ ನೀನು ಹಾಡು-ಹೊಳೆವ ಬೆಳಕಿಗಾಗಿ, ದಿವ್ಯತತ್ವಕ್ಕಾಗಿ, ತಮ್ಮ ಅಭಿವ್ಯಂಜನೆಗಳಿಂದ ಮರ್ತ್ಯರು ಯಾವನ ದೇವತ್ವವನ್ನು (ಯಾವ ದೇವತೆಯನ್ನು) ತಮ್ಮ ಸ್ನೇಹಿತ[೧] ಎಂದು ತಮ್ಮ ಮುಂದಿರಿಸಿಕೊಳ್ಳುವರೋ ಆ ದಿವ್ಯ ಸಂಕಲ್ಪ ಸ್ವರೂಪನಿಗಾಗಿ.

೨. ಜನರ ಆಹುತಿಯ ಪುರೋಹಿತನೇ ಆ ದಿವ್ಯ ಸಂಕಲ್ಪ ಸ್ವರೂಪನು. ಸೂಕ್ಷ್ಮಾವಲೋಕನ ಶಕ್ತಿಯುಳ್ಳ ಮನದ ಪ್ರಬೋಧಾಂಶುಗಳಿಂದ ಅವನು ತನ್ನ ಎರಡೂ ಕೈಗಳಿಂದ (ತೋಳುಗಳಿಂದ) ಅವರ ಆಹುತಿಗಳ ಸತತ ಕ್ರಮವನ್ನು[೨] ಹೊರಚಾಚಿ ಧರಿಸಿರುತ್ತಾನೆ ಮತ್ತು ದಿವ್ಯ ಭೋಗಿಯಾಗಿ[೩] ಅವನು ತನ್ನ ಒಳಿತಿನತ್ತ ಚಲಿಸುತ್ತಾನೆ.

---

೧. ಮಿತ್ರ. ಅಗ್ನಿಯು ಸರ್ವದೇವತೆಗಳನ್ನೊಳಗೊಂಡ ಸರ್ವದೇವತಾ ಸ್ವರೂಪನು. ಮಿತ್ರಶಕ್ತಿಯೆಂದರೆ, ನಿಜ ಬಾಳಿನ ಹಾಗೂ ಅರಿವಿನ ಬೆಳಕು ಪ್ರೀತಿ ಮತ್ತು ಸಾಮಶ್ರುತ್ಯ ಅವುಗಳನ್ನು ಮರ್ತ್ಯರು ದಿವ್ಯ ಸಂಕಲ್ಪನ ಕಾರ್ಯದಲ್ಲಿ ಹುಡುಕಿ ಕೊಳ್ಳಬೇಕು ; ಈ ಅಂಶದ ಯಜ್ಞದಲ್ಲಿ ಅವನು ಪ್ರಾತಿನಿಧಿಕ ಪುರೋಹಿತನಾಗಿ ಮಾನವ ಪ್ರಜ್ಞೆಯ ಇದಿರು ನಿಹಿತನಾಗಬೇಕು.

೨. ಪುರೋಹಿತನಾಗಿ= ಯಜ್ಞದ ಪ್ರಾತಿನಿಧಿಕ ಪೂಜಾರಿಯಾಗಿ ಮತ್ತು ಆ ಯಜ್ಞಯಾನದ ಮುಖಂಡನಾಗಿ ಅವನು ನಮ್ಮ ಪ್ರಜ್ಞೆಯೆದುರು ನಿಲ್ಲುತ್ತಾನೆ- ಅವನು ನಮ್ಮೆಲ್ಲ ಶಕ್ತಿಗಳ ನಾಯಕನು. ನಮ್ಮ ದೇವೋನ್ಮುಖ ಕರ್ಮಕ್ಕೆ ಮಾರ್ಗದರ್ಶಕನಾಗಿ ಅದನ್ನು ನಡೆಯಿಸಿ ಕೊಡತಕ್ಕವನು. ಅದರಿಂದ ನಮ್ಮ ಕರ್ಮವು ನಿರ್ವಿಘ್ನವಾಗುವುದು - ಯಜ್ಞಕ್ರಮದಲ್ಲಿ ಲೋಪವುಂಟಾಗದು. ಪರಮಸತ್ಯದ ಕಾಲಮಾನ-ಋತುಮಾನಗಳಿಗನುಗುಣವಾಗಿ ಅದರ ಕರ್ಮಗಳನ್ನು ವ್ಯವಸ್ಥೆಗೊಳಿಸಲಾಗುವುದು.

೩. ಮಿತ್ರನ ಸೋದರ ಶಕ್ತಿಯಾದ ಭಗನ ಸ್ವರೂಪವನ್ನು ದಿವ್ಯ ಸಂಕಲ್ಪವು ಹೊಂದುವುದು - ದಿವ್ಯ ಜೀವನದ ಬೆಳಕು, ಸಮಶ್ರುತಿ ಮತ್ತು ಸತ್ಯಗಳಿಗನುಗುಣವಾಗಿ ಮಿತ್ರನ ಶುದ್ಧ ಸೂಕ್ಷ್ಮಾವಲೋಕನದ ಶಕ್ತಿಯಿಂದ ಭಗನು ಸತ್ತೆಯ ಸರ್ವಾಹ್ಲಾದವನ್ನೂ ಅನುಭೋಗಿಸುತ್ತಾನೆ.

೩. ಅವನನ್ನು ದೃಢೀಕರಿಸುವುದರಲ್ಲಿ ಮತ್ತು ಅವನ ಸಹಕರ್ಮಚಾರಿತ್ವದಲ್ಲಿ, ಅವನು ತನ್ನ ಪಾವಿತ್ರ್ಯದ ಜ್ವಾಲೆಯನ್ನು ಹೆಚ್ಚಿಸಿದಾಗ, ಸಂಪೂರ್ಣ ಶ್ರೇಯಃ ಸಮೃದ್ಧಿಯ[೪] ಎಲ್ಲ ದಿವ್ಯ ದೊರೆಗಳೂ ಇರುತ್ತಾರೆ. ಏಕೆಂದರೆ ಎಲ್ಲ ವಸ್ತುಗಳೂ ಅವನ ಬಹುಸ್ವರಗಳ ಸದ್ದಿನಲ್ಲಿವೆ ಮತ್ತು ತನ್ನ ಕಾರ್ಯದಲ್ಲಿ ಅಪೇಕ್ಷಕ (ಸಾಧಕ) ಎನ್ನಿಸಿರುವ ಅವನ ಮೇಲೇ ಅವರು ತಮ್ಮ ಬಲದ ಹೊರೆಯನ್ನು ಹೊರಿಸಿದ್ದಾರೆ.

೪. ಹೇ ದಿವ್ಯ ಸಂಕಲ್ಪ ಸ್ವರೂಪನೇ, ಈಗ ಕೂಡಾ ಅವರ ಸಂಪೂರ್ಣ ಪ್ರಣೋದದ ಸಂಪೂರ್ಣ ಶ್ರೇಯಃ ಸಮೃದ್ಧಿಯು (ಅವರಿಗೆ) ಒದಗಿರಲಿ. ಈ ಬಲಿಷ್ಠ ಸಂಕಲ್ಪದ ಸುತ್ತಲೂ ಭೂಮಿ-ಸ್ವರ್ಗಗಳು ಸ್ಫೂರ್ತಜ್ಞಾನದ[೫] ಏಕಸ್ವರವಾದಂತಿವೆ.

೫. ಈಗಲೂ ನಮ್ಮೆಡೆಗೆ ಬಾ. ಓ ದಿವ್ಯ ಸಂಕಲ್ಪ, ನಮ್ಮ ಮಂತ್ರಗಳಿಂದ ಸೂಕ್ತಿಸಲ್ಪಟ್ಟು ನೀನು ನಮ್ಮ ಅಪೇಕ್ಷಣೀಯ ಒಳಿತನ್ನು ನಮ್ಮೆಡೆಗೆ ತಾ. ಇಲ್ಲಿರುವ ನಾವೂ ಆ ರಾಜಜ್ಞಾನಾಧೀಶರೂ ಒಟ್ಟಾಗಿ ನಮ್ಮ ಇರವಿನ ಆನಂದಮಯ ಸ್ಥಿತಿಯನ್ನು ದೊರಕಿಸಿಕೊಳ್ಳು-ವಂತಾಗಲಿ. ನಾವು ವೃದ್ಧಿ ಹೊಂದುವುದಕ್ಕಾಗಿ ನಮ್ಮೊಡನೆ ನೀನು ಯೋಧನಾಗಿ ನಡೆ.

❖ ❖

---

೪. ದೇವರುಗಳು ; ಕರ್ಮಮಗ್ನರಾದ ಇತರ ದೇವತೆಗಳೆಲ್ಲರನ್ನೂ ದಿವ್ಯ ಪ್ರಣೋದವು ಒಳಗೊಂಡಿರುತ್ತದೆ ಮತ್ತು ಪಾಲಿಸುತ್ತಿರುತ್ತದೆ. ಆದುದರಿಂದ ಇತರ ಎಲ್ಲ ದೇವತೆಗಳ ಶಕ್ತಿಯೂ ಅವನಲ್ಲಿರುತ್ತವೆ.

೫ ದಿವ್ಯ ದ್ರಷ್ಟ ಸಂಕಲ್ಪಾತ್ಮನು ತನ್ನ ಪರಿವರ್ತನಕಾರ್ಯಕ್ಕಾಗಿ ಭೂಮ್ಯಾಕಾಶಗಳಲ್ಲಿ ಸುತ್ತಲೂ ಸಂಚಲಿಸುವಾಗ, ಇಡೀ ಭೌತಿಕ ಹಾಗೂ ಮಾನಸಿಕ ಪ್ರಜ್ಞೆಗಳು ತೊರೆಗಳಾಗಿ ಹರಿದು ಅವುಗಳೊಳಹೊಗುವುದೂ ಅವನ್ನು ಜ್ಞಾನಪೂರ್ಣವನ್ನಾಗಿ ಮಾಡುವುದೂ ಅತಿಮಾನಸ ಪ್ರಜ್ಞಾಸ್ತರದಿಂದ ಹೊರಟು ; ಭೂಮ್ಯಾಕಾಶಗಳು ಆಗ ಅತಿಮಾನಸ ಬೆಳಕಾಗಿಯೂ ಕಾರ್ಯವಾಗಿಯೂ ಬದಲಾದಂತೆ ತೋರುತ್ತವೆ.

# ಹದಿನೇಳನೆಯ ಅಗ್ನಿ ಸೂಕ್ತ

## ವಿಸ್ತರಣೆಯ ಮತ್ತು ಆತ್ಯಂತಿಕ ಅಪೇಕ್ಷೆಯ ಕುರಿತ ಸೂಕ್ತ

[ಕೇವಲ ಬುದ್ಧಿಮತ್ತೆಯ ಸೂಕ್ಷ್ಮತೆ ಮತ್ತು ನಯ-ನಾಜೂಕುಗಳ ಮೇರೆಯನ್ನು ಮೀರುವ ಒಂದು ಸ್ಥಿತಿಯು ಮಾನವನಿಗೆ ಒಮ್ಮೆ ಬರುತ್ತದೆ ಮತ್ತು ಆ ಸ್ಥಿತಿಯು ಆತ್ಮದ ಒಂದು ಬಹುಮುಖ ಹಾಗೂ ಶ್ರೀಮಂತ ವಿಸ್ತರಣೆಯನ್ನು ತಲುಪುತ್ತದೆ. ಆಗಲೂ, ನಮ್ಮ ನ್ಯಾಯವಾದ ತಳಹದಿ ಎನ್ನಿಸಿದ ತನ್ನ ಸತ್ತೆಯ ವಿಸ್ತಾರವಾದ ವಿಧಿಯು ವಶವಾಗಿರುವಾಗಲೂ, ತನ್ನ ಪ್ರಣೋದವನ್ನು ಮೀರಿಸಿದ ಇನ್ನೊಂದು ಪ್ರಣೊದವು ಅವನನ್ನು ಮುನ್ನಡೆಸಿಕೊಂಡು ಹೋಗಲು ಅಗತ್ಯವಾಗಿದೆ. ಏಕೆಂದರೆ. ಆತ್ಮ ಪ್ರಣೋದದ ವಿಸ್ತಾರ ಹಾಗೂ ಸಂಖ್ಯಾಬಾಹುಲ್ಯಗಳು ಸಾಕಾಗವು. ವಿಚಾರ, ಉಚ್ಚಾರ, ಆಚಾರಗಳಲ್ಲಿ ದಿವ್ಯ ಸತ್ಯವಿರಬೇಕು. ನಾವು ನಮ್ಮ ವಿಸ್ತೃತ ಮಾನಸ ಸತ್ತೆಯ ಆಚೆಗಿನ ದಿವ್ಯ ಸತ್ತೆಯನ್ನು ಸಾಧಿಸಿಕೊಳ್ಳಬೇಕು. ಹಾಗೆ ಆಚೆಗಿರುವುದು ಮಾನಸೋತ್ತರವಾದ ಧನ್ಯತಾಭಾವವು. ಅಗ್ನಿಯ ಹತ್ತಿರ ಬೆಳಕಿದೆ, ಪ್ರಣೋದವಿದೆ ; ಮಂತ್ರವಿದೆ, ನಿಜವಾದ ಪ್ರೇರಣೆಯಿದೆ ; ಸರ್ವಂಕಷ ಜ್ಞಾನವಿದೆ ಮತ್ತು ಸಾಧಿಸುವ ಕ್ರಿಯಾಶಕ್ತಿಯಿದೆ. ಆತನು ನಮಗಾಗಿ ತನ್ನ ತೇರಿನಲ್ಲಿ ತುಂಬಿಕೊಂಡು ಐಶ್ವರ್ಯವನ್ನು ಹೇರಿಕೊಂಡು ಬಂದು ಧನ್ಯತಾ ಸತ್ತೆಗೂ ಪರಮೋನ್ನತ ಒಳಿತಿಗೂ ನಮ್ಮನ್ನು ಒಯ್ಯುತ್ತಾನೆ.]

೧. ಎಲೈ ಮಹಾದೇವನೇ, ನಿನ್ನನ್ನು ಕರೆಯುವ ನಾನು ಮರ್ತ್ಯನು. ಏಕೆಂದರೆ ನಿನ್ನ ಬಲವು ನನ್ನ ಬಲಕ್ಕಿಂತ ಮಹತ್ತರವಾಗಿದೆ ಮತ್ತು ತನ್ನ ಕಾರ್ಯಗಳಲ್ಲಿ ಧರ್ಮಾನುರುದ್ಧವಾಗಿದೆ. ತನ್ನ ಯಜ್ಞವನ್ನು ಸಾಂಗೋಪಾಂಗವಾಗಿ ಪೂರ್ಣಗೊಳಿಸಿದ ಅನಂತರ ಬಹುಮುಖ ಜೀವಾತ್ಮನಾದ ಮಾನವನು ದಿವ್ಯ ಸಂಕಲ್ಪವನ್ನು (ಅಗ್ನಿಯನ್ನು) ಅವನ ಸಂವರ್ಧನೆಗಾಗಿ ಪೂಜಿಸಲಿ.

೨. ಮಾನವನೇ, ನೀನು ಈ ಸತ್ತೆಯ[೧] ವಿಸ್ತಾರವಾದ ವಿಧಿಯನ್ನು ಗೆದ್ದುಕೊಂಡಿದ್ದೀಯೆ ; ಈ ಜ್ವಾಲೆಯ ಬಾಯಿಯ ಬಲದಿಂದ ನೀನು ಆತ್ಮಬಲವತ್ತೆಯನ್ನು ಹೆಚ್ಚಿಸಿದ್ದೀಯೆ. ಅದರಿಂದ ಆ ಜ್ವಾಲಾಮಯನ ಅತಿ ಶ್ರೀಮಂತ ಜ್ವಾಲೆಗಳ ಸ್ವರ್ಗವನ್ನು ಮನಸ್ಸಿನಲ್ಲಿ ಸಾಕ್ಷಾತ್ಕರಿಸಿಕೊಳ್ಳುತ್ತೀಯೆ

---

೧. ಸತ್ತಾ ನಿಯಮ : ಬಾಳಿನಲ್ಲಿ ವಿಸ್ತೃತವಾದ ಪ್ರಜ್ಞೆಯ ಕಾರ್ಯವ್ಯಾಪ್ತಿಯ ಹಾಗೂ ಕ್ರಿಯಾಶಕ್ತಿಯ ಬಲದಿಂದ ಸಾಮಾನ್ಯಜೀವನದಲ್ಲಿಯ ಮಾನಸ, ಜೈವಿಕ ಮತ್ತು ಭೌತಿಕ ಸತ್ತೆಯ ಬಿಗಿಯಾದ ಇತಿಮಿತಿಗಳು ಮುರಿಯಲ್ಪಡುತ್ತವೆ. ಅದರಿಂದ ಮಾನವನಿಗೆ ತನ್ನ ಪೂರ್ಣ ಅಂತರ್ಜೀವನವನ್ನು ಅನುಭವಿಸಲು ಸಾಧ್ಯವಾಗುವುದು ಮತ್ತು ಅವನಿಗೆ ತನ್ನ ಹಾಗೂ ವೈಶ್ವಿಕ ಸತ್ತೆಯ ಎಲ್ಲಾ ಸ್ತರಗಳೊಡನೆ ಸಂಪರ್ಕ ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ.

- ಆ ಸ್ವರ್ಗವಾದರೋ ಮನೋ[1] ವಿಚಾರಕ್ಕೆ ಅತೀತವಾದ ಆನಂದೋದ್ರೇಕ ನಿರ್ಭರವಾದುದು.

೩. ತನ್ನ ಜ್ವಾಲೆಯ ಬಾಯಿ ಹಾಗೂ ಪ್ರಭಾವಿಕಿರಣಗಳಿಂದ ಮತ್ತು ತನ್ನನ್ನು ತನ್ನ ಉತ್‌ಪ್ರೇರಣ ಪ್ರಣೋದಗಳಿಂದ ಅವನು ನೊಗ ಕಟ್ಟಿಕೊಂಡಿದ್ದಾನೆ. ಮತ್ತು ಸ್ವರ್ಗಬೀಜದಂತೆ ಅಗಲವಾದ ಅವನು ತನ್ನ ಕಿರಣಗಳ ಪಾವಿತ್ರ್ಯವನ್ನು ಉರಿಸಿ ತೋರಿಸುತ್ತಾನೆ.

೪. ಸ್ವಕರ್ಮಗಳ ಪ್ರಣೋದದ ದೆಸೆಯಿಂದ ಆತನಿಗೆ ಸರ್ವಂಕಷಜ್ಞಾನವಿದೆ ಮತ್ತು ಯಾವುದನ್ನಾದರೂ ಸಾಧಿಸುವ ಕ್ರಿಯಾಶಕ್ತಿಯಿದೆ ; ಅವನ ರಥವು ಒಂದು ದಿವ್ಯಸಂಪತ್ತನ್ನು ಸಾಗಿಸುತ್ತದೆ. ಆದುದರಿಂದ ಅವನು ಸರ್ವಸ್ಪಷ್ಟ ಪದಾರ್ಥಗಳಲ್ಲೂ ಅಧಿಷ್ಠಾನ ದೇವತೆಯಾಗಿ ಪ್ರಕಟಗೊಳ್ಳಬೇಕಾಗಿದೆ ಮತ್ತು ಮಾನವರು ಕರೆವ ನೆರವಿಗನಾಗಿದ್ದಾನೆ.

೫. ಈಗಲೂ ನಮಗೆ ಕೂಡಾ ನಮ್ಮ ಪರಮೋನ್ನತ ಒಳಿತಿನ ಸಿದ್ಧಿಗಾಗಿ[2] ಜ್ಞಾನದ ದ್ಯುಮತ್ ಪ್ರಭುಗಳು ಜ್ವಾಲಾಮಯನ ಬಾಯಬಲದಿಂದ ದೃಢನೆಲೆಯುಳ್ಳವನಾಗಲಿ, ಎಲೈ ಕ್ರಿಯಾಶಕ್ತಿ ಸೂರ್ಯನೇ, ನಮ್ಮ ಆನಂದಮಯ ಸ್ಥಿತಿಗೆ ನಾವು ತಲುಪುವಷ್ಟು ಬಲವುಳ್ಳವರಾಗಿ ಅದರೊಳಕ್ಕೆ ನಾವು ಹೋಗುವಂತೆ ನಮ್ಮನ್ನು ನೀನು ರಕ್ಷಿಸು. ನಮ್ಮ ಬೆಳೆವಣಿಗೆಯಾಗಲೆಂದು ನೀನು ನಮ್ಮ ಯುದ್ಧಗಳಲ್ಲಿ, ದಂಡಯಾತ್ರೆಯಲ್ಲಿ ನಮ್ಮೊಡನೆ ನಡೆ.



---

೧. ಅಸ್ತಿತ್ವದ ಸ್ವರ್ ಎಂಬ ಅತಿಮಾನಸ ಸ್ತರವೇ ಆಧಾರವಾಗಿರುವಂಥ ಆನಂದ ಸ್ಥಿತಿಯು.

೨. ಸರಿಯಾದ ಪಥಚಲನ ಮತ್ತು ಅದರ ದಿವ್ಯಾನಂದಗಳಿಂದ ನಾವು ಪತಿತರಾಗದಿರುವಂತೆ ಮಾಡಲು ದಿವ್ಯ ಸಂಕಲ್ಪ ಸ್ವರೂಪನು ತಂದ ಬೆಳಕು ಹಾಗೂ ಸತ್ಯಗಳಿಗೆ ನಮ್ಮ ಪ್ರಜ್ಞೆಯು ದೃಢವಾಗಿ ಅಂಟಿಕೊಂಡಿರುವ ಹಾಗೆ ನಮ್ಮಲ್ಲಿ ನೆಲೆಸಿದ ದ್ಯುಮ ದೇವತೆಗಳು ವ್ಯವಸ್ಥೆ ಮಾಡಬೇಕು.

# ಹದಿನೆಂಟನೆಯ ಅಗ್ನಿ ಸೂಕ್ತ

## ಹೇರಳ ಶ್ರೇಯಃ ಸಮೃದ್ಧಿಯ ಅಧಿಪತಿಗಳನ್ನು ಕುರಿತ ಸೂಕ್ತ

[ದೇವತೆಗಳು ಜೀವಿತದ ಎಲ್ಲಾ ಐವತ್ತು ನಾಗಾಲೋಟದ ಕುದುರೆಗಳನ್ನೂ ಕೊಟ್ಟಿರುವಾಗ, ಜೀವಾತ್ಮನು ತನ್ನ ಬರಿ ಭೌತಿಕ ಅಸ್ತಿತ್ವವನ್ನು ದಾಟಿ ಜೈವಿಕ ಕ್ರಿಯಾಶಕ್ತಿಯಿಂದ ಪೂರ್ಣವಾಗಿ ತುಂಬಿರುವಾಗ, ಅವನ ದ್ವಿತೀಯ ಅವಸ್ಥೆ ಮುಗಿದ ಮೇಲೆ ದಿವ್ಯ ಶಕ್ತಿಗಳು ಅವತರಿಸುವುದನ್ನು ಪೂರ್ಣಗೊಳಿಸಲೆಂದು ದಿವ್ಯ ಸಂಕಲ್ಪನನ್ನು ಆಹ್ವಾನಿಸಲಾಗಿದೆ. ಅಗ್ನಿಯು ಇಲ್ಲಿ ಭೌತಿಕ ಇರವಿನ ಇತಿಮಿತಿಗಳನ್ನು ಮುರಿದು ಈ ಹೊಸ ಶ್ರೀಮಂತ ಅತಿಭೌತಿಕ ಜೀವನದ ಸಂಮೋದಗಳಿಂದ ತುಂಬಿರುವ ಆ ದಿವ್ಯ ಸಂಕಲ್ಪಕಾತ್ಮನ ಸುದೂರ ಗಾಮಿಯಾದ ಅಸ್ತಿತ್ವದ ಬೆಳಕು ಮತ್ತು ಉರಿಯಾಗಿದ್ದಾನೆ. ಈಗ ಜೀವಾತ್ಮನಿಗೆ ಬರಬೇಕಾದದ್ದು ತೃತೀಯ ಸ್ಥಿತಿ - ಅರ್ಥಾತ್ - ಮಾನಸಿಕ ರಾಜ್ಯಗಳ ಅತ್ಯುನ್ನತ ಮಟ್ಟದ್ದಾದ ಅತಿಮಾನಸ ಬೆಳಕಿನ ಶಕ್ತಿಯು ಜೀವಾತ್ಮನ ಮಾನವ್ಯ ಮನೋಧರ್ಮದಲ್ಲಿ ಹೊಕ್ಕು ತನ್ನ ಸಮೃದ್ಧ, ವೈವಿಧ್ಯಪೂರ್ಣ ಮತ್ತು ಪ್ರಕಾಶಮಾನ ವಿಚಾರ ಅಲೆಯಿಂದ ಮತ್ತು ಮಂತ್ರದಿಂದ ಜೀವಾತ್ಮನ ಮುಕ್ತ ಮನಸ್ಕತೆಯನ್ನು ಪೂರ್ಣತೆಗೊಯ್ದು ಮುಟ್ಟಿಸಬೇಕಾಗಿದೆ. ಅಲ್ಲಿ ಪ್ರಾತಿಭ ಮತ್ತು ಸ್ಫೂರ್ತಮನದ ಆವಿರ್ಭಾವವು ಆರಂಭವಾಗುತ್ತದೆ. ಅಗ್ನಿಯು ಆ ವೈಶಾಲ್ಯವನ್ನೂ ಪರಮಸತ್ಯಜ್ಞಾನದ ಬೆಳಕನ್ನೂ ದಿವ್ಯತೆಯನ್ನೂ ಸೃಜಿಸಬೇಕಾಗಿದೆ ; ಮತ್ತು ಆ ಮೂಲಕ ಆಗಲೇ ಪೂರ್ಣೀಕತ ಮತ್ತು ದೇವ ನಿರ್ಭರ ಜೈವಿಕತೆಗೆ ಸ್ವ ಸಹಜವಾದ ಮತ್ತು ಆಗಲೇ ಸಿದ್ಧಗೊಳಿಸಿಟ್ಟಿಡಲಾಗಿರುವ ಪ್ರಣೋದದ ಮುಕ್ತ ವೇಗವನ್ನು ಹಾಗೂ ಜೀವನ ವಿಸ್ತಾರವನ್ನೂ ಭೋಗವನ್ನೂ ಒದಗಿಸಬೇಕಾಗಿದೆ.]

೧. ಮುಂಬೆಳಗಿನಲ್ಲಿ[1] ಪರಮದಿವ್ಯ ಸಂಕಲ್ಪಾತ್ಮಕನು ದೃಢೀಕೃತನಾಗಲಿ- ಆತನು ಬಹು ಆನಂದಗಳಿಂದ ಕೂಡಿದ ಪ್ರಾಣಿಸ್ತೋಮಾತಿಥಿಯು ; ಮರ್ತ್ಯರಲ್ಲವನು ಅಮರ್ತ್ಯನು - ಅವನು

---

೧. ಮನದಲ್ಲಿ ಉಚ್ಚತರ ಜ್ಞಾನದ ದಿವ್ಯ ಉಷೆಯು ಉದಯವಾಗುವುದು.

೨. ದ್ವಿತನು ಮಾನವನ ಉದ್ಗಮನದ ಎರಡನೆಯ ಸ್ತರದ ದೇವನು ಯಾ ಋಷಿಯು. ಒಂದು ಜೈವಿಕ ಪ್ರಣೋದದ್ದು. ಅಲ್ಲದೆ ಅದು ತೃಪ್ತ, ಪ್ರಣೋದ, ಪ್ರಾಪ್ತಕಾಮ ಮತ್ತು ಜಡಪದಾರ್ಥದ ಅಚ್ಚಿನ ಯಾವ ಬಿಗಿಯಾದ ಇತಿಮಿತಿ-ಯಾಗಿಲ್ಲದ ಮುಕ್ತ ವಿಹಾರಸ್ತರಕ್ಕೆ ಸೇರಿದ್ದು ಹೊಸ ರಾಜ್ಯಗಳಲ್ಲಿ ಹೊಸ ರಾಜ್ಯಗಳ ಪ್ರಜ್ಞೆ ನಮ್ಮಲ್ಲಿ ಮೂಡುತ್ತದೆ - ಮುಂದಿನ ಋಕ್ಕು ಹೇಳುವ "ಸುದೂರಗಾಮಿಯಾದ ಅಸ್ತಿತ್ವದ" ಸುವಿಸ್ತೃತ ಪ್ರದೇಶಗಳು - ಅದು ನಮ್ಮ ಸಾಮಾನ್ಯ ಭೌತ ಪ್ರಜ್ಞೆಗೆ ಗೋಚರವಾಗದಂತೆ ತೆರೆಮರೆಯಲ್ಲಿಡಲಾಗಿದೆ. ತೃತನು ದೇವ ಯಾ ಋಷಿ - ಅವ ಮೂರನೆಯ ಸ್ತರ - ಭೌತಮನಕ್ಕೆ ಅರಿಯದ ಚಂಚನ್ಮನೋರಾಜ್ಯಗಳಿಂದ ಕೂಡಿದ ಹಾಸು, ನೆಲೆ.

ಅವರ ಎಲ್ಲಾ ಆಹುತಗಳಿಂದಲೂ ಸಂತುಷ್ಟನಾಗುತ್ತಾನೆ.

೨. ಅವನು ತನ್ನದೇ ಆದ ಸೂಕ್ಷ್ಮಜ್ಞ ಮನಸ್ಸಿನ ಅಪಾರ ಸಮೃದ್ಧಿ ಸ್ವರೂಪನು. ಯಾರಿಗೆ? ಎರಡನೆಯ ದರ್ಜೆಯ ಜೀವಾತ್ಮನಿಗೆ[೨]. ಏಕೆಂದರೆ ಈ ಜೀವಾತ್ಮನು ಶುದ್ಧೀಕೃತ ಬುದ್ಧಿಯುಳ್ಳವ-ನಾಗಿದ್ದಾನೆ. ಎಲೈ ಅಮರ್ತ್ಯನೇ, ಈಗ ಆತನು ತನ್ನಲ್ಲೇ ದಿವ್ಯಾಹ್ಲಾದ ಮದ್ಯವನ್ನು ಧಾರಣೆ ಮಾಡಿ ನಿನ್ನನ್ನು ದೃಢಪಡಿಸುತ್ತಾನೆ.

೩. ಎಲೈ ವೇಗವಂತ ಕುದುರೆಗಳನ್ನು ಕೊಡುವವನೇ, ವಿಸ್ತಾರವಾಗಿ ವ್ಯಾಪಿಸುವ ಅಪ್ರತಿಹತ ಅಪಾರ ಶ್ರೇಯಃ ಸಮೃದ್ಧಿಯ ಒಡೆಯರಿಗಾಗಿ, ಸುದೂರಗಾಮಿ ಅಸ್ತಿತ್ವದ[೩] ಶುದ್ಧ ಜ್ವಾಲೆಯಾದ ನಿನ್ನಂಥವನನ್ನು ನಾನು ಕರೆಯುತ್ತೇನೆ.

೪. ಅಪಾರ ಶ್ರೇಯಃ ಸಮೃದ್ಧಿಯ ಒಡೆಯರಲ್ಲಿ ವಿಚಾರದ ಶ್ರೀಮಂತ ಬೆಳಕಿದೆ ಮತ್ತು ಅವರು ನಾವು ಹೇಳಿದ ಮಂತ್ರಗಳನ್ನು ತಮ್ಮ ಬಾಯಲ್ಲಿ[೪] ಇಟ್ಟುಕೊಳ್ಳುತ್ತಾರೆ. ಲಸಲ್ಲೋಕದ ಶಕ್ತಿಯಲ್ಲಿ[೫] ಮತ್ತು ಜೀವಾತ್ಮದ ಪೂರ್ಣತೆಯನ್ನು ಯಜ್ಞವೇದಿಕೆಯ ಒಂದು ಆಸನವನ್ನಾಗಿ ಹರಡಲಾಗಿದೆ ಮತ್ತು ಅದರ ಸ್ಫೂರ್ತಿಗಳನ್ನೆಲ್ಲಾ ಸುತ್ತಲೂ ಚೆಲ್ಲಿಡಲಾಗಿದೆ.

೫. ಎಲೈ ಅಮರ್ತ್ಯ ಜ್ವಾಲಾ ಸ್ವರೂಪನೇ, ಪೂರ್ಣ ದೃಢೀಕರಣದಿಂದ ನನಗೆ ಐವತ್ತು ವೇಗದ ಅಶ್ವಗಳನ್ನಿತ್ತ[೬] ದಿವ್ಯಾತ್ಮಗಳು ಅಪಾರ ಶ್ರೇಯಃ ಸಮೃದ್ಧಿಯ ಒಡೆಯರು; ಅವರಿಗಾಗಿ ಮಹಾ ದೇವತಾ ತತ್ವಗಳಿಂದ ದೊಡ್ಡದೂ ವಿಶಾಲವೂ ಆದ ಚಂಚಜ್ ಜ್ಞಾನವನ್ನು ನಿರ್ಮಿಸು.



೩. ದಿವ್ಯ ಚಲನೆ ಜೀವನದ ಈ ಹೊಸ ಪ್ರಪಂಚಗಳಲ್ಲಿ ಈಗ ಪೂರ್ಣವಾಗಿದೆ ; ಮೃತ್ಯು ಕತ್ತಲೆಗಳ ಶಕ್ತಿಗಳಿಂದ ಚುಚ್ಚಲ್‌ಪಡದೆ ಇರುವ ಅನಾಹತ ಸಾನು ಪ್ರದೇಶಗಳಿಗೂ ಅದು ಹಬ್ಬಿದೆ.

೪. ಈ ಋಕ್ಕು ದ್ವಿತ ರಾಜ್ಯಗಳಿಂದ ತೃತರಾಜ್ಯಗಳಿಗೇರುವ ಸುದೂರವನ್ನು ವರ್ಣಿಸುತ್ತದೆ.

೫. ಸ್ವರ್ಣರ=ಇದೊಂದು ದೇಶವೆಂಬಂತೆ ಬಹಳ ಸಲ ವರ್ಣಿತವಾಗಿದೆ. ಇದು ಸ್ವತಃ"ಸ್ವರ್‌ಲೋಕ"ದ ಬೆಳಕಿನಿಂದಲೇ ನಿರ್ಮಿತವಾಗುವ ತಚ್ಛಕ್ತಿಜಾತ ಪ್ರಪಂಚವು. ಇಲ್ಲಿ ಅದರ ಸ್ಫೂರ್ತಿಗಳೂ ಪ್ರಬೋಧ ಕಿರಣಗಳೂ ಕೆಳಗಿಳಿದು ಬರುತ್ತವೆ ಮತ್ತು ಯಜ್ಞ ವೇದಿಕೆಯ ಸುತ್ತಲೂ ಆಸೀನವಾಗುವುವು. ಬೇರೆ ಕಡೆಗೆ ಇವನ್ನು ಸೌರ ದೇವತೆಯಾದ ವರುಣರ ಚಾರಕರೆಂದು ಕರೆಯಲಾಗಿದೆ.

೬ ಅಶ್ವವು ಜೈವಿಕ ಪ್ರಣೋದದ ಸಂಕೇತವು. ಹಸುವು ಬೆಳಕಿನ ಗುರುತಾಗಿರುವ ಹಾಗೆ. ಐವತ್ತು, ನೂರು, ಸಾವಿರ ಮುಂತಾದ ಸಂಖ್ಯೆಗಳು ಪೂರ್ಣತೆಯ ಕುರುಹುಗಳು.

# ಹತ್ತೊಂಬತ್ತನೆಯ ಅಗ್ನಿ ಸೂಕ್ತ

## ಅನಾವರಣಕರ ಕಿರಣದ ಮತ್ತು ಗೆಲ್ಲುವ ಸಂಕಲ್ಪದ ಸೂಕ್ತ

[ಜೀವಾತ್ಮದ ಅತಿಮಾನವಾತಾರವನ್ನಿಲ್ಲಿ ಹಾಡಲಾಗಿದೆ. ಇದರಲ್ಲಿ ಅದರ ಉಚ್ಚತರ ಸ್ಥಿತಿಗಳೆಲ್ಲವನ್ನೂ ಹೊಕ್ಕು ದಿವ್ಯ ಬೆಳಕಿಗದು ಎದುರಾಗಿ ನಿಲ್ಲುತ್ತದೆ. ಇದು ನಮ್ಮ ಸತ್ತೆಯ ಇಡೀ ತೃತೀಯ ಸ್ತರದ ಉದ್ಘಾಟನೆಯಾಗಿದೆ. ಮೊದಲು ಅದು ಕೋಟೆಯೊಳಗಿನ ಮುಚ್ಚಿದ ಹೊರಬಾಗಿಲುಗಳನ್ನುಳ್ಳ ನಗರದಂತೆ ಭೌತಿಕ ಸಕಾಯ ಜೀವಾತ್ಮಕ್ಕೆ ಒಳಹೊಗಲಾರದಂತಿತ್ತು. ದಿವ್ಯ ಪ್ರಣೋದದ ಈ ಹೊಸ ಕಾರ್ಯದಿಂದ ಮಾನಸಿಕ ಹಾಗೂ ಭೌತಿಕ ಪ್ರಜ್ಞೆಗಳೂ ಒಗ್ಗೂಡಿ ಎತ್ತರದಲ್ಲಿರುವ ಅತಿಮಾನಸ ಸ್ತರವನ್ನು ಸೇರುತ್ತವೆ. ಇದಕ್ಕೂ ಮೊದಲು ಅತಿಮಾನಸಸ್ತರವು ಅವುಗಳಿಂದ ಬೇರೆಯಾಗಿತ್ತು. ಈಗ ಅದರ ಕೆಲಸಗಳಲ್ಲಿ ಉರಿಯುತ್ತಿರುವ ಜೈವಿಕ ಪ್ರಣೋದವು ದಿವ್ಯಸೂರ್ಯನ ಉಷ್ಣತೆಯನ್ನೊಳಗೊಂಡು ದಿವ್ಯಜ್ಞಾನದ ಸೂರ್ಯರಶ್ಮಿಯ ಅಲೆಯೊಡನೆ ಸಾಮಶ್ರುತ್ಯವನ್ನು ಹೊಂದುತ್ತವೆ.]

೧. ಸ್ಥಿತಿಯ ಮೇಲೆ ಸ್ಥಿತಿ ಹುಟ್ಟುತ್ತದೆ ; ಜ್ಞಾನದ ಪ್ರಜ್ಞೆಗೆ ಮುಚ್ಚಳದ ಮೇಲೆ ಮುಚ್ಚಳ ತೆರೆದು ಎದುರಾಗುತ್ತದೆ. ಅದರ ತಾಯಿ[೧] ತೊಡೆಯ ಮೇಲೆ ಜೀವಾತ್ಮವು ನೋಡುತ್ತದೆ.[೨]

೨. ವ್ಯಾಪಕ ಜ್ಞಾನೋದಯವಾದ ಮನುಷ್ಯರು ನಿನ್ನಲ್ಲಿ ಆಹುತಿಯನ್ನು ಹಾಕುವರು - ಅವರು ನಿರ್ನಿದ್ರ ಮನುಷ್ಯತ್ವವನ್ನು ಕಾಯುತ್ತಾರೆ. ಅವರು ಸದುರ್ಗ ನಗರವನ್ನು ಹೊಗುತ್ತಾರೆ.

೩. ಜಗತ್ತಿನಲ್ಲಿ ಜನಿಸಿ ಕರ್ಮ ಮಾಡುತ್ತಿರುವ ದುಡಿಮೆಗಾರರು ಶ್ವೇತದ್ಯುತಿಯ ತಾಯಿಯ[೩] ಮಗನ ಪ್ರಕಾಶ ಸ್ಥಿತಿಯನ್ನು ಹೆಚ್ಚಿಸುತ್ತಾರೆ - ಅವನು ಬಂಗಾರದ ಕೊರಳಹಾರವನ್ನು[೪] ಧರಿಸಿದ್ದಾನೆ ; ಅವನು ವಿಸ್ತೃತ ಮಂತ್ರವನ್ನು ಹೇಳುತ್ತಾನೆ; ಅದರಿಂದ ಮತ್ತು ಸಂತಸದ ಮಧು ಮದ್ಯದಿಂದ ಅವನು ಅಪಾರ ಶ್ರೇಯಃ ಸಮೃದ್ಧಿಯ ಸಂಶೋಧನೆಯಲ್ಲಿ ತತ್ಪರನಾಗುತ್ತಾನೆ.

---

೧. ಅದಿತಿ = ಅನಂತ ಪ್ರಜ್ಞೆ, ಸರ್ವಮಾತೆ.

೨. ಅತಿಮಾನಸ ಅನಂತ ಪ್ರಜ್ಞೆಯ ಸರ್ವಗ್ರಾಹಕ ದರ್ಶನ.

೩. ಅದಿತಿ ; ಅವಳ ಕೃಷ್ಣಾವತಾರಿಣಿಯೇ ದಿತಿ. ದಿತಿಯು ಅಂಧಕಾರ ಶಕ್ತಿಗಳ ಮಾತೆ.

೪. ದಿವ್ಯ ಪರಮಸತ್ಯದ ಕಿರಣಗಳಿಗೆ ಸಂಬಂಧಿಸಿದ.

೪. ಅವನು ತಾಯಿಯ[೫] ಆಹ್ಲಾದಕರ ಮತ್ತು ಅಪೇಕ್ಷಣೀಯ ಗರ್ಭಫಲಸ್ವರೂಪನು. ಅವನು ಸಂಗಾತಿಯಿಲ್ಲದೆಯೂ[೬] ಇಬ್ಬರು ಸಹಚರರೊಡನೆ ಬಾಳುತ್ತಾನೆ. ಅವನು ಬೆಳಕಿನ ಉಷ್ಣತೆ ಹಾಗೂ ಅಪಾರ ಶ್ರೇಯ ಸಮೃದ್ಧಿಯ ಹೊಟ್ಟೆ. ಆತನು ನಿತ್ಯ ಅಜಯ್ಯನು - ತನ್ನ ಪಾದಗಳಿಂದ ಎಲ್ಲವನ್ನೂ ಮೆಟ್ಟಿ ನಿಲ್ಲುತ್ತಾನೆ.

೫. ಎಲೈ ರಶ್ಮಿಯೇ, ನಮ್ಮಲ್ಲಿ ಹುಟ್ಟಿ ಆಟವಾಡುತ್ತಾ ಇದ್ದು ನಿನ್ನ ಜ್ಞಾನವನ್ನು ಉರಿವ ಜೀವನ ದೇವತೆಯೊಡನೆ ಸಮಶ್ರುತೀಕರಿಸು. ಸಂಕಲ್ಪದ ಈ ಜ್ವಾಲೆಗಳು ನಮ್ಮ ಕರ್ಮಗಳನ್ನು ಹೊತ್ತಿರುವುದರಿಂದ ಹಿಂಸ್ರವಾಗಿ (ಗಡಿದಾಟುವಂಥವುಗಳಾಗಿ) ಧ್ಯೇಯನಿಷ್ಠವಾಗಿ ಹರಿತವಾಗಿ ಪೂರ್ಣ ಸಾಂದ್ರತೆಯನ್ನು ಸಾಧಿಸಲಿ ಮತ್ತು ಸರ್ವಧಾರಿಯಲ್ಲಿ ಸ್ಥಿರವಾಗಿ ನೆಲೆನಿಲ್ಲಲಿ.



---

೫ ಅದಿತಿಧೇನುವಿನ ಹಾಲು.

೬ ಸರ್ವ ಪದಾರ್ಥಗಳನ್ನು ಸೃಷ್ಟಿಸುವ ಸ್ವಯಂಪೂರ್ಣ ಅತಿಮಾನಸ ಪ್ರಜ್ಞಾಸ್ತರ ಸ್ವರೂಪನು. ಅತ್ಯುನ್ನತನೂ ಅತಿದೂರಸ್ಥನೂ ಅತಿಪ್ರತ್ಯೇಕನೂ ಆಗಿ ಕಾಣುವುದು ನಾವು ನಮ್ಮ ಮಾನಸ ಪ್ರಜ್ಞಾಸ್ತರ ಹಾಗೂ ಭೌತಿಕ ಪ್ರಜ್ಞಾಸ್ತರಗಳಲ್ಲಿರುವಾಗ. ಆದರೂ ಈ ಸ್ತರಗಳ ಪರಸ್ಪರ ಕಾರ್ಯ ಪ್ರತಿಕಾರ್ಯಗಳ ಹಿನ್ನೆಲೆಯಲ್ಲಿ ಆತನಿದ್ದೇ ಇರುತ್ತಾನೆ. ಮುಕ್ತ ಸ್ಥಿತಿಯಲ್ಲಿರುವ ಮಾನವನಲ್ಲಿ ಈ ಪ್ರತ್ಯೇಕತೆ ಇರುವುದಿಲ್ಲ. -ಇದನ್ನು ಲುಪ್ತಗೊಳಿಸಲಾಗುತ್ತದೆ.

# ಇಪ್ಪತ್ತನೆಯ ಅಗ್ನಿ ಸೂಕ್ತ

## ಕರ್ಮದ ಮತ್ತು ಸಿದ್ಧಿಯ ಕುರಿತ ಸೂಕ್ತವು

[ವಿಭೇದನ ಮತ್ತು ವಕ್ರತೆಗಳಿಗಿಳಿದು ಜೀಳದಂತೆ ಎಲ್ಲವೂ ಉಳಿಯುವ ರೀತಿಯ ದಿವ್ಯ ಕರ್ಮದಿಂದ ತುಂಬಿದ ಆಧ್ಯಾತ್ಮಿಕ ಐಶ್ವರ್ಯ ಸ್ಥಿತಿಯನ್ನು ಋಷಿಯು ಬಯಸುತ್ತಾನೆ. ಆದುದರಿಂದ ನಮ್ಮ ಕರ್ಮಗಳಿಂದ ನಮ್ಮಲ್ಲಿರುವ ದಿವ್ಯ ಪ್ರಣೋದವನ್ನು ಹೆಚ್ಚಿಸಿಕೊಂಡು ನಾವು ಬ್ರಹ್ಮಾನಂದ ಮತ್ತು ಬ್ರಹ್ಮಸತ್ಯ (ಪರಮಸತ್ಯ) ಎಂಬಿವನ್ನು ಪಡೆಯುವೆವು. ಬ್ರಹ್ಮಾನಂದ (ಪರಮಾನಂದ) ಮತ್ತು ಬ್ರಹ್ಮಸತ್ಯಗಳೆಂದರೆ ಬೆಳಕಿನ (ಪ್ರಬೋಧದ) ಮತ್ತು ಪ್ರಣೋದದ ದಿವ್ಯಾನಂದೋದ್ರೇಕವಾಗಿದೆ].

೧. ಹೇ ದಿವ್ಯ ಸಂಕಲ್ಪನೇ, ನಮ್ಮ ಶ್ರೇಯಃ ಸಮೃದ್ಧಿಯನ್ನು ಗೆದ್ದುಕೊಡುವವನೇ, ಮನದಲ್ಲಿ ನೀನೊಬ್ಬನೇ ಕಲ್ಪಿಸಿಕೊಳ್ಳಲು ಸಾಧ್ಯವಾದ ದಿವ್ಯ ಸೌಲಭ್ಯವೆಂಬುದು ನಮ್ಮ ಮಂತ್ರಗಳ ಬಲದಿಂದ ಸ್ಫೂರ್ತಿಮಯವಾಗಿ, ನಮ್ಮ ಸಹಾಯಕರಾಗಿ ದೇವತೆಗಳು ಕಷ್ಟಪಟ್ಟು ಕೆಲಸ ಮಾಡುವಂತೆ ಅವರೇ ಸ್ಫೂರ್ತಿಗೆ ಚಾಲನೆ ನೀಡುವಂಥದಾಗಿದೆ.

೨. ನಿನ್ನ ಜ್ವಾಲೆಯ ಹಾಗೂ ಸಾಮರ್ಥ್ಯದ ಭಯಂಕರತೆಯಲ್ಲಿ ಅತಿಶಯಿಸಲ್ಪಟ್ಟ ಶಕ್ತಿಗಳು ಭೇದದಲ್ಲಿ ಬಿದ್ದು ವಕ್ರತೆಗಂಟಿಕೊಂಡು ನಿನ್ನದಲ್ಲದ ನಿಯಮ (ವಿಧಿ) ಮಾಡಿದ ದಾರಿಯಲ್ಲಿ ನಾವು ಹೋಗುವಂತೆ ನಮ್ಮನ್ನು ಪ್ರೇರಿಸಬೇಡ.

೩. ಎಲೈ ದಿವ್ಯ ಸಂಕಲ್ಪನೇ, ನಿನ್ನನ್ನು ನಾವು ಆಹುತಿಯ ಪುರೋಹಿತನನ್ನಾಗಿ (ಅಧ್ವರ್ಯುವನ್ನಾಗಿ) ಮತ್ತು ಸೂಕ್ಷ್ಮಜ್ಞಾನ ಸಂಪಾದಕನನ್ನಾಗಿ ಸ್ವೀಕರಿಸುತ್ತೇವೆ. ನಿನಗಾಗಿ ನಮ್ಮ ಎಲ್ಲ ಸಂತೋಷಗಳನ್ನೂ ಮುಡಿಪಾಗಿ ಇಡುತ್ತೇವೆ ಮತ್ತು ಮಂತ್ರದಿಂದ ನಾವು ನಿನ್ನನ್ನು ನಮ್ಮ ಯಜ್ಞಗಳಿಗೆ ಆದಿಪುರುಷನೆಂದೂ ಅತ್ಯುನ್ನತ ಅಧಿಷ್ಠಾನ ದೇವತೆಯೆಂದೂ ಕರೆಯುತ್ತೇವೆ.

೪. ಓ ಪ್ರಣೋದಮಯ ದೇವರೇ, ಓ ಕರ್ಮಗಳ ಪರಿಪೂರ್ಣ ಶಕ್ತಿಯೇ, ಈ ಪ್ರಕಾರ ಸರಿಯಾಗಿ ನಾವು ನಿನ್ನನ್ನು ದಿನೇ ದಿನೇ ಹೆಚ್ಚಿಸುವುದು, ಸಂವರ್ಧಿಸುವುದು, ನಮಗೆ ಬ್ರಹ್ಮಾನಂದ ಮತ್ತು ಬ್ರಹ್ಮಸತ್ಯಗಳು ಸಿಕ್ಕಲೆಂದು ; ಹಾಗೇ ನಮಗೆ ಜ್ಞಾನದ ದಿವ್ಯ ಕಿರಣಗಳ ಪೂರ್ಣ ಅವಶಾನಂದ ದೊರಕಲೆಂದು, ಮತ್ತು ಪ್ರಣೋದ ವೀರರ ಪೂರ್ಣ ಅವಶಾನಂದ (ಮೈಮರೆಸುವ ಆನಂದೋದ್ರೇಕ) ಸಿಕ್ಕಲೆಂದು.

❖❖

# ಇಪ್ಪತ್ತೊಂದನೆಯ ಅಗ್ನಿ ಸೂಕ್ತ

## ಮಾನವಾಂತರ್ಗತ ದಿವ್ಯಜ್ವಾಲೆಯ ಸೂಕ್ತವು

[ದಿವ್ಯ ಜ್ವಾಲೆಯು ಮಾನವನಲ್ಲಿ ದಿವ್ಯ ಪುರುಷನಾಗಿ ಉರಿಯಲಿ ಮತ್ತು ನಮ್ಮನ್ನು ಮೇಲಕ್ಕೆ ಒಯ್ದು ಪರಮಸತ್ಯ-ಪರಮಾನಂದಗಳ ಪೀಠಗಳಲ್ಲಿ ಪೂರ್ಣತೆಯ ಅನುಭವವನ್ನು ಪಡೆಯುವಂತೆ ಮಾಡಲಿ - ಎಂದು ಋಷಿಯು ಆ ಜ್ವಾಲೆಯನ್ನು ಆಹ್ವಾನಿಸುತ್ತಾನೆ.]

೧. ಮಾನವನನ್ನಾಗಿ[೧] ನಾವು ನಿನ್ನನ್ನು ನಮ್ಮಲ್ಲಿ ಇಟ್ಟುಕೊಳ್ಳುತ್ತೇವೆ. ಮಾನವನೆಂದು ತಿಳಿದು ನಿನ್ನನ್ನು ಹೊತ್ತಿಸುತ್ತೇವೆ ; ಎಲೈ ಜ್ವಾಲೆಯೇ (ಜ್ವಾಲಾ ಸ್ವರೂಪನೇ), ಓ ದ್ರಷ್ಟೃ ಪ್ರಭಾವ ಸಂಪನ್ನನೇ, ದೇವತಾ ಸಂಶೋಧಕ ಮಾನವ ನೀನೆಂದೂ ಭಾವಿಸಿ ನಾವು ದೇವತೆಗಳಿಗೆಂದು ನಿನ್ನಲ್ಲಿ ಯಜ್ಞಾಹುತಿ ಹಾಕುತ್ತೇವೆ.

೨. ಹೇ ಜ್ವಾಲೆಯೇ, ಮನುಜನಿತ್ತ ಆಹುತಿಗಳಿಂದ ತೃಪ್ತನಾದಾಗ ನೀನು, ಮನುಜ ಪ್ರಾಣಿಯಲ್ಲಿ ಉರಿಯುವೆ. ಜನನ ಕಾಲದಲ್ಲೇ ಪೂರ್ಣನಾಗಿ ಜನ್ಮ ತಾಳಿದವನೇ, ಧಾವಿಸುವ ಆಧ್ಯಾತ್ಮಿಕ ಸಂಪತ್ತಿನಿಂದ ಹಿಂಡಿ ತೆಗೆದವನೇ, ಮನುಜನ ಸೌಟುಗಳು ಅವಿರತವಾಗಿ ನಿನ್ನೆಡೆಗೈಯ್ಯುವುದು.

೩. ಹೇ ದ್ರಷ್ಟಾರ, ಪ್ರೀತಿಯ ಹಾರ್ದಿಕ ಐಕಮತ್ಯದಿಂದ ದೇವತೆಗಳೆಲ್ಲರೂ ನಿನ್ನನ್ನು ತಮ್ಮ ರಾಯಭಾರಿಯನ್ನಾಗಿ ಮಾಡಿಕೊಂಡರು. ದೇವೋತ್ತಮನೆಂದು ಮನುಜರು ತಮ್ಮ ಯಜ್ಞಗಳಲ್ಲ ನಿನ್ನನ್ನು ಸೇವಿಸುತ್ತಾರೆ ಮತ್ತು ಪೂಜಿಸುತ್ತಾರೆ.

---

೧. ಮಾನವನಲ್ಲಿ ಅವತರಿಸುವ ದೇವತಾತತ್ತ್ವವು ಮಾನವತ್ವದ ಬುರುಕಿಯನ್ನು ಹಾಕಿಕೊಳ್ಳುತ್ತದೆ. ದೇವನು ಯಾವಾಗಲೂ ಪೂರ್ಣನು, ಅಜಾತನು, ಬ್ರಹ್ಮಸತ್ಯ, ಬ್ರಹ್ಮಾನಂದಗಳಲ್ಲಿ ನೆಟ್ಟಿರುವವನು. ಅವತರಿಸುವ ಮೂಲಕ ಅವನು ಮಾನವನಲ್ಲಿ ಜನಿಸುತ್ತಾನೆ, ಬೆಳೆಯುತ್ತಾನೆ, ಕ್ರಮವಾಗಿ ತನ್ನ ಪೂರ್ಣತೆಯನ್ನು ಅಭಿವ್ಯಕ್ತಗೊಳಿಸುತ್ತಾನೆ ; ಹೋರಾಟ ಮತ್ತು ಕಠಿನ ಪ್ರಗಮನಗಳ ಮೂಲಕವೋ ಎಂಬಂತೆ ಪರಮಸತ್ಯವನ್ನು ಸಾಧಿಸುತ್ತಾನೆ, ಪರಮಾನಂದವನ್ನು ಪಡೆಯುತ್ತಾನೆ. ಮಾನವನು ವಿಚಾರ ಮಾಡುವವನು, ದೇವನು ಪ್ರೇಕ್ಷಕನು (ಸಾಕ್ಷಿಯು). ಆದರೆ ಆ ದಿವ್ಯಾತ್ಮನು ತನ್ನ ಪ್ರೇಕ್ಷಕತ್ವವನ್ನು ಮರೆಮಾಚಿ ಇಟ್ಟುಕೊಳ್ಳುತ್ತಾನೆ- ಯಾವುದರಲ್ಲಿ? ವಿಚಾರದ ರೂಪಗಳಲ್ಲಿ ಮತ್ತು ಜೀವನಾನುಭವದ ರೂಪಗಳಲ್ಲಿ- ಏತಕ್ಕಾಗಿ? ಮರ್ತ್ಯರು ಅಮರ್ತ್ಯತ್ವಕ್ಕೆ ತಕ್ಕವರಾಗಿ ಬೆಳೆಯುವುದರಲ್ಲಿ ಸಹಾಯ ಮಾಡುವುದಕ್ಕಾಗಿ.

೪. ಹೇ ದಿವ್ಯ ಸಂಕಲ್ಪನೇ, ದಿವ್ಯ ಶಕ್ತಿಗಳಿಗಾಗಿ ಯಜ್ಞ ಮಾಡುವ ಮೂಲಕ ನಿನ್ನನ್ನು ಮರ್ತ್ಯನಾದ ಮನುಜನು ಆರಾಧಿಸಲಿ. ಆದರೆ ಹೇ ಪ್ರಕಾಶ ಸ್ವರೂಪನೇ, ಚೆನ್ನಾಗಿ ಹೊತ್ತಿಸಲ್ಪಟ್ಟ ನೀನು ಹೊರ ಹರಿದು ಹೊಳೆ ; ಪರಮ (ಬ್ರಹ್ಮ) ಸತ್ಯದ ಮನೆಯನ್ನು ನೀನು ಹೊಗು - ಪರಮ (ಬ್ರಹ್ಮ) ಆನಂದದ ವಾಸಸ್ಥಳವನ್ನು ಪ್ರವೇಶಿಸು.



# ಇಪ್ಪತ್ತೆರಡನೆಯ ಅಗ್ನಿ ಸೂಕ್ತ

## ಪೂರ್ಣಾನಂದದತ್ತ ಸಾಗುವ ಪ್ರಯಾಣದ ಬಗೆಗಿನ ಸೂಕ್ತ

[ವಸ್ತುಭಕ್ಷಕನಾದ ಮನುಷ್ಯನು ಆತ್ಯಂತಿಕ ಆನಂದ ಸಾಮ್ಯದಲ್ಲಿ ತನ್ನ ಆಸೆಗಳ ಪೂರೈಕೆಯನ್ನು ಹುಡುಕುತ್ತಾನೆ. ಈ ಗುರಿಗಾಗಿ ದ್ರಷ್ಟ ಸಂಕಲ್ಪ ರೂಪದ ದಿವ್ಯ ಜ್ವಾಲೆಯಿಂದ ಅವನು ಪುನೀತನಾಗಬೇಕು. ಉಕ್ತ ಜ್ವಾಲಾಸ್ವರೂಪನು ಪ್ರಜ್ಞಾತ ದರ್ಶನವನ್ನೂ ಪೂರ್ಣಾನಂದೋದ್ರೇಕವನ್ನೂ ತನ್ನಲ್ಲಿಟ್ಟುಕೊಂಡಿದ್ದಾನೆ. ನಮ್ಮಲ್ಲಿ ಅವನನ್ನು ವೃದ್ಧಿಗೊಳಿಸಿ-ಕೊಳ್ಳುವುದರಿಂದ ನಾವು ನಮ್ಮ ಪ್ರಗತಿಪರ ಯಜ್ಞದೊಂದಿಗೆ ಮುಂಬರಿಯುತ್ತೇವೆ ಮತ್ತು ದೇವತೆಗಳು ಪೂರ್ಣವಾಗಿ ಪ್ರತ್ಯಕ್ಷರಾಗುತ್ತಾರೆ. ನಾವು ಈ ದೇವತಾ ಪ್ರಣೋದನನ್ನು ನಮ್ಮ ಮನೆಯ ಯಜಮಾನನನ್ನಾಗಿ ಮಾಡಿಕೊಳ್ಳಬೇಕು. ನಮ್ಮ ಮನೆಯೆಂದರೆ ನಮ್ಮ ಭೌತಕಾಯ ಮತ್ತು ಮನಃಕಾಯ. ಆ ದಿವ್ಯ ಪ್ರಣೋದನಿಗೆ ನಮ್ಮ ಭೋಗ್ಯಗಳೆಲ್ಲವನ್ನೂ ಆಹಾರವನ್ನಾಗಿ ಅರ್ಪಿಸಬೇಕು.]

೧. ಮಾನವನೇ, ಎಲ್ಲದರಲ್ಲಿಯೂ ಸಮಾನ ಸಫಲತೆಯನ್ನು (ಆಶಾಸಿದ್ಧಿಯನ್ನು) ಹುಡುಕುವ ನೀನು ಭೋಗಿಯಾಗಿರುವುದರಿಂದ ಪ್ರಬೋಧ ಮಂತ್ರವನ್ನು ಅವನಿಗೆಂದು ಹಾಡು. ಅವನಾದರೋ ಹೊಳೆವ ಶುದ್ಧಿಕರನಾದ ಜ್ವಾಲ ಸ್ವರೂಪನು ; ನಮ್ಮ ಯಜ್ಞ ಪ್ರವಾಸದಲ್ಲಿ ಅವನೇ ಪೂಜನೀಯನು ; ಪ್ರಾಣಿಯಲ್ಲಿ ಅವನು ಅತ್ಯಂತ ಹರ್ಷೋದ್ರೇಕದ ಸ್ವರೂಪದಲ್ಲಿರುವವನು ಮತ್ತು ಯಜ್ಞಾಹುತಿಯ ಪುರೋಹಿತನು.

೨. ಜಾತವೇದ ಸ್ವರೂಪದ (ಸರ್ವಜನ್ಮಜ್ಞನಾದ) ದಿವ್ಯ ಸಂಕಲ್ಪನನ್ನು ನಿನ್ನಲ್ಲಿಟ್ಟುಕೋ. ಆತನು ಋತುಗಳಿಗನುಗುಣವಾಗಿ ಯಜ್ಞ ಮಾಡುವವನು. ಇಂದು ನಿನ್ನ ಯಜ್ಞವು ಅವಿಚ್ಛಿನ್ನವಾಗಿ ಮುಂದುವರಿಯಲಿ. ನಿನ್ನ ಯಜ್ಞವು ದೇವತೆಗಳ ಅತಿಮಾನುಷ ಅವತಾರಗಳನ್ನೆಲ್ಲಾ ನಿನ್ನೆದುರು ತೆರೆದಿಡುವುದು.

೩. ಮರ್ತ್ಯರಾದ ನಾವು ದಿವ್ಯನಾದ ನಿನ್ನ ಮೇಲೆ ನಮ್ಮ ಮನವನ್ನಿಟ್ಟಿರುತ್ತೇವೆ. ಏಕೆಂದರೆ, ನಿನಗೆ ಪ್ರಜ್ಞಾತ ದರ್ಶನದ ಮನವಿದೆ. ನಾವು ಪಯಣಿಸುತ್ತ ನಿನ್ನನ್ನು ಧ್ಯಾನಿಸುವೆವು ಏಕೆ? ನಾವು ವೃದ್ಧಿ ಹೊಂದಲೆಂದು, ಅತ್ಯಂತ ಅಪೇಕ್ಷಣೀಯನಾದ ನೀನೂ ವೃದ್ಧಿ ಹೊಂದಲೆಂದು.

೪. ಎಲೈ ದಿವ್ಯ ಸಂಕಲ್ಪನೇ, ಉಕ್ತಕಾರ್ಯಕ್ಕಾಗಿ ನೀನು ಎಚ್ಚರ ಹೊಂದು ; ನಮ್ಮಲ್ಲಿರುವ ಈ ದರ್ಶನವನ್ನು ಈಕ್ಷಿಸು. ಓ ಪ್ರಣೋದ ಪ್ರಭುವೇ, ಇದೇ ನಮ್ಮ ಮಂತ್ರ ನಿನಗೆ. ಬಲಿಷ್ಠ ದವಡೆಯುಳ್ಳ ಭೋಗಿಯೇ, ನಮ್ಮ ಗೃಹಪತಿಯೇ, ತಮ್ಮ ದೃಢೀಕರಣದಿಂದಲೂ ತಮ್ಮ ಮಂತ್ರಗಳಿಂದಲೂ ವಸ್ತುಭಕ್ಷಕರು ನಿನ್ನನ್ನು ಪುಷ್ಟನನ್ನಾಗಿ ಮಾಡುತ್ತಾರೆ ; ಅವರು ನಿನ್ನನ್ನು ಉಜ್ವಲ ಆಹ್ಲಾದಮಯನನ್ನಾಗಿ ಮಾಡುತ್ತಾರೆ.

❖ ❖

# ಇಪ್ಪತ್ತು ಮೂರನೆಯ ಅಗ್ನಿ ಸೂಕ್ತ

## ಸಮೃದ್ಧ ಜೇತಾರನ ಕುರಿತ ಸೂಕ್ತ

[ಯಾವುದರಿದಿರು ಅಂಧಕಾರ ಸೈನ್ಯಗಳು ನಿಲ್ಲಲಾರವೋ ಅಂಥ ದಿವ್ಯಜ್ಯೋತಿಯ ಸಂಪತ್ತನ್ನು ಅಗ್ನಿಯ ಮೂಲಕ ಋಷಿಯು ಬಯಸುತ್ತಾನೆ. ಏಕೆಂದರೆ ಆ ಸಂಪತ್ತು ತನ್ನ ಅಪಾರ ಶ್ರೇಯೋಬಲದಿಂದಲೂ, ಪ್ರಣೋದದಿಂದಲೂ ಆ ಅಂಧಕಾರ ಸೈನ್ಯಗಳನ್ನು ದಮಿಸುತ್ತದೆ. ಜೀವಾತ್ಮನ ದುಡಿತದ ಎಲ್ಲ ಉತ್ತರೋತ್ತರ ಪ್ರಜ್ಞಾಸ್ತರಗಳಲ್ಲೂ ಇದನ್ನದು ಮಾಡುತ್ತದೆ. ಪ್ರತಿಯೊಂದು ಸ್ತರದಲ್ಲೂ ಮಾನವನು ಈ ದಿವ್ಯ ಪ್ರಣೋದದಿಂದ, ಈ ನಿಜವಾದ ವಿಶ್ವೋತ್ತರಸ್ಥ ಸತ್ತೆಯಿಂದ ಆ ಸ್ತರಗಳಲ್ಲಿರುವ ತನ್ನ ಎಲ್ಲ ಅಪೇಕ್ಷಣೀಯ ವಸ್ತುಗಳನ್ನೂ ಪಡೆಯುತ್ತಾನೆ.]

೧. ಅತ್ಯಂತ ಪ್ರಣೋದ ನಿರ್ಭರನಾಗಿ ಯಜಮಾನಿಕೆ ನಡೆಸುವ ಸಾಮರ್ಥ್ಯ ಸ್ವರೂಪನೇ, ನಿನ್ನ ಅಪಾರ ಶ್ರೇಯಃ ಸಮೃದ್ಧಿಯ ವಿಸ್ತಾರದೊಳಗೆ ಹೊಗಲು ನಿನ್ನ ಜ್ವಾಲಾಮುಖದಿಂದ ನಮ್ಮ ದುಡಿತದ ಎಲ್ಲ ಕ್ಷೇತ್ರಗಳಲ್ಲೂ ತನ್ನ ಪ್ರಣೋದದಿಂದ ಮೇಲುಗೈಯಾಗಿ ನಿಂತಿರುವ, ದಿವ್ಯಜ್ಯೋತಿಯ ಪ್ರಣೋದಭರ ಸಂಪತ್ತನ್ನು ಯಜಮಾನತ್ವ ವಹಿಸಿ ನಮಗೆ ತಂದುಕೊಡು.

೨. ಹೇ ಜ್ವಾಲಾಮಯನೇ, ಮಹಾಬಲನೇ, ನಮ್ಮ ವಿರುದ್ಧವಾಗಿ ಹೋರಾಡುವ ಸೈನ್ಯಗಳನ್ನು ಬಲಾತ್ಕಾರದಿಂದ ಅಪ್ಪಳಿಸುವ ಶ್ರೀಮಂತ ಸೌಕರ್ಯವನ್ನು ತಾ. ಏಕೆಂದರೆ, ಅಸ್ತಿತ್ವದಲ್ಲಿ ಸತ್ಯ ಸ್ವರೂಪನು, ಬಹಿರ್ಯಾಮಿಯೂ, ಆಶ್ಚರ್ಯಕರನೂ ಆದ ನೀನು ಮಾನವನಿಗೆ ಪ್ರಕಾಶಮಯವಾದ ಅಪಾರ ಶ್ರೇಯಃ ಸಮೃದ್ಧಿಯನ್ನು ಕೊಡುವವನು.

೩. ಏಕ ಪ್ರೇಮಾರ್ದ್ರ ಹೃದಯದಿಂದ, ಏಕಭಾವದಿಂದ, ಈಯೆಲ್ಲ ಜನರೂ ತಮ್ಮ ಯಜ್ಞ ಪೀಠಗಳನ್ನು ಸ್ವಚ್ಛಗೊಳಿಸಿ ಇಟ್ಟಿದ್ದಾರೆ ; ಮತ್ತು ಜೀವಾತ್ಮನ ವಸತಿ ಸ್ಥಳಗಳಲ್ಲಿ[೧] ನಿನ್ನನ್ನು

---

೧. ಪೀಠಗಳು ಜೀವಾತ್ಮನ ಮನೆಗಳು - ಜೀವಾತ್ಮನು ಒಂದು ಪ್ರಜ್ಞಾಸ್ತರದಿಂದ ಇನ್ನೊಂದಕ್ಕೆ ಮೇಲೇರುತ್ತಾ ಹೋಗುವವನು ಮತ್ತು ಆ ಪ್ರತಿಯೊಂದನ್ನೂ ತನ್ನ ವಾಸಸ್ಥಳವನ್ನಾಗಿ ಮಾಡಿಕೊಳ್ಳುತ್ತಾನೆ. ಅವನ್ನು ಕೆಲವೊಮ್ಮೆ ನಗರಗಳೆಂದು ಕರೆಯುವುದುಂಟು. ಅಂಥ ಪ್ರಜ್ಞಾಸ್ತರಗಳು ಏಳು. ಆ ಏಳರಲ್ಲಿ ಪ್ರತಿಯೊಂದರಲ್ಲೂ ಏಳು ಪ್ರಾಂತಗಳೂ ಅವನ್ನು ಮೀರಿದ ಒಂದು ಪ್ರಜ್ಞಾ ಪ್ರಾಂತವೂ ಇರುತ್ತದೆ. ಸಾಮಾನ್ಯವಾಗಿ ನಾವು ಇಂಥ ನೂರು ನಗರಗಳ (ಪುರಗಳ) ಬಗೆಗೆ ಕೇಳುತ್ತೇವೆ. ಐವತ್ತನ್ನು ಎರಡರಿಂದ ಗುಣಿಸಿ ಹೇಳಿದ್ದು ಬಹುಶಃ ಪ್ರಕೃತಿಯ ಮೇಲೆ ನಿಂತ ಪರಮಾತ್ಮನು ಪ್ರತಿಯೊಂದರಲ್ಲೂ ಕೆಳಮುಖಮಾಡಿ ನೋಡಿದ್ದರಿಂದ ಮತ್ತು ಪ್ರಕೃತಿಯು ಗುರಿಮುಟ್ಟಬೇಕೆಂಬ ಆಸೆಯಿಂದ ಪರಮಾತ್ಮನನ್ನು ಮೇಲ್ಮುಖ ಮಾಡಿ ನೋಡಿದ್ದರಿಂದ.

ಕಂಡುಕೊಂಡಿದ್ದಾರೆ. ನೀನೋ ಯಜ್ಞ ಪುರೋಹಿತನು, ಪ್ರಿಯತಮನು ; ಹಾಗೇ ಅವರು ಆ ಸ್ಥಳಗಳಲ್ಲಿ ಅವರ ಆಶೆ ಪೂರೈಸುವ ಬಹುವಸ್ತುಗಳನ್ನು ಹೊಂದುತ್ತಾರೆ.

೪. ಮಾನವ ಕರ್ಮಗಳೆಲ್ಲವುಗಳಲ್ಲೂ ಇವನೇ ದುಡಿಮೆಗಾರನು. ತನ್ನಲ್ಲೇ ಅವನು ಸರ್ವಗ್ರಾಹಿಯಾದ ಪ್ರಣೋದವನ್ನಿಟ್ಟುಕೊಂಡಿದ್ದಾನೆ. ಓ, ಶುದ್ಧ ರಾಜಜ್‌ಜ್ವಾಲನೇ, ಐಶ್ವರ್ಯವಂತನಾಗಿಯೂ ಆನಂದಪೂರ್ಣನಾಗಿಯೂ ಹೊಳೆಯುತ್ತಾ ಹೊರಜೀಲು ಮತ್ತು ನಮ್ಮೆಲ್ಲರ ಮನೆಗಳಲ್ಲಿ ಎಲೈ ಶುದ್ಧಿಕಾರನಕನೇ - ಜ್ಯೋತಿರ್‌-ಮಯನಾಗಿ ಹೊಳೆಯುತ್ತ ಬಾ.



# ಇಪ್ಪತ್ನಾಲ್ಕನೆಯ ಅಗ್ನಿ ಸೂಕ್ತ

## ಮೋಚಕ ಮತ್ತು ರಕ್ಷಕ ಎನ್ನಿಸಿದವನನ್ನು ಕುರಿತ ಸೂಕ್ತ

[ದುಷ್ಟಶಕ್ತಿಗಳಿಂದ ರಕ್ಷಿಸುವುದಕ್ಕಾಗಿಯೂ ದಿವ್ಯಜ್ಯೋತಿ ಹಾಗೂ ದಿವ್ಯ ಸತ್ವಸಾರವು ತನಗೆ ದೊರಕಲೆಂದೂ ಋಷಿಯು ದಿವ್ಯ ಸಂಕಲ್ಪ ಸ್ವರೂಪನನ್ನು ಆಹ್ವಾನಿಸುತ್ತಾನೆ.]

೧-೨ ಹೇ ದಿವ್ಯ ಸಂಕಲ್ಪ, ನೀನು ನಮ್ಮ ಅಂತಸ್ತಮ ಅಂತರ್ವಾಸಿಯಾಗು; ನಮಗೆ ಶುಭಕಾರಕನಾಗು ; ನಮ್ಮ ಬಂಧಮೋಚಕನೂ, ರಕ್ಷಣಾ ಕವಚನೂ ಆಗು. ಸತ್ವ ಸಾರ ಒಡೆಯನಾದ ನೀನು ಆ ಸತ್ವಸಾರಕ್ಕೇ ಸೇರಿದವನಾದುದರಿಂದ ನಿನಗೆ ದಿವ್ಯಜ್ಞಾನವಿದೆ - ನೀನು ನಮ್ಮ ಸನಿಹಕ್ಕೆ ಬಾ ; ಅದರ ಅತ್ಯಂತ ಲಸದೈಶ್ವರ್ಯವನ್ನು ನಮಗೆ ಕೊಡು.

೩-೪ ಹೇ ಪ್ರಕಾಶಮಾನನೇ, ಏಳು ; ನಮ್ಮ ಕರೆಯನ್ನು ಕೇಳು ; ನಮ್ಮನ್ನು ದುರ್ವೃತ್ತಿಗೆಳೆಯುವ ಆಸೆಯುಳ್ಳ ಎಲ್ಲವುಗಳಿಂದಲೂ ನಮ್ಮನ್ನು ದೂರದಲ್ಲಿಡು. ಹೇ ಶುದ್ಧತಮ ಜ್ಯೋತಿಯೇ, ನಮ್ಮ ಸಹಚರರಿಗಾಗಿ ನಾವು ನಿನ್ನನ್ನು ಬಯಸುತ್ತೇವೆ. ಏಕೆ? ಅವರಿಗೆ ಈಗಲಾದರೂ ಆನಂದವೂ ಶಾಂತಿಯೂ ದೊರಕಲಿ ಎಂದು.



# ಇಪ್ಪತ್ತೈದನೆಯ ಅಗ್ನಿ ಸೂಕ್ತ

## ಜ್ಯೋತಿಷ್‌ಪ್ರಭುವೂ ದೇವತಾ ಸ್ರಷ್ಟಾರನೂ ಆದವನ ಕುರಿತ ಸೂಕ್ತ

[ಅಗ್ನಿಯನ್ನು ಋಷಿಯು ದ್ರಷ್ಟ ಸಂಕಲ್ಪ ಸ್ವರೂಪನೆಂದು ಸೂಕ್ತಿಸುತ್ತಾನೆ ; ಆ ಅಗ್ನಿಯ ಇಡಿ ಸತ್ತೆಯೆಂದರೆ ಬೆಳಕು, ಸತ್ಯ ಮತ್ತು ದಿವ್ಯತೆಯ ಸತ್ವ ಸಾರವನ್ನು ಯಥೇಚ್ಛವಾಗಿ ವೆಚ್ಚ ಮಾಡುತ್ತಿರುವ ಶೀಲ. ದ್ರಷ್ಟಾರರ ವಿಚಾರಕ್ಕೆ ಹುಟ್ಟಿದ ಮಗನವನು. ಅವನು ಮನುಜನಲ್ಲಿ ಜನಿಸಿದ ದೇವನಾಗಿ ತನ್ನನ್ನು ತಾನೇ ದಾನ ಮಾಡಿಕೊಳ್ಳುತ್ತಾನೆ. ಅವನು ನಮ್ಮ ಯಜ್ಞಫಲ, ಕರ್ಮಜ - ಅದೆಂಥ ಕರ್ಮ? ದಿವ್ಯ ಸತ್ಯ ಸಂಭೃತವಾದ ಕರ್ಮ, ದಿವ್ಯ ಪ್ರಣೋದ ಪೂರ್ಣವಾದ ಕರ್ಮ. ಆದುದರಿಂದ ಅವನಿಲ್ಲಿ ನಮ್ಮ (ಆಧ್ಯಾತ್ಮಿಕ) ಜೈತ್ರಯಾತ್ರೆಯ ಮತ್ತು ಯುದ್ಧದ ಜಯದಶ್ವನು. ಆ ದ್ರಷ್ಟ ಸಂಕಲ್ಪ ಸ್ವರೂಪನ ಚಲನೆಯೆಲ್ಲವೂ ಅತಿಮಾನಸದ ಪ್ರಕಾಶದತ್ತ ಮತ್ತು ವಿಸ್ತಾರದತ್ತ - ಅರ್ಥಾತ್ ಮೇಲಿಂದ ಮೇಲಕ್ಕೇ ಏರುತ್ತಾ ಹೋಗುವುದು. ಅವನ ಸ್ವರವೋ ಆ ವಿಸ್ತೃತ ಸ್ವರ್ಗಗಳ ಮೇಘನಾದ ಗಾನದಂತೆ. ಅವನು ತನ್ನ ಪರಿಪೂರ್ಣ ಕಾರ್ಯದಿಂದ ಅಂಧಕಾರ ಹಾಗೂ ಮಿತಿಗಳ ಹಿಡಿತದಾಚೆಗೆ ನಮ್ಮನ್ನು ಒಯ್ಯುತ್ತಾನೆ.]

೧. ದಿವ್ಯ ಸಂಕಲ್ಪದತ್ತ ಸ್ವರವನ್ನೇರಿಸು, ದಿವ್ಯ ಶಕ್ತಿಯತ್ತ ದನಿಯೆತ್ತು - ನಿನ್ನ ಅಭಿವೃದ್ಧಿಗಾಗಿ. ಏಕೆಂದರೆ, ಆ ಸಂಕಲ್ಪ ಸ್ವರೂಪನು ನಮ್ಮ ಸತ್ವಸಾರಾಧೀಶನು ಮತ್ತು ಅವನು ಹಿಂದು ಮುಂದೆ ನೋಡದೆ ಬೇಕಾದಷ್ಟು ವೆಚ್ಚ ಮಾಡುವವನು ; ಅವನು ಜ್ಞಾನಶೋಧಕರ ಮಗನು. ಅವನು ಪರಮಸತ್ಯದ ಕಾವಲುಗಾರನು - ಅವನು ನಮ್ಮನ್ನು ವಿನಾಶ ಮಾಡ ಬರುವವರಿಗೆ ನಿಲುದಕಷ್ಟು ದೂರಕ್ಕೆ ದೋಣಿದಾಟಿಸಿ ಬಿಡುತ್ತಾನೆ.

೨. ಇದು ಅವನ ಸತ್ತೆಯಲ್ಲಿ ನಿಜ- ಅವನನ್ನು ಪ್ರಾಚೀನ ದ್ರಷ್ಟಾರರು ಹೊತ್ತಿಸಿದ್ದರು. ಹೌದು - ದೇವರುಗಳೂ ಕೂಡಾ ಅವನನ್ನು ಹೊತ್ತಿಸಿದ್ದರು - ವಿಸ್ತೃತ ಜ್ಯೋತಿಃಸಾರದೊಳಗೆ ಅವನ ಸಂಪೂರ್ಣ ಬಹಿರ್ದ್ಯುತಿಗಳು ಹೋಗುವಂತೆ ಹೊತ್ತಿಸಿದರು; ಅವನಾದರೋ ಆನಂದೋದ್ರೇಕಾತ್ಮಕ ಜಿಹ್ವೆಯಿಂದೊಡಗೂಡಿದ ಆಹುತಿಗಳ ಪುರೋಹಿತ (ಅಧ್ವರ್ಯು).

೩. ಓ ಅತ್ಯಪೇಕ್ಷಣೀಯ ಜ್ವಾಲಾ ಸ್ವರೂಪನೇ, ನಮ್ಮ ಇಂಥ ಸಮುನ್ನತ ವಿಚಾರದ ದೆಸೆಯಿಂದ, ನಮ್ಮ ಲಸತ್ತಮ ಪೂರ್ಣೀಕೃತ ಮನೋಧರ್ಮದ ದೆಸೆಯಿಂದ, ಅದರ ಸರ್ವದೌಷ್ಟ್ಯದೂರೀಕರಣ ಬಲದ ದೆಸೆಯಿಂದ - ನಿನ್ನ ಪ್ರಕಾಶವು ನಮಗೆ ಆನಂದವನ್ನೀಯಲಿ.

೪. ದ್ರಷ್ಟ ಸಂಕಲ್ಪವಾದರೋ ದೇವತೆಗಳಲ್ಲಿ ರಾರಾಜಿಸುವಂಥದು ; ಅದು ಮರ್ತ್ಯರಲ್ಲಿ ತನ್ನ ಪ್ರಕಾಶದಿಂದ ಒಳಹೊಗುವಂಥದು ; ಹಾಗೇ ಅದು ನಮ್ಮ ಆಹುತಿಯನ್ನು ಒಯ್ಯುವಂಥದು - ಈ ಮಹಾಸಂಕಲ್ಪವು ನಿಮ್ಮೆಲ್ಲ ವಿಚಾರಗಳಲ್ಲೂ ಶೋಧನಪರವಾಗಿ ಸೇವೆ ಸಲ್ಲಿಸುವಂಥದು.

೫. ಈ ದಿವ್ಯ ಸಂಕಲ್ಪವು ಕರ್ಮಿಗೆ ಅವನ ದಾನ ಕರ್ಮಫಲವಾಗಿ ಮಗನನ್ನು[1] ಕೊಡುತ್ತದೆ. ಅವನು ಜೀವಾತ್ಮನ (ಯಾಜ್ಞಿಕನ) ಬಹುಸ್ಫೂರ್ತಿಗಳೊಡನೆ, ಹಲವು ದನಿಗಳೊಡನೆ, ಸಮರಸನಾಗುತ್ತಾನೆ. ಅವನಾರು ? ಅವನು ಅತ್ಯುದಾತ್ತನು, ಅಪ್ರತಿಭಟನೀಯನು, ಸರ್ವೇಶ್ವರನು ಮತ್ತು ನಮ್ಮ ಕಿವಿಗಳನ್ನು (ಪರಮಾರ್ಥ) ಜ್ಞಾನದತ್ತ ತೆರೆಯುವವನು.

೬. ಹೌದು - ಈ ದಿವ್ಯ ಸಂಕಲ್ಪವೇ ಸತ್ತೆಗಳ ಈಶನನ್ನು ಕೊಡುತ್ತದೆ - ತನ್ನ ಶಕ್ತಿಸ್ವರೂಪದ ಆತ್ಮಗಳಿಂದ ಅವನೇ ಯುದ್ಧಗಳಲ್ಲಿ ಗೆಲ್ಲುತ್ತಾನೆ. ದಿವ್ಯ ಸಂಕಲ್ಪವು ನಮಗೆ ವೇಗವಾಗಿ ಧಾವಿಸುವ ಯುದ್ಧಾಶ್ವವನ್ನು ನೀಡುತ್ತದೆ - ಅದು ಯಾವಾಗಲೂ ಜೇತಾರ - ಅದೆಂದೂ ಜಿತವಾಗದು.

೭. ನಮ್ಮಲ್ಲಿರುವ ಅತಿಭಾರವಹ ಶಕ್ತಿಯನ್ನು ಈ ಮಹಾಸಂಕಲ್ಪಕ್ಕೆ ಕೊಡುವೆವು. ಅದರ ವಿಸ್ತಾರವಾದ ವಸ್ತುಸಾರವೆಂದರೆ ಬೆಳಕು. ಆ ಅಪಾರ ವೈಶಾಲ್ಯವನ್ನು ಕುರಿತು ಹಾಡು. ಶ್ರೀಮಂತಿಕೆಯು ಆ ದೇವಿಯ[2] ವಿಸ್ತಾರದಷ್ಟೇ ಇದ್ದಂತಿದೆ. ಪರಿಪೂರ್ಣ ಶ್ರೇಯಃ ಸಮೃದ್ಧ ಲೋಕಗಳ ಧಾವನವು ಊರ್ಧ್ವಮುಖವಾದದ್ದು.

೮. ನಿನ್ನ ಜ್ವಾಲಾರಶ್ಮಿಗಳು ಪ್ರಕಾಶಮಯವಾಗಿವೆ ; ನಿನ್ನಿಂದ ಅಲ್ಲಿ ಆನಂದದ ಅರಣಿಯ ಸ್ವರದಂಥ ಪರಾವಾಕ್ ಏಳುತ್ತದೆ ; ಹೌದು - ಅದರದೇ ಆದ ಕೂಗು ಸ್ವರ್ಗಗಳಿಂದ ಬರುವ ಮೇಘನಾದಗಾನದಂತೆ ತಾನೇ ತಾನಾಗಿ ಮೇಲೇಳುತ್ತದೆ.

೯. ಈ ಪ್ರಕಾರವಾಗಿ ಸತ್ವಸಾರಾಪೇಕ್ಷಿಗಳಾಗಿ ನಾವು ಆ ಮಹಾಸಂಕಲ್ಪ ಸ್ವರೂಪನನ್ನು ಪೂಜಿಸುವೆವು. ಆ ಸಂಕಲ್ಪಾತ್ಮಕನು ಗೆಲ್ಲಲು ಬೇಕಾದ ಪ್ರಣೋದವುಳ್ಳವನು. ತನ್ನ ಕಾರ್ಯಗಳ ಪೂರ್ಣಬಲವುಳ್ಳ ಆತನು ನೀರಿನ ಮೇಲೆ ಒಯ್ಯುವ ಹಡಗಿನಂತೆ ನಮ್ಮನ್ನು ನಾಶ ಮಾಡಲು ಬರುವ ಎಲ್ಲ ಪ್ರಣೋದಗಳನ್ನು ದಾಟಿಸಿ ಒಯ್ಯಲಿ.



---

೧. ವೇದದಲ್ಲಿ ಯಜ್ಞ ಪುತ್ರನೆಂಬುದು ಯಾವಾಗಲೂ ಬರುವ ಪ್ರತಿಮೆ. ಇಲ್ಲಿ ಅವನು ಸಾಕ್ಷಾತ್ ದೇವನೇ ಆಗಿದ್ದಾನೆ. ತಂದೆಯನ್ನು ಮುಕ್ತಗೊಳಿಸುವ ಮಗನವನು. ಅವನೇ ಅಗ್ನಿ-ತನ್ನನ್ನು ತಾನೇ ಯಾಜ್ಞಿಕನಿಗೆ ಮಗನನ್ನಾಗಿ ಕೊಡುವಂಥವನು. ಅಗ್ನಿಯು ಯುದ್ಧದ ಕುದುರೆ, ಪ್ರಯಾಣದ ಕುದುರೆ, ಬೆಳ್ಗುದುರೆ, ಯೌಗಿಕ ನಾಗಾಲೋಟದ ದಧಿಕ್ರಾವನ್ ಆಗಿ ಯುದ್ಧದ ಮೂಲಕ ನಮ್ಮನ್ನು ನಮ್ಮ ಪ್ರವಾಸದ ಗುರಿಗೆ ಒಯ್ದು ಮುಟ್ಟಿಸುವವನು.

೨. ಅದಿತಿ = ವಿಸ್ತಾರಸ್ವರೂಪದ ತಾಯಿ.

# ಇಪ್ಪತ್ತಾರನೆಯ ಅಗ್ನಿ ಸೂಕ್ತ

## ಪುರೋಹಿತನ ಹಾಗೂ ಯಾಜ್ಞಿಕ ಜ್ವಾಲೆಯ ಕುರಿತ ಸೂಕ್ತ

[ಋಷಿಯು ಯಾಜ್ಞಿಕನಾಗಿ ಮಾಮೂಲು ವಿಶೇಷಣಗಳ ಮೂಲಕ ದಿವ್ಯಜ್ವಾಲೆಯನ್ನು ಆಮಂತ್ರಿಸುತ್ತಾನೆ. ಈ ಋಷಿಯು ಪ್ರತಿಭಾ ಪ್ರಕಾಶ ಸಂಪನ್ನನು; ಅವನಿಗೆ ಪ್ರಾತಿಭ ಜಗತ್ತಿನ ದರ್ಶನವಾಗಿರುತ್ತದೆ. ಅವನು ದೇವತಾ ನೇತಾರನು - ದೇವತೆಗಳನ್ನು ತರುವವನು, ಆಹುತಿಯ ಹವಿಸ್ಸನ್ನು ಹೊತ್ತುಕೊಂಡು ಹೋಗುವವನು - ರಾಯಭಾರಿಯು, ಜೇತಾರ, ಮಾನವನಲ್ಲಿ ದಿವ್ಯ ಕಾರ್ಯಗಳನ್ನು ಪುಷ್ಟಿಗೊಳಿಸುವಂಥವನು. ಜಾತವೇದಸನು (ಜಾತವಸ್ತುಗಳೆಲ್ಲವನ್ನೂ ಬಲ್ಲವನು, ಜನ್ಮಗಳನ್ನರಿತವನು)-ದೇವತಾತತ್ತ್ವಗಳ ಪ್ರಗತಿಪರ ಅತಿಮಾನುಷಾವತಾರಗಳೊಡನೆ ಆತನು ಯಜ್ಞಯಾನದ ನೇತಾರನು.]

೧. ಹೇ ಜ್ವಾಲಾ ಸ್ವರೂಪನೇ, ಹೇ ಶುದ್ಧೀಕಾರಕನೇ, ಆನಂದೋದ್ರೇಕ ಸ್ವರೂಪದ ನಾಲಗೆಯಿಂದ ನಮಗೆ ನೀನು - ಓ ದೇವನೇ - ಅವರಿಗಾಗಿ ಯಜ್ಞಮಾಡಲೆಂದು ಆ ದೇವತೆಗಳನ್ನು ತಂದುಕೊಡು.

೨. ಸ್ಪಷ್ಟತೆಯನ್ನು ಹನಿಸುವ ನೀನು, ಶ್ರೀಮಂತವೂ ವೈವಿಧ್ಯಪೂರ್ಣವೂ ಆದ ಹೊಳಪನ್ನುಳ್ಳ ನೀನು, ನಮಗೆ ಬೇಕು. ಏಕೆಂದರೆ, ನಮ್ಮ ಪರಮಸತ್ಯ ಪ್ರಪಂಚದ ದರ್ಶನ ನಿನಗಾಗಿದೆ. ದೇವತೆಗಳನ್ನು ಅವರ ವ್ಯಕ್ತೀಕರಣಕ್ಕಾಗಿ[೧] ನಮ್ಮತ್ತ ಕರೆದುಕೊಂಡು ಬಾ.

೩. ಎಲೈ ದ್ರಷ್ಟಾರನೇ, ನಿನ್ನ ವಿಸ್ತಾರದಲ್ಲಿ ಮತ್ತು ನಿನ್ನ ಬೆಳಕಿನಲ್ಲಿ ನಿನ್ನನ್ನು ನಾವು ಹೊತ್ತಿಸುತ್ತೇವೆ. ಯಾವಾಗ? ನಮ್ಮ ಯಜ್ಞ ಪ್ರಯಾಣ ಕಾಲದಲ್ಲಿ. ಅವುಗಳ ಪ್ರಯಾಣಾವಧಿಯಲ್ಲಿ ಆಹುತಿಗಳನ್ನು ನೀನು ಹೊತ್ತುಕೊಂಡು ಹೋಗುವೆ.

೪. ಹೇ ದಿವ್ಯ ಸಂಕಲ್ಪನೇ ಬಾ - ಆಹುತಿಯನ್ನು ಕೊಡುವುದಕ್ಕೆ ಬೇಕಾದ ಎಲ್ಲ ದೇವತೆಗಳನ್ನೂ ಕರೆದುಕೊಂಡು ಬಾ. ನಿನ್ನನ್ನೇ ನಾವು ಹವಿರ್ಧಾನದ ಪುರೋಹಿತನನ್ನಾಗಿ ಸ್ವೀಕರಿಸುತ್ತೇವೆ.

---

೧. ಅಥವಾ ಪರಸತ್ಯದ ಜ್ಯೋತಿರ್ಮಯ ಪ್ರಪಂಚದತ್ತ ಮಾಡುವ ಪಯಣಕ್ಕಾಗಿ ಅಥವಾ ಹವಿರ್ಭಾಗಗಳನ್ನು ತಿನ್ನಲೆಂದು.

೫. ತನ್ನ ಆಹ್ಲಾದದ ಮಧ್ಯವನ್ನು ಹಿಂಡುವ ಯಾಜ್ಞಿಕನಿಗಾಗಿ, ಹೇ ಜ್ವಾಲಾನಲನೇ, ಪೂರ್ಣ ಕ್ರಿಯಾಶಕ್ತಿಯನ್ನು ತೆಗೆದುಕೊಂಡು ಬಾ. ಜೀವಾತ್ಮನ ಪೂರ್ಣತೆಯ ಪೀಠದಲ್ಲಿ ದೇವತೆಗಳೊಡನೆ ಕುಳಿತುಕೋ.

೬. ಓ ಜ್ವಾಲಾ ಸ್ವರೂಪನೇ ನೀನು ಎತ್ತರಕ್ಕೆ ಉರಿದು ದಿವ್ಯ ನಿಯಮ(ವಿಧಿ)ಗಳನ್ನು ಹೆಚ್ಚಿಸುವೆ ; ಮತ್ತು ಸಾವಿರಾರುಪಟ್ಟು ಐಶ್ವರ್ಯವನ್ನು ನೀನು ಗೆಲ್ಲುವಂಥವನು. ನೀನು ದೇವದೂತನು - ನಿನ್ನಲ್ಲಿ ಮಂತ್ರವಿದೆ.

೭. ಜನ್ಮಜ್ಞಾನ ನಿನ್ನಲ್ಲಿದೆ ಹೇ ಜ್ವಾಲಾತ್ಮನೇ, ಓ ಹವ್ಯವಾಹನನೇ, ಯೌವನದ ತೇಜಸ್ಸುಳ್ಳವನೇ, ಪರಮಸತ್ಯದ ಋತುಗಳಲ್ಲಿ ನೀನು ಯಜ್ಞ ಮಾಡುವಾತನು.

೮. ಇಂದು ನಿನ್ನ ಯಜ್ಞವು ಅನಿರತವಾಗಿ ಮುಂದೆ ಮುಂದೆ ಸಾಗಲಿ. ನಿನ್ನ ಯಜ್ಞವು ದೇವತೆಗಳ ಅತಿಮಾನುಷಾವತಾರಗಳ ಇಡಿ ತಂಡವನ್ನೇ ತರುತ್ತದೆ. ನಿನ್ನ ಆತ್ಮಸ್ವರೂಪದ ಪೀಠವನ್ನು ಹರಡು, ಹಾಸು- ಅದರ ಮೇಲೆ ಆ ದೇವತೆಗಳು ಬಂದು ಕುಳಿತುಕೊಳ್ಳಲಿ.

೯. ಅಲ್ಲಿ ಜೈವಿಕ ಶಕ್ತಿಗಳು[೧] ತಮ್ಮ ಆಸನಗಳನ್ನು ಸ್ವೀಕರಿಸಲಿ. ಮತ್ತು ತಮ್ಮೊಡನೆ ಅವು ಅಶ್ವಾರೂಢರನ್ನೂ[೨] ಪ್ರೇಮೇಶ್ವರನನ್ನೂ[೩] ವೈಶಾಲ್ಯಾಧಿಪತಿಯನ್ನೂ[೪] - ಅಲ್ಲದೆ ತಮ್ಮ ರಾಷ್ಟ್ರವನ್ನೊಳಗೊಂಡ ದೇವರುಗಳನ್ನೂ ಜೊತೆಗೆ ಕುಳ್ಳಿರಿಸಿಕೊಳ್ಳಲಿ.



---

೧. ಮರುತ್ತುಗಳು.

೨. ಯಮಳರಾದ ಅಶ್ವಿನೀ ದೇವತೆಗಳು.

೩. ಮಿತ್ರನು.

೪. ವರುಣನು.

# ಇಪ್ಪತ್ತೇಳನೆಯ ಅಗ್ನಿ ಸೂಕ್ತ

## ದಿವ್ಯಬಲವನ್ನು ಮತ್ತು ಪ್ರಬೋಧೋದಯವನ್ನು ಕುರಿತ ಸೂಕ್ತವು

[ದೇವಯೋನಿಗಳಾದ (ಅರೆದೇವರ್ಕಳಾದ) ತ್ರೈವೃಷ್ಣ ತ್ರ್ಯರುಣ ತ್ರಸದಸ್ಯು ಮತ್ತು ದ್ರಷ್ಟಾರ ಅಶ್ವಮೇಧ ಎಂಬವರ ಅಲಂಕಾರ ಪ್ರತಿಮೆಯನ್ನಾಧರಿಸಿ, ಋಷಿಯು ಮಾನವ್ಯ ಮನೋಧರ್ಮದಲ್ಲಿ ದಿವ್ಯಮಾನಸ ಸ್ವರೂಪದ ಇಂದ್ರನ ಪ್ರಕಾಶದ ಇಚ್ಛಾ ಪೂರಣವನ್ನು ಸಂಕೇತಿಸುತ್ತಾನೆ ; ಹಾಗೇ ದಿವ್ಯ ಸಂಕಲ್ಪದ ಸ್ವರೂಪವುಳ್ಳ ಅಗ್ನಿಯು ಪ್ರಾಣಪ್ರಜ್ಞೆಯಲ್ಲಿ ಪೂರ್ಣತೆ ಹೊಂದುವುದನ್ನು (ಸಂಕಲ್ಪಸಿದ್ಧಿಯಾಗುವುದನ್ನು) ಸಂಕೇತಿಸುತ್ತಾನೆ. ಮಾನವಕುಲಜನೆಂದು ಅಸುರಾಂತಕನಾದ ಇಂದ್ರನ ಬಗೆಗೆ ಜ್ಞಾನೋದಯವಾದ ಋಷಿಗೆ ಇಂದ್ರನು ಗಾಡಿಯನ್ನು ಎಳೆಯಲು ತನ್ನ ಎರಡು ಬೆಳಕಿನ ದನಗಳನ್ನು ಕೊಟ್ಟಿದ್ದಾನೆ ; ತನ್ನೆರಡು ಹೊಳೆವ ಕುದುರೆಗಳನ್ನು ರಥ ಎಳೆಯಲೆಂದು ಕೊಟ್ಟಿದ್ದಾನೆ ; ಹಾಗೇ ಹತ್ತುಬಾರಿ ಹನ್ನೆರಡು ಜ್ಞಾನಸ್ವರೂಪದ ಉಷೋಧೇನುಗಳನ್ನು ಕೊಟ್ಟಿದ್ದಾನೆ. ದೇವತೆಗಳಿಗಾಗಿ ಜೀವಾತ್ಮನು ಮಾಡಿದ ಜೀವಾಶ್ವಮೇಧಕ್ಕೆ ಇಂದ್ರನು ಒಪ್ಪಿಗೆಯಿತ್ತು ದೃಢಪಡಿಸಿದ್ದಾನೆ. ಈ ಮಾನಸಾತ್ಮನು ತ್ರಿಗುಣ (ತ್ರಿಪುಟ) ಉಷೆಯೊಡೆಯನು. ಆತನು ಪ್ರಯಾಣಿಸುತ್ತಿರುವ ಮತ್ತು ಸತ್ಯಶೋಧಕನಾದ ಜೀವಾತ್ಮನಿಗೆ ಮಾನಸಿಕ ಬುದ್ಧಿಮತ್ತೆಯನ್ನೂ ಅಗತ್ಯವಾದ ಒಡೆಯತನವನ್ನೂ ಕೊಟ್ಟು ಅವುಗಳ ಬದಲಾಗಿ ಅಗ್ನಿಯಿಂದ ಶಾಂತಿಯನ್ನೂ ಆನಂದವನ್ನೂ ಪಡೆಯಲಿ - ಎಂದು ಋಷಿಯು ಪ್ರಾರ್ಥಿಸುತ್ತಾನೆ. ಪ್ರಾಣಾತ್ಮನಾದರೋ (ಜೀವಾತ್ಮನಾದರೋ) ಉದ್ಧಯನಕ್ಕೆ ಬೇಕಾದ ನೂರು ಶಕ್ತಿಗಳನ್ನು, ಜೈವಿಕ ಸಾಮರ್ಥ್ಯವನ್ನು, ಕೊಟ್ಟಿದ್ದಾನೆ ; ಅತಿಮಾನಸ ಪ್ರಜ್ಞಾಸ್ತರದಲ್ಲಿರುವ ಸತ್ಯಸೂರ್ಯಶಕ್ತಿ ಸ್ವರೂಪದ ವಿಶಾಲ ಬಲವನ್ನು ಜೀವಾತ್ಮನು ಪಡೆಯಲಿ ಎಂದು ಋಷಿಯು ಪ್ರಾರ್ಥಿಸುತ್ತಾನೆ.]

೧. ಓ ಮಹಾಸಂಕಲ್ಪನೇ, ಹೇ ವೈಶ್ವತ್ರಿಕ ಶಕ್ತಿಯೇ,[೧] ಮಹಾ ಸಮರ್ಥನೇ, ದರ್ಶನ ಪರಮ ಪ್ರಬುದ್ಧನೇ, ಸ್ವಸತ್ತಾಧಿಪತಿಯೇ, ಅಪಾರ ವಿಸ್ತಾರ ಸಮೃದ್ಧಿಗಳ ಒಡೆಯನೇ, ನೀನು ನನಗೆ ನಿನ್ನ ಎರಡು ದನಗಳನ್ನು ಕೊಟ್ಟಿರುವೆ. ನೀನು ಯಾರು? ಬೆಳಕಿನ ದನಗಳೆರಡನ್ನು

---

೧. ಅಥವಾ "ದೇವತೆಯೇ".

ಗಾಡಿಯೆಳೆಯಲು ಕೊಟ್ಟಂಥವನು. ನೀನು ತ್ರಿಪುಟ ಉಷೆಯಾತನು, ತ್ರಿಪುಟ ವೃಷಭಪುತ್ರನು[೧] -ಸಹಸ್ರ ಅಪಾರ ಶ್ರೇಯ ಸಮೃದ್ಧಿಯೊಡನೆ[೨] ಜ್ಞಾನೋನ್ಮುಖವಾಗಿ ಎಚ್ಚತ್ತವನು, ಎಚ್ಚರಿಸ್ಪಟ್ಟವನು.

೨. ಅವನು ನನಗೆ ನೂರಿಪ್ಪತ್ತು[೪] ಉಷೋಧೇನುಗಳನ್ನು ಕೊಡುತ್ತಾನೆ. ಅವನು ಹೊಳೆವ[೫] ಕುದುರೆಗಳನ್ನು ಕೊಡುತ್ತಾನೆ-ಅವು ರಥಕ್ಕೆ ಕಟ್ಟಿದಂಥವುಗಳು. ; ಅವು ನೊಗವನ್ನು ಸರಿಯಾಗಿ ಹೊರುತ್ತವೆ. ಹೇ ದಿವ್ಯ ಸಂಕಲ್ಪನೇ, ಓ ವೈಶ್ವತ್ರಿಕ ಶಕ್ತಿಯೇ, ಸರಿಯಾಗಿ ದೃಢೀಕೃತನೂ ಪ್ರವರ್ಧಿತನೂ ಆದ ನೀನು ತ್ರಿಪುಟೋಪಾಧೀಶನಿಗೆ ಶಾಂತಿಯನ್ನೂ ಆನಂದವನ್ನೂ ಬಿತ್ತರಿಸು.

೩. ಏಕೆಂದರೆ, ನಿನ್ನ ಮನೋನುಗ್ರಹವನ್ನು ಬಯಸಿ ಅವನು ಮಾಡಿದ್ದು ಹೀಗೆ ; ನವದತ್ತ ನವ-ಪ್ರಕಟಿತ ಎನ್ನಿಸಿದ ಅವನು ವಿನಾಶಕರನ್ನು[೬] ವಿತರಣ ಮಾಡಿ - ತ್ರಿಪುಟೋಪಾಧೀಶನು ಸಲಕ್ಷ್ಯಮನಸ್ಕನಾಗಿ ನನ್ನ ಅನೇಕ ಜನ್ಮಗಳ[೭] ಅನೇಕ ಮಂತ್ರಗಳಿಗೆ ಪ್ರತಿಸ್ಪಂದಿಸುತ್ತಾನೆ.

---

೧. ವೃಷಭತ್ರಯವೆಂದರೆ ಸ್ವರ್ಲೋಕದ ಪ್ರಕಾಶಮಯ ರಾಜ್ಯತ್ರಯದ ದಿವ್ಯಮನನಾದ ಇಂದ್ರನು; ಇಂದ್ರನ ಮಾದರಿಗೆ ಬದಲಾದ ಮಾನವ, ಅರೆದೇವ ತ್ರ್ಯರುಣತ್ರಸದಸ್ಯು, - ಆದ್ದರಿಂದ ಅವನಿಗೆ ಇಂದ್ರನ ವಿಶೇಷಣಗಳಾದ "ಅಸುರ" , "ಸತ್ಪತಿ" "ಮಘವನ್" ಮುಂತಾದ ಎಲ್ಲವನ್ನೂ ಅನ್ವಯಿಸಲಾಗುತ್ತದೆ ; ಉಷಾತ್ರಯವೆಂದರೆ ಮಾನವ ಮನೋಧರ್ಮದಲ್ಲಿ ಇರುವ ಈ ರಾಜ್ಯತ್ರಯದ ಉಷೋದೇವತೆ.

೨. ಸಹಸ್ರವು ಸರ್ವತಂತ್ರ ಸ್ವತಂತ್ರ (ನಿರಪೇಕ್ಷ) ಪೂರ್ಣತೆಯನ್ನು ಸಂಕೇತಿಸುತ್ತದೆ ; ಆದರೆ ಪ್ರಾತಿಭ ಮನದ ಹತ್ತುಶಕ್ತಿಗಳಲ್ಲಿ ಪ್ರತಿಯೊಂದು ಸೂಕ್ಷ್ಮಶಕ್ತಿಗೂ ತನ್ನದೇ ಆದ ಸಂಪೂರ್ಣಶ್ರೇಯಃ ಸಮೃದ್ಧಿ ವಿಸ್ತಾರವಿರಬೇಕು.

೪. ವರ್ಷದ ಹನ್ನೆರಡು ತಿಂಗಳುಗಳ ಮತ್ತು ಹನ್ನೆರಡು ಯಜ್ಞಾವಧಿಗಳ ಧೇನುಪಂಕ್ತಿಗಳಾಗಿರುವ ಅಥವಾ ಉಷಃ ಪಂಕ್ತಿಗಳಾಗಿರುವ ದಿವ್ಯಜ್ಞಾನ ಪ್ರಕಾಶದ ಆಲಂಕಾರಿಕ ಪ್ರತಿಮೆ. ಆಮೇಲೆ ಹನ್ನೆರಡರ ಹತ್ತು ಪಟ್ಟು ಧೇನುಗಳು ಹತ್ತು ಸೂಕ್ಷ್ಮ ಸೋದರಿಯರಿಗನುಗುಣವಾಗಿ ಇವೆ. ಈ ಶಕ್ತಿಗಳು ಪ್ರಾತಿಭ (ಪ್ರಬುದ್ಧ) ಮನೋಧರ್ಮಕ್ಕೆ ಸೇರಿದವುಗಳು.

೫. ಮೊದಲ ಪದ್ಯದಲ್ಲಿ ಹೇಳಿದ ಪ್ರಕಾಶ ಧೇನುದ್ವಯವೂ ಇಂದ್ರನ ಅಶ್ವದ್ವಯವೂ ಒಂದೇ ಎಂದು ತೋರುತ್ತದೆ. ಅವು ಎರಡು ದಾರ್ಶನಿಕ ಶಕ್ತಿಗಳು - ಅವಕ್ಕೆ ಅತಿಮಾನಸ ಸತ್ಯ ಪ್ರಜ್ಞೆಯು ಆಕರ. ಎಡ-ಬಲಗಳಲ್ಲಿರುವ ಈ ಕುದುರೆಗಳು ಬಹುಶಃ ನೇರವಾದ ಸತ್ಯದರ್ಶನ ಮತ್ತು ಪ್ರತಿಭಾನಗಳಾಗಿವೆ. ಜ್ಞಾನ ಪ್ರಕಾಶವನ್ನು ಸಂಕೇತಿಸುವ ಹಸುಗಳಾಗಿ ಅವು ಭೌತ ಮನವೆಂಬ ರಥದ ನೊಗವನ್ನು ಕಟ್ಟಿಸಿಕೊಳ್ಳುತ್ತವೆ ಮತ್ತು ಜ್ಞಾನಶಕ್ತಿಗಳನ್ನು ಸಂಕೇತಿಸುವ ಕುದುರೆಗಳಾಗಿ ಅವು ಮುಕ್ತ ಶುದ್ಧ ಮನಃ ಸ್ವರೂಪದ ಇಂದ್ರನ ರಥದ ನೊಗವನ್ನು ಹೊರುತ್ತವೆ.

೬. ತ್ರಸದಸ್ಯುವು ಎಲ್ಲವುಗಳಲ್ಲೂ ಇಂದ್ರನ ಲಕ್ಷಣಗಳನ್ನು ಪುನರ್ನಿರ್ಮಿಸುತ್ತಾನೆ.

೭. ಋಷಿಯು ಈ ಸ್ವಸಮಾಹಿತತೆಯಿಂದ ಉನ್ನತತರ ಪ್ರಜ್ಞಾಸ್ತರದಲ್ಲಿ ಹೊಸದಾಗಿಹುಟ್ಟಿದಂತಾಗಿ ಅನೇಕ ಪ್ರಜ್ಞಾರಾಜ್ಯಗಳ ಸ್ವರೂಪವನ್ನು ತಾಳಿ, ಆ ಪ್ರತಿಯೊಂದು ರಾಜ್ಯದಿಂದಲೂ ಅದರಲ್ಲಿಯ ಪ್ರೇರಣೆಗಳನ್ನು ವ್ಯಕ್ತಪಡಿಸುವ ಅದರ ಮಂತ್ರಗಳು ಮೇಲಕ್ಕೆ ಏರುತ್ತವೆ - ಆ ಪ್ರೇರಣೆಗಳು ದಿವ್ಯ ಪೂರ್ಣೀಕರಣವನ್ನು ಬಯಸುತ್ತವೆ. ದಿವ್ಯ ಮಾನಸಾತ್ಮನು ಇವುಗಳಿಗೆ ಉತ್ತರವಿತ್ತು ಸಮ್ಮತಿಯನ್ನು ನೀಡುತ್ತಾನೆ. ಅವನು ಅಭಿವ್ಯಕ್ತಿ ಮಂತ್ರಕ್ಕೆ ಪ್ರಬೋಧೋದಯ ಮಂತ್ರವನ್ನು ಒದಗಿಸುತ್ತಾನೆ ಮತ್ತು ಜೈವಿಕ ಪ್ರಜ್ಞೆಗೆ, ಅದು ಸತ್ಯಶೋಧ ಮಾಡುತ್ತಿರುವಾಗ, ಆ ಮಹಾಸತ್ಯವನ್ನು ಹುಡುಕಿ ತೆಗೆದು ಧಾರಣೆ ಮಾಡಬಲ್ಲ ಬುದ್ಧಿಶಕ್ತಿಯನ್ನು ಕೊಡುತ್ತಾನೆ.

೪. ನನಗೆ ಸಮ್ಮತಿಯ ಉತ್ತರ ಕೊಡುವ ಆತನು ಅಶ್ವಮೇಧಧ[೨] ಪ್ರಾತಿಭ ಚಕ್ಷುಷನಿಗೆ ಪ್ರತಿಭೋನ್ಮೇಷದ ಮಂತ್ರದಿಂದ ಅವನ ಪ್ರಯಾಣದ ಗುರಿಯ ಒಡೆಯತನವನ್ನು ಕೊಡಲಿ ಪರಮ ಸತ್ಯಾನ್ವೇಷಿಗೆ ಅವನು ಬುದ್ಧಿಶಕ್ತಿಯನ್ನು ದಯಪಾಲಿಸಲಿ.

೫. ನನ್ನನ್ನು ಸುತ್ತಲೂ ವರ್ಷಿಸುವ ನೂರು ಬಲಿಷ್ಠ ಎತ್ತುಗಳು[೩] ಆನಂದದೆತ್ತರಕ್ಕೆ ಎತ್ತಲಿ. ಅಶ್ವಯಾಜಿಯ ಕೊಡುಗೆಗಳು ಎಂದರೆ ಸ್ವಕೀಯ ತ್ರಿಪುಟ ಪಾಕಗಳೊಡನೆ[೪] ದಿವ್ಯಾನಂದ ಮದ್ಯದ ಬಹಿರ್ಧಾರೆಗಳೇ ಆಗಿವೆ.

೬. ದೇವಮನ-ದೇವಸಂಕಲ್ಪಗಳು ಅಶ್ವಮೇಧ ಯಜ್ಞ ಮಾಡುವವನಲ್ಲಿ ಮತ್ತು ತನ್ನ ನೂರು ಪೂರ್ಣಕ್ರಿಯಾಶಕ್ತಿದಾತೃವಿನಲ್ಲಿ ಮತ್ತು ಯುದ್ಧದ ಮಹಾಬಲವನ್ನು ಸಲ್ಲಿಸುವವನಲ್ಲಿ ಸ್ವರ್ಗದಲ್ಲಿ ಅವಿನಾಶಿ[೫] ಪ್ರಕಾಶ ಸೂರ್ಯನನ್ನೂ ಹೇಗೋಹಾಗೆ ಎತ್ತಿ ಹಿಡಿಯಲಿ.



---

೨. ಅಶ್ವಮೇಧವು ಸ್ವಕೀಯ ಸರ್ವ ಪ್ರೇರಣೆಗಳ ಸಹಿತವಾಗಿ ಎಲ್ಲ ಬಯಕೆಗಳೊಡನೆ ಎಲ್ಲ ಭೋಗಗಳೊಂದಿಗೆ ಜೈವಿಕ ಶಕ್ತಿಯು ದಿವ್ಯಸತ್ತೆಗೆ ಆಹುತಿಯನ್ನಾಗಿ ಸಮರ್ಪಿಸುವ ಯಜ್ಞವು. ಜೀವಾತ್ಮನು (ದ್ವಿತ) ಯಾಜ್ಞಿಕನು - ಅವನು ಯಜ್ಞ ಮಾಡತಕ್ಕವನು. ಆಮೇಲೆ ಅಗ್ನಿಶಕ್ತಿಯಿಂದ ಅವನು ತನ್ನ ಜೈವಿಕ ಪ್ರಜ್ಞಾಸ್ತರದಲ್ಲಿಯೇ ಸಾಕ್ಷಾತ್ಕಾರ ಪಡೆಯುತ್ತಾನೆ. ಆಗ ಅವನು, ಸೂಕ್ತದ ಅಲಂಕಾರೋಕ್ತಿಯ ಪ್ರಕಾರ, ಪ್ರಾತಿಭ ಅಶ್ವಮೇಧ ಋಷಿಯಾಗುವನು.

೩. ವಿಕಾಸಶೀಲ ಮಾನವನ ಮೇಲೆ ಅವನ ಜೈವಿಕ ಪ್ರಜ್ಞಾಸ್ತರದಲ್ಲಿ ಎಲ್ಲ ಅಪಾರಶ್ರೇಯಃ ಸಮೃದ್ಧಿಯನ್ನೂ ಹೊಯ್ಯುವ ಜೀವಾತ್ಮನ ಸಂಪೂರ್ಣ ನೂರು ಶಕ್ತಿಗಳು. ಜೈವಿಕ ಶಕ್ತಿಗಳು ಬಯಕೆ ಭೋಗಗಳ ಸಾಧನವಾಗಿರುವುದರಿಂದ ಈ ವರ್ಷಣವೆಂಬುದು ಜೀವಾತ್ಮನನ್ನು ಹೊಸ ಮಾದಕ ಸಂತೋಷಗಳೆತ್ತರಕ್ಕೇರಿಸುವ ಮದ್ಯಧಾರೆಯಂತಿದೆ.

೪. ಸೋಮದ ಮಧುಮದ್ಯವು ಅಸ್ತಿತ್ವದಿಂದ ಹಿಂಡಿತೆಗೆದ ಆನಂದವನ್ನು ಪ್ರತಿನಿಧಿಸುತ್ತದೆ. ಅದು ಹಾಲಿನೊಡನೆ ಮಿಶ್ರಿತವಾಗಿದೆ - ಮೊಸರು ಕಾಳು ಹಿಟ್ಟುಗಳನ್ನು ಅದಕ್ಕೆ ಸೇರಿಸಲಾಗಿದೆ. ಹಾಲು ಆ ಹೊಳೆವ ದನಗಳದ್ದು. ಬೌದ್ಧಿಕ ಮನದಲ್ಲಿ ಆ ಹಾಲನ್ನು ನೆಲೆನಿಲ್ಲಿಸಿದ ಕಾರ್ಯವೇ ಮೊಸರು, ಭೌತಿಕ ಮನದಲ್ಲಿ ಜ್ಯೋತಿ ಸ್ವರೂಪ ನಿರ್ಮಾಣವಾದದ್ದೇ ಕಾಳು ಅಥವಾ ಅದರ ಹಿಟ್ಟು. ಈ ಸಾಂಕೇತಿಕ ಅರ್ಥಗಳು ಗೋ, ದಧಿ, ಯವ ಎಂಬ ದ್ವಂದ್ವಾರ್ಥಕ ಪದಗಳ ಬಳಕೆಯಿಂದ ಗೊತ್ತಾಗುತ್ತವೆ.

೫. ಜೈವಿಕ ಅಸ್ತಿತ್ವದಲ್ಲಿರುವ ಪರಿಪೂರ್ಣವೂ ವಿಶಾಲವೂ ಆದ ಕ್ರಿಯಾಶಕ್ತಿ ; ಇದು ಮಾನಸಾಸ್ತಿತ್ವದ ಮಹಾಸತ್ಯದ ಅನಂತ ಹಾಗೂ ಅಮರ ಜ್ಯೋತಿಸ್ಸಿಗೆ ಸರಿಸಮಾನವಾಗಿ ಜೋಡಿಸಲ್ಪಟ್ಟದ್ದು.

# ಇಪ್ಪತ್ತೆಂಟನೆಯ ಅಗ್ನಿ ಸೂಕ್ತ

## ಅಮೃತತತ್ವದರಾಜನಾದ, ಮೇಲ್ಮುಖವಾಗಿ ಎತ್ತರದಲ್ಲಿ ಉರಿವ, ಅಗ್ನಿಯ ಬಗೆಗಿನ ಸೂಕ್ತವು

[ದಿವ್ಯ ಸಂಕಲ್ಪಾತ್ಮಕನ ಜ್ವಾಲೆಯನ್ನು ಅಮೃತತತ್ವದ ರಾಜನೆಂದು ಗ್ರಹಿಸಿ ಜ್ಞಾನೋದಯದ ಉಷಃಕಾಲದಲ್ಲಿ ಅವನು ಎತ್ತರಕ್ಕೆದ್ದು ಉರಿಯುತ್ತಿರುವಾಗ ಋಷಿ ಸಂಭ್ರಮದಿಂದ ಸ್ತುತಿಸುತ್ತಾನೆ, ಸಮಾರಾಧಿಸುತ್ತಾನೆ. ಉಕ್ತ ದಿವ್ಯ ಸಂಕಲ್ಪಾತ್ಮಕನು ಜೀವಾತ್ಮನಿಗೆ ಅವನ ಆಧ್ಯಾತ್ಮಿಕ ಐಶ್ವರ್ಯವನ್ನು ಕೊಡುವಾತನು ; ಹಾಗೇ ಅವನಿಗೆ ಸುಖ ಸೌಲಭ್ಯವನ್ನೂ ಸುನಿಯಂತ್ರಿತ ಪ್ರಕೃತೀಶ್ವರತ್ವವನ್ನೂ ನೀಡುವಾತನು. ಅವನು ನಮ್ಮ ಆಹುತಿವಾಹಕನು, ಹುತವಹನು, ಹವ್ಯವಾಹನನು - ಅದರ ದಿವ್ಯ ಹಾಗೂ ವೈಶ್ವತ್ರಿಕ ಗುರಿಗೆ ನಮ್ಮ ಯಜ್ಞವನ್ನು ಒಯ್ದು ಮುಟ್ಟಿಸುವಲ್ಲಿ ಮಾರ್ಗದರ್ಶಕನಾಗಿ ನಿಲ್ಲುವ ಪ್ರತಿಭಾನ್ವಿತನು.

೧. ಬಾನೆತ್ತರಕ್ಕೆದ್ದುರಿವ ಆ ಜ್ವಾಲಾತ್ಮಕನು ತನ್ನ ಶುದ್ಧ ಪ್ರಕಾಶಕ್ಕೇರುತ್ತಾನೆ. ಎಲ್ಲಿ? ನಮ್ಮ ಮನದ ಸ್ವರ್ಗದಲ್ಲಿ ; ಅವನು ತನ್ನ ಪ್ರಾತಿಭ ಪ್ರಬೋಧಾಂಶುಗಳನ್ನು ಅಗಲವಾಗಿ ಹರಹುತ್ತಾನೆ ಮತ್ತು ಉಷೆಯನ್ನು ಎದುರುಗೊಳ್ಳುತ್ತಾನೆ. ಅವಳು ಅಪೇಕ್ಷಣೀಯವಾದ ಎಲ್ಲ ಸಾಮಗ್ರಿಗಳಿಂದೊಡಗೂಡಿ ಆಹುತಿಯಿಂದ ದೇವತೆಗಳನ್ನು ಅನ್ವೇಷಿಸುತ್ತಾ, ಸ್ಪಷ್ಟತೆಯ ಮೂಲಕ ಬೆಳಗುತ್ತಾ, ಮೇಲೆ ಮೇಲೇರುತ್ತಾ ಬರುತ್ತಾಳೆ.

೨. ನೀನು ಎತ್ತರದಲ್ಲಿ ಉರಿಯುವಾಗ ಅಮೃತತತ್ವದ ದೊರೆ ; ಮತ್ತು ಆನಂದಮಯ ಸ್ಥಿತಿಯನ್ನು ಅವನಿಗೆ ನೀಡಲೆಂದು ಯಾಜ್ಞಿಕನನ್ನು ನೀನು ಅಂಟಿಕೊಳ್ಳುತ್ತೀಯೆ. ನೀನು ಯಾವನಲ್ಲಿಗೆ ಅವನ ಅತಿಥಿಯಾಗಲು ಬರುವೆಯೋ ಅವನು ತನ್ನಲ್ಲಿ ಎಲ್ಲ ಸಾರವತ್ತಾದುದನ್ನೂ ಇಟ್ಟುಕೊಂಡು ತನ್ನೆದುರು ನಿನ್ನನ್ನು ಕುಳ್ಳಿರಿಸಿಕೊಳ್ಳುತ್ತಾನೆ.

೩. ಓ ಜ್ವಾಲಾ ಸ್ವರೂಪನೇ, ನಿನ್ನ ಯೋಧ ಬಲವನ್ನು ವಿಶಾಲಾನಂದಭೋಗಕ್ಕಾಗಿ[೧] ನಮ್ಮ ಮುಂದಿಡು, ಪ್ರಕಟಿಸು ; ಅಲ್ಲಿ ನಿನ್ನ ಪ್ರೋಜ್ವಲತಮ ಭಾಸವು ಮೂಡಲಿ. ಮಹಾದೇವ

---

೧. ವೈದಿಕ ಅಮೃತತತ್ವವು ವಿಶಾಲವಾದ ದನ್ಯತಾ ಸ್ಥಿತಿಯು ; ಪ್ರಕೃತಿ ಸಾತ್ಮ್ಯಭಾವದಲ್ಲಿ ಆತ್ಮವು ವಿಶ್ರಮಿಸಿ ದಿವ್ಯವೂ ಅನಂತವೂ ಆದ ಭೋಗ ಸ್ಥಿತಿಯಲ್ಲಿರುವುದು. ಆತ್ಮವು ಸ್ವರಾಡಾಗುತ್ತದೆ' ಅದರ ಆವರಣದ ದೊರೆಯಾಗುತ್ತದೆ ; ತನ್ನ ಎಲ್ಲ ಪ್ರಜ್ಞಾಸ್ತರಗಳಲ್ಲೂ ಎಚ್ಚೆತ್ತಿರುತ್ತದೆ - ಅವುಗಳ ಯಜಮಾನ ಎನ್ನಿಸುತ್ತದೆ ; ಪ್ರಕೃತಿವಧೂ ಸಮೇತವಾಗಿ ಬೇದ-ವಿಷಮಶ್ರುತಿಗಳಿಂದ ಮುಕ್ತವಾಗಿ ಅನಂತ ಪ್ರಕಾಶಮಯ ಸಾಮಶ್ರುತ್ಯದಲ್ಲಿ ಅದು ವಿಹರಿಸುತ್ತದೆ.

- ಮಹಾದೇವಿಯರ ಸುನಿಯಂತ್ರಿತ ಸಂಯೋಗವನ್ನುಂಟುಮಾಡು ; ಶತ್ರುಶಕ್ತಿಗಳ ಮಹತ್ವವನ್ನು ಮೆಟ್ಟಿ ಅಡಗಿಸು.

೪. ಏ ಜ್ವಾಲಾತ್ಮಕ, ನಾನು ನಿನ್ನ ಊರ್ಧ್ವೋಜ್ವಲ ಬಲವತ್ತೆಯ ವೈಭವವನ್ನು ಆರಾಧಿಸುತ್ತೇನೆ. ನೀನು ಪ್ರಬೋಧಾಂಶುಗಳ ಸ್ವರೂಪದ ವೃಷಭನು. ನಮ್ಮ ಯಜ್ಞಗಳ ಮುನ್ನಡೆಯಲ್ಲಿ ನೀನು ಎತ್ತರಕ್ಕೆ ಉರಿಯುತ್ತೀಯೆ.

೫. ಎಲೈ ಜ್ವಾಲಾನಲನೇ, ನೀನು ನಮ್ಮ ಆಹುತಿಗಳನ್ನು ಸ್ವೀಕರಿಸುತ್ತೀಯೆ ; ನೀನು ಯಜ್ಞದ ಪರಿಪೂರ್ಣ ಜ್ಞಾನವುಳ್ಳ ಮಾರ್ಗದರ್ಶಕನು ; ಚೆನ್ನಾಗಿ ಹೊತ್ತಿಸಿದಾಗ ನೀನು ದೇವತೆಗಳಿಗೆ ನಮ್ಮ ಹವಿರ್ಭಾಗಗಳನ್ನು ಒಯ್ದು ಮುಟ್ಟಿಸುತ್ತೀಯೆ. ಏಕೆಂದರೆ ನೀನು ನಮ್ಮ ಆಹುತಿಗಳ (ಹವಿರ್ಭಾಗಗಳ) ಹೊರೆಕಾರನು.

೬. ನಿನ್ನ ಆಹುತಿಯನ್ನು ಎಸೆ, ನಿನ್ನ ಕರ್ಮಗಳಿಂದ[1] ದಿವ್ಯ ಸಂಕಲ್ಪವನ್ನು ಸೇವಿಸು - ಆಗ ನಿನ್ನ ಯಜ್ಞವು ತನ್ನ ಗುರಿಯತ್ತ ಮುನ್ನಡೆಯುವುದು, ನಮ್ಮ ಹವ್ಯವಾಹನನನ್ನು[2] ನೀನು ಸ್ವೀಕರಿಸು.



೧. ಅಥವಾ ತನ್ನ ಕೆಲಸ ಮಾಡಲು ದಿವ್ಯ ಸಂಕಲ್ಪವನ್ನು ಎಚ್ಚಿಸು.

೨. ಇದು ಅಂತ್ಯಾಗ್ನಿ ಸೂಕ್ತವು - ಈ ಇಪ್ಪತ್ತೆಂಟು ಅಗ್ನಿ ಸೂಕ್ತಗಳು ಋಗ್ವೇದದ ಐದನೆಯ ಮಂಡಲದ ಮೊದಲನೆಯ ಭಾಗವನ್ನಿಸಿರುತ್ತವೆ.

# ಬೆಳಕಿನ ರಕ್ಷಕರು(ಪಾಲಕರು)

## ಬೆಳಕು ಮತ್ತು ದ್ರಷ್ಟಾರನಾದ ಸೂರ್ಯನು

ಋಗ್ವೇದವು ಸರ್ವಸ್ರಷ್ಟಾರವೆನ್ನಿಸಿದ ಸತ್ಯದೆತ್ತರಕ್ಕೆ ಮತ್ತು ಸರ್ವದರ್ಶಕ ಜ್ಯೋತಿಯ ಎತ್ತರಕ್ಕೆ ಮಾನವಾತ್ಮದಿಂದೆತ್ತಿದ ಸಹಸ್ರ ಸ್ವರಗಳ ಶಬ್ದದಿಂದ (ಮಂತ್ರದಿಂದ) ಕೂಡಿ, ಪ್ರಾಚೀನ ಉಷಾ-ದೇವಿಯೊಳಗಿನಿಂದ ಹೊರಗೆದ್ದು ಬರುತ್ತದೆ. ವೈದಿಕ ದ್ರಷ್ಟಾರರ ವಿಚಾರದಲ್ಲಿ ಪರಮಸತ್ಯ-ಪರಂಜ್ಯೋತಿಗಳು ಏಕಾರ್ಥಕ ಅಥವಾ ಪರ್ಯಾಯ ಪದಗಳು ಹಾಗೇ ಅವುಗಳ ವಿರುದ್ಧ ತತ್ವಗಳು (ಅಸತ್ಯ, ಅನೃತ ಮತ್ತು ಅಜ್ಞಾನ, ಅಂಧಕಾರ, ಕತ್ತಲು ಎಂಬಿವುಗಳೂ) ಏಕಾರ್ಥಕಗಳು. ವೈದಿಕ ದೇವಾಸುರ ಯುದ್ಧವು ಸ್ವರ್ಗಾಂತರಿಕ್ಷ ಭೂರೂಪದ ತ್ರಿಪ್ರಪಂಚದ ಪ್ರಭುತ್ವಕ್ಕಾಗಿ ಮತ್ತು ಮಾನವ್ಯ ಸತ್ತೆಯ ಮನ, ಪ್ರಾಣ, ದೇಹಗಳ ಮುಕ್ತಿಗಾಗಿ ಅಥವಾ ಬಂಧನಕ್ಕಾಗಿ-ಅಲ್ಲದೆ ಮಾನವನ ಅಮರ್ತ್ಯತ್ವ - ಮರ್ತ್ಯತ್ವಗಳ ಸಿದ್ಧಿಗಾಗಿ ಹಗಲು-ಇರುಳುಗಳ ನಡುವೆ ನಡೆವ ನಿತ್ಯ ಯುದ್ಧವಾಗಿದೆ. ಈ ಯುದ್ಧವನ್ನು ಆತ್ಯಂತಿಕ ಪರಮೋಚ್ಚ ದಿವ್ಯ ಸತ್ಯದ ಶಕ್ತಿಗಳೂ ಪರಮೋನ್ನತ ಪ್ರಕಾಶದ ಪ್ರಭುಗಳೂ ಸೇರಿ, ನಾವು ಬದುಕಿರುವ ಅನೃತ ಪ್ರಪಂಚದ ಬುನಾದಿಯನ್ನು ಉಳಿಸಿಕೊಳ್ಳಲು ಮತ್ತು ಅಜ್ಞಾನಮಯವಾದ ಈ ಸದುರ್ಗಶತಪುರಗಳನ್ನು ಹಾಗೇ ಇರಿಸಿಕೊಳ್ಳಲು ಹೋರಾಡುವ ಇತರ ಕೃಷ್ಣಶಕ್ತಿಗಳ ವಿರುದ್ಧವಾಗಿ ಹೂಡಲಾಗಿದೆ.

ಬೆಳಕು-ಕತ್ತಲೆಗಳ ಹಾಗೂ ಸತ್ಯಾನೃತಗಳ (ಸತ್ಯಾಸತ್ಯಗಳ) ನಡುವಿನ ಈ ವಿರೋಧದ ಬೇರುಗಳು ಮೂಲಭೂತವಾದ ವೈಶ್ವಿಕ ಪ್ರಬುದ್ಧ ಅನಂತ ಮತ್ತು ಸಾಂತ ಪ್ರಜ್ಞೆಗಳ ವಿರೋಧದಲ್ಲಿವೆ. ಅನಂತಾತ್ಮಿಕೆಯಾದ ಅದಿತಿಯು ಅಭಿನ್ನಸ್ವರೂಪಿಣಿಯು ; ಅವಳು ಆದಿತ್ಯರಾದ ದೇವತೆಗಳ ತಾಯಿ. 'ದಿತಿ" ಯಾ "ದನು" ಎಂಬಾಕೆ ವಿಭಾಜಿಕೆಯು;ಅವಳು ಪ್ರತ್ಯೇಕೀಕರಣ ಪ್ರಜ್ಞಾಸ್ವರೂಪಿಣಿಯು ; ಅವಳೇ (ಅಸುರರ) ದೈತ್ಯರ, ದನುಜರ, ತಾಯಿ. ಆದುದರಿಂದಲೇ ಮಾನವನಲ್ಲಿರುವ ದೇವತೆಗಳು ಬೆಳಕು, ಅನಂತತೆ ಮತ್ತು ಐಕ್ಯಗಳತ್ತ ತಿರುಗುತ್ತಾರೆ. ಅಸುರರು (ದೈತ್ಯರು) ತಮ್ಮ ಅಂಧಕಾರ ಗುಹೆಯಲ್ಲಿದ್ದುಕೊಂಡು ಅಲ್ಲಿಂದ ಹೊರಬಂದು ಒಡೆಯಲು; ಅಪಶ್ರುತಿಗಿಳಿಸಲು, ಗಾಯಗೊಳಿಸಲು ಮತ್ತು ಮಾನವನ ಜ್ಞಾನ, ಸಂಕಲ್ಪ, ಸಂತೋಷ ಮತ್ತು ಸತ್ತೆ(ಜೀವಿತ)ಗಳನ್ನು ಇತಿಮಿತಿಗೊಳಪಡಿಸಲು ಯತ್ನಿಸುತ್ತಾರೆ. ಅದಿತಿಯು ಮೂಲತಃ ಅನಂತಸತ್ತೆಯ ಶುದ್ಧ ಪ್ರಜ್ಞಾಸ್ವರೂಪಳು, ಏಕೈಕಳು ಮತ್ತು ಸ್ವಯಂಪ್ರಭೆಯು (ಸ್ವಪ್ರಕಾಶ ಸ್ವರೂಪಿಣಿ) ; ಅವಳು ಸರ್ವಮಾತೆಯಾದ ಬೆಳಕು. ಅನಂತೆಯಾಗಿ ಯಾ ಅಗಣಿತಸ್ತರವತಿಯಾಗಿ ಆಕೆ ದಕ್ಷನನ್ನು ಹಡೆಯುತ್ತಾಳೆ. ದಕ್ಷನೆಂದರೆ ದಿವ್ಯ ಮನದ ವಿವೇಚಕ ಮತ್ತು ವಿತರಣಕಾರಕವಾದ ವಿಚಾರವು. ಅನಂತರ ಅವಳೇ ದಕ್ಷನ

ಮಗಳಾಗಿ ಹುಟ್ಟುತ್ತಾಳೆ - ಅವಳೀಗ ವೈಶ್ವಿಕ ಅನಂತಾತ್ಮಿಕೆ, ಯೌಗಿಕ ಧೇನು ಎಲ್ಲ ಜಗತ್ತುಗಳಿಗೂ ಹಾಲುಣಿಸುವ ಕೆಚ್ಚಲುಳ್ಳಾಕೆ.

ದಕ್ಷನ ಈ ದಿವ್ಯಪುತ್ರಿಯೇ ದೇವತೆಗಳೆಲ್ಲರ ತಾಯಿಯು. ವಿಶ್ವದಲ್ಲಿ (=ಲೋಕಗಳ ಸಂಘಾತದಲ್ಲಿ) ಅದಿತಿಯೇ ಅವಿಭಕ್ತ ಅನಂತ ಯಾ ಅಗಣಿತ ಅಭೇದ ಭಾವವು. ಅವಳೇ ದ್ವೈತ ರಹಿತೆ, ಅದ್ವಯಾತ್ಮಿಕೆ ; ಅವಳ ವೈಶ್ವಿಕ ಸೃಷ್ಟಿಯ ವಿರುದ್ಧಮುಖದ ದ್ವೈತೀಕರಣದ ಪ್ರತ್ಯೇಕತಾ ಪ್ರಜ್ಞೆಯೂ ಅವಳದೇ. ಆ ಪ್ರಜ್ಞೆಯು ದಿತಿಯೆಂಬ ಅವಳ ತಂಗಿ ; ಮುಂದಿನ ಪುರಾಣದಲ್ಲಿ ಅದಿತಿಗೆ ದಿತಿಯು ಸವತಿಯು. ದಿತಿಯು ಭೂತತ್ವವಾಗಿ ಈ ಅಧೋಲೋಕದಲ್ಲಿ ಅವತರಿಸುತ್ತಾಳೆ - ಅವಳ ಕೀಳ್ಮಟ್ಟದವನಾದ ಯಾ ಅಶುಭಕಾರಕನಾದ ತಂದೆಯನ್ನು ನೀಚಸೃಷ್ಟಿಯಲ್ಲಿ ಅವರ ಮಗನಾಗಿ ಹುಟ್ಟಿದ ದಿವ್ಯಮಾನಸನಾದ ಇಂದ್ರನು ಕಾಲೆಳೆದು ಕೊಂದುಹಾಕಿ, ತನ್ನ ತಾಯಿಯನ್ನು ವಿಧವೆಯನ್ನಾಗಿ ಮಾಡುತ್ತಾನೆ. ಸೂಕ್ತದ ಪ್ರಕಾರ, ಇಂದ್ರನು (ಇನ್ನೊಂದು ರೂಪಕೋಕ್ತಿಯಲ್ಲಿ) ಆಧುನಿಕ ಅಭಿರುಚಿಗೆ ಅನುಚಿತವೆನ್ನಿಸುವಂತೆ, ಆ ವಿಧವಾ ಮಾತೃವಿನ ಮೈಮೇಲೆ ಕೈಹಾಕಿ ಬಲತ್ಕಾರದಿಂದ ಭೋಗಿಸುತ್ತಾನೆ. ಸೂರ್ಯನನ್ನು ಅವನ ತಂಗಿಯ ಪ್ರಿಯಕರ ಎನ್ನಲಾಗಿದೆ ; ಆ ತಂಗಿ ಉಷೆಯು. ಅವನು ತನ್ನ ತಾಯಿಯಾದ ಅದಿತಿಯ ಎರಡನೆಯ ಗಂಡ. ಅದೇ ಪ್ರತಿಮೆಯನ್ನು ಬದಲು ಮಾಡಿ ಸರ್ವವ್ಯಾಪಿಯಾದ ವಿಷ್ಣುವಿನ ಹೆಂಡತಿ ಅದಿತಿಯೆಂದೂ ವಿಷ್ಣುವು ಇಂದ್ರನ ತಮ್ಮನೆಂದೂ ಹೇಳಲಾಗಿದೆ. ಅರ್ಥಸೂಚಕ ಬೀಗದ ಕೈ ಇಲ್ಲದಾಗ ಇವೆಲ್ಲಾ ಒರಟೊರಟು ಗಲಿಬಿಲಿ ಎನ್ನಿಸುವ ರೂಪಕ ಪ್ರತಿಮೆಗಳಾಗಿ ತೋರುತ್ತವೆ. ಆ ಕೀಲಿಕೈ ಸಿಕ್ಕಿದಾಗ ಅವುಗಳ ಯೋಗಶಾಸ್ತ್ರೀಯ ಅರ್ಥಗಳು ಸ್ಪಷ್ಟವಾಗುತ್ತವೆ. ಅದಿತಿಯು ವಿಶ್ವದಲ್ಲಿಯ ಅನಂತಪ್ರಜ್ಞೆ ಅದನ್ನು ಕೆಳಮಟ್ಟದ ಸೃಷ್ಟಿ ಶಕ್ತಿಯು ಎತ್ತಿ ಹಿಡಿದುಕೊಂಡು ಪ್ರಮಿತವಾದ ಮನ-ದೇಹಗಳಲ್ಲಿ ಕೆಲಸ ಮಾಡುತ್ತದೆ. ಆದರೆ ಈ ಬಂಧನದಿಂದ ಮುಕ್ತವಾದಾಗ-ಅರ್ಥಾತ್, ಅವಳಿಂದಲೇ ಹುಟ್ಟಿದ ದಿವ್ಯ ಯಾ ಪ್ರಾತಿಭ ಮನವು ಅಂಥ ಬಂಧದಿಂದ ಅವಳನ್ನು ಮಾನವ ಧರ್ಮದಲ್ಲಿಯೇ ಬಿಡುಗಡೆ ಮಾಡಿದಾಗ ಇಂದ್ರೋತ್ಪತ್ತಿಯ ಅರ್ಥವು ನಮಗಾಗುತ್ತದೆ. ಈ ಇಂದ್ರನೇ ಸೂರ್ಯನನ್ನು ಯಾ ಸ್ವರ್ಗದಲ್ಲಿ ಉದಯಿಸುವ ದಿವ್ಯಸತ್ಯ ಪ್ರಕಾರವನ್ನು ಸೃಜಿಸಿ ಪ್ರತ್ಯೇಕತಾ ಭಾವನೆಯ ಪ್ರಮಿತದರ್ಶನವನ್ನು ಮತ್ತು ಕತ್ತಲು ಹಾಗೂ ಸುಳ್ಳುಗಳನ್ನು ನಾಶ ಮಾಡುತ್ತಾನೆ. ವಿಷ್ಣುವು ಇದಕ್ಕೂ ಹೆಚ್ಚು ವಿಸ್ತಾರವಾದ ಸರ್ವವ್ಯಾಪಕ ಸತ್ತೆ ; ಅವನು ಆಮೇಲೆ ನಮ್ಮ ಮುಕ್ತ ಹಾಗೂ ಏಕೀಕೃತ ಪ್ರಜ್ಞೆಯ ಪ್ರಭುವಾಗುತ್ತಾನೆ. ಆದರೆ ಅವನು ನಮ್ಮಲ್ಲಿ ಜನಿಸುವುದು ಇಂದ್ರನು ತನ್ನ ಪ್ರಾಭಾವಿಕ ಪ್ರಕಾಶಮಯ ಸ್ವರೂಪವನ್ನು ನಮ್ಮಲ್ಲಿ ಮೂಡಿಸಿದ ಮೇಲೆಯೇ.

ಈ ಮಹಾಸತ್ಯವೇ ಬೆಳಕು, ಸೂರ್ಯಶರೀರವು. ಇದನ್ನು ಸತ್ಯ, ಋತ, ವಿಸ್ತಾರ, ಅತಿಮಾನಸ ಪ್ರಭಾಮಯಸ್ವಃ ಸ್ವರ್ಗ ಎಂದು ಮುಂತಾಗಿ ಕರೆಯಲಾಗಿದೆ. ಇದು "ವಿಸ್ತಾರವಾದ ಸ್ವರ್, ಮಹಾಸತ್ಯ" ; ಇದು ನಮ್ಮ ಭೂಮಿ-ಸ್ವರ್ಗಗಳಾಚೆಗೆ ಪ್ರಚ್ಛಾದಿತವಾಗಿದೆ ಮತ್ತು ಇದೇ ಆ ಆದಿತ್ಯನಾದ ಸೂರ್ಯ "ಆ ಪರಮಸತ್ಯ" - ಇದೇ ಕತ್ತಲಲ್ಲಿ ಮುಳುಗಿ ಹೋಗಿ ಅವಮಾನಸದ ಗುಹೆಯಲ್ಲಿ ಗುಪ್ತವಾಗಿರುವ ಪದಾರ್ಥ. ಈ ಗುಪ್ತಸತ್ಯವೇ ಆ ಪರಮವಿಸ್ತಾರ, ಪರಮವೈಶಾಲ್ಯ- ಏಕೆಂದರೆ, ಇದೇ ಅತಿಮಾನಸ (ಸುಪ್ರಮಾನಸ) ಪ್ರಜ್ಞಾಸ್ತರದಲ್ಲಿ ಮುಕ್ತವಾಗಿ,

ವ್ಯಕ್ತವಾಗಿ, ವಾಸಿಸಿರುತ್ತದೆ. ಆ ಸುಪ್ರಮಾನಸದಲ್ಲಿ ಸತ್ತೆ, ಸಂಕಲ್ಪ, ಜ್ಞಾನ, ಸಂತೋಷಗಳು ಭಾವೋದ್ರೇಕದಶೆಯಲ್ಲಿ ಮತ್ತು ಗಡಿಮಿತಿಯಿಲ್ಲದ ಅನಂತತೆಯಲ್ಲಿ ಚಲಿಸುತ್ತಿರುತ್ತವೆ. ಅವು ನಮ್ಮ ದುರ್ಗಮ ದುರ್ಗಶತಾವೃತ ಮನ, ಪ್ರಾಣ, ದೇಹಗಳೆಂಬ ನೀಚಸತ್ತೆಯಿಂದ ಸೀಮಿತ-ವಾಗಿರುವುದಿಲ್ಲ, ಆವಾರಬದ್ಧವಾಗಿರುವುದಿಲ್ಲ. ಅದೇ ನಾವು ಮಾನಸಿಕ ಮತ್ತು ಭೌತಿಕ ಆವರಣಗಳಾದ ಅಂತರಿಕ್ಷಗಳನ್ನು ಬಂಗಗೊಳಿಸಿ ಮೇಲೆ ಹತ್ತಿ ಹೋಗಿ ತಲುಪಬೇಕಾದ ಮೇಲ್ಮಟ್ಟದ ಅಸ್ತಿತ್ವಸ್ಥಿತಿಯು (ಸತ್ತೆಯು). ಅದನ್ನು ಮುಕ್ತವೂ ವಿಶಾಲವೂ ಆದ, ಅಸೀಮ ವ್ಯಾಪ್ತಿಯುಳ್ಳ ದಿವ್ಯಜೀವನ, ದಿವ್ಯಸತ್ತೆ ಎಂದು ವರ್ಣಿಸಲಾಗಿದೆ - ಅದು ವೈಶಾಲ್ಯ - ಅದಕ್ಕೆ ಯಾವುದೂ ಅಡ್ಡಿಯಾಗಿ ಬರದು, ಯಾವ ಸೀಮಾರೇಖೆಯೂ ಹಿಡಿದಿಡದು. ಅದು ಸೂರ್ಯನ ಹೊಳೆವ ಗೋಗಳ ನಿರ್ಭೀತ ಹುಲ್ಲುಗಾವಲು. ಅದು ಪರಮಸತ್ಯದ ಪೀಠ, ಮನೆ- ದೇವತೆಗಳ ಸ್ವಂತ ಮನೆ - ಸೌರ ಪ್ರಪಂಚ - ಅಲ್ಲಿ ಆತ್ಮಕ್ಕೆ ನಿರ್ಭಯ, ಅಕ್ಷತತ್ವ ತನ್ನ ಅಸ್ತಿತ್ವದ ಆನಂದದ ಸುವಿಸ್ತಾರವಾದ ಸಮಾನತೆಯ ಆನಂದಾನುಭೂತಿ - ಇವು ಅನುಭವಕ್ಕೆ ಬರುತ್ತವೆ.

ಈ ಅತಿಮಾನಸ ಯಾ ಸುಪ್ರಮಾನಸ ವೈಶಾಲ್ಯವು ಸತ್ತೆಯ ಮೂಲಭೂತ ಸತ್ಯವೂ ಆಗಿದೆ. ಅದರಿಂದಲೇ ಸ್ವಾಭಾವಿಕವಾಗಿ ಅದರ ಸಕ್ರಿಯ ಸತ್ಯವು ಹೊರ ಹರಿಯುತ್ತದೆ ಮತ್ತು ಪ್ರಯತ್ನ ಘರ್ಷಣೆಯಿಲ್ಲದೆ ಸಮಗ್ರ, ನಿರ್ದುಷ್ಟ ಚಲನೆಗೆ ಶಕ್ತವಾಗುತ್ತದೆ. ಏಕೆಂದರೆ, ಈ ಉನ್ನತ ಅಧಿತ್ಯಕೆಗಳಲ್ಲಿ (ಪ್ರಸ್ಥಭೂಮಿಗಳಲ್ಲಿ) ವಿಭಜನೆ (ಭೇದ)ವಿಲ್ಲ, ಪ್ರಜ್ಞೆ-ಪ್ರಣೋದಗಳಲ್ಲಿ ಅಂತರವಿಲ್ಲ, ಜ್ಞಾನ-ಸಂಕಲ್ಪಗಳಲ್ಲಿ ವಿಚ್ಛೇದವಿಲ್ಲ ಮತ್ತು ಜೀವಿತ ಹಾಗೂ ಕರ್ಮಗಳಲ್ಲಿ ಅಪಶ್ರುತೀಕರಣವಿಲ್ಲ, ಅಸಂಬದ್ಧತೆ ಇಲ್ಲ, ಅಸಮನ್ವಿತತೆ ಇಲ್ಲ. ಇಲ್ಲಿ ಎಲ್ಲವೂ "ನೇರ" ಮತ್ತು ವಕ್ರತೆಗೆ ಅವಕಾಶವಿಲ್ಲವೇ ಇಲ್ಲ. ಆದುದರಿಂದಲೇ ಈ ಅತಿಮಾನಸ ಪ್ರಜ್ಞಾಸ್ತರದ ವೈಶಾಲ್ಯವೆಂಬ ನಿಜಸತ್ತೆಯು ಋತವೂ ಆಗಿದೆ, ವಸ್ತುಗಳ ನಿಜ ಚಟುವಟಿಕೆಯೂ ಆಗಿದೆ. ಇದೊಂದು ಚಲನಗತ ಪರಮೋನ್ನತ ಸತ್ಯ, ಕರ್ಮಗತ ಪರಮೋಚ್ಚ ತಥ್ಯ, ಆವಿರ್ಭಾವಗತ ನಿಜಸ್ಥಿತಿ ಹಾಗೂ ಸಂಕಲ್ಪ-ಹೃದಯ-ಜ್ಞಾನಗಳ ಹೆತ್ವಾಭಾಸರಹಿತವಾದ ಸತ್ಯ, ಅಂದರೆ ವಿಚಾರ, ಮಾತು ಮತ್ತು ಭಾವನೆಗಳ ಸ್ವರೂಪದ ಪೂರ್ಣ ಸತ್ಯ ಇದು ಸ್ವಯಮುದ್‌ಬುದ್ಧ ನ್ಯಾಯ, ಮುಕ್ತ ವಿಧಿ, ವಸ್ತುಗಳ ಮೂಲಭೂತ ದಿವ್ಯಕ್ರಮ - ಇದು ವಿಭಕ್ತ ಹಾಗೂ ಪ್ರತ್ಯೇಕೀಕಾರಕ ಪ್ರಜ್ಞೆಯ ಅಯಥಾರ್ಥಗಳಿಂದ ಅಸ್ಪಷ್ಟ. ಇದು ಮೂಲಭೂತ ಐಕ್ಯಸ್ಥಿತಿಯಿಂದ ಉದ್ಭವಿಸಿದ ವಿಸ್ತೃತವೂ ದಿವ್ಯವೂ ಸ್ವಯಂಪ್ರಭುವೂ ಆದ ಸಮನ್ವಯವಾಗಿದೆ. ಇದರಿಂದ ವಿಶ್ಲೇಷಿಸಿ ತುಂಡುಮಾಡಿ ಮೂರ್ಛೀಕರಿಸಿ ಒಡೆದು ಬಡಕಲಾಗಿಸಿ ತೆಗೆದಿಟ್ಟದ್ದೇ ಈ ನಮ್ಮ ಅಲ್ಪ ಜೀವನವು. ವೈದಿಕ ಆರಾಧನೆಯ ಸೂರ್ಯನು ಅಂಥವನಾಗಿದ್ದನು. ಪಿತೃಗಳು ಬಯಸುತ್ತಿದ್ದುದು ಆ ದ್ಯುಮತ್ ಸ್ವರ್ಗವನ್ನು - ದ್ಯುಮತ್ ಪ್ರಪಂಚವನ್ನು - ದ್ಯುಮತ್ ಸೂರ್ಯಕಾಯವನ್ನು - ಅದಿತಿಸುತನಾದ ಆದಿತ್ಯನ ಜ್ಯೋತಿರ್ಮಯ ಲೋಕವನ್ನು. ವೈದಿಕ ಆರಾಧನೆಯ, ಉಪಾಸನೆಯ, ಸೂರ್ಯನು ಇಂಥವನು. ಇವನದು ಬೆಳಕಿನ ಸ್ವರ್ಗ. ನಮ್ಮ ಪಿತೃಗಳು ಬಯಸಿದ್ದು ಇದನ್ನು - ಅದಿತಿ ಪುತ್ರನಾದ ಸೂರ್ಯನ ಕಾಯರೂಪದ ಪ್ರಪಂಚವನ್ನು.

ಅದಿತಿಯು ಅನಂತ ಯಾ ಅಗಣಿತ ಜ್ಯೋತಿಸ್ಸು. ದಿವ್ಯ ಪ್ರಪಂಚವು ಆ ಬೆಳಕಿನಿಂದಾದದ್ದು ಮತ್ತು ದೇವತೆಗಳು ಆ ಅನಂತ ಜ್ಯೋತಿಯ ಮಕ್ಕಳು - ಅವಳ ಋತದಿಂದ ಹುಟ್ಟಿದವರು ; ಅವಳ ಸಕ್ರಿಯ ಸತ್ಯದ ಚಲನೆಯಿಂದ ಅಭಿವ್ಯಕ್ತರಾದ ಮಕ್ಕಳು-

ಅವು ಆ ದಿವ್ಯ ಪ್ರಪಂಚದಲ್ಲಿ ಅರಾಜಕತೆ-ಅಜ್ಞಾನಗಳು ಹಬ್ಬದಂತೆ ಕಾಯುತ್ತವೆ. ಅವುಗಳೇ ವಿಶ್ವದಲ್ಲಿ ಪರಮಸತ್ಯದ ಅಜಯ್ಯ ಕರ್ಮಗಳು ಉಳಿಯುವಂತೆ ನೋಡಿಕೊಳ್ಳುವವು. ಆ ದೇವತೆಗಳು ಉಕ್ತ ಪರಮಸತ್ಯದ ಲೋಕಗಳನ್ನು ರಚಿಸುವವರು - ಅದರಲ್ಲೂ ಆ ಸತ್ಯದ ಪ್ರತಿಮೆಯಾಗುವಂತೆ ಅವನ್ನು ನಿರ್ಮಿಸುವವರು. ಅವರು ದಾನಶೂರಕರ್ಣರು - ಆ ಸತ್ಯದ ಪ್ರವಾಹಗಳನ್ನು ಮಾನವನ ಮೇಲೆ ಹರಿಬಿಡುವವರು- ಆ ಪ್ರವಾಹಗಳನ್ನು ಯೋಗಿ ಕವಿಗಳ ವಿವಿಧ ಪ್ರತಿಮೆಗಳಿಂದ - ಅರ್ಥಾತ್ - ಸಪ್ತಪುಟ ಸೌರಜಲಗಳು, ಸ್ವರ್ಗವೃಷ್ಟಿ, ಪರಮಸತ್ಯದ ನದಿಗಳು, ಸ್ವರ್ಗದ ಸಪ್ತಬಲಿಷ್ಠ ದೇವತೆಗಳು-ಜ್ಞಾನಮಯಜಲಗಳು - ವೃತ್ರನೆಂಬ ಆಚ್ಛಾದಕನ ಹಿಡಿತದಿಂದ ಬಿಡಿಸಿಕೊಂಡು ಮೇಲೇರಿ ಮನದ ಮೇಲೆ ಕೋಡಿವರಿವಂಥವುಗಳು-ಎಂಬಂಥ ಮಾತುಗಳಿಂದ ವರ್ಣಿಸಲಾಗಿದೆ. ಆ ದ್ರಷ್ಟಾರರು, ಆವಿರ್ಭಾವಕರು ಪರಸತ್ಯದ ಬೆಳಕನ್ನು ತಮ್ಮ ಕತ್ತಲಿಡಿದ ಮನೋಧರ್ಮದ ಮೇಲೆ ಮೂಡುವಂತೆ ಮಾಡುತ್ತಾರೆ; ತಮ್ಮ ಜೈವಿಕ ಸತ್ತೆಯ ಆವರಣವನ್ನು ಅದು ತನ್ನ ಹೊಳೆಹೊಳೆವ ಮತ್ತು ಮಧುಮಧುರವಾದ ತೃಪ್ತಿಗಳಿಂದ ತುಂಬುವಂತೆಸಗುತ್ತಾರೆ ; ಅಲ್ಲದೆ, ತಮ್ಮ ಭೌತಿಕ ಅಸ್ತಿತ್ವವನ್ನು ಸೂರ್ಯಶಕ್ತಿಯಿಂದ ವೈಶಾಲ್ಯವನ್ನಾಗಿ ಹಾಗೂ ಅಪಾರಶ್ರೇಯಃ ಸಮೃದ್ಧಿ ಸಂಪನ್ನವನ್ನಾಗಿ ಪರಿವರ್ತಿಸುತ್ತಾರೆ-ಮತ್ತು ಎಲ್ಲೆಲ್ಲೂ ದಿವ್ಯ ಉಷೆಯು ಹುಟ್ಟುವಂತೆ ಎಸಗುತ್ತಾರೆ.

ಆಗ ಮಾನವನಲ್ಲಿ ಪರಸತ್ಯದ ಋತುಗಳು ಪ್ರತಿಷ್ಠಿತವಾಗುತ್ತವೆ-ಹಾಗೇ ದಿವ್ಯ ಅಥವಾ ಕೆಲವು ಸಲ ಆರ್ಯ ಎಂದು ಕರೆಯಲ್ಪಡುವ ಕಾರ್ಯಕ್ರಮಗಳು ವ್ಯವಸ್ಥಿತವಾಗುತ್ತವೆ. ಪರಸತ್ಯದ ವಿಧಿಯು (ನಿಯಮವು) ಅವನ ಕರ್ಮವನ್ನು ಹಿಡಿದು ಮಾರ್ಗದರ್ಶನ ಮಾಡುತ್ತದೆ. ಅವನ ವಿಚಾರದಲ್ಲಿ ಸತ್ಯ ಮಂತ್ರವು ಕೇಳಿ ಬರುತ್ತದೆ. (ಅವನ ದಿವ್ಯ ವಿಚಾರವು, ದರ್ಶನವು, ಮಂತ್ರರೂಪವನ್ನು ತಾಳಿ ಆವಿರ್ಭವಿಸುತ್ತದೆ). ಆಗ ಪರಸತ್ಯದ ಅತ್ತಿತ್ತ ಒಲೆಯದ ಋಜುಮಾರ್ಗಗಳು ತೋರುತ್ತವೆ - ಈ ರಸ್ತೆಯು ಸ್ವರ್ಗದ ತೀರ್ಥ - ದೇವತೆಗಳೂ ಪಿತೃಗಳೂ ಹೋಗುವ ದೇವಯಾನ-ಪಿತೃಯಾನಗಳು. ಏಕೆಂದರೆ ಈ ದಾರಿಯಲ್ಲಿ ದೇವಕರ್ಮಗಳು ನಿರ್ವಿಘ್ನವಾಗಿ ಸಾಗುತ್ತವೆ - ಇದು ನೇರ, ಕಂಟಕರಹಿತ, ಸುಖಕರ, ಸುಲಭಗಮ್ಯ - ನಾವಲ್ಲಿ ಒಮ್ಮೆ ಕಾಲಿಟ್ಟರೆ ಸಾಕು, ಸುಲಭವಾಗಿ ಮುಂದೆ ನಡೆಯುತ್ತೇವೆ. ನಮಗೆ ಅಭಿವ್ಯಕ್ತ ದೇವತೆಗಳು ಮಾರ್ಗದರ್ಶಿಗಳಾಗುತ್ತಾರೆ. ಜ್ಯೋತಿಃಸ್ವರೂಪರಾದ ಪಿತೃಗಳು - ಮಂತ್ರಬಲದಿಂದ, ಮಧ್ಯಬಲದಿಂದ, ಯಜ್ಞಬಲದಿಂದ ನಿರ್ಭಯ ಪ್ರಕಾಶಲೋಕಕ್ಕೆ ಏರಿದರು ; ಮತ್ತು ಅಲ್ಲಿ ಹೋಗಿ ಅತಿಮಾನಸ ಸತ್ತೆಯ ವಿಸ್ತೃತ, ಅನಾವೃತ ಸ್ತರಗಳಲ್ಲಿ ನಿಂತರು. ಈ ಪ್ರಕಾರವಾಗಿ ಮಾನವನೂ ಅವನ ಸಂತತಿಯೂ ಬೇದ ಪ್ರಜ್ಞೆಯ ವಕ್ರ ಚಲನೆಗಳಿಗೆ ಬದಲಾಗಿ ಪರಮಸತ್ಯಪ್ರಜ್ಞ ಮನದಿಂದ ಋಜು ಪದಾರ್ಥಗಳನ್ನು ಪಡೆಯಬೇಕು.

ಏಕೆಂದರೆ, ಯಾವಾಗಲೂ ಸೂರ್ಯಪಥಗಳು, ದಿವ್ಯಾಶ್ವ ಸ್ವರೂಪದ ದಧಿಕ್ರಾವನ್ನನ ನಾಗಾಲೋಟ, ದೇವತೆಗಳ ರಥಚಕ್ರಚಲನೆ-ಈಯೆಲ್ಲವೂ ಅನಾವೃತವೂ ಅಸಂಕುಚಿತವೂ ಆದ ದರ್ಶನದ ವಿಸ್ತಾರವೂ ಸಮತಟ್ಟೂ ಆದ ಪ್ರದೇಶಗಳಲ್ಲಿರುವ ಋಜು ಮಾರ್ಗದಲ್ಲಿ ಹೋಗುತ್ತವೆ. ಆದರೆ ಕೆಳಸತ್ತೆಯ ಪಥಗಳು ವಕ್ರ, ಅಂಕುಡೊಂಕು, ಹೊಂಡ, ಗುಂಡಿಗಳಿಂದ ಕೂಡಿದಂಥವುಗಳು, ಕಾಲಿಗಡ್ಡ ಬರುವ ಕಲ್ಲು ಬಂಡೆಗಳುಳ್ಳವುಗಳು ; ಮತ್ತು ಅಲ್ಲಿ (ಯಾರೇ ಆಗಲಿ) ಹೊಟ್ಟೆ ಹೊಸೆದುಕೊಂಡು ಹಾವಿನಂತೆ ಹರೆಯಬೇಕು; ಅಲ್ಲಿ ದಿವ್ಯ ಶಕ್ತಿಗಳಾವುವೂ

ಬರುವುದಿಲ್ಲ - ಆ ದಾರಿಗಳಲ್ಲಿ ಏರು-ತಗ್ಗುಗಳು ಬಹಳ - ಅವು ಮನುಷ್ಯರ ಕಣ್ಣಿಂದ ಅವರ ಗುರಿಗಳನ್ನು ಮರೆಮಾಡುತ್ತವೆ ; ಅವರು ಹೋಗಬೇಕಾದ ರಾಜಮಾರ್ಗಗಳನ್ನೂ ಅವರಿಗೆ ನೆರವೀವವರನ್ನೂ ಅವರಿಗೆ ಬರಬಹುದಾದ ಅಪಾಯಗಳನ್ನೂ ಅವರ ಅಡಗಿದ ಶತ್ರುಗಳನ್ನೂ ಅವರಿಗೆ ಕಾಣಿಸದಂತೆ ಆ ಒರಟುದಾರಿಗಳು ಮಾಡುತ್ತವೆ. ಪರಮಸತ್ಯದ ದಾರಿಯಲ್ಲಿ ಹೋಗುವುದಕ್ಕೆ ದೇವತೆಗಳ ನೇರವೂ ಸಮಗ್ರವೂ ಆದ ನಾಯಕತ್ವವಿರುತ್ತದೆ ; ಮತ್ತು ದೇಹಮನಗಳ ಪರಿಮಿತಿಗಳನ್ನು ಕಟ್ಟಕಡೆಗೆ ಮೀರಿ ಹೋಗಲು ಸಾಧ್ಯವಾಗುತ್ತದೆ. ಉಚ್ಚ ಸ್ವರ್ಗದ ಮೂರು ಲಸಲ್ಲೋಕಗಳ ಒಡೆಯರಾಗುತ್ತೇವೆ, ಧನ್ಯತೆಯನ್ನುಂಟು ಮಾಡುವ ಅಮರ್ತ್ಯತೆಯನ್ನು ನಾವು ಹೊಂದಿ ಸಂತೋಷಪಡುತ್ತೇವೆ. ದೇವತೆಗಳ ಅತಿಮಾನುಷಾವತಾರಗಳ ಸ್ವರೂಪವನ್ನು ತಾಳುತ್ತೇವೆ-ಉಚ್ಚತರ ಯಾ ದಿವ್ಯ ಸೃಷ್ಟಿಯ ವೈಶ್ವತ್ರಿಕ ರೂಪಗಳನ್ನು ನಾವು ನಮ್ಮ ಮಾನವ ಜೀವಿತದಲ್ಲೇ ರಚಿಸಿಕೊಳ್ಳುತ್ತೇವೆ. ಆಗ ಮಾನವನಿಗೆ ದಿವ್ಯ ಮಾನವ್ಯ ಜನ್ಮಗಳೆರಡೂ ಹಸ್ತಗತವಾಗುತ್ತವೆ. ಅವನು ದ್ವಿಗುಣ ಚಲನೆಯ ಒಡೆಯನಾಗುತ್ತಾನೆ, ಅವನು ಅದಿತಿ-ದಿತಿಯರನ್ನು ಒಟ್ಟಿಗೆ ಧರಿಸುತ್ತಾನೆ - ವೈಯಕ್ತಿಕದಲ್ಲಿ ವೈಶ್ವತ್ರಿಕವನ್ನು ಕಾಣುತ್ತಾನೆ ಮತ್ತು ಸಾಂತದಲ್ಲಿಯೇ ಅನಂತನಾಗುತ್ತಾನೆ.

ಸೂರ್ಯನು ಸಕಾಯಸಂಕೇತನಾಗಿರುವುದು ಈ ಕಲ್ಪನೆಗೇ. ಅವನು ಪರಮಸತ್ಯದ ಬೆಳಕು. ದಿವ್ಯೋಷಸ್ಸನ್ನವನು ಪ್ರಿಯಕರನಾಗಿ ಅನುಸರಿಸುತ್ತಾನೆ ; ಅವಳೆದ್ದು ಅವನ ದಾರಿಯನ್ನು ತೋರಿಸಿದಾಗ ಅದನ್ನು ಹಿಡಿದು ಹೋಗುತ್ತಾನೆ. ಈ ಸ್ಥಿತಿಯಲ್ಲಿ ಅವನು ಮಾನವ್ಯ ಪ್ರಜ್ಞೆಯಲ್ಲಿ ಮೂಡುತ್ತಾನೆ. ಏಕೆಂದರೆ ಉಷೆಯು ಸ್ವರ್ಗಪುತ್ರಿ, ಅದಿತಿಯ ಮುಖ ಯಾ ಶಕ್ತಿ-ಮಾನವನ ಮೇಲೆ ಸದಾ ಬೀಳುವ ದಿವ್ಯ ಪ್ರಕಾಶ ; ಅವಳೇ ಆಧ್ಯಾತ್ಮಿಕ ಐಶ್ವರ್ಯದ ಆಗಮನ ಸ್ವರೂಪಳು - ಒಂದು ಬೆಳಕು, ಶಕ್ತಿ, ಹೊಸಹುಟ್ಟು - ಅವನ ಪಾರ್ಥಿವಾಸ್ತಿತ್ವಕ್ಕೆ ಸ್ವರ್ಗದ ಬಂಗಾರದ ಭಂಡಾರವನ್ನು ಹೊರಸುರಿಯುವವಳು. ಸೂರ್ಯನೆಂದರೆ ಪ್ರತಿಭಾತ ಯಾ ಪ್ರತಿಭಾಮಯ ; ಪ್ರತಿಭಾತ (ಪ್ರಾತಿಭ) ಚಿಂತಕನನ್ನು "ಸೂರಿ" ಎನ್ನಲಾಗುತ್ತದೆ. ಆದರೆ ಆ ಶಬ್ದದ ಮೂಲಧಾತುವು ಸೃಜಿಸು ಎಂಬರ್ಥವನ್ನಲ್ಲದೆ, ಹೆಚ್ಚು ಅಕ್ಷರಶಃ, ಸಡಿಲಿಸು, ಬಿಡುಗಡೆ ಮಾಡು ಯಾ ಮುಂದೋಡು ಎಂದಾಗುತ್ತದೆ. ಏಕೆಂದರೆ ಭಾರತೀಯ ಕಲ್ಪನೆಯ ಪ್ರಕಾರ, ಸೃಷ್ಟಿಯೆಂದರೆ ಹಿಡಿದಿಟ್ಟುಕೊಂಡದ್ದನ್ನು ಬಿಡುಗಡೆ ಮಾಡುವುದು - ಅನಂತಸತ್ತೆಯಲ್ಲಿ ಅಡಗಿರುವುದನ್ನು ಹೊರ ಮೂಡಿಸುವುದು ಎಂದರ್ಥ. ಪ್ರಾತಿಭ ದರ್ಶನ ಮತ್ತು ಪ್ರಾತಿಭ ಸರ್ಜನ ಎಂಬೀಯೆರಡು ಸೂರ್ಯನ ಕರ್ತವ್ಯಗಳು. ಅವನು ಸೂರ್ಯನು ಅರ್ಥಾತ್ ಸ್ರಷ್ಟಾರನು ಮತ್ತು ಅವನು ಸೂರ್ಯನು ಅರ್ಥಾತ್ ಅನಾವರಣಕಾರಕ ದರ್ಶನ, ಸರ್ವಸಾಕ್ಷಿಯಾದವನು.

ಅವನು ಸೃಜಿಸುವುದೇನನ್ನು? ಮೊದಲು ಲೋಕಗಳನ್ನು. ಏಕೆಂದರೆ ಏಕೇವಾದ್ವಿತೀಯ ಅನಂತಸತ್ತಾಕ, ಸ್ವದರ್ಶನಸ್ಥ ಪರಮಾತ್ಮನ ಉರಿವ ಬೆಳಕು ಮತ್ತು ನನ್ನಿಗಳಿಂದ ಪ್ರತಿಯೊಂದೂ ಸೃಷ್ಟವಾಗುತ್ತದೆ. ಆ ಸ್ವದರ್ಶನಕ್ಕೆ ಕಾರಣನು ಅಗ್ನಿ. ಅಗ್ನಿಯು ಆ ಪರಮಾತ್ಮನ ದ್ರಷ್ಟಾರ-ಸಂಕಲ್ಪನು, ಸರ್ವಜ್ಞನಾದ ಸರ್ಜನಶೀಲ ಪ್ರಣೋದನು, ಆ ಸ್ವದರ್ಶನದ (ಆತ್ಮದರ್ಶನದ) ಸರ್ವಶಕ್ತಿ. ಅಗ್ನಿದೇವನು ಆ ಪರಮಾತ್ಮನ ಅನಂತ ಸ್ವದರ್ಶನದ ಬೆಳಕಾದ ಸೂರ್ಯನ ಕಾಯದಿಂದ ಲೋಕ ಸರ್ಗವನ್ನು ಮಾಡಿಸುತ್ತಾನೆ, ಸಡಿಲಿಸಿಬಿಡುತ್ತಾನೆ. ಎರಡನೆಯದಾಗಿ ಈ ಸರ್ವವಸ್ತು ಓತ್ರುವು, ಈ ಸತ್ತೆ ದ್ರಷ್ಟಾರನು ತನ್ನೊಳಗಿಂದ ಅಶುಭ

ಮತ್ತು ನೀಚ ಸೃಷ್ಟಿಗೆ ಬದಲಾಗಿ ಇವುಗಳನ್ನು ಈ ಮಾನವ್ಯ ಕೃಷ್ಣೀಕೃತ ಪ್ರಜ್ಞೆಯನ್ನು ನಮ್ಮಿಂದ ಸಡಿಲಿಸಿ, ದೂರ ಸರಿಸಿ, ಈ ಮಾನವ್ಯ ರಾತ್ರಿಯೊಳಗೆ ಅಪ್ರಮೇಯ ಲೋಕಗಳ ದಿವ್ಯ ಸಾಮಶ್ರುತ್ಯವನ್ನು ಹೊಗಿಸುತ್ತಾನೆ. ಈ ಅಪ್ರಮೇಯ ದಿವ್ಯ ಲೋಕಗಳು ಸ್ವಯಂ ಪ್ರಜ್ಞಾತ (ಆತ್ಮಜ್ಞಾನ ಸಂಪನ್ನ) ಅತಿಮಾನಸ ಮತ್ತು ಅಭಿವ್ಯಕ್ತ ದೇವನ ವ್ಯಾವಹಾರಿಕ ವಿಧಿ ನಿಯಮಗಳಿಂದ ನಿಯತವಾಗಿರುತ್ತವೆ. ಆದರೂ ಈ ಸೃಷ್ಟಿ ಪ್ರಶ್ನೆ ಬಂದಾಗ ಸೂರ್ಯನಾಮವನ್ನೂ ಎಂದೂ ಬಳಸಲಾಗಿಲ್ಲ ; ಉಕ್ತನಾಮವನ್ನು ಅನಂತಜ್ಯೋತಿಯ ಮತ್ತು ಆವಿರ್ಭಾವದ ಶರೀರವೆಂಬ ಅದರ ನಿಷ್ಕ್ರಿಯಾಶೀಲ ಮುಖಕ್ಕಷ್ಟೇ ಅನ್ವಯಿಸುವಂತೆ ಮೀಸಲಿಡಲಾಗಿದೆ. ಅವನ ಸಕ್ರಿಯ ಶಕ್ತಿಯಲ್ಲಿ ಅವನ ಇತರ ನಾಮಗಳಾದ ಸವಿತೃ ಯಾ ಸರ್ಜಕ (ಸೂರ್ಯ-ಸವಿತೃಗಳ ಧಾತು ಮೂಲವೊಂದೇ), ಪೂಷನ್ ಯಾ ಸಂಪೋಷಕ (ಇವನ್ನು ಸೂರ್ಯಪದಕ್ಕೆ ಪರ್ಯಾಯಗಳೆಂಬಂತೆ ಬಳಸಲಾಗಿದೆ) ಎಂಬ ಪದಗಳಿಂದಲೂ ಕೆಲವೊಮ್ಮೆ ಇತರ ಆಕಾರಗಳ ಅಭಿವ್ಯಂಜಕಾರ್ಥಗಳಿಂದಲೂ ಅಲ್ಲದೆ ಈ ವಿಶ್ವ ದೇವನ ಇತರ ಅವತಾರಗಳ ಅಂಕಿತನಾಮಗಳಿಂದಲೂ ಸಂಬೋಧಿಸಲಾಗಿದೆ. ವಿಶ್ವದೇವನು ಸಕಲ ಲೋಕೇಶ್ವರನು ; ಇವನನ್ನು ತ್ವಷ್ಟಾರ ಯಾ ವಸ್ತು ನಿರ್ಮಾಪಕ, ಎಂದೂ ಕರೆಯಲಾಗಿದೆ. ಸವಿತಾರನು ಮಾನವನಲ್ಲಿ ವಿಶೇಷತಃ ಸತ್ಯರೂಪದಲ್ಲಿ ಅಭಿವ್ಯಕ್ತನಾಗುತ್ತಾನೆ. ನಾಲ್ಕು ಮಹಾಸಕ್ರಿಯ ದೇವತೆಗಳಾದ ಮಿತ್ರ, ವರುಣ, ಭಗ ಮತ್ತು ಅರ್ಯಮನ್=ಶುದ್ಧ ವೈಶಾಲ್ಯಾಧಿಪತಿ, ಪ್ರಭಾಮಯ ಸಾಮಶ್ರುತ್ಯದ ಅಧಿಪತಿ, ದಿವ್ಯಭೋಗಾಧಿಪತಿ ಮತ್ತು ಮಹೋದಾತ್ತಬಲಾಧಿಪತಿ - ಇವರು ಉಕ್ತ ಸತ್ಯದ ಅವತರಣದಲ್ಲಿ, ಆವಿರ್ಭಾವದಲ್ಲಿ, ರೂಪಣದಲ್ಲಿ, ವಿಶೇಷತಃ ಪಾಲುಗೊಳ್ಳುವಾಗ, ಸವಿತೃವು ಉದಯಿಸುವನೆನ್ನಲಾಗಿದೆ.

ಆದರೆ ಸೂರ್ಯನು ಸೃಷ್ಟಿಕರ್ತನಾದರೆ, ವೇದವು ಹೇಳುವಂತೆ, ಸೂರ್ಯನೂ ದಿವ್ಯನೇ ಆದರೆ, ಚರಾಚರಗಳ ಆತ್ಮವಾದರೆ, "ವಿಸ್ತಾರವಾಗಿ ಹಬ್ಬಿ ಉರಿಯುವ ಮಹಾಸತ್ಯವಾಗಿ ಸ್ವರ್ಗಾಧಾರ ಸೂತ್ರವೆನ್ನಿಸಿದರೆ" - ಆಗ ಎಲ್ಲಲೋಕಗಳೂ ಪರಸತ್ಯದ ಆ ವಿಧಿಯನ್ನು ಅಭಿವ್ಯಂಜಿಸಬೇಕು ಮತ್ತು ಅವೆಲ್ಲಾ ಅಷ್ಟು ಸಂಖ್ಯೆಯ ಸ್ವರ್ಗಗಳಾಗಬೇಕು. ಹಾಗಾದರೆ ಈ ಸುಳ್ಳು, ಪಾಪ, ಸಾವು ಮತ್ತು ನಮ್ಮ ಮರ್ತ್ಯ ಜೀವನದ ನರಳಾಟ- ಇವೆಲ್ಲಾ ಎಲ್ಲಿಂದ ಬರುತ್ತವೆ? ವಿಶ್ವವ್ಯಾಪಿಕೆಯಾದ ಅದಿತಿಗೆ ಎಂಟು ಜನ ಮಕ್ಕಳಂತೆ ; ಅವೆಲ್ಲಾ ಅವಳ ಹೊಟ್ಟೆಯಿಂದ ಹುಟ್ಟಿದವುಗಳಂತೆ. ಏಳು ಮಕ್ಕಳೊಡನೆ ಅವಳು ದೇವತೆಗಳತ್ತ ಹೋಗುವಳು ; ಆದರೆ ಎಂಟನೆಯ ಮಗನಾದ ಮಾರ್ತಂಡನು ಮರ್ತ್ಯ ಸೃಷ್ಟಿಯವನಾದುದರಿಂದ ಅವನನ್ನವಳು ಎಸೆದು ಬಿಡುತ್ತಾಳೆ. ಸಪ್ತ ಪುತ್ರರೊಡನೆ ಅವಳು ಪರಾಕಾಷ್ಠಾ ಜೀವನದತ್ತ ಹೋಗುತ್ತಾಳೆ. ಅದು ದೇವತೆಗಳ ಮೂಲ ಜೀವನ ಕಾಲ. ಆದರೆ ಮಾರ್ತಾಂಡನು ಅವನು ಬೌದ್ಧಿಕ ಅಪ್ರಜ್ಞಾತದಿಂದ ಹೊರದೆಗೆಯಲ್ಪಟ್ಟು ಮರ್ತ್ಯರ ಹುಟ್ಟು ಸಾವುಗಳ ಮೇಲೆ ಉಸ್ತುವಾರಿ ನೋಡಿಕೊಳ್ಳುವ ಅಧ್ಯಕ್ಷನಾದನು.

ಎಂಟನೆಯ ಸೂರ್ಯನಾದ ಮಾರ್ತಾಂಡನು ಕಪ್ಪು ಯಾ ಶ್ಯಾಮ ನಷ್ಟ ಯಾ ಗುಪ್ತ ಎನ್ನಿಸಿರುವವನು. ರಾಕ್ಷಸರು (ಅಸುರರು, ದೈತ್ಯರು) ಅವನನ್ನು ಹಿಡಿದು ತಮ್ಮ ಕಗ್ಗತ್ತಲಿನ ಗವಿಯಲ್ಲಿ ಅಡಗಿಸಿಟ್ಟಿದ್ದಾರೆ. ಅಲ್ಲಿಂದ ಅವನನ್ನು ದೇವತೆಗಳೂ ದ್ರಷ್ಟಾರರೂ ಬಿಡಿಸಿ ಯಜ್ಞಬಲದ ಮೂಲಕ ಮುಕ್ತನೂ ವೈಭವ ಸಂಪನ್ನನೂ ಆಗುವಂತೆ ಮಾಡಬೇಕು. ಅಲ್ಪಾಲಂಕೃತ

ಭಾಷೆಯಲ್ಲಿ ಹೇಳುವುದಾದರೆ-ಮರ್ತ್ಯ ಜೀವನವು ಶೋಷಿತ, ಗೋಪಿತ, ಪ್ರಚ್ಛಾದಿತ ಸತ್ಯದಿಂದ ನಿಯಂತ್ರಿತವಾಗಿದೆ. ಮಾನವ್ಯ ಭಾವಾವೇಶದ ಮತ್ತು ಜೀವಾತ್ಮ ಸಂಕಲ್ಪ ಎಂಬ ಹೊಗೆಯಿಂದ ಮುಸುಕಲ್ಪಟ್ಟು ಅಥವಾ ಮಲಿನೀಕೃತವಾಗಿ ಭೂಮಿಯ ಮೇಲೆ ಇದ್ದು ಅಗ್ನಿಯೆಂಬ ದಿವ್ಯ ಸಾಕ್ಷಿ ಸಂಕಲ್ಪವು ಹೇಗೆ ಕೆಲಸ ಮಾಡುವುದೋ ಹಾಗೇ ಸೂರ್ಯನೆಂಬ ದಿವ್ಯಜ್ಞಾನವೂ ಕಗ್ಗಾಳು ಕಪ್ಪಿನಲ್ಲಿ ಗೂಢವೂ, ಅಲಭ್ಯವೂ ಆಗಿ ಸಾಮಾನ್ಯ ಮಾನವ್ಯ ಜೀವನದ ಅಜ್ಞಾನ - ಪ್ರಮಾದಗಳ ಬುಟ್ಟಿಯಲ್ಲಿ ಸಿಕ್ಕಿ ಬಿದ್ದಿದೆ. ದ್ರಷ್ಟಾರರು ತಮ್ಮ ವಿಚಾರಗಳಲ್ಲಿಯ ಸತ್ಯದ ಬಲದಿಂದ ಈ ಸೂರ್ಯನನ್ನು ಹುಡುಕಿ ಅವನಿದ್ದ ಕತ್ತಲ ಕೋಣೆಯಿಂದ ಅವನನ್ನು ಹೊರದೆಗೆದು ಸೂರ್ಯ ಸಂಕೇತಿತ ಜ್ಞಾನವನ್ನು ಬಿಡುಗಡೆ ಮಾಡಿ, ಅದರ ಅಭಿನ್ನ ಸರ್ವವ್ಯಾಪಕದರ್ಶನದ ಶಕ್ತಿಯನ್ನು ನಮ್ಮ ಅವಮಾನಸದಲ್ಲಿ ಅಡಗಿರುವ ಉಕ್ತ ದೇವತಾಚಕ್ಷುಸ್ಸನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೆ ; ಅವರು ಉಕ್ತಜ್ಞಾನಸೂರ್ಯನ ಕಿರಣಗಳನ್ನು ಮುಕ್ತಗೊಳಿಸುತ್ತಾರೆ-ಅವರು ದಿವ್ಯೋಷೆಯನ್ನು ಸೃಜಿಸುತ್ತಾರೆ. ದಿವ್ಯ ಮನಃಶಕ್ತಿಯಾದ ಇಂದ್ರನು ದ್ರಷ್ಟ ಸಂಕಲ್ಪನಾದ ಅಗ್ನಿಯು, ಪ್ರಾತಿಭ ಮಂತ್ರಾಧಿಪತಿಯಾದ ಬೃಹಸ್ಪತಿಯು ಮತ್ತು ಮನುಜನಲ್ಲಿ ಅಮರ್ತ್ಯ ಆನಂದನಾಗಿ ಹುಟ್ಟಿದ ಸೋಮನು - ಈ ಎಲ್ಲರೂ. ರಾಕ್ಷಸರು ಕೃತಕವಾಗಿ ನಿರ್ಮಿಸಿದ ಆತಂಕಗಳ ಸ್ವರೂಪದ ಪರ್ವತವನ್ನು ಪರ್ವತದ ಗಟ್ಟಿಯಾದ ಪ್ರದೇಶಗಳನ್ನು ಒಡೆದು ಚೂರು ಚೂರು ಮಾಡುವುದರಲ್ಲಿ ಋಷಿಗಳಿಗೆ, ದ್ರಷ್ಟಾರರಿಗೆ, ನೆರವನ್ನೀಯುತ್ತಾರೆ. ಆಗ ಆ ಆತಂಕಗಳು ಒಡೆದು ಚೂರಾಗುವುವು ಮತ್ತು ಉಕ್ತ ಜ್ಞಾನಸೂರ್ಯನು (ಮಾರ್ತಂಡನು) ನಮ್ಮ ಸ್ವರ್ಗಗಳತ್ತ ಪ್ರಖರ ಪ್ರಕಾಶಮಯನಾಗಿ ಏರುತ್ತಾನೆ ; ಹಾಗೆ ಏರುತ್ತಾ ಹೋಗಿ ಅವನು ಅತಿಮಾನಸ ಪರಮಸತ್ಯದ ಮೇಲೆ ಕಾಲಿಡುತ್ತಾನೆ. "ಆತನು ದೇವತೆಗಳು ಅವನಿಗಾಗಿ ಎಲ್ಲಿ ದಾರಿ ಮಾಡಿರುವರೋ ಅಲ್ಲಿ ಹದ್ದಿನಂತೆ ಆವರಿಸುತ್ತಾ ಹೋಗಿ ತನ್ನ ಗುರಿಯನ್ನು ಮುಟ್ಟುತ್ತಾನೆ;" ಉನ್ನತತರ ಸತ್ತೆಯ ಅತಿಯಾಗಿ ಹೊಳೆವ ಸಾಗರಕ್ಕೆ ತನ್ನ ಚಂಚತ್ ಸಪ್ತಾಶ್ವಗಳೊಡನೆ ತಲುಪುತ್ತಾನೆ. ದ್ರಷ್ಟಾರರು ಅವನನ್ನು ಒಂದು ಹಡಗಿನ ಮೂಲಕ ಆ ಸಾಗರದ ಆಚೆಯ ತೀರಕ್ಕೆ ಮುಟ್ಟಿಸುತ್ತಾರೆ. ನೇಸರಾದ ಸೂರ್ಯನು ಸ್ವತಃ ಬಂಗಾರದ ಹಡಗಾಗಿರಬೇಕು - ಆ ಹಡಗಿನಲ್ಲಿಯೇ ಪೋಷಕನಾದ ಪೂಷನು ಮನುಷ್ಯರನ್ನು ದೌರ್ಜನ್ಯ, ಅಂಧಕಾರ ಮತ್ತು ಪಾಪಗಳಿಂದ ವಿಮೋಚಿಸಿ ಪರಸತ್ಯ ಮತ್ತು ಅಮರ್ತ್ಯತೆಗಳಿಗೆ ಒಯ್ದು ಮುಟ್ಟಿಸುವನು.

ಸೂರ್ಯನ ಪ್ರಥಮ ಲಕ್ಷಣವಿದು : ಅಜ್ಞಾನಮುಕ್ತನಾದ ಮನುಜ ಸಾಧಿಸಿದ ಸತ್ಯದ ಸಮುನ್ನತ ಪ್ರಕಾಶ ಸ್ವರೂಪದಲ್ಲಿರುವುದು. "ಈ ಕತ್ತಲೆಯಾಚೆಗೆ ಒಂದು ಹೆಚ್ಚು ಎತ್ತರದ ಪ್ರಖರತರ ಬೆಳಕನ್ನು ಕಂಡು ನಾವು ಅದನ್ನನುಸರಿಸಿ ಹೋಗಿ ದಿವ್ಯಸತ್ತೆಯಲ್ಲಿರುವ (I.50.10) ದಿವ್ಯಸೂರ್ಯನ ಉಚ್ಚತಮ ಬೆಳಕನ್ನು ಸೇರಿದೆವು." ವಿಚಾರವನ್ನಿಡುವ ವೈದಿಕ ಕ್ರಮವಿದು. ಉಪನಿಷತ್ತಿನಲ್ಲಿ ಇದನ್ನು ಇನ್ನೂ ಹೆಚ್ಚು ತೆರೆದು ಹೇಳಲಾಗಿದೆ. ಸೂರ್ಯನ ಸುಂದರತಮ ರೂಪದಲ್ಲಿ ಮನುಷ್ಯನು "ಅವನೇ ನಾನು" -ಎಂದು ಮುಕ್ತ ದರ್ಶನದಲ್ಲಿ ಏಕಮೇವ ಪುರುಷನನ್ನು ಎಲ್ಲೆಲ್ಲೂ ನೋಡುತ್ತಾನೆ. ಯಾವ ದರ್ಶನವು ಸಾಕ್ಷಾತ್ಕಾರವು, ಅಪರೋಕ್ಷಾನುಭುತಿಯು, ನಮ್ಮ ಅಂಧಕಾರವನ್ನು ಮೀರಿ ಉದಯಿಸುತ್ತದೆಯೋ ಅದು ಸೂರ್ಯನ ಉನ್ನತತರ (ಪ್ರಖರತರ) ಜ್ಯೋತಿಯು. ಅನಂತದ[೧] ದೂರತಮ ಪರಮೋನ್ನತ

---

೧. RV X. 37

ಪ್ರಪಂಚದಲ್ಲಿ - ನಾವು ಇನ್ನೊಂದು ಮಹತ್ತರ ಸತ್ಯದರ್ಶನವನ್ನು ಪಡೆದ ಮೇಲೆ - ಪರಾಕಾಷ್ಠೆಯ ಅತಿಮಾನಸದತ್ತ ಸೋऽಹಮೆಂಬ ಸೂರ್ಯನ ಉನ್ನತತರ ಬೆಳಕು ಹರಿಯುತ್ತದೆ.

ಈ ಪ್ರಖರ ಪ್ರಕಾಶದ ಸೂರ್ಯನನ್ನು ಮಾನವನ ದೇವೋನ್ಮುಖ ಸಂಕಲ್ಪವು ನಿರ್ಮಿಸಿದೆ. ದಿವ್ಯಕಾರ್ಯಕರ್ತರಿಂದ ಅವನನ್ನು ಪರಿಪೂರ್ಣವಾಗಿ ರಚಿಸಲಾಗಿದೆ. ಏಕೆಂದರೆ ಸ್ವಾಸ್ತಿತ್ವದ ಯಜ್ಞ ಅಥವಾ ಯೋಗದಿಂದ - ಆ ಅಸ್ತಿತ್ವದ ಸುದೀರ್ಘ ಶ್ರಮಕಾರ್ಯದ ಮೂಲಕ, ಸ್ತೋತ್ರಾನ - ಸ್ವದಾನಗಳನ್ನು ಪ್ರಚ್ಛನ್ನ ಪರಸತ್ಯದ ಶಕ್ತಿಗಳಿಗೆ ಮಾಡುವುದರ ಮೂಲಕ, ಸಾಧಿಸಿದ ಐಕ್ಯಭಾವದಿಂದ ಮಾನವನು ಮುಟ್ಟುವ ಪರಾಕಾಷ್ಠೆಯ ದರ್ಶನವೇ ಈ ಬೆಳಕು, ಸೋಹಂ ಸೂರ್ಯನು. "ಓ ಸೂರ್ಯನೇ, ಸರ್ವಸಾಕ್ಷೀಭೂತನಾದ ಧೀ ಸ್ವರೂಪನೇ" ಎಂದು ಋಷಿಯು ಕೂಗುತ್ತಾನೆ.- "ಬದುಕಿರುವ ಪ್ರಾಣಿಗಳಾದ ನಾವು ನಮಗೆ ಮಹಾಜ್ಯೋತಿಯನ್ನು ತರುವ, ಧನ್ಯತೆಯ ಸುಖದ ದರ್ಶನ (ಸ್ವಾನುಭೂತಿ) ನಮ್ಮ ಮೇಲೆ ಪ್ರಖರವಾಗಿ ಹೊಳೆದು ಜೀಳುವಂತೆಸಗಿದ ಮತ್ತು ನಿನ್ನ ಮಹೋನ್ನತ ಸಾಮರ್ಥ್ಯದ ವಿಸ್ತೃತ ರಾಶಿಯಲ್ಲಿ ಇಡುವ ಪರಮಾನಂದದತ್ತ ಏರಿದ ನಿನ್ನನ್ನು ನೋಡುವಂತಾಗಲಿ" ಎಂದು - (X.37.8) ನಮ್ಮಲ್ಲಿರುವ ಜೈವಿಕ ಶಕ್ತಿಗಳು, ಜ್ಞಾನಕ್ಕಾಗಿ ಹೋರಾಡುವ ಪಾವಕ ಮಳೆಮೋಡದ ಬಿರುಗಾಳಿಯ ದೇವತೆಗಳು, ದಿವ್ಯಮನವಾದ ಇಂದ್ರನಿಂದ ಸೃಷ್ಟವಾದ ಅವರು, ವರುಣನಿಂದ ಸುಶಿಕ್ಷಿತರಾದ, ಆ ದೇವತಾತ್ಮಗಳು - ವರುಣನ ದಿವ್ಯ ಪಾವಿತ್ರ್ಯ ಹಾಗೂ ದಿವ್ಯ ವೈಶಾಲ್ಯ ಸ್ವರೂಪನಾದುದರಿಂದ - ಈ ಸೂರ್ಯನ ಬೆಳಕಿನಿಂದ ತಮ್ಮ ಭೋಗ್ಯವನ್ನು ಪಡೆಯುತ್ತವೆ.

ಈ ಸೂರ್ಯನ ಬೆಳಕೆಂಬುದು ಆ ದಿವ್ಯ ದರ್ಶನದ ರೂಪವು, ಕಾಯವು. ಇವನನ್ನು ಪರಮ ಸತ್ಯದ ಶುದ್ಧನೂ, ಅಪರೋಕ್ಷ ದೃಷ್ಟನೂ ಆದ ಪ್ರಣೋದ ಎನ್ನಲಾಗಿದೆ. ಪರಮಸತ್ಯವಾದರೋ ಈ ಸೂರ್ಯನು ಉದಯಿಸಿದ ಕೂಲೇ ಸ್ವರ್ಗೀಯ ಬಂಗಾರದಂತೆ ಹೊರಹೊಳೆಯುವುದು ಎಂದು ವರ್ಣಿಸಲಾಗಿದೆ. ಈತನು ಮಹಾದೇವನು, ಮಿತ್ರಾವರುಣರು ಕಂಡ ದರ್ಶನ ಸ್ವರೂಪನು. ಇವನು ದೊಡ್ಡದೂ ಅಜಯ್ಯವೂ ಆದ ದಿವ್ಯ ವಿಸ್ತಾರದ ಕಣ್ಣು, ಅಸೀಮಾಕಾಶದ ಕಣ್ಣು-ಅಂಥ ಸಾಮಥ್ರುತ್ಯದ ದಿವ್ಯಚಕ್ಷುಸ್ಸು. ಮಿತ್ರಾವರುಣರ ನೇತ್ರವೆಂಬುದೇ ಈ ಸೂರ್ಯನ ದರ್ಶನ ಮಹಾಸಾಗರವಾಗಿದೆ. ಅಂಥ ಮಹಾಸತ್ಯವನ್ನು ಕಂಡ ಕಣ್ಣುಳ್ಳವರಿಗೆ ದ್ರಷ್ಟಾರರೆಂದು ನಾವು ಕರೆಯುವುದು. ಈತನೇ ಸ್ವತಃ ವಿಶಾಲದರ್ಶನನು. "ಸೂರ್ಯನು, ದೇವತೆಗಳ ತ್ರಿಪುಟೀಜ್ಞಾನವನ್ನು ಬಲ್ಲವನು, ಅವರ ಅಧಿಕಾಧಿಕತರ ಸಾರ್ವಕಾಲಿಕ ಜನ್ಮಗಳನ್ನು ಬಲ್ಲವನು." ಇವನು ಮಾನವ ಹಾಗೂ ದೇವತೆಗಳೆಲ್ಲವರಲ್ಲಿ ಇರುವ ಎಲ್ಲವನ್ನೂ ಕಾಣುತ್ತಾನೆ. ಈತನು ಮರ್ತ್ಯರಲ್ಲಿಯ "ನೆಟ್ಟಗಿರುವ ವಸ್ತುಗಳನ್ನೂ ವಕ್ರವರ್ತನೆಯನ್ನೂ ಕಂಡು ಅವರ ಚಲನೆಗಳನ್ನು ಕೀಳ್ಗಣಿಸುತ್ತಾನೆ." ಈ ಬೆಳಕುಗಣ್ಣಿನಿಂದಲೇ ಇಂದ್ರನು - ಈ ಸೂರ್ಯನು ಸ್ವರ್ಗದಲ್ಲಿ ಮೂಡುವಂತೆ ಮಾಡಿದವನು - ಆರ್ಯಶಕ್ತಿಗಳನ್ನು ದಸ್ಯುಶಕ್ತಿಗಳಿಂದ ಬೇರ್ಪಡಿಸಿ ನೋಡುತ್ತಾನೆ ಮತ್ತು ಬೆಳಕಿನ ಮಕ್ಕಳನ್ನು ಕತ್ತಲ ಮಕ್ಕಳಿಂದ ಪ್ರತ್ಯೇಕಿಸಿ ಮೊದಲಿನವರನ್ನು ಅವರ ಪೂರ್ಣತೆಗೊಯ್ದು ಮುಟ್ಟಿಸಿ, ಎರಡನೆಯವರನ್ನು ನಾಶ ಮಾಡುತ್ತಾನೆ.

ಆದರೆ ದ್ರಷ್ಟತ್ವವು (ಋಷಿತ್ವವು) ದೂರದರ್ಶನ ಶಕ್ತಿಯೊಡನೆಯೇ, ದೂರಶ್ರವಣ ಶಕ್ತಿಯನ್ನೂ ತರುತ್ತದೆ. ಬೆಳಕಿಗೆ ಋಷಿಯ ಕಣ್ಣು ತೆರೆದಂತೆಯೇ ಅವನ ಕಿವಿಯೂ

ಅನಂತದ ಧ್ವನಿತರಂಗಗಳನ್ನು ಕೇಳುವ ಶಕ್ತಿಯನ್ನು ಪಡೆಯಲು ಬಂಧ ಮುಕ್ತವಾಗುತ್ತದೆ, ಮುದ್ರೆಯೊಡೆದ ಜೀಗದಿಂದ ತೆರೆದ ಬಾಗಿಲ ಕೋಣೆಯಂತಾಗುತ್ತದೆ. ಅವನಿಗೆ ತನ್ನ ವಿಚಾರಗಳಿಗೆ ತಕ್ಕ ರೂಪವಾಗಬಲ್ಲ ಮಂತ್ರವು ಪರಮಸತ್ಯದ ಎಲ್ಲ ಪ್ರದೇಶಗಳಿಂದಲೂ ರೋಮಾಂಚನಗೊಳಿಸುತ್ತಾ ಒಳಹೊಗುವ ಅನುಭವವಾಗುತ್ತದೆ. "ವಿಚಾರವೆದ್ದಾಗ-ಎಲ್ಲಿಂದ?- ಪರಮಸತ್ಯದ ನೆಲೆಯಿಂದ" - ಆಗ ಸೂರ್ಯನು ತನ್ನ ಕಿರಣಗಳಿಂದ ಯೌಗಿಕ ಬೆಳಕಿನ ಹಸುಗಳನ್ನು ವಿಶಾಲ ಬಯಲಿಗೆ ಬಿಡುತ್ತಾನೆ. ಸೂರ್ಯನೇ ಸ್ವತಃ "ಸ್ವರ್ಗಪುತ್ರ" ನಲ್ಲದೆ. "ದೇವಜಾತನಾದ ದೂರದರ್ಶಕ ಜ್ಞಾನಚಕ್ಷುಸ್ಸು" (X.37.1). ಆದರೆ ಅವನು ಸರ್ವೋದಾತ್ತ ಮಂತ್ರದ ಉದ್ಗಾರಕರ್ತನೂ ಹೌದು ಮತ್ತು ಪ್ರತಿಭಾತ ಹಾಗೂ ಪ್ರತಿಭಾಸಕ ವಿಚಾರದ ಪ್ರೇರಕನೂ ಹೌದು. "ಪಾಪ ಮುಕ್ತನಾಗಿ ಏಳುವ ನೀನು ಮಿತ್ರಾವರುಣರಿಗೆ ಹೇಳುವ ಸತ್ಯವು ಈ ದಿನ ನಾವು ಹೇಳುವಂಥದಾಗಲಿ - ನಾವು ನಿನಗೆ ಪ್ರಿಯವಾದ ದೇವತಾಶ್ರಯದಲ್ಲಿ ಅನುಸರಿಸುವಂಥದಾಗಲಿ ; ಆ ಸತ್ಯವು ನಿನಗೆ ಪ್ರಿಯವಾದುದು. ಓ ಅದಿತಿ, ಮತ್ತು ನೀನೂ- ಓ ಅರ್ಯಮನ್ (ನೀವೂ ಕೇಳಿರಿ) (VII.60.1) ಮತ್ತು ಗಾಯತ್ರಿಯಲ್ಲಿ, ವೈದಿಕ ಧರ್ಮದ ಪ್ರಾಚೀನ ಕಾಲದ ಆಯ್ದ ಸೂತ್ರದಲ್ಲಿ, ದೇವತಾತತ್ವದ ಸಮುದಾತ್ತ ಬೆಳಕಾದ ಸೂರ್ಯ ಸವಿತಾರನು ನಮ್ಮ ಅಪೇಕ್ಷಣೀಯ ವಸ್ತುವೆಂದು ಆಮಂತ್ರಿಸಲ್ಪಟ್ಟಿದ್ದಾನೆ- ನಮ್ಮೆಲ್ಲರ ವಿಚಾರಗಳಿಗೂ ಪ್ರಕಾಶಮಯ ಪ್ರೇರಣೆಯನ್ನು ಕೊಡುವ ದೇವತೆಯೆಂದು ಆಹ್ವಾನಿಸಲ್ಪಟ್ಟಿದ್ದಾನೆ.

ಸೂರ್ಯ ಸವಿತೃವು ಸೃಷ್ಟಿಕರ್ತನು. ಈ ಮಾನವನ ದಿವ್ಯ ದರ್ಶನದ ದೇವತಾಕೃತ ಆದರ್ಶದಲ್ಲಿ ದ್ರಷ್ಟಾರನೂ ಸೃಷ್ಟಿಕರ್ತನೂ ಸಂಧಿಸುತ್ತಾರೆ. ಆ ದರ್ಶನದ ಜಯವು, ಈ ಹೆಬ್ಬೆಳಕಿನ ಉದಯವು "ಅದರದೇ ಆದ ಪರಮಸತ್ಯದ ಮನೆಗೇ" ಉನ್ಮುಖವಾಗಿದೆ; ಈ ಮಹಾಸಾಗರದ ಕೋಡಿವರಿಯುವಿಕೆಯು ಮತ್ತೇನೂ ಅಲ್ಲ. ಎರಡನೆಯ ಯಾ ದಿವ್ಯ ಸೃಷ್ಟಿಯು. ಈ ಸಾಗರವು ಸೂರ್ಯನ ದರ್ಶನ-ಸೂರ್ಯನು ಅನಂತವಿಸ್ತಾರದ ಹಾಗೂ ಅನಂತ ಸಾಮಶ್ರುತ್ಯದ ಕಣ್ಣು! ಆಗ ನಮ್ಮಲ್ಲಿರುವ ಸೂರ್ಯನು ಸರ್ವಗ್ರಾಹಕ ದೃಷ್ಟಿಯಿಂದ ಎಲ್ಲ ಲೋಕಗಳನ್ನೂ ಕಾಣುತ್ತಾನೆ, ದಿವ್ಯ ಪ್ರಕಾಶದ ಗೋವ್ರಜಗಳನ್ನಾಗಿ ಎಲ್ಲ ಜನ್ಮಗಳನ್ನೂ ನೋಡುತ್ತಾನೆ. - ಅನಂತೆಯಾದ ಅದಿತಿಯ ಎಲ್ಲ ಕಾಯಗಳನ್ನೂ ಕಾಣುತ್ತಾನೆ. ಈ ಹೊಸ ದರ್ಶನವು ಈ ಸರ್ವವಸ್ತು ಸಾಕ್ಷಾತ್ಕಾರವು, ವಿಚಾರದ ಈ ಹೊಸ ರೂಪಣವು, ಹೊಸ ಕೃತ್ಯವು, ಹೊಸಭಾವನೆಯು ಹೊಸ ಸಂಕಲ್ಪವು - ಪರಮಸತ್ಯದ ಪರಿಭಾಷೆಯಲ್ಲಿಯ ಈ ಹೊಸ ಪ್ರಜ್ಞೆಯು ಪರಮಾನಂದವು, ಪರಮ ಋತವು- ಈ ಅನಂತವೊಂದು ಹೊಸ ಸೃಷ್ಟಿಯು. ನಮ್ಮೊಳಗೆ ಬರುವ ಇದು "ಇನ್ನೊಂದು ಬದಿಯಲ್ಲಿ ಈ ಸಣ್ಣ ಸತ್ತೆಗಿಂತ ಮಹತ್ತರ ಸತ್ತೆಯೆನ್ನಿಸಿದರೂ - ಇದು ಅನಂತದ ಒಂದು ಸ್ವಪ್ನವೇ ಆದರೂ- ಸುಳ್ಳನ್ನು, ಅನೃತವನ್ನು, ತನ್ನಿಂದ ದೂರ ಮಾಡುತ್ತದೆ." ಈ ಹೊಸ ಜನ್ಮವನ್ನು, ಹೊಸ ಸರ್ಗವನ್ನು ನರನಿಗಾಗಿ ತನ್ನ ಪ್ರಕಾಶದಿಂದ ತಯಾರಿಸುವುದೂ ಮೇಲು ಮೇಲಕ್ಕೆ ಪಯಣಿಸುವುದೂ ಸೂರ್ಯನ ಕರ್ತವ್ಯ.

❖ ❖

# ದಿವ್ಯಸ್ವರೂಪದ ಉಷೆಯು

ಸೂರ್ಯನು ದಿವ್ಯ ಸತ್ಯದ ಸುವರ್ಣ ಪ್ರಕಾಶವೂ ದೇವತಾತತ್ವವೂ ಪ್ರತಿಮಾಲಂಕಾರವೂ ಆಗಿರುವಂತೆಯೇ ಉಷೆಯೂ ನಮ್ಮ ಮಾನವ್ಯ ಅಜ್ಞಾನದ ರಾತ್ರಿಯ ಮೇಲೆ ಸಮುದಾತ್ತ ಬೋಧ ಪ್ರಕಾಶವನ್ನು ನಮ್ಮ ಮಾನವ್ಯ ಅಜ್ಞಾನದ ಮೇಲೆ ತೆರೆದು ಬಿಡುವ ದೇವತಾತತ್ವ ಮತ್ತು ಪ್ರತಿಮಾಲಂಕಾರವು. ಸ್ವರ್ಗಸುತೆ ಉಷೆ, ರಾತ್ರಿ ಅವಳ ಸೋದರಿ - ಈ ಇಬ್ಬರೂ ಒಂದೇ ನಾಣ್ಯದ ಎರಡು ಮುಖಗಳು - ಆ ನಾಣ್ಯವೆಂದರೆ ಸಾರ್ವಕಾಲಿಕ ಅನಂತವು. ಲೋಕಗಳು ಏಳುವ ಪೂರ್ಣರಾತ್ರಿಯು ಅಪ್ರಜ್ಞೆಯ ಸಂಕೇತ, ಅಜ್ಞಾನದ ಸಂಕೇತ ; ಅದರ ಅಪ್ಪಟತನವು ರಾತ್ರಿಯ ಪೂರ್ಣತೆಯಲ್ಲಿದೆ, ಅಂಧಂ ತಮಸ್ಸಿನಲ್ಲಿದೆ. ಅದೇ ಅಪ್ರಜ್ಞಾನ ಸಾಗರ - ಕತ್ತಲನ್ನು ಕತ್ತಲು ಮುಸುಕಿಕೊಂಡಿರುವುದು - ಅದರಿಂದ ಆ ಒಂದು ಹುಟ್ಟುವುದು - ಹೇಗೆ? ತನ್ನದೇ ಆದ ಕ್ರಿಯಾಶಕ್ತಿಯ ಮಹತ್ತೆಯಿಂದ. ಹಾಗೆ ಹುಟ್ಟಿದ್ದು ಮೂಲದ "ಏಕೋಽಹಂ" ಎಂಬುದು, ಹುಟ್ಟಿದ ಮೇಲೆ ಬಹುವಾಗುವುದು. ಆದರೆ ನಮ್ಮ ಕಗ್ಗಾಳು ಕಪ್ಪಿನ ಮರ್ತ್ಯ ವಾಸ್ತವ ದೃಷ್ಟಿಯ ಪ್ರಪಂಚದಲ್ಲಿ ಆಳಿಕೆ ನಡೆಯಿಸುತ್ತಿರುವುದು ಆ ಆದಿರಾತ್ರಿಗಿಂತ ಕೆಳಮಟ್ಟದ ಅಂಧಕಾರವು. ಅದು ಸ್ವರ್ಗ-ಭೂಮಿಗಳನ್ನು, ಅಂತರಿಕ್ಷವನ್ನು, ನಮ್ಮ ಮಾನಸ ಹಾಗೂ ಭೌತಿಕ (ಶಾರೀರಿಕ) ಪ್ರಜ್ಞೆಗಳನ್ನು ಮತ್ತು ನಮ್ಮ ಜೈವಿಕ ಸತ್ತೆಯನ್ನು ಮುಸುಕಿರುತ್ತದೆ. ತನ್ನ ವರಗಳ ಆನಂದದೊಡನೆ ಸ್ವರ್ಗಸುತೆ ಉಷೆಯು ತನ್ನ ಪರಸತ್ಯದ ಮಿಂಚಿನಿಂದ ಉದಯಿಸುವುದು ಇಲ್ಲಿಯೇ ; ಕಲಿಕುತನಿಯ ಸೀರೆಯಂಥ ಕತ್ತಲನ್ನು ತೆಗೆದೆಸೆಯುತ್ತಾ ಪ್ರಕಾಶ ವಸ್ತ್ರ ಭೂಷಿತೆಯಾದ ಯುವತಿಯೋ ಎಂಬಂತೆ ಉಷೆಯೆಂಬ ವಧುವು ಧನ್ಯತಾಕರ ಶ್ರೇಯಃಪತಿಗೆ ಸೇರಿದವಳು- ಅವಳು ತನ್ನ ವಕ್ಷಸ್ಥಳದ ಹೊಳಪಿನ ವೈಭವವನ್ನು ತೆರೆದು ತೋರಿಸುತ್ತಾಳೆ, ತನ್ನ ಮಿಂಚುವ ಅಂಗಗಳನ್ನು ಅನಾವೃತಗೊಳಿಸುತ್ತಾಳೆ ಮತ್ತು ಸೂರ್ಯನು ಲೋಕಗಳ ಮೇಲೇರುವ ಏಣಿಗಳ ಮೆಟ್ಟಿಲನ್ನು ಹತ್ತುವಂತೆ ಮಾಡುವಳು.

ನಮ್ಮ ಕತ್ತಲಿನ ರಾತ್ರಿಯು ಸಂಪೂರ್ಣವಾಗಿ ಅಪ್ರಕಾಶಮಯವಾಗಿಲ್ಲ. ಅಲ್ಲೇನೂ ಇಲ್ಲದಿದ್ದರೂ ಎಲ್ಲವೂ ಗಭೀರ ಜಾಡ್ಯವಾಗಿದ್ದರೂ (ಮಾಂದ್ಯವಾಗಿದ್ದರೂ) ದ್ರಷ್ಟ ಸಂಕಲ್ಪ ಸ್ವರೂಪದ ಅಗ್ನಿಯು ದಿವ್ಯ ಜ್ವಾಲೆಯ ನೆರಳಿನಲ್ಲಿ ಕುಳಿತವನಿಗೆ ಆ ಮಸುಕಿನ ಮೂಲಕವೇ ಉರಿದು ಬೆಳಕನ್ನು ನೀಡುತ್ತಾನೆ ; ಹೊತ್ತಿಸದೇ ಇರುವಾಗಲೂ ಅತಿ ಕೆಳಗಿನ ಹಾಗೂ ಅತಿ ಮಹತ್ತಮ ದೇವತೆಯಾಗಿ, ಇಷ್ಟೆಲ್ಲಾ ಭಾವನಾವೇಶ - ಆಶಾಪಾಶಗಳ ಹೊಗೆ ತುಂಬಿದ್ದರೂ, ಅದರ ಮೂಲಕ ತನ್ನ ಕರ್ತವ್ಯವನ್ನು ಈ ನಮ್ಮ ನೆಲದ ಮೇಲೆ ನೆರವೇರಿಸುತ್ತಾನೆ. ಆಮೇಲೆ ಅವನನ್ನು ಮುಂಬೆಳಗಿನ ಯಜ್ಞವೇದಿಕೆಯಲ್ಲಿ ಗುಪ್ತ ದಿವ್ಯ ಪ್ರಕಾಶದ ಸಂಕಲ್ಪ ಹಾಗೂ ಕ್ರತುಗಳ ಸ್ವರೂಪದವನೆಂದು ತಿಳಿದು ಅಗ್ನಿಯನ್ನು ಹೊತ್ತಿಸಲಾಗುತ್ತದೆ. ನಕ್ಷತ್ರಗಳು ಹೊರ ಹೊಳೆಯುತ್ತವೆ ಮತ್ತು ಅನಂತರಾಜನ ಅಜಯ್ಯ ಕಾರ್ಯಕ್ರಮಗಳನ್ನು ವ್ಯಕ್ತಗೊಳಿಸುತ್ತಾ ರಾತ್ರಿಯಲ್ಲಿ ಚಂದ್ರ ಬರುತ್ತಾನೆ. ಇದಕ್ಕೂ ಹೆಚ್ಚಾಗಿ,

ರಾತ್ರಿಯು ತನ್ನ ವಕ್ಷಸ್ಸಿನಲ್ಲಿ ತನ್ನ ಸೋದರಿಯಾದ ಚಂಚದುಷೆಯನ್ನು ಅಡಗಿಸಿಟ್ಟುಕೊಂಡಿರುತ್ತಾಳೆ. ತಮ್ಮ ಬುರುಕಿಯಲ್ಲಿ ಅಡಗಿಸಿದ ಮಾನವ್ಯ ಕರ್ಮದಲ್ಲಿ ನಮಗೆ ದೇವತೆಗಳು ಕಲಿಸಿದ ಜ್ಞಾನಮಯ ಜೀವನವೆಂಬುದು ದಿವ್ಯ ಉಷೆಯ ಜನನಕ್ಕೆ ಸಿದ್ಧತೆ ನಡೆಸುತ್ತದೆ. ಹಾಗೆ ವೇಗವಾಗಿ ಎಚ್ಚಲಿಸಲಾದ ಉಷೆಯು ಪ್ರಕಾಶಮಯ ಸೃಷ್ಟಿಕರ್ತನ ಉನ್ನತ ಸೃಷ್ಟಿಯನ್ನು ಪ್ರಕಾಶಪಡಿಸಲೆಂದು ಹುಟ್ಟಿಸಲ್ಪಟ್ಟಿರುತ್ತಾಳೆ. ಏಕೆಂದರೆ ದಿವ್ಯೋಷೆಯು ಅದಿತಿಯ ಪ್ರಣೋದ ಯಾ ಮುಖವು. ದೇವತೆಗಳ ತಾಯಿಯಾದವಳು ಅದಿತಿ ; ಆದ್ದರಿಂದ ಅವಳ ಮುಖ ಸ್ವರೂಪದ ಉಷೆಯು ತದ್ಭಿನ್ನೆಯಲ್ಲ. ಅವಳು ಮಾನವ ಕುಲಕ್ಕಾಗಿ - ಆ ಕುಲದ ನಿಜ ರೂಪಗಳಲ್ಲಿ - ಅರ್ಥಾತ್ ಸಂಕುಚಿತತೆಯಿಂದ ಮುಕ್ತವಾದ, ಸಣ್ಣತನದ ಆಳ್ತನದಿಂದ ಮತ್ತು ನಮ್ಮ ನೋಟಕ್ಕೆ ಅದೃಶ್ಯವಾಗಿರುವಿಕೆಯಿಂದ ಬಿಡಿಸಿದ ರೂಪಗಳಲ್ಲಿ - ಉಕ್ತ ದೇವತೆಗಳನ್ನು ಹುಟ್ಟಿಸುತ್ತಾಳೆ.

ಆದರೆ ಈ ಮಹಾಕ್ರತುವನ್ನು ಪರಮಸತ್ಯದ ಆಜ್ಞಪ್ತ ತಾರತಮ್ಯದಲ್ಲಿ ಅದರ ನಿಶ್ಚಿತ ಋತುಗಳಲ್ಲಿ, ಯಜ್ಞದ ಹನ್ನೆರಡು ತಿಂಗಳುಗಳಲ್ಲಿ, ಸೂರ್ಯ ಸವಿತಾರನ ದಿವ್ಯ ವರ್ಷಗಳಲ್ಲಿ - ನೆರವೇರಿಸಬೇಕು. ಆದುದರಿಂದ ರಾತ್ರಿ ಉಷಃಕಾಲಗಳ ಸತತವಾದ ಲಯ ಮತ್ತು ಒಂದಾದರ ಬಳಿಕ ಮತ್ತೊಂದು ಬರುವುದು (ಚಕ್ರಾರ ಪಂಕ್ತಿಗತಿಯು) ಕಡೆಯತನಕ ಸಾಗುತ್ತದೆ. ರಾತ್ರಿ=ಬೆಳಕಿನ ದೇಶಪರಿತ್ಯಾಗ ; ಉಷೆ=ಬೆಳಕಿನ ಚಂಚದುದಯ - ಅರ್ಥಾತ್ - ಕತ್ತಲು ನಮ್ಮನ್ನು ಮತ್ತೊಮ್ಮೆ ಆವರಿಸುವುದು ಹಾಗೂ ಆ ಕತ್ತಲ ಬಾಯನ್ನು ತೆರೆದು ಪುನಃ ಬೆಳಕಿನಿಂದ ನಮ್ಮನ್ನು ಆವರಿಸಿ ಪುಲಕಿತಗೊಳಿಸುವುದು. ಎಲ್ಲಿಯವರೆಗೆ? ಸ್ವರ್ಗೀಯ ಜನನವು ಸಿದ್ಧಿಸುವವರೆಗೆ ಮತ್ತು ಅದು ತನ್ನ ಮಹತ್ತೆ, ಜ್ಞಾನ, ಪ್ರೇಮ ಹಾಗೂ ಶಕ್ತಿಗಳಿಂದ ತುಂಬಿ ಪರಿಪೂರ್ಣವಾಗುವವರೆಗೆ. ಈ ಈಚಿನ ರಾತ್ರಿಗಳು, ಯಾವ ಸಂಪೂರ್ಣವಾದ ಕತ್ತಲಿನಲ್ಲಿ ಶತ್ರುಗಳು ಬರುವರೆಂದು ಹೆದರುವೆವೋ ನುಂಗುವ ಭೇದಬುದ್ಧಿಜನಕ ದೆವ್ವ (ರಾಕ್ಷಸ, ಅಸುರ) ಎಂಬಂಥವುಗಳು. ಅಡಗಿಕೊಳ್ಳುವ ಖಾಯಂ ವಸತಿಯೆಂದು ನಾವು ಭಾವಿಸುವೆವೋ, ಆ ರಾತ್ರಿಗಳಿಗಿಂತ ಭಿನ್ನ. ಈ ರಾತ್ರಿಗಳು ಅವಕ್ಕಿಂತ ಸಂತೋಷಕರವಾದ ರಾತ್ರಿಗಳು -ದಿವ್ಯರಾತ್ರಿಗಳು, ದೇವತಾಶೀರ್ವಾದ ಪಡೆದ ರಾತ್ರಿಗಳು; ಏಕೆಂದರೆ, ನಮ್ಮಷ್ಟೇ ಆಗ ದೇವತೆಗಳು ನಮ್ಮ ವಿಕಾಸಕ್ಕಾಗಿ ದುಡಿಯುತ್ತಿರುತ್ತಾರೆ. ಆಗ ಇರುಳು-ಮುಂಜಾವುಗಳು ಆಕೃತಿಯಲ್ಲಿ ಮಾತ್ರ ಭಿನ್ನವಲ್ಲದೆ ಮನಃಸಂಕಲ್ಪದಲ್ಲಿ ಒಂದೇ ಆಗಿ ಒಂದಾದ ಮೇಲೊಂದರಂತೆ ಉಕ್ತ ದಿವ್ಯ ಶಿಶುವಿಗೆ ಮೊಲೆಹಾಲನ್ನೂಡಿಸುತ್ತಿರುತ್ತವೆ. ಆಗ ಕತ್ತಲ ಚಲನಗಳಲ್ಲಿ ಕೂಡಾ ಆ ಪ್ರಸನ್ನ ಸುಖಾವಹ ರಾತ್ರಿಗಳಲ್ಲಿ ಆ ದ್ಯುಮತ್ತರ ದೇವಿಯ ಆವಿರ್ಭವತ್ ಪ್ರಭೆಗಳು ನಮ್ಮ ಅರಿವಿಗೆ ಬರುತ್ತವೆ. ಆದುದರಿಂದ ಕುತ್ಸನು, ಈ ಇಬ್ಬರು ಸೋದರಿಯರು, "ಅಮರ್ತ್ಯರು, ಏಕಪ್ರಿಯತಮನನ್ನುಳ್ಳವರು, ಪರಸ್ಪರ ಒಪ್ಪಂದದಿಂದ ಇವರು ಸ್ವರ್ಗದಲ್ಲಿ ವಿಹರಿಸುತ್ತಾರೆ, ದಿವ್ಯಜ್ಯೋತಿಯ ಬಣ್ಣವಾಗಿ ತಿರುಗುತ್ತಾರೆ" ಅಲ್ಲದೆ "ಈ ಸೋದರಿಯರ ಪಥವು ಉಭಯಸಾಧಾರಣ-ಅನಂತವು ಅವರು ಸೇರತಕ್ಕ ಸ್ಥಳ ; ಇವರಿಬ್ಬರೂ ಆ ಪಥವನ್ನು ಪ್ರದೇಶಗಳನ್ನಾಗಿ ವಿಂಗಡಿಸಿಕೊಳ್ಳುತ್ತಾರೆ - ದೇವತೆಗಳವರಿಗೆ ಹಾಗೆ ಹೇಳಿಕೊಟ್ಟಿದ್ದಾರೆ; ಅವರು ಸಾಧಾರಣರಾದರೂ ಭಿನ್ನರೂಪವುಳ್ಳವರು" ಎಂದು ಸೂಕ್ತಿಸಿದ್ದಾನೆ (I.113.2,3..) ಏಕೆಂದರೆ ಒಬ್ಬಳು ಕಲಿಹಸು, ಕಪ್ಪು ಅನಂತ-ಆದರೂ ಅವಳು ಸ್ವರ್ಗದ ಹೊಳೆವ ಹಾಲನ್ನು ಕರೆಯುವಂತೆ ಮಾಡಬಹುದು ; ಮತ್ತೊಬ್ಬಳಾದರೋ ಗೋವ್ರಜಗಳ ಜ್ಯೋತಿರ್ಮಯಿ ಮಾತೆ.

ಹೀಗೆ ಉಷಸ್ಸುಗಳು ಸತತ ಪರ್ಯಾಯದಿಂದ ಬರುತ್ತಾರೆ - ಮೂರು ಸಾರಿ ಹತ್ತು - ನಮ್ಮ ಮನದ ಯೌಗಿಕ ಸಂಖ್ಯೆಯು - ಮೂವತ್ತು ದಿನಗಳ ಒಂದು ತಿಂಗಳು. ಎಲ್ಲಿಯವರೆಗೆ? ಎಂದಾದರೊಂದು ದಿನ ನಮ್ಮ ಮೇಲೆ ನಮ್ಮ ಪಿತೃ ಪಿತಾಮಹರಿಗಾದ ಅದ್ಭುತ ಅನುಭವವು ಹರಿದು ಕಟ್ಟಿಕೊಂಡು ಜೀಳುವವರೆಗೆ. ಅವರಿದ್ದದ್ದು ಮಾನವ ಕುಲದ ಅತಿ ಪ್ರಾಚೀನ ಕಾಲದಲ್ಲಿ ; ಆಗ ರಾತ್ರಿರಹಿತವಾಗಿ ಉಷಸ್ಸುಗಳು ಮೇಲಿಂದ ಮೇಲೆ ಬರುತ್ತಿದ್ದ ಅವಧಿಯಲ್ಲಿ -ಪ್ರಿಯತಮನನ್ನಾಗಿ ಭಾವಿಸಿ ಸೂರ್ಯನನ್ನವರು ಸುತ್ತಿಕೊಳ್ಳುತ್ತಿದ್ದ ಯುಗದಲ್ಲಿ - ಪ್ರತಿದಿನವೂ ಸೂರ್ಯನು ಮೂಡುವುದನ್ನು ತಿಳಿಸಲು ಮೊದಲೇ ಬರುವ ಉಷಸ್ಸುಗಳಾಗಿರಲಿಲ್ಲ ಅವರು! ಅತಿಮಾನಸ ಪ್ರಜ್ಞೆಯು ಮಾನವ ಮನೋಧರ್ಮದಲ್ಲಿ ತುಂಬಿಕೊಂಡು ಹೊಳೆದಾಗ ಮತ್ತು ಸಾರ್ವಕಾಲಿಕ ಬೆಟ್ಟದ ಶಿಖರದ ಮೇಲೆ ದೇವತೆಗಳು ವರ್ಷಾವಧಿಯ ದಿನವನ್ನು ಹೊಂದಿರುವಾಗ, ಅಂಥ ಅನುಭವವು ಸಾಧ್ಯವು. ಆಗ ಮೂಡುವ ಉಷೆಯು "ಅತ್ಯುತ್ತಮೆ" "ಅತ್ಯುನ್ನತೆ", "ವೈಭವಪೂರ್ಣೆ", "ಶತ್ರು ಪಲಾಯನಕಾರಿಣಿ, ಪರಮಸತ್ಯದ ಕಾವಲುಗಾರ್ತಿ, ಸತ್ಯಜಾತೆ, ಆನಂದಮಯಿ, ಅತ್ಯುನ್ನತ ಸತ್ಯಭಾಷಿಣಿ, ಸರ್ವವರ ಸಂಪನ್ನೆ - ಅವಳು ದೇವತಾ ತತ್ವಗಳ ಜನನ ಅವತರಣಗಳನ್ನು ತರುತ್ತಾಳೆ" (I.113.12.) ಈ ನಡುವೆ ಪ್ರತಿಯೊಬ್ಬ ಉಷಸ್ಸೂ ಆಗಲೇ ಮುನ್ನಡೆದವರ ದಾರಿ ಮತ್ತು ಧ್ಯೇಯಗಳನ್ನು ಅನುಸರಿಸುವ ಉದ್ದ ಸಾಲಿನ ಮೊದಲಿಗಳಾಗಿ ಬರುತ್ತಾಳೆ; ಪ್ರತಿಯೊಬ್ಬಳೂ ತನ್ನ ಆಗಮನದಿಂದ ಜೀವಿತವನ್ನು ಮೇಲಕ್ಕೆ ಏರುವಂತೆ ಪ್ರೇರಿಸಿ, "ಸತ್ತು ಹೋದ ಯಾವನೋ ಒಬ್ಬನನ್ನು" ನಮ್ಮಲ್ಲಿ ಜಾಗರಿತಗೊಳಿಸುವಳು. (I.113.8.) "ದೇವತೆಗಳ ತಾಯಿ, ಅನಂತದ ಪ್ರಣೋದ, ಯಜ್ಞದಿಂದೆದ್ದು ಬಂದ ವಿಸ್ತಾರವಾದ ದರ್ಶನ-ಎನ್ನಿಸಿದ ಅವಳು ಆತ್ಮದ ಆಲೋಚನೆಗೆ ಅಭಿವ್ಯಂಜನೆಯನ್ನೀಯುವಳು ಹಾಗೂ ಹುಟ್ಟಿದ್ದರಲ್ಲೆಲ್ಲಾ ನಮಗೆ ವೈಶ್ವತ್ರಿಕ ಜನ್ಮವನ್ನು ಕೊಡುತ್ತಾಳೆ. (I.113.19.)

ವೈದಿಕ ಋಷಿಗಳು ಸ್ಫೂರ್ತಕವಿಗಳು ; ಅವರು ಭೌತಿಕ ನಿಸರ್ಗದ ಸೌಂದರ್ಯ ಮತ್ತು ವೈಭವಗಳೊಳಹೊಕ್ಕರು. ಆದುದರಿಂದ ಈ ಪಾರ್ಥಿವ ಮುಂಬೆಳಗಿನ ಆಕರ್ಷಕ ಹಾಗೂ ಚೆಲುವಾದ ಸಂಕೇತವಿತ್ತುದನ್ನು ಬಹಳ ಚೆನ್ನಾಗಿ ಬಳಸಿಕೊಳ್ಳದಿರಲಾರದಾದರು. ಆದರೆ ನಾವು ಎಚ್ಚರಿಕೆಯಿಲ್ಲದೆ ಓದಿದರೆ ಅಥವಾ ಅವರ ಕಾವ್ಯಮಯ ಅಲಂಕಾರಕ್ಕೆ ಅತಿಯಾಗಿ ಅಂಟಿಕೊಂಡರೆ ಅವರ ಸೂಕ್ತಗಳ ಗಭೀರತರ ಅರ್ಥವನ್ನು ತಿಳಿಯದೆ ಹೋದೇವು ಅಥವಾ ಅದನ್ನು ದೂರೀಕರಿಸಿಯೇವು. ಆದರೆ ಈ ಸುಂದರ ದೇವತೆಯ ಯಾವ ಸೂಕ್ತದಲ್ಲೂ ಅವರು ನಮಗೆ ಮಿಂಚುವ ಸೂಚನೆಗಳನ್ನು, ಪ್ರಬೋಧಕ ವಿಶೇಷಣಗಳನ್ನು, ಸಂಕೇತದ ದಿವ್ಯ ಅರ್ಥವನ್ನು ನೆನಪು ಮಾಡಿಕೊಡುವ ಗಂಭೀರವಾದ ಯೌಗಿಕ ಪದ ಸಂಹತಿಗಳನ್ನು ಕೊಡಲು ಮರೆತಿಲ್ಲ. ವಿಶೇಷತಃ ಅವರು ಹೊಳೆವ ದನಗಳ ಗುಂಪುಗಳೆಂಬ ಕಿರಣಗಳ ರೂಪಕವನ್ನು ಬಳಸುವಾಗ ಮತ್ತು ಅದರ ಸುತ್ತಲೂ ಯೌಗಿಕ ನಿದರ್ಶನ ಕಥೆಯಾಗಿ ಅಂಗಿರಸರ ವೃತ್ತಾಂತವನ್ನು ಹೆಣೆವಾಗ ಅಂಥ ಸೂಚನೆಗಳನ್ನು ಕೊಟ್ಟೇ ಇದ್ದಾರೆ. ಆ ವೃತ್ತಾಂತ ಹೀಗಿದೆ : ನಮ್ಮ ಮೇಲೆ ಉಷೆ ಬೆಳಗಬೇಕು-ಹೇಗೆ?-ಸಪ್ತಾಸ್ಯನಾದ ಅಂಗಿರಸನ ಮೇಲೆ ಬೆಳಗಿದಂತೆ. ಹಾಗೇ ನವಗ್ವ, ದಶಗ್ವರೆಂಬ ದ್ರಷ್ಟಾರರು ಐಕ್ಯದಿಂದ ತಮ್ಮ ಆತ್ಮವಿಚಾರ ಮಾತ್ರದಿಂದ, ಪ್ರಬೋಧೋದಯ ಹೇತುವಾದ ಮಂತ್ರದಿಂದ "ಅಂಧಕಾರದ ಕೋಟೆಯೊಳಗಿನ ಕೊಟ್ಟಿಗೆಗಳನ್ನು ಒಡೆದು ತೆರೆದದ್ದು ಮತ್ತು ಪಣಿಗಳವುಗಳಲ್ಲಿ ಬಚ್ಚಿಟ್ಟಿದ್ದ ಸೂರ್ಯನ ಹೊಳೆವ ಗೋವ್ರಜಗಳನ್ನು ಬಿಡಿಸಿದ್ದು - ಆ ಪಣಿಗಳು ಲುಬ್ಧರೂ ರಾತ್ರಿಂಚರ ವಣಿಗ್‌ಜನರಾಗಿದ್ದದ್ದು - ಇವೆಲ್ಲಾ ಉಕ್ತ ನಿದರ್ಶನ ಕಥೆಯ ಅಂಗಗಳು. ಉಷೆಯ ಕಿರಣಗಳು ಈ ಹೊಳೆವ ದನಗಳಿಂದ ಸಡಿಲಾಗಿ ಹೊರ ಹೊರಡುವಂಥವುಗಳು. ಸ್ವತಃ ಉಷೆಯರೇ ಆ ಗುಂಪುಗೂಡಿದ ಪ್ರಬೋಧ

ಪ್ರಭೆಗಳ ಮುಕ್ತ ಊರ್ಧ್ವಮುಖ ಚಲನೆಗಳೆಂದು ಉತ್ಪ್ರೇಕ್ಷಿಸಲಾಗಿದೆ. ಪವಿತ್ರರೂ ಪವಿತ್ರೀಕಾರಿಕೆಯರೂ ಆದ ಅವರು ಕೊಟ್ಟಿಗೆಯನ್ನೊಡೆದು ತೆರೆಯುತ್ತಾರೆ. ಉಷೆಯು ಗೋವ್ರಜಗಳ ಪರಮಸತ್ಯ ಸಂಪನ್ನೆಯಾದ ತಾಯಿಯು ; ಅವಳೇ ಸ್ವತಃ ಹೊಳೆವ ಧೇನು ಮತ್ತು ಅವಳ ಹಾಲು ಸ್ವರ್ಗದ ದಿವ್ಯಫಲ - ಆ ಹೊಳೆವ ಹಾಲನ್ನು ದೇವತೆಗಳ ಮಧ್ಯದೊಡನೆ ಮಿಶ್ರ ಮಾಡಲಾಗುತ್ತದೆ. ಇತ್ಯಾದಿಗಳು ಉಕ್ತ ಕಥೆಯ ವಿಸ್ತಾರಗಳು.

ಈ ಉಷೆಯು ನಮ್ಮ ಭೂಮಿಯನ್ನಲ್ಲದೆ ಸರ್ವಲೋಕಗಳನ್ನೂ ಬೆಳಗುತ್ತಾಳೆ. ನಮ್ಮ ಉತ್ತರೋತ್ತರ ಸತ್ತಾಸ್ತರಗಳನ್ನು ವ್ಯಕ್ತಗೊಳಿಸುವುದರಿಂದ ನಾವು ನಮಗೆ ಸಾಧ್ಯವಾದ "ವಿವಿಧ ಜೀವನಗಳನ್ನು" ನೋಡಬಹುದು. ಸೂರ್ಯನೇತ್ರದಿಂದ ಅವಳವುಗಳನ್ನು ಅನಾವರಿಸುವುದರಿಂದ ಮತ್ತು "ಸಂಭೂತಿಯ ಲೋಕಗಳನ್ನು" ಮುಂದೆ ಮಾಡಿಕೊಂಡು "ಅವುಗಳ ಮೇಲೆ ಎತ್ತರದಲ್ಲವಳು ಅಮರ್ತ್ಯತೆಯ ದರ್ಶನವಾಗಿ ನಿಲ್ಲುತ್ತಾಳೆ." (III.61.3) ಜಗಚ್ಚಕ್ಷುವಾಗಿ ಹೊಳೆದು ಅಗಲವಾಗಿ ನಿಲ್ಲುವವಳು ಅವಳೇ ; ಮತ್ತು ಅವಳ ಪ್ರಿಯತಮನಾದ ಸೂರ್ಯನಂತೆಯೇ ಅವಳು ದರ್ಶನ ದಾತ್ರಿಯಷ್ಟೇ ಆಗಿರದೆ, "ಪ್ರತಿಯೊಬ್ಬ ವಿಚಾರಿಗೂ ಅವಳು ಮಂತ್ರವನ್ನೊದಗಿಸಿ-ಕೊಡುತ್ತಾಳೆ." ಅವಳು ಆತ್ಮನಲ್ಲಿರುವ ವಿಚಾರಕ್ಕೆ ತಕ್ಕ ಅಭಿವ್ಯಂಜನಾರೂಪವನ್ನು ಒದಗಿಸಿಕೊಡುತ್ತಾಳೆ. ಕೇವಲ ಸ್ವಲ್ಪದರ್ಶಿಗಳಿಗೆ ಅವಳು ವಿಶಾಲ ದೃಷ್ಟಿಯನ್ನಿತ್ತು ಎಲ್ಲ ಲೋಕಗಳ ಅಭಿವ್ಯಕ್ತಿಯನ್ನು ಮಾಡಿ ತೋರಿಸುತ್ತಾಳೆ. ಏಕೆಂದರೆ, ಅವಳು ವಿಚಾರದ ದೇವತಾತತ್ವ ; ಅವಳು "ದಿವ್ಯವಿಧಿಯಂತೆ ಚಲಿಸುವ ಬಹುವಿಚಾರಾಧಿಷ್ಠಾತ್ರಿಯಾದ ದಿವ್ಯ ಯುವತಿಯು (III.61.1.) ಅವಳು ಪ್ರತ್ಯಕ್ಷಜ್ಞಾನಾಧಿಷ್ಠಾತ್ರಿ, ಅವಳ ಹತ್ತಿರ ಪೂರ್ಣಸತ್ಯವಿದೆ. ಅವಳು ಸರ್ವವಿಧದ ಪ್ರಕಾಶಗಳಲ್ಲಿ ಅತ್ಯುಚ್ಚ ಪ್ರಕಾಶ ಸ್ವರೂಪಳು ಮತ್ತು ಅವಳು ವಿವಿಧ ಸರ್ವಂಕಷ (ಸರ್ವಾವಾರಕ) ಸುಪ್ರಜ್ಞಾತ ದರ್ಶನವಾಗಿ ಹುಟ್ಟಿದ್ದಾಳೆ. ಕತ್ತಲಿಂದ ಹೊರಗೇಳುವ ಪೂರ್ಣಜ್ಞಾನದ ಬೆಳಕವಳು. "ಈ ಕತ್ತಲೆಯ ಇನ್ನೊಂದು ಪಾರಕ್ಕೆ ಇವಳ ಮೂಲಕ ದಾಟಿ ತಲುಪಿದ್ದೇವೆ; ಉಷೆಯು ಒಡೆದೇಳುತ್ತಿದ್ದಾಳೆ ಮತ್ತು ಅವಳು ಜ್ಞಾನಜನ್ಮಗಳನ್ನು ಹುಟ್ಟಿಸಿ ರೂಪಿಸುತ್ತಾಳೆ" ಎಂದು ಉಚ್ಚ ಸ್ವರದಿಂದ ಹೇಳುತ್ತಾನೆ ಋಷಿಯು (I.92.6).

ಈ ಪ್ರಭಾವತಿಯಾದ ಉಷೆಯೊಡನೆ ಪರಮಸತ್ಯದ ಕಲ್ಪನೆಯ ಸಂಬಂಧವನ್ನು ಸತತವಾಗಿ ಹೇಳಲಾಗುತ್ತದೆ. ಸ್ವರ್ಗದ ಪ್ರಬೋಧಾಂಶುಗಳಿಂದ ಅವಳು ಪರಮಸತ್ಯಪೂರ್ಣೆಯಾಗಿ ಬಳುತ್ತಾಳೆ. ಸತ್ಯಮಂತ್ರಗಳನ್ನು ಹೇಳುತ್ತಾ ಅವಳು ಬರುತ್ತಾಳೆ. ಅವಳ ಉಷಸ್ಸುಗಳು ಪ್ರವೇಶಿಸುವಾಗ ಹೊಳೆಯುತ್ತಿರುತ್ತವೆ ; ಏಕೆಂದರೆ ಅವರು ಪರಮಸತ್ಯಜಾತೆಯರು, ಸತ್ಯವತಿಯರು ; ಉಕ್ತ ಸತ್ಯಪೀಠದಿಂದ ಉಷಸ್ಸುಗಳು ಎದ್ದು ಬಂದವರು. ಉಷೆಯು ಪೂರ್ಣಸತ್ಯಗಳ ಚಂಚನ್ನೇತ್ರಿಯು. ಚಿನ್ನ ಪ್ರಕಾಶದ ವಸ್ತುಗಳ ಪ್ರತ್ಯಕ್ಷಕ್ಕೆ ಅವಳು ಎಚ್ಚತ್ತು ಸರ್ವದ್ವಾರಗಳನ್ನೂ ತೆರೆಯುತ್ತಾಳೆ. ಬಲಿಷ್ಠನಾದ ಅಗ್ನಿಯು ಉಷಸ್ಸುಗಳ ಆಧಾರವಾದ ಪರಮಸತ್ಯದ ಆಧಾರದ ಪ್ರೇರಣೆಯನ್ನು ಗ್ರಹಿಸಿ ನಮ್ಮ ಸ್ವರ್ಗದ ಮಹಾವೈಶಾಲ್ಯವನ್ನು ಹೊಗುತ್ತಾನೆ. ಏಕೆಂದರೆ, ಈ ಉಷೆಯ ಬಹಿಃ ಪ್ರಕಾಶನವು "ಮಿತ್ರಾವರುಣರ ವಿಸ್ತೃತ ಜ್ಞಾನ ಸ್ವರೂಪವು ಮತ್ತು ಆನಂದ ವಸ್ತುವಿನಂತೆ ಅದು ಎಲ್ಲೆಲ್ಲೂ ಬೆಳಕು ಅನೇಕ ರೂಪಗಳಿಂದ ಪ್ರಕಾಶಿಸುವಂತೆ, ಆಜ್ಞಾಪಿಸುತ್ತದೆ." (III.61.7)

ಇನ್ನೂ ಹೆಚ್ಚಿನ ಸಂಗತಿಯೆಂದರೆ, ಉಷೆಯು ನಾವು ಬೇಡುವ ಐಶ್ವರ್ಯಗಳನ್ನು ಕೊಡುತ್ತಾಳೆ ಮತ್ತು ದಿವ್ಯಪಥದಲ್ಲಿ ಮಾನವನನ್ನು ನಡೆಯಿಸಿಕೊಂಡು ಹೋಗುತ್ತಾಳೆ. ಅವಳು ಎಲ್ಲ ವರಗಳ ರಾಣಿ ಮತ್ತು ದನ-ಕುದುರೆಗಳ ಸಂಕೇತಗಳಿಂದ ಸೂಚಿತವಾದ ಅವಳೀಯುವ ಐಶ್ವರ್ಯವು

ಎಂದರೆ ಹೆಚ್ಚು ಎತ್ತರದ ಪ್ರಜ್ಞಾಸ್ತರಗಳ ಪ್ರಕಾಶಮಯ, ವೈಪುಲ್ಯವೇ ಆಗಿದೆ. ಅಗ್ನಿಯು ಅವಳನ್ನು ಬೇಡಿ ಅವಳ ಉಷಸ್ಸುಗಳ ಸಾರಭೂತ ವೈದ್ಯುತಾಗಮನ ಶಕ್ತಿಯನ್ನು ಪಡೆಯುತ್ತಾನೆ. ಅವಳು ಮರ್ತ್ಯನಿಗೆ ಸ್ಫೂರ್ತಜ್ಞಾನವನ್ನೂ ಸಾಂಗೋಪಾಂಗ ಶ್ರೇಯಃ ಸಮೃದ್ಧಿಯನ್ನೂ ಕೊಡುತ್ತಾಳೆ. ಪ್ರೇರಣಾ ಪ್ರಣೋದವನ್ನೂ ಯಥೇಷ್ಟ ಕ್ರಿಯಾಶಕ್ತಿಯನ್ನೂ ದಯಪಾಲಿಸುತ್ತಾಳೆ. ಮರ್ತ್ಯರಿಗೆ ತನ್ನ ಬೆಳಕಿನಿಂದ ದಾರಿ ಮಾಡಿಕೊಡುವವಳು ಆಕೆ - ಅವರಿಗವಳು ಸುಖಕರವೂ ನಡೆಯಲು ಸುಲಭವೂ ಆದ ಒಳ್ಳೆಯ ಮಾರ್ಗಗಳನ್ನು ಮಾಡಿಕೊಡುತ್ತಾಳೆ. ಅವಳು ಮಾನವನನ್ನು ಅವನ ಪ್ರಯಾಣದತ್ತ ಪ್ರಚೋದಿಸುತ್ತಾಳೆ. "ನೀನು ಬಲ, ಜ್ಞಾನ, ಮಹಾಪ್ರೇರಣೆಗಳನ್ನು ಕೊಡಲು ಇರುವೆ ; ಧ್ಯೇಯದತ್ತ ಸಾಗುವ ನಮ್ಮ ಚಲನೆಯೇ, ನೀನು ; ನೀನು ನಮ್ಮ ಪ್ರಯಾಣವನ್ನು ಆರಂಭಿಸುವೆ" ಎನ್ನುತ್ತಾನೆ ಋಷಿಯು. ಅವಳದು ಪ್ರಭಾಪಥ ಮತ್ತು ಪರಮಸತ್ಯವು ನೊಗಕ್ಕೆ ಕಟ್ಟಿದ ಕುದುರೆಗಳೊಡನೆ ಅವಳು ಚಲಿಸುತ್ತಾಳೆ. ಅವಳೇ ಪರಮಸತ್ಯವಶಳಾಗಿದ್ದಾಳೆ. ವಾರುಣ ವೈಪುಲ್ಯದ ಪ್ರಭಾವಕ್ಕೊಳಗಾಗಿ ವರ್ತಿಸುತ್ತಾಳೆ. ಪರಿಣಾಮಕರವಾಗಿ ಆಕೆ ಪರಮಸತ್ಯದ ಪಥವನ್ನು ಅನುಸರಿಸುತ್ತಾಳೆ. ಹಾಗೇ ಬಲ್ಲವಳಾದ ಅವಳು ಅದರ ದಿಕ್ಕುಗಳನ್ನು, ಅದರ ಮಾರ್ಗದರ್ಶನಗಳನ್ನು, ಹಾಳು ಮಾಡಳು. "ಆದುದರಿಂದ" ಮಂತ್ರವು - "ಹೇ ದಿವ್ಯೋಷೆಯೇ, ಅಮರಿಯಾದ ನೀನು ನಮ್ಮ ಮೇಲೆ ಬೆಳಕು ಬೀರು ; ನಿನ್ನ ಆನಂದ ರಥದಲ್ಲಿ ಕುಳಿತು ನೀನು ಪರಮಸತ್ಯದ ಮಂತ್ರಗಳನ್ನು ಹೇಳುತ್ತಿರುವೆ ; ಸುನಿಯಂತ್ರಿತ, ಸುವಿಶಾಲ ಬಲಸಂಪನ್ನ ಕುದುರೆಗಳು ನಿನಗೆ ಬಂಗಾರದ ಬಣ್ಣವನ್ನು ತರಲಿ. (III.61.2)

ಎಲ್ಲ ಪಥನೇತಾರರಂತೆಯೇ ಉಷೆಯೂ ಶತ್ರುಘ್ನೆಯು. ಮುಂಬೆಳಗಿನಲ್ಲಿ ಆರ್ಯನು ಏಳುವಾಗ ಜೀವನದ ಹಾಗೂ ಬೆಳಕಿನ ಲೋಭಿಗಳಾದ ಪಣಿಗಳು ಅವಳ ವಿವಿಧ ಜ್ಞಾನರಶ್ಮಿಗಳಿಲ್ಲದ ಅಂಧಕಾರದ ಹೃದಯದಲ್ಲಿ, ಎಚ್ಚರಿಲ್ಲದೆ ನಿದ್ರಿಸುತ್ತಾರೆ. ಸಶಸ್ತ್ರಯೋಧನಂತೆ ಅವಳು ನಮ್ಮ ಶತ್ರುಗಳನ್ನೋಡಿಸಿ, ಮೇಲೆ ಬೀಳುವ ಕುದುರೆಯಂತೆ ಕತ್ತಲನ್ನೂ ಹೊಡೆದೋಡಿಸುತ್ತಾಳೆ. ಸ್ವರ್ಗಸುತೆಯು ಬೆಳಕಿನೊಡನೆ ಬಂದ ಶತ್ರುವನ್ನೂ ಎಲ್ಲ ಕತ್ತಲನ್ನೂ ಓಡಿಸುತ್ತಾಳೆ. ಮತ್ತು ಈ ಬೆಳಕು ಸ್ವರ್ಲೋಕದ ಬೆಳಕು - ನಮಗಾಗಿ ಸೂರ್ಯ ಸವಿತಾರನು ಸೃಷ್ಟಿಸಿದ ಬೆಳಕು. ಏಕೆಂದರೆ, ಅವಳು ಹೊಳೆವ ದಾರಿಗಳ ದಿವ್ಯ ಉಷೆ, ಪರಮಸತ್ಯವಿಸ್ತಾರೆ, ಪ್ರಕಾಶಮಯ ಜಗವನ್ನು ತರುವವಳು ; ಆದುದರಿಂದ ಪ್ರಾತಿಭ ಪ್ರಜ್ಞರು ತಮ್ಮ ವಿಚಾರಗಳಿಂದ ಅವಳನ್ನು ಉಪಾಸಿಸುತ್ತಾರೆ. ಹೆಣೆದ ಬಟ್ಟೆಯನ್ನು ಕಳಚಿ ಒಗೆವಂತೆ ಧನ್ಯತಾಲೋಕಪತಿಯ ಈ ವಧುವು ತನ್ನ ಸರ್ವಸುಗುಣ ಪೂರ್ಣ ಕೆಲಸಗಳಿಂದ ಮತ್ತು ಸರ್ವಭೋಗಪೂರ್ಣ ಪ್ರಿಯಾನುಭವದಿಂದ ಸ್ವರ್ಲೋಕವನ್ನು ಸೃಜಿಸಿ ಸ್ವರ್ಗದ ತುದಿಗಳಿಂದ ಇಡಿ ಭೂಮಿಯ ಮೇಲೆ ತನ್ನ ವೈಭವದಿಂದ ಆ ಅನುಭವವನ್ನು ಹಬ್ಬಿಸುತ್ತಾಳೆ. ತನ್ನ ಪ್ರಹ್ಲಾದಮಯ ದರ್ಶನದಿಂದ ಉನ್ನತೀಕೃತ ಪ್ರಬಲ ಸ್ತರವನ್ನೇರಿ ಸ್ವರ್ಗದಲ್ಲಿ ಪ್ರತಿಷ್ಠಾಪಿಸಿಕೊಂಡು ಅದರ ಮಾಧುರ್ಯ ಮಧುವನ್ನು ಮತ್ತು ಪ್ರದೇಶತ್ರಯವನ್ನು ಹೊರಹೊಮ್ಮಿ ಬೆಳಗುವಂತೆ ಮಾಡುತ್ತಾಳೆ. ಅವಳೆ ಮಹೋಷೆ.

ಆದುದರಿಂದ, "ಏಳು, ಜೀವವೂ ಪ್ರಣೋದವೂ ನಮ್ಮಲ್ಲಿ ಬಂದಿವೆ. ಕತ್ತಲು ಹೋಗಿದೆ, ಬೆಳಕು ಬರುತ್ತಿದೆ. ಸೂರ್ಯ ಪ್ರಯಾಣಕ್ಕಾಗಿ ಅವಳು ದಾರಿಯನ್ನು ಖಾಲಿ ಮಾಡಿದ್ದಾಳೆ. ಎಲ್ಲಿ ದೇವತೆಗಳು ಈ ಇತಿಮಿತಿಗಳನ್ನು ಮೀರಿ ನಮ್ಮ ಅಸ್ತಿತ್ವವನ್ನು ಮುಂದಕ್ಕೊಯ್ಯುತ್ತಾರೋ ಅಲ್ಲಿಗೆ ನಾವು ಹೋಗೋಣ" ಎಂದು ಋಷಿಯು ಘೋಷಿಸುತ್ತಾನೆ. (I .113.16.)

❖ ❖

ಪರಾಕಾಷ್ಠೆಯ ಸುಖ ಸೌಕರ್ಯಗಳನ್ನು ಬಯಸುವ ವಿಚಾರಗಳೆಂಬ ಅಶ್ವಪ್ರಣೋದಗಳನ್ನು ಈ ಪೂಷನು ತನ್ನ ತೇರಿಗೆ ಕಟ್ಟುತ್ತಾನೆ. ಈ ಪ್ರಣೋದಗಳು ಅಜಾತಗಳು (ಅಜಗಳು)[೧] - ಇವು ಪೂಷನ ರಥದ ನೊಗವನ್ನು ಹೊರುತ್ತವೆ.

ರಥ ಪ್ರತಿಮೆಯು, ಪ್ರಯಾಣ ಪ್ರತಿಮೆಯು, ಪಥ ಪ್ರತಿಮೆಯು ಪೂಷನನ ಜೊತೆಗೆ ಯಾವಾಗಲೂ ಬರುವುದೇಕೆಂದರೆ, ಈತನುಂಟುಮಾಡುವ ಬೆಳವಣಿಗೆಯು ಅವಾಙ್ಮಾನಸ ಗೋಚರವಾದ ಸತ್ಯದ ಪೂರ್ಣ ಸ್ವರೂಪದತ್ತಣ ಪ್ರಯಾಣದ ಸ್ವರೂಪವುಳ್ಳದ್ದು. ವೇದೋಕ್ತ ಪಥವು ಯಾವಾಗಲೂ ಪರಮಸತ್ಯ ಪಥವೇ. ಹೀಗೆ ಋಷಿಯು ನಮಗೆ ನೀನು ಸತ್ಯ ಸಾರಥಿಯಾಗೆಂದೂ ವೇದ ವಿಚಾರದ ಕಲ್ಪನೆಯಾಗೆಂದೂ ಜ್ಞಾನವಾಗೆಂದೂ ಪೂಷನನ್ನು ಪ್ರಾರ್ಥಿಸುತ್ತಾನೆ. ಅಲ್ಲದೆ ಪಥದ ಕಲ್ಪನೆಯು ಪದೇ ಪದೇ ಹಾಸುಹೊಕ್ಕಾಗಿರುತ್ತದೆ. ಅಪಾರ ಶ್ರೇಯಃ ಸಮೃದ್ಧಿಯನ್ನು ಗೆಲ್ಲಲು ಹೊರಟ ರಥೋಪಮ ವಿಚಾರಕ್ಕೆ ಹೂಡುವ (ಕುದುರೆಯ) ಮಾರ್ಗದ ಒಡೆಯನು ಪೂಷನ್. ನಮ್ಮ ವಿಚಾರಗಳು ಪೂರ್ಣಗೊಳಿಸಲ್ಪಟ್ಟು ಸಿದ್ಧಿಸಲಿ ಎಂದು ನಮ್ಮ ಪಥಗಳನ್ನು ಪೂಷನು ಪ್ರತ್ಯೇಕಿಸಿ ಗುರುತಿಸುತ್ತಾನೆ. ಜ್ಞಾನದಿಂದ ಈತನು ನಮ್ಮನ್ನು ಆ ದಾರಿಗಳಲ್ಲಿ ಕೊಂಡೊಯ್ಯುತ್ತಾನೆ. ನಮಗವನು ಬಲವಂತವಾಗಿ ಕಲಿಸುತ್ತಾನೆ. - "ಇದು ಹೀಗೆ, ಇದು ಹೀಗೆ" ಎಂದು. ಅದರಿಂದ ನಮಗೆ ನಾವು ಹೋಗಬೇಕೆಂದಿರುವ ಮನೆಗಳ ಪರಿಚಯವಾಗುತ್ತದೆ. ದ್ರಷ್ಟಾರನಾಗಿ ಪೂಷನು ನಮ್ಮ ರಥಗಳ ಕುದುರೆಗಳನ್ನು ಪ್ರಚೋದಿಸುತ್ತಾನೆ. ಉಷೆಯಂತೆ ಈತನೂ ಸುಲಭ ಗಮನಾರ್ಹವಾದ ಸುಖಕರ ದಾರಿಗಳನ್ನು ರಚಿಸುತ್ತಾನೆ. ನಮಗಿವನು ಅಗತ್ಯವಾದ ಸಂಕಲ್ಪ ಶಕ್ತಿಯನ್ನೂ, ಸಾಮರ್ಥ್ಯವನ್ನೂ ದೊರಕಿಸಿಕೊಡುತ್ತಾನೆ. ಉಕ್ತ ದಾರಿಗಳಲ್ಲಿ ಹೋಗುವ ಈತನು ನಮ್ಮಲ್ಲಿಯ ದೌರ್ಜನ್ಯವನ್ನು ಪರಿಹರಿಸುತ್ತಾನೆ. ಈತನ ರಥಚಕ್ರವು ನಮಗೆ ಹಾನಿ ಮಾಡದು, ಅದರ ಚಲನೆಯಲ್ಲಿ ತೊಂದರೆ - ನರಳಿಕೆಗಳೆಂದೂ ನಮಗೆ ಉಂಟಾಗಲಾರವು. ಹಾದಿಯಲ್ಲೇನೋ ಶತ್ರುಗಳಿರುವುದು ನಿಜ ; ಅಂಥ ಪ್ರಯಾಣ ಪರಿಪಂಥಿಗಳನ್ನು ಪೂಷನು ಸಂಹರಿಸುತ್ತಾನೆ. "ಹೇ ಪೂಷನ್, ದಾರಿಯಲ್ಲಿ ನಮಗೆ ದುರ್ಬೋಧ ಮಾಡುವ ಮತ್ತು ತೊಂದರೆ ಕೊಡುವ ತೋಳವನ್ನು ಸದೆಬಡಿ. ಶತ್ರುವು ಕಳ್ಳನು, ಮೂರ್ಖ ಹೃದಂಯಿಯು - ಅವನನ್ನು ನಮ್ಮ ಪ್ರವಾಸದ ಮಾರ್ಗದಿಂದ ದೂರ ಓಡಿಸು. ಯಾವ ದ್ವೈತ ಶಕ್ತಿಯೇ ಆಗಲಿ, ಅದು ನಮ್ಮಲ್ಲಿ ದೌರ್ಜನ್ಯವನ್ನು ಪ್ರಕಟಿಸಲು ಹೊರಟರೆ ಅದನ್ನು - ಆ ದುಃಖಕಾರಕ ಪ್ರಣೋದವನ್ನು ಮೆಟ್ಟಿ ಹುಟ್ಟಡಗಿಸು." (I.42.2-4)

ಹೀಗೆ ನಮ್ಮ (ರಥದ) ಗಾಲಿಗೆ ಅಂಟಿಕೊಳ್ಳುವ ಎಲ್ಲ ಅಡೆತಡೆಗಳನ್ನು ಮೀರಿ, ಜೀವಾತ್ಮನ ದಿವ್ಯ ಪ್ರೋಜ್ವಲ ಪೋಷಕನಾದ ಪೂಷನು ಸೂರ್ಯಸವಿತೃ ನಿರ್ಮಿಸುವ ಆಲೋಕ-ಆನಂದಗಳತ್ತ ಒಯ್ದೇ ಒಯ್ಯುವನು. "ಸರ್ವವಸ್ತುಗಳ ಜೀವಶಕ್ತಿಯಾದ ಮಹಾಜೈವಿಕ ಶಕ್ತಿಯು ನಿನ್ನನ್ನು ಕಾಯುತ್ತದೆ. ಪೂಷನು ನಿನ್ನನ್ನು ನಿನ್ನ ಮುಂದಿರುವ ಮುಂದಾರಿಯಲ್ಲಿ ಕಾಯ್ದೇ ಕಾಯುತ್ತಾನೆ ; ಮತ್ತು ಸತ್ಕರ್ಮಿಗಳಿದ್ದಲ್ಲಿಗೆ, ಅವರೆಲ್ಲಿಗೆ ಹೋದರೋ ಅಲ್ಲಿಗೆ, ದಿವ್ಯ ಸವಿತಾರನು ಒಯ್ದಿಡುತ್ತಾನೆ.

೧. ಈ ಶಬ್ದಕ್ಕೆ ಎರಡರ್ಥಗಳಿವೆ- ಒಂದು ಆಡು, ಎರಡು ಅಜಾತ-ಎಂದು. ಆಡುಕುರಿಗಳ ಅರ್ಥಕೊಡುವ ಪದಗಳನ್ನು ವೇದದಲ್ಲಿ ಪ್ರಚ್ಛನ್ನಾರ್ಥ ಸೂಚಕಗಳನ್ನಾಗಿ ಬಳಸಲಾಗುತ್ತದೆ; ದನಕ್ಕೆ ದ್ವಂದ್ವಾರ್ಥ ವಿರುವ ಹಾಗೆ. ಇಂದ್ರನನ್ನು ಟಗರೆಂದೂ ಎತ್ತೆಂದೂ ಕರೆದಿರುವುದು ಉದಾಹರಣೆ.

ಪೂರ್ಣಸಾಮರ್ಥ್ಯವಂತನನ್ನಾಗಿ ಮಾಡಿ ಕಾರ್ಯವನ್ನು ಮುಗಿಸಿಕೊಡುವವನು. "ಪೂಷನು ನಮ್ಮ ಲಸದ್ ಗೋ ವ್ರಜಗಳನ್ನು ಹಿಂಬಾಲಿಸಿ ಹೋಗಲಿ, ಪೂಷನು ನಮ್ಮ ಯುದ್ಧವಾಜಿಗಳನ್ನು ರಕ್ಷಿಸಲಿ, ಪೂಷನು ನಮಗಾಗಿ ಶ್ರೇಯಃ ಸಂಪತ್ ಸಮೃದ್ಧಿಯನ್ನು ಗೆದ್ದುಕೊಡಲಿ. ಓ ಪೂಷನೇ, ನಮ್ಮ ಧೇನುಗಳನ್ನು ಹಿಂಬಾಲಿಸು..... ಪೂಷನು ತನ್ನ ಬಲಗೈಯನ್ನು ನಮ್ಮೆದುರಿಗೇ ನಮ್ಮ ಮೇಲೆ ಹಿಡಿಯಲಿ ; ನಾವು ಕಳೆದುಕೊಂಡದ್ದನ್ನು ಹಿಂದಕ್ಕೆ ಹೊಡೆದುಕೊಂಡು ಬರಲಿ (VI.54.5,6,10) ಹಾಗೇ ಆತನು ಕಳೆದುಹೋದ ಸೂರ್ಯನನ್ನು ತಿರುಗಿ ತರಲಿ. "ಹೇ ಸ್ಫುರಜ್ಯೋತಿಯಾದ ಪೂಷನೇ, ನಮ್ಮ ಕಳೆದುಹೋದ ಗೋವ್ರಜಗಳನ್ನು ಹೇಗೋ ಹಾಗೇ ವಿವಿಧ ಜ್ವಾಲಾಪೂರ್ಣತೆಯ ಹಾಗೂ ನಮ್ಮ ಸ್ವರ್ಗಗಳನ್ನೆತ್ತಿ ಹಿಡಿದ ದೇವನನ್ನು ನಮ್ಮೆಡೆಗೆ ಕರೆದುಕೊಂಡು ಬಾ. ಪೂಷನು ನಮ್ಮಿಂದ ಮರೆಮಾಚಿ ಗವಿಯಲ್ಲಿ ಅಡಗಿಸಿ ಇಟ್ಟಿದ್ದ ಸ್ಫುರದ್ರಾಜನನ್ನು ಹುಡುಕಿ ತೆಗೆಯುತ್ತಾನೆ. (I.23.13,14) ಈ ದ್ಯುಮದ್ದೇವತೆ ಹಿಡಿದಿರುವ ಹೊಳೆವ ಅಂಕುಶದ ಬಗೆಗೂ ಹೇಳಲಾಗಿದೆ- ಈ ಅಂಕುಶವು ಜೀವಾತ್ಮನ ಆಲೋಚನೆಗಳನ್ನು ತಿವಿಯುತ್ತದೆ ಮತ್ತು ಸ್ಫುರತ್ ಪ್ರಭ ಪ್ರಬೋಧಾಂಶುಗಳನ್ನು ಸಾಧಿಸಿಕೊಳ್ಳಲು ಬೇಕಾದ ಸಾಧನವೂ ಆಗಿದೆ. ಅವನು ನಮಗೆ ಕೊಟ್ಟದ್ದೆಲ್ಲಾ ಸುರಕ್ಷಿತವಾಗಿರುತ್ತದೆ. ಏಕೆಂದರೆ, ಅವನಿಗೆ ಜ್ಞಾನವಿದೆ, ಅವನು ಗೋವ್ರಜವನ್ನು ಕಳೆದುಕೊಳ್ಳುವುದಿಲ್ಲ ಮತ್ತು ಅವನು ನಮ್ಮ ಪರಿವರ್ತನಶೀಲ (ಸಂಭೂತ್ಯಾತ್ಮಕ) ಪ್ರಪಂಚದ ಪಾಲಕನು. ನಮ್ಮ ಸರ್ವ ಪ್ರಪಂಚಗಳ ಸಂಪೂರ್ಣ ಏಕೀಕೃತ ದರ್ಶನಕ್ಕೆ ಕಿಂಚಿತ್ತೂ ನ್ಯೂನವಲ್ಲದ, ವಿವಿಧವಾಗಿ ನಿಯಮಿಸುವ (ನೇಮಕ ಮಾಡುವ) ಮತ್ತು ಸರ್ವಗ್ರಾಹಿಯಾದ ಪ್ರಪಂಚದರ್ಶನವು ಅವನಿಗಿದೆ. ಆದುದರಿಂದ ಅವನು ನಮ್ಮ ಸಾಕುತಂದೆ ಹಾಗೂ ಸಂವರ್ಧಕನಾಗಿದ್ದಾನೆ.ಅವನು ನಮ್ಮ ಸುಖ ಸೌಕರ್ಯಗಳ ಒಡೆಯನು - ಅವನು ನಮ್ಮ ಜ್ಞಾನದ ಆಸ್ತಿಯನ್ನು ಕಳೆಯನು ಮತ್ತು ಎಲ್ಲಿಯವರೆಗೆ ನಾವು ಅವನ ಕರ್ಮವಿಧಾನದಲ್ಲಿ ವಿಧೇಯರಾಗಿರುವೆವೋ ಅಲ್ಲಿಯವರೆಗೆ ನಮಗೆ ಹಾನಿ ಒದಗದು ಮತ್ತು ಸಣ್ಣತನ ಬರಲಾರದು. ಅವನು ಕೊಡುವ ಆತ್ಮ ಸುಖಸ್ಥಿತಿಯು ಪಾಪ-ದೌಷ್ಟ್ಯಗಳೆಲ್ಲವನ್ನೂ ಪರಿಹರಿಸಿ ಇಂದು-ನಾಳೆಗಳನ್ನು ನಮ್ಮ ವೈಶ್ವತ್ರಿಕ ಸತ್ತೆಯಲ್ಲಿ ಇಡೀ ದೇವತಾತತ್ವದ ರಚನೆಗೆ ಅಣಿಗೊಳಿಸುತ್ತದೆ.

ಸೂರ್ಯನು ಜ್ಞಾನಪ್ರಭುವಾದುದರಿಂದ ಪೂಷನ್ ಕೂಡಾ ವಿಶೇಷತಃ ಜ್ಞಾತೃ ಚಿಂತಯಿತೃ ಎನಿಸುತ್ತಾನೆ ; ಹಾಗೂ ದ್ರಷ್ಟೃವಿನ ಚಂಚದ್ವಿಚಾರಗಳ ರಕ್ಷಿತೃವೂ ಆಗುತ್ತಾನೆ.- ಅಲ್ಲದೆ ಇವನು ವಿಚಾರದಲ್ಲಿ ಆನಂದಪಡುವ ಗೋವ್ರಜಗಳ ಕಾವಲುಗಾರನೂ ಹೌದು ಮತ್ತು ಇಡೀ ಜಗದಲ್ಲಿ ಅಂತರ್ಯಾಮಿಯೂ ಹೌದು ಹಾಗೂ ಸರ್ವವ್ಯಾಪಿಯಾಗಿ ರಚನಾತ್ಮಕ ಜ್ಞಾನವೆಲ್ಲದರ ಸಾಕುತಂದೆಯೂ ಹೌದು. ಈ ಸಂವರ್ಧಕನೇ ಪ್ರತಿಭಾಚಕ್ಷುಷ್ಮಂತರ ಮನಗಳನ್ನು ಕದಡಿ ಪ್ರೇರಿಸುವಾತನು ಮತ್ತು ಅವರ ವಿಚಾರಗಳ ಪೂರ್ಣೀಕರಣ ಮತ್ತು ಸಿದ್ಧಿಗಳ ಸಾಧನ ಸ್ವರೂಪನೂ ಆಗಿದ್ದಾನೆ. ಚಿಂತಕನಾದ ಮಾನವನಲ್ಲಿ ಕಾರ್ಯಾರಂಭಕ್ಕಾಗಿ ನಿಂತವನೀತನು - ಅವನ ಪ್ರತಿಭಾಮಯ ಮನದ ಸಹಚರನೂ ಆಗಿದ್ದಾನೆ. ಆ ಸ್ಥಾನದಿಂದ ಇವನು ಉಕ್ತ ಪಥದಲ್ಲಿ ಮುನ್ನಡೆಸಿಕೊಂಡು ಹೋಗತಕ್ಕವನೂ ಆಗಿದ್ದಾನೆ. ಅಶ್ವ-ಗೋಜಯಕಾರಕ ವಿಚಾರವನ್ನು ನಮ್ಮಲ್ಲಿ ಪೂಷನು ಉದ್ಭವಿಸುವಂತೆ ಮಾಡುತ್ತಾನೆ. ಎಲ್ಲ ಭೌಮ ಶ್ರೇಯಃ ಸಮೃದ್ಧಿ ವಿಸ್ತಾರಗಳನ್ನೂ ನಮ್ಮಲ್ಲೀತನು ಉಂಟು ಮಾಡುತ್ತಾನೆ. ಈತನು ಸರ್ವಚಿಂತಕ ಸ್ನೇಹಿತನು. ವಧುವನ್ನು ಅವಳ ಪ್ರಿಯತಮನು ಪ್ರೀತಿಸುವಂತೆ ಇವನು (ಋಷಿ ಮನೋಗತ ಆಧ್ಯಾತ್ಮಿಕ) ವಿಚಾರ ಪುಷ್ಟಿಯನ್ನು ಪ್ರೀತಿಸುತ್ತಾನೆ.

# ಸಂಪೋಷಕನಾದ ಪೂಷನು

ನಮ್ಮಲ್ಲಿಯ ದಿವ್ಯ ಕರ್ಮವನ್ನು ಈ ಕೂಡಲೇ ಮಾಡಿ ಮುಗಿಸಲು ಸಾಧ್ಯವಾಗದುದರಿಂದ ದೇವತಾತತ್ವವನ್ನು ಈಗಿಂದೀಗ ಸೃಷ್ಟಿಸುವುದು ಅಸಾಧ್ಯ. ಆದರೆ ದ್ಯುಮದ್ವಿಕಾಸ ಮಾತ್ರದಿಂದ ಮತ್ತು ಉಷಸ್ಸುಗಳ ಉತ್ತರೋತ್ತರ ಅಭಿವ್ಯಕ್ತಿಗಳ ಮೂಲಕ ಸಾಧಿಸಿದ ಸತತಾಭ್ಯಾಸದಿಂದ ಹಾಗೂ ಕಾಲಾವಧಿಕ ದ್ಯುಮತ್ ಸೂರ್ಯನ ಪುನಃ ಸಂದರ್ಶನಗಳಿಂದ (ದ್ಯುಮತ್‌ಸೂರ್ಯ=ಮಹಾಸೂರ್ಯಶಕ್ತಿ) ಸೂರ್ಯ ಶಕ್ತಿಯು ಸಂಪೋಷಕ (ಸಂವರ್ಧಕ) ಪೂಷನ್ ಎಂಬ ಮತ್ತೊಂದು ರೂಪದಲ್ಲಿ ಪ್ರಕಟವಾಗುತ್ತದೆ. ಪೂಷನ್ ಎಂಬ ಪದದ ಮೂಲ ಧಾತುವಾದ 'ಪುಷ್" ಎಂಬುದಕ್ಕೆ ಸಂವರ್ಧಿಸು, ಪೋಷಿಸು, ಸಾಕು ಎಂಬ ಅರ್ಥವಿದೆ. ಋಷಿಗಳಾಶಿಸುವ ಆಧ್ಯಾತ್ಮಿಕ ಸಂಪತ್ತೆಂದರೆ ಈ ಪ್ರಕಾರ ದಿನೇ ದಿನೇ ಅಭಿವೃದ್ಧಿ ಹೊಂದುವ, ಹೆಚ್ಚಾಗುವ, ಐಶ್ವರ್ಯವು-ಅಂದರೆ-ಈ ಪೋಷಕ ಸೂರ್ಯನ ಪ್ರತಿಸಲದ ಪುನರುದಯವು. ಆಧಿಕ್ಯ ಯಾ ವೃದ್ಧಿ (ಪುಷ್ಟಿ) ಎಂಬುದು ಋಷಿಗಳ ಮರುಕಳಿಸುವ ಪ್ರಾರ್ಥನೆ. ಪೂಷನು ಸೂರ್ಯಶಕ್ತಿಯ ಈ ಲಕ್ಷಣವನ್ನು ಪ್ರತಿನಿಧಿಸುತ್ತಾನೆ. ಅವನು "ಅಪರಿಮಿತ ಶ್ರೇಯಃ ಸಮೃದ್ಧಿಯ ಒಡೆಯ, ಯಜಮಾನ; ನಮ್ಮ ಬೆಳವಣಿಗೆಗಳ ಪ್ರಭುವು, ನಮ್ಮ ಸಹಕರ್ಮಚಾರಿಯು." ಪೂಷನು (ಪೂಷನ್ನನು) ನಮ್ಮ ಯಜ್ಞವನ್ನು ಶ್ರೀಮಂತಗೊಳಿಸುವವನು. ವಿಸ್ತಾರನಾದ ಪೂಷನು ತನ್ನ ಕ್ರಿಯಾಶಕ್ತಿಯಿಂದ ನಮ್ಮ ತೇರನ್ನು ಮುಂದೋಡಿಸುತ್ತಾನೆ. ನಮ್ಮ ಶ್ರೇಯಃ ಸಮೃದ್ಧಿಗಳ ಕರ್ತನಾಗುತ್ತಾನೆ. ಸ್ವತಃ ಪೂಷನೇ ದಿವ್ಯ ಸಂಪತ್ತಿನ ಧಾರೆ ಮತ್ತು ಅದರ ಸಾರಬಾಹುಲ್ಯ ಸ್ವರೂಪನು, ದುಂದು ಮಾಡುವಷ್ಟರ ಮಟ್ಟಿನ ತತ್ಸಾರ ಸ್ವರೂಪನು, ಎಂದು ವರ್ಣಿಸಲಾಗಿದೆ. ಅವನದರ ಆಹ್ಲಾದರತ್ನ ಭಾಂಡಾಗಾರನು ಮತ್ತು ನಮ್ಮ ಸುಖ ಸೌಕರ್ಯಗಳ ಸಹಚರನು.

ಅಜ್ಞಾನ ರಾತ್ರಿಯ ಪುನರಾವರ್ತನೆಯು ಉತ್ತರೋತ್ತರವಾಗಿ ಉದಯಿಸುವ ಉಷಸ್ಸುಗಳ ನಡುವೆ ತಲೆ ಹಾಕುತ್ತದೆ. ಇದು ಸೂರ್ಯನ ಗೋವ್ರಜಗಳ ನಷ್ಟವನ್ನು, ಪದೇ ಪದೇ ದ್ರಷ್ಟಾರನಿಂದ ಪಣಿಗಳು ಕದ್ದುಕೊಂಡು ಹೋಗುವುದನ್ನು ಮತ್ತು ಕೆಲವು ಸಲ ಸೂರ್ಯನೇ ಕಳೆದು ಹೋಗುವುದನ್ನು ಪ್ರತಿಮಿಸುತ್ತದೆ. ಗೋವ್ರಜಗಳನ್ನೋ ಸೂರ್ಯನನ್ನೋ ಪಣಿಗಳು ಅಡಗಿಸಿ ಇಡುವುದು, ಅವಮಾನಸದ ನಿರುತ್ತೇಜಕ ಗುಹೆಯಲ್ಲಿ. ಪೂಷನು ಪೋಷಿಸುವುದು ಪರಮ ಸತ್ಯದ ಅಳಿಸಿಹೋಗುತ್ತಿರುವ ಪ್ರಬೋಧರಶ್ಮಿಗಳನ್ನು ಪುನರಾಕಲಿಸುವುದನ್ನವಲಂಬಿಸಿದೆ. ಆದುದರಿಂದ ಈ ದೇವತೆಯು ಇಂದ್ರನೊಡನೆ ಜೋಡಿಸಲ್ಪಟ್ಟಿದ್ದಾನೆ. ಇಂದ್ರನು ಮನೋಬಲದದೇವತೆ, ಪೂಷನ ಸಹೋದರ, ಗೆಳೆಯ, ಯುದ್ಧದಲ್ಲಿ ಸಹಾಯಕ, ಕದ್ದ ಮಾಲನ್ನು ಮರಳಿ ಬಲಾತ್ಕಾರದಿಂದ ಪಡೆಯುವುದರಲ್ಲಿ ನೆರವೀವನು. ಅವನು ಗೋವ್ರಜಗಳನ್ನು ಗೆದ್ದಿಟ್ಟುಕೊಳ್ಳಲು ಬಯಸುವ ನಮ್ಮ ಆತಿಥೇಯನನ್ನು

ಎಂದರೆ ಹೆಚ್ಚು ಎತ್ತರದ ಪ್ರಜ್ಞಾಸ್ತರಗಳ ಪ್ರಕಾಶಮಯ, ವೈಪುಲ್ಯವೇ ಆಗಿದೆ. ಅಗ್ನಿಯು ಅವಳನ್ನು ಬೇಡಿ ಅವಳ ಉಷಸ್ಸುಗಳ ಸಾರಭೂತ ವೈದ್ಯುತಾಗಮನ ಶಕ್ತಿಯನ್ನು ಪಡೆಯುತ್ತಾನೆ. ಅವಳು ಮರ್ತ್ಯನಿಗೆ ಸ್ಫೂರ್ತಜ್ಞಾನವನ್ನೂ ಸಾಂಗೋಪಾಂಗ ಶ್ರೇಯಃ ಸಮೃದ್ಧಿಯನ್ನೂ ಕೊಡುತ್ತಾಳೆ. ಪ್ರೇರಣಾ ಪ್ರಣೋದವನ್ನೂ ಯಥೇಷ್ಟ ಕ್ರಿಯಾಶಕ್ತಿಯನ್ನೂ ದಯಪಾಲಿಸುತ್ತಾಳೆ. ಮರ್ತ್ಯರಿಗೆ ತನ್ನ ಬೆಳಕಿನಿಂದ ದಾರಿ ಮಾಡಿಕೊಡುವವಳು ಆಕೆ - ಅವರಿಗವಳು ಸುಖಕರವೂ ನಡೆಯಲು ಸುಲಭವೂ ಆದ ಒಳ್ಳೆಯ ಮಾರ್ಗಗಳನ್ನು ಮಾಡಿಕೊಡುತ್ತಾಳೆ. ಅವಳು ಮಾನವನನ್ನು ಅವನ ಪ್ರಯಾಣದತ್ತ ಪ್ರಚೋದಿಸುತ್ತಾಳೆ. "ನೀನು ಬಲ, ಜ್ಞಾನ, ಮಹಾಪ್ರೇರಣೆಗಳನ್ನು ಕೊಡಲು ಇರುವೆ ; ಧ್ಯೇಯದತ್ತ ಸಾಗುವ ನಮ್ಮ ಚಲನೆಯೇ, ನೀನು ; ನೀನು ನಮ್ಮ ಪ್ರಯಾಣವನ್ನು ಆರಂಭಿಸುವೆ" ಎನ್ನುತ್ತಾನೆ ಋಷಿಯು. ಅವಳದು ಪ್ರಭಾಪಥ ಮತ್ತು ಪರಮಸತ್ಯವು ನೊಗಕ್ಕೆ ಕಟ್ಟಿದ ಕುದುರೆಗಳೊಡನೆ ಅವಳು ಚಲಿಸುತ್ತಾಳೆ. ಅವಳೇ ಪರಮಸತ್ಯವಶಳಾಗಿದ್ದಾಳೆ. ವಾರುಣ ವೈಪುಲ್ಯದ ಪ್ರಭಾವಕ್ಕೊಳಗಾಗಿ ವರ್ತಿಸುತ್ತಾಳೆ. ಪರಿಣಾಮಕರವಾಗಿ ಆಕೆ ಪರಮಸತ್ಯದ ಪಥವನ್ನು ಅನುಸರಿಸುತ್ತಾಳೆ. ಹಾಗೇ ಬಲ್ಲವಳಾದ ಅವಳು ಅದರ ದಿಕ್ಕುಗಳನ್ನು, ಅದರ ಮಾರ್ಗದರ್ಶನಗಳನ್ನು, ಹಾಳು ಮಾಡಳು. "ಆದುದರಿಂದ" ಮಂತ್ರವು - "ಹೇ ದಿವ್ಯೋಷೆಯೇ, ಅಮರಿಯಾದ ನೀನು ನಮ್ಮ ಮೇಲೆ ಬೆಳಕು ಚೀರು ; ನಿನ್ನ ಆನಂದ ರಥದಲ್ಲಿ ಕುಳಿತು ನೀನು ಪರಮಸತ್ಯದ ಮಂತ್ರಗಳನ್ನು ಹೇಳುತ್ತಿರುವೆ ; ಸುನಿಯಂತ್ರಿತ, ಸುವಿಶಾಲ ಬಲಸಂಪನ್ನ ಕುದುರೆಗಳು ನಿನಗೆ ಬಂಗಾರದ ಬಣ್ಣವನ್ನು ತರಲಿ. (III.61.2)

ಎಲ್ಲ ಪಥನೇತಾರರಂತೆಯೇ ಉಷೆಯೂ ಶತ್ರುಘ್ನೆಯು. ಮುಂಬೆಳಗಿನಲ್ಲಿ ಆರ್ಯನು ಏಳುವಾಗ ಜೀವನದ ಹಾಗೂ ಬೆಳಕಿನ ಲೋಭಿಗಳಾದ ಪಣಿಗಳು ಅವಳ ವಿವಿಧ ಜ್ಞಾನರಶ್ಮಿಗಳಿಲ್ಲದ ಅಂಧಕಾರದ ಹೃದಯದಲ್ಲಿ, ಎಚ್ಚರಿಲ್ಲದೆ ನಿದ್ರಿಸುತ್ತಾರೆ. ಸಶಸ್ತ್ರಯೋಧನಂತೆ ಅವಳು ನಮ್ಮ ಶತ್ರುಗಳನ್ನೋಡಿಸಿ, ಮೇಲೆ ಚೀಲುವ ಕುದುರೆಯಂತೆ ಕತ್ತಲನ್ನೂ ಹೊಡೆದೋಡಿಸುತ್ತಾಳೆ. ಸ್ವರ್ಗಸುತೆಯು ಬೆಳಕಿನೊಡನೆ ಬಂದ ಶತ್ರುವನ್ನೂ ಎಲ್ಲ ಕತ್ತಲನ್ನೂ ಓಡಿಸುತ್ತಾಳೆ. ಮತ್ತು ಈ ಬೆಳಕು ಸ್ವರ್ಲೋಕದ ಬೆಳಕು - ನಮಗಾಗಿ ಸೂರ್ಯ ಸವಿತಾರನು ಸೃಷ್ಟಿಸಿದ ಬೆಳಕು. ಏಕೆಂದರೆ, ಅವಳು ಹೊಳೆವ ದಾರಿಗಳ ದಿವ್ಯ ಉಷೆ, ಪರಮಸತ್ಯವಿಸ್ತಾರೆ, ಪ್ರಕಾಶಮಯ ಜಗವನ್ನು ತರುವವಳು ; ಆದುದರಿಂದ ಪ್ರಾತಿಭ ಪ್ರಜ್ಞರು ತಮ್ಮ ವಿಚಾರಗಳಿಂದ ಅವಳನ್ನು ಉಪಾಸಿಸುತ್ತಾರೆ. ಹೆಣೆದ ಬಟ್ಟೆಯನ್ನು ಕಳಚಿ ಒಗೆವಂತೆ ಧನ್ಯತಾಲೋಕಪತಿಯ ಈ ವಧುವು ತನ್ನ ಸರ್ವಸುಗುಣ ಪೂರ್ಣ ಕೆಲಸಗಳಿಂದ ಮತ್ತು ಸರ್ವಭೋಗಪೂರ್ಣ ಪ್ರಿಯಾನುಭವದಿಂದ ಸ್ವರ್ಲೋಕವನ್ನು ಸೃಜಿಸಿ ಸ್ವರ್ಗದ ತುದಿಗಳಿಂದ ಇಡಿ ಭೂಮಿಯ ಮೇಲೆ ತನ್ನ ವೈಭವದಿಂದ ಆ ಅನುಭವವನ್ನು ಹಬ್ಬಿಸುತ್ತಾಳೆ. ತನ್ನ ಪ್ರಹ್ಲಾದಮಯ ದರ್ಶನದಿಂದ ಉನ್ನತೀಕೃತ ಪ್ರಬಲ ಸ್ತರವನ್ನೇರಿ ಸ್ವರ್ಗದಲ್ಲಿ ಪ್ರತಿಷ್ಠಾಪಿಸಿಕೊಂಡು ಅದರ ಮಾಧುರ್ಯ ಮಧುವನ್ನು ಮತ್ತು ಪ್ರದೇಶತ್ರಯವನ್ನು ಹೊರಹೊಮ್ಮಿ ಬೆಳಗುವಂತೆ ಮಾಡುತ್ತಾಳೆ. ಅವಳೆ ಮಹೋಷೆ.

ಆದುದರಿಂದ, "ಏಳು, ಜೀವವೂ ಪ್ರಣೋದವೂ ನಮ್ಮಲ್ಲಿ ಬಂದಿವೆ. ಕತ್ತಲು ಹೋಗಿದೆ, ಬೆಳಕು ಬರುತ್ತಿದೆ. ಸೂರ್ಯ ಪ್ರಯಾಣಕ್ಕಾಗಿ ಅವಳು ದಾರಿಯನ್ನು ಖಾಲಿ ಮಾಡಿದ್ದಾಳೆ. ಎಲ್ಲಿ ದೇವತೆಗಳು ಈ ಇತಿಮಿತಿಗಳನ್ನು ಮೀರಿ ನಮ್ಮ ಅಸ್ತಿತ್ವವನ್ನು ಮುಂದಕ್ಕೊಯ್ಯುತ್ತಾರೋ ಅಲ್ಲಿಗೆ ನಾವು ಹೋಗೋಣ" ಎಂದು ಋಷಿಯು ಘೋಷಿಸುತ್ತಾನೆ. (I .113.16.)

❖ ❖

ಪರಾಕಾಷ್ಠೆಯ ಸುಖ ಸೌಕರ್ಯಗಳನ್ನು ಬಯಸುವ ವಿಚಾರಗಳೆಂಬ ಅಶ್ವಪ್ರಣೋದಗಳನ್ನು ಈ ಪೂಷನು ತನ್ನ ತೇರಿಗೆ ಕಟ್ಟುತ್ತಾನೆ. ಈ ಪ್ರಣೋದಗಳು ಅಜಾತಗಳು (ಅಜಗಳು)[೧] - ಇವು ಪೂಷನ ರಥದ ನೊಗವನ್ನು ಹೊರುತ್ತವೆ.

ರಥ ಪ್ರತಿಮೆಯು, ಪ್ರಯಾಣ ಪ್ರತಿಮೆಯು, ಪಥ ಪ್ರತಿಮೆಯು ಪೂಷನನ ಜೊತೆಗೆ ಯಾವಾಗಲೂ ಬರುವುದೇಕೆಂದರೆ, ಈತನುಂಟುಮಾಡುವ ಬೆಳವಣಿಗೆಯು ಅವಾಙ್ಮಾನಸ ಗೋಚರವಾದ ಸತ್ಯದ ಪೂರ್ಣ ಸ್ವರೂಪದತ್ತಣ ಪ್ರಯಾಣದ ಸ್ವರೂಪವುಳ್ಳದ್ದು. ವೇದೋಕ್ತ ಪಥವು ಯಾವಾಗಲೂ ಪರಮಸತ್ಯ ಪಥವೇ. ಹೀಗೆ ಋಷಿಯು ನಮಗೆ ನೀನು ಸತ್ಯ ಸಾರಥಿಯಾಗೆಂದೂ ವೇದ ವಿಚಾರದ ಕಲ್ಪನೆಯಾಗೆಂದೂ ಜ್ಞಾನವಾಗೆಂದೂ ಪೂಷನನ್ನು ಪ್ರಾರ್ಥಿಸುತ್ತಾನೆ. ಅಲ್ಲದೆ ಪಥದ ಕಲ್ಪನೆಯು ಪದೇ ಪದೇ ಹಾಸುಹೊಕ್ಕಾಗಿರುತ್ತದೆ. ಅಪಾರ ಶ್ರೇಯಃ ಸಮೃದ್ಧಿಯನ್ನು ಗೆಲ್ಲಲು ಹೊರಟ ರಥೋಪಮ ವಿಚಾರಕ್ಕೆ ಹೂಡುವ (ಕುದುರೆಯ) ಮಾರ್ಗದ ಒಡೆಯನು ಪೂಷನ್. ನಮ್ಮ ವಿಚಾರಗಳು ಪೂರ್ಣಗೊಳಿಸಲ್ಪಟ್ಟು ಸಿದ್ಧಿಸಲಿ ಎಂದು ನಮ್ಮ ಪಥಗಳನ್ನು ಪೂಷನು ಪ್ರತ್ಯೇಕಿಸಿ ಗುರುತಿಸುತ್ತಾನೆ. ಜ್ಞಾನದಿಂದ ಈತನು ನಮ್ಮನ್ನು ಆ ದಾರಿಗಳಲ್ಲಿ ಕೊಂಡೊಯ್ಯುತ್ತಾನೆ. ನಮಗವನು ಬಲವಂತವಾಗಿ ಕಲಿಸುತ್ತಾನೆ. - "ಇದು ಹೀಗೆ, ಇದು ಹೀಗೆ" ಎಂದು. ಅದರಿಂದ ನಮಗೆ ನಾವು ಹೋಗಬೇಕೆಂದಿರುವ ಮನೆಗಳ ಪರಿಚಯವಾಗುತ್ತದೆ. ದ್ರಷ್ಟಾರನಾಗಿ ಪೂಷನು ನಮ್ಮ ರಥಗಳ ಕುದುರೆಗಳನ್ನು ಪ್ರಚೋದಿಸುತ್ತಾನೆ. ಉಷೆಯಂತೆ ಈತನೂ ಸುಲಭ ಗಮನಾರ್ಹವಾದ ಸುಖಕರ ದಾರಿಗಳನ್ನು ರಚಿಸುತ್ತಾನೆ. ನಮಗಿವನು ಅಗತ್ಯವಾದ ಸಂಕಲ್ಪ ಶಕ್ತಿಯನ್ನೂ, ಸಾಮರ್ಥ್ಯವನ್ನೂ ದೊರಕಿಸಿಕೊಡುತ್ತಾನೆ. ಉಕ್ತ ದಾರಿಗಳಲ್ಲಿ ಹೋಗುವ ಈತನು ನಮ್ಮಲ್ಲಿಯ ದೌರ್ಜನ್ಯವನ್ನು ಪರಿಹರಿಸುತ್ತಾನೆ. ಈತನ ರಥಚಕ್ರವು ನಮಗೆ ಹಾನಿ ಮಾಡದು, ಅದರ ಚಲನೆಯಲ್ಲಿ ತೊಂದರೆ - ನರಳಿಕೆಗಳೆಂದೂ ನಮಗೆ ಉಂಟಾಗಲಾರವು. ಹಾದಿಯಲ್ಲೇನೋ ಶತ್ರುಗಳಿರುವುದು ನಿಜ ; ಅಂಥ ಪ್ರಯಾಣ ಪರಿಪಂಥಿಗಳನ್ನು ಪೂಷನು ಸಂಹರಿಸುತ್ತಾನೆ. "ಹೇ ಪೂಷನ್, ದಾರಿಯಲ್ಲಿ ನಮಗೆ ದುರ್ಬೋಧ ಮಾಡುವ ಮತ್ತು ತೊಂದರೆ ಕೊಡುವ ತೋಳವನ್ನು ಸದೆಬಡಿ. ಶತ್ರುವು ಕಳ್ಳನು, ಮೂರ್ಖ ಹೃದಂಥಿಯು - ಅವನನ್ನು ನಮ್ಮ ಪ್ರವಾಸದ ಮಾರ್ಗದಿಂದ ದೂರ ಓಡಿಸು. ಯಾವ ದ್ವೈತ ಶಕ್ತಿಯೇ ಆಗಲಿ, ಅದು ನಮ್ಮಲ್ಲಿ ದೌರ್ಜನ್ಯವನ್ನು ಪ್ರಕಟಿಸಲು ಹೊರಟರೆ ಅದನ್ನು - ಆ ದುಃಖಕಾರಕ ಪ್ರಣೋದವನ್ನು ಮೆಟ್ಟಿ ಹುಟ್ಟಡಗಿಸು." (I.42.2-4)

ಹೀಗೆ ನಮ್ಮ (ರಥದ) ಗಾಲಿಗೆ ಅಂಟಿಕೊಳ್ಳುವ ಎಲ್ಲ ಅಡೆತಡೆಗಳನ್ನು ಮೀರಿ, ಜೀವಾತ್ಮನ ದಿವ್ಯ ಪ್ರೋಜ್ವಲ ಪೋಷಕನಾದ ಪೂಷನು ಸೂರ್ಯಸವಿತೃ ನಿರ್ಮಿಸುವ ಆಲೋಕ-ಆನಂದಗಳತ್ತ ಒಯ್ದೇ ಒಯ್ಯುವನು. "ಸರ್ವವಸ್ತುಗಳ ಜೀವಶಕ್ತಿಯಾದ ಮಹಾಜೈವಿಕ ಶಕ್ತಿಯು ನಿನ್ನನ್ನು ಕಾಯುತ್ತದೆ. ಪೂಷನು ನಿನ್ನನ್ನು ನಿನ್ನ ಮುಂದಿರುವ ಮುಂದಾರಿಯಲ್ಲಿ ಕಾಯ್ದೇ ಕಾಯುತ್ತಾನೆ ; ಮತ್ತು ಸತ್ಕರ್ಮಿಗಳಿದ್ದಲ್ಲಿಗೆ, ಅವರೆಲ್ಲಿಗೆ ಹೋದರೋ ಅಲ್ಲಿಗೆ, ದಿವ್ಯ ಸವಿತಾರನು ಒಯ್ದಿಡುತ್ತಾನೆ.

---

೧. ಈ ಶಬ್ದಕ್ಕೆ ಎರಡರ್ಥಗಳಿವೆ- ಒಂದು ಆಡು, ಎರಡು ಅಜಾತ-ಎಂದು. ಆಡುಕುರಿಗಳ ಅರ್ಥಕೊಡುವ ಪದಗಳನ್ನು ವೇದದಲ್ಲಿ ಪ್ರಚ್ಛನ್ನಾರ್ಥ ಸೂಚಕಗಳನ್ನಾಗಿ ಬಳಸಲಾಗುತ್ತದೆ; ದನಕ್ಕೆ ದ್ವಂದ್ವಾರ್ಥವಿರುವ ಹಾಗೆ. ಇಂದ್ರನನ್ನು ಟಗರೆಂದೂ ಎತ್ತೆಂದೂ ಕರೆದಿರುವುದು ಉದಾಹರಣೆ.

ಪೂಷನು ಸರ್ವ ಪ್ರದೇಶಜ್ಞನು; ಅವನು ನಮ್ಮನ್ನು ಅತ್ಯಂತ ಹಾನಿರಹಿತ ಹಾದಿಯಲ್ಲಿ ಕರೆದುಕೊಂಡು ಹೋಗುವನು. ತನ್ನ ಜ್ಞಾನಬಲದಿಂದ ಸರ್ವಕ್ರಿಯಾಶಕ್ತಿ ಸಂಪನ್ನನಾದ, ಸುಖ ಸೌಕರ್ಯದಾಯಕನಾದ ಉರಿವ ದೇವನು ನಮ್ಮೆದುರಿಗೇ ಸಮಗತಿಯಿಂದ ನಮ್ಮನ್ನು ನಡೆಸಿಕೊಂಡೊಯ್ಯಲಿ. ಭೂಮಿ-ಸ್ವರ್ಗಗಳ ಮೂಲಕ ನಿನ್ನ ಹಾದಿಯ ಮೇಲೆ ಮುಂಬರಿದು ಹೋಗುವಾಗ ಪೂಷನು ಹುಟ್ಟಿದವನು ; ಏಕೆಂದರೆ, ಆತನು ನಮ್ಮನ್ನು ಆಹ್ಲಾದಪೂರ್ಣರನ್ನಾಗಿ ಮಾಡುವ ಎರಡೂ ಪ್ರಪಂಚಗಳಲ್ಲಿ ತಿರುಗಾಡುವವನು. ಇಲ್ಲಿ ಅವನು ತನ್ನ ಜ್ಞಾನದಲ್ಲಿ ಕ್ರಮಶಃ ಪ್ರಸರಿಸುತ್ತಾನೆ ಮತ್ತು ಇವುಗಳಾಚೆಗೂ ಪ್ರಯಾಣ ಮಾಡುತ್ತಾನೆ. (X.17.4-6)



# ಪ್ರಸ್ತಾರನಾದ ಸವಿತೃ

ಝುಗ ಝುಗಿಸುವ ಸೃಷ್ಟಿಕರ್ತನಾದ ಸವಿತಾರನ ಸೃಷ್ಟಿಯಲ್ಲಿ ಹೊಳೆವ ಮುಂಬೆಳಗುಗಳ ಮೆರವಣಿಗೆಯ ಪರಿಣಾಮ, ಸೂರ್ಯನ ದಿವ್ಯ ಪುನರಾಗಮನ, ಪೂಷನ ಪೋಷಣೆಗಳು ಮತ್ತು ಅವನ ಮಾರ್ಗ ನಾಯಕತ್ವ - ಎಂಬೀಯೆಲ್ಲವೂ ಸಾರ ರೂಪದಲ್ಲಿ ಸಂಗೃಹೀತವಾಗಿವೆ. ಎಲ್ಲಿ ಪ್ರಾಚೀನ ಯಜ್ಞಕರ್ಮಿಗಳು ನಮಗಿಂತ ಮೊದಲೇ ಹೋಗಿ ನೆಲೆಸಿದರೋ ಅಲ್ಲೇ ನಮ್ಮನ್ನು ಒಯ್ಯಿಡುವ ದೇವನೆಂದರೆ ಸೂರ್ಯನೇ ; ಅದೇ ಅಪೇಕ್ಷಣೀಯ ಜ್ವಾಲೆ, ಅದೇ ಬಯಸಿದ ದಿವ್ಯ ಪ್ರಸ್ತಾರನ ವೈಭವ ಆ ವೈಭವವನ್ನೇ ದ್ರಷ್ಟಾರನು ಧೇನಿಸಬೇಕು - ಅದರತ್ತಲೇ ದೇವನು ನಮ್ಮ ವಿಚಾರಗಳನ್ನು ಪ್ರೇರಿಸುತ್ತಾನೆ-ಆ ಸರ್ಜನಶೀಲ ದೇವತತ್ವದ ಆನಂದದ ರೂಪಗಳನ್ನೇ ನಮ್ಮ ಜೀವಾತ್ಮನು ಧೇನಿಸುವುದು, ಅದರ ಸನಿಹಕ್ಕೆ ಹೋಗುವಾಗ-ಎಂಬುದೇ ಅಂಥ ಪ್ರೇರಣೆಯ ಕಾರಣವು. ಅದು ಪರಾಕಾಷ್ಠಾತ್ಮಕವಾದ ಸೃಷ್ಟಿ. ಅದರಲ್ಲಿ ಅನಂತೆಯಾದ ಹಾಗೂ ಅವಿಭಕ್ತೆಯಾದ ದೇವಿಯು ತನ್ನ ಮಂತ್ರ ಸಂದೇಶವನ್ನು ಹೇಳುತ್ತಾಳೆ ಮತ್ತು ಸರ್ವನಿಯಾಮಕ ರಾಜದ್ರಾಜರಾದ ವರುಣ, ಮಿತ್ರ, ಅರ್ಯಮರೂ ತಮ್ಮ ಮಂತ್ರೋಪದೇಶವನ್ನು ಉದ್ಗರಿಸುತ್ತಾರೆ ; ಆ ಪರಿಪೂರ್ಣತಾ ಸಿದ್ಧಿಗಾಗಿ ಈಯೆಲ್ಲಾ ದೇವತಾತತ್ವಗಳ ಶಕ್ತಿಯು ಸಂಯುಕ್ತ ಸ್ವೀಕಾರದೊಡನೆ ತದುನ್ಮುಖವಾಗುವುದು.

ಆ ದಿವ್ಯ ಮಂತ್ರವು ಪರಮಸತ್ಯದ ಮಂತ್ರವು ; ಏಕೆಂದರೆ, ಅತಿಮಾನಸ ಸತ್ಯವು ಗುಪ್ತವಾಗಿರುತ್ತದೆ ಮತ್ತು ಅದು ಅನಂತ ಸತ್ತೆಯ ಬುನಾದಿ - ಈ ಬುನಾದಿಯು ನಮ್ಮ ಸಮಧಿರೋಹಣದ ಉನ್ನತತರ (ಉದಾತ್ತತರ) ಪ್ರಜ್ಞಾಸ್ತರಗಳ ಮೇಲೆ ಅನಾವೃತವಾಗಿರುತ್ತದೆ. ನಾವೀಗ ಸ್ವೀಕರಿಸುವುದು ಯಾವುದನ್ನೋ ಅದು ದುಃಸ್ವಪ್ನವು - ಸಾವು ನಮ್ಮನ್ನು ನಿಯಂತ್ರಿಸುತ್ತದೆ ; ಏಕೆಂದರೆ, ನಾವು ಇಲ್ಲಿ ಅಪಜ್ಞಾನ (ಅನೃತ ಪ್ರಜ್ಞೆ) ಎಂಬುದರೊಳಗೆ ಬದುಕಿದ್ದೇವೆ. - ಇದು ಪರಿಮಿತ ಹಾಗೂ ವಿಭಕ್ತ ಬದುಕು - ಇದು ಸರ್ವಭಕ್ಷಕನಿಗೂ ಭಕ್ಷ್ಯವಾಗಿದೆ. ಆದುದರಿಂದ ಇದು ನಿಜವಾದ ಬದುಕಲ್ಲ. ನಿಜವಾದ ಬದುಕಿಗಾಗಿ ನಾವು ಬಹುಕಾಲದವರೆಗೆ ಮಹಾಸೂರ್ಯನತ್ತ ತಿರುಗಿ ನಿರೀಕ್ಷಿಸುತ್ತಿರಬೇಕು - ಅದಕ್ಕಾಗಿ ನಾವು ನಮ್ಮ ವಿಚಾರದಲ್ಲಿ ಪರಿಪೂರ್ಣ ಪ್ರತ್ಯಕ್ಷಾನುಭವಯುಕ್ತವಾದ ಒಂದು ಜ್ಞಾನವನ್ನೂ ಒಂದು ಮಂತ್ರಪದವನ್ನೂ ಹಿಡಿದಿಟ್ಟುಕೊಂಡಿರಬೇಕು. ಒಂದು ಆಹುತಿಯನ್ನಾಗಿ ಒಂದು ಹವಿಸ್ಸನ್ನಾಗಿ, ನಾವು ಆ ಸತ್ಯವನ್ನು ಮುಂತರಬೇಕು. ಅದರಿಂದ ತನ್ನ ಬಂಗಾರದ ಜ್ಯೋತಿರ್ಮಯ ಹಸ್ತಗಳಿಂದ ಉಕ್ತ ದ್ಯುಮದ್ದೇವನು ನಮ್ಮ ಸ್ವರ್ಗಗಳಲ್ಲಿ ಎತ್ತರದಲ್ಲಿ ಉದಯಿಸುವಂತಾಗುತ್ತದೆ ಮತ್ತು ಆತನು ನಮ್ಮ ಮಂತ್ರೋಕ್ತಿಯನ್ನು ಕೇಳುವಂತಾಗುತ್ತದೆ. ಜ್ಞಾನ ವಿಚಾರ ಯುಕ್ತನಾದ, ದೇವತೆಗಳಿಗಾಗಿ ಅಮರ್ತ್ಯತೆಯನ್ನು (ಅಮರತ್ವವನ್ನು) ನಿರ್ಮಿಸುವವನಾದ, ಅವರಿಗಾಗಿ ಅತ್ಯುತ್ಕೃಷ್ಟ ಭೋಗವನ್ನು ಸೃಷ್ಟಿಸುವವನಾದ ಮಹಾಬಲೇಶ್ವರನ ಉನ್ನತತಮ, ವಿಶಾಲತಮ, ಸ್ಥಿತಿಯನ್ನು ಆಯ್ದುಕೊಂಡ ನಾವು ನಮ್ಮಲ್ಲಿ ಆವಾಹಿಸಿಕೊಳ್ಳಬೇಕು. ನಾವು ಸವಿತಾರನ ರಶ್ಮಿಯನ್ನು ವಿಸ್ತರಿಸಿಕೊಳ್ಳಬೇಕು - ಹಾಗೆ ಮಾಡಿದರೆ

ಅವರವರ ಬಾಳಿನೊಡನೆ ಸಮಶ್ರುತಿಗೊಳಿಸಲ್ಪಟ್ಟ ಮತ್ತು ಮನುಷ್ಯಗ್ರಾಹ್ಯವಾಗಿ ಮಾಡಲ್ಪಟ್ಟ ಉನ್ನತತರ ಜೀವನದೊಳಗೆ ಅದು ನಮ್ಮನ್ನು ಒಯ್ಯುಬಿಡುತ್ತದೆ. ಆ ಸೌಕರ್ಯವನ್ನು ಪಡೆಯಲು ನಾವು ಪಾಪ-ದೌರ್ಜನ್ಯಗಳನ್ನು ವರುಣನ ಪಾವಿತ್ರ್ಯ ವಿಸ್ತಾರಗಳಲ್ಲೂ ಮಿತ್ರನ ಸರ್ವಂಕಷ ಸಾಮಶ್ರುತ್ಯದಲ್ಲೂ ಸವಿತಾರನ ಪರಮೋನ್ನತ ಸೃಷ್ಟಿಯಲ್ಲೂ ಮುಳುಗಿಸಿ ಅವುಗಳಿಂದ ಮುಕ್ತರಾಗಬೇಕು.

ಅನಂತರ ಸವಿತಾರನು ದುಃಸ್ವಪ್ನದ (ಐಹಿಕ ಜೀವನದ) ನರಳಾಟವನ್ನು ವಿಸರ್ಜಿಸಿ, ನಮ್ಮಿಂದ ಸಡಿಲಿಸಿ, ದೂರ ಕಳುಹುತ್ತಾನೆ. ಆರ್ಜವಾಪೇಕ್ಷಿಗೆ ಅವನ ಸತ್ತೆಯ ಅಧಿಕ ವಿಸ್ತಾರವನ್ನು ಸೃಜಿಸುತ್ತಾನೆ- ಅದರಿಂದ ನಮ್ಮ ಅಪೂರ್ಣ ಜ್ಞಾನದಿಂದ ಸಹಾ ನಾವು ದೇವೋನ್ಮುಖರಾಗಿ ಬೆಳೆಯುತ್ತೇವೆ. ದೇವತಾ ತತ್ವಗಳಿಂದ ನಮ್ಮ ಜ್ಞಾನವನ್ನವನು ಕಾಯುತ್ತಾನೆ ಮತ್ತು ದೇವತೆಗಳ ವೈಶ್ವತ್ರಿಕ ರೂಪಣದತ್ತ (ರೂಪಗಳತ್ತ) ನಮ್ಮನ್ನು ಒಯ್ಯುತ್ತಾನೆ, ಆ ರೂಪಿತಗಳು ಅನಂತಾದಿತಿಯ ಅವಿಭಕ್ತ ಪ್ರಜ್ಞೆಯಲ್ಲಿರುತ್ತವೆ. ಹಾಗಿರುವುದೇ ನಾವು ಆರಿಸಿಕೊಂಡ ಧ್ಯೇಯ (ಪರಮಾರ್ಥ). ಮನುಜರ ಯಾ ದೇವತೆಗಳ ವಿರುದ್ಧವಾಗಿ ಅಜ್ಞಾನದಲ್ಲಿ ನಾವು ಮಾಡಿದ ವಿಭಕ್ತ, ಶೋಷಿತ ವಸ್ತುದರ್ಶನದಲ್ಲಿ ನಾವೆಸಗಿದ, ಬರೀ ಮರ್ತ್ಯ ಸಂಭೂತಿಯಲ್ಲಿ ಹಾಗೂ ಮಾನವತ್ವದಲ್ಲಿ ನಾವು ಗೈದ ಎಲ್ಲವನ್ನೂ ಅವನು ಹುಟ್ಟಡಗಿಸಿ ನಮ್ಮನ್ನು ಪಾಪಮುಕ್ತರನ್ನಾಗಿ ಮಾಡುವನು. ಏಕೆಂದರೆ, ಅವನೇ ಋತಜನನಹೇತು, ಪರಮಸತ್ಯಜನನಹೇತು.

ಆ ಸತ್ಯವನ್ನಾತನು ನಮ್ಮ ಭೌತಿಕಾಸ್ತಿತ್ವದಲ್ಲಿ, ನಮ್ಮ ಮಾನಸಿಕಾಸ್ತಿತ್ವದ ಶ್ರೀಮದ್ ವೈಪುಲ್ಯದಲ್ಲಿ ಮತ್ತು ಅದರ ಅವ್ಯಯ ವಿಸ್ತಾರದಲ್ಲಿ ನಿರ್ಮಿಸಿ ನಮ್ಮ ಸತ್ತೆಯ ಎಲ್ಲಾ ಲೋಕಗಳನ್ನೂ ಎತ್ತಿ ಹಿಡಿಯುತ್ತಾನೆ. ಹೀಗೆ ಸವಿತಾರನ ಕಾರ್ಯದಲ್ಲಿ, ಅವನು ಪರಮ ಸತ್ಯದ ಜನಕನಾದುದರಿಂದ, ಅವನ ಕಾರ್ಯವನ್ನೂ ಮಿತ್ರಾವರುಣರ ಕಾರ್ಯವನ್ನೂ ನಮ್ಮಲ್ಲಿ ದೇವತೆಗಳು ಎತ್ತಿ ಹಿಡಿಯುತ್ತಾರೆ-ಆ ಕಾರ್ಯಗಳ ಸಾರವು ವಿವಿಧ ತೇಜೋಮಯ-ಆ ಸಾರದ ಸೌಲಭ್ಯವು ಕ್ರಿಯಾಶಕ್ತಿಗಳ ಹಾಗೂ ಪ್ರಬೋಧ ರಶ್ಮಿಗಳ ಸ್ವರೂಪದ್ದು. ಅದು ಕಾರ್ಯ ಪ್ರಚೋದನೆ ಮಾಡುತ್ತಾ ಹೋಗುವುದು ಎಲ್ಲಿಯವರೆಗೆ? ನಮ್ಮ ಹಿಂದೆ, ಮುಂದೆ, ಮೇಲೆ, ಕೆಳಗೆ, ಇರುವ ಸವಿತೃ ತತ್ವವು ಪ್ರತ್ಯಕ್ಷವಾಗುವವರೆಗೆ - ನಾವು ಸುದೂರಗಾಮಿ ಜೀವನ ಸ್ಥಿತಿಯನ್ನು ಹೊಂದುವವರೆಗೆ - ನಮ್ಮ ಅಸ್ತಿತ್ವವನ್ನು ವೈಶ್ವತ್ರಿಕವನ್ನಾಗಿ ಮಾಡಿಕೊಳ್ಳುವವರೆಗೆ ಆ ಸವಿತಾರನು ಹಿರಣ್ಮಯ ಕಾಂತಿಯ ಹಸ್ತಗಳಿಂದ, ಮಾಧುರ್ಯಾಸ್ವಾದವನ್ನು ಮಾಡುವ ನಾಲಿಗೆಯಿಂದ, ಪರಮ ಸತ್ಯದ ತ್ರಿಪುಟ ಸ್ವರ್ಗದಲ್ಲಿ ಚಲಿಸಲಾರಂಭಿಸುವವರೆಗೆ - ಹಾಗೆ ಚಲಿಸಿ ದೇವತೆಗಳಲ್ಲಿ ತಾನೇ ಹುಟ್ಟಿಸಿದ ದಿವ್ಯಲಯದ ಸಿದ್ಧಿಯನ್ನು ತನ್ನ ಲಬ್ಧ ವಿಧಿಗಾಗಿ ಪಡೆಯುವವರೆಗೆ ಆತನು ತನ್ನ ಹಿರಣ್ಮಯ ಸಾಮರ್ಥ್ಯದಲ್ಲಿ ವಸತಿ ನಿಲ್ಲುವವರೆಗೆ - ದ್ರಷ್ಟಾರನಾದ ಆತನು ಬೆಳಕಿನುಡುಪನ್ನು ಧರಿಸಿ ತನ್ನ ಜ್ಞಾನಶಕ್ತಿ, ಕ್ರಿಯಾಶಕ್ತಿಗಳೆಂಬ ಎರಡು ಕೈಗಳನ್ನೂ ಚಾಚಿ ಪ್ರಪಂಚವನ್ನು ಸೃಷ್ಟಿಸಿದ್ದು ಸ್ವಾನುಭವಕ್ಕೆ ಬರುವವರೆಗೆ : ಸವಿತಾರನು ತ್ವಷ್ಟವತಾರದಲ್ಲಿ ವಸ್ತು ನಿರ್ಮಾಣ ಮಾಡಿ ಪುಂದೇವತೆಗಳ ಸೇವೆಯನ್ನು ಪಡೆದು, ಆ ಪುಂದೇವತೆಗಳ ಸ್ತ್ರೀ ಲಕ್ಷಣದ ಕ್ರಿಯಾಶಕ್ತಿಯನ್ನು ಬೆಳೆಸಿಕೊಂಡು - ಅರ್ಥಾತ್ ಪುರುಷ-ಪ್ರಕೃತಿಗಳ ಶಕ್ತಿಯನ್ನು ಪಡೆದು - ಎಲ್ಲ ಪದಾರ್ಥಗಳನ್ನೂ ಮಾಡಿ, ಮಾಡುತ್ತಾ, ತನ್ನ ಸವಿತ್ರವತಾರದಲ್ಲಿ ಮಾನವನಿಗಾಗಿ, ಚಿಂತಕನಿಗಾಗಿ, ಆ ಪರಮಸತ್ಯ ಹಾಗೂ ಅಮರ್ತ್ಯತೆಗಳ ಸ್ವರೂಪದ ಶರೀರದಿಂದ ಜನಿಸುವವರೆಗೆ.

❖ ❖

# ನಾಲ್ವರು ರಾಜರು

ನಮ್ಮಲ್ಲಿರುವ ಪೂಷನ್-ಸೂರ್ಯನ, ಕಾರ್ಯಗಳ ಮೂಲಕ ಬೆಳೆದು ದಿವ್ಯೋಷೆಯ ಪುನರುದಯಗಳಿಂದ ಸವಿತೃ ಸೂರ್ಯನ ಸೃಷ್ಟಿಕಾರ್ಯವು ಆರಂಭವಾಗುವುದು. ಆದರೆ ಸಾಕ್ಷಾತ್ ಸರ್ಜನವು, ಪೂರ್ಣೀಕೃತ ಸಮಗ್ರತೆಯು, ನಮ್ಮಲ್ಲಿ ಎಲ್ಲ ದೇವತೆಗಳೂ ಹುಟ್ಟಿ ಬೆಳೆಯುವುದನ್ನೇ ಅವಲಂಬಿಸುತ್ತದೆ. ಎಲ್ಲ ದೇವತೆಗಳೆಂದರೆ ಅದಿತಿಸುತರಾದ ವಿಶ್ವೇದೇವತೆಗಳು - ಅದರಲ್ಲೂ ನಾಲ್ವರು ಮಹಾರಾಜಧ್ರಾಜರು ಎನ್ನಿಸಿದ ವರುಣ, ಮಿತ್ರ, ಭಗ ಮತ್ತು ಅರ್ಯಮನ್ ಎಂಬವರು ಹೆಚ್ಚಿನವರು. ಇಂದ್ರ, ಮರುತ್ತುಗಳು, ಋಭುಗಳು, ವಾಯು, ಅಗ್ನಿ, ಸೋಮ, ಅಶ್ವಿನೀ ದೇವತೆಗಳು - ಮುಖ್ಯಾಧಿಕಾರಿಗಳು. ವಿಷ್ಣು, ರುದ್ರ, ಬ್ರಹ್ಮಣಸ್ಪತಿ - ಎಂಬ ಬಲಿಷ್ಠ ಭಾವಿ ತ್ರಿದೇವತೆಗಳು ಅಪರಿಹಾರ್ಯ ಉಪಾಧಿಗಳ ಅಧ್ಯಕ್ಷರು. ವಿಷ್ಣುವು ನಮ್ಮ ಜೀವಾತ್ಮನ ಕಾರ್ಯಗಳು ನಡೆಯುವ ಅಂತ ಪ್ರಪಂಚಗಳ ಅಗಲವಾದ ಚೌಕಟ್ಟನ್ನು ಅಳೆದುಕೊಡುವಾತನು ; ರುದ್ರನು ತನ್ನ ಕ್ರೋಧ, ಬಲ ಮತ್ತು ಹಿಂಸಾತ್ಮಕ ಸಜ್ಜನೋದಯಾನುಕೂಲ್ಯಶಕ್ತಿಗಳಿಂದ ಮಹಾವಿಕಾಸವನ್ನು ಪ್ರಣೋದಿಸಿ, ವಿರುದ್ಧನೂ ಅವಿಧೇಯನೂ ಆದ ದುರ್ಜನನನ್ನು ಸದೆಬಡಿಯುವಾತನು ; ಬ್ರಹ್ಮನು (ಸರಸ್ವತೀಪತಿಯು) ಆತ್ಮದ ಆಳಗಳಿಂದ ಹೊರದೆಗೆದು ಸರ್ಜನಾತ್ಮಕ ಮಂತ್ರದ ಬೀಜವನ್ನು ನೆಡುವವನು. ಹಾಗೇ ದ್ಯಾವಾ ಪೃಥಿವಿಗಳೂ ದಿವ್ಯ ಆಪಸ್ಸೂ ಮಹಾದೇವಿಯರೂ ಅವರು ಸೇವಿಸುವ ವಸ್ತು ನಿರ್ಮಾಪಕನಾದ (ದೇವಶಿಲ್ಪಿಯಾದ) ತ್ವಷ್ಟಾರನೂ ಕ್ಷೇತ್ರಾವಕಾಶವನ್ನೊದಗಿಸುತ್ತಾರೆ ಅಥವಾ ಮೂಲದ್ರವ್ಯಗಳನ್ನು ತಂದು ರೂಪಿಸುತ್ತಾರೆ. ಆದರೆ ಸರ್ವಸೃಷ್ಟಿಯ ಮೇಲೂ ಪ್ರತಿಭಾತ ಪ್ರಣೋದ ಮತ್ತು ಅದರ ಸಿದ್ಧಿಶಕ್ತಿಯ ಮೇಲೂ ಅದರ ಶ್ರೀಮಂತ, ಶುದ್ಧ ಮತ್ತು ಯಥೇಷ್ಟ ಪರಿಮಾಣದ ಭೋಗ ಮತ್ತು ಮೈಮರೆಸುವ ಆನಂದೋದ್ರೇಕದ ಮೇಲೂ ಸೂರ್ಯದೇವರಾಜರಾದ (ಸೌರ ಮಹಾರಾಜರಾದ) ವರುಣ,. ಮಿತ್ರ, ಅರ್ಯಮ, ಭಗ ಎಂಬವರು ತಮ್ಮ ದಿವ್ಯ ದೃಷ್ಟಿಯಿಂದ ವೈಭವವನ್ನೂ, ರಕ್ಷಣೆಯನ್ನೂ ನೀಡುತ್ತಾರೆ - ನೀಡಲೇಬೇಕು.

ಯಜ್ಞಾಹುತಿಪರವಾದ ಕೇವಲ ಔಪಚಾರಿಕ ದೇವತಾಸೂಕ್ತಗಳಿಗಿಂತಲೂ ವಿಶ್ವೇದೇವರುಗಳನ್ನು, ಅದಿತಿ (ಅನಂತ) ಸುತರಾದ ಆದಿತ್ಯರನ್ನು, ಅರ್ಯಮನನ್ನು ಹಾಗೂ ಮಿತ್ರಾವರುಣರನ್ನು ಸ್ತುತಿಸುವ ಪವಿತ್ರ ಪದ್ಯಗಳು (ವೇದಸೂಕ್ತಗಳು) ಹೆಚ್ಚು ಸುಂದರ, ಗಂಭೀರ, ಗಭೀರ - ಮಾನವ್ಯ ಕವಿಕಲ್ಪನಾಶಕ್ತಿಯ ಪರಾಕಾಷ್ಠೆಯನ್ನಿವು ನಿದರ್ಶಿಸುತ್ತವೆ. ಆದಿತ್ಯರನ್ನು ಅತುಲ ವೈಭವಯುಕ್ತ ಉದಾತ್ತತೆಯುಳ್ಳ ಸೂತ್ರಗಳಲ್ಲಿ ಬಣ್ಣಿಸಲಾಗಿದೆ. ಪೌರಾಣಿಕವಾದ ಬರ್ಬರ ಮೇಘದೇವತೆ, ಸೂರ್ಯದೇವತೆ, ವೃಷ್ಟಿ ದೇವತೆಗಳನ್ನು ಬಣ್ಣಿಸಿಲ್ಲ. ಇವು ತಲೆಕೆಡಿಸುವಂಥ ಅನಾಗರಿಕ ರಚಿತ ಅದ್ಭುತಮಯ ಅಂತರರ್ಥದ ಕಥೆಗಳಲ್ಲ. ಆದರೆ ಇವುಗಳ ಪೂಜಾವಸ್ತುವು ನಮಗಿಂತ ಹೆಚ್ಚು ಜ್ಞಾನಿಗಳಾದ ಮತ್ತು ಒಳಗೊಳಗೇ ಬಹಳ ನಾಗರಿಕರಾಗಿದ್ದ ಜನರದ್ದಾಗಿದೆ. ಅವರು ತಮ್ಮ ರಥಗಳಿಗೆ ವಿದ್ಯುತ್ತನ್ನು ಕಟ್ಟದಿರಬಹುದು ; ಸೂರ್ಯನ ಹಾಗೂ ತಾರೆಯ ತೂಕವನ್ನು

ಮಾಡದಿರಬಹುದು. ತಮ್ಮ ವಿನಾಶಕ ಕೆಲಸಕ್ಕೆಂದು ಪ್ರಾಕೃತ ಪ್ರಚೋದಗಳ ನೆರವನ್ನು ತೆಗೆದುಕೊಂಡು ಭೌತೀಕರಿಸದೆ ಇದ್ದಿರಬಹುದು ; ಜನಹತ್ಯೆಗಾಗಿ ಮತ್ತು ಮೇಲ್ದೊರೆತನಕ್ಕಾಗಿ ಅವುಗಳನ್ನು ತಯಾರಿಸಿ ಬಳಸದಿರಬಹುದು. ಆದರೆ ಅವರು ನಮ್ಮಲ್ಲಿರುವ ಎಲ್ಲ ಸ್ವರ್ಗಗಳನ್ನು ಭೂಮಿಗಳನ್ನು ಅಳೆದು ಆಳ ನೋಡಿದವರು; ಅವರು ತಮ್ಮ ತುಲಾಭಾರ ಸಾಮ್ಯಾವಹ ಕಲ್ಲನ್ನು ಅಪ್ರಜ್ಞಾತದಲ್ಲಿ ಹಾಗೂ ಅವಮಾನಸದಲ್ಲಿ ಮತ್ತು ಅತಿಮಾನಸದಲ್ಲಿ ಒಗೆದಿದ್ದಾರೆ. ಅವರು ಸಾವಿನ ಸಮಸ್ಯೆಯನ್ನು (ಒಡಪನ್ನು) ಓದಿ ಅಮರತೆಯ ಗುಟ್ಟನ್ನು ಕಂಡುಹಿಡಿದವರು. ಅವರು ಅನ್ವೇಷಿಸಿ ಏಕಮೇವಾದ್ವಿತೀಯ ಸತ್ಯನನ್ನು ಕಂಡುಕೊಂಡು, ತಿಳಿದು, ಆತನನ್ನು ಆತನ ಬೆಳಕಿನ ಪಾವಿತ್ರ್ಯದ, ವಿವೇಕದ ಮತ್ತು ಶಕ್ತಿಯ ವಿಭವಗಳಲ್ಲಿ ಪೂಜಿಸಿದರು. ಇವರೇ ಅವರ ದೇವತೆಗಳು-ಈ ದೇವತೆಗಳು ಈಜಿಪ್ಟಿನವರ ಗೂಢಯೋಗ ಸಿದ್ಧಾಂತಕ್ಕೂ ಅವರಿಗೂ ಹಿಂದಿನ ಪ್ರಾಥಮಿಕ ನಾಗರಿಕತೆಯ ಗ್ರೀಕರ ಸಿದ್ಧಾಂತಕ್ಕೂ ಮಹತ್ವದಲ್ಲೂ ಅಗಾಧತೆಯಲ್ಲೂ ಯೌಗಿಕ ಕರ್ಮಗಳಲ್ಲೂ ಅನುಕ್ರಮವಾಗಿ ಕಲ್ಪನಾನುಸಾರ ಸರಿಸಮಾನರು. ಆರ್ಫಿಯಸ್ಸನ ಮತ್ತು ಎಲ್ಯೂಸಿಸ್ಸನ ಕರ್ಮಾಚಾರಗಳನ್ನೂ ದೀಕ್ಷೆಯನ್ನೂ ಗ್ರೀಕರ ಹಿರಿಯರಾಗ ಪಾಲಿಸುತ್ತಿದ್ದರು. ಈಜಿಪ್ತ - ಗ್ರೀಕ ದೇವತೆಗಳಿಗೀದೇವತೆಗಳೇನೂ ಕಡಿಮೆಯಲ್ಲ. ಆದರೆ ತಮ್ಮ "ಆರ್ಯ ತೇಜಸ್ಸಿನಲ್ಲಿ" ಈ ದೇವತೆಗಳು ಹೆಚ್ಚಿನವರೆನ್ನಿಸುತ್ತಾರೆ; ಈ ಆರ್ಯ ತೇಜಸ್ಸು ಅವರ ಆತ್ಮವಿಶ್ವಾಸ, ಆಹ್ಲಾದ, ಸುಖಕರವಾದ ಸ್ನೇಹವಂತಿಕೆ ದೇವತೆಗಳೊಡನೆ ಇಟ್ಟುಕೊಂಡಿರುವುದರಲ್ಲಿದೆ. ಇವನ್ನು ತನ್ನೊಡನೆಯೇ ಭೂಲೋಕಕ್ಕೆ ಆರ್ಯನು ತಂದನು. ಪ್ರಾಚೀನತರ ಕುಲಗಳೊಂದಿಗೆ ಈಜಿಪ್ಟಿನವರಂತೆ ಆರ್ಯನು ತನ್ನ ಸಂಬಂಧಕ್ಕೆ ಕಾವಳವನ್ನು ಕಟ್ಟಲಿಲ್ಲ, ಕರಾಳಚ್ಛಾಯೆಯನ್ನು ಅಡ್ಡಿಯನ್ನಾಗಿ ನಿರ್ಮಿಸಿಕೊಳ್ಳಲಿಲ್ಲ ; ಪ್ರಾಚೀನತರ ಕುಲಗಳು ಆಳವಾಗಿ ಚಿಂತಿಸುತ್ತಿರುವ ಭೂಮಿಯ ಮಹಾಪುತ್ರರು. ಆರ್ಯರು ಸ್ವರ್ಗವನ್ನು ತಮ್ಮ ತಂದೆಯೆಂದರು ; ಅವರ ದ್ರಷ್ಟಾರರು ಆರ್ಯನ ಸೂರ್ಯನನ್ನು ನಮ್ಮ ಭೌತಿಕ ಕತ್ತಲಿನಿಂದ ಬಿಡುಗಡೆಮಾಡಿದರು.

ಆರ್ಯ ಮನಸ್ಸಿಗೆ ಸ್ವಯಂಪ್ರಭನಾದ ಏಕೇವಾದ್ವಿತೀಯನೇ ಗುರಿ. ಆದುದರಿಂದ ದ್ರಷ್ಟಾರರು ಅವನನ್ನು ಸೂರ್ಯ ಬಿಂಬದಲ್ಲಿ ಉಪಾಸಿಸಿದರು. ಇರುವುದೆಂದರೆ ಒಬ್ಬನೇ ಒಬ್ಬನಾಗಿರುವ, ಒಬ್ಬನೇ ಒಬ್ಬನಾದ ಅಖಂಡ ಸತ್ತಾತ್ಮಕನ, ಇರುವಿಕೆಗೆ ಇಂದ್ರ, ಅಗ್ನಿ, ಯಮ, ಮಾತರಿಶ್ವನ್ ಎಂದು ಮುಂತಾಗಿ ಹೆಸರಿಟ್ಟರು. "ಆ ಒಂದು" "ಆ ಸತ್ಯ"[೧] ಎಂಬೀ ಪದ ಸಂಹತಿಗಳು ವೇದದಲ್ಲಿ ಪದೇ ಪದೇ ಬರುತ್ತವೆ. ಅದರ ಅರ್ಥವು ಅತ್ಯುನ್ನತ ಎಂದೇ ಆಗುತ್ತದೆ. ಆತನ ಕಾರ್ಯಕರ ರೂಪವೇ ಸೂರ್ಯಬಿಂಬ ಯಾ ಸೂರ್ಯನ ಪ್ರತಿಮೆಯು. ಒಂದು ಉದಾತ್ತವಾದ ಯೌಗಿಕ ಮಂತ್ರಗೀತದಲ್ಲಿ ಪುನಃ ಪುನಃ "ದೇವರುಗಳ ಸುವಿಸ್ತಾರ ಬಲಿಷ್ಠತೆ-ಅದೇ ಆ ಒಂದು" ಪಲ್ಲವಿಯಾಗಿ ಬರುತ್ತದೆ. (III.55.1) ಸೂರ್ಯನು ಪರಮಸತ್ಯದ ಮಾರ್ಗದಲ್ಲಿ ಪ್ರಯಾಣ ಮಾಡುವುದನ್ನು ಪ್ರತಿಭಾ ಪ್ರಬುದ್ಧ ಜೀವಾತ್ಮನು ಪ್ರಯಾಣ ಮಾಡುವುದರೊಡನೆ ಏಕೀಕರಿಸಿದ್ದನ್ನು ನಾವು ನೋಡಿದ್ದೇವೆ. "ಈ ಸತ್ಯದಿಂದ ನಿನ್ನ ಆ ಸತ್ಯವು ಪ್ರಚ್ಛಾದಿತವಾಗಿದೆ"- ಆ ಸತ್ಯವು ಮಿತ್ರಾವರುಣರದು ; ಹಾಗೇ "ಪ್ರಚ್ಛಾದಿತವಾಗಿರುವುದು ಆ ದೇವತೆಗಳು ಸೂರ್ಯನ ಕುದುರೆಗಳನ್ನು ಅವನ ರಥದಿಂದ ಬಿಚ್ಚುವಲ್ಲಿ - ಹತ್ತುನೂರುಗಳಲ್ಲಿ ಒಟ್ಟಿಗೆ ಸೇರುತ್ತವೆ - ಆವೊಂದನ್ನು ನಾನು ಸಕಾಯ ದೇವತೆಗಳ ಪರಮೋಚ್ಚ ದೇವರನ್ನಾಗಿ

---

೧. ತದೇಕಂ, ತತ್ಸತ್ಯಂ ಎಂಬ ಪದ ಸಂಹತಿಗಳನ್ನು ವ್ಯಾಖ್ಯಾತರು ಯಾವಾಗಲೂ ತಪ್ಪಾಗಿ ವಿವರಿಸಿದ್ದಾರೆ.

ನೋಡಿದ್ದೇನೆ." (V.62.1) ಆದರೆ ಆ ಒಂದು ಎಂಬುದು, ಒಬ್ಬನೆಂಬಾತನು, ಕಾಲಾತೀತನು ಮತ್ತು ನಮ್ಮ ಮನಸ್ಸೂ ಅಸ್ತಿತ್ವವೂ ಕಾಲಗತವಾಗಿರುತ್ತವೆ. "ಅದು ಇಂದೂ ಅಲ್ಲ, ನಾಳೆಯೂ ಅಲ್ಲ. ಆ ಕಾಲಾತೀತವಾದುದನ್ನು ಯಾರು ಬಲ್ಲರು? ಅದರ ಹತ್ತಿರ ನಾವು ಹೋದ ಕೂಡಲೇ ಅದು ನಮ್ಮಿಂದ ಅದೃಶ್ಯವಾಗುತ್ತದೆ" (I.170.1) ಆದುದರಿಂದ ನಾವು ನಮ್ಮಲ್ಲೇ[೨] ದೇವತೆಗಳಿಗೆ ಜನ್ಮ ಕೊಟ್ಟು ಅದರತ್ತ ಬೆಳೆಯಬೇಕಾಗಿದೆ. ಆ ದೇವತೆಗಳ ಬಲಿಷ್ಠವೂ ಪ್ರಕಾಶಮಯವೂ ಆದ ಆಕೃತಿಗಳನ್ನು ಹೆಚ್ಚಿಸಬೇಕು ಮತ್ತು ಅವರ ದಿವ್ಯ ಶರೀರಗಳನ್ನು ರಚಿಸಬೇಕು ಮತ್ತು ಈ ಹೊಸಹುಟ್ಟು ಹಾಗೂ ಸ್ವಾತ್ಮರಚನೆ ಎಂಬುದೇ ಯಜ್ಞದ ನಿಜ ಸ್ವರೂಪವು - ಈ ಯಜ್ಞದ ಮೂಲಕವೇ ಅಮರ್ತ್ಯತೆಯ[೩] ಬಗೆಗಿನ ನಮ್ಮ ಪ್ರಜ್ಞೆಯು ಜಾಗರಿತವಾಗಬೇಕು.

ಅನಂತದ (ಅದಿತಿಯ) ಮಕ್ಕಳಿಗೆ ಇಬ್ಬಗೆಯ ಜನ್ಮವಿದೆ. ಮೇಲಕ್ಕೆ ಆ ಮಕ್ಕಳು ದಿವ್ಯ ಸತ್ಯದಲ್ಲಿ ಪ್ರಪಂಚಗಳ ಸೃಷ್ಟಿಕರ್ತರೂ ದಿವ್ಯವಿಧಿಯ (ಋತದ) ರಕ್ಷಕರೂ ಆಗಿ ಹುಟ್ಟುತ್ತಾರೆ. ಈ ಪ್ರಪಂಚದಲ್ಲಿಯೇ, ಮಾನವಲ್ಲಿಯೇ, ಅವರು ಆ ದಿವ್ಯದ ವೈಶ್ವಿಕ ಮತ್ತು ಮಾನವ್ಯ ಶಕ್ತಿಗಳಾಗಿಯೂ ಹುಟ್ಟುತ್ತಾರೆ. ದೃಶ್ಯ ಪ್ರಪಂಚದಲ್ಲವರು ವಿಶ್ವದ ಪುಂಸ್ತ್ರೀ-ಜ್ಞಾನಶಕ್ತಿ ಕ್ರಿಯಾಶಕ್ತಿಗಳಾಗಿ ಜನಿಸುತ್ತಾರೆ.[೪] ಅವರ ಈ ಬಾಹ್ಯ ಲಕ್ಷಣಗಳೇ ಸೂರ್ಯ, ಅಗ್ನಿ, ವಾಯು, ಅಪ್ಪು, ಭೂಮಿ, ಆಕಾಶ ಎಂಬ ದೇವತೆಗಳಾಗಿ ತಮ್ಮ ಪ್ರಜ್ಞಾತ ಪ್ರಣೋದಗಳಿಂದ ಸದಾ ಭೌತಸತ್ತೆಯಲ್ಲಿದ್ದುಕೊಂಡು, ಆರ್ಯರ ಆರಾಧನೆಯ ಹೊರಗಿನ ಅಥವಾ ಮನೋದೈಹಿಕ (ಮಾನಸ-ಭೌತಿಕ) ಮುಖವನ್ನು ನಮಗೆ ಅವರು ತೋರಿಸುತ್ತಾರೆ. ಪ್ರಪಂಚವು ಕೇವಲ ಭೌತಿಕ (ಜಡ) ಸತ್ಯವಲ್ಲ - ಅದು ಮನೋಭೌತಿಕ ಸತ್ಯ (ಜೀವ-ಜಡ ಸಮ್ಮಿಶ್ರ ಸತ್ಯ = ಸತ್ಯಾನೃತ ಪ್ರಜ್ಞಾಮಿಶ್ರಿತ "ಮಿಥ್ಯೆ") ಎಂಬ ಪ್ರಾಚೀನ ದೃಷ್ಟಿಕೋನವು ಮಂತ್ರದ ಪರಿಣಾಮಕಾರಿತ್ವ ಮತ್ತು ಮಾನವನ ಬಾಹ್ಯ ಜೀವನಕ್ಕೂ ದೇವತೆಗಳಿಗೂ ಇರುವ ಸಂಬಂಧ ಎಂಬಿವೇ ಮೊದಲಾದ ಕಲ್ಪನೆಗಳ ಬುನಾದಿಯು. ತಾಯಿಬೇರು. ಅದರಿಂದಲೇ, ಪ್ರಾರ್ಥನೆಗೆ ಪ್ರಣೋದವಿದೆ, ಪೂಜೆಗೆ ಪ್ರಣೋದವಿದೆ, ಭೌತಿಕ ಗುರಿಗಳಿಗಾಗಿ ಮಾಡುವ ಯಜ್ಞಕ್ಕೆ ಪ್ರಣೋದವಿದೆ. ಅದರಿಂದಲೇ ಪ್ರಾಪಂಚಿಕ ಜೀವನಕ್ಕಾಗಿ ಅವುಗಳ ಬಳಕೆ ಸಹಜವಾಯಿತು ಮತ್ತು ಅಥರ್ವವೇದದಲ್ಲಿ ಮುಖ್ಯವಾಗಿ ಬರುವ ಮಾಂತ್ರಿಕ-ತಾಂತ್ರಿಕ ಕರ್ಮಗಳು "ಬ್ರಾಹ್ಮಣ" ಗ್ರಂಥಗಳಲ್ಲಿ[೫] ಬರುವ ಸಾಂಕೇತಿಕತೆಯಾಗಿರುವುದು ಸಮರ್ಥನೀಯವಾಯಿತು. ಆದರೆ ದೇವತೆಗಳು ಮಾನವನಲ್ಲಿಯೇ ಇರುವ ಪ್ರಜ್ಞಾಯುಕ್ತ (ಪ್ರಜ್ಞಾತ, ಎಚ್ಚತ್ತ) ಮಾನಸ ಶಾಶ್ವತೀಯ ಶಕ್ತಿಗಳು. "ಸಂಕಲ್ಪಶಕ್ತಿಗಳಾಗಿ ಅವರು ಸಂಕಲ್ಪ ಕ್ರಿಯೆಯನ್ನು ಮಾಡುತ್ತಾರೆ; ನಮ್ಮ ಹೃದಯಗಳಲ್ಲವರು ಚಿಂತನ ಸ್ವರೂಪರು' ಅವರು ಸಂತೋಷಪಡುವ ಸಂತೋಷಪ್ರಭುಗಳು ; ಅವರು ವಿಚಾರದ ಎಲ್ಲ ದಿಕ್ಕುಗಳಲ್ಲೂ ಪ್ರಯಾಣ ಮಾಡುವರು." ಅವರಿಲ್ಲದಿದ್ದರೆ ಮಾನವಾತ್ಮವು ತನ್ನ ಎಡ-ಬಲಗಳನ್ನು ವಿಂಗಡಿಸಿ ತಿಳಿದುಕೊಳ್ಳಲಾರದು; ಹಿಂದು - ಮುಂದುಗಳಲ್ಲಿರುವ ಪದಾರ್ಥಗಳನ್ನು ಪ್ರತ್ಯೇಕಿಸಿ ಗುರುತಿಸಲಾರದು ; ಅವಿವೇಕ-ವಿವೇಕಗಳ ವಿಷಯಗಳನ್ನು ಬೇರ್ಪಡಿಸಿ ಅರಿತುಕೊಳ್ಳಲಾರದು.

---

೨. ದೇವವೀತಿ, ದೇವತಾತಿ.

೩. ಅಮೃತಸ್ಯ ಚೇತನಂ (I.170.4).

೪. ಪುರುಷ=ಜ್ಞಾನಪ್ರಣೋದವು ; ಸ್ತ್ರೀ ಯಾ ಪ್ರಕೃತಿ = ಕ್ರಿಯಾ ಪ್ರಣೋದವು.

೫. ವೇದದ ಬಾಹ್ಯಾರ್ಥದ ಗುಟ್ಟು ಇಲ್ಲಿದೆ. ಆಧುನಿಕ ವಿದ್ವಾಂಸರು ಕಂಡದ್ದು ಇದನ್ನೇ - ತಪ್ಪಾಗಿ ತಿಳಿದುಕೊಂಡದ್ದೂ ಇದನ್ನೇ - ಇದು ಬರೀ ಬಾಹ್ಯ ನಿಸರ್ಗಾರಾಧನೆಗಿಂತ ಮೇಲ್ಮಟ್ಟದ್ದಾಗಿದೆ.

ಅವರ ನೇತೃತ್ವವಿದ್ದರೆ ಮಾತ್ರ ಜೀವಾತ್ಮವು "ಅಭಯ ಜ್ಯೋತಿಯನ್ನು" ತಲುಪಿ, ಅದನ್ನು ಅನುಭೋಗಿಸೀತು. ಈ ಕಾರಣದಿಂದಲೇ ಉಷೆಯನ್ನು "ನೀನು ಮಾನವಿಯೂ ಹೌದು, ದಿವ್ಯೆಯೂ ಹೌದು" ಎಂದು ಸಂಬೋಧಿಸಲಾಗಿದೆ ; ಮತ್ತು ಪದೇ ಪದೇ ದೇವತೆಗಳನ್ನು ಮನುಜರು ಯಾ ಮಾನವ್ಯ ಶಕ್ತಿಗಳು ("ಮಾನುಷಾಃ, ನರಾಃ") ಎಂದು ಕರೆಯಲಾಗಿದೆ. ಆ ದೇವತೆಗಳು ನಮ್ಮ "ಪ್ರತಿಭಾ ವಿದ್ಯುನ್ಮಯ ದ್ರಷ್ಟಾರರು, ನಮ್ಮ ವೀರರು, "ನಮ್ಮ ಹೇರಳ ಶ್ರೇಯಃ ಸಮೃದ್ಧಿ ಸ್ಥಿತಿಯ ದೊರೆಗಳು". ತಮ್ಮ ಮಾನವ್ಯ ಶಕ್ತಿಯಿಂದ ಅವರು ಯಜ್ಞವನ್ನು ನಡೆಸಿಕೊಡುವರು. ("ಮನುಷ್ಯತ್") ಮತ್ತು ತಮ್ಮ ಉನ್ನತ ದೇವತಾಸತ್ತೆಯಿಂದ ಅದನ್ನು ಸ್ವೀಕರಿಸುವರು. ಅಗ್ನಿದೇವನು ಹೋತಾರನು (ಆಹುತಿಯ ಅರ್ಚಕನು)[೧]; ಬೃಹಸ್ಪತಿಯು ಮಂತ್ರಾಧಿದೇವತೆಯು. ಈ ಅರ್ಥದಲ್ಲಿ ಅಗ್ನಿಯು ಮನುಷ್ಯನ ಹೃದಯದಿಂದ ಹುಟ್ಟಿದವನೆನ್ನಲಾಗಿದೆ. ಹೀಗೆ ಎಲ್ಲ ದೇವತೆಗಳೂ ಯಜ್ಞೋದ್ಭವರು; ಅವರು ಬೆಳೆದು ಈ ಮಾನವ್ಯ ಕಾರ್ಯದಿಂದ ದಿವ್ಯ ಶರೀರವನ್ನು ಧರಿಸುತ್ತಾರೆ. ಸೋಮನು ಜಗದಾಹ್ಲಾದದ ಮಧ್ಯಸ್ವರೂಪನು ; ಅವನು ಮನದ ಮೂಲಕ ಒತ್ತಡದಿಂದ ಸಾಗುತ್ತಾನೆ. ಮನವು ಜರಡಿ (ಸಾರಣಿಗೆ)[೨], ಶುದ್ಧೀಕರಣದ ಸಾಧನವು. ಅಲ್ಲಿ ಹತ್ತು ಜನ ಸೋದರಿಯರಿಂದ ಸೋಮನು ಸ್ವಚ್ಛಗೊಳಿಸಲ್ಪಡುತ್ತಾನೆ. ಅನಂತರ ಅವನು ಹರಿದು ದೇವತೆಗಳಿಗೆ ಜನ್ಮವೀಯುತ್ತಾನೆ.

ಆದರೆ ಈ ಅಂತಃಶಕ್ತಿಗಳ ಸ್ವಭಾವವು ಯಾವಾಗಲೂ ದಿವ್ಯ ; ಆದುದರಿಂದ ಅವುಗಳ ಪ್ರವೃತ್ತಿಯು ಊರ್ಧ್ವಮುಖ - ಪ್ರಕಾಶ, ಅಮರತ್ವ ಮತ್ತು ಅನಂತಗಳತ್ತಲೇ. ಅವರು "ಅನಂತದ (ಅನಾದ್ಯನಂತ ಸತ್ಯದ) ಮಕ್ಕಳು - ಸಂಕಲ್ಪದಲ್ಲಿ, ಕಾರ್ಯದಲ್ಲಿ, ಒಮ್ಮತ ಉಳ್ಳವರು ; ಶುದ್ಧರು, ನದೀ ಪ್ರವಾಹಗಳಲ್ಲಿ ಶುದ್ಧೀಕೃತರಾದವರು, ವಕ್ರ ಸ್ವಭಾವವಿಲ್ಲದವರು, ನ್ಯೂನತಾರಹಿತರು ಮತ್ತು ತಮ್ಮ ಸತ್ತೆಯಲ್ಲಿ ಅನಾವಿದ್ಧರು, ಅನಾಹತರು, ಅಕ್ಷತರು- ವಿಸ್ತೃತರು, ಗಭೀರರು, ಅಜಿತರು, ಜಯಶೀಲರು, ದರ್ಶನಾವಯವ ವೈವಿಧ್ಯವುಳ್ಳವರು ; ಒಳವೊಳಗೇ ಅವರು ವಕ್ರಾವಕ್ರ ವಸ್ತುಗಳೆರಡನ್ನೂ ನೋಡುತ್ತಾರೆ (ಅವಕ್ರ=ಪೂರ್ಣ ಸರಿಯಾದುದು) : ಎಲ್ಲವೂ ರಾಜರಿಗೆ ಸಮೀಪ - ಉನ್ನತತಮ ವಸ್ತುಗಳು ಸಹಾ ಅವರಿಗೆ ನಿಕಟವರ್ತಿಯಾಗಿರುತ್ತದೆ. ಅನಂತಸುತರಾದ ಅವರು ಜಗತ್ತಿನ ಚಲನೆಯಲ್ಲಿ ಇದ್ದು ಅವನ್ನು ಎತ್ತಿ ಹಿಡಿಯುತ್ತಾರೆ. ಅವರು ದೇವತೆಗಳು - ಅವರು ವಿಶ್ವ ಸ್ವರೂಪವನ್ನು ಪಡೆವ ಎಲ್ಲವುಗಳ ಕಾವಲುಗಾರರು ; ದೂರವಿಚಾರದೃಷ್ಟಿಯುಳ್ಳ ಅವರು ಪರಮಸತ್ಯಪೂರ್ಣರು - ಅವರು ದಿವ್ಯಬಲವನ್ನು ಕಾಯುತ್ತಾರೆ" (II.27.2-4) ಅವರು ಮಾನವ ವಿಶ್ವರಾಜರು, ಜನರಾಜರು ("ನೃಪತಿ, ವಿಶ್ಪತಿ"), ಸ್ವರಾಜ್ಯಸಾರ್ವಭೌಮರು, ಜಗಚ್ಚಕ್ರವರ್ತಿಗಳು - ರಾಕ್ಷಸರಂತಲ್ಲ ಮತ್ತು ಅವರಂತೆ ಸುಳ್ಳಿನಲ್ಲೂ, ಭೇದದಲ್ಲೂ ಇರಲು ಹೋರಾಡುವವರಲ್ಲ. ಪರಮಸತ್ಯದ ರಾಜರಾದುದರಿಂದ ಅವರು ಹಾಗೆ ಮಾಡರು. ಏಕೆಂದರೆ ಅವರ ತಾಯಿಯು ಅದಿತಿ "ಅವಳಲ್ಲಿ ದ್ವೈತವಿಲ್ಲ". ಅದಿತಿಯು "ಜ್ಯೋತಿರ್ಮಯಿಯಾದ ಅವಿಭಕ್ತೆ ; ಬೆಳಕಿನ ಜಗತ್ತಿನ ದಿವ್ಯವಾಸಸ್ಥಳವನ್ನವಳು ಎತ್ತಿ ಹಿಡಿಯುತ್ತಾಳೆ." ಮತ್ತು ತನ್ನ ಮಕ್ಕಳನ್ನು "ಯಾವಾಗಲೂ ಎಚ್ಚತ್ತು ಅಂಟಿಕೊಂಡಿರುತ್ತಾಳೆ." ಅವರು ಸತ್ತೆಯಲ್ಲಿ ಅತಿ ಋಜುಗಳು - ಸಂಕಲ್ಪ, ವಿಚಾರ, ಆಹ್ಲಾದ,

---

೧. ಆಹುತಿಯ, ಹವಿಸ್ಸಿನ, ಸಾಕ್ಷಾತ್ ದಾತಾರನು ಅಧ್ವರ್ಯು. ಅಗ್ನಿಯು ದೇವತೆಗಳನ್ನು ಆ ಮಂತ್ರಿಸುವವನು. ಆಹ್ವಾನಿಸುವವನು. ಉದ್ಗಾತೃವು ಮಂತ್ರವನ್ನು ಸಾಮಗಾನದಿಂದ ಹೇಳುವವನು. ಬ್ರಹ್ಮನು ಇಡಿಯಜ್ಞದ ಮೇಲ್ವಿಚಾರಕನು. - ಅನುವಾದಕ.

೨. ಅಕ್ಷರಶಃ "ಪ್ರಕಾಶಮಯ ಮತ್ತು ವಿಸ್ತಾರವಾಗಿ ಹರಡಿದ" ವಸ್ತು-ಅನುವಾದಕ.

ಕಾರ್ಯ, ಚಲನೆಗಳಲ್ಲಿ ನೇರ್ನಡೆಯುಳ್ಳವರು. "ಪರಮಸತ್ಯ ಚಿಂತಕರವರು ಅವರ ಪ್ರಕೃತಿ ನಿಯಮವು ಪರಮಸತ್ಯದ ಪ್ರಕೃತಿ ನಿಯಮವೇ". "ಅವರು ಪರಮಸತ್ಯದ ಸಾರಥಿಗಳು - ಆ ಸತ್ಯದ ಪೀಠವೇ ಅವರ ಅರಮನೆ." ಅವರು ಪರಮಸತ್ಯದ ಶ್ರಾವಕರು ಮತ್ತು ದಾರ್ಶನಿಕರು-ಪರಮಸತ್ಯಜ್ಞರಾದ ಅಮರ್ತ್ಯರು". ಅವರು ದೃಷ್ಟಿಯಲ್ಲಿ "ಪವಿತ್ರೀಕೃತರು, ಅಜಯ್ಯರು, ವಿಶಾಲದರ್ಶನದ ಮಾನವರು." ಸುಳ್ಳಿನಿಂದಲೂ ವಕ್ರಸ್ವಭಾವದಿಂದಲೂ ಹೀಗೆ ಮುಕ್ತರಾದ ಅವರು ಅಂತರ್ದೇವತೆಗಳಾಗಿ ನಮ್ಮಲ್ಲಿ ತಮ್ಮ ನಿಸರ್ಗಸಹಜ ಮಟ್ಟಕ್ಕೆ ಏರುವರು-ಆ ಮಟ್ಟವು ಅವರ ಮನೆ, ಪ್ರಜ್ಞಾಸ್ತರ, ಪ್ರಪಂಚ. "ದ್ವಿಜರಾದ ಅವರು (ಜನ್ಮದ್ವಯವುಳ್ಳ ಅವರು) ತಮ್ಮ ಇರವಿನಲ್ಲಿ ನಿಜಸ್ವರೂಪದವರಾಗಿ, ಪರಮಸತ್ಯಧಾರಿಗಳಾಗಿ, ಬೆಳಕಿನಲ್ಲಿ ಬಹು ವಿಸ್ತೃತರೂ ಏಕತ್ವವುಳ್ಳವರೂ ಆಗಿ-ಪರಮಸತ್ಯದ ಪ್ರಕಾಶ ಪ್ರಪಂಚದಲ್ಲಿ ಮೈಮರೆತು ಆನಂದೋದ್ರೇಕದಲ್ಲಿರುತ್ತಾರೆ."

ಈ ಊರ್ಧ್ವಮುಖ ಚಲನೆಯಲ್ಲಿ ಅವರು ನಮ್ಮಿಂದ ಅಜ್ಞಾನವನ್ನೂ ಕೇಡನ್ನೂ ದೂರಕ್ಕೆ ಓಡಿಸುತ್ತಾರೆ. ಆ ದೇವತೆಗಳಾರು? "ಅವರು ಪಾಪರಹಿತ ಅವಿಭಕ್ತ ಅಸ್ತಿತ್ವಕ್ಕೆ ಇಲ್ಲಿಂದ ಹೋಗಿ ಮುಟ್ಟಿದಂಥವರು." ಆದುದರಿಂದಲೇ ಅವರು "ಮುಕ್ತಿದಾತರಾದ ದೇವತೆಗಳು". ನಮ್ಮ ಶತ್ರು ಹೇಗಿರುತ್ತಾನೆ? ಎದುರು ಚಲಿಸುವ ಹಾನಿಕಾರಕ ಹಗೆಗೆ ಆ ದೇವತೆಗಳ ಜ್ಞಾನವು ಎತ್ತೆತ್ತಲೂ ಹರಡಿದ ಹುಲಿ ಬೋನುಗಳಂತೆ ಕಾಣಿಸುತ್ತದೆ. ಏಕೆಂದರೆ, ಅವನಿಗೆ ಬೆಳಕು ಕುರುಡಿಗೆ ಕಾರಣ, ಒಳಿತಿನ ದಿವ್ಯಚಲನೆಯು ದೌರ್ಜನ್ಯವಾಗಿ ತೋರುತ್ತದೆ, ವಿಷ್ಫಾಶ್ಮವಾಗಿ ಕಾಣುತ್ತದೆ. ಆದರೆ ದ್ರಷ್ಟಾರನ ಆರ್ಯಾತ್ಮವು ತೇರಿನೊಡನೋಡುವ ಹೆಂಗುದುರೆಯಂತೆ ಈ ಅಪಾಯಗಳನ್ನು ದಾಟಿ ಹಾರುತ್ತದೆ, ಮೀರಿ ಜಿಗಿಯುತ್ತದೆ. ದೇವತೆಗಳ ನೇತೃತ್ವದಲ್ಲಿ ಆರ್ಯ ದ್ರಷ್ಟಾರನ ಜೀವಾತ್ಮವು ದುಷ್ಟತೆಯ ಹಳ್ಳಕೊಳ್ಳ-ಹೊಂಡ ಗುಂಡಿಗಳಲ್ಲಿ ಬೀಳುವುದರಿಂದ ತಪ್ಪಿಸಿಕೊಳ್ಳುತ್ತದೆ. ಅದಿತಿ, ಮಿತ್ರ, ವರುಣರು ಅವನನ್ನು ಕ್ಷಮಿಸುತ್ತಾರೆ - ಅವರ ವಿಶಾಲ ಐಕ್ಯದ ವಿರುದ್ಧವಾಗಿ ಅವನು ಯಾವ ಪಾಪ ಮಾಡಿದ್ದರೂ ಅದನ್ನವರು ಮಾಫಿ ಮಾಡುತ್ತಾರೆ. ಹಾಗೇ ಅವರ ಸಾಮಶ್ರುತ್ಯದ, ಪಾವಿತ್ರ್ಯದ ವಿರುದ್ಧವಾಗಿ ತಪ್ಪು ಮಾಡಿದ್ದರೂ ಅದನ್ನು ಕಡೆಗಣಿಸುತ್ತಾರೆ. ಅದರಿಂದ ಅವನು ವಿಶಾಲವೂ ನಿರ್ಭಯವೂ ಆದ ಬೆಳಕನ್ನು ಅನುಭವಿಸುವ ಮತ್ತು ಸುದೀರ್ಘರಾತ್ರಿಗಳಿಂದ ಮುಕ್ತನಾಗುವ ಪ್ರತ್ಯಾಶೆಯನ್ನು ತಾಳಬಲ್ಲವನಾಗುವನು. ವೈದಿಕ ದೇವತೆಗಳು ಬರೀ ನಿಸರ್ಗ ಶಕ್ತಿಗಳಲ್ಲ. ಅವರು ಆಧ್ಯಾತ್ಮಿಕ (ಜಾಗರಿತ) ಪ್ರಜ್ಞಾತ ಪ್ರಣೋದಗಳು ; ಅವರು ಎಲ್ಲ ವೈಶ್ವ ಪದಾರ್ಥಗಳ ಹಿಂದೆ ಮತ್ತು ಒಳಗೆ ಇರುವುದನ್ನು ಅವರ ವಿಶ್ವಜನೀನ ವೃತ್ತಿಗೂ ಪಾಪಾನೃತಗಳಿಂದ ಮಾನವನನ್ನು ಮುಕ್ತನನ್ನಾಗಿ ಮಾಡುವುದಕ್ಕೂ ಇರುವ ಸಂಬಂಧವು ಸ್ಪಷ್ಟಪಡಿಸುತ್ತದೆ. "ನೀವು ನಿಮ್ಮ ಮನೋಜ್ಞಾನ ಬಲದಿಂದ ಜಗತ್ ಪ್ರಭುಗಳಾಗಿರುವುದರಿಂದ ಅಥವಾ ಜ್ಞಾನ ಮನೋಬಲದಿಂದ ಜಗದೀಶರಾಗಿರುವುದರಿಂದ, ಮತ್ತು ಚರಾಚರಗಳ ಬಗೆಗಿನ ಚಿಂತಕರಾಗಿರುವುದರಿಂದ, ಹೇ ದೇವತೆಗಳೇ, ನಾವು ಮಾಡಿದ ಹಾಗೂ ಮಾಡದ ಪಾಪಗಳ ಆಚೆಗಿರುವ ಸುಖಸಾಮ್ರಾಜ್ಯಕ್ಕೆ ನಮ್ಮನ್ನು ಹೊತ್ತು ಒಯ್ಯಿರಿ" (X.63.8)

ಅಲ್ಲಿ ಯಾವಾಗಲೂ ದಾರಿಯ ಮತ್ತು ಪಯಣದ ಪ್ರತಿಮೆ ತಪ್ಪದೆ ಬರುತ್ತದೆ-ಆ ದಾರಿಯೆಂದರೆ ಪರಮಸತ್ಯದ ದಾರಿ ; ಅದರ ಮೂಲಕ ನಮ್ಮನ್ನು ದಿವ್ಯ ನೇತೃತ್ವದಲ್ಲಿ ಮುಂದೆ ಕರೆದೊಯ್ಯಲಾಗುತ್ತದೆ. "ಹೇ ಅನಂತಸುತರೇ, ನಿರ್ಭಯ ಶಾಂತಿಯನ್ನು ನಮಗೆ ಕರುಣಿಸಿರಿ ; ಸುಲಭವಾಗಿ ನಾವು ಹೋಗಬಹುದಾದ ಒಳ್ಳೆಯ ದಾರಿಗಳನ್ನು ನಮಗೆ ಮಾಡಿಕೊಡಿರಿ"

(X.63.7). "ಓ ಅರ್ಯಮನೇ, ಓ ಮಿತ್ರನೇ, ಓ ವರುಣನೇ, ನಿಮ್ಮ ದಾರಿಯು ಸುಲಭಗಮನಕ್ಕೆ ಅರ್ಹ, ಕಂಟಕರಹಿತ ಮತ್ತು ಪರಿಪೂರ್ಣ ಎನ್ನಿಸಿದೆ. (II.27.6) "ಅನಂತ (ಅದಿತಿ)ಸುತರು ಯಾರನ್ನು ಒಳಿತಾಗಿ ನಡೆಸಿಕೊಂಡು ಹೋಗುವರೋ ಅವರು ದುಷ್ಟತನ-ಪಾಪಗಳೆಲ್ಲವನ್ನೂ ದಾಟಿ ಆಚೆಗೆ ಹೋಗುವರು, ಸುಖ ಸೌಲಭ್ಯ ರಾಜ್ಯವನ್ನು ಸೇರುವರು" (X.63.13) ಆ ಗುರಿಯೂ ಯಾವಾಗಲೂ ಪರಮ ಸುಖವೇ ಆಗಿರುತ್ತದೆ ; ವಿಶಾಲವಾದ ಆನಂದ ಮತ್ತು ಶಾಂತಿ ಎಂದೇ ಆಗಿರುತ್ತದೆ ; ಅವಿಚ್ಛಿನ್ನ ಪ್ರಕಾಶ, ಸುವಿಸ್ತೃತ ಸತ್ಯ, ಅಮೃತತತ್ವ- ಎಂದೇ ಅದರ ಅರ್ಥವು. "ಎಲೈ ದೇವತೆಗಳೇ, ಅರಿ ಪ್ರಣೋದಗಳನ್ನು ನಮ್ಮಿಂದ ಬಹುದೂರದಲ್ಲಿಡಿರಿ, ಭೇದಬುದ್ಧಿ ಪ್ರೇರಕ ಶಕ್ತಿಗಳನ್ನು ನಮ್ಮಿಂದ ತೊಲಗಿಸಿರಿ, ವಿಭಾಜಕ ವೃತ್ತಿಯಿಂದ ನಮ್ಮನ್ನು ದೂರೀಕರಿಸಿರಿ ; ಪರಮ ಸುಖ ಸೌಕರ್ಯಗಳಿಗಾಗಿ ಮಹಾಯಾಮದ ಶಾಂತಿಯನ್ನು ನೀಡಿರಿ" (X.13.12). "ಅನಂತ ಸೂನುಗಳು ನಮಗೆ ಅವಿನಾಶಿ ಪ್ರಕಾಶವನ್ನು ಕೊಡುವರು." "ಎಲೈ ನಮ್ಮ ಯಜ್ಞದ ಜ್ಞಾನವುಳ್ಳ ಮನಃಶಕ್ತಿ ಸಂಪನ್ನರೇ, ದಿವ್ಯ ಪ್ರಕಾಶವನ್ನು ನಿರ್ಮಿಸಿರಿ." "ನಿಮ್ಮ ಆ ವರ್ಧಮಾನ ಪ್ರಕಾಶವು (ತೇಜಸ್ಸು) ಸೃಷ್ಟಿಸುವುದನ್ನಿಂದು ನಾವು ನೋಡುವೆವು ; ಹೇ ಅನಂತಜರೇ, ಹೇ ಅರ್ಯಮನೇ, ಈ ಭಯಮಯ ಜಗದಲ್ಲೂ ಪರಮ ಧನ್ಯತಾ ಸ್ಥಿತಿಯನ್ನು ನಾವು ಅನುಭವಿಸುವೆವು. ಏಕೆಂದರೆ, "ನಿರ್ಭಯ ಪ್ರಕಾಶವೇ" ನಿಮ್ಮಿಂದ ಸೃಷ್ಟವಾಗುವಂಥದು - ಅಲ್ಲಿ ಸಾವಿನ ಅಪಾಯ ಭಯ ಇಲ್ಲವೇ ಇಲ್ಲ ; ಪಾಪ, ಸಂಕಟ, ಅಜ್ಞಾನಗಳು ತರುವ ಕಂಟಕಗಳ ಭೀತಿಯೇ ಇಲ್ಲ. ನೀವು ನಿರ್ಮಿಸುವ ಬೆಳಕಾದರೋ ಅವಿಚ್ಛಿನ್ನ, ಅನಂತ, ಅಮರ್ತ್ಯ, ವಸ್ತುಗಳ ಆನಂದ ಸಾರ. ಏಕೆಂದರೆ, ಇವರೆಲ್ಲಾ ಅಮೃತತ್ವದ ಆನಂದೋದ್ರೇಕಯುಕ್ತ ದೊರೆಗಳು - ಅರ್ಯಮ, ಮಿತ್ರ ಮತ್ತು ಸರ್ವವ್ಯಾಪಕ, ವರುಣ ಕೂಡಾ ಅಂಥ ಸಾರ್ವಭೌಮರು."

ಈಗಲೂ ದಿವ್ಯ ಸತ್ಯ ಪ್ರಪಂಚವನ್ನು ರೂಪಕ ಮಾಡಿ ಹೇಳಿರುವುದು ಸ್ವರ್ ಲೋಕದ ಪ್ರತಿಮೆಯಲ್ಲೇ. "ಸ್ವರ್‌ಲೋಕದ ಬೆಳಕನ್ನು ತಲುಪೋಣ - ಆ ಬೆಳಕನ್ನು ಯಾರೂ ಹರಿದು ಚೂರು ಮಾಡಲಾರರು" ಎಂಬುದೇ ಸಾಧಕನ ಆಕಾಂಕ್ಷೆ. ಸ್ವರ್ ಲೋಕವು ಮಿತ್ರ-ವರುಣ-ಅರ್ಯಮರ ಅನುಲ್ಲಂಘ್ಯ ಮಹಜ್ಜನ್ಮ. ಅದು ಆತ್ಮನ ಸ್ವುರತ್-ಸ್ವರ್ಗಗಳಲ್ಲಿವೆ. ಅವರು ಪೂರ್ಣರಾಗಿ ಬೆಳೆಯುವುದರಿಂದ ಮತ್ತು ಅವರಲ್ಲಿ ವಕ್ರಸ್ವಭಾವವಿಲ್ಲದುದರಿಂದ ಸರ್ವ ನಿಯಾಮಕ ರಾಜರು ಸ್ವರ್ಗದಲ್ಲಿ ನಮ್ಮ ವಾಸಸ್ಥಳವನ್ನು ಹಿಡಿದಿಟ್ಟಿರುತ್ತಾರೆ. ಆ ವಾಸಸ್ಥಳವಿರುವ ಸ್ವರ್ಗವಾದರೋ ಮಾನವನ ಉದ್ಧೃತ ಪ್ರಜ್ಞೆಯ ಸತ್ತೆಯ ಮೂರು ತತ್ವಗಳನ್ನು ಪ್ರತಿಬಿಂಬಿಸುವ ತ್ರಿಪುಟ ಪ್ರಪಂಚವು ; ಅನಂತಾಸ್ತಿತ್ವ ಅನಂತ ಪ್ರಜ್ಞಾತ ಪ್ರಣೋದ ಮತ್ತು ಅನಂತಾನಂದ[೧]- ಎಂಬ ಇವೇ ಆ ಪ್ರಪಂಚದ ತ್ರಿಪುಟಗಳು. "ಅವರು ಪೃಥ್ವೀತ್ರಯವನ್ನು ಹಿಡಿದುಕೊಂಡಿದ್ದಾರೆ. ಸ್ವರ್ಗತ್ರಯವನ್ನು ಧರಿಸಿದ್ದಾರೆ ಮತ್ತು ಈ ದೇವತೆಗಳ ಕರ್ಮತ್ರಯವನ್ನು ತಮ್ಮ ಅಂತರ್ ಜ್ಞಾನದಲ್ಲಿ ವಶಮಾಡಿಟ್ಟುಕೊಂಡಿದ್ದಾರೆ. ಓ ಅದಿತಿ ಸುತರೇ, ಓ ಅರ್ಯಮ-ಮಿತ್ರ-ವರುಣರೇ, ಪರಮಸತ್ಯದ ದೆಸೆಯಿಂದ ನಿಮ್ಮ ಆ ಪ್ರಪಂಚವು ವಿಸ್ತಾರವೂ, ಮಹತ್ತಾದುದೂ ಸುಂದರವಾದುದೂ ಆಗಿದೆ. ಆ ನೀವು ಮೂರು ಪ್ರಕಾಶ ಲೋಕಗಳನ್ನು ಧಾರಣೆ ಮಾಡಿರುವಿರಿ : ನಿಮ್ಮ ದೇವತೆಗಳು ಬಂಗಾರದಂತೆ ಹೊಳೆಯುತ್ತಾರೆ, ಶುದ್ಧರೂ ಅಮೃತ ಧಾರೆಗಳಿಂದ ಶುದ್ಧೀಕೃತರೂ ಆಗಿದ್ದಾರೆ ; ಅವರು ನಿರ್‌ನಿದ್ರರು, ಅಜಯ್ಯರು, ಅನಿಮಿಷರು (ಕಣ್ಣು ಮುಚ್ಚದವರು) ಅವರು ನೇರ್‌ಡೆಯ ಮರ್ತ್ಯರಿಗಾಗಿ ಮಹಾವಿಸ್ತಾರವನ್ನು ಅಭಿವ್ಯಂಜಿಸುತ್ತಾರೆ

---

೧. ತ್ರಿಧಾತು.

(II.27.8,9). ಈಯೆಲ್ಲಾ ಶುದ್ಧೀಕಾರಕ ಅಮೃತ ಧಾರೆಗಳು (ಸಪ್ತ ಸಿಂಧುಗಳು) ಪರಮ ಸತ್ಯದ ಸ್ವರ್ಗದ ಹೇರಳ ಸಮೃದ್ಧಿಯ ವೃಷ್ಟಿಧಾರೆಗಳು. "ಬೆಳಕಿನಲ್ಲಿ ಆ ರಥಾರೂಢ ದೇವತೆಗಳು ಜ್ಞಾನದಲ್ಲಿ ಆಕ್ರಾಮಕರು, ಪಾಪರಹಿತರು ಮತ್ತು ಅವರು ಪರಮ ಸುಖ ಸೌಲಭ್ಯಕ್ಕಾಗಿ ಮಳೆಯನ್ನುಟ್ಟು ಸ್ವರ್ಗದ ಅಪಾರ ಐಶ್ವರ್ಯವನ್ನು ತೊಟ್ಟುಕೊಳ್ಳುತ್ತಾರೆ" (X.63.4) ಆ ಹೇರಳ ಸಂಪತ್ತನ್ನು ಸುರಿದು ನಮ್ಮ ಜೀವಾತ್ಮನನ್ನು ತನ್ನ ಮೂಲ ಆಕರದತ್ತ ಏರಿ ಹೋಗುವುದಕ್ಕೆ ತಕ್ಕ ತರಬೇತನ್ನು ಕೊಡುತ್ತಾರೆ. ಆ ಆಕರವೆಂದರೆ ಮೇಲ್ದರ್ಜೆಯ ಸಾಗರ ; ಅದರಿಂದಲೇ ಹೊಳೆವ ಜಲಧಾರೆಗಳು ಕೆಳಗಿಳಿಯುತ್ತವೆ.

ಇದರಿಂದ, ವಿಶ್ವ ದೇವತೆಗಳ ಮತ್ತು ಅನಂತ ಮಾತೆಯ ಬಗೆಗಿನ ಸೂಕ್ತಗಳಲ್ಲಿ ವರುಣ, ಮಿತ್ರ, ಅರ್ಯಮರೆಂಬ ಮಹಾದೇವತ್ರಯವು ಎಷ್ಟು ಹೆಚ್ಚಾಗಿ ಬರುವವರು ಎಂಬುದು ಗೊತ್ತಾಗುತ್ತದೆ. ಈ ತ್ರಯವನ್ನು ಪೂರ್ತಿಗೊಳಿಸುವ ಚತುರ್ಥನಾದ ಭಗದೇವತೆಯೂ ಸೇರಿ ನಾಲ್ವರೂ ಪೂರ್ಣಸತ್ಯ ಮತ್ತು ಅನಂತತೆಗಳ ರಾಶಿ ಹಾಗೂ ಶಿಖರಗಳ ಬಗೆಗೆ ಮಹಾಕಾಂಕ್ಷೆ ಇಟ್ಟುಕೊಂಡು ಆತ್ಯಂತಿಕ ವಿಚಾರ ಮಾಡುವ ಋಷಿಗಳ ಆಲೋಚನೆಯ ಮೇಲೆ ಪ್ರಭುತ್ವ ನಡೆಸುತ್ತಾರೆ. ಅವರ ಸಂಯುಕ್ತ ಜ್ಯೋತಿಃಸ್ವರೂಪ ಮತ್ತು ಸಂಯುಕ್ತ ಸಾಧನೆ ಅವರ ಸಾಧಾರಣ ಧರ್ಮವು ; ಅವರ ಕಾರ್ಯವೂ ಅವರಿಗೆ ಸಾಧಾರಣವಾಗಿದೆ. ಆದುದರಿಂದ ಈ ಸಾಧಾರಣ ಧರ್ಮಗಳ ಹಿನ್ನೆಲೆಯ ದೆಸೆಯಿಂದ ಅವರವರ ವೈಯಕ್ತಿಕವೂ ಪ್ರತ್ಯೇಕವೂ ಆದ ಕರ್ತವ್ಯಕ್ಕೆ ಪ್ರಾಧಾನ್ಯ ಕೊಟ್ಟಿಲ್ಲ - ಆದರೆ ಅವರ ಸಂಯುಕ್ತ ಪ್ರಾಧಾನ್ಯವು ಅಪ್ರತಿಹತವಾಗಿದೆ. ಅವರಿಗಿರುವುದು ಒಂದೇ ತೇಜಸ್ಸು, ಒಂದೇ ಕರ್ತವ್ಯ ಕರ್ಮ ; ಅವರು ಒಂದೇ ಒಂದಾದ ಅವಿಭಾಜ್ಯ ಪರಮಸತ್ಯವನ್ನು ಪೂರ್ತಿಗೊಳಿಸುತ್ತಾರೆ. ಈ ಆದಿತ್ಯ ಸೂಕ್ತಗಳಲ್ಲಿ ಬರುವ ವೈದಿಕ ವಿಚಾರವು ನಮ್ಮ ಸರ್ವ ಸಮ್ಮತ ವಿಶ್ವಜನೀನತೆಯ[೨]ಲ್ಲಿಯ ಸರ್ವ ದೇವತೈಕ್ಯ ಸ್ವರೂಪದ್ದೇ ಆಗಿದೆ. ಆದರೂ ಈ ಸಂಯೋಗವು ಲಭಿಸುವುದು ಅವರ ಶಕ್ತಿಗಳ ಸಾತ್ಮ್ಯದಿಂದಲೇ - ಆದುದರಿಂದ ಅದರಲ್ಲಿ ಪ್ರತಿಯೊಂದು ದೇವತೆಗೂ ಅದರದರ ಸ್ವಭಾವ ಹಾಗೂ ಕರ್ತವ್ಯ (ತತ್‌ಪೂರ್ವದಲ್ಲಿ) ಬೇರೆ ಬೇರೆಯಾಗಿಯೇ ಇದೆ. ಈ ದೇವಚತುಷ್ಟಯದ ಉದ್ದೇಶವೇನೆಂದರೆ, ನಾಲ್ಕು ಪ್ರಾಕೃತಿಕ ಭೂತಗಳ ಪರಸ್ಪರ ಹಾಸು-ಹೊಕ್ಕು ಕೆಲಸಗಳಿಂದ ಇಡೀ ದಿವ್ಯಸ್ಥಿತಿಯನ್ನು ರಚಿಸುವುದೇ ಆಗಿದೆ. ಆ ದಿವ್ಯವಾದರೋ ಸರ್ವವ್ಯಾಪಕ ಸತ್ತೆ. ಆ ಸತ್ತೆಯು ಅನಂತ ಮತ್ತು ಶುದ್ಧ. ವರುಣನು ನಮಗಾಗಿ ದಿವ್ಯಾತ್ಮದ ಅನಂತ ಸಾಮುದ್ರಿಕ (ಕಡಲಿನ) ಆಕಾಶ (ದೇಶ)ವನ್ನೂ ಅದರ ಅಂಬರೀಯ, ಭೂತಮೂಲ ಪಾವಿತ್ರ್ಯವನ್ನೂ ತರುತ್ತಾನೆ. ದಿವ್ಯವು ಅಸೀಮ ಪ್ರಜ್ಞಾ ಪಾರಾವಾರವು - ಅದರ ಜ್ಞಾನವು ಸಮಗ್ರ, ಅದು ಪವಿತ್ರ - ಆದುದರಿಂದ, ಅದು ತನ್ನ ಸೂಕ್ಷ್ಮವಾದ ವಸ್ತು ದರ್ಶನದಲ್ಲಿ ಜ್ಯೋತಿರ್ಮಯ ಋತವಾಗಿದೆ, ನ್ಯಾಯವಾಗಿದೆ, ಸರಿಯಾದುದಾಗಿದೆ ; ವಸ್ತುಗಳ ನಿಯಮ (ವಿಧಿ) ಹಾಗೂ ಸ್ವಭಾವಗಳಲ್ಲಿ ಇರುವ ತನ್ನ ಐಕಮತ್ಯದಲ್ಲಿ ಅದು ಸಂಪೂರ್ಣವಾಗಿ ಸುಖ - ಸಮಶ್ರುತಿಮಯವಾಗಿದೆ. ಈ ಬೆಳಕನ್ನೂ ಸಾಮಶ್ರುತ್ಯವನ್ನೂ ಮಿತ್ರನು ನಮಗಾಗಿ ತರುತ್ತಾನೆ ; ಅವನು ಈ ನ್ಯಾಯವಾದ ಭೇದಾಭೇದಗಳನ್ನು (ಅಸಂಬಂಧ-ಸಂಬಂಧಗಳನ್ನು-ವಿವಿಕ್ತತೆ-ಅವಿವಿಕ್ತತೆಗಳನ್ನು) ಹಾಗೂ ಸ್ನೇಹಿತತನದ ಸ್ವಭಾವ ಸಾಮ್ಯವನ್ನೂ (ಬಾಂಧವ್ಯೈಕ್ಯವನ್ನೂ, ಸಮಶ್ರುತಿಯನ್ನೂ) ಸ್ವಸಾಮರಸ್ಯವುಳ್ಳ ಮುಕ್ತಾತ್ಮನ ಸುಖವಿಧಿಗಳನ್ನೂ ಸಮಗ್ರ ಶ್ರೀಮದ್ವಿಚಾರ ಸಂಪನ್ನ ಪರಮಸತ್ಯವನ್ನೂ ಅದರ ಪ್ರಭಾಸಿಕ ಕಾರ್ಯಗಳನ್ನೂ ಸಹಸ್ರಪುಟದ ಭೋಗವನ್ನೂ ತರುತ್ತಾನೆ. ಸ್ವಸತ್ತೆಯಲ್ಲಿ ದಿವ್ಯವು (ಆತ್ಯಂತಿಕ ದೇವತಾತತ್ತ್ವವು) ಶುದ್ಧವೂ ಪೂರ್ಣವೂ

---

೨. ವೈಶ್ವದೇವ್ಯಂ

ಆಗಿದೆ ; ಅದರ ಶಕ್ತಿಯು ಸಮಗ್ರತೆಯುಳ್ಳದ್ದು; ನಮ್ಮಲ್ಲದು ಸಾರ್ವಕಾಲಿಕ ಊರ್ಧ್ವಗಮನ ಪ್ರವೃತ್ತಿಯ ಸ್ವರೂಪವನ್ನು ತಾಳಿರುತ್ತದೆ - ಹಾಗೆ ಮೇಲಕ್ಕೇರಿ ಸೇರುವುದು - ಆಯಾ ವಸ್ತುಗಳಿಗೆ, ಅವವುಗಳ ಜನ್ಮಸ್ಥಳವನ್ನು, ಸತ್ಯವನ್ನು. ಅರ್ಯಮನು ಈ ಬಲಿಷ್ಠ ಸಾಮರ್ಥ್ಯವನ್ನು ಮತ್ತು ಸಮೀಚೀನವಾಗಿ ದಿಗ್‌ದರ್ಶಿತ ಸುಖಾವಹ ಒಳ ಉತ್ ಸ್ಫೂರ್ತಿಯನ್ನು ನಮಗಾಗಿ ತರುತ್ತಾನೆ. ದಿವ್ಯ ಪದಾರ್ಥವು ಪವಿತ್ರ, ಪ್ರಮಾದರಹಿತ, ಸರ್ವಾಶ್ಲೇಷಕ, ಸ್ವಕೀಯ ಅನಂತ ಸತ್ತೆಯಲ್ಲೇ ಭೋಗಿಸುತ್ತಿರುವ ಉಪದ್ರವಮುಕ್ತ ಆನಂದೋದ್ರೇಕ ಎನ್ನಿಸಿದೆ. ಅದು ಸಮಾನವಾಗಿ ತಾನು ತನ್ನಲ್ಲಿ ನಿರ್ಮಿಸಿದ ಎಲ್ಲವನ್ನೂ ಭೋಗಿಸುತ್ತದೆ. ಭಗದೇವನು ಸಾರ್ವಭೌಮತೆಯನ್ನು -ಅರ್ಥಾತ್- ಮುಕ್ತಾತ್ಮನ ಆನಂದೋದ್ರೇಕವನ್ನು, ಅದರ ಸ್ವತಂತ್ರ, ಅಪತಿತ ಸ್ವಾಧಿಪತ್ಯವನ್ನು ಮತ್ತು ಜಗದಾಧಿಪತ್ಯವನ್ನು - ನಮಗಾಗಿ ತರುತ್ತಾನೆ.

ವ್ಯಾವಹಾರಿಕವಾಗಿ ಈ ದೇವಚತುಷ್ಟಯವೇ ಮುಂದೆ ಸಚ್ಚಿದಾನಂದನ ತ್ರಿಮುಖವಾಯಿತು : ಸತ್ತೆ, ಪ್ರಜ್ಞೆ, ಆತ್ಮಜ್ಞಾನ, ಆತ್ಮ-ಪ್ರಣೋದ ಸಮೇತವಾದ ಆನಂದವು ; ಮತ್ತು ಚಿತ್ ಹಾಗೂ ತಪಸ್ ಎಂಬಿವು ಪ್ರಜ್ಞೆಯ ದ್ವಿಮುಖ ವ್ಯಂಜಕಗಳು. ಆದರಿಲ್ಲಿ ಸಚ್ಚಿದಾನಂದ ತತ್ವವನ್ನು ವೈಶ್ವಿಕ ತತ್ವಚತುಷ್ಟಯವನ್ನಾಗಿ ಅನುವಾದಿಸಲಾಗಿದೆ- ಅದರ ಸಮಾನಾರ್ಥಕ ದೇವತಾತತ್ವಗಳಿಂದ ವಿಭಜಿಸಿ ಹೇಳಲಾಗಿದೆ. ಸತ್ತಿನ ಸರ್ವವ್ಯಾಪಕ ಪಾವಿತ್ರ್ಯವೇ ವರುಣ ರಾಜನ ಮೂಲ. ಸರ್ವೈಕ್ಯಕಾರಿಯಾದ ಚಿತ್-ಪ್ರಕಾಶದಲ್ಲಿ ದೇವತೆಗಳಿಗೆ ಪ್ರಿಯತಮನಾದ ಸುಖಿ ಮತ್ತು ಬಲಿಷ್ಠ ಎನ್ನಿಸಿದ ಮಿತ್ರರಾಜನ ಮೂಲವಿದೆ. ಬಹುರಥ. ಸಂಪನ್ನನಾದ ಅರ್ಯಮನ ಮೂಲವು ತಪಸ್ಸಿನ ಚಲನೆಯಲ್ಲೂ ಸರ್ವಸೂಕ್ಷ್ಮದರ್ಶಕ ದೃಷ್ಟಿಯ ಪ್ರಣೋದದಲ್ಲೂ ಇದೆ. ಸರ್ವಾಶ್ಲೇಷಕ ಆನಂದವು ಭಗರಾಜನ ಮೂಲ. ಹೀಗಿದ್ದರೂ ಸಾಕ್ಷಾತ್‌ಕೃತ ದೇವತಾಭಾವದಲ್ಲಿ ಈ ಭಿನ್ನ ವಸ್ತುಗಳೆಲ್ಲಾ ಒಂದೇ ಆಗಿರುವುದರಿಂದ, ಈ ವಸ್ತುತ್ರಯದಲ್ಲಿ (ಸತ್+ಚಿತ್+ಆನಂದಗಳಲ್ಲಿ) ಪ್ರತಿಯೊಂದೂ ಉಳಿದೆರಡನ್ನೂ ಒಳಗೊಂಡಿರುವುದರಿಂದ- ಮತ್ತು ಈ ಮೂರರಲ್ಲಿ ಯಾವ ಒಂದೂ ಭಿನ್ನವಾಗಿ ಇರಲಾರದಾಗಿರುವುದರಿಂದ ವಸ್ತು ಚತುಷ್ಟಯದಲ್ಲೂ ಪ್ರತಿಯೊಂದೂ ತನ್ನ ಮೂಲಭೂತ ವಿಶೇಷಣಬಲದಿಂದ ಉಳಿದ ಮೂರು ವಸ್ತುಗಳ (ವರುಣ+ಮಿತ್ರ+ಅರ್ಯಮ+ಭಗ) ಸಾಧಾರಣ ವಿಶೇಷಣವನ್ನು ಒಳಗೊಂಡಿರುವುದು ಸಹಜವಾಗಿದೆ. ಈ ನಾಲ್ವರು ದೇವರುಗಳೂ ಸೋದರರಂತಿದ್ದಾರೆ. ಈ ಕಾರಣದಿಂದ, ನಾವು ವೇದವನ್ನು ಬರೆದಷ್ಟೇ ಜಾಗರೂಕತೆಯಿಂದ ಅದನ್ನು ಓದದಿದ್ದರೆ ಅದರ ವ್ಯತ್ಯಾಸಗಳನ್ನರಿಯದೆ ನಾವು ಈ ರಾಜದ್ ರಾಜರಾದ ಪ್ರಕಾಶಾತ್ಮ ದೇವತಾಧೀಶರ ಅವಿವಿಕ್ತ, ಸಾಧಾರಣ ವಿಶೇಷಣಗಳನ್ನು (=ಕರ್ತವ್ಯಗಳನ್ನು=ಧರ್ಮಗಳನ್ನು) ಮಾತ್ರ ನೋಡಬಲ್ಲವರಾಗುವೆವು. ವೇದಸೂಕ್ತಗಳಲ್ಲಿ ಆದ್ಯಂತವಾಗಿ ಎಲ್ಲ ದೇವತೆಗಳ ವ್ಯತ್ಯಾಸಗತ ಐಕ್ಯವನ್ನು ಹೇಳಿರುವುದರಿಂದ ಮಾನಸ ಶಾಸ್ತ್ರೀಯ ಸೂಕ್ಷ್ಮತೆಗೆ ಹೊಂದಿಕೊಂಡಿರದ ಮನಸ್ಸಿಗೆ ವೈದಿಕ ದೇವತೆಗಳಲ್ಲಿ ಅಂಥ ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸುವುದು ಕಷ್ಟವೆನ್ನಿಸುವುದರಿಂದ ಅದು ದೇವತಾವರ್ಣನೆ ಎಂದರೆ ಒಂದು ಗೊಂದಲಗೇಡಿಯೆನ್ನಿಸುವ, ಸರ್ವಸಾಧಾರಣ ಅಥವಾ ಯಾವ ದೇವತೆಗೂ ಅನ್ವಯಿಸಬಹುದಾದ ಪರ್ಯಾಯಗಳಾಗಿ ತೋರುವ ವಿಶೇಷಣಗಳ (ಧರ್ಮಗಳ, ಲಕ್ಷಣಗಳ) ಮುದ್ದೆಯಾಗಿ ಕಾಣುವುದು ಸಹಜವೇ ಸರಿ. ಆದರೆ ಗ್ರೀಕ್ ಮತ್ತು ಈಜಿಪ್ಷಿಯನ್ ಸಾಂಕೇತಿಕತೆಯಲ್ಲಿರುವಂತೆಯೇ ವ್ಯತ್ಯಾಸಗಳಿವೆ ಮತ್ತು ಅಷ್ಟೇ ಮಹತ್ವದ ಪ್ರಭಾವಿಕತೆಯೂ ವೇದ ಸೂಕ್ತಗತ ದೇವತಾಸ್ತುತಿಗಳಲ್ಲಿದೆ. ಪ್ರತಿಯೊಂದು ದೇವತೆಯೂ ಇತರ

ದೇವತೆಗಳನ್ನೊಳಗೊಂಡಿದೆ- ಹೀಗಿದ್ದರೂ ವಿಶಿಷ್ಟ ಕರ್ತವ್ಯ ನಿರ್ವಹಣೆಯಲ್ಲಿ ತಾನೇ ಅದು ತಾನಾಗಿಯೂ ಇರುತ್ತದೆ.

ದೇವರಾಜ ಚತುಷ್ಟಯದಲ್ಲಿರುವ ವ್ಯತ್ಯಾಸದ ಸ್ವರೂಪವು ವೇದದಲ್ಲಿ ಅವರಿಗಿತ್ತ ವಿಭಿನ್ನ ಪ್ರಾಮುಖ್ಯವನ್ನು ವಿವರಿಸುತ್ತದೆ. ಅವರಲ್ಲಿ ವರುಣನು ಮೊಟ್ಟಮೊದಲಿನವನೆಂದೂ ಸರ್ವದೇವತೆಗಳಲ್ಲೂ ಹೆಚ್ಚು ಗಮನಾರ್ಹ ಚಿಂತನೀಯನೆಂದೂ ಸುಲಭವಾಗಿ ಹೇಳಿಬಿಡಬಹುದು. ಏಕೆಂದರೆ, ವೈದಿಕವಾದ ಪೂರ್ಣತ್ವದ ಕಲ್ಪನೆಯನ್ನು ಸ್ವಾನುಭವಕ್ಕೆ ತಂದುಕೊಳ್ಳಬೇಕಾದರೆ, ವೈದಿಕ ಸತ್ತೆಯ ಅನಂತತೆಯನ್ನು ಸಾಕ್ಷಾತ್ಕರಿಸಿಕೊಳ್ಳಬೇಕಾದರೆ, ವರುಣನ ಪ್ರಾಮುಖ್ಯವನ್ನು ಗುರುತಿಸಲೇಬೇಕಾಗುತ್ತದೆ. ವೈದಿಕ ಪೂರ್ಣತೆಗೆ ಅನಂತಾಸ್ತಿತ್ವವೇ ಆಧಾರವಾಗಿದೆ ; ವರುಣನು ಅಸೀಮತೆಯ (ಅನಂತತೆಯ) ಸಮ್ರಾಟ್. ಒಮ್ಮೆ ದೇವತ್ವದ ವೈಶಾಲ್ಯ-ಪಾವಿತ್ರ್ಯಗಳನ್ನು ಸಿದ್ಧಿಸಿಕೊಂಡು ಬಿಟ್ಟರೆ ತದ್ಗತವಾದ, ಸ್ವತ್ವ, ಶಕ್ತಿ, ವಿಶೇಷಣಗಳೆಲ್ಲವೂ ಅನಿವಾರ್ಯವಾಗಿ ಜೊತೆಗೇ ಮಾನವನಿಗೆ ಲಭ್ಯವಾಗಿ ಬಿಡುತ್ತವೆ. ಮಿತ್ರನಿಗೆ ಪ್ರತ್ಯೇಕವಾದ ಸೂಕ್ತವಿಲ್ಲವೇ ಇಲ್ಲ ಎನ್ನಲೂಬಹುದು. ಯಾವಾಗಲೂ ವರುಣನ ಜೊತೆಯಲ್ಲೇ ಅವನ ತಾದಾತ್ಮ್ಯಧೃತ ವರ್ಣನೆ ಬರುತ್ತದೆ ; ಇಲ್ಲವಾದರೆ ಇತರ ದೇವತೆಗಳ ನಾಮರೂಪಗಳಲ್ಲಿ ಅರ್ಥದಲ್ಲಿ ಬರುತ್ತಾನೆ. ಹೆಚ್ಚು ಸಾರಿ ವಿಶ್ವಕಾರ್ಮಿಕನಾದ ಅಗ್ನ್ಯರ್ಥದಲ್ಲಿ ಬರುತ್ತಾನೆ. ದೇವತೆಗಳು ತಮ್ಮ ಕಾರ್ಯಗಳಿಗಾಗಿ ಭೂಮಿಗೆ ಬರುವಾಗ ಸಾಮಶ್ಯುತ್ಯವನ್ನೂ ಪ್ರಕಾಶವನ್ನೂ ತಮ್ಮಲ್ಲಿ ಬಯಲು ಮಾಡಲು ಅವರು ಮಿತ್ರನನ್ನು ದಿವ್ಯಸ್ನೇಹಿತನನ್ನಾಗಿ ತೆಗೆದುಕೊಳ್ಳುತ್ತಾರೆ. ಯಮಳಶಕ್ತಿಗಳಾದ ಮಿತ್ರಾವರುಣರಿಗೆ ಒಟ್ಟಾಗಿ ಅನ್ವಯಿಸುವ ಸೂಕ್ತಗಳ ಸಂಖ್ಯೆಯು ಅಧಿಕ ; ಅವರೇ ರಾಜದ್‌ರಾಜರು. ಕೇವಲ ವರುಣನನ್ನೇ ಕುರಿತ ಸೂಕ್ತಗಳು ಕೆಲವಿವೆ - ಹಾಗೇ ಇಂದ್ರ-ವರುಣರನ್ನು ಒಟ್ಟಿಗೇ ಸಂಬೋಧಿಸಿದ ಸೂಕ್ತಗಳು ಕೆಲವಿವೆ ; ಮಿತ್ರನನ್ನೇ ಕುರಿತ ಒಂದೇ ಒಂದು ಸೂಕ್ತವಿದೆ; ಭಗನಿಗಾಗಿ ಬರೆದ ಸೂಕ್ತಗಳು ಎರಡು-ಮೂರು ; ಅರ್ಯಮನಿಗಾಗಿಯೇ ಬರೆದ ಸೂಕ್ತವು ಇಲ್ಲವೇ ಇಲ್ಲ. ಏಕೆಂದರೆ, ಅನಂತ ವೈಶಾಲ್ಯ ಮತ್ತು ಪಾವಿತ್ರ್ಯಗಳು ಆಧಾರಭೂತವಾಗಿರುವಾಗ ದೇವತೆಗಳ ಕಾರ್ಯಗಳ ಹೊಳೆವ ಸಾಮಶ್ರುತ್ಯವು ಆಧ್ಯಾತ್ಮಿಕದಿಂದಾರಂಭಿಸಿ ಭೌತಿಕದವರೆಗೆ ಬರುವ ನಮ್ಮ ವಿವಿಧ ಪ್ರಜ್ಞಾಸ್ತರಗಳ ಸುಸಂಬದ್ಧ ನಿಯಮಗಳು (ಕಾಯಿದೆಗಳು) ಎಂಬವುಗಳಿಂದ ಸಾಕ್ಷಾತ್ಕಾರವಾಗಬೇಕು- ಎಲ್ಲಿ? ಆ ಖಂಡದಲ್ಲಿ (ಅಖಂಡ ಖಂಡದಲ್ಲಿ), ಆ ಆಧಾರಸ್ತರದಲ್ಲಿ - ಅದೇ ಮಿತ್ರಾ ವರುಣ ಎಂಬ ಸಂಕೇತದಿಂದ ಉಕ್ತವಾದದ್ದು. ಅರ್ಯಮನ ಶಕ್ತಿಯನ್ನು ಸ್ವತಂತ್ರ ತತ್ವವೆಂದು ಗಣಿಸಲೇ ಇಲ್ಲ - ಪ್ರಣೋದವೆಂಬುದೊಂದು ಭೂಲೋಕದಲ್ಲಿ ಪ್ರಕಟವಾದ ಅವತಾರ, ಚಲನೆ, ಅಥವಾ ಸತ್ತೆಯ ಉತ್ಕ್ರಿಯಾತ್ಮಕ ಮೌಲ್ಯ ಹೇಗೋ ಹಾಗೆ ಅರ್ಯಮನು ಕೇವಲ ಕಾರ್ಯರೂಪನು, ಪ್ರಜ್ಞೆಯ ಮುಕ್ತಿ, ಜ್ಞಾನದ ಮುಕ್ತಿ, ವಸ್ತ್ವಂತರ್‌ಗತ ಸಹಜ ಸತ್ಯದ ಅಭಿವ್ಯಕ್ತಿ, ಕ್ರಿಯಾಶಕ್ತಿಯ ಹೂರಣ, ಪರಿಣಾಮರೂಪ ಅಥವಾ ಆತ್ಮಾನ್ವೇಷಣದ ಪರಿಣಾಮಕ ಸಾಧನ ಅಥವಾ ಸತ್ತೆ ಹಾಗೂ ಪ್ರಜ್ಞೆಗಳು ಆನಂದವಾಗಿ ತಮ್ಮನ್ನು ತಾವು ಸಾಕ್ಷಾತ್ಕರಿಸಿಕೊಳ್ಳಲು ಸಾಧನವಾದ ಆತ್ಮಗ್ರಾಹಕ ಚಲನೆ ಮಾತ್ರ. ಆದುದರಿಂದ ಅರ್ಯಮನಿಗೆ ಅದಿತಿಯ ಜೊತೆಗೇ ಯಾವಾಗಲೂ ಆಹ್ವಾನ-ಅಲ್ಲದಿದ್ದರೆ ವರುಣನ ಅಥವಾ ಮಿತ್ರನ ಜೊತೆಗೆ - ಇಲ್ಲದೆ ಹೋದರೆ ಮಹಾದೇವತ್ರಯದೊಡನೆ, ಸಾಕ್ಷಾತ್‌ಕೃತ ದೇವಚತುಷ್ಟಯದೊಡನೆ ಅಥವಾ ಆದಿತ್ಯರ ಯಾ ವಿಶ್ವದೇವರೊಡನೆ. ಅರ್ಯಮನಿಗೆ ಆಮಂತ್ರಣ-ಪ್ರತ್ಯೇಕವಾಗಿ ಇಲ್ಲ.

ಹಾಗಲ್ಲದೆ, ಭಗನು ನಮ್ಮ ಸತ್ತೆಯ ಗುಪ್ತ ದಿವ್ಯಸತ್ಯದ ಲಾಭಕ್ಕಾಗಿ ಮಾಡುವ ಚಲನೆಯ ಶಿಖರ ಸ್ವರೂಪನಾಗಿದ್ದಾನೆ ; ಏಕೆಂದರೆ ಆ ಸತ್ಯದ ಸಾರವೆಂದರೆ ಧನ್ಯತೆ, ಸಂಪೂರ್ಣ ಸ್ವಾತ್ಮತೃಪ್ತ ಸ್ಥಿತಿ. ಭಗನು ಸಾಕ್ಷಾತ್ ಸವಿತಾರನೇ. ಭೋಗಿಯು ಸರ್ವಭೋಕ್ತಾರನು ಎನ್ನಿಸಿದ ಭಗನು ತನ್ನ

ಸರ್ಜನದ ದಿವ್ಯೋದ್ದೇಶದಲ್ಲಿ ಸಫಲನಾದ ಸ್ರಷ್ಟಾರನು. ಆದುದರಿಂದ ಅವನು ಕರ್ತೃವಿಗಿಂತ ಹೆಚ್ಚಾಗಿ ಕರ್ಮಫಲ ಸ್ವರೂಪವುಳ್ಳವನು-ಇಲ್ಲವಾದರೆ-ಅವನು ಕಟ್ಟಕಡೆಯ ಕರ್ತನು, ನಮ್ಮ ಆಧ್ಯಾತ್ಮಿಕ ಶ್ರೇಯಃ ಸಮೃದ್ಧಿಯನ್ನು ಕೊಡುವವನೆಂಬುದಕ್ಕಿಂತ ಹೆಚ್ಚಾಗಿ ಅದನ್ನು ಹೊಂದಿದವನು ಎನ್ನಬಹುದು.

ವಾಮದೇವ ಋಷಿಯು ವಿಶ್ವದೇವರಿಗೆ ಬರೆದ ಸೂಕ್ತವು ವೈದಿಕ ದೇವತೆಗಳನ್ನು ಆಹ್ವಾನಿಸಿದುದು ನಮಗನುಕೂಲರಾಗಲೆಂದು ಮತ್ತು ನಮ್ಮ ಆತ್ಮಾನ್ವೇಷಣೆ ತುದಿಮುಟ್ಟಲೆಂದು ಎಂಬುದನ್ನು ಸ್ಪಷ್ಟವಾದ ಅರ್ಥವ್ಯಕ್ತಿತ್ವಗುಣದಿಂದ ತೋರಿಸಿ ಕೊಡುತ್ತದೆ. :

"ನಿಮ್ಮಲ್ಲಿ ಯಾರು ನಮ್ಮ ಮೋಕ್ತಾರರು? ಯಾರು ನಮ್ಮ ರಕ್ಷಕರು? ಓ ಭೂಮಿ-ಸ್ವರ್ಗಗಳೇ, ನಮ್ಮನ್ನು ಭೇದಮುಕ್ತರನ್ನಾಗಿ ಮಾಡಿರಿ. ಕಾಯಿರಿ. ಓ ಮಿತ್ರ, ಓ ವರುಣ, ನಮಗೆ ಸೋಲಿಸಲಾಗದ ಮರ್ತ್ಯತೆಯಿಂದ ಸಂರಕ್ಷಿಸಿರಿ ! ಏ ದೇವತೆಗಳೇ, ಯಜ್ಞಯಾನದಲ್ಲಿ ನಿಮ್ಮಲ್ಲಿ ಯಾರು ಅತಿ ಹೆಚ್ಚಿನ ಒಳಿತನ್ನು ನಮಗಾಗಿ ಪುನರ್‌ದೃಢೀಕರಿಸುವಿರಿ? ನಮ್ಮ ಮೂಲ ಉನ್ನತ ಪೀಠವನ್ನು ಯಾರು ಪ್ರಕಾಶಪಡಿಸುತ್ತಾರೋ ಅವರೇ ಅಮಿತ ಜ್ಞಾನ ಸಂಪನ್ನತೆಯಿಂದ ನಸುಕಾಗಿ ಉದಯಿಸಿ ನಮ್ಮ ಕತ್ತಲನ್ನು ದೂರ ಮಾಡುತ್ತಾರೆ ; ಅವರೇ - ಆ ಅವಿನಾಶಿಗಳಾದ ಸರ್ವಜ್ಞಾಪಕರೇ-ಅವನ್ನು ನಮಗಾಗಿ ಅಪ್ಪಣೆಯಿತ್ತು ಮಾಡಿಸುತ್ತಾರೆ. ಅವರು ಪರಮಸತ್ಯಜಾತರಾಗಿ, ಸಿದ್ಧಪುರುಷರಾಗಿ (ಸಿದ್ಧಿ ಪಡೆದವರಾಗಿ), ಬೆಳಕಿನಲ್ಲಿ ಬೆಳಗುತ್ತಾರೆ. ದಿವ್ಯ ಸುಖ ಸ್ವರೂಪದಲ್ಲಿ ಹರಿವ ಅದಿತಿ ನದಿಯನ್ನು, ಬೆಳಕು ಚೀರಿ ತೋರಿಸುವವಳನ್ನು, ಮಂತ್ರಗಳ ಮೂಲಕ ನನ್ನ ಸ್ನೇಹಿತೆಯನ್ನಾಗಿ ಮಾಡಿಕೊಳ್ಳಲು ಬಯಸಿ ಹುಡುಕುತ್ತೇನೆ. ಹೇ ಅಜಯ್ಯ ಇರುಳು-ನಸುಕುಗಳೇ, ಎರಡೂ ದಿನಗಳು ನಮ್ಮನ್ನು ಸಂಪೂರ್ಣವಾಗಿ ರಕ್ಷಿಸುವಂತೆ ಮಾಡಿರಿ. ವರುಣ-ಅರ್ಯಮರೇ, ದಾರಿಯನ್ನು ಪ್ರತ್ಯೇಕಿಸಿ ತೋರಿಸಿರಿ ; ಪ್ರಣೋದಪ್ರಭುವಾದ ಅಗ್ನಿಯೇ, ಸುಖ-ಸಿದ್ಧಿಯ ದಾರಿಯನ್ನು ತೋರಿಸು. ಹೇ ಇಂದ್ರ, ವಿಷ್ಣೋ ದೃಢೀಕೃತರಾದ ನೀವು ಬಲಿಷ್ಠ ರಕ್ಷಣೆ ಇರುವ, ಮಹಾಶಕ್ತಿಗಳಿರುವ ಶಾಂತಿಸ್ಥಲವನ್ನು ನಮ್ಮ ಸುತ್ತಲೂ ವಿಸ್ತರಿಸಿರಿ. ಪರ್ವತ-ಮರುತ್ತುಗಳ ಮತ್ತು ನಮ್ಮ ದಿವ್ಯ ಮೋಕ್ತಾರನಾದ ಭಗನ ವೃದ್ಧಿಯನ್ನು ನಾನು ಆಲಂಗಿಸುತ್ತೇನೆ. (ಸ್ವೀಕರಿಸುತ್ತೇನೆ). ಸರ್ವೇಶ್ವರನು ಪ್ರಾಪಂಚಿಕ ಪಾಪದಿಂದ ನಮ್ಮನ್ನು ರಕ್ಷಿಸಲಿ ಮತ್ತು ಮಿತ್ರನು ನಮ್ಮನು ಮಿತ್ರ ವಿರುದ್ಧವಾದ ಪಾಪದಿಂದ ದೂರವಿಡಲಿ. ಆಧಾರರೂಪೀ ಸಾಸುರ ದ್ಯಾವಾ ಪೃಥಿವೀ ದೇವತೆಗಳನ್ನೀಗ ಒಬ್ಬನು ದೃಢೀಕರಿಸಲಿ ; ಅವರೊಡನಿರುವ ಅಸುರನೇ ಆಧಾರ. ಆ ಆಧಾರದಿಂದಲೇ ನಾವು ಬಯಸಿದ್ದೆಲ್ಲಾ ಸಿಗುವುದು. ತಮ್ಮ ವಿಶಾಲ ವ್ಯಾಪ್ತಿಯಿಂದ ಆ ದೇವತೆಗಳು ಆ ಸಾಗರವನ್ನು ವಶದಲ್ಲಿಟ್ಟುಕೊಂಡು ಉರಿವ ಬೆಳಕಿನ ಬಲದಿಂದ ಗುಪ್ತವಾದ ಸಸ್ವರ ನದಿಗಳನ್ನು ಅನಾವರಣಗೊಳಿಸಿದರು. ಅದಿತಿ ದೇವಿಯು ದೇವತೆಗಳೊಡನೆ ನಮ್ಮನ್ನು ರಕ್ಷಿಸಲಿ. ದಿವ್ಯ ವಿಮೋಚಕನು ನಮ್ಮನ್ನು ತಪ್ಪದೆ ಮುಕ್ತಗೊಳಿಸಲಿ ; ಮಿತ್ರ-ವರುಣರ ಆಧಾರ ಶಕ್ತಿಯನ್ನು ನಾವು ಕಡಿಮೆ ಮಾಡದಿರೋಣ; ಅಗ್ನಿಯ ಮೇಲ್ಮಟ್ಟವನ್ನು ನ್ಯೂನಗೊಳಿಸದಿರೋಣ. ಅಗ್ನಿಯು ವಿಶಾಲ ಸಂಪತ್‌ಸಾರದ ಪ್ರಭುವು, ಪೂರ್ಣೀಕೃತ ಭೋಗದ ಒಡೆಯನು. ಹೇ ಉಷೇ, ಪರಸತ್ಯ ಧ್ವನಿಯೇ, ಅಪಾರ ಶ್ರೇಯಃ ಸಮೃದ್ಧಿಯ ರಾಣಿಯೇ, ಅಪೇಕ್ಷಣೀಯವಾದ ಬಹುವರಗಳನ್ನು ನಮ್ಮತ್ತ ತೆಗೆದುಕೊಂಡು ಬಾ ; ನಿನ್ನಲ್ಲಿ ಅವು ಹೇರಳವಾಗಿವೆ. ಆ ಗುಲಿಗೆ ಸವಿತೃ ಭಗ, ವರುಣ, ಮಿತ್ರ, ಅರ್ಯಮ, ಇಂದ್ರರು ನಮಗಾಗಿ ನಮ್ಮ ಸುಖ ಸೌಲಭ್ಯದ ಐಶ್ವರ್ಯದಿಂದ ಸರಿಯಾಗಿ ತಲುಪಲಿ (IV.55).

❖ ❖

# ವರುಣ

ಆವರಿಸು, ಸುತ್ತುವರಿ, ಮುಚ್ಚು ಹರಡಿಕೋ ಎಂಬರ್ಥಗಳನ್ನುಳ್ಳ ಧಾತುವಿನಿಂದ ವರುಣ ಶಬ್ದವು ವ್ಯುತ್ಪನ್ನವಾಗಿದೆ. ಹೆಸರಿನ ಈ ಅರ್ಥಗಳಿಂದ ಕವಿ ದೃಷ್ಟಿಯ ಇದಿರು, ಪ್ರಾಚೀನ ಯೋಗಿಗಳ ಕಲ್ಪನಾ ದೃಷ್ಟಿಯ ಮುಂದೆ, ಅನಂತಕ್ಕೆ ಅತಿ ಹತ್ತಿರವೆಂದು ನಮಗೆನ್ನಿಸುವ ಪ್ರತಿಮೆಗಳು, ರೂಪಕಗಳು, ಹುಟ್ಟಿದುವು. ಅವರು ದೇವರನ್ನು ಅತ್ಯುನ್ನತ ಸ್ವರ್ಗಾವರಣ ಎಂದು ಕಂಡರು, ಆವರಿಸುವ ಸಾಗರದಂತೆ ಅವರು ದಿವ್ಯಸತ್ತೆಯನ್ನನುಭವಿಸಿದರು, ಆ ದೇವರ ಅಪ್ರಮಿತ ಉಪಸ್ಥಿತಿಯಲ್ಲಿ ಬದುಕಿದರು - ಹೇಗೆ? ಶುದ್ಧವೂ, ಸರ್ವವ್ಯಾಪಿಯೂ ಆದ ಆಕಾಶದಲ್ಲಿ ಹೇಗೋ ಹಾಗೆ. ವರುಣನೇ ಈ ಅತ್ಯುಚ್ಚ ಸ್ವರ್ಗ, ಈ ಆತ್ಮಾವಾರಕ ಸಾಗರ, ಈ ವ್ಯೋಮಸ್ವ ಮತ್ತು ಅನಂತವ್ಯಾಪನೆ.

ಅದೇ ಧಾತುವು ಕೃಷ್ಣಾವಾರಕನಾದ ವೃತ್ರನ ನಾಮಕರಣಕ್ಕೂ ಕಾರಣವಾಯಿತು. ತತ್‌ಸಂಬಂಧಿಗಳಾದ ಅರ್ಥಗಳೆಂದರೆ, ತಡೆಹಿಡಿ, ಪ್ರತಿಭಟಿಸು, ಮುಸುಕು ಹಾಕು, ಬೇಲಿಹಾಕು, ಮುತ್ತಿಗೆಹಾಕು, ಅಡ್ಡ ಹಿಡಿದು ಒತ್ತಿ ಒತ್ತಿ ಹೋಲಿ ಎಂಬಿವು. ಆದರೆ ಕೃಷ್ಣವೃತ್ರನು ಎಂದರೆ ದಪ್ಪಮೋಡ ಮತ್ತು ಮುಸುಕುವ ನೆಳಲು. ವೃತ್ರನಿಗೆ ಕೂಡಾ ಜ್ಞಾನವಿದೆ. - ಆ ಜ್ಞಾನದ ಹೆಸರು ಮಾಯೆ=ಪ್ರಮಿತ ಜೀವನ ಮತ್ತು ನಮ್ಮವಾಗಬೇಕಾಗಿದ್ದ ಮಿಕ್ಕ ಸಂಪತ್ ಸಮೃದ್ಧ ವಿಶಾಲಾಸ್ತಿತ್ವವೆಲ್ಲವನ್ನೂ ಅವಮಾನಸದ ರಾತ್ರಿಯಲ್ಲಿ ಮುಚ್ಚಿಡುವುದು ; ಮತ್ತು ಈ ರಚನಾತ್ಮಕ ಜ್ಞಾನಕ್ಕೆ ವಿರುದ್ಧವಾದ ಅರಚನಾತ್ಮಕ ಶಕ್ತಿಯಿಂದ ದೇವತೆಗಳ ವಿರುದ್ಧವಾಗಿ ವೃತ್ರನು ಶತ್ರುಸ್ಥಾನದಲ್ಲಿ ನಿಲ್ಲುತ್ತಾನೆ. - ಮಾನವನ ದಿವ್ಯ ಹಕ್ಕಿನ ವಿರುದ್ಧವಾಗಿ ಅವನು ತನ್ನ ಅದಿವ್ಯ ಹಕ್ಕನ್ನು ಬಲವಾಗಿ ಹೇರುತ್ತಾನೆ. ವರುಣನು ತನ್ನ ಅಸೀಮ ವಿಸ್ತಾರ ಮತ್ತು ಯಥೇಷ್ಟ ದರ್ಶನಗಳಿಂದ ಆತ ಹಾಕಿದ ಗಡಿಮಿತಿಗಳನ್ನು ಚಾಪೆ ಸುತ್ತಿದಂತೆ ಸುತ್ತಿ ಹಿಂದಕ್ಕೆ ಎಸೆಯುತ್ತಾನೆ. ಕಾಳವೃತ್ರನು ತನ್ನ ಮೂರ್ಖತನದಿಂದ ಎಳೆದು ಹಿಡಿದು ಅಸ್ಪಷ್ಟೀಕರಿಸಿದ್ದನ್ನು ವರುಣನು ತನ್ನ ಬೆಳಕನ್ನು ನಮ್ಮ ಸುತ್ತಲೂ ಜೀರಿ ತೋರಿಸುತ್ತಾನೆ. ವರುಣನ ದೇವತ್ವವು ಸರ್ವಾಶ್ಲೇಷಕ ಹಾಗೂ ಸರ್ವಪ್ರಕಾಶಕ ಅನಂತತೆಯ ಪ್ರತಿಮೆಯಾಗಿದೆ.

ಈ ಕಾರಣದಿಂದ ವರುಣನ ಭೌತಿಕ ಆಕಾರವು ಉರಿವ ಬೆಂಕಿಗಿಂತ ಯಾ ಹೊಳೆವ ನೇಸರಿಗಿಂತ ಯಾ ಮಿಂಚುವ ಉಷೆಗಿಂತ ಬಹಳ ಕಡಿಮೆ ನಿಶ್ಚಿತ ಸ್ವರೂಪದ್ದಾಗಿದೆ. ಹಳೆಯ ವ್ಯಾಖ್ಯಾನಕಾರರು ವಿಚಿತ್ರವಾಗಿ ಅವನನ್ನು ರಾತ್ರಿದೇವನೆಂದು ಆಲೋಚಿಸಿದರು. ಪುರಾಣಗಳಲ್ಲಿ ಅವನು (ಜಲದೇವತೆ) ಜಲಾಧಿಪತಿಯೆಂದೂ[೧] ಅವನ ಪಾಶವು ಹಸಿದೋಗಲಿನ ಹಿಂಸಕ ಉರುಳೆಂದೂ ಹೇಳಲಾಗಿದೆ. ಯುರೂಪಿಯನ್ ವಿದ್ವಾಂಸರು "ಯೂರೇನಸ್" ಎಂಬ ಗ್ರೀಕ್ ದೇವತೆಗವನನ್ನು ಹೋಲಿಸಿ ಮೂಲತಃ ಆಕಾಶದ ಪ್ರಭುವಾದ ವರುಣನ ಸ್ವಾಭಾವಿಕ ನೀಲವರ್ಣವನ್ನು ಕೆಳಗಿನ (ಕಡಲ) ನೀಲವರ್ಣಕ್ಕೆ ಪರಿವರ್ತಿಸಿ ಕಲ್ಪನಾ ವರ್ಗಾವಣೆಯ ಮೂಲಕ ವರುಣನನ್ನು ಮೇಲಿನ

---

೧. ಹೋಲಿಸಿರಿ : "NEREUS" ಎಂದರೆ ಗ್ರೀಕರ ಸಮುದ್ರ ದೇವತೆ - ಅನುವಾದಕ.

ಆಕಾಶದಿಂದ ಕೆಳಗೆ ತಳ್ಳಿದ್ದಾರೆ. ಇಂದ್ರನು ಆಗಸಗಳ ಪ್ರಭುವೂ ದೇವರಾಜನೂ ಆದ ಮೇಲೆ ಬಹುಶಃ ವರುಣನು ಕೇವಲ ಜಲರಾಜ್ಯದಲ್ಲೇ ತೃಪ್ತಿಪಟ್ಟುಕೊಂಡಿರ-ಬೇಕಾಯಿತೆಂದು ತೋರುತ್ತದೆ - ಪುರಾಣಕಾಲದಲ್ಲಿ. ಯೋಗಿಗಳ ಸಾಂಕೇತಿಕ ಪದ್ಧತಿಯನ್ನು ನಾವು ತಿಳಿದುಕೊಂಡರೆ ಈ ಊಹಾಪೋಹಗಳೆಲ್ಲಾ ಅನವಶ್ಯಕಗಳೆಂದು ತಿಳಿದುಬರುತ್ತದೆ. ಅವರ ಪದ್ಧತಿಯೆಂದರೆ, ವಿವಿಧ ಕಲ್ಪನೆಗಳನ್ನೂ ಪ್ರತಿಮೆಗಳನ್ನೂ ಒಟ್ಟು ಸೇರಿಸಿ ಒಂದು ಸಾಮಾನ್ಯ ಕಲ್ಪನೆಯನ್ನು ರೂಪಿಸಿ ಅದು ಎಲ್ಲವುಗಳ ಸಂಬಂಧವನ್ನೂ ಪ್ರಕಟಿಸುತ್ತದೆ. ಹೀಗಿರುವುದರಿಂದ ಒಂದೇ ಬಾರಿಗೆ ವರುಣನು ಅತ್ಯುನ್ನತ ಮುಸುಕಾದ ಆಕಾಶದ ಮತ್ತು ಸರ್ವ ಸಾಗರಗಳ ಅರಸನೂ ಆಗಿದ್ದಾನೆ. ದ್ಯೌಷ್ಪಿತನು ಸ್ವರ್ಗಗಳ ಒಡೆಯನು ; ಬೆಳಕಿನ ಸ್ವರ್ಗಗಳ ಅಧಿಪತಿಯು ಇಂದ್ರನು. ಈ ಕ್ಷೇತ್ರಗಳ ರಾಜನು ವರುಣನಲ್ಲ. ಎಲ್ಲ ವಿಸ್ತಾರಗಳಿಗೂ ವರುಣನು ಯಜಮಾನನು ; ಪ್ರತಿಯೊಂದು ಅನಂತತೆಯೂ ಅವನ ಆಸ್ತಿ, ಅವನ ಸ್ವತ್ತು.

ಯೋಗಿಗಳ ಕಲ್ಪನೆಯಲ್ಲಿ ಆಕಾಶವೂ ಸಾಗರವೂ ಸಂಧಿಸಿ ಒಂದೇ ಆಗಿವೆ. ಈ ಐಕ್ಯದ ಮೂಲವನ್ನು ಹುಡುಕಲು ಬಹಳ ದೂರ ಹೋಗಬೇಕಾಗಿಲ್ಲ. ಹಳೆಯ ಸೃಷ್ಟಿ ಕಲ್ಪನೆಯು ಹಿಮಾಲಯದಿಂದ ಯಾಂಡೀಸಿನವರೆಗೆ ಹಬ್ಬಿರುವುದು ಹೀಗಿದೆ : ಸರ್ವವಸ್ತುಸಾರವೂ ಜಲದ ನಿರಾಕಾರ ವಿಸ್ತಾರವೇ. ಮೊದಲು ಅದು ಕಾರ್ಗತ್ತಲಿಂದ ಮುಸುಕಿತ್ತು. ಅದರಿಂದ ಹಗಲಿರುಳುಗಳೂ ಸ್ವರ್ಗ-ಭೂಮಿಗಳೂ ಇತರ ಎಲ್ಲ ಲೋಕಗಳೂ ಆವಿರ್ಭವಿಸಿದವು. ಹೀಬ್ರೂ ಸೃಷ್ಟಿ ಶಾಸ್ತ್ರದಲ್ಲಿ "ಸಾಗರದ ಮೇಲ್ಮೈಯ ಮೇಲೆ (ಮುಖದ ಮೇಲೆ) ಕತ್ತಲಿತ್ತು ಮತ್ತು ದೇವರ ಆತ್ಮವು ಜಲಗಳ ಮೇಲೆ ಸಂಚರಿಸಿತು" - ಎಂದು ಹೇಳಿದೆ. ಅವನು ಮಂತ್ರ ಶಬ್ದದಿಂದ ಜಲಗಳನ್ನು ಸ್ವರ್ಗ-ಅಂತರಿಕ್ಷಗಳಲ್ಲಿ ವಿಭಜಿಸಿದನು-ಈಗ ಎರಡು ಜಲ ವಿಭಾಗಗಳಾದವು- ಒಂದು ಪಾರ್ಥಿವ, ಅಂತರಿಕ್ಷದ ಕೆಳಗೆ ; ಇನ್ನೊಂದು ಸ್ವರ್ಗೀಯ, ಅಂತರಿಕ್ಷದ ಮೇಲ್ಗಡೆ. ಈ ವೈಶ್ವತ್ರಿಕ ನಂಬಿಗೆಯನ್ನು, ವೈಶ್ವತ್ರಿಕ ಪ್ರತಿಮೆಯನ್ನು ಗ್ರಹಿಸಿದರು ಮತ್ತು ಅದರಲ್ಲಿ ತಮ್ಮ ಮಾನಸಶಾಸ್ತ್ರೀಯ ಸಿರಿವಂತ ಮೌಲ್ಯಗಳನ್ನು ಒತ್ತೊತ್ತಿ ತುಂಬಿದರು. ಒಂದು ಅಂತರಿಕ್ಷದ ಬದಲು ಅವರು ಎರಡನ್ನು ಕಂಡರು - ಪಾರ್ಥಿವ ಮತ್ತು ಸ್ವರ್ಗೀಯ ಎಂದು. ಎರಡು ಸಾಗರಗಳ ಬದಲು ಅವರ ಅಮುದ್ರ ದರ್ಶನದೆದುರಿನಲ್ಲಿ ಮೂರು ಸಾಗರಗಳು ಹರಹಿ ನಿಂತವು.

ಅವರು ಕಂಡದ್ದನ್ನು ಮಾನವನು ತಾನು ತನ್ನ ಭೌತಿಕ ದೃಷ್ಟಿಯನ್ನು ಬದಲಾಯಿಸಿ ನಿಸರ್ಗ ಹಾಗೂ ಪ್ರಪಂಚಗಳ ಬಗೆಗೆ ಮಾನಸಾತ್ಮಿಕ ದೃಷ್ಟಿಯನ್ನು ಪಡೆದಾಗ ಯಾವಾಗಲೂ ಕಾಣುತ್ತಿರುತ್ತಾನೆ. ತಮ್ಮ ಕೆಳಗವರು ತಳಗಾಣದ ರಾತ್ರಿ, ಒತ್ತಿ ಬರುತ್ತಿರುವ ಅಸ್ಪಷ್ಟತೆ, ಕತ್ತಲಲ್ಲಡಗಿರುವ ಕತ್ತಲೆ, ತಾವು ಹುಟ್ಟಿ ಬಂದ ಏಕಮೇವಾದ್ವಿತೀಯ ಸತ್ತೆಯ ಬಲಿಷ್ಠ ಕ್ರಿಯಾಶಕ್ತಿ-ಇವುಗಳಿಂದ ತುಂಬಿರುವ ಅಮಾನಸ ಜಲರಾಶಿಯನ್ನು, ಅಜ್ಞಾನಾಂಧಕಾರ ಜಾಡ್ಯವನ್ನು ಕಂಡರು. ತಮ್ಮ ಮೇಲೆ ಅವರು ಮೂಲೆಯಲ್ಲಿರುವ ಪ್ರಕಾಶ-ಮಾಧುರ್ಯಗಳ ಸಮುದ್ರವನ್ನು, ಅತ್ಯುನ್ನತ ಆಕಾಶವನ್ನು, ಸರ್ವಾನಂದಮಯ ವಿಷ್ಣುವಿನ ಅತಿ ಎತ್ತರದ ಮೆಟ್ಟಿಲನ್ನು (ಹೆಜ್ಜೆಯ ಸ್ಥಳವನ್ನು) ಕಂಡರು ; - ಅವರ ಆಕೃಷ್ಟ ಅಸ್ತಿತ್ವವು ಆ ವಿಷ್ಣುಪದವನ್ನು ಏರಬೇಕು ಆ ಆಕಾಶಗಳಲ್ಲಿ ಒಂದು ಸಾಂದ್ರಕೃಷ್ಣ ಆಕಾಶ-ಅರ್ಥಾತ್-ಅರೂಪಿತ ಭೌತಿಕ ಅಪ್ರಜ್ಞ, ಅನಸ್ತಿತ್ವ ಸ್ವರೂಪದ್ದಾಗಿತ್ತು. ಇನ್ನೊಂದು ತೇಜೋಮಯ ಆಕಾಶೀಯ, ಸರ್ವಪ್ರಜ್ಞ, ಸತ್ತಾತ್ಮಕ, ಪರನಿರಪೇಕ್ಷಪದಾರ್ಥವು 'ಈಯೆರಡೂ ಹೊಳೆಯದ ಹಾಗೂ ಹೊಳೆಯುವ ಏಕಮೇವಾದ್ವಿತೀಯನ ವಿಸ್ತಾರಗಳು (ಬಡಾವಣೆಗಳು).

ಈಯೆರಡು ಅಜ್ಞಾತ ಅನಂತ್ಯಗಳ ನಡುವೆ-ಅರ್ಥಾತ್-ಅನಂತ ಗುಪ್ತ ಶಕ್ತಿ ಸಂಪನ್ನ ಶೂನ್ಯ ಹಾಗೂ ಅನಂತ ನಿರ್ವಿಶೇಷ (ಸ್ವತಂತ್ರಪೂರ್ಣ) ಕ್ಷ-ಕಾರಗಳ ನಡುವೆ, ತಮ್ಮ ಸುತ್ತಲೂ ಅವರು, ತಮ್ಮ ಕಣ್ಣೆದುರಿಗೇ ಕೆಳಗೂ ಮೇಲೂ ನಿತ್ಯವರ್ಧಮಾನ ಪ್ರಜ್ಞಾನ ಸತ್ತೆಯೆಂಬ ತೃತೀಯ ಸಮುದ್ರವನ್ನು ನೋಡಿದರು. ಅದೊಂದು ತೆರನಾದ ಅಪ್ರಮಿತ ಅಲೆಯಂತಿತ್ತು-ಅವರದನ್ನು ಸ್ಫುಟವಾದ ಘನರೂಪಕದ ಮೂಲಕ ಉದ್ಗಮನ, ಉತ್‌ಪ್ರವಹಣ, ಅಥವಾ ಸ್ವರ್ಗವನ್ನು ದಾಟಿ ಉನ್ನತತಮ ಸಮುದ್ರಗಳನ್ನು ಹೊಗುವುದು ಎಂದು ಹೇಳಿದರು. ಈ ಅಪಾಯಕರ ಸಾಗರವೇ ನಾವು ನಾವೆಯ ಮೂಲಕ ದಾಟಬೇಕಾದ ಕಡಲು. ಅಲ್ಲಿ ಭೋಗಾರ್ಥಿಯಾದ ಭುಜ್ಯು ಎಂಬ ಪ್ರಣೋದಭರ ತ್ವರಾಸ್ವರೂಪನಾದ ತುಗ್ರರಾಜನ ಪುತ್ರನು ತನ್ನ ದುರಾಚಾರ ಶೀಲ ಮಿತ್ರದ್ರೋಹಿ ಸಹಚರರಿಂದ ಜೀಸಾಡಲ್ಪಟ್ಟು ಮುಳುಗುವುದರಲ್ಲಿದ್ದನು. ಆಗ ಆಶ್ಚರ್ಯಕರ ರಥನೌಕಾರೂಢ ಅಶ್ವಿಗಳು ಅವನ ಸಹಾಯಕ್ಕಾಗಿ ಧಾವಿಸಿ ಬಂದರು. ತನ್ನ ಅತಿವಿಸ್ತಾರವಾದ ಋತ-ಸತ್ಯಗಳಿಂದ ನಮ್ಮ ಪರಿಮಿತ ಸಂಕಲ್ಪ ಶಕ್ತಿ ಹಾಗೂ ಪರಿಮಿತ ನ್ಯಾಯಾನ್ಯಾಯ ವಿವೇಕಗಳಿಂದ ಪಾರಾಗಲು ನಮಗೆ ಕಲಿಸಬೇಕು ; ಆಗ ಮಾತ್ರ ಅಂಥ ಅಪಾಯಗಳಿಂದ ನಾವು ಪಾರಾದೇವು - ನಮಗಂಥ ಅಪೇಕ್ಷೆಯಿದ್ದರೆ ಮಾತ್ರ ವರುಣನು ಹಾಗೆ ಕಲಿಸಬರುತ್ತಾನೆ. ನಾವು ಮಾನವ್ಯ ಹಾಯಿದೋಣಿಯನ್ನು ಹತ್ತಬಾರದು-ಹಾಗಲ್ಲದೆ, "ದಿವ್ಯನಾದ, ಸರಿಯಾದ ಹಾಯಿಯಿರುವ, ಮುಳುಗದಿರುವ ಮತ್ತು ನಿರ್ದುಷ್ಟವಾದ ಹಡಗನ್ನು ಹತ್ತಬೇಕು." ನಮ್ಮ ಬುವಿಯ ಮೇಲಿನ ಮಧ್ಯಸ್ಥ ಸಾಗರವನ್ನು ಹೊಕ್ಕು ಜ್ಞಾನಸೂರ್ಯನು ಅಪ್ರಜ್ಞಾನದ ಗುಹೆಯಿಂದ ಹೊರಬಿದ್ದು ಮೇಲೇರುವುದನ್ನು ನಾವು ನೋಡಿದ್ದೇವೆ ; ದ್ರಷ್ಟಾರರ ಮಾರ್ಗದರ್ಶನದಲ್ಲಿ ಅವನು ಜಲಯಾನ ಮಾಡುವುದನ್ನು ಕಂಡಿದ್ದೇವೆ. ಏಕೆಂದರೆ ಇದು ಒಂದು ಸಾಗರಾಕಾಶವು ; ಅಥವಾ ಇದೊಂದು ಕಚ್ಚು ಹಲಗೆಗಳಂತೆ ಸಾಲಾಗಿರುವ ಗಗನ ಸೋಪಾನಾವಳಿ. ವೈದಿಕ ಪ್ರತಿಮಾಲಂಕಾರವನ್ನೇ ಅನುಸರಿಸಿದರೆ ಸಾಗರದ ಮೇಲೆ ಸಾಗರ (ಒಂದರ ಮೇಲೊಂದರಂತೆ) ಪಸರಿಸಿ ಕುಳಿತಿವೆ ಎನ್ನಬೇಕಾಗುತ್ತದೆ. ಪ್ರಪಂಚವು ಎತ್ತರಗಳ ಸಾಲು (ಮೆಟ್ಟಿಲುಗಳನ್ನುಳ್ಳ ಏಣಿ)-ಆ ಸಾಗರಸ್ತರಗಳು ಆಳಗಳು ಎಂದೂ ಗಣಿಸಿದ್ದುಂಟು. ಆ ಎತ್ತರ-ಆಳಗಳ ಪರಸ್ಪರ ಅವಕಾಸ-ವಿಕಾಸಗಳ ವಿಸ್ತಾರಗಳಿಗೆ ಅಂತವಿಲ್ಲ, ಪಾರವಿಲ್ಲ. ಕೆಳಗಿನ ಹೊಳೆವ ಗಗನವು ಮೇಲಿನ ಹೆಚ್ಚಾಗಿ ಹೊಳೆವ ಗಗನಕ್ಕೆ ಏರುವುದು ; ಪ್ರಜ್ಞೆಯ ಪ್ರತಿಯೊಂದು ಸ್ತರವೂ ಅನೇಕಾನೇಕ ಕೆಳಮಟ್ಟದ ಪ್ರಜ್ಞಾಸ್ತರಗಳ ಮೇಲೆ ನಿಂತಿದ್ದು ಅನೇಕಾನೇಕ ಮೇಲ್ಮಟ್ಟದ ಪ್ರಜ್ಞಾಸ್ತರಗಳಿಗೆ ಏರಲು ಅಪೇಕ್ಷಿಸುತ್ತದೆ.

ಆದರೆ ಅಪ್ರಜ್ಞ ಅಜ್ಞಾನ ರಾತ್ರಿಯಲ್ಲಿ ಯಾವಾಗಲೂ ಮಹತ್ತರವಾಗಿರುವ ಕತ್ತಲೆಯು ಅಲ್ಪತರ ಕತ್ತಲನ್ನು ಮುಚ್ಚಿಟ್ಟು ರಕ್ಷಿಸುತ್ತಿರುವಂತೆ, ಅಲ್ಪ ಸತ್ಯವೊಂದು ಮಹಾಸತ್ಯವೊಂದರಿಂದ ಅಡಗಿಸಲ್ಪಟ್ಟಿದೆ. ಅದರಲ್ಲಿ ನಮ್ಮ ಸ್ವರ್ಗವು ನಮಗಾಗಿ ಕಾಯುತ್ತಿದೆ. ಆ ಸ್ವರ್ಗಗರ್ಭಿತ ಮಹಾಸತ್ಯವು ಎಂದರೆ ಅತ್ಯುನ್ನತ ಅತಿಮಾನಸ ಮಹಾಕಾಶವು. ಅದರ ಅತ್ಯುನ್ನತ ಅಗಲ ಬೆಳಕಿನ ಕಡಲ ಅಲ್ಪಾಕಾಶಗಳು ನಮ್ಮಿಂದ ಬಹುದೂರದಲ್ಲಿ ತದ್ಗತವಾಗಿವೆ-ಮಹಾಕಾಶಾಂತರ್ಗತವಾಗಿವೆ. ವರುಣರಾಜನ ಸತ್ಯ ಇದೇ ಆಗಿದೆ. ಪ್ರದ್ಯುಮ್ನೆಯರಾದ ಉಷೆಯರು ಇವನತ್ತಲೇ ಉದಯಿಸುತ್ತವೆ, (ಸಪ್ತ) ಸಿಂಧುಗಳು ಇತ್ತ ಹರಿಯುತ್ತವೆ ಮತ್ತು ಇತ್ತಲೇ ಸೂರ್ಯನು ತನ್ನ ರಥಕ್ಕೆ ಕಟ್ಟಿದ ಕುದುರೆಗಳನ್ನು ನೊಗದಿಂದ ಬಿಡಿಸುವನು. ತನ್ನ ಸುದೀರ್ಘ ವಿಸ್ತಾರದ ಸತ್ತೆಯಲ್ಲಿ ವರುಣನು ತನ್ನ ಅಪ್ರಮಿತಜ್ಞಾನದಿಂದ, ಅಸೀಮ ಅರಿವಿನಿಂದ, ಈಯೆಲ್ಲವನ್ನೂ ಒಳಗೊಂಡು, ನೋಡಿ,

ನಿಯಂತ್ರಿಸುತ್ತಾನೆ. ಈ ಸಾಗರಗಳೆಲ್ಲವೂ ಅವನವು. ವರುಣನು ಸ್ವಭಾವತಃ ಒಂದೇ ಒಂದಾದ ನಿತ್ಯ ಸುಖಕರ ಪ್ರಕಾಶ ಹಾಗೂ ಸತ್ಯಗಳ ಸ್ವರೂಪದ, ತತ್‌ಪದಾರ್ಥದ, ವಿಸ್ತೃತ ತೇಜೋರಾಶಿ. ಹೀಗಿದ್ದರೂ ಅವನ ಈ ಸ್ವಭಾವಕ್ಕೆ ವಿರುದ್ಧವಾಗಿ ತೋರುವ ಅಪ್ರಜ್ಞಾತ ಪ್ರಜ್ಞೆಯ ಹಾಗೂ ರಾತ್ರಿಗಳ ಸ್ವರೂಪದ ಸಾಗರ ಕೂಡಾ ಆ ವರುಣನಲ್ಲೇ ಅಂತರ್ಗತವಾಗಿದೆ. ಅವನ ಅನಂತತೆಯಲ್ಲಿ ಹಗಲು ರಾತ್ರಿಗಳು ಮತ್ತು ಬೆಳಕು ಕತ್ತಲೆಗಳು ಸಂಕೇತಗಳು. "ಹೊಳೆವ ವರುಣನು ರಾತ್ರಿಗಳನ್ನು ಅಪ್ಪಿಕೊಂಡನು ತನ್ನ ಸರ್ಜನಶೀಲ ಜ್ಞಾನದಿಂದ ಅವನು ಉಷೆಯರನ್ನು ತನ್ನೊಳಗಿಟ್ಟುಕೊಂಡಿದ್ದಾನೆ ; ದರ್ಶನ ಸಂಪನ್ನನಾದ ಅವನು ಪ್ರತಿಯೊಂದು ವಸ್ತುವಿನ ಸುತ್ತಲೂ ಇದ್ದಾನೆ."

ಕಡಲುಗಳ ಈ ಕಲ್ಪನೆಯಿಂದ ಸ್ವಾಭಾವಿಕವಾಗಿ ವೈದಿಕ ನದಿಗಳ ಮಾನಸ ಶಾಸ್ತ್ರೀಯ ಕಲ್ಪನೆ ಮೂಡಿತು. ಈ ನದಿಗಳು ಎಲ್ಲೆಲ್ಲೂ ಇವೆ. ಇವು ಪರ್ವತದಿಂದ ಹರಿದಿಳಿದು ಸೋಪಾನ ಪಂಕ್ತಿಗಳ ಮೂಲಕ (ಉಪಪರ್ವತರಾಜಿಗಳ ಮೂಲಕ) ಮನವನ್ನು ಹತ್ತಿ ವೃತ್ರನ ಕೃಷ್ಣವರ್ಣದ ಅವಮಾನಸ ರಹಸ್ಯಗಳ ಮೇಲೆ ಬೆಳಕು ಚೀರುವುವು. ಇವು ಇಂದ್ರನು ಬುವಿಗೆ ತರುವ ಸ್ವರ್ಗಸ್ಥ ಮಹಾಬಲವತಿಯರು. ಇವು ಪರಸತ್ಯದ ಧಾರೆಗಳು. ಅದರ ಜ್ಯೋತಿರ್ಮಯ ಸ್ವರ್ಗಗಳಿಂದ ಸುರಿದಿಳಿವ ಮಳೆಗಳಿವು. ಇವರು ಸಾರ್ವಕಾಲಿಕ ಸಪ್ತ ಸಹಚರಿಯರು ಮತ್ತು ಸೋದರಿಯರು. ಇವರು ಜ್ಞಾನ ಸಂಪನ್ನೆಯರಾದ ದಿವ್ಯ ಜಲಗಳು. ಇವು ಇಳೆಗಿಳಿದು ಬರುವುವು, ಕಡಲಿಂದ ಮೇಲೇಳುವುವು, ಕಡಲಿಗೆ ಹರಿದು ಹೋಗುವುವು, ಪಣಿಗಳ ಗುಹಾದ್ವಾರವನ್ನೊಡೆದು ಹೊರಚೀಲುವುವು ಮತ್ತು ಇವು ಅತ್ಯುನ್ನತ ಸಮುದ್ರಗಳನ್ನು ಮೇಲೇರಿ ಹೋಗಿ ಸೇರುವುವು.

ಸಾಮುದ್ರಿಕ (ಸಾಗರಿಕ) ವರುಣನು ಈಯೆಲ್ಲ ಜಲಗಳ ರಾಜನು. "ನದಿಗಳ ಉದ್‌ಗಮನದಲ್ಲಿ ವರುಣನು ಉಕ್ತ ಸಪ್ತ ಸೋದರಿಯರ ಸೋದರನು. ; ಅವನು ಅವರ ನಡುವೆಯೇ ಇರುವನು," (VIII.44.2). "ನದಿಗಳಲ್ಲಿ ಕುಳಿತ ವರುಣನು ತನ್ನ ಕಾರ್ಯಗಳ ನಿಯಮಗಳನ್ನು ಎತ್ತಿ ಹಿಡಿಯುತ್ತಾ ಸಾಮ್ರಾಜ್ಯಕ್ಕಾಗಿ ಸಂಕಲ್ಪದಲ್ಲಿ ಪೂರ್ಣನಾಗಿರುವನು" ಎಂದು ಇನ್ನೊಬ್ಬ ಋಷಿಯು ಹಾಡಿದನು (I 25.10). "ಮಧುವಾಹಕ, ಶುದ್ಧೀಕಾರಕ, ಶುದ್ಧ ಮತ್ತು ದಿವ್ಯ ಜಲಗಳ ನಡುವೆ ವರುಣ ಪ್ರಾಣಿಗಳ ಸುಳ್ಳನ್ನೂ ಸತ್ಯವನ್ನೂ ಕೆಳಮುಖವಾಗಿ ನೋಡುತ್ತಾ ಹೋಗುತ್ತಾನೆ". ಎಂದು ಇನ್ನಷ್ಟು ಬಹಿರಂಗವಾಗಿ ಮಾನಸಶಾಸ್ತ್ರೀಯ ಸೂಚನೆಗಳನ್ನು ರಾಶಿಯಾಗಿ ತುಂಬಿ, ವಸಿಷ್ಠನು ವರುಣನನ್ನು ವರ್ಣಿಸಿದ್ದಾನೆ (VII.49.3). ಇಂದ್ರನಂತೆಯೇ ಪದೇ ಪದೇ ಇಂದ್ರನೊಡನೆ ಸಂಬಂಧಿಸಲಾಗುವ ವರುಣನೂ ಜಲಗಳನ್ನು ಬಂಧಮುಕ್ತಗೊಳಿಸುತ್ತಾನೆ. ವರುಣನ ಬಲಿಷ್ಠ ಹಸ್ತಗಳಿಂದ ವೇಗವಾಗಿ ಚೋದಿತರಾದ ಜಲದೇವತೆಗಳು ಅವನಂತೆಯೇ ಸರ್ವವ್ಯಾಪಿನಿಯರಾಗಿ ಗಡಿಮಿತಿಯಿಲ್ಲದ ಧ್ಯೇಯದತ್ತ ಹರಿಯುತ್ತಾರೆ. "ಅನಂತ ಪುತ್ರನಾದ ವರುಣನು, ವಿಸ್ತಾರವಾಗಿ ಎತ್ತಿ ಹಿಡಿಯುವ ವರುಣನು, ಆ ಜಲದೇವತೆಗಳನ್ನು ಸಡಿಲಿಸಿ ಎಲ್ಲ ಕಡೆಗೂ ಹರಿಯಬಿಟ್ಟಿದ್ದಾನೆ ; ನಧಿಗಳು (ಜಲಗಳು) ವರುಣ ಸತ್ಯದತ್ತ ಪಯಣಿಸುತ್ತವೆ (II.28.4).

ಧ್ಯೇಯವಷ್ಟೇ ಅಲ್ಲ - ಧ್ಯೇಯದತ್ತ ಪ್ರಯಾಣಿಸುವುದೂ ವರುಣನದೇ ಕೆಲಸವು. "ಪ್ರಭಾವಿಯೂ ಸಹಸ್ರಾಕ್ಷನೂ ಆದ ವರುಣನು ಈ ಹೊಳೆಗಳ ಗುರಿಯನ್ನು ನೋಡುತ್ತಾನೆ; ಅವನು ರಾಜ್ಯಗಳ ರಾಜನು ; ಅವನೇ ನದಿಗಳ ರೂಪ-ಅವನಿಗೇ ಅವನು ಆತ್ಯಂತಿಕ (ಅತ್ಯಧಿಕ) ಸಾಮರ್ಥ್ಯ ಸ್ವರೂಪನು ಮತ್ತು ವೈಶ್ವತ್ರಿಕನಾದವನು." ಅಸ್ತಿತ್ವದ ಎಲ್ಲ ರಾಜ್ಯಗಳನ್ನೂ ಅವನ ಸಾಮುದ್ರಿಕ ಚಲನೆಯು ಆವರಿಸುತ್ತದೆ ; ಮತ್ತು ಅದು ಸ್ವರ್ಗವರ್ಗಕ್ಕೇ ಸ್ವರ್ಗವಾದ ಮಹಾಸ್ವರ್ಗಕ್ಕೇರುತ್ತದೆ.

"ಅವನು ಗುಪ್ತ ಸಮುದ್ರನು ಮತ್ತು ಅವನು ಸ್ವರ್ಗದ ಮೂಲಕ ಅದನ್ನು ದಾಟಿ ಮೇಲೆ ಹೋಗುತ್ತಾನೆ; ಈ ಉಷಸ್ಸುಗಳಲ್ಲಿ ಅವನು ಯಾಜ್ಞಿಕ ಮಂತ್ರವನ್ನಿಟ್ಟಾಗ ತನ್ನ ಸ್ಫುರತ್‌ಪಾದದಿಂದ ಭ್ರಮೆಗಳನ್ನು ಮೆಟ್ಟಿ ಹೋಳು ಮಾಡಿ ಮಹಾ ಸ್ವರ್ಗಕ್ಕೇರಿ ಹೋಗುತ್ತಾನೆ (VIII.41.8)." ಈ ಪ್ರಕಾರ, ವರುಣದೇವನು ಏಳುವಾಗ ಗುಪ್ತ ದಿವ್ಯಶಕ್ತಿಯ ಸಾಮುದ್ರಿಕ (ಸಾಗರೀಣ) ಉತ್ತಮತನ ಸ್ವರೂಪವನ್ನು ತಳೆಯುತ್ತಾನೆ, ಕ್ರಮಶಃ ಪ್ರಗತಿಪರವಾಗಿ ಅಭಿವ್ಯಕ್ತನಾಗುತ್ತಾ ತನ್ನದೇ ಆದ ಅನಂತ ವಿಸ್ತಾರ ಮತ್ತು ಆನಂದೋದ್ರೇಕ ಸ್ಥಿತಿಗಳಿಗೆ, ದೇವರಿಂದ ಮುಕ್ತಿ ಪಡೆದ ದ್ರಷ್ಟಾರನ ಆತ್ಮದಲ್ಲಿ ತಲುಪುತ್ತಾನೆ ಎಂಬುದನ್ನು ನಾವು ನೋಡುತ್ತೇವೆ.

ವರುಣನು ಮೆಟ್ಟಿ ಒಡೆದು ಚೂರು ಚೂರು ಮಾಡಿ ಒಗೆಯುವ ಭ್ರಮೆ ಎಂಬುದು ದುಷ್ಕೃತ್ಯಗಳ ದೊರೆಗಳ ಅನೃತಾತ್ಮಕ ಆಕೃತಿವೃಂದವು. ವರುಣನು ಈ ದಿವ್ಯಸತ್ಯದ ಮಹಾಕಾಶವಾಗಿರುವುದರಿಂದ ಮತ್ತು ದಿವ್ಯ ಸತ್ತೆಯ ಸಾಗರವಾಗಿರುವದರಿಂದ ಯಾವ ಮೂರ್ತೀಕೃತ ಸಮುದ್ರವೂ ಅಥವಾ ಆಕಾಶವೂ ಅವನಾಗಿ ಪರಿವರ್ತನೆ ಹೊಂದಲಾರದು. ಅವನಾದರೋ ಪವಿತ್ರ ರಾಜ ಗಂಭೀರ ರಾಜೇಶ್ವರನು ; ದುಃಶಕ್ತಿಯನ್ನು ಹೊಡೆದುರುಳಿಸಿ ನಮ್ಮನ್ನು ಪಾಪಮುಕ್ತರನ್ನಾಗಿ ಮಾಡುವಾತನು. ದಿವ್ಯ ಋತ-ಸತ್ಯಗಳ ಪಾವಿತ್ರ್ಯವನ್ನು ಕೆಡಿಸುವುದೇ ಪಾಪವು. ಶುದ್ಧನೂ ಪ್ರಭಾವಿಯೂ ಆದ ವರುಣನ ಸಿಟ್ಟೇ ಅದರ ಪರಿಣಾಮವು. ತಮಃಪುತ್ರರಂತೆ ಸ್ವ-(ಜೀವಾತ್ಮನ ದಾನವೀಯ) ಸಂಕಲ್ಪವನ್ನೂ ಅಜ್ಞಾನವನ್ನೂ ಸೇವಿಸುವವರ ವಿರುದ್ಧವಾಗಿ ನಿಂತು ದಿವ್ಯ ವಿಧಿಯ (ಶಾಸನದ, ನಿಯಮದ) ದೊರೆಯು ತನ್ನ ಆಯುಧಗಳನ್ನೆಸೆಯುತ್ತಾನೆ. ಆ ತಮೋಜಾತರ ಮೇಲೆ ಅವನ ಪಾಶವು ಬೀಳುತ್ತದೆ; ಅವರು ವರುಣನ ಬೋನಿಗೆ ಬೀಳುತ್ತಾರೆ. ಆದರೆ ಯಜ್ಞದ ಮೂಲಕ ಯಾರು ಪರಸತ್ಯವನ್ನು ಅನ್ವೇಷಿಸುತ್ತಾರೋ ಅವರಿಗೆ ಪಾಪದಾಸ್ಯ ಮುಕ್ತಿಯನ್ನಿತ್ತು, ಕರುವಿಗೆ ದಾಬನ್ನು ಬಿಡಿಸಿ ಮುಕ್ತಿಯನ್ನಿತ್ತಂತೆ ಯಾ-ವಧ ಸ್ತಂಭದಿಂದ ವಧ್ಯನನ್ನು ಬಿಡಿಸಿದಂತೆ, ಬಿಡಿಸಿ ಕರುಣಿಸುತ್ತಾನೆ. ಋಷಿಗಳು ಪದೇ ಪದೇ ವರುಣನ ಸೇಡು ತೀರಿಸಿಕೊಳ್ಳುವ ಪ್ರತಿಹಿಂಸೆಯನ್ನು ನಿಂದಿಸಿ ಪಾಪದಿಂದಲೂ ಅದರ ವೇತನ ಸ್ವರೂಪದ ಫಲದಿಂದಲೂ ಸಾವಿನಿಂದಲೂ ಮುಕ್ತಗೊಳಿಸೆಂದು ಪ್ರಾರ್ಥಿಸುತ್ತಾರೆ. "ನಾಶವನ್ನು ನಮ್ಮಿಂದ ದೂರ ಎಸೆ ; ನಾವು ಮಾಡಿದ ಪಾಪದ ಕಟ್ಟಿನಿಂದ ನಮ್ಮನ್ನು ಸಡಿಲಿಸು (ಪಾಪವನ್ನು ಸಡಿಲಿಸಿ ನಮ್ಮಿಂದ ದೂರಮಾಡು)" ಎಂದು ಅವರು ಕೂಗುತ್ತಾರೆ ; ಅಥವಾ ಯಾವಾಗಲೂ ಸರಪಳಿ ಮತ್ತು ಬಂಧನ ಎಂಬ ಪದಗಳನ್ನು ಉಕ್ತಾರ್ಥದಲ್ಲಿ ಬಳಸುತ್ತಾರೆ- "ಹಗ್ಗವನ್ನು ಸಡಿಲಿಸಿದಂತೆ ಪಾಪವನ್ನು ನನ್ನಿಂದ ಸಡಿಲಿಸು, ಕಳಚಿ ಒಗೆ, ದೂರಮಾಡು."

ಈ ಗಭೀರ ವಿಚಾರಿಗಳಲ್ಲಿ ಸ್ವಾಭಾವಿಕ ದುಷ್ಟತನಕ್ಕೆ ಸ್ಥಾನವಿರಲಿಲ್ಲ ; ಈ ಸೂಕ್ಷ್ಮ ಮಾನಸ ಶಾಸ್ತ್ರಕಾರರಲ್ಲಿ ಪಾಪದ ಒರಟು ಕಲ್ಪನೆಗೆ ಅವಕಾಶವಿರಲಿಲ್ಲ. ಅಜ್ಞಾನದ ಒತ್ತಡದ ಒಂದು ಮಹಾಪ್ರಣೋದವನ್ನವರು ಕಂಡರು ; ನಮ್ಮ ಮನಸ್ಸಿಗೆ ಒದಗುವ ಋತದ ಅದರ್ಶನ, ಸತ್ಯದ ಅದರ್ಶನ ಅಥವಾ ಅದನ್ನು ಸಂಕಲ್ಪವು ಗ್ರಹಿಸದಿರುವುದು, ಇಲ್ಲವೆ ಜೈವಿಕ ಪ್ರಜ್ಞೆಗೆ (ಮೂಲ ಪ್ರಾಣಪ್ರವೃತ್ತಿಗೆ) ಮತ್ತು ಬಯಕೆಗಳಿಗೆ ಅದನ್ನನುಸರಿಸಲು ಸಾಧ್ಯವಾಗದಿರುವಿಕೆ ಅಥವಾ ದಿವ್ಯ ವಿಧಿಯ ಮಹತ್ವದ ಮಟ್ಟಕ್ಕೆ ಏರಲು ಜೈವಿಕ ಮೂಲಪ್ರವೃತ್ತಿಗಳಿಗೆ ಕೇವಲ ಅಸಾಧ್ಯವಾಗಿರುವಿಕೆ ಅಥವಾ ನಮ್ಮ ಬರೀ ಭೌತಿಕ ಪ್ರಜ್ಞೆಗೆ ಸತ್ತೆಗೆ ದಿವ್ಯ-ಋತದ ಮಹತ್ತೆಯನ್ನೇರಲಾರದಿರುವಿಕೆ ಎಂಬಿವೇ ಆ ಅಜ್ಞಾನದ ಲಕ್ಷಣಗಳು. ವಸಿಷ್ಠನು ಬಲಿಷ್ಠ ವರುಣನನ್ನು ಕುರಿತು ಮಾಡಿದ ಭಾವಾ

ವೇಶಪೂರ್ಣವಾದ ಪ್ರಾರ್ಥನೆ ಇಂತಿದೆ : ನಮ್ಮ ಸಂಕಲ್ಪದಾರಿದ್ರ್ಯವೇ ನಿನಗೆ ವಿರುದ್ಧವಾಗಿ ನಾನು ನಡೆದುಕೊಳ್ಳಲು ಕಾರಣ - ಎಲೈ ಪವಿತ್ರನೂ ಪ್ರಭಾವಿಯೂ ಆದ ಹಾಗೂ ಏಕವಾದ್ವಿತೀಯನಾದ ವರುಣನೇ - ನಮ್ಮ ಮೇಲೆ ಕರುಣೆದೋರು, ಹೇ ಸಮರ್ಥ ದೊರೆಯೇ, ಪ್ರಭಾವಿದೊರೆಯೇ, ಪ್ರಸನ್ನನಾಗು. ಇದೆಂತಾದರೂ ಇರಲಿ, ಓ ವರುಣ, ಮಾನವರಾದ ನಾವು ಹೇಗೇ ನಡೆದುಕೊಳ್ಳಲಿ, ದಿವ್ಯಜನ್ಮದ ವಿರುದ್ಧ ದ್ರೋಹವನ್ನೇ ಮಾಡಿರಲಿ, ಎಲ್ಲೆಲ್ಲಿಯೋ ನಾವು ಅಜ್ಞಾನದಿಂದ ನಿನ್ನ ವಿಧಿಗಳನ್ನು ಉಲ್ಲಂಘಿಸಿರಲಿ - ಓ ದೇವರೇ - ಆ ಪಾಪಕ್ಕಾಗಿ ನಮ್ಮನ್ನು ಹೊಡೆಯದಿರು, ಬಡಿಯದಿರು (VII.89.3-5).

ಪಾಪದ ಅಳಿಗೋಲಾದ ಅಜ್ಞಾನವು ಸಾರತಃ ಮುಪ್ಪುರಿಯಾಗಿ ಹೊಸೆಸುತ್ತದೆ : (೧) ಪ್ರಮಿತಮನ, (೨) ಅಸಮರ್ಥ ಜೀವನ, (೩) ಅಸ್ಪಷ್ಟ ಭೌತಿಕ ಪ್ರಾಣಿತ-ಎಂಬುದಾಗಿ. ಪಾಶದ (ಹಗ್ಗದ) ಈ ಮೂರು ಹುರಿಗಳಿಂದಲೇ ಯೂಪಸ್ತಂಭಕ್ಕೆ ಯಜ್ಞ ಪಶುವಾಗಿ ಶುನಃಶೇಫ ಋಷಿಯು ಕಟ್ಟಲ್ಪಟ್ಟನೆಂದು ದೃಷ್ಟಾಂತ ಕಥೆಯು ಹೇಳಿದೆ. ಇದರ ಇಡೀ ಫಲಿತಾಂಶವೆಂದರೆ ಹೋರಾಟ ಯಾ ಅಸ್ತಿತ್ವದ ನಿರ್ಜೀವ, ನಿಷ್ಕ್ರಿಯ ದಾರಿದ್ರ್ಯ - ಇದು ಮರ್ತ್ಯವಾದ ಅನಾನಂದದ ಅಲ್ಪತೆಯ ಮತ್ತು ಪ್ರತಿಕ್ಷಣವೂ ಸಾವಿನತ್ತ ಕುಸಿದು ಬೀಳುತ್ತಾ ಹೋಗುವ ಜೀವಾತ್ಮದ ಅಪರ್ಯಾಪ್ತತೆ. ಬಲದೇವ ವರುಣ ಬಂದಾಗ ಬಂದು ಈ ಮುಪ್ಪುರಿಯ ನಿಗ್ರಹಪಾಶವನ್ನು ತುಂಡುಮಾಡಿದಾಗ, ನಾವು ಆಧ್ಯಾತ್ಮಿಕ ಸಂಪತ್ತಿನ ಹಾಗೂ ಅಮರ್ತ್ಯತೆಯ ರಾಜ್ಯವನ್ನು ಹೊಗಲು ಸ್ವತಂತ್ರರಾಗುವೆವು. ಉದ್ಧೃತನಾದ ನಿಜ ಮನುಜನು ಅವಿಭಕ್ತ ಸತ್ತೆಯಲ್ಲಿ ತನ್ನ ನಿಜ ರಾಜತ್ವಕ್ಕೇರುತ್ತಾನೆ. ಮೇಲಿನ ಹುರಿಯು ಮೇಲೆ ಎದ್ದು ಅತಿಮಾನಸದ ಎತ್ತರಗಳಿಗೆ ಆತ್ಮಪಕ್ಷಿಯು ಹಾರಲೆಂದು ಅದರ ರೆಕ್ಕೆಗಳನ್ನು ಮುಕ್ತಗೊಳಿಸುತ್ತದೆ. ಮಧ್ಯದ ಹುರಿಯು ಎರಡೂ ಕಡೆ ಅಡ್ಡತಿರುಗಿ ಮತ್ತು ಸರ್ವದಿಕ್ಕುಗಳಿಗೆ ತಿರುಗಿ ನಿಗೃಹೀತ ಭೌತಿಕ ಜೀವನವನ್ನು ಒಡೆದು ಅಸ್ತಿತ್ವದ ಸುಖಮಯ ವಿಸ್ತಾರವನ್ನಾಗಿ ಮಾರ್ಪಡಿಸುವುದು. ಕೆಳ ಹುರಿಯು ಕುಸಿದುರುಳಿ ಕೆಳಗೆ ಬಿದ್ದು ನಮ್ಮ ಭೌತಿಕ ಬಾಳಿನ ಸಮ್ಮಿಶ್ರಲೋಹತ್ವವನ್ನು ತೆಗೆದುಕೊಂಡು ಅದೃಶ್ಯವಾಗಿ ಅಪ್ರಜ್ಞಾತ ಪ್ರಜ್ಞೆಯಲ್ಲಿ, ಮೂಲಾಂಧಕಾರದಲ್ಲಿ ಅಧ್ಯವಮಾನಸದಲ್ಲಿ,ಕರಗಿ ಹೋಗುವುದು. ಈ ಮುಕ್ತಿ ಎಂಬುದೇ ಶುನಃಶೇಫನ ದೃಷ್ಟಾಂತಕಥೆಯ ಹಾಗೂ ಅವನ ವರುಣನನ್ನು ಕುರಿತ ಎರಡು ಮಹಾಸೂಕ್ತಗಳ ತಾತ್ವತರ್ಯವು.

ಹೆಚ್ಚು ಸೂಕ್ಷ್ಮ ಕಾಲ್ಪನಿಕ ಪದ ಸಂಹತಿಯನ್ನು ಬಳಸದೆ ವೇದವು ನಮ್ಮ ಬಾಳುವೆಯ ಅನ್ಯಾಯ, ಸಂಕಟಗಳಿಗೆ ಅದರಲ್ಲಿರುವ ಅಜ್ಞಾನ ಯಾ ಅನೃತ ಎಂಬುದೇ ಕಾರಣ ಎಂದು ಹೇಳುತ್ತದೆ. ಆದುದರಿಂದ ಜ್ಞಾನ ಅಥವಾ ಸತ್ಯವೆಂಬುದೇ (ಆ ಮಲದಿಂದ) ಶುದ್ಧೀಕರಿಸಿ (ಅದರ ಬಂಧದಿಂದ) ನಮ್ಮನ್ನು ಮುಕ್ತಗೊಳಿಸಲಿರುವ ಕರ್ತೃವು. ವರುಣನು ನೋಡುವ ಕಣ್ಣಿನ ದೆಸೆಯಿಂದ ಅವನು ಶುದ್ಧೀಕರಿಸುವುದು ಮತ್ತು ಬಿಡುಗಡೆ ಮಾಡುವುದು - ಆ ಕಣ್ಣೆಂದರೆ ಹೊಳೆವ ಸಾಂಕೇತಿಕ ಸೂರ್ಯನು. ಸೂರ್ಯಾಕ್ಷನಾದುದರಿಂದ ವರುಣನು ಪಾವಕನಾದನು. ದಿವ್ಯವಿಚಾರವನ್ನು ನಾವು ಕಲಿಯುವಾಗ ಅವನು ನಮ್ಮ ಸಂಕಲ್ಪವನ್ನು ನಿಯಂತ್ರಿಸಿ ನಿರ್ಣಯವನ್ನು ಕಲಿಸದಿದ್ದರೆ ನಾವು ದೇವನೌಕೆಯನ್ನೇರಿ ಅದರಲ್ಲಿ ಕುಳಿತು ಜೀವನ ಸಾಗರದಾಚೆಗೆ ಈಯೆಲ್ಲಾ ವಿಘ್ನಗಳನ್ನೂ ಕೇಡನ್ನೂ ದಾಟಿ ಹೋಗಲಾರೆವು. ಜ್ಞಾನಯುಕ್ತ ವಿಚಾರಕ (ಚಿಂತಕ) ಎನ್ನಿಸಿ ನಮ್ಮಲ್ಲಿ ಕುಳಿತು ನಾವು ಮಾಡಿದ ಪಾಪವನ್ನು ವರುಣನು ದೂರೀಕರಿಸುತ್ತಾನೆ. ತನ್ನ ರಾಜಾಧಿಕಾರದಿಂದ ಅವನು ನಾವು ಮಾಡಿದ ಅಜ್ಞಾನದ ಸಾಲವನ್ನು ವಜಾ ಮಾಡುತ್ತಾನೆ. ಅಥವಾ ಇನ್ನೊಂದು ಪ್ರತಿಮಾ ಪ್ರಯೋಗದಿಂದ

ಹೇಳುವುದಾದರೆ-ಈ ರಾಜನ ಹತ್ತಿರ ಸಾವಿರ ವೈದ್ಯರಿದ್ದಾರೆ - ಅವರು ನಮ್ಮ ಮಾನಸಿಕ ಹಾಗೂ ನೈತಿಕ ದೌರ್ಬಲ್ಯಗಳನ್ನು ಗುಣಪಡಿಸಿ ವರುಣನ ಗಭೀರವೂ ವಿಶಾಲವೂ ಆದ ಋತಾತ್ಮಕತೆ[೧]ಯಲ್ಲಿ ಸಂಸ್ಥಾಪಿಸುತ್ತಾರೆ ಎಂದಿದೆ ವೇದವು.

ಸರ್ವಾಸ್ತಿತ್ವದ ಮೇಲೂ ವರುಣ ಮಹಾದೇವನ ರಾಜತ್ವದಲ್ಲಿರುವ ಅಸೀಮ ಸಾಮ್ರಾಜ್ಯಕ್ಕೆ ಪ್ರಭುತ್ವವಿದೆ ; ಅವನು ರಾಜಾಧಿರಾಜ ರಾಜ ಪರಮೇಶ್ವರ ! ಅವನು ಮಹಾಬಲಿಷ್ಠನಾದ ವಿಶ್ವನಿಯಾಮಕ, ವಿಶ್ವ ಸಾಮ್ರಾಟ್. ಅವನ ವಿಶೇಷಣಗಳನ್ನೂ ವರ್ಣನೆಗಳನ್ನೂ ಒಮ್ಮೆಲೇ ಮತ ಧಾರ್ಮಿಕ ಹಾಗೂ ತತ್ವಶಾಸ್ತ್ರೀಯ ಎನ್ನಿಸಿದ ಮನವು ದೇವತ್ವದ ಪರಾಕಾಷ್ಠೆಯಲ್ಲಿರುವ ವೈಶ್ವತ್ರಿಕ ದೇವತಾತತ್ವಕ್ಕೆ ಯಾವ ಬದಲಾವಣೆಯನ್ನೂ ಮಾಡದೆ ಅನ್ವಯಿಸಬಹುದಾಗಿದೆ. ಅವನು ವೈಶಾಲ್ಯ ಮತ್ತು ನಾನಾತ್ವ ; ಅವನು ವಿಶಾಲ ವರುಣ, ಅಪಾರ ಐಶ್ವರ್ಯ ಸಂಪನ್ನ ವರುಣ ; ವೈಶಾಲ್ಯವು ಅವನ ಮನೆ - ವರುಣನಿಗೆ ಜನ್ಮ[೨-೩] ಅನೇಕ ಎಂಬಲ್ಲಿ ವರುಣನ ವಿಶೇಷಣಗಳು ಗಣ್ಯವಾಗಿ ಬಂದಿವೆ. ಆದರೆ ಅವನ ಪ್ರಭಾವಿ ಸತ್ತೆಯು ಕೇವಲ ವೈಶ್ವತ್ರಿಕ ವೈಶಾಲ್ಯ ಮಾತ್ರವಲ್ಲ-ಅದು ವೈಶ್ವತ್ರಿಕ ಪ್ರಣೋದ ಮತ್ತು ಸಾಮರ್ಥ್ಯ. ಆದರೆ ಅವನ ಪ್ರಭಾವಿ ಸತ್ತೆಯು ವೇದದಲ್ಲಿ ಉಭಯಾರ್ಥಕ ಪದಗಳಿಂದ ವರ್ಣಿತವಾಗಿದೆ-ಒಂದು ಅಂತರರ್ಥ, ಇನ್ನೊಂದು ಬಹಿರರ್ಥ: "ನಿನ್ನ ಪ್ರಣೋದವೂ ಸಾಮರ್ಥ್ಯವೂ ಭಾವಾವೇಶವೂ ಹಾರುವ ಹಕ್ಕಿಗಳಿಗೆ ಅಗಮ್ಯ, ನಿರ್ನಿದ್ರ ಜಲಗಳಿಗೆ ಅಗಮ್ಯ, ವಾಯುವಿನ ಬೃಹತ್ವದಿಂದ ಆವಾರ ಹಾಕುವವರಿಗೆ ಅಗಮ್ಯ" (I.24.6). ಅದೊಂದು ವೈಶ್ವತ್ರಿಕ ಸತ್ತೆಯ ಪ್ರಣೋದವು ; ಸುತ್ತಲೂ ಹಾಗೂ ಸರ್ವಜೀವತ್ ಪದಾರ್ಥದಲ್ಲೂ ಸಕ್ರಿಯವಾಗಿರುವ ಶಕ್ತಿಯು. ಈ ವಿಶಾಲ ಪ್ರಣೋದದ ಮತ್ತು ಸತ್ತೆಯ ವೈಶ್ವತ್ರಿಕತೆಯ ಹಿಂದೆ ಯಾವಾಗಲೂ ನೋಡುತ್ತಾ ಕುಳಿತು ಕೆಲಸ ಮಾಡುವ ಒಂದು ವಿಶಾಲ ಜ್ಞಾನ ವೈಶ್ವತ್ರಿಕತೆಯಿದೆ. ರಾಜತ್ವದ ಜೊತೆಗೇ ಯಾವಾಗಲೂ (ಋಷಿತ್ವ) ದ್ರಷ್ಟತ್ವ ಎಂಬ ವಿಶೇಷಣ ವರುಣನಿಗಿದ್ದೇ ಇದೆ. ಇದು ನಿರರ್ಥಕವಾಗಿ ಜೋಡಿಸಿದ್ದಲ್ಲ - ಬಲಿಷ್ಠ, ಅರ್ಥಗರ್ಭಿತ, ಪ್ರಾಚೀನ ಶೈಲಿಯಲ್ಲಿ ಜೋಡಿಸಿದ್ದು. ವರುಣನ ಕ್ರಿಯಾಶಕ್ತಿಯು ಬಹುವಿಧವಾದದ್ದು : ವೀರನ ಕಾರ್ಯಶಕ್ತಿ ಮತ್ತು ವಿಶಾಲ ಅಭಿವ್ಯಂಜನ ಶಕ್ತಿ ; ಚಿಂತಕನ ಚಿಂತನಶಕ್ತಿ ಮತ್ತು ವಿಶಾಲದರ್ಶನ ಸಂಪನ್ನತೆಯಿಂದ ಐಕ್ಯೈಕ ಚಲನೆಯಲ್ಲಿ ಪ್ರಣೋದ ವೈಭವದ ದೇವತಾತತ್ವವಾಗಿ ನಮ್ಮತ್ತ ಬರುವ ಶಕ್ತಿ - ಈ ನಾನಾವಿಧ ಶಕ್ತಿಗಳ ಕ್ರಿಯೆ ನಾನಾವಿಧವೆಂಬುದು ನಿಗಮನೀಯ.

ವಿಶೇಷಣಗಳ ಇಂಥ ಜೋಡಣೆಯ ಅರ್ಥವೈಶಿಷ್ಟ್ಯವು ವರುಣನ ಸಾರ್ವಭೌಮತ್ವದ ದ್ವಿಮುಖವನ್ನು ತೋರಿಸುತ್ತದೆ. ಅವನು ಸ್ವರಾಟ್=ಸ್ವನಿಯಾಮಕ ಮತ್ತು ಸಮ್ರಾಟ್=ಚಕ್ರವರ್ತಿ (ಪರನಿಯಾಮಕ). ಅವು ಆರ್ಯರ ರಾಜತ್ವದ ದ್ವಿಮುಖಗಳು. ಶ್ರೇಯಃ ಸಮೃದ್ಧಿಯನ್ನು ಮಾನವನಲ್ಲಿ ವಿಚಾರ ಮತ್ತು ಕಾರ್ಯಮಾಡುವ ಹಾಗೂ ವಿವೇಕ ಮತ್ತು ಸಂಕಲ್ಪಗಳ ಶ್ರೇಯಃ ಸಮೃದ್ಧಿಯನ್ನು ಕಾರ್ಯಗತಗೊಳಿಸುವ - ಅವನು ರಾಜರ್ಷಿ=ವೀರ ವಿಚಾರವಂತನು. ವೇದರ್ಷಿಗಳು ವರುಣ

---

೧. I.24.9

೨. ವಿಶ್ವಾಯು (IV.42:1)

೩. ವಿಶ್ವಾಯು=ಸರ್ವಜನ ; ಸರ್ವಪೋಷಕ ; ಸರ್ವಜೀವನ; ಸರ್ವಾರೋಗ್ಯ- p.994
M.M.Williಯವರಸಂಸ್ಕೃತ-ಇಂಗ್ಲೀಷು ನಿಘಂಟು.

ದೇವತಾತತ್ವದಲ್ಲಿ ಅವನನ್ನು "ಸರ್ವಶಕ್ತನೆಂದೂ ಸರ್ವಜ್ಞನೆಂದೂ, ಸಹಸ್ರದರ್ಶನ (ಸಹಸ್ರಾಕ್ಷ) ಎಂದೂ ಪರಮ ಸತ್ಯರೂಪಿ ಎಂದೂ" ವರ್ಣಿಸಿ, ನಮ್ಮನ್ನು ಪರಮೋನ್ನತ ಮತ್ತು ವೈಶ್ವತ್ರಿಕ ತತ್ವಗಳ ಎತ್ತರಕ್ಕೆ ಒಯ್ಯುತ್ತಾರೆ ; ದಿವ್ಯವೂ ಸಾರ್ವಕಾಲಿಕವೂ ಆದ ರಾಜಗಾಂಭೀರ್ಯ, ಹೇರಳ ಶ್ರೇಯಃ ಸಮೃದ್ಧಿಯನ್ನುಳ್ಳ ಪ್ರಜ್ಞೆ, ಪ್ರಣೋದ, ಸರ್ವಶಕ್ತ ವಿವೇಕ, ಸರ್ವಜ್ಞ ಶಕ್ತಿ, ಸಮರ್ಥಿತನ್ಯಾಯ (ಧರ್ಮ, ಋತ), ಪರಿಪೂರ್ಣೀಕೃತ, ಪರಮಸತ್ಯ - ಇವುಗಳು ಅನಾವೃತವಾಗಿರುವುದನ್ನು ನಾವು ವರುಣನಲ್ಲಿ ಕಾಣುತ್ತೇವೆ.

ವರುಣನು ವೇದದಲ್ಲಿ ಇಂಥ ಮಹಾವೈಭವೋಪೇತ ಸಂಕೇತ. ಅವನನ್ನು ವಿಶಾಲವಿಚಾರಿಯೆಂದೂ ಪರಮಸತ್ಯ ಸಂರಕ್ಷಕನೆಂದೂ ಸುಂದರವಾಗಿ ವರ್ಣಿಸಲಾಗಿದೆ. ಅವನಲ್ಲಿ ಎಲ್ಲ ವಿವೇಕಗಳೂ ಇವೆ - ಅವನ್ನು ಅವನಲ್ಲಿ ಆಯ್ದು ಬ್ರಹ್ಮಗಂಟನ್ನಾಗಿ ಮಾಡಿಡಲಾಗಿದೆ. ಸ್ವರ್ಗವು ತನ್ನ ರೂಪವನ್ನು ಅಗಲ ಮಾಡುತ್ತಾ ಹೋಗುವುದೋ ಎಂಬಂತೆ ಮಾನವನ ದ್ರಷ್ಟ ಜ್ಞಾನಗಳನ್ನು ಸಾಕಿ ಬೆಳೆಸುವ ದಿವ್ಯ ದ್ರಷ್ಟಾರ ಎಂದರೆ ವರುಣನು. ಹೊಳೆವ ದನಗಳ ಸಂಕೇತದ ಗೂಢಾರ್ಥ ಪೇಟಿಕೆಯ ಬೀಗದ ಕೈಯಿಲ್ಲಿ ನಮಗೆ ದೊರಕುತ್ತದೆ. ಏಕೆಂದರೆ, ವರುಣನೆಂಬ ಜಗದ್ಧಾರಿಯು ಈ ಹೊಳೆವ ದನಗಳ ಹೆಸರುಗಳನ್ನು ಬಲ್ಲನಂತೆ ; ಆ ವಿಶಾಲ ದರ್ಶನನನ್ನು ಬಯಸಿ, ದನಗಳು ಹುಲ್ಲುಗಾವಲುಗಳಿಗೆ ಬಯಸಿ ಹೋಗುವಂತೆ, ಋಷಿಗಳು (ದ್ರಷ್ಟಾರರು) ಮೇಲೆ ಹೋಗುವರಂತೆ. ಮರುತ್ತುಗಳಿಗಾಗಿ ಅವನು ಜ್ಞಾನ ಮಹಾತ್ಮ್ಯವುಳ್ಳವನಾಗಿ ಗೋವ್ರಜಗಳನ್ನು ಕಾಯುವಂತೆ ಮಾನವರ ವಿಚಾರಗಳನ್ನು ಕಾಯುತ್ತಾನಂತೆ.

ಇದು ವರುಣನ ವಿಚಾರ ಮುಖದ ವಿವರಣೆಯಾಯಿತು ; ಅವನ ಕಾರ್ಯಮುಖದ ವಿವರಣೆ ತತ್ಸದೃಶವಾಗಿದೆ. ಜಗತ್ತಿನ ಉದಿತ ವಿಚಾರಗಳಿಗೇನೂ ಕಡಿಮೆ ಎನ್ನಿಸದಂತೆ ಅದರ ಉನ್ನತೀಕೃತ (ಉತ್ಥಾಪಿತ) ಪ್ರಭಾವಗಳ (ಅಖಂಡ) ಖಂಡವೂ ಕೇಂದ್ರ ಗ್ರಂಥಿಯೂ ಆಗಿದ್ದಾನವನು. ಪರಮಸತ್ಯದಿಂದ ಪತಿತವಾಗದ ಅಜಿತ ಕಾರ್ಯಗಳೆಲ್ಲಾ ಪರ್ವತದಲ್ಲಿ ಪ್ರತಿಷ್ಠಿತವಾಗಿರುವಂತೆ ವರುಣನಲ್ಲಿ ಪ್ರತಿಷ್ಠಾಪಿತವಾಗಿದೆ. ಹೀಗೆ ಅವನು ಅನಿತ್ಯ ಪದಾರ್ಥಗಳನ್ನು ಬಲ್ಲವನಾದುದರಿಂದ ನಮ್ಮ ಅಸ್ತಿತ್ವದ ಮೇಲೆ ಅವನು ಸಾರ್ವಭೌಮ ಗಾಂಭೀರ್ಯವುಳ್ಳ ದೃಷ್ಟಿಯನ್ನು ಬೀರಬಲ್ಲನು ಮತ್ತು ಇಲ್ಲಿ "ಕೃತಾಕೃತ ಕರ್ಮಗಳನ್ನು ನೋಡುತ್ತಾನೆ" (I.25.11). ಇನ್ನೂ ಮಾಡಬೇಕಾಗಿರುವ ಮತ್ತು ತಿಳಿಯಬೇಕಾಗಿರುವ ಅಂಶಗಳನ್ನವನು ಬಲ್ಲನು. ನಮ್ಮಲ್ಲಿ ವರುಣನ ವಿವೇಕವು ಸ್ಫೂರ್ತ, ಪ್ರಾತಿಭ ದಿವ್ಯ ಮಂತ್ರವನ್ನು ರೂಪಿಸಿ ಹೊಸಜ್ಞಾನದ ಬಾಗಿಲನ್ನು ತೆರೆಯುತ್ತದೆ. "ಮಾರ್ಗಶೋಧಕನಾಗಿ ನಮಗವನು ಬೇಕು ; ಏಕೆಂದರೆ ಅವನು ವಿಚಾರದ ಪರದೆಗಳನ್ನು ಹೃದಯದಿಂದ ತೆರೆದಿಡುತ್ತಾನೆ ; ಹೊಸ ಸತ್ಯವು ಹುಟ್ಟಲಿ" ಎಂದು ಋಷಿಯು ಗಟ್ಟಿಯಾಗಿ ಕೂಗಿ ಹೇಳುತ್ತಾನೆ. ಏಕೆಂದರೆ ಈ ರಾಜನು ಪ್ರಾಣಿಸಹಜ ಒರಟಾದ ಮತ್ತು ದಡ್ಡತನದ ಚಕ್ರವನ್ನು ಸುಳಿಯಾಗಿ ತಿರುಗಿಸುವವನಲ್ಲ (ಚಕ್ರಾಧಿಪತ್ಯವನ್ನು ನಡೆಯಿಸುವವನಲ್ಲ). ಅವನವು ಅರ್ಥಹೀನ ವಿಧಿಯ (ಋತದ, ನಿಯಮದ, ಕಾಯದೆಯ) ನಿಷ್ಫಲ ಚಕ್ರಗತಿಗಳಲ್ಲ. ಅಲ್ಲೊಂದು ದಾರಿಯಿದೆ ; ಅಲ್ಲಿ ಸತತ ಪ್ರಗತಿಯಿದೆ, ಒಂದು ಧ್ಯೇಯವಿದೆ.

ವರುಣನು ಈ ಮಾರ್ಗದ ನಾಯಕನು. ಶುನಃಶೇಫನು ತಾರಸ್ವರದಲ್ಲಿ ಹೇಳುತ್ತಾನೆ - "ಇವನು ಸಂಕಲ್ಪದಲ್ಲಿ ಪರಿಪೂರ್ಣನು (ಸಮಗ್ರನು). ಅನಂತ್ಯಸುತನು ಒಳ್ಳೆಯದಾರಿಯಲ್ಲಿ ನಮ್ಮನ್ನು ಕರೆದೊಯ್ಯು ನಮ್ಮ ಜೀವನವನ್ನು ಮುನ್ನಡೆಸಿಕೊಂಡು ಹೋಗಲಿ. ವರುಣನು ತನ್ನ ಸುವರ್ಣ ಪೋಷಾಕನ್ನು ಧರಿಸುತ್ತಾನೆ. ಅವನ ಬಂಟರು ಎಲ್ಲೆಲ್ಲೂ ಇದ್ದಾರೆ" (I.25.12,13). ಈ ಬಂಟರು ಅಡಗಿ ಕುಳಿತ ಬೆಳಕಿನ ಹಗೆಗಳನ್ನು (ಜ್ಞಾನಶತ್ರುಗಳನ್ನು) ಹುಡುಕಿ ತೆಗೆಯಲಿ ; ನಮ್ಮ ಹೃದಯಗಳನ್ನು ಚುಚ್ಚುವ ಇವರನ್ನು ಪತ್ತೆ ಹಚ್ಚಲಿ. ಈ ರಿಪುಗಳು ನಮ್ಮ ಹೃದಯವು ಪರಮಸತ್ಯ ವಿಚಾರದ ಮುಸುಕನ್ನು ತೆರೆಯುವುದನ್ನು ತಡೆಯುವರು ಎಂದು ಗಣಿಸಲಾಗಿದೆ. ಜಲಗಳ ಗಮನವನ್ನು ಯೋಧರ ವಿಜಯಯಾತ್ರೆಯಂತೆ ಕಂಡ ನಾವು ಸರ್ವ ವಿವೇಕಿ ಶ್ರೇಷ್ಠನೂ ಸರ್ವಶಕ್ತ ರಾಜಾಧಿರಾಜನೂ ನೇತೃತ್ವದಲ್ಲಿರುವ ಸೂರ್ಯನ ಪಥ ಚಲನವನ್ನೂ ಅದೇ ರೀತಿಯಲ್ಲಿ ಕಾಣುತ್ತೇವೆ. ಅಪ್ರತಿಷ್ಠವಾದ ವೈಶಾಲ್ಯದಲ್ಲಿ (ಸ್ವಯಂ ಪ್ರತಿಷ್ಠವಾದ ಅಪಾರ ವಿಸ್ತಾರದಲ್ಲಿ) ದಿವ್ಯ ಸೂರ್ಯನಿಗಾಗಿ ಉರಿವ ಸೌದೆಯ ಸ್ವರೂಪದ ಎತ್ತರದ ಗೋಪುರವೊಂದನ್ನು ಕಟ್ಟಿದ್ದಾನೆ, ಕದಂಬ ವಿಮಾನವನ್ನು ರಚಿಸಿದ್ದಾನೆ - ವರುಣನು. "ಆ ಸೂರ್ಯನ ಕಿರಣಗಳು ಅಧೋಮುಖವಾಗಿವೆ. ಅವುಗಳ ಬುನಾದಿ ಮೇಲಿದೆ (ಊರ್ಧ್ವಸ್ಥಲದಲ್ಲಿದೆ). ಆ ಕಿರಣಗಳ ಜ್ಞಾನ ಸಾಕ್ಷಾತ್ಕಾರಗಳು ನಮ್ಮ ಅಂತರ್ಯದಲ್ಲಿ ಪ್ರತಿಷ್ಠಾಪಿತವಾಗಲಿ. ವರುಣರಾಜನು ದಿವ್ಯಸೂರ್ಯನ ಪಯಣಕ್ಕಾಗಿ ಒಂದು ಅಗಲವಾದ ದಾರಿಯನ್ನು ರಚಿಸಿದ್ದಾನೆ ; ಅಲ್ಲಿನ್ನೂ ಯಾರೂ ಹೆಜ್ಜೆಯಿಡದಿರುವುದರಿಂದ ಆ ಸೂರ್ಯನಿಗೆ ಹೆಜ್ಜೆಯಿಡಲು ಬೇಕಾದಷ್ಟು ಸ್ಥಳವಿದೆ. ಹೃದಯವೇಧಿಗಳನ್ನೂ ಅವನು ಪ್ರತ್ಯಕ್ಷಗೊಳಿಸುತ್ತಾನೆ. (I.24.7,8) ಹೃದಯ ವೇಧಿಗಳಿಗೆ ವರುಣನ ಪಾವಿತ್ರ್ಯವು ಮಹಾ ಭಕ್ಷಕ ; ಅವುಗಳನ್ನವನು ನುಂಗಿ ಬಿಡುತ್ತಾನೆ.

ಉಕ್ತ ದಿವ್ಯಪಥವು ಹೊಸ ಸತ್ಯಗಳನ್ನು ಮಾಡುವ ಹಾಗೂ ಕಟ್ಟುವ ಒಂದು ಸತತ ಕರ್ಮವು ; ಅದರಲ್ಲಿ ಹೊಸ ಶಕ್ತಿಗಳು, ಹೊಸ ಉನ್ನತತರ ಸಾಕ್ಷಾತ್ಕಾರಗಳು ಮತ್ತು ಹೊಸ ಲೋಕಗಳು ರಚಿತವಾಗುತ್ತಿರುತ್ತವೆ. ನಮ್ಮ ಭೌತಿಕ ಸತ್ತೆಯಿಂದ ನಾವು ಮೇಲೆ ಮೇಲೆ ಹತ್ತಿ ಹೋಗಬಹುದಾದ ಉನ್ನತ ಪ್ರಜ್ಞಾಸ್ತರಗಳನ್ನು ಭೂಮಿಯಲ್ಲಿರುವ ಪರ್ವತ ಶಿಖರಗಳೆಂದೂ ದಾರ್ಶನಿಕ ವರುಣನು ಅವೆಲ್ಲವನ್ನೂ ಗರ್ಭೀಕರಿಸಿಕೊಂಡಿರುತ್ತಾನೆ ಎಂದೂ ಸಂಕೇತಿಸಿ ಹೇಳಲಾಗಿದೆ. ಉತ್ತರೋತ್ತರ ಎತ್ತರದ ಸೋಪಾನಗಳಂತಿರುವ (ಪ್ರಜ್ಞಾಸ್ತರ) ಲೋಕಗಳನ್ನು ಒಂದು ಮಹಾಮೇರುವಿನ ಎತ್ತರೆತ್ತರದ ನೆಲೆಗಳೆಂಬಂತೆ ಚಿತ್ರಿಸಲಾಗಿದೆ. ವರುಣನ ಮುನ್ನಡೆಯನ್ನನು-ಸರಿಸುತ್ತಿರುವ ಜಲಯಾನಿ ಆಯಾ ಲೋಕಗಳನ್ನು ತಲುಪಿದಾಗ ಎಲ್ಲ ಸ್ತರಗಳಲ್ಲೂ ಹುಟ್ಟಿದ ಎಲ್ಲ ವಸ್ತುಗಳನ್ನೂ ಹಿಡಿಯುತ್ತಾನೆ ಎನ್ನಲಾಗಿದೆ. ಆದರೆ ಆ ಯಾತ್ರಿಕನ ಕೊನೆಯ ಗುರಿಯು ಮಹಾದೇವನ ಉನ್ನತತಮ ತ್ರಿಪುಟಲೋಕವೇ ಆಗಿರತಕ್ಕದ್ದು. "ಮೂರು ಆನಂದಮಯಿ ಉಷೆಯರು ಅವನ ಕಾರ್ಯರೀತಿಯಂತೆ ವರ್ಧಿಸುತ್ತಾರೆ. ಸರ್ವದರ್ಶಿ ವಿವೇಕಯುಕ್ತನಾದ ಆ ಮಹಾದೇವನು ಶುಕ್ಲವರ್ಣದ ಹೊಳಪಿನ ಮೂರು ಪೃಥ್ವಿಗಳಲ್ಲಿ ವಾಸಿಸುತ್ತಾನೆ. ವರುಣನ ಊರ್ಧ್ವತರ ಲೋಕಗಳು ಮೂರು ; ಅಲ್ಲಿಂದ ಆತನು ಏಳರ ಮತ್ತು ಏಳರ ಸಾಮಶ್ರುತ್ಯಗಳ ಮೇಲೆ ಆಳುತ್ತಾನೆ. ಅವನೇ ಮೂಲಪೀಠ ನಿರ್ಮಾಪಕನು- ಅದು ವರುಣನ "ತತ್‌ಸತ್ಯ" ಮತ್ತು ಅವನೇ ರಕ್ಷಕ ಹಾಗೂ ಚಾಲಕನು" (VIII.41.9.10)

ಸಾರಾಂಶವೇನೆಂದರೆ, ವರುಣನು ಆಕಾಶೀಯ, ಸಾಗರೀಯ, ಅನಂತ-ಅನಂತ ವಿಸ್ತಾರದ ಸತ್ತೆಯ ರಾಜನು ; ಅವನು ವಿಸ್ತಾರ ಜ್ಞಾನೇಶ್ವರನು ಮತ್ತು ವಿಸ್ತಾರಬಲ ಸಂಪನ್ನನು ; ಒಬ್ಬನೇ ಒಬ್ಬನಾದ ಮಹೇಶ್ವರನ ಸಕ್ರಿಯ ಸರ್ವಜ್ಞಾನದ ಅವತಾರ ಸ್ವರೂಪನು ; ದಿವ್ಯ ಸತ್ಯದ ಬಲಿಷ್ಠ ಸಂರಕ್ಷಕನು ; ದಂಡ ವಿಧಾತನು ಮತ್ತು ವೈದ್ಯನು; ಪಾಶಾಧೀಶನು ಮತ್ತು ಬಂಧನ ಪ್ರಗ್ರಹದಿಂದ ಜಿಡಿಸುವವನು ; ಅತಿ ದೂರಸ್ಥ ಉನ್ನತೋದ್ಧತ ಪರತಮ ಸತ್ಯದ ವಿಶಾಲವಾದ ಬೆಳಕಿನತ್ತ ಮತ್ತು ವಿಪುಲವಾದ ಶಕ್ತಿಯತ್ತ ನಮ್ಮ ವಿಚಾರವನ್ನೂ, ಕಾರ್ಯವನ್ನೂ ಕರೆದೊಯ್ಯುವವನು. ವರುಣನು ಸರ್ವರಾಜ್ಯಗಳ ರಾಜನು ಮ್ತು ಸರ್ವಮರ್ತ್ಯಾಮರ್ತ್ಯರ ಅರಸನು. ಭೂಮಿ, ಸ್ವರ್ಗ ಮುಂತಾದ ಸರ್ವ ಜಗತ್ತುಗಳೂ ಅವನ ಪ್ರಾಂತಗಳು.



# ಮಿತ್ರ

ವರುಣನ ಪಾವಿತ್ರ್ಯ, ಅನಂತ್ಯ, ಸಬಲ ರಾಜತ್ವಗಳು ದಿವ್ಯ ಸತ್ತಾತ್ಮಕನ ವೈಭವೋಪೇತ ಮಂಡಪವೂ ಸಾರ್ವಭೌಮ ಗಾಂಭೀರ್ಯ ಸಾರವೂ ಆದರೆ-ಮಿತ್ರನು ಅದರ ಸೌಂದರ್ಯ ಹಾಗೂ ಪೂರ್ಣತ್ವಗಳ ಸ್ವರೂಪವುಳ್ಳವನು. ಪರಮದೇವ ಸ್ವಭಾವದಲ್ಲಿ ಭಾಗಿಯಾಗುವುದರಿಂದ ದಿವ್ಯಮಾನವನು ಅನಂತ, ಶುದ್ಧ, ಸ್ವರಾಜನೂ ಸ್ವಭಾವತಃ ಪ್ರಭುತ್ವ ಸಂಪನ್ನ ಆತ್ಮನೂ ಆಗಿರಬೇಕಾಗುತ್ತದೆ. ಆದರೆ ವೈದಿಕ ಆದರ್ಶಕ್ಕೆ ದಿವ್ಯ ಪ್ರತಿಮೆಯ ಬಹುದೊಡ್ಡದಾದ, ಸಫಲ ಹೊಂದದ ಯೋಜನೆಯಷ್ಟರಿಂದ ತೃಪ್ತಿಯಿಲ್ಲ. ಈ ವಿಶಾಲ ಖಂಡದಲ್ಲಿ ಉದಾತ್ತವೂ ಶ್ರೀಮಂತವೂ ಆದ ಹುರುಳು-ತಿರುಳುಗಳಿರಬೇಕು. ವರುಣ ಗರ್ಭಸ್ಥವಾದ ನಮ್ಮ ಬಹುಶಾಲಾಯುಕ್ತವಾದ ಸತ್ತಾಗ್ರಹವು ತನ್ನ ಪ್ರಯೋಜನಕಾರಿತ್ವದಲ್ಲಿ ಮತ್ತು ಸಾಧನ ಸಂಪತ್ತಿನಲ್ಲಿ ಋತ ಸಾಮಶ್ರುತ್ಯ ಸಂಪನ್ನವಾಗಿರುವಂತೆ ಮಿತ್ರನು ವ್ಯವಸ್ಥೆ ಮಾಡಬೇಕಾಗಿದೆ.

ಏಕೆಂದರೆ, ಉಕ್ತ ದೇವತಾತತ್ವವು ಅಪಾರ ಶ್ರೇಯಃ ಸಮೃದ್ಧಿ ಸ್ವರೂಪವುಳ್ಳದ್ದೂ ಹೌದು, ಆನಂತ್ಯವುಳ್ಳದ್ದೂ ಹೌದು ; ವರುಣನು ಆಕಾಶೀಯ ಸ್ವರ್ಗಕ್ಕೆ ಏನೂ ಕಡಿಮೆಯಲ್ಲದ ಸಾಗರ ಸ್ವರೂಪನು ಹೌದು. ಆಕಾಶದಂತೆ ಶುದ್ಧನೂ, ಸೂಕ್ಷ್ಮನೂ ಆದ ವರುಣನ ಸಾರ ಸರ್ವಸ್ವವು (ಕಸುವುಳ್ಳ ಹೂರಣವು) ಪ್ರಶಾಂತ ಗಂಭೀರ ಶೂನ್ಯವೂ ಅಲ್ಲ, ಸುಲಭ, ಅಸ್ಪಷ್ಟ ಶಾಂತಿಯೂ ಅಲ್ಲ-ಆದರೆ ನಾವಾತನಲ್ಲಿ ಭರದಿಂದೇಳುವ ವಿಚಾರ ಹಾಗೂ ಕರ್ಮಗಳ (ಯೋಧ ಸಹಜ) ವಿಜಯಯಾತ್ರಾ ಪಥಚಲನವನ್ನು ಕಂಡಿದ್ದೇನೆ. ಸರ್ವ ವಿವೇಕಗಳೂ ಉತ್ ಸಂಗೃಹೀತವಾದ, ಜಟಿಲ ಗ್ರಂಥಿಯೆಂದೂ ದೇವತೆಗಳ ಮೂಲ, ಅಪತಿತ ಕಾರ್ಯಗಳನ್ನೆತ್ತಿ ಹಿಡಿವ ಗುಡ್ಡವೆಂದೂ ವರುಣನನ್ನು ನಮ್ಮೆದಿರು ವರ್ಣಿಸಲಾಗಿದೆ. ವರುಣರಾಜನು ನಿದ್ರಾರಹಿತನು ; ಯಾವಾಗಲೂ ಎಚ್ಚತ್ತಿರುವ ಬಲಿಷ್ಠನು ; ಸಾರ್ವಕಾಲಿಕವಾಗಿ ಪರಿಣಾಮಕರ ಪ್ರಣೋದನು ; ಪರಮಸತ್ಯಕ್ಕಾಗಿ ದುಡಿಯುವವನು, ಪರಮ ಋತಕ್ಕಾಗಿ ಗೆಯ್ಯುವವನು. ಹೀಗಿದ್ದರೂ ಆತನು ಪರಮಸತ್ಯದ ಅಂಗವಾಗದೆ ಅದರ ಸಂರಕ್ಷಕನಾಗಿಯೇ ಇರುತ್ತಾನೆ ಅಥವಾ ಅವನ ವಿಸ್ತಾರವನ್ನೂ ಉತ್ಸರ್ಜನಶೀಲ ಪ್ರಣೋದವನ್ನೂ ಬಳಸಿಕೊಂಡು ಇತರ ದೇವತೆಗಳು ಮಾಡುವ ಕೆಲಸಗಳ ಮೂಲಕ ಅವನು ಅದರ ಅಂಗವಾಗಿದ್ದಾನೆ ಎನ್ನಬಹುದು. ಅವನು ಹೊಳೆವ ವ್ರಜಗಳನ್ನು ಸಾಕುತ್ತಾನೆ, ಹೊಡೆದುಕೊಂಡು ಹೋಗುತ್ತಾನೆ ; ಆದರೆ ಅವುಗಳನ್ನು ಹುಲ್ಲುಗಾವಲುಗಳಲ್ಲಿ ಕೂಡಿಸಿ ನಿಲ್ಲಿಸುವುದಿಲ್ಲ; ಅವನು ನಮ್ಮ ಶಕ್ತಿಗಳನ್ನು ಎತ್ತಿ ಹಿಡಿವವನು ಮತ್ತು ವಿಘ್ನಗಳನ್ನೂ ಹಗೆಗಳನ್ನೂ ಪರಿಹರಿಸುವವನು - ನಮ್ಮ ಭಾಗಗಳನ್ನು ಒಟ್ಟುಗೂಡಿಸಿ ಕಟ್ಟುವುದು ಅವನಿಗೆ ಗಣ್ಯವಲ್ಲ.

ಹಾಗಾದರೆ ಈ ದಿವ್ಯ ಕರ್ಮಗಳ ಆಧಾರಕರ್ತನಲ್ಲಿ ಅವುಗಳನ್ನು ಒಂದಕ್ಕೊಂದನ್ನು ಹೊಂದಿಸುವವನು ಯಾ ಜ್ಞಾನವನ್ನು ಈ ಜಟಿಲ ಗ್ರಂಥಿಯಲ್ಲಿ ಒಟ್ಟುಗೂಡಿಸಿ ಇಡುವವನಾರು?

ಮಿತ್ರನೇ ಆ ಸಮಶ್ರುತಿಕರ್ತನು, ಅವನೇ ಕಟ್ಟುವವನು, ಅವನೇ ಅಂಗವಾದ ಬೆಳಕು ; ಮಿತ್ರನೇ ವರುಣನು ತಿರುಳಾಗಿರುವ ಮತ್ತು ಅನಂತವಾಗಿ ಸ್ವಾತ್ಮ-ವಿಕಾಸಪರಿಧಿಯಾಗಿರುವ ನ್ಯಾಯವಾದ (ಋತಂಭರವಾದ) ಐಕ್ಯವನ್ನು ಸಾಧಿಸಿಕೊಡುವ ದೇವನು. ಈ ಇಬ್ಬರು ರಾಜರು ಪರಸ್ಪರ ಪೂರಕರಾಗಿರುತ್ತಾರೆ-ಹೀಗಿರುವುದು ಅವರ ಸ್ವಭಾವವು. ಅವರ ದಿವ್ಯ ಕರ್ಮಗಳಲ್ಲೂ ಅವರು ಅದೇ ಸಂಬಂಧದಲ್ಲಿರುತ್ತಾರೆ. ಅವರಲ್ಲಿಯೇ ನಾವು ದೊಡ್ಡತನದಲ್ಲಿ ಸಾಮಶ್ರುತ್ಯವನ್ನು ಕಂಡು ಪಡೆಯುತ್ತೇವೆ. ಉಕ್ತ ದೇವತಾತತ್ವದಲ್ಲಿ ಪ್ರೇಮವನ್ನು ಆಧರಿಸಿ ವಿವೇಕದಲ್ಲಿ ಅಸ್ಖಲಿತರಾಗಿ ನಾವು ಅನ್ಯೂನತೆಯಿಂದ ಪಾವಿತ್ರ್ಯವನ್ನು ಕಂಡು (ಪಡೆದು) ಹೆಚ್ಚಿಸಿಕೊಳ್ಳುತ್ತೇವೆ. ಆದುದರಿಂದ ಈ ಇಬ್ಬರು ಸ್ವಾತ್ಮಪೂರ್ಣೀಕರಣದ ದೇವತಾತತ್ವದ ಮಹಾದೇವದ್ವಯರು ; ಮತ್ತು ವೇದ ಮಂತ್ರದ ಪ್ರಕಾರ, ಇವರು ಹೆಚ್ಚು ಹೆಚ್ಚು ವಿಶಾಲತರ ಯಜ್ಞಕ್ಕೆ ಆಹೂತರು - ಹಾಗೆ ಕರೆದಾಗ ಇವರು ಬಂದು ಅವಿಭಾಜ್ಯ ರಚಯಿತೃಗಳಾಗಿ (ಕಟ್ಟೋಣಕಾರರಾಗಿ) ಹೆಚ್ಚುತ್ತಿರುವ ಪರಮಸತ್ಯವನ್ನು ರಚಿಸುತ್ತಾ ಹೋಗುತ್ತಾರೆ. ಮಧುಚ್ಛಂದಸ್ ಋಷಿಯು ಇವರ ಏಕೀಕೃತ ದೇವತ್ವದ ಸೂಕ್ಷ್ಮವನ್ನು ತಿಳಿಸುತ್ತಾನೆ : "ನಾನು ಮಿತ್ರನನ್ನು ಪವಿತ್ರ ನಿರ್ಣಾಯಕನೆಂದೂ ವರುಣನನ್ನು ಶತ್ರುಭಕ್ಷಕನೆಂದೂ ಕರೆಯುತ್ತೇನೆ, ಪರಮಸತ್ಯದ ದೆಸೆಯಿಂದ ಮಿತ್ರಾವರುಣರು ಪರಮ ಸತ್ಯವರ್ಧನರು ; ಇವರು ಪರಮಸತ್ಯವನ್ನು ಮುಟ್ಟುವರು (ಸ್ಪರ್ಶಿಸುವರು)-ನೀನು ಸಂಕಲ್ಪದ ವಿಸ್ತಾರವಾದ ಕರ್ಮವನ್ನು ಸಾಧಿಸುತ್ತೀಯೆ. ವಿಸ್ತಾರ ನಿವಾಸಿಗಳಾದ ದ್ರಷ್ಟಾರರು, ಅನೇಕ ಸಲ ಹುಟ್ಟಿ ಬಂದವರು, ಯಾರೋ ಅವರನ್ನು ಈ ಇಬ್ಬರು ದೇವರುಗಳು ಪರಮಸತ್ಯದ ಕಾರ್ಯಗಳಲ್ಲಿ ಎತ್ತಿ ಹಿಡಿಯುತ್ತಾರೆ." (I.2.7-9)

ಮಿತ್ರನೆಂಬ ಹೆಸರು ಮೂಲತಃ ಒತ್ತಿ ಒಳಗೊಂಡಿರು, ಆಲಿಂಗಿಸು" ಎಂಬ ಅರ್ಥ ಕೂಡುವ ಧಾತುವಿನಿಂದ ಹುಟ್ಟಿದ್ದು. ಸಾಮಾನ್ಯ ಸಂಸ್ಕೃತದಲ್ಲಿ ಅದರಿಂದಲೇ ಮಿತ್ರನೆಂದರೆ ಸ್ನೇಹಿತ ಎಂಬ ಅರ್ಥ ಉಂಟಾಯಿತು. ಹಾಗೇ ಪ್ರಾಚೀನ ತಮವಾದ "ಮಯಸ್"= ಪರಮಾನಂದ ಎಂಬ ಪದಕ್ಕೂ ಅದೇ ಧಾತುವು ಮೂಲವಾಗಿದೆ. ಮಿತ್ರ ಶಬ್ದದ ರೂಢಿಗತ ಗೆಳೆಯ ಎಂಬ ಅರ್ಥವನ್ನಾಧರಿಸಿಯೇ ವೇದದ ಕವಿಗಳು ಈ ಆಭಾಸಿಕ ಸೂರ್ಯಾತ್ಮಕ ದೇವರ ಒಳ ಅರ್ಥದ ಮಾನಸ ಶಾಸ್ತ್ರೀಯ ಕರ್ತವ್ಯದ ಗೂಢ ಸೂಚನೆಯನ್ನು ಸತತವಾಗಿ ಆಧರಿಸಿದರು. ಉಳಿದ ದೇವತೆಗಳು-ಅದರಲ್ಲೂ ವಿಶೇಷತಃ ಉಜ್ವಲ ಅಗ್ನಿಯು ಮಾನವ್ಯ ಯಜ್ಞಕರ್ತನಿಗೆ ಸಹಾಯಕರೆಂದು ಭಾವಿಸಿದಾಗ ಅವರಲ್ಲಿ ಪ್ರತಿಯೊಬ್ಬರನ್ನೂ ಮಿತ್ರನು, ಮಿತ್ರ ಸದೃಶನು ಯಾ ಮಿತ್ರನಾಗುವವನು ಎಂದು ಉಕ್ತ ಋಷಿಗಳು ಹೇಳುತ್ತಾರೆ. ಈಗ ನಾವವನನ್ನು ದಿವ್ಯ ಸಂಕಲ್ಪ ಪ್ರಣೋದ ಅಥವಾ ಯಾವುದಾದರೊಂದು ಶಕ್ತಿ ಮತ್ತು ದೇವತಾ ವ್ಯಕ್ತಿತ್ವ ಎಂದು ಹೇಳಬೇಕಾಗಿದೆ; ಅದೀಗ ಕ್ರಮಶಃ ದಿವ್ಯ ಪ್ರೇಮವಾಗಿ ಪ್ರತ್ಯಕ್ಷವಾಗುತ್ತದೆ. ಆದುದರಿಂದ ನಾವೀಗ ಈ ವೈದಿಕ ಸಾಂಕೇತಲಿಗೆ ಮಿತ್ರನು ಸಾರತಃ ಪ್ರೇಮನಾಥನು, ದಿವ್ಯ ಸ್ನೇಹಿತನು, ಮಾನವರಿಗೂ ದೇವತೆಗಳಿಗೂ ಕರುಣೆಯಾದ ಸಹಾಯಕನು ಎಂದು ಭಾವಿಸಬೇಕು. ಮಿತ್ರನು ದೇವತೆಗಳಿಗೆಲ್ಲಾ ಅತ್ಯಂತ ಪ್ರಿಯ ಎಂದು ವೇದ ಹೇಳುತ್ತದೆ.

ವೈದಿಕ ದ್ರಷ್ಟಾರರು ಪ್ರೇಮವನ್ನು ಉದಾತ್ತ ದೃಷ್ಟಿಯಿಂದ ನೋಡಿದರು, ಅದರ ಊರ್ಧ್ವಮೂಲವನ್ನು, ಊರ್ಧ್ವಾಕರವನ್ನು ಕಂಡರು : ಅವರ ಪ್ರಕಾರ ಅದು ತಾವು ಮಾನವತ್ವದಲ್ಲಿ ಸ್ವೀಕರಿಸಿದ ದಿವ್ಯ ಆನಂದದ ಕೋಡಿವರಿತವು. ಉಕ್ತ ದೇವತಾ ತತ್ವದ ಆಧ್ಯಾತ್ಮಿಕ ಮತ್ತು ವೈಶ್ವಿಕ

ಆನಂದವೆಂದೂ ವೇದಾಂತದ "ಆನಂದ"ವೆಂದೂ ವೈದಿಕ ಮಯಸ್ಸೆಂದೂ ತೈತ್ತಿರೀಯ ಉಪನಿಷತ್ತು ವಿವರಿಸುತ್ತದೆ: "ಅದರ ತಲೆಯು ಪ್ರೇಮ" ಎಂದಿದೆ ಅದು. ಆದರೆ ಅದು ಪ್ರೇಮವೆನ್ನಲು ಆಯ್ದು ಬಳಸುವ "ಪ್ರಿಯಂ" ಎಂಬ ಪದವು ನ್ಯಾಯವಾಗಿ ಆತ್ಮದ ಅಂತಃಸಂತೋಷ ಮತ್ತು ತೃಪ್ತಿಗಳಿಗೆ ವಿಷಯವಾದ ಆಹ್ಲಾದಕರತ್ವವು. ವೈದಿಕ ಗಾಯಕರು ಅದೇ ಮನೋಧರ್ಮವನ್ನು ಅನುಸರಿಸಿದ್ದರು. ಅವರು ಮಯಸ್ಸನ್ನೂ ಪ್ರಯಸ್ಸನ್ನೂ ಕೂಡಿಸಿದರು. ಮಯಸ್=ಸರ್ವಪದಾರ್ಥ ನಿರಪೇಕ್ಷವಾದ ಅಂತಃಸುಖ ; ಪ್ರಯಸ್ = ವಿಷಯಗಳಲ್ಲೂ ಜೀವಿಗಳಲ್ಲೂ ಆತ್ಮವು ಪಡೆಯುವ ಆಹ್ಲಾದ-ಪ್ರಹ್ಲಾದಗಳ ಕೋಡಿವರಿತ (ಮೇಲಾತಿಕ್ರಾಂತ ಪ್ರವಾಹ). ಈ ದಿವ್ಯ ಸುಖವೇ ವೈದಿಕ ಪರಮ ಸುಖವು, ಪರಮ ಸೌಲಭ್ಯವು, ಪರಮಾನಂದವು. ಅದು ತನ್ನ ಜೊತೆಗೇ ಶುದ್ಧ ಸ್ವಾಧೀನತೆಯ ವರವನ್ನೂ ಪಾಪರಹಿತ ಭೋಗವನ್ನೂ ತರುತ್ತದೆ. ದೊಡ್ಡದಾದ ವೈಶ್ವತ್ರಿಕತೆಯ ಸ್ವಾತಂತ್ರದಲ್ಲಿ ನೆಟ್ಟಿರುವ ಈ ಸ್ವಾಯತ್ತತೆ - ಭೋಗಗಳು ಶುದ್ಧ. ಏಕೆಂದರೆ, ಇವು ಅವಿಚ್ಛಿನ್ನವಾಗಿರುವ ಪರಮಸತ್ಯ ಸ್ಪರ್ಶ ಮತ್ತು ಪರಮ ಋತಸ್ಪರ್ಶ ಉಳ್ಳವುಗಳಾಗಿವೆ.

ಮಿತ್ರನು ದೇವತೆಗಳಲ್ಲೆಲ್ಲಾ (ದೇವತೆಗಳಿಗೆಲ್ಲಾ) ಪ್ರಿಯತಮನು ; ಏಕೆಂದರೆ, ಈ ದಿವ್ಯಭೋಗವನ್ನು ನಮ್ಮ ಕೈಗೆ ಸಿಗುವಂತೆ ಮಾಡುತ್ತಾನೆ ಮತ್ತು ನಮ್ಮನ್ನು ಈ ಪೂರ್ಣಸುಖದತ್ತ ಕರೆದುಕೊಂಡು ಹೋಗುತ್ತಾನೆ. ವರುಣನು ನೇರವಾಗಿ ಸಾಮರ್ಥ್ಯದಾತನು ; ಅವನಲ್ಲಿ ನಾವು ಪಾವಿತ್ರ್ಯದಲ್ಲಿ ಬಹು ವಿಸ್ತಾರವಾದ ಒಂದು ಪ್ರಣೋದವನ್ನೂ ಸಂಕಲ್ಪವನ್ನೂ ಕಂಡುಹಿಡಿಯುತ್ತೇವೆ ; ಆಧ್ಯಾತ್ಮಿಕ ಅಪೇಕ್ಷಕನಾದ ಅರ್ಯಮನನ್ನು ವರುಣನ ಅನಂತತೆಯಿಂದ ನಾವು ಅವನ ಬಲದ ವಿಸ್ತಾರದಲ್ಲಿ ಪಡೆದುಕೊಳ್ಳುವೆವು ; ಅರ್ಯಮನು ತನ್ನ ಮಹತ್ಕಾರ್ಯಗಳನ್ನು ಸಾಧಿಸುತ್ತಾನೆ ಮತ್ತು ತನ್ನ ಮಹಚ್ಚಲನೆಯನ್ನು ಸಫಲಗೊಳಿಸುತ್ತಾನೆ - ವರುಣನ ವಿಶ್ವಜನೀನತೆಯಿಂದ. ಮಿತ್ರನು ನೇರವಾಗಿ ಪರಮಸುಖಕ್ಕೆ ದಾರಿ ಮಾಡಿಕೊಡುತ್ತಾನೆ. ಮಿತ್ರನ ಸರ್ವ ಸಮಯನ್ವಯದಾಯಕ ಸಾಮಶ್ರುತ್ಯದಿಂದ, ಅವನ ಶುದ್ಧೀಕಾರಕ ಋತದೃಷ್ಟಿ ಪ್ರಭೆಯಿಂದ ಮತ್ತು ಅವನ ದೃಢವಾಗಿ ನೆಲೆ ನಿಲ್ಲಿಸಲಾದ ವಿಧಿಯಿಂದ ಭೋಗಿಯಾದ ಭಗನು ಅನಿಂದ್ಯ ಸಂಪತ್ತಿನಲ್ಲಿಯೂ ದಿವ್ಯ ಭೋಗದಲ್ಲಿಯೂ ಪ್ರತಿಷ್ಠಿತನಾಗಿದ್ದಾನೆ. ಆದುದರಿಂದಲೇ ಎಲ್ಲ ಪೂರ್ಣೀಕೃತಾತ್ಮಗಳೂ ಮಿತ್ರನನ್ನು ಅಂಟಿಕೊಳ್ಳುತ್ತವೆ. ಯಾ ದೃಢವಾಗಿ ನೆಲೆ ನಿಲ್ಲಿಸಲ್ಪಡುತ್ತವೆ ಎಂದು ಮಿತ್ರನ ಬಗೆಗೆ ಹೇಳಲಾಗಿದೆ - ಅವು ನೆಲೆ ನಿಲ್ಲಿಸಲ್ಪಟ್ಟದ್ದು "ನಿರಪಾಯನಾದ ಮಿತ್ರನ ಆನಂದದಲ್ಲಿ ; ಏಕೆಂದರೆ, ಮಿತ್ರನಲ್ಲಿ ಪಾಪವಿಲ್ಲ, ಗಾಯವಿಲ್ಲ, ಪತನವಿಲ್ಲ (ಅಧಃಪತನವಿಲ್ಲ). ಎಲ್ಲಾ ಮರ್ತ್ಯ (ಸುಖಗಳಿಗೂ) ಸಂತೋಷಗಳಿಗೂ ಮರ್ತ್ಯವಾದ ಅಪಾಯವಿದೆ. ಆದರೆ ಅಮರ್ತ್ಯ ಪ್ರಕಾಶವೂ ವಿಧಿಯೂ ನಿರ್ಭಯ ಸಂತೋಷದಲ್ಲಿ ಮಾನವಾತ್ಮವನ್ನು ಸುರಕ್ಷಿತವಾಗಿ ಇಡುತ್ತವೆ. ವಿಶ್ವಾಮಿತ್ರನು (III.59.2) ಮಿತ್ರನದಾದ ಅನಂತನ ಸುತನ ವಿಧಿಯು ಪ್ರಯಸ್ಸನ್ನುಳ್ಳದ್ದು, ಅರ್ಥಾತ್ ಸ್ವವಿಷಯಗಳಲ್ಲಿ ಆತ್ಮಕ್ಕೆ ತೃಪ್ತಿಯುಂಟಾಗುವ ಸ್ಥಿತಿಯನ್ನುಳ್ಳದ್ದು ಎಂಬುದನ್ನು ಆ ಮಾನವನು ಕಲಿಯುತ್ತಾನೆ, ಎಂದಿದ್ದಾನೆ. ಅಂಥ ಆತ್ಮವನ್ನು ಕೊಲ್ಲಲು ಸಾಧ್ಯವಿಲ್ಲ. ಗೆಲ್ಲಲು ಸಾಧ್ಯವಿಲ್ಲ ; ಹತ್ತಿರದಿಂದಾಗಲಿ - ದೂರದಿಂದಾಗಲಿ, ಯಾವ ದುಷ್ಟಶಕ್ತಿಯೂ ಅದನ್ನು ವಶಪಡಿಸಿಕೊಳ್ಳಲಾರದು. ಏಕೆಂದರೆ, ಸ್ವೇಚ್ಛೆಯಂತೆ ತಾನೇ ತಾನಾಗಿ ಆತ್ಮದ ಬಯಕೆಗಳೆಲ್ಲವನ್ನೂ ಪೂರೈಸಿಕೊಡುವ ಕಾರ್ಯಶಕ್ತಿಯುಳ್ಳ ಪ್ರೇರಣೆಗಳನ್ನು ಮಿತ್ರನು ದೇವತೆಗಳಲ್ಲೂ ಮನುಷ್ಯರಲ್ಲೂ ರೂಪಿಸುತ್ತಾನೆ.

ಅಂಥ ಸುಖಕರವಾದ ಸರ್ವಪ್ರಭುತ್ವದ ಸ್ವಾತಂತ್ರ್ಯವು ನಮಗೆ ಸಿಗುವುದು ಈ ದೇವತತ್ವನಾದ ಮಿತ್ರನ ವೈಶ್ವತ್ರಿಕತೆಯಿಂದ, ಈತನ ವಾಸ್ತವಿಕ ದಿವ್ಯಾಲಿಂಗನದಿಂದ, ಸರ್ವವಸ್ತ್ವಾಶ್ಲೇಷಣದ ಚಮತ್ಕಾರದಿಂದ, ಹೊಳೆವ ಅಪ್ಪುಗೆಯಿಂದ. ಮಿತ್ರನದು ಸಾಮಶ್ರುತ್ಯತತ್ವ, ಸ್ವರಮೇಳಸೂತ್ರ, ಅಪಸ್ವರನಿವಾರಣ ನೀತಿ. ಅದರಿಂದ ಪರಸತ್ಯದ ಬಹುವಿಧ ಕಾರ್ಯಪ್ರಕಾರಗಳು ಪೂರ್ಣವಾಗಿ ಸಂಲಗ್ನವಾದ ಐಕ್ಯದಲ್ಲಿ ಐಕಮತ್ಯ ಹೊಂದುತ್ತವೆ. ಮಿತ್ರ ಪದದ ಜನಕ ಧಾತುವಿಗೆ ಆಲಿಂಗಿಸು, ಒಳಗೊಳ್ಳು, ಧರಿಸು (ಹೊತ್ತುಕೊಂಡಿರು) ಯಾ ಹಿಡಿದುಕೊಂಡಿರು, ಇಡಿಯೊಂದರ ಬಿಡಿಭಾಗಗಳನ್ನು ಸಂಲಗ್ನಿಸುವಂತೆ ಕಟ್ಟು ಯಾ ರೂಪಿಸು ಎಂಬ ಅರ್ಥಗಳಿವೆ. ಉಪಾಸನೀಯ ಮಿತ್ರನು ನಮ್ಮಲ್ಲಿ ವಸ್ತುಗಳ ಆನಂದಮಯ ವ್ಯವಸ್ಥಾಪಕನಾಗಿಯೂ ಅತಿ ಬಲವಂತ ಅರಸನಾಗಿಯೂ ಹುಟ್ಟಿದ್ದಾನೆ. ಮಿತ್ರನು ದ್ಯಾವಾಪೃಥಿವಿಗಳನ್ನು ಎತ್ತಿ ಹಿಡಿಯುತ್ತಾನೆ ಮತ್ತು ನಿರ್ನಿದ್ರೆಯಿಂದ ಲೋಕಗಳನ್ನೂ, ಜನಗಳನ್ನೂ ನೋಡುತ್ತಾನೆ. ಮತ್ತು ಅವನ ಜಾಗರಿತವೂ ಪೂರ್ಣವೂ ಆದ ಆಜ್ಞೆಗಳು ನಮ್ಮಲ್ಲಿ ಮಾನಸ-ಇಂದ್ರಿಯಗಳ (ಮನದ ಮತ್ತು ಭಾವನಾಂಶಗಳ) ಸುಖಕರ ಋತಸ್ಥಿತಿಯನ್ನು ಯಾ ಸಮವ್ಯವಸ್ಥಿತ ಸ್ಥಿತಿಯನ್ನು ನಿರ್ಮಿಸುತ್ತವೆ. ಸುಮತಿ=ಪ್ರಸನ್ನತೆ ಎಂದು ನಾವು ಹೇಳಿಯೇ ಬಿಡಬಹುದು- ಅದು ನಮಗೆ ಅನಪಾಯಕರವಾಗಿ ಬಹುಕಾಲ ಹೊಂದಿಕೊಂಡಿರುವ ಸ್ಥಿತಿಯಾಗುತ್ತದೆ: "ಅನಾನಂದ ರಹಿತವಾಗಿ ಮಂತ್ರದೇವತೆಯಲ್ಲಿ ಭಾವೋದ್ರೇಕದಿಂದ ಸಂತೋಷಪಡುತ್ತಾ ಪೃಥ್ವೀ ವಿಸ್ತಾರದಲ್ಲಿ ಮೊಣಕಾಲನ್ನೂರಿ ಅನಂತದ ಸುತನಾದ ಮಿತ್ರನ ವಿಧಿಯ ಆಚರಣೆಯಲ್ಲಿ ನಾವು ನಮ್ಮ ಸ್ಥಿರಸ್ಥಾನಕ್ಕೆ ಹೋಗಿ ನೆಲೆಸುತ್ತೇವೆ ಮತ್ತು ಆತನ ಅನುಗ್ರಹದಿಂದ ಬದುಕುತ್ತೇವೆ" (III.59.3) ಎಂದು ವೇದ ಮಂತ್ರವು ಹೇಳುತ್ತದೆ. ಅಗ್ನಿಯು ಮಿತ್ರನಾಗಿ ದಿವ್ಯ ಸಂಕಲ್ಪವು ದಿವ್ಯ ಪ್ರೇಮವನ್ನು ಸಾಕ್ಷಾತ್ಕರಿಸಿಕೊಂಡಾಗ ಗೃಹಪತಿಯೂ, ಗೃಹಿಣಿಯೂ ತಮ್ಮ ಸೌಧದಲ್ಲಿ ಪರಸ್ಪರ ಒಪ್ಪಿಗೆಯಿಂದ ಇರುತ್ತಾರೆ ಎಂಬುದು ವೇದೋಕ್ತ ಪ್ರತಿಮೆ.

ಪರಮಸತ್ಯದ ಸುಸಾಂಗತ್ಯವುಳ್ಳ ಸುಖವು ಮಿತ್ರನ ಆಚಾರವಿಧಿಯು ; ಏಕೆಂದರೆ, ಪರಸತ್ಯ-ದಿವ್ಯಜ್ಞಾನಗಳಲ್ಲಿಯೇ ಸಾಮಶ್ರುತ್ಯ-ಪೂರ್ಣಮನಃಪ್ರವೃತ್ತಿಗಳು ಪ್ರತಿಷ್ಠಿತವಾಗಿವೆ. ಮಿತ್ರ-ವರುಣರ ಮಾಯೆಯಿಂದ (ಅತಿಮಾನುಷ ಶಕ್ತಿಯಿಂದ) ಅವು ರೂಪಿತವಾಗಿ ರಕ್ಷಿಸಲ್ಪಟ್ಟಿವೆ. ಮಾಯೆ - ಮಿತ್ರಪದಗಳ ಮೂಲಧಾತು ಒಂದೇ. ಮಾಯೆ=ತಿಳಿವ, ಅಳೆವ, ಆಕಾರ ಕೊಡುವ ಜ್ಞಾನವು ; ಆ ಆಕಾರವು ದಿವ್ಯವೂ ಆಗಿರಬಹುದು,ಅದಿವ್ಯವೂ ಆಗಿರಬಹುದು - ಅದು ಅದಿತಿಯ ಅವಿಭಕ್ತತೆಯಲ್ಲಿ ಸುರಕ್ಷಿತವಾಗಿಯೂ ಇರಬಹುದು ಯಾ ದಿತಿಯ ವಿಭಕ್ತ ಸತ್ತೆಯಲ್ಲಿ ಒದ್ದಾಡುತ್ತಲೂ (ಕಷ್ಟದ ಕೆಲಸ ಮಾಡುತ್ತಲೂ) ಇರಬಹುದು. ಮಾಯೆಯು ಇಡೀ ದೃಶ್ಯದ ನಿರ್ಮಾಪಿಕೆ, ಆವರಣರೂಪಿಕೆ ; ಇಡಿ ಪರಿಸ್ಥಿತಿಯನ್ನು ಏಕತ್ರ ನೆಲೆಗೊಳಿಸಿ ಲಕ್ಷಣದಿಂದ ಬಂಧಿಸುತ್ತಾಳೆ- ನಮ್ಮ ಅಸ್ತಿತ್ವದ ಶರ್ತ, ವಿಧಿ, ಕಾರ್ಯಗಳನ್ನು ನಿಶ್ಚಿತಗೊಳಿಸುತ್ತಾಳೆ ಅವಳು. ಮಾಯೆಯು ಸಕ್ರಿಯೆ, ಉತ್ಪಾದಿಕೆ, ವಿಕಲ್ಪ ನಿಶ್ಚಾಯಿಕೆ-ಎಂಬ ಸ್ವರೂಪದ ಒಂದು ದೃಷ್ಟಿಕೋನವು. ಉಕ್ತ ಶಕ್ತಿಯು ಪ್ರತಿಯೊಂದು ಜೀವಿಗೂ ಅವನವನ ಪ್ರಜ್ಞೆಗೆ ಅನುಸಾರವಾಗಿ ಅವನವನದೇ ಆದ ಪ್ರಪಂಚವನ್ನು ಸೃಷ್ಟಿಸುತ್ತದೆ. ಮಿತ್ರ-ವರುಣರು ಮಾಯಕಾರರು. ಆದರೆ ಮಿತ್ರನು ಪ್ರಕಾಶಪ್ರಭು, ಆನಂತ್ಯದ (ಅನಂತದ) ಮಗ, ಪರಸತ್ಯದ ಒಬ್ಬ ರಕ್ಷಕನು ; ಆದುದರಿಂದ ಅವನ ಮಾಯಾಭಾಗವು ಅನಂತ, ಅತ್ಯುಚ್ಚ, ಅಸ್ಖಲಿತ, ಸರ್ಜನಶೀಲ ಎನ್ನಿಸಿರುವ ವಿವೇಕ. ಅವನು ನಮ್ಮ ಸತ್ತೆಯ ಎಲ್ಲ ಅಗಣಿತ ಪ್ರಜ್ಞಾಸ್ತರಗಳನ್ನೂ ಎಲ್ಲ ಉತ್ತರೋತ್ತರ ಸೋಪಾನಗಳನ್ನೂ ಎಲ್ಲ ತಾರತಮ್ಯಯುಕ್ತ ಪೀಠಗಳನ್ನೂ ಬೆಳಗಿದ ಒಂದು ಸಾಮಶ್ರುತ್ಯದಲ್ಲಿ ರಚಿಸಿ ಕೂಡಿಸುತ್ತಾನೆ-ತನ್ನ ಮಾಯೆಯಿಂದ. ತನ್ನ ಮಾರ್ಗದಲ್ಲಿ ಅರ್ಯಮನು

ಏನನ್ನು ಬಯಸುತ್ತಾನೋ ಅದೆಲ್ಲವನ್ನೂ ಮಿತ್ರವಿಧಿಯಂತೆ, ಮಿತ್ರ "ಧಾರಣೆಗಳಂತೆ" (ಮಿತ್ರ ಹಿಡಿದಿಟ್ಟುಕೊಂಡಿರುವ ಆಶಾಬೀಜಗಳ ಪ್ರಕಾರವಾಗಿ) ಫಲರೂಪಕ್ಕೆ ತರಲೇಬೇಕು ; ಮಿತ್ರ ವಿಧಿಯಂತಲ್ಲದಿದ್ದರೂ ಮಿತ್ರನ ಮೂಲಾಧಾರದಂತೆ, ಸ್ಥಿತಿಗಳಂತೆ, ಸ್ಥಾನಗಳಿಗನುಗುಣವಾಗಿ ಕಾರ್ಯಗತಗೊಳಿಸಲೇ ಬೇಕು- "ಮಿತ್ರಸ್ಯ ಧರ್ಮಭಿಃ, ಮಿತ್ರಸ್ಯ ಧಾಮಭಿಃ_ ಧರ್ಮವೆಂದರೆ ಸರ್ವಧಾರಿಯಾದ ವಿಧಿ ; ಅದು ಎಲ್ಲವನ್ನೂ ಒಟ್ಟಿಗೆ ಹಿಡಿದಿಟ್ಟಿರುತ್ತದೆ ಮತ್ತು ನಾವದನ್ನು ಹೊತ್ತಿದ್ದೇವೆ, ಹಿಡಿದುಕೊಂಡಿದ್ದೇವೆ ; ಸ್ಥಿತಿರೂಪದ ಧಾಮವು ಸ್ಥಾಪಿತ ಸಾಮಕ್ರುತ್ಯದಲ್ಲಿ ನಮ್ಮ ಜೀವನಸ್ತರವನ್ನು ನಮಗಾಗಿ ನಿರ್ಮಿಸುವ, ನಮ್ಮ ಪ್ರಜ್ಞಾಸ್ವರೂಪವನ್ನು ರೂಪಿಸುವ, ಕಾರ್ಯ ಹಾಗೂ ವಿಚಾರಗಳನ್ನು ದಿಗ್‌ದರ್ಶಿಸುವ ಉಕ್ತವಿಧಿಯನ್ನು ಆಚರಣೆಗೆ ತರುವುದು, ವಿಧಿಸುವುದು, ತಕ್ಕಂತೆ ಇಡುವುದು.

ಅದಿತಿಯ ಇತರ ಸುತರಂತೆ ಮಿತ್ರನೂ ಒಬ್ಬ ಜ್ಞಾನಪ್ರಭು. ಅವನ ಹತ್ತಿರ ಒಂದು ಬೆಳಕಿದೆ ; ಅದರಲ್ಲಿ ಚಿತ್ರವಿಚಿತ್ರವಾದ ಸ್ಫೂರ್ತಿಯಿದೆ ; ಅಥವಾ ವೇದೋಕ್ತಿಗೆ ಸನಿಹದಲ್ಲೇ ನಿಂತು ಹೇಳುವುದಾದರೆ, ಜ್ಞಾನದ ಬಹು ವೈವಿಧ್ಯ ಶ್ರವಣವಿದೆ. ವರುಣನೊಡನೆ ಸಮಾನವಾಗಿ ಮಿತ್ರನು ಅನುಭವಿಸುತ್ತಿರುವ ಅಸ್ತಿತ್ವ ವೈಶಾಲ್ಯದಲ್ಲಿ ಅವನು ಪರಸತ್ಯದ ಸತ್ತೆಯ ಮಹತ್ತೆಯ ದೆಸೆಯಿಂದ ಸ್ವರ್ಗಾಧಿಪತ್ಯವನ್ನು ಪಡೆಯುತ್ತಾನೆ; ಮತ್ತು ತನ್ನ ಜಯತ್ ಪ್ರಭುತ್ವವನ್ನು ಭೂಮಿಯ ಮೇಲೆ ಈ ಸ್ಫೂರ್ತಿಗಳಿಂದ ಯಾ ಜ್ಞಾನ ಶ್ರವಣಗಳಿಂದ ವಿಸ್ತರಿಸುತ್ತಾನೆ. ಐದೂ ವರ್ಗಗಳ ಆರ್ಯ ಜನರು ಅದರಿಂದ ಕಷ್ಟಪಟ್ಟು ದುಡಿದು ಮಿಂಚುವ ಸುಂದರ ಮಿತ್ರನೆಡೆಗೆ ಪಯಣಿಸುವರು. ಅವನು ಅವರಲ್ಲಿ ಹೊಕ್ಕು ಜ್ಯೋತಿರ್ಮಯ ಪ್ರಣೋದವನ್ನು ತುಂಬಿ ತನ್ನ ವಿಸ್ತಾರದಲ್ಲಿ ಎಲ್ಲ ದೇವತೆಗಳನ್ನೂ ಹೊರುತ್ತಾನೆ, ಅವರ ಭಾರವನ್ನು ನಿರ್ವಹಿಸುತ್ತಾನೆ. ಅವನು ಮಹಾನಂದಮಯ ದೇವತೆಯು ; ಪ್ರಪಂಚದಲ್ಲಿರುವ ಸೃಷ್ಟ ಜೀವಿಗಳನ್ನವನು ಕರ್ಮದಲ್ಲಿ ತೊಡಗಿಸಿ ಅವರ ಮಾರ್ಗಗಳಲ್ಲಿ ಅವರನ್ನು ಕೊಂಡೊಯ್ಯುತ್ತಾನೆ. ಒಂದು ಋಕ್ಕಿನಲ್ಲಿ ವರುಣ-ಮಿತ್ರರ ವ್ಯತ್ಯಾಸವನ್ನು ತೋರಿಸಲಾಗಿದೆ : ವರುಣನು ಪ್ರಭುತ್ವ ಸಂಪನ್ನ ಪ್ರಯಾಣಿಕನು-ಅವನು ಹೋಗುವುದು ಆತ್ಮದ ಪರಮೋಚ್ಚ ಪೀಠಕ್ಕೆ ಮಿತ್ರನು ಆ ಶಿಸ್ತಿನ ನಡೆಯಲ್ಲಿ ಮನುಜರು ಮುಂಬರಿಯುವಂತೆ ಮಾಡುತ್ತಾನೆ. ಋಷಿ ಹೇಳುತ್ತಾನೆ : "ಈಗಲೂ ಮಿತ್ರ ಪಥದಲ್ಲಿ ಪಯಣಿಸಿ ನಾನು ಚಲನ ಶಕ್ತಿಯಿಂದ ಗುರಿ ಮುಟ್ಟುವುದು ಸಿದ್ಧಿಸಲಿ."

ವರುಣನ ವಿಸ್ತಾರ ಮತ್ತು ಪಾವಿತ್ರ್ಯಗಳಿಲ್ಲದೆ ಮಿತ್ರನು ತನ್ನ ಸಾಮಕ್ರುತ್ಯವನ್ನು ಪೂರೈಸಿಕೊಳ್ಳಲಾರನಾದುದರಿಂದ ಅವನು ಆ ದೊಡ್ಡ ದೇವರಾದ ವರುಣನ ಜೊತೆಗೇ ಪದೇ ಪದೇ ಆಹ್ವಾನಿಸಲ್ಪಡುತ್ತಾನೆ. ಅವರವುಗಳು ಪರಮಸ್ಥಿತಿಗಳು, ಪರಂಧಾಮಗಳು ಯಾ ಆತ್ಮದ ಪ್ರಜ್ಞಾಸ್ತರಗಳು ; ಮಿತ್ರನ ಮತ್ತು ವರುಣನ ಆನಂದವೇ ನಮ್ಮಲ್ಲಿ ಅಧಿಕವಾಗತಕ್ಕದ್ದು. ಅವರ ಧರ್ಮದಿಂದಲೇ, ವಿಧಿಯಿಂದಲೇ, ನಮ್ಮ ಆ ಮಹಾಪ್ರಜ್ಞಾಯಾಮವು ನಮ್ಮ ಮೇಲೆ ಬೆಳಗುತ್ತದೆ ; ಮತ್ತು ಸ್ವರ್ಗ-ಭೂಮಿಗಳು ಅವರ ಪ್ರಯಾಣದ ಎರಡು ಮಾರ್ಗಗಳು. ಏಕೆಂದರೆ ಪರಸತ್ಯದ ಅದಿತಿಯು, ಅರ್ಥಾತ್ ಅವರ ತಾಯಿಯು ಅವರನ್ನು ಸರ್ವಜ್ಞರನ್ನಾಗಿಯೂ ಸರ್ವಶಕ್ತಿ ಮತ್ತೆಯಲ್ಲಿ ದೊಡ್ಡವರನ್ನಾಗಿಯೂ ಹಡೆದಿದ್ದಾಳೆ. ಅಲ್ಲದೆ, ಈ ದಿವ್ಯ ಅದಿತಿಯು ಅವಿಭಕ್ತ ಸತ್ತಾತ್ಮಿಕೆಯು, ದಿನವೂ ಎಚ್ಚತ್ತಿದ್ದ ಅವರಿಂದ ಆಶ್ಲಿಷ್ಟೆಯಾಗಿದ್ದಾಳೆ ; ಅವಳು ಆ ಬೆಳಕಿನ ಜಗತ್ತಿನಲ್ಲಿ ನಮ್ಮ ವಾಸಸ್ಥಳಗಳನ್ನು ನಮಗಾಗಿ ಹಿಡಿದಿಟ್ಟಿದ್ದಾಳೆ; ಮತ್ತು ಅವರು ಅದರ ದ್ಯುಮತ್ ಪ್ರಣೋದ ನಿರ್ಭರತೆಯನ್ನು ಸಿದ್ಧಿಸಿಕೊಳ್ಳುತ್ತಾರೆ. ಪ್ರಾಚೀನ ಕಾಲದಿಂದ ತಮ್ಮ ಹುಟ್ಟಿನಲ್ಲಿ ಪೂರ್ಣತೆಯನ್ನು ಪಡೆದವರು. ಅವರು ನಮ್ಮ ಕರ್ಮವಿಧಿಯನ್ನು ಎತ್ತಿ ಹಿಡಿಯುತ್ತಾರೆ. ಅವರು ವಿಶಾಲವಾದ

ಪ್ರಭಾಮಯ ಶಕ್ತಿಯ ಮಕ್ಕಳು, ದಿವ್ಯ ಸೂಕ್ಷ್ಮವೀಕ್ಷಕ ವಿಚಾರದ ಸಂತಾನ ಹಾಗೂ ಸಂಕಲ್ಪದಲ್ಲಿ ಪರಿಪೂರ್ಣರು. ಅವರು ಪರಸತ್ಯ ರಕ್ಷಕರು, ಅದರ ವಿಧಿಯ ವಶವರ್ತಿಗಳಾದ ಅಧಿಪರು- ಪರಮಾಕಾಶವಾದ ಸ್ವರ್ ಅವರ ಹುಟ್ಟೂರು ಮತ್ತು ಬಂಗಾರದ ಮನೆ.

ಮಿತ್ರಾವರುಣರು ಅಕ್ಷತ ದರ್ಶನರು ಮತ್ತು ನಮ್ಮ ಕಣ್ಣಿಗಿಂತ ಅವರ ಕಣ್ಣು ಹೆಚ್ಚು ಚೆನ್ನಾಗಿ ಸತ್ಯ ಪಥವನ್ನು ಕಾಣಬಲ್ಲದು ; ಏಕೆಂದರೆ ಜ್ಞಾನದಲ್ಲಿ ಅವರು ಸ್ವರ್ ದರ್ಶಿಗಳು. ಅವರು ತಮ್ಮ ಸೂಕ್ಷ್ಮವೀಕ್ಷಕ ವಿಚಾರದ ಆವೇಶದಿಂದ ಪರಮಸತ್ಯಕ್ಕೆ ನಮ್ಮನ್ನು ಒಯ್ಯಬೇಕಾಗಿರುವ ದಾರಿಯಲ್ಲಿರುವ ಸತ್ಯ ಪ್ರಚ್ಛಾದಕ ಅನೃತವನ್ನವರು (ಸುಳ್ಳನ್ನವರು) ದೂರಕ್ಕೆ ಎಸೆಯುತ್ತಾರೆ. ತಮ್ಮಲ್ಲಿರುವ ಹಾಗೂ ತಾವು "ಕರಗ"ದಂತೆ ಹೊತ್ತಿರುವ ವಿಶಾಲ ಪರಮಸತ್ಯವನ್ನವರು ಘೋಷಿಸುತ್ತಾರೆ. ಪರಮಸತ್ಯವು ಅವರ ಕೈಯಲ್ಲಿರುವುದರಿಂದ ಮತ್ತು ಅದರೊಡನೆ ಅದರ ಫಲವಾದ ಪೂರ್ಣತೆಯೂ ಇರುವುದರಿಂದ ಸಾಮ್ರಾಜ್ಯಕ್ಕಾಗಿ ನಮ್ಮಲ್ಲವರು ಕುಳಿತಿದ್ದಾರೆ ಮತ್ತು ಸಾಮರ್ಥ್ಯಾಧಿಪತಿತ್ವದಿಂದ ನಮ್ಮ ಕರ್ಮವನ್ನವರು ಎತ್ತಿ ಹಿಡಿಯುತ್ತಾರೆ. ಪರಮಸತ್ಯದಿಂದ ಅವರು ಪರಮಸತ್ಯಕ್ಕೆ ಬರುತ್ತಾರೆ- ಆಗ ನಮ್ಮ ಆಲೋಚನೆಗಳನ್ನು ತಮ್ಮ ವಸ್ತು ಪ್ರಭುತ್ವದ ದೆಸೆಯಿಂದ ಬೆಳೆಸುತ್ತಾರೆ ಮತ್ತು ತಮ್ಮ ಪವಿತ್ರೀಕೃತ ತೀರ್ಮಾನದಲ್ಲಿ ಮಾನವ ಪ್ರತ್ಯಕ್ಷದ ಮೇಲಿನಿಂದ ಸರ್ವವಿವೇಕಗಳನ್ನೂ ಕಾಣುವಂತೆ ನಮ್ಮ ಪ್ರಜ್ಞಾಚಕ್ಷುಸ್ಸನ್ನು ತೆರೆಯುತ್ತಾರೆ. ಈ ಪ್ರಕಾರ, ವಿಧಿಯಿಂದ ಮತ್ತು ಬಲಿಷ್ಠ ಒಡೆಯನ ಮಾಯೆಯಿಂದ ಸರ್ವದರ್ಶಿಗಳೂ ಸರ್ವಜ್ಞರೂ ಆದ ಅವರು, ಪರಮ ಸತ್ಯದ ಶಕ್ತಿಯಿಂದ ಇಡಿ ಜಗತ್ತನ್ನೇ ಆಳುವಂತೆ, ನಮ್ಮ ಕಾರ್ಯಗಳನ್ನು ಕಾಯುತ್ತಾರೆ. ಆ ಮಾಯೆಯು ಸ್ವರ್ಗದಲ್ಲಿ ಸ್ಥಾಪಿತವಾಗಿದೆ ; ಅಲ್ಲಿ ಅದು ಪ್ರಕಾಶ ಸೂರ್ಯನಂತೆ ಚಿತ್ತರಿಸಿದೆ. ಅದು ಅವರ ಶ್ರೀಮಂತವೂ ಆಶ್ಚರ್ಯಕರವೂ ಆದ ಆಯುಧವಾಗಿದೆ. ಅವರು ದೂರಶ್ರವಣಶಕ್ತಿಯುಳ್ಳವರು, ನಿಜಾಸ್ತಿತ್ವದ ಒಡೆಯರು, ತಾವೇ ಸತ್ಯಸ್ವರೂಪರು ಮತ್ತು ಪ್ರತಿಯೊಬ್ಬ ಮನುಷ್ಯನಲ್ಲೂ ಸತ್ಯವನ್ನು ವೃದ್ಧಿಗೊಳಿಸುವವರು. ಅವರು ಹೊಳೆವ ಗೋವ್ರಜಗಳನ್ನು ಸಾಕುತ್ತಾರೆ ಮತ್ತು ಸ್ವರ್ಗದ ಹೇರಳ ಐಶ್ವರ್ಯವನ್ನು ಹರಿಯಬಿಡುತ್ತಾರೆ. ಮಹಾಬಲಿಷ್ಠ ಪ್ರಭುವಿನ ಮಾಯೆಯಿಂದ ಅವರು ಸ್ವರ್ಗವು ಮಳೆಗರೆವಂತೆ ಮಾಡುತ್ತಾರೆ. ಮತ್ತು ಆ ಸ್ವರ್ಗೀಯ ಮಳೆಯು ದ್ರಷ್ಟಾರರು ಬಯಸುವ ಆಧ್ಯಾತ್ಮಿಕ ಸುಖವಾಗಿದೆ - ಅದೇ ಅಮೃತತ್ವ, ಅಮರ್ತ್ಯತೆ.[೧]



೧. ವೃಷ್ಟಿಂ ವಾಂ ರಾಧೋ ಅಮೃತತ್ವಂ ಈ ಮಹೇ (V.63.2)

# ಅರ್ಯಮನ್

ನಾಲ್ವರು ಸೌರ ಮಹಾದೇವರುಗಳಲ್ಲಿ ಅರ್ಯಮನು ಮೂರನೆಯವನು ; ಅವನು ದ್ರಷ್ಟಾರರ ಆಹ್ವಾನಗಳಲ್ಲಿ ಅತ್ಯಲ್ಪ ಪ್ರಾಮುಖ್ಯವುಳ್ಳವನು. ಅವನಿಗಾಗಿ ಪ್ರತ್ಯೇಕವಾದ ಸೂಕ್ತವನ್ನು ಸಂಬೋಧಿಸಿಲ್ಲ. ಪದೇ ಪದೇ ಅವನ ಹೆಸರು ಬಾರದಿದ್ದರೂ ಅದು ಚೆಲ್ಲಾಪಿಲ್ಲಿಯಾಗಿ ಬಿದ್ದ ಋಕ್ಕುಗಳಲ್ಲಿ ಬರುತ್ತದೆ. ನಾವು ದೃಢವಾಗಿ ಅವನ ಕರ್ತವ್ಯಗಳನ್ನು ಕುರಿತ ಕಲ್ಪನೆಯನ್ನು ಮಾಡಿಕೊಳ್ಳಲು ಯಾ ಅವನ ಮುಖಸಾಮುದ್ರಿಕವನ್ನು ತಿರುಗಿ ಊಹಿಸಿಕೊಳ್ಳಲು ಅಗತ್ಯವಾದ ಯಾವ ಬಲಿಷ್ಠ ಋಗ್ವರ್ಗವೂ ಇಲ್ಲ. ಬಹಳ ಸಲ ಮಿತ್ರಾವರುಣರ ಹೆಸರುಗಳ ಜೊತೆಗೆ ಅವನ ಬರಿ ಹೆಸರನ್ನು ಮಾತ್ರ ಹೇಳಲಾಗಿದೆ; ಅಥವಾ ಅದಿತಿಸುತರ ದೊಡ್ಡ ಗುಂಪಿನಲ್ಲಿ ಇತರ ಬಂಧುದೇವತೆಗಳೊಡನೆ ಮಾತ್ರ ಅವನ ಹೆಸರು ಬರುತ್ತದೆ. ಹೀಗಿದ್ದರೂ ಅರ್ಧಡಜನ್ ಯಾ ಹೆಚ್ಚು ಸಂಖ್ಯೆಯ ಅರ್ಧ ಋಕ್ಕುಗಳು ಅವನನ್ನು ಉಲ್ಲೇಖಿಸಿದ ಸಂದರ್ಭಗಳಲ್ಲಿ ಉಕ್ತ ನಾಲ್ವರ ಸಾಮಾನ್ಯ ವಿಶೇಷಣಗಳಾದ ಪರಸತ್ಯನಾಥರು, ಜ್ಞಾನ, ಸಂತೋಷ, ಅನಂತತೆ ಮತ್ತು ದಿವ್ಯಶಕ್ತಿಗಳನ್ನು ಅರ್ಥತಃ ಉಳ್ಳವರು ಎಂಬಿವುಗಳ ಜೊತೆಗೆ ಅವನ ಒಂದು ಮುಖ್ಯವಾದ ಹಾಗೂ ಅವನಿಗೇ ವಿಶಿಷ್ಟವಾದ ಕಾರ್ಯದ ಉಲ್ಲೇಖವು ಹೊರಬೀಳುತ್ತದೆ.

ಆಮೇಲಿನ ಪರಂಪರೆಯಲ್ಲಿ ಅರ್ಯಮನ ಹೆಸರನ್ನು ಪಿತೃಗಣಕ್ಕೆ ಅಧಿಪತಿಯನ್ನಾಗಿ ಬಳಸಲಾಗಿದೆ. ಅವನಿಗೆ ಪಿತೃ ಸಹಜವಾದ ಯೋಗ್ಯ ಆಹುತಿಯನ್ನಾಗಿ ಸಾಂಕೇತಿಕಾರ್ಥವುಳ್ಳ ಪಿಂಡವನ್ನು ಕೊಡಲಾಗುತ್ತದೆ. ಪಿಂಡವು ಪೌರಾಣಿಕ ಸಂಪ್ರದಾಯದ ಉತ್ತರ ಕ್ರಿಯೆಯಲ್ಲಿ ಮತ್ತು ಸ್ಮಾರಕ ಕರ್ಮಗಳಲ್ಲಿ ದೇಯವಾಗಿದೆ. ಪುರಾಣ ಸಂಪ್ರದಾಯಗಳಲ್ಲಿ ಪಿತೃಗಳಲ್ಲಿ ದಿವ್ಯ ಮತ್ತು ಮಾನವ್ಯ ಎಂಬ ಎರಡು ವರ್ಗಗಳಿವೆ ; ಎರಡನೆಯವರು ನಮ್ಮ ಪೂರ್ವಜರಾದ ಹಿರಿಯರು. ಆದರೆ ಪಿತೃಗಳನ್ನು ಸ್ವರ್ಗಕ್ಕೇರಿ ಹೋದ ಆತ್ಮಗಳೆಂದು ಭಾವಿಸಿ ಅರ್ಥಾತ್ ಅಮರ್ತ್ಯತೆಗೇರಿದವರೆಂದು ಗಣಿಸಿ, ಆ ವರ್ಗಕ್ಕೆ ನಾವು ಆರ್ಯಮನನ್ನು ಸೇರಿಸಬೇಕು. ಗೀತೆಯಲ್ಲಿ ಶ್ರೀಕೃಷ್ಣನು ವಸ್ತುಗಳಲ್ಲೂ ಜೀವಿಗಳಲ್ಲೂ ಸಾರ್ವಕಾಲಿಕನಾದ ಮಹಾದೇವನು ಮಾಡಿದ ಅವತಾರಗಳ ಅಥವಾ ಮುಖ್ಯಶಕ್ತಿಗಳ ಪಟ್ಟಿಯನ್ನು ಎಣಿಸಿ ಹೇಳುವಾಗ ತಾನು ದ್ರಷ್ಟಾರರಲ್ಲಿ ಉಶನಸ್ ಎಂದೂ ಋಷಿಗಳಲ್ಲಿ ಭೃಗುವೆಂದೂ ಮುನಿಗಳಲ್ಲಿ ವ್ಯಾಸನೆಂದೂ ಅದಿತಿಪುತ್ರರಲ್ಲಿ ವಿಷ್ಣುವೆಂದೂ ಪಿತೃಗಳಲ್ಲಿ ಅರ್ಯಮನೆಂದೂ ಹೇಳಿಕೊಂಡಿದ್ದಾನೆ. ಈಗ ವೇದದಲ್ಲಿ ಪಿತೃಗಳೆಂದರೆ ಜ್ಞಾನೋದಯ ಹೊಂದಿದ ಪ್ರಾಚೀನರೆಂದೂ ಜ್ಞಾನವನ್ನು ಹುಡುಕಿ ತೆಗೆದವರೆಂದೂ ಮಾರ್ಗವನ್ನು ಮಾಡಿ ಅನುಸರಿಸಿದವರೆಂದೂ ಪರಸತ್ಯವನ್ನು ಸೇರಿದವರೆಂದೂ ಅಮೃತತ್ವವನ್ನು ಗೆದ್ದವರೆಂದೂ ಹೇಳಲಾಗಿದೆ ; ಮತ್ತು ಅರ್ಯಮನ ಪ್ರತ್ಯೇಕ ವ್ಯಕ್ತಿತ್ವವು ಪ್ರಕಟವಾಗುವ ಕೆಲವೇ ಋಕ್ಕುಗಳಲ್ಲಿ ಅವನನ್ನು ಮಾರ್ಗದೇವ ಎಂದು ಸೂಕ್ತಿಸಲಾಗಿದೆ.

ನಿರುಕ್ತಾನುಸಾರ ಅರ್ಯಮನೆಂಬ ನಾಮಪದಕ್ಕೆ ಅರ್ಯವು ನಿಕಟವರ್ತಿ. ಅರ್ಯ, ಆರ್ಯ, ಅರಿ=ವೈದಿಕ ಸಂಸ್ಕೃತಿಯನ್ನೂ ವೈದಿಕ ದೇವರುಗಳನ್ನೂ ಅನುಸರಿಸುತ್ತಾ ಆ ದೇವರಿಗೆ ಅವರು ಮಾಡುವ ಯುದ್ಧಗಳಲ್ಲೂ ಅವರ ಧ್ಯೇಯಸಾಧನ ಪ್ರಯತ್ನದಲ್ಲೂ ಸಹಾಯಕರಾದ ಜನರು ಯಾ ಜನಾಂಗಗಳಿಗೆ ಸೇರಿದವರು. ಈ ಶಬ್ದಗಳ ಧಾತುವಿನಿಂದಲೇ ಹುಟ್ಟಿದ ಅರ್ಯಮನ್ ಶಬ್ದವು ಈ ಅರ್ಥದಲ್ಲಿ ಹೋಲಿಕೆಯಿರುವುದನ್ನು ಸೂಚಿಸುತ್ತದೆ. ಅರ್ಯಮನು ಮಾರ್ಗಸಂಚಾರಿಯು, ದಿವ್ಯಯಜ್ಞದ ಮೂಲಕ ಅಮೃತತ್ವವನ್ನು ಪಡೆಯಲಿಚ್ಛಿಸುವವನು, ಬೆಳಕಿನ ಹೊಳೆವ ಮಕ್ಕಳಲ್ಲಿ ಒಬ್ಬನು, ಪರಸತ್ಯಾಧಿಪತಿಗಳ ಆರಾಧಕರಲ್ಲಿ ಒಬ್ಬನು ಮತ್ತು ಮಾನವ್ಯ ಪ್ರಯಾಣಕ್ಕೆ ತೊಂದರೆಗಳನ್ನೊಡ್ಡುವ ಅಂಧಕಾರ ಶಕ್ತಿಗಳ ವಿರುದ್ಧವಾಗಿ ಮಾಡುವ ಯುದ್ಧದಲ್ಲಿ ಅರ್ಯಮನೊಬ್ಬ ಯೋಧನು. ಅರ್ಯಮ ದೇವನ ದಿವ್ಯ ಶಕ್ತಿಯಲ್ಲಿ ಈ ಆರ್ಯತ್ವವು ಬೇರುಬಿಟ್ಟಿದೆ ; ಅವನೇ ಈ ಯಜ್ಞ ಪ್ರಣೋದ, ದಿವ್ಯತ್ವ (ಅಮರತ್ವ) ಸಂಪಾದನೇಚ್ಛು, ಯುದ್ಧಭಾಗಿ ; ಪೂರ್ಣತೋನ್ಮುಖವೂ ಪ್ರಕಾಶೋನ್ಮುಖವೂ ದಿವ್ಯ ಆನಂದೋನ್ಮುಖವೂ ಆದ ಪ್ರಯಾಣದ ಮಾರ್ಗವನ್ನು ರಚಿಸಿ, ಅವನ್ನು ಹಿಡಿದು ನಡೆದು, ಎಲ್ಲ ಪ್ರತಿಭಟನೆಯನ್ನು ಮೀರಿ, ಎಲ್ಲ ಅಸ್ಪಷ್ಟೀಕರಣ ಪ್ರಯತ್ನಗಳನ್ನೂ ದಾಟಿ, ಆ ಮಾರ್ಗದ ತುದಿಯಲ್ಲಿರುವ ಹೊಳೆಹೊಳೆವ ಮತ್ತು ಸುಖಕರ ಗುರಿಯಾದ ನಿಲ್ದಾಣವನ್ನು ಸೇರತಕ್ಕವನು.

ಇದರ ಪರಿಣಾಮವಾಗಿ, ಅರ್ಯಮನ ಕಾರ್ಯವು ಮಾರ್ಗನೇತಾರರಾದ ಮಿತ್ರಾವರುಣರ ವಿಶೇಷಣಗಳಿಗೆ ಪಾತ್ರವಾಗುತ್ತದೆ. ಈ ಪ್ರಣೋದವು ಆ ಪ್ರಕಾಶ ಮತ್ತು ಸಾಮಶ್ರುತ್ಯಗಳ ಸುಖಕರ ಸಂಪ್ರೇರಣೆಗಳನ್ನು ಹಾಗೂ ಆ ಶುದ್ಧ ವಿಸ್ತಾರದ ಅನಂತ ಜ್ಞಾನ ಚಲನೆಯನ್ನೂ ಶಕ್ತಿಯನ್ನು ಸಫಲಗೊಳಿಸುತ್ತದೆ. ಮಿತ್ರಾವರುಣರಂತೆ ಅರ್ಯಮನೂ ಉಕ್ತ ಮಾರ್ಗದಲ್ಲಿ ಮಾನವರು ಹೋಗುವಂತೆ ಮಾಡುತ್ತಾನೆ ; ಮಿತ್ರನ ಪೂರ್ಣಸುಖವು ಅರ್ಯಮನಲ್ಲಿ ತುಂಬಿದೆ ; ಅವನು ಸಂಕಲ್ಪದಲ್ಲೂ ಯಜ್ಞ ಕರ್ಮಗಳಲ್ಲೂ ಪರಿಪೂರ್ಣನು : ಅವನೂ ವರುಣನೂ ಮರ್ತ್ಯರಿಗೆ ಮಾರ್ಗಭೇದವನ್ನು ತೋರಿಸಿಕೊಡುತ್ತಾರೆ. ವರುಣನಂತೆಯೇ ಅರ್ಯಮನೂ ತನ್ನ ಜನ್ಮಗಳಲ್ಲಿ ಬಹುತ್ವವುಳ್ಳವನು ; ಅವನಂತೆಯೇ ಮಾನವಹಿಂಸಕರ ಕ್ರೋಧವನ್ನು ದಮಿಸುತ್ತಾನೆ. ಅರ್ಯಮನ ಮಹಾಮಾರ್ಗದಿಂದಲೇ ನಾವು ನಮ್ಮ ಮಾರ್ಗದಲ್ಲಿ ಅಡ್ಡಬರುವ ಅನೃತ ಅಥವಾ ದುಷ್ಟ ವಿಚಾರಗಳನ್ನುಳ್ಳ ಆತ್ಮಗಳನ್ನು ದಾಟಿ (ಮೀರಿ) ಹೋಗಲು ಸಾಧ್ಯವಾಗುವುದು. ರಾಜಮಾತೆಯಾದ ಅದಿತಿಯು ಅರ್ಯಮನ ತಾಯಿ ; ಅವಳು ನಮ್ಮನ್ನು ಸುಖ ಪ್ರವಾಸದ ದಾರಿಗಳ ಮೂಲಕ ಶತ್ರುಶಕ್ತಿಗಳೆಲ್ಲವನ್ನೂ ಮೀರಿ ಪಯಣ ಮಾಡಲೆಂದು ಹೊತ್ತುಕೊಂಡು ಹೋಗುವವಳು. ಮಿತ್ರಾವರುಣರ ಕಾರ್ಯಗಳ ಆರ್ಜವವನ್ನು ಬಯಸುವ ಮತ್ತು ಮಂತ್ರ ಪ್ರಣೋದವನ್ನಾಧರಿಸುವ ಮತ್ತು ಆ ಪ್ರಣೋದವನ್ನು ದೃಢಪಡಿಸುವ ಮನುಜನನ್ನು, ಅವರ ವಿಧಿ-ವಿಧಾನಗಳನ್ನು ಶಕ್ತಿಮೀರಿ ಅನುಸರಿಸುವ ಮಾನವನನ್ನು, ಆತನ ಪ್ರಗತಿಯಲ್ಲಿ ಅರ್ಯಮನು ರಕ್ಷಿಸುತ್ತಾನೆ.

ಆದರೆ ಅರ್ಯಮನ ಅತಿ ವಿಶಿಷ್ಟ ಕರ್ತವ್ಯವನ್ನು ನಿರ್ದೇಶಿಸುವ ಋಕ್ "ಅರ್ಯಮನು ಅವಿಚ್ಛಿನ್ನ ಮಾರ್ಗದವನು, ಬಹುರಥಗಳನ್ನುಳ್ಳವನು, ಭಿನ್ನ ಭಿನ್ನ ರೂಪಗಳ ಜನನದಲ್ಲಿ ಸಪ್ತಪುಟ ಯಜ್ಞಾಹುತಿದಾತನಾಗಿ ಬದುಕಿರುವವನು" ಎಂದು ವರ್ಣಿಸಿದೆ (X.64.5). ಅವನು ಮಾನವ್ಯ ಪ್ರಯಾಣದ ಅಧಿಷ್ಠಾನ ದೇವತೆಯು ; ಅವನು ಆ ಪ್ರಯಾಣವನ್ನು

ಮುಂಬರಿಸಿಕೊಂಡು ಹೋಗುವವನು ; ಆ ಮುಂಬರಿತವು ಅಪ್ರತಿಭಟನೀಯ ; ಶತ್ರುಬಾಧೆ ಅದನ್ನು ನಿಲ್ಲಿಸಲಾರದು ; ಅಥವಾ ಅಂಥ ಆಘಾತಗಳನ್ನು ಜಯಶೀಲನಾಗಿ ಅರ್ಯಮನು ನಡುವೆ ಬಂದು ತಡೆದು ಬಿಡುತ್ತಾನೆ - ಅವನು ಇಂಥ ದಿವ್ಯ ಪ್ರಣೋದ ಸ್ವರೂಪದಿಂದ ನಮ್ಮ ನಾಯಕನಾಗಿರುವುದರಿಂದ. ನಮ್ಮ ವಿಕಾಸದ ಬಹು ಮುಖ ಚಲನೆಯ ಮೂಲಕ ಈ ಪ್ರಯಾಣವು ನಡೆಯುತ್ತದೆ - ಅರ್ಥಾತ್ - ಉಕ್ತ ಚಲನೆಗಳೆಂದರೆ ಅರ್ಯಮನ ಬಹುರಥಗಳು. ಅದು ಮಾನವ್ಯ ಯಜ್ಞದ ಪ್ರಯಾಣ ; ಅದಕ್ಕೆ ತನ್ನ ಕಾರ್ಯದ ಕ್ರಿಯಾಶಕ್ತಿಗಳಿವೆ ; ಏಕೆಂದರೆ, ನಮ್ಮ ಅಸ್ತಿತ್ವದಲ್ಲಿ ಪೂರೈಸಬೇಕಾದ, ಸಮಗ್ರತೆಗೆ ತಲುಪಿಸಬೇಕಾದ ಸಪ್ತಪುಟ ತತ್ವವು ಅಡಗಿದೆ. ಅರ್ಯಮನು ಯಜ್ಞ ಕರ್ಮದ ಒಡೆಯನು - ಅವನು ದಿವ್ಯಜನ್ಮವುಳ್ಳ ದೇವತಾತತ್ವಗಳಿಗೆ ಈ ಸಪ್ತಪುಟ ಕಾರ್ಯವನ್ನು ಅರ್ಪಿಸುತ್ತಾನೆ. ನಮ್ಮಲ್ಲೆ ಇರುವ ಅರ್ಯಮನು ನಮ್ಮ ಜನ್ಮದ ವಿವಿಧ ರೂಪಗಳನ್ನು ಪೋಷಿಸುವುದು ನಮ್ಮ ಸತ್ತೆಯ ಮೇಲು ಮೇಲೇರುವ ಪ್ರಜ್ಞಾಸ್ತರಗಳಲ್ಲಿ. ಪಿತೃಗಳು ಮೇಲೇರಿದ್ದು ಈ ಅರ್ಯಮಮಾರ್ಗದಿಂದಲೇ. ಅವರು ಅವನ ಮಾರ್ಗದ ಪ್ರವಾಸಿಗಳು. ಇದರಿಂದಲೇ ಅಮೃತತ್ವದ ಅತ್ಯುನ್ನತ ಶಿಖರಕ್ಕೇರುವ ಮಹಾತ್ವಾಕಾಂಕ್ಷೆಯು ಆರ್ಯಾತ್ಮದ್ದಾಗಿರಬೇಕು.

ಹೀಗೆ ತನ್ನ ದಿವ್ಯ ಪೂರ್ಣತೆಗಾಗಿ ಸತತ ಸ್ವಾತ್ಮವಿಸ್ತಾರ ಮತ್ತು ಸ್ವಾತ್ಮಾತಿರಿಕ್ತತೆಗಳ ಮೂಲಕ ಮನುಷ್ಯನು ಹೊಂದಿದ ಇಡೀ ಅಪೇಕ್ಷೆ ಮತ್ತು ಇಡೀ ಚಲನೆಗಳನ್ನು ಅರ್ಯಮನು ತನ್ನಲ್ಲಿ ಸಾರಾಂಶರೂಪದಲ್ಲಿ ಪ್ರತಿನಿಧಿಸಿದ್ದಾನೆ. ಅವನ ಸತತ ಚಲನೆ ನಡೆಯುವುದರಿಂದ ಮಿತ್ರಾವರುಣರೂ ಅದಿತಿಸುತರೂ ಮಾನವ ಜನ್ಮದಲ್ಲಿ ಸಾಫಲ್ಯವನ್ನು ಹೊಂದುವರು.



# ಭಗ

ದಿವ್ಯ ಧನ್ಯೋಲ್ಲಾಸಭಾವ, ಪರಮಸತ್ಯದ ಇತಿಕರಿಸಲಾಗದ ಸಂತೋಷ, ನಮ್ಮ ಇರವಿನ ಅನಂತತೆಯ ಆಹ್ಲಾದ - ಎಂಬುದೇ ಯಜ್ಞಪಥದ ಧ್ಯೇಯವು. ಮಾನವ್ಯ ಪ್ರಜ್ಞೆಯೊಳಗೆ ಈ ಆನಂದವನ್ನೂ ಸಮುನ್ನತ ಸೌಖ್ಯವನ್ನೂ ತರುವವನು ಭಗ ಎಂಬ ದೇವತಾತತ್ವ ; ಅವನೇ ಮನುಷ್ಯರಲ್ಲಿ ಇರುವ ದಿವ್ಯ ಭೋಗಿಯು. ಪ್ರತಿಯೊಂದು ಜೀವಿಯೂ ಗೊತ್ತಿದ್ದೋ ಗೊತ್ತಿಲ್ಲದೆಯೋ ಹುಡುಕುವುದೂ, ದಿವ್ಯ ಬಲದಿಂದಲೋ ಇನ್ನೂ ಅಪ್ರವೃದ್ಧವಾಗಿ ಉಳಿದಿರುವ ನಮ್ಮ ಶಕ್ತಿಗಳ ದೌರ್ಬಲ್ಯದಿಂದಲೋ ಆಶಿಸುವುದೂ ಈ ದಿವ್ಯ ಭೋಗವನ್ನು, ಈ ಇರವಿನ ಅರಿವಿನ ಆನಂದವನ್ನು, ಈ ಪರಮಾರ್ಥ ಸ್ವರೂಪದ ಗುರಿಯನ್ನು-ಆತ್ಯಂತಿಕ ಸಿದ್ಧಿಯನ್ನು. "ಬಲಿಷ್ಠನು ತನ್ನ ಬಲ ಹೆಚ್ಚಾಗಲೆಂದು ಭಗನನ್ನು ಆಮಂತ್ರಿಸುತ್ತಾನೆ; ದುರ್ಬಲ ವ್ಯಕ್ತಿಯೂ ಅದಕ್ಕಾಗಿ ಭಗನನ್ನು ನಿಮಂತ್ರಿಸುತ್ತಾನೆ; ಅನಂತರ ಅವನು ದಿವ್ಯಾನಂದದತ್ತ ಹೋಗುವನು" (VII.38.6) "ಬಲಿಷ್ಠನೂ ಜಿಷ್ಣುವೂ ದೊಡ್ಡ ಬೆಂಬಲಿಗನೂ ಅದಿತಿಸುತನೂ ಆದ ಭಗನ ಮೇಲೆ ಉಷೆ ಬೆಳಕನ್ನೆರೆಯಲಿ ಎಂದು ಪ್ರಾರ್ಥಿಸೋಣ ; ದುಃಖಿಗಳೂ, ಯೋಧರೂ, ರಾಜನೂ ಭಗನನ್ನು ಕುರಿತು ಧ್ಯಾನಿಸುತ್ತಾರೆ ; ಮತ್ತು ಭೋಗಿಗವರು ಹೇಳುತ್ತಾರೆ : ನಮಗೆ ಭೋಗವನ್ನು ಕೊಡು ಎಂಬುದಾಗಿ (VII.41.2)". "ದಿವ್ಯಭೋಗಿಯ ಹತ್ತಿರವೇ ಭೋಗವಿರಲಿ, ಅವನೆ ಅದಕ್ಕೆ ಒಡೆಯನಾಗಿರಲಿ ; ಅವನಿಂದಲೇ ನಾವದರ ಒಡೆಯರಾಗೋಣ ; ಎಲ್ಲವರೂ ನಿನ್ನ ಹತ್ತಿರಕ್ಕೇ ಬರುತ್ತಾರೆ, ಎಲೈ ಭಗದೇವನೇ-ನೀನು-ಓ ಭೋಗಿಯೇ- ನಮ್ಮ ಪ್ರಯಾಣದ ನೇತಾರನಾಗು (VII.41.5) ಆತ್ಮದ ಸರ್ವ ವರ್ಧಮಾನ, ಜಯಪ್ರದ ಸೌಖ್ಯವನ್ನೀಯುವುದು ; ಅದರ ದಿವ್ಯ ಭೋಗ್ಯವಸ್ತುಗಳ ವೃದ್ಧಿಯಲ್ಲಿ ಸಂತೋಷಪಡುವುದು ; ಮುಂದಕ್ಕೆ ಪಯಣಿಸಲು ನಮಗೆ ಸಾಮರ್ಥ್ಯವನ್ನು ಕೊಡುವುದು ; ಒಂದು ಅನಂತ ಧನ್ಯತಾ ಸ್ಥಿತಿಯಲ್ಲಿ ನಮ್ಮ ಪೂರ್ಣತೆಯನ್ನು ಮುಟ್ಟುವವರೆಗೆ ಬರುವ ವಿಘ್ನಗಳನ್ನು ಪರಿಹರಿಸುವುದು-ಮಾನವನಲ್ಲಿ ಭಗಜನನವಾಗುವುದರ ಗುರುತುಗಳಿವು - ಇವೇ ಭಗನ ಕರ್ತವ್ಯಾಂಗಗಳು.

ಭಗ ಸವಿತಾರನಿಂದ ನಿಜವಾಗಿ ಒಂದು ಭೋಗವು ಬರುತ್ತದೆ-ಆ ಭೋಗವೂ ಮರ್ತ್ಯವೂ ಹೌದು, ಅಮರ್ತ್ಯವೂ ಹೌದು (ದಿವ್ಯವೂ ಹೌದು). "ವಿಶಾಲವೂ, ವಿಸ್ತೃತವೂ ಆದ ಪ್ರಣೋದವನ್ನು ಸೃಷ್ಟಿಸಿ ಅವನು ಮಾನವರಿಗೆ ಅವರ ಮರ್ತ್ಯಭೋಗವನ್ನು ತರುತ್ತಾನೆ." ಆದರೆ ವೈದಿಕ ಆದರ್ಶವು ಎಲ್ಲ ಜೀವ, ಎಲ್ಲ ಸಂತೋಷಗಳನ್ನೂ ಒಳಗೊಳ್ಳುತ್ತದೆ- ಅವು ದಿವ್ಯ ಮತ್ತು ಮಾನವ್ಯ, ಭೂಮಿಯ ವಿಸ್ತಾರ ಹಾಗೂ ಸಮೃದ್ಧಿ ಮತ್ತು ಸ್ವರ್ಗದ ವಿಸ್ತಾರ ಮತ್ತು ಹೇರಳ ಐಶ್ವರ್ಯ ; ಮಾನಸಿಕ, ಜೈವಿಕ, ಭೌತಿಕ ಸತ್ತೆಯ ರತ್ನಗಳು ಸಮುದ್ಧೃತವಾಗಿರುವುದು, ಪವಿತ್ರೀಕೃತವಾಗಿರುವುದು ಅನಂತದ ಹಾಗೂ ದಿವ್ಯಸತ್ಯದ ರೂಪದಲ್ಲಿ ಪೂರ್ಣೀಕೃತವಾಗಿರುವುದು - ಎಂಬೀ ಸರ್ವಂಕಷ ಸೌಖ್ಯವೇ ಭಗನು ಕೊಡುವ ವರವು. ಭೋಗಿಯು ಮನುಷ್ಯರಿಂದ ಆಹೂತನಾಗಬೇಕು ; ಏಕೆಂದರೆ,

ಅವನ ಹತ್ತಿರ ಅನೇಕ ಐಶ್ವರ್ಯ ದ್ರವ್ಯಗಳಿವೆ ಮತ್ತು ಅವನು ಎಲ್ಲ ಆನಂದಭೋಗಗಳನ್ನೂ ಆಚರಣೆಗೆ ತರುವಂತೆ ಆಜ್ಞಾಪಿಸುವವನು - ಇವೆಲ್ಲಾ ಅರ್ಯಮನ ತಾಯಿಯಾದ ಅದಿತಿಯ ಅಸ್ತಿತ್ವದಲ್ಲಿ ಮೂರೇಳು (3x7) ತತ್ಸಮರ್ಥಿತ ಭೋಗಗಳು. ನಮ್ಮಲ್ಲಿ "ವಿಶಾಲವೂ ವಿಸ್ತೃತವೂ ಆದ ಪ್ರಣೋದವನ್ನು" ಸೃಷ್ಟಿಸುವುದರಿಂದ - ದಿವ್ಯಸತ್ಯವು ಭಗ, ಪೂಷನ್, ಅದಿತಿ, ಅನಂತ, ಅವಿಭಕ್ತ ಎನ್ನಿಸಿ ವಸ್ತ್ರದಂತೆ ಅನಂತಪ್ರಜ್ಞೆಯನ್ನು ತೊಟ್ಟಾಗ, ವಿಭಕ್ತತೆಯನ್ನು ಶೂನ್ಯಗೊಳಿಸಿದಾಗ, ಎಲ್ಲ ವರಗಳನ್ನೂ ದಯಪಾಲಿಸಲು ಉದ್ಯುಕ್ತವಾಗುವುದರಿಂದ-ದಿವ್ಯ ಸುಖವು ತನ್ನ ಪೂರ್ಣತೆಯಲ್ಲಿ ನಮ್ಮೆಡೆಗೆ ಬರುವುದು. ಆಗ ಭಗನು ಆ ಮಹತ್ತಮ ಆನಂದವನ್ನು ಮಾನವ ಜೀವಿಗೆ ಭೋಗಿಸಲು ಕೊಡುವನು. ಆದುದರಿಂದ ವಸಿಷ್ಠನು ಆತನನ್ನು ಕುರಿತು ಗಟ್ಟಿಯಾಗಿ ಪ್ರಾರ್ಥಿಸುತ್ತಾನೆ. (VII.41.3)- "ಹೇ ಭಗ, ನಮ್ಮ ನಾಯಕನೇ, ಪರಮಸತ್ಯದ ಐಶ್ವರ್ಯವನ್ನುಳ್ಳವನೇ, ಅದನ್ನು ನಮಗೆ ಕೊಡುತ್ತಾ ಏಳು ಮತ್ತು ಬೆಳೆಯಿಸು ನಮ್ಮಲ್ಲಿರುವ ಈ ವಿಚಾರವನ್ನು" ಈ ವಿಚಾರವೆಂದರೆ ಪರಮ ಸೌಖ್ಯಪ್ರದವಾದ ಪರಮಸತ್ಯ ವಿಚಾರವೇ ಆಗಿದೆ.

ಭಗನು ಸೃಷ್ಟಿಕರ್ತನಾದ ಸವಿತಾರನು. ಅವನು ಅನಭಿವ್ಯಕ್ತ (ಅವ್ಯಾಕೃತ) ದಿವ್ಯತತ್ವದಿಂದ ದಿವ್ಯವಿಶ್ವದ ಸತ್ಯವನ್ನು ಹುಟ್ಟಿಸುವವನು - ಆಗ ಅವನು ನಮ್ಮ ಈ ದುಃಸ್ವಪ್ನ ಸ್ವರೂಪದ ಅಧಃ ಪ್ರಜ್ಞೆಯನ್ನು ಪರಿಹರಿಸುವನು - ಈ ಅಧಃಪ್ರಜ್ಞೆಯಲ್ಲಿ ಸತ್ಯಾನೃತಗಳ ಗೊಂದಲಗೇಡಿ ಗಂಟಿನ ನಡುವೆ ನಾವು ತಪ್ಪು ಮಾಡುತ್ತೇವೆ ; ಸತ್ಯಾನೃತಗಳ ಸಂಕರ, ಬಲ-ದುರ್ಬಲತೆಗಳ ಸಂಕರ, ಸುಖ-ದುಃಖಗಳ ಸಂಕರ-ಇವುಗಳಲ್ಲಿ ಸಿಕ್ಕಿ ಬಿದ್ದು ನಾವು ತಪ್ಪು ಹೆಜ್ಜೆ ಇಡುತ್ತೇವೆ. ಕಾರಾಗೃಹ ಪರಿಮಿತಿಗಳ ಬಂಧನದಿಂದ ಮುಕ್ತವಾದ ಅನಂತ ಸತ್ತೆಯು, ವಿಚಾರವು ಗ್ರಹಿಸುತ್ತಿರುವ ಅನಂತಜ್ಞಾನ ಮತ್ತು ಬಲ ಮತ್ತು ಸಂಕಲ್ಪದಲ್ಲಿ ಒಂದು ದಿವ್ಯ ಸತ್ಯವನ್ನು ಕಾರ್ಯಗತಗೊಳಿಸುವುದು; ಅವಿಭಕ್ತವಾಗಿ ಪಡೆದು ತಪ್ಪುಗಳನ್ನೂ, ಪಾಪಗಳನ್ನೂ ಮಾಡದೆ ಭೋಗಿಸುತ್ತಿರುವ ಒಂದು ಅನಂತ ಧನ್ಯ ಸ್ಥಿತಿಯನ್ನು ತಲುಪುವುದು - ಭಗ ಸವಿತಾರನ ನಿರ್ಮಾಣವಿದು, ಇದೇ ಆ ಪರಮಾನಂದವು. "ಅದಿತಿ ದೇವಿಯು ದಿವ್ಯ ಸ್ರಷ್ಟಾರರ ಈ ಸೃಷ್ಟಿಯನ್ನು, ವರುಣ-ಮಿತ್ರ-ಅರ್ಯಮರೆಂಬ ಸರ್ವರಾಜರ ಈ ಸೃಷ್ಟ ಪ್ರಪಂಚವನ್ನು, ಹೃದಯೈಕ್ಯ ಮಾನಸೈಕ್ಯಗಳಿಂದ ಪೋಷಿಸುತ್ತಾಳೆ. ಚತೂರಾಜರು ತಮ್ಮಲ್ಲಿ ಅತಿ ಚಿಕ್ಕ ವಯಸ್ಸಿನವನೂ ಅತಿ ದೊಡ್ಡ ಪ್ರಭಾವವುಳ್ಳವನೂ ಆದ ಭಗನು ಮಾನವನಲ್ಲಿ ಸಾಧಿಸಿದ ಆನಂದಮಯ ಪೂರ್ಣತ್ವದಿಂದ ತಮ್ಮ ಅನಂತಮಾತೆಯೊಡನೆ ತಮ್ಮಿಷ್ಟವು ಪೂರ್ತಿಯಾದುದನ್ನು ಕಾಣುತ್ತಾರೆ. ಹೀಗೇ ವರುಣಾಧೃತವಾಗಿ, ಮಿತ್ರಸಂಗತ - ಮಿತ್ರಪ್ರೇರಿತವಾಗಿ, ಅರ್ಯಮ ಸಾಧಿತವಾಗಿ ಮತ್ತು ಭಗಭುಕ್ತವಾಗಿದೆ ಈ ದಿವ್ಯಸೃಷ್ಟಿ ಚತುಷ್ಪುಟದ ಸವಿತೃವಿನ ನಿರ್ಮಿತಿ : ಅನಂತಮಾತೆಯಾದ ಅದಿತಿಯು ತನ್ನ ಕೀರ್ತಿಶಾಲಿಗಳಾದ ಮಕ್ಕಳ ಕಾರ್ಯಗಳಿಂದ ಮಾನವಾಸ್ತಿತ್ವದಲ್ಲಿ (ಮನುಷ್ಯನಲ್ಲಿ) ತನ್ನನ್ನು ತಾನೇ ಪ್ರತ್ಯಕ್ಷೀಕರಿಸಿಕೊಳ್ಳುವಳು.



# ತೇಜೋಧಿಪತಿಗಳನ್ನು ಕುರಿತ ಸೂಕ್ತಗಳು

## ಮಿತ್ರಾವರುಣರನ್ನು ಕುರಿತ ಮೊದಲನೆಯ ಸೂಕ್ತವು

## V. 62

## ಪರಮಸತ್ಯ-ಪರಮಾನಂದಗಳ ಸಹಸ್ರಸ್ತಂಭಗೃಹದ ಪ್ರಭುಗಳು

[ಪರಿವರ್ತ್ಯ ಪದಾರ್ಥಗಳ ಸತ್ಯವು ಅವಗುಂಠನವಾಗಿರುವ ಅಪರಿವರ್ತ್ಯ ನಿತ್ಯಸತ್ಯವನ್ನು ಋಷಿಯು ಸೂಕ್ತಿಸುತ್ತಾನೆ, ಮಂತ್ರಶೈಲಿಯಲ್ಲಿ ಹೇಳುತ್ತಾನೆ. ದಿವ್ಯಜ್ಞಾನದ ವ್ಯಕ್ತ ಸೂರ್ಯನ ಪ್ರಯಾಣದ ಗುರಿಯು ಅದೇ. ಅದೇ ಸರ್ವವಸ್ತುಗಳ ನಿತ್ಯೈಕ್ಯ ಮತ್ತು ಅದರ ಪರಮೋಚ್ಚ ದಿವ್ಯತತ್ವವೆಂದರೆ ವಿವಿಧ ರೂಪಗಳನ್ನು ತಾಳಿದ ಮಹಾದೇವತೆಗಳು, ಆ ದಿವ್ಯತತ್ವವೇ ಈ ವಿವಿಧ ಮಹಾದೇವರುಗಳ ಆದಿ-ಮಧ್ಯಾಂತಗಳಾಗಿವೆ. ಆ ದಿವ್ಯ ಮಹಾಶಕ್ತಿಯಲ್ಲೇ ಯಜ್ಞಲಬ್ಧ (ಯಜ್ಞಜಿತ) ಸತ್ತೆ, ಜ್ಞಾನ, ಆನಂದ ಮತ್ತು ಶಕ್ತಿಗಳು ಐಕ್ಯವಾಗುತ್ತವೆ. ಅದೇ ವರುಣನ ವಿಶಾಲವಾದ ಪಾವಿತ್ರ್ಯಗಳ ದೊಡ್ಡ ವಿಸ್ತಾರ ಮತ್ತು ಮಿತ್ರನ ಬೆಳಗುವ ಸಾಮಶ್ರುತ್ಯದ ನಿಧಾನ. ಅಲ್ಲಿ ನಿತ್ಯವೂ ಸ್ತಿಮಿತವಾಗಿ ಜ್ಞಾನದ ದಿವ್ಯ ಕಿರಣಗಳ ಗೋಲಿಗಳು ಇರುತ್ತವೆ. ಏಕೆಂದರೆ, ಇಲ್ಲಿ ಅವೆಲ್ಲಾ ಪ್ರಯಾಣ ಮಾಡುತ್ತಿರುವುದು ಆ ಸುಖಕರ ಕ್ಷೇತ್ರಕ್ಕೇ. ಆ ವೈಶ್ವ ಚಲನೆಯ ಪ್ರೇರಕನು, ವೈಶ್ವ ಪ್ರಯಾಣದ ಪ್ರಚೋದಕನು, ನಮ್ಮ ಮೇಲೆ ಅರಿವಿನ ಮಳೆಯನ್ನು ಸುರಿಯುತ್ತಾನೆ-ಆ ಮಳೆ ಎಂದರೆ ಗೋವ್ರಜಗಳ ಹಾಲು-ಉಷೆಗಳ ಒಳಬೆಳಕಿನಿಂದ ಅವು ಹಾಲು ಸುರಿಯುತ್ತವೆ-ಆಗ ಅಮರ ಅಸ್ತಿತ್ವದ ಧಾರೆಗಳು ಕೆಳಗಿಳಿದು ಬರುತ್ತವೆ. ಆ ಕೂಡಲೇ ಮಿತ್ರಾವರುಣರ ಒಂದೇ ಒಂದು ಪೂರ್ಣ ಚಲನೆಯ ಫಲವಾಗಿ ತೇಜಸ್ಸು, ಪಾವಿತ್ರ್ಯ, ಸಾಮಶ್ರುತ್ಯ, ಅನಂತತೆಗಳು ಅನುಸರಿಸಿ ಬರುತ್ತವೆ-ಈ ಮಹಾದೇವದ್ವಯವು ಸುರಿಯುವುದು ಸ್ವರ್ಗದ ಮಳೆಯನ್ನು-ಆ ಮೂಲಕ ಅದು ಸಫಲತೆಯಲ್ಲಿ ಭೌತಿಕ ಜೀವನವನ್ನೂ ಪ್ರಬೋಧ ರಶ್ಮಿಗಳ ಗೋಲಿಗಳಲ್ಲಿ ಸ್ವರ್ಗೀಯ (ಆಕಾಶೀಯ) ಜೀವನವನ್ನೂ ಎತ್ತಿ ಹಿಡಿಯುತ್ತದೆ. ಹೀಗೆ ಅವರು ಮನುಜನಲ್ಲಿ ದಿವ್ಯಜ್ಞಾನ ಸಂಪನ್ನ ಪ್ರಣೋದವೊಂದನ್ನೂ ಅವರು ರಕ್ಷಿಸುವ ಹಾಗೂ ಅಭಿವೃದ್ಧಿಪಡಿಸುವ ವಿಶಾಲ ಸತ್ತೆಯನ್ನೂ ಯಜ್ಞಕ್ಕಾಗಿ ಮಾಡಿದ ದರ್ಭಾಸ್ತರಣ ಯುಕ್ತ ಆಸನವೊಂದನ್ನೂ ರಚಿಸುತ್ತಾರೆ. ಈ ಬಾಳಿನ ಸಹಸ್ರ ಸ್ತಂಭ ಜ್ಞಾನ ಪ್ರಣೋದವನ್ನು ನಿರ್ಮಿಸಿ ಅವರು ತಮ್ಮ ಮನೆಯನ್ನು ಮಾಡಿಕೊಳ್ಳುತ್ತಾರೆ ಮತ್ತು ಮಂತ್ರಾನಾವರಣಗಳಲ್ಲಿ ಬದುಕುತ್ತಾರೆ-ಲೋಕಜ್ಞಾತ ಶ್ರುತಿಮಂಡಲದಲ್ಲಿ ಬದುಕುತ್ತಾರೆ-ಮಂತ್ರಾವಿರ್ಭೂತ ಪವಿತ್ರಾವರಣದಲ್ಲಿ ಇರುತ್ತಾರೆ. ಅವರ ಆ ಮನೆಯು ಝಗಝಗಿಸುವ ಆಕಾರವುಳ್ಳದ್ದು; ಅದರ ಜೀವಿತ ಸ್ತಂಭಗಳು ಕಬ್ಬಿಣದ ಬಲವನ್ನೂ ಸ್ಥೈರ್ಯವನ್ನೂ ಹೊಂದಿವೆ. ಅವರು ಮುಂಬೆಳಗಿನಲ್ಲಿ ಅದಕ್ಕೆ ಏರಿ ಹೋಗುತ್ತಾರೆ -

ಆಗ ಜ್ಞಾನಸೂರ್ಯನು ಮೂಡಿರುತ್ತಾನೆ. ತಮ್ಮ ಆ ಸೂರ್ಯ ಚಕ್ಷುಸ್ಸಿನಿಂದ, ದಿವ್ಯ ಚಕ್ಷುಸ್ಸಿನಿಂದ, ಸಾಂತಾನಂತ ಸತ್ತೆಗಳೆರಡನ್ನೂ ನೋಡುತ್ತಾರೆ - ಒಂದು ನಾನಾತ್ವದ್ದಾದರೆ ಇನ್ನೊಂದು ಅಭೇದ್ಯವಾದ ವಸ್ತ್ವೈಕ್ಯವುಳ್ಳದ್ದು. ಆ ಅವರ ಮನೆಯು ಪರಿಪೂರ್ಣ, ವಿಸ್ತೃತ ! ಯಾವುದರಿಂದ? ಪರಮಪದದ ಮಾಧುರ್ಯದಿಂದ ಮತ್ತು ಆನಂದೋದ್ರೇಕದಿಂದ ಹಾಗೂ ಅನುಲ್ಲಂಘನೀಯ ಶಾಂತಿ ಮತ್ತು (ಧನ್ಯಭಾವದ) ಪರಮಾನಂದ, ಪರಮಸಂತೃಪ್ತಿಗಳಿಂದ. ಆ ದೇವತಾದ್ವಯದ ಚಿರಸ್ಮರಣೆಯಿಂದ ಮತ್ತು ಸಾಕುಗಾವಲಿನಿಂದ ನಾವು ಬಯಸಿ ಜಯಿಸಿ ಪಡೆಯಬೇಕೆಂದಿರುವುದು ಅದೇ ಮನೆಯನ್ನು.]

**ಋತೇನ ಋತಮಪಿಹಿತಂ ಧ್ರುವಂ ವಾಂ ಸೂರ್ಯಸ್ಯ ಯತ್ರ ವಿಮುಚಂತ್ಯಶ್ವಾನ್ ।**
**ದಶ ಶತಾ ಸಹ ತಸ್ಥುಸ್ತದೇಕಂ ದೇವಾನಾಂ ಶ್ರೇಷ್ಠಂ ವಪುಷಾ ಮಪಶ್ಯಂ ॥ ೧ ॥**

೧. ಪರಮ ಸತ್ಯವು[೧] ನಿತ್ಯವೂ ನಿಂತ ನಿನ್ನ ಪರಸತ್ಯದಿಂದ ಮುಚ್ಚಿದೆ. ಅಲ್ಲಿ ಸೂರ್ಯನ[೨] ಕುದುರೆಗಳನ್ನು ನೊಗದಿಂದ ಬಿಚ್ಚಲಾಗುತ್ತದೆ. ಅಲ್ಲಿ ಹತ್ತು ನೂರುಗಳು[೩] ಸುಮ್ಮನೆ ಒಟ್ಟಾಗಿ ನಿಂತಿವೆ. ; ಅವೊಂದನ್ನು - ಸದೇಹ ದೇವರುಗಳಲ್ಲಿ[೪] ಅಗ್ರೇಸರ, ಮಹತ್ತಮ, ಎನ್ನಿಸಿದ ಮಹಾದೇವತತ್ತ್ವವನ್ನು ನಾನು ನೋಡಿದೆನು.

**ತತ್ಸು ವಾಂ ಮಿತ್ರಾವರುಣ ಮಹಿತ್ವಮೀರ್ಮಾ ತಸ್ಥುಷೀರಹಭಿರ್ ದುದುಹ್ರೇ ।**
**ವಿಶ್ವಾಃ ಪಿನ್ವಥಃ ಸ್ವಸರಸ್ಯ ಧೇನಾ ಅನುವಾಮೇಕಃ ಪವಿರಾ ವವರ್ತ ॥ ೨ ॥**

೨. ಎಲೈ·ಮಿತ್ರಾವರುಣರೇ, ನಿಮ್ಮ ಅತ್ಯಂತ ವಿಸ್ತಾರಭಾವವದು. ಅಲ್ಲಿ ಚಲನಾಧಿಪತಿಯು ದಿನಗಟ್ಟಲೆ ತನ್ನ ಕೊಟ್ಟಿಗೆಯ ಪ್ರಸೃತ ಕಿರಣಗಳ ಹಾಲನ್ನು ಕರೆಯುತ್ತಾನೆ. ಎಲೈ ಮಿತ್ರದ್ವಯರಾದ ನೀವು ಆ ಮಹಾನಂದಮಯ ಏಕ ಏವಾದ್ವಿತೀಯನ ಎಲ್ಲ ಹೊನಲುಗಳನ್ನೂ ಉಬ್ಬಿಸಿರಿ ; ಮತ್ತು ನಿಮ್ಮ ಒಗ್ಗಾಲಿಯು[೫] ಅವರ ಮಾರ್ಗದಲ್ಲಿ ಚಲಿಸುವುದು.

---

೧. ಸಕ್ರಿಯವಾದ, ವಸ್ತು ಸಂಬಂಧಿಯಾದ ವೈಶ್ವಸತ್ಯವು ಸ್ವಪರಿವರ್ತನೆಯಲ್ಲಿ ದಿಕ್ಪಾಲಾಗಿ ಮತ್ತು ದೇಶಕಾಲಗಳ ವಿಭಜನೀಯತೆಯಿಂದ ನಾನಾ ಆಗಿ ವ್ಯವಸ್ಥಿತವೆನ್ನಿಸಿ, ನಿತ್ಯವೂ ಅಪರಿವರ್ತನೀಯವೂ ಆದ ಪರಮಸತ್ಯವನ್ನು ಮುಚ್ಚುತ್ತದೆ - ಪರಮಸತ್ಯದ ಆವಿರ್ಭಾವವೇ ಪರಸತ್ಯವು.

೨. ನಿತ್ಯ ಸತ್ಯವು ದಿವ್ಯ ತೇಜಸ್ಸಿನ ಗುರಿ; ಆ ತೇಜಸ್ಸು ನಮ್ಮಲ್ಲಿ ಉದಯಿಸುತ್ತದೆ ಮತ್ತು ಊರ್ಧ್ವಮುಖವಾಗಿ ಹೋಗುವುದು ; ಹೊಳೆವ ಮೇಲ್ಗಡಲಿನ ಮೂಲಕ ಅದು ಮೇಲು ಮೇಲಿನ ಸ್ವರ್ಗಗಳನ್ನು ಹೊಗುತ್ತಾ ಹೋಗುವುದು.

೩. ತನ್ನ ಜ್ಞಾನ, ಪ್ರಣೋದ ಮತ್ತು ಆನಂದಗಳನ್ನು ಹೊರ ಸುರಿಯುವುದರಲ್ಲಿ ಮಗ್ನವಾದ ದಿವ್ಯೈಶ್ವರ್ಯದ ಇಡೀ ಹೇರಳ ಶ್ರೇಯಃ ಸಮೃದ್ಧಿಯು.

೪. ಒಬ್ಬಾತ, ದೇವ, ತನ್ನ ದಿವ್ಯ ಸೂರ್ಯನೆಂಬ ರೂಪದಿಂದ ಮುಚ್ಚಲ್ಪಟ್ಟವನು ; ಈ ಶೋಪನಿಷತ್ತಿಗೆ ಹೋಲಿಸಿರಿ : "ನಿನ್ನ ಸುಂದರತಮ ರೂಪದ ವೈಭವವನ್ನು, ಓ ಸೂರ್ಯನೇ, ನಾನು ನೋಡುವಂತಾಗಲಿ. ಅಲ್ಲಿರುವ ಪುರುಷನು, ಅಲ್ಲೇ ಇರುವ ಪುರುಷನು - ಆ ಅವನೇ ನಾನು."

೫. ಸೂರ್ಯರಥದ ಕೆಳಗಾಲಿ ಕಡಿದುಬಿದ್ದ ಮೇಲೆ ನಡೆವ ಏಕೀಕೃತ ಚಲನೆಯು : ಈಗ ತನ್ನ ಚಲನೆಯಿಂದ ಬೇರೆಯಾಗಿ ಕಾಣುವ ಗೌಣ ಸತ್ಯವು ಮುಖ್ಯಸತ್ಯದ ಐಕ್ಯದೊಳಗೆ ತೆಗೆದುಕೊಳ್ಳಲ್ಪಡಲಾಯಿತು. ಗೌಣ=ಕೀಳು ; ಮುಖ್ಯ=ಮೇಲು.

**ಅಧಾರಯತಂ ಪೃಥಿವೀಮುತ ದ್ಯಾಂ ಮಿತ್ರರಾಜಾನಾ ವರುಣಾ ಮಹೋಭಿಃ ।**
**ವರ್ಧಯತಮೋಷಧೀಃ ಪಿನ್ವತಂ ಗಾ ಅವ ವೃಷ್ಟಿಂ ಸೃಜತಂ ಜೀರದಾನೂ ॥ ೩ ॥**

೩. ಓ ಮಿತ್ರರಾಜನೇ, ಓ ವರುಣರಾಜನೇ, ನಿಮ್ಮ ಮಹತ್ವದಿಂದ ನೀವು ದ್ಯಾವಾ ಪೃಥಿವಿಗಳನ್ನು ಎತ್ತಿ ಹಿಡಿದಿರುವಿರಿ; ನೀವು ಭೂಮಿಯ ಬೆಳೆಗಳನ್ನು ಹೆಚ್ಚಿಸುವಿರಿ ; ನೀವು ಸ್ವರ್ಗದ ಹೊಳೆವ ಹಿಂಡನ್ನು ಹೊರೆಯುವಿರಿ ; ಸ್ವರ್ಗದ ನೀರಿನ ಮಳೆಯನ್ನು ನೀವು ಹೊರ ಸುರಿಯುವಿರಿ-ಓ ಸಾಮರ್ಥ್ಯದಲ್ಲಿ ವೇಗವುಳ್ಳವರೇ!

**ಆ ವಾಮಶ್ವಾಸಃ ಸುಯುಜೋವಹಂತು ಯತರಶ್ಮಯ ಉಪಯಂತ್ವರ್ವಾಕ್ ।**
**ಘೃತಸ್ಯ ನಿರ್ಣಿಗನುವರ್ತತೇವಾಂ ಉಪಸಿಂಧವಃ ಪ್ರದಿವಿ ಕ್ಷರಂತಿ ॥ ೪ ॥**

೪. ತಮ್ಮ ಸುಯಂತ್ರಿತ ತೇಜಸ್ಸಿನ ಕಡಿವಾಣಗಳೊಡನೆ ಚೆನ್ನಾಗಿ ನೊಗಕ್ಕೆ ಕಟ್ಟಲಾದ ಕುದುರೆಗಳು ನಿಮ್ಮನ್ನು ಕೆಳಗಿರುವ ನಮ್ಮೆಡೆಗೆ ಹೊತ್ತು ತರಲಿ ; ನಿಮ್ಮ ಆಗಮನದಲ್ಲಿ ಸ್ಪಷ್ಟತೆಯ ರೂಪವು ಅನುಸರಿಸಿ ಬರುತ್ತದೆ ಮತ್ತು ಸ್ವರ್ಗದೆದುರು ನದಿಗಳು ಹರಿಯುತ್ತವೆ.

**ಅನುಶ್ರುತಾ ಮಮತಿಂ ವರ್ಧದುರ್ವೀಂ ಬರ್ಹಿರಿವ ಯಜುಷಾ ರಕ್ಷಮಾಣಾ ।**
**ನಮಸ್ವಂತಾ ಧೃತದಕ್ಷಾಧಿ ಗರ್ತೇ ಮಿತ್ರಾಸಾಥೇ ವರುಣೇಳಾಸ್ವಂತಃ ॥ ೫ ॥**

೫. ನಮ್ಮ ಜ್ಞಾನಕರ್ಣಕ್ಕೆ ಬರುವ ಸಾಮರ್ಥ್ಯವನ್ನು ಹೆಚ್ಚಿಸುತ್ತಾ, ನಿಮ್ಮ ವಿಶಾಲ ರಾಜ್ಯವನ್ನು[೧] ಯಜ್ಞಮಂತ್ರದಿಂದ[೨] ರಕ್ಷಿಸುತ್ತಾ-ಅದು ನಮ್ಮ ಯಜ್ಞಾಸನವೆಂದು ತಿಳಿದೋ ಎಂಬಂತೆ -ನಮಸ್ಕಾರಗಳನ್ನು ತರುತ್ತಾ, ನಿರ್ಣಯಕ್ಕೆ ಗಟ್ಟಿಯಾಗಿ ಅಂಟಿಕೊಂಡು, ಓ ಮಿತ್ರ, ಓ ವರುಣ, ನಿಮ್ಮ ಮನೆಯಲ್ಲಿ ನೀವು ಆಸನ ಸ್ವೀಕಾರ ಮಾಡಿರಿ - ಜ್ಞಾನಾವಿರ್ಭಾವಗಳ ಕಕ್ಷೆಯಲ್ಲಿ.

**ಅಕ್ರವಿಹಸ್ತಾ ಸುಕೃತೇ ಪರಸ್ಪಾಯಂತ್ರಾಸಾಥೇ ವರುಣೇಳಾಸ್ವಂತಃ ।**
**ರಾಜಾನಾ ಕ್ಷತ್ರ ಮಹೃಣೀಯಮಾನಾ ಸಹಸ್ರಸ್ಥೂಣಂ ಬಿಭೃಥಃ ಸಹ ದ್ವೌ ॥ ೬ ॥**

೬. ಹಿಡಿದುದನ್ನು ಬಿಡದ ಕೈಗಳಿಂದ ನೀವು ಮುಕ್ತಗೊಳಿಸುವ ಕರ್ಮಪೂರ್ಣತೆ ಸಾಧಿಸಿದವನನ್ನು ಅಮುತ್ರ ಸಂರಕ್ಷಿಸುವವರು - ಮತ್ತು ಅವನು ಜ್ಞಾನದ ಶ್ರುತ್ಯಾವಿರ್ಭೂತಿಗಳಲ್ಲಿ ಬದುಕುತ್ತಾನೆ-ನೀವು ಅತ್ಯಾಶಾವೇಶ ರಹಿತರು ; ಒಟ್ಟಿಗೇ ನೀವು ಸಹಸ್ರ ಸ್ತಂಭ ಬಲವನ್ನು ಎತ್ತಿ ಹಿಡಿಯುತ್ತೀರಿ.

**ಹಿರಣ್ಯ ನಿರ್ಣಿಗ ಯೋ ಅಸ್ಯಸ್ಥೂಣಾ ವಿ ಭ್ರಾಜತೇ ದಿವ್ಯಶ್ವಾಜನೀವ ।**
**ಭದ್ರೇ ಕ್ಷೇತ್ರೇ ನಿಮಿತಾ ತಿಲ್ವಿಲೇ ವಾ ಸನೇಮ ಮಧ್ವೋ ಅಧಿಗರ್ತ್ಯಸ್ಯ ॥ ೭ ॥**

---

೧. ಅಥವಾ ವಿಶಾಲ ಸಾಮರ್ಥ್ಯವನ್ನು ಹೆಚ್ಚಿಸುವುದು ಮತ್ತು ರಕ್ಷಿಸುವುದು.

೨. ಯಜುರ್ = ಋಗನುಸಾರವಾಗಿ ಯಜ್ಞಕರ್ಮಕ್ಕೆ ಮಾರ್ಗದರ್ಶನ ಮಾಡುವ ಮಂತ್ರ ; ಋಕ್=ತನ್ನೊಡನೆ ಆಶುಪ್ರಕಾಶಗಳನ್ನು ತರುವ ಮಂತ್ರ.

೭. ಆದರೂ ಆಕೃತಿಯು ಬಂಗಾರದ ಬೆಳಕಿನದು ; ಕಬ್ಬಿಣವು ಅದರ ಕಂಬ ; ಅದು ಫಕ್ಕನೆ ಹೊಳೆವ ಮಿಂಚಿನಂತೆ[೮] ಸ್ವರ್ಗದಲ್ಲಿ ಹೊಳೆಯುತ್ತದೆ-ಸುಖಕರ ಕ್ಷೇತ್ರದಲ್ಲಿ[೯] ಅದು ರೂಪಿತವಾಗುತ್ತದೆ ಯಾ ಹೊಳೆವ[೧೦] ಕ್ಷೇತ್ರದಲ್ಲಿ ಅದು ಸೃಷ್ಟಿಸಲ್ಪಡುತ್ತದೆ. ಆ ಮನೆಯಲ್ಲಿರುವ ಮಧುರ ಮಧು[೧೧]ವನ್ನು ನಾವು ಗೆದ್ದು ಪಡೆಯುವಂತಾಗಲಿ.

**ಹಿರಣ್ಯರೂಪ ಮುಷಸೋ ವ್ಯುಷ್ಟಾವಯಃ ಸ್ಥೂಣ ಮುದಿತಾ ಸೂರ್ಯಸ್ಯ ।**
**ಆ ರೋಹಥೋ ವರುಣ ಮಿತ್ರ ಗರ್ತಮತ ಶ್ಚಕ್ಷಾಥೇ ಅದಿತಿಂ ದಿತಿಂ ಚ ॥ ೮ ॥**

೮. ಓ ಮಿತ್ರಾ, ಓ ವರುಣಾ, ಬಂಗಾರದಾಕೃತಿಯ, ಕಬ್ಬಿಣದ ಕಂಬಗಳ ಆ ಮನೆಗೆ ಉಷೆಯುದಯಿಸಿದಾಗ, ನೇಸರು ಮೂಡಿದಾಗ ಹೋದರೆ ಅಲ್ಲಿ ನಿಂತು ನೀವು ಸಾಂತಾನಂತಗಳನ್ನು[೧೨] ನೋಡುತ್ತೀರಿ.

**ಯದ್ ಬ್ರಂಹಿಷ್ಠಂ ನಾತಿವಿಧೇಸುದಾನೂ ಅಚ್ಛಿದ್ರಂ ಶರ್ಮಭುವನಸ್ಯ ಗೋಪಾ ।**
**ತೇನನೋ ಮಿತ್ರಾವರುಣಾವವಿಷ್ಟಂ ಸಿಷಾಸಂತೋ ಜಿಗೀವಾಂಸಃ ಸ್ಯಾಮ ॥ ೯ ॥**

೯. ನಿಮ್ಮ ಆನಂದವು ಬಲು ದೊಡ್ಡದು ಮತ್ತು ಪರಿಪೂರ್ಣವಾದುದು ; ಮತ್ತು ಅದರಲ್ಲಿ ಅಂತರವಿಲ್ಲ. ಜಗತ್ತಿನ ಬಲಿಷ್ಠ ಸಂರಕ್ಷಕರೇ, ಆ ಕಾರಣದಿಂದ ಯಾರೂ ಅದರೊಳ ಹೊಗಲಾರರು, ಯಾರೂ ಅದರಾಚೆಗೆ ಹೊಗಲಾರರು. ಅದರಿಂದ ನಮ್ಮನ್ನು ಪ್ರೀತಿಯಿಂದ ನೆನೆದುಕೊಳ್ಳಿರಿ. ಓ ಮಿತ್ರಾವರುಣರೇ, ನಾವು ಜಯಿಗಳಾಗೋಣ-ಆ ಶಾಂತಿಯ ಒಡೆಯತನವನ್ನು ಪಡೆಯುವವರಾಗೋಣ.



೮. ಅಥವಾ "ಹೆಣ್ಣು ಕುದುರೆ - ಜೀವನಾಶ್ವದ ಕ್ರಿಯಾಶಕ್ತಿ.
೯. ಆನಂದ, ಪ್ರಮೋದ ಪ್ರಪಂಚವು.
೧೦. ಉಷೆಗಳು ಹೊಳೆವ ಕ್ಷೇತ್ರಗಳು.
೧೧. ಮಧು, ಸೋಮರಸ.
೧೨. ದಿತಿ ಮತ್ತು ಅದಿತಿ=ಸಾಂತ, ಅನಂತ.

# ಮಿತ್ರಾವರುಣರನ್ನು ಕುರಿತ ಎರಡನೆಯ ಸೂಕ್ತವು

## V. 63

## ಮಳೆಗರೆವವರು

[ತಮ್ಮ ಸಂಯುಕ್ತ ವಿಶ್ವಜನೀನತೆಯಿಂದಲೂ ಸಾಮಶ್ರುತ್ಯದಿಂದಲೂ ಮಿತ್ರಾವರುಣರು ದಿವ್ಯ ಸತ್ಯದ ಪಾಲಕರು ಮತ್ತು ಅದರ ದಿವ್ಯ ವಿಧಿಯ (ಋತದ) ರಕ್ಷಕರು ; ಆ ವಿಧಿಯು ಸರ್ವದಾ ಪರಿಪೂರ್ಣವು ; ಅದಿರುವುದು ನಮ್ಮ ಪರಮೋಚ್ಚ ಸತ್ತೆಯಲ್ಲಿ. ಅಲ್ಲಿಂದ ಅವರು ಸ್ವರ್ಗಗಳ ಧಾರಾಳ ಸಮೃದ್ಧಿಯನ್ನು ಮಳೆಗರೆಯುತ್ತಾರೆ. ಅದರ ಆನಂದವನ್ನು ಅನುಗೃಹೀತ ಆತ್ಮದ ಮೇಲೆ ಹೊಯ್ಯುತ್ತಾರೆ. ಅವರು ಮಾನವಾಂತರ್ಗತ ಜಗತ್ ಸತ್ಯದ ದ್ರಷ್ಟಾರರಾದುದರಿಂದ, ಅದರ ವಿಧಿಯ ರಕ್ಷಕತ್ವದಿಂದ, ಈ ಪರಿವರ್ತನಶೀಲ ಪ್ರಪಂಚದ ಎಲ್ಲಾ ಅಸ್ತಿತ್ವದ ಮೇಲೆ ಆಳುವವರಾಗಿದ್ದಾರೆ ; ಅವರು ಅದರ ಆಧ್ಯಾತ್ಮಿಕ ಐಶ್ವರ್ಯರೂಪದ ಮತ್ತು ಅಮೃತತ್ವದ ಸ್ವರೂಪದ ಮಳೆಯನ್ನು ದಯಪಾಲಿಸುತ್ತಾರೆ. ಜೈವಿಕ ಶಕ್ತಿಗಳು ಭೂ-ಸ್ವರ್ಗಗಳ ಮೂಲಕ, ಸತ್ಯ ಸಂಶೋಧಕ ವಿಚಾರದ ಧ್ವನಿಯಿಂದ ಸಾಲು ಸಾಲಾಗಿ ಪಸರಿಸುತ್ತವೆ ಮತ್ತು ಉಕ್ತ ರಾಜರಿಬ್ಬರು ಸರ್ಜನಶೀಲ ಆಪೋದೇವಿಯವರಿಂದ ತುಂಬಿದ ಹೊಳೆವ ಮೋಡಗಳೊಡನೆ ಅವರ ಕರೆಗೆ ಓಗೊಟ್ಟು ಬರುತ್ತಾರೆ. ಅವರು ಹೀಗೆ ಸ್ವರ್ಗದಿಂದಿಳಿದು ಬರುವ ಮಳೆಯನ್ನು ಸುರಿಸುವುದು ಮಹಾಪ್ರಭುವಿನ ದಿವ್ಯ ಸತ್ಯಜ್ಞಾನದಿಂದ ಯಾ ಮಾಯೆಯಿಂದ. ಆ ದಿವ್ಯಜ್ಞಾನವೆಂದರೆ ಸೂರ್ಯ, ತೇಜಸ್ಸು, ಬೆಳಕು, ಜ್ಯೋತಿಸ್- ಅಜ್ಞಾನವನ್ನು ನಾಶ ಮಾಡಲು ಮಿತ್ರಾವರುಣರು ಸುತ್ತುಮುತ್ತಲೂ ಹರಹಿರುವ ಆಯುಧವು. ಮೊಟ್ಟಮೊದಲು ಪರಸತ್ಯದ ಶರೀರವಾದ ಸೂರ್ಯನನ್ನು ಅದರ ಸುರಿಮಳೆ ಹೊತ್ತ ಬಿರುಗಾಳಿಯಲ್ಲಿ ಅವಿತಿಡಲಾಗಿದೆ ಮತ್ತು ಆ ವೃಷ್ಟಿಧಾರೆಗಳ ಮಾಧುರ್ಯವನ್ನಷ್ಟೇ ನಾವು ಜೀವನದಲ್ಲಿ ಅನುಭವಿಸುತ್ತೇವೆ ; ಆದರೆ ಜೈವಿಕ ಶಕ್ತಿಗಳಾದ ಮರುತ್ತುಗಳು ವಿಚಾರ-ಶಕ್ತಿಗಳೂ ಆಗಿ ಹೊಳೆವ ಸಿರಿಯೆಂದು ಸಂಗ್ರಹಿಸಬೇಕಾದ ಗುಪ್ತಜ್ಞಾನದ ಉಜ್ವಲ ಕಿರಣಗಳನ್ನು ಶೋಧಿಸಲೆಂದು ನಮ್ಮ ಸತ್ತೆಯ ಸರ್ವಪ್ರಪಂಚಗಳಲ್ಲೂ ಹೊರಹಚ್ಚಿರುತ್ತಾರೆ. ವೃಷ್ಟಿಧ್ವನಿ (ಸ್ವರ) ಎಂಬುದು ದಿವ್ಯ ಜಲಗಳ ಚಲನೆಯ ಮತ್ತು ದಿವ್ಯ ಪ್ರಕಾಶದ ಮಿಂಚುವಿಕೆಗಳಿಂದ ತುಂಬಿದೆ. ಅದರ ಜಲದಗಳು ಜೀವಶಕ್ತಿಗಳಾದ ಮರುತ್ತುಗಳ ಉಡುಪಾಗುತ್ತವೆ. ಈಯೆಲ್ಲವುಗಳ ಮೂಲಕ, ಪರಸತ್ಯದ ಬಲಿಷ್ಠ ಪ್ರಭುವಿನ ರೂಪ್ಯಮಾನ ಜ್ಞಾನದಿಂದ, ಪರಸತ್ಯದಿಂದ ನಮ್ಮ ಇಡೀ ಅಸ್ತಿತ್ವವನ್ನು ನಿಯಂತ್ರಿಸುತ್ತಾ ಮತ್ತು ಕೊನೆಯದಾಗಿ - ಜ್ಞಾನದ ವಿವಿಧ ಶ್ರೀಮಂತ ವೈಭವವುಳ್ಳ ರಥವಾಗಿ, ಆತ್ಮವು ಅತ್ಯುನ್ನತ ಸ್ವರ್ಗಗಳಿಗೆ ಹೋಗುವ ಪ್ರಯಾಣದ ತೇರಾಗಿ, ಈಗ ಬಹಿರಂಗವಾದ ಸೂರ್ಯನನ್ನು ಅವರ ಆಗಸದಲ್ಲಿ ನಿಲ್ಲಿಸಿ - ರಾಜದ್ವಯರು ನಮ್ಮಲ್ಲಿ ದಿವ್ಯಕಾರ್ಯವಾಗುತ್ತಿರುವುದನ್ನು ನಡೆಸಿಕೊಂಡು ಹೋಗುತ್ತಾರೆ.]

**ಋತಸ್ಯ ಗೋಪಾವಧಿ ತಿಷ್ಠಥೋರಥಂ ಸತ್ಯಧರ್ಮಾಣ ಪರಮೇವ್ಯೋಮನಿ**
**ಯಮತ್ರ ಮಿತ್ರಾವರುಣಾವಥೋ ಯುವಂ ತಸ್ಮೈ ವೃಷ್ಟಿರ್ ಮಧುಮತ್ ಪಿನ್ವತೇ ದಿವಃ ॥ ೧ ॥**

೧. ಸತ್ಯಪಾಲರಾಗಿ ನೀವು ನಿಮ್ಮ ತೇರನ್ನೇರುವಿರಿ. ಅತ್ಯುಚ್ಚ ಆಕಾಶದಲ್ಲಿ[೧] ಪರಸತ್ಯದ ವಿಧಿಯು ನಿಮ್ಮದು. ಇಲ್ಲಿ ನೀವು ಯಾರನ್ನು ಹೃದಯದಲ್ಲಿಟ್ಟು ನೆನೆಯುತ್ತಿದ್ದೀರೋ ಅವನಿಗಾಗಿ ವಿಸ್ತಾರ-ಸಾಮಥ್ರ್ಯಗಳ ಪ್ರಭುಗಳೇ - ಸ್ವರ್ಗವೃಷ್ಟಿಯು ಮಾಧುರ್ಯನಿರ್ಭರವಾಗಿ ಹೆಚ್ಚಾಗುತ್ತದೆ, ಅಭಿವೃದ್ಧವಾಗುತ್ತದೆ.

**ಸಮ್ರಾಜಾವಸ್ಯ ಭುವನಸ್ಯ ರಾಜಥೋ ಮಿತ್ರಾವರುಣಾ ವಿದಥೇ ಸ್ವರ್ದೃಶಾ**
**ವೃಷ್ಟಿಂ ವಾಂ ರಾಧೋ ಅಮೃತತ್ವಮೀಮಹೇ ದ್ಯಾವಾಪೃಥಿವೀ ವಿಚರಂತಿ ತನ್ಯವಃ ॥ ೨ ॥**

೨. ಸಮ್ರಾಜರಾದ[೨] ನೀವು, ಹೇ ಮಿತ್ರಾವರುಣರೇ, ನಮ್ಮ ಪರಿವರ್ತನಶೀಲ ಪ್ರಪಂಚವನ್ನು ಆಳುತ್ತೀರಿ ; ಜ್ಞಾನಾರ್ಜನೆಯಲ್ಲಿ ನೀವು ಬೆಳಕಿನ ರಾಜ್ಯದ ದ್ರಷ್ಟಾರರು. ನಾವು ನಿಮ್ಮಿಂದ ಮಳೆ, ಸುಖಕರ ಸಿರಿ, ಅಮೃತತ್ವಗಳನ್ನು ಬಯಸುತ್ತೇವೆ. ಅಕೋ! ಗುಡುಗುವವರು[೩] ದ್ಯಾವಾಪೃಥಿವಿಗಳ ಮೂಲಕ ಹೊರಗೆ ಹಬ್ಬುತ್ತಿದ್ದಾರೆ.

**ಸಮ್ರಾಜಾ ಉಗ್ರಾ ವೃಷಭಾ ದಿವಸ್ಪತೀ ಪೃಥಿವ್ಯಾ ಮಿತ್ರಾ ವರುಣಾ ವಿಚರ್ಷಣೀ ।**
**ಚಿತ್ರೇಭಿರಭ್ರೈರುಪ ತಿಷ್ಠಥೋರವಂ ದ್ಯಾಂ ವರ್ಷಯಥೋ ಅಸುರಸ್ಯ ಮಾಯಯಾ ॥ ೩ ॥**

೩. ಚಕ್ರವರ್ತಿಗಳಾದ ಹೇ ಮಿತ್ರಾವರುಣರೇ, ನೀವು ಹೇರಳ ಸಿರಿಯ ಎತ್ತುಗಳು, ದ್ಯಾವಾಪೃಥಿವಿಗಳ ಪ್ರಭುಗಳು, ನಿಮ್ಮ ಕಾರ್ಯಗಳಲ್ಲಿ ವಿಶ್ವಜನೀನರು ವಿವಿಧ ಬೆಳಕಿನ ನಿಮ್ಮ ಮೋಡಗಳಿಂದ ನೀವು ಅವರ ಕೂಗಿಗೆ ಮಾರ್ದನಿಗೊಡುವಿರಿ ; ಮತ್ತು ಮಹಾಬಲನ[೪] ಜ್ಞಾನಶಕ್ತಿಯಿಂದ[೫] ಸ್ವರ್ಗವನ್ನು ಕೆಳಮುಖವಾಗಿ, ಮಳೆಯಾಗಿ ಸುರಿಸುವಿರಿ.

**ಮಾಯಾಂ ವಾಂ ಮಿತ್ರಾವರುಣಾ ದಿವಿಶ್ರಿತಾ ಸೂರ್ಯೋಜ್ಯೋತಿ ಶ್ಚರತಿ ಚಿತ್ರಮಾಯುಧಂ ।**
**ತಮಭ್ರೇಣ ವೃಷ್ಟ್ಯಾ ಗೂಹಥೋದಿವಿ ಪರ್ಜನ್ಯ ದ್ರಪ್ಸಾ ಮಧುಮಂತ ಈರತೇ ॥ ೪ ॥**

೪. ಓ ಮಿತ್ರಾವರುಣರೇ, ಈ ನಿಮ್ಮಜ್ಞಾನವಿದೇ-ಇದು ಸ್ವರ್ಗದಲ್ಲಿ ಪ್ರತಿಷ್ಠಿತವಾಗಿದೆ. ಇದೇ ಸೂರ್ಯ, ಇದೇ ಪ್ರಕಾಶ ; ಇದು

---

೧. ಅತಿಮಾನಸ, ಪ್ರಜ್ಞಾತೀತ, ತತ್ತ್ವಸ್ವರೂಪದ ಅನಂತತೆ, ಆನಂತ್ಯ.

೨. ಸಮ್ರಾಟ್ = ವಸ್ತುನಿಷ್ಠ-ವ್ಯಕ್ತಿನಿಷ್ಠ ಅಸ್ತಿತ್ವವೆಲ್ಲದರ ಮೇಲೂ ಪೂರ್ಣಪ್ರಭುತ್ವವನ್ನು ತಾಳಿರುವವನು.

೩. ಮರುತ್ತುಗಳು=ಜೀವಶಕ್ತಿ-ವಿಚಾರಶಕ್ತಿಗಳು-ಸತ್ಯಜ್ಯೋತಿಯನ್ನು ನಮ್ಮೆಲ್ಲ ಕಾರ್ಯಕ್ಕಾಗಿ ಹುಡುಕಿ ಕೊಡುವವರು.

೪. ಅಸುರ=ಅವೆಸ್ತರ ಅಹುರಮಜ್ದ-ಅರ್ಥಾತ್ - ದೇವ ಎಂದರ್ಥ. ಅಸುರನಾದ ವರುಣನ ಅವತಾರಗಳೂ ಅಸುರರೇ-ಅಸೂನ್ ರಾತಿ ಇತ್ಯಸುರಃ=ಪ್ರಾಣಶಕ್ತಿಗಳನ್ನು ಕೊಡುವವನು. ಕೇವಲ ಕೆಲವೇ ಸೂಕ್ತಗಳಲ್ಲಿ ಈ ಪದವನ್ನು ಕೃಷ್ಣವರ್ಣದ ರಾಕ್ಷಸ ಎಂಬರ್ಥದಲ್ಲಿ ಬಳಸಲಾಗಿದೆ.- ನಸುರಃ, ಅ-ಸುರಃ=ಸುರನಲ್ಲದವನು ಎಂಬ ಕೃತಕ ರೀತಿಯಿಂದ.

೫. ಮಾಯೆ = ದೇವನ ಸರ್ಜನಶೀಲ ವಿಚಾರ ಶಕ್ತಿಗಳು.

ಹೊರಹಲಿದು ನಿಮ್ಮ ಶ್ರೀಮಂತವಾದ ವಿವಿಧತೆಯುಳ್ಳ ಆಯುಧವಾಗುವುದು. ಇದನ್ನು ಸ್ವರ್ಗದಲ್ಲಿ ನೀವು ಮೋಡ-ಮಳೆಗಳೊಟ್ಟಿಗೆ ಅಡಗಿಸುತ್ತೀರಿ. ಎಲೈ ಮಳೆಯೇ ಮಧುಮಯವಾಗಿ ನಿನ್ನ ಧಾರೆಗಳನ್ನು ಸುರಿ.

**ರಥಂ ಯುಂಜತೇ ಮರುತಃ ಶುಭೇ ಮುಖಂ ಶೂರೋ ನ ಮಿತ್ರಾವರುಣಾ ಗವಿಷ್ಟಿಷು ।**
**ರಜಾಂಸಿ ಚಿತ್ರಾ ವಿಚರಂತಿ ತನ್ಯವೋ ದಿವಃ ಸಮ್ರಾಜಾ ಪಯಸಾ ನ ಉಕ್ಷತಂ ॥ ೫ ॥**

೫. ಹೇ ಮಿತ್ರ, ಹೇ ವರುಣ, ಜೈವಿಕ ಶಕ್ತಿಗಳು ಆನಂದಕ್ಕಾಗಿ ತಮ್ಮ ಸುಖಕರ ರಥವನ್ನು ನೊಗ ಹೊತ್ತ ಕುದುರೆಗಳಿಂದ ಸಜ್ಜುಗೊಳಿಸುತ್ತಾರೆ - ಯುದ್ಧಕ್ಕೆ ಹೋಗುವ ವೀರನಂತೆ. ಏಕೆ? ಜ್ಯೋತಿಪ್ರಜಗಳನ್ನು ಹುಡುಕಿಕೊಂಡು ತರಲು ; ಗುಡುಗುತ್ತಾ ಅವರು ವಿವಿಧ ಪ್ರಪಂಚಗಳನ್ನು ಹಬ್ಬಿಸುತ್ತಾರೆ ಮತ್ತು ನೀವು ನಮ್ಮ ಮೇಲೆ, ಸಾರ್ವಭೌಮ ಪ್ರಶಾಸಕರಾಗಿ, ಸ್ವರ್ಗಜಲವನ್ನು ಹೊರ ಸುರಿಯುತ್ತೀರಿ.

**ವಾಚಂ ಸುಮಿತ್ರಾ ವರುಣಾವಿರಾವತೀಂ ಪರ್ಜನ್ಯಶ್ಚಿತ್ರಾಂ ವದತಿ ತ್ವಿಷೀಮತೀಂ**
**ಅಭ್ರಾ ವಸತ ಮರುತಃ ಸು ಮಾಯಯಾ ದ್ಯಾಂ ವರ್ಷಯತಮರುಣಾಮರೇಪಸಮ್ ॥ ೬ ॥**

೬. ಎಲೈ ಮಿತ್ರಾವರುಣರೇ, ಮಳೆಯು ತನ್ನ ಮಾತನ್ನಾಡುತ್ತದೆ.[೬] ಅದು ಶ್ರೀಮಂತವೂ ವಿವಿಧವೂ ಜ್ಯೋತಿರ್ಮಯವೂ ಚಲನಶೀಲವೂ ಆಗಿದೆ ; ಜೀವಶಕ್ತಿಗಳು ನಿನ್ನ ಮೋಡಗಳನ್ನು ಉಡುತ್ತವೆ. ಕೆಂದಾವರೆಯಂತೆ ಹೊಳೆವ ನಿಷ್ಪಾಪ ಸ್ವರ್ಗವನ್ನು ನೀವು ಕೇವಲ ಜ್ಞಾನದಿಂದ ಮಳೆಗರೆಯುವಿರಿ.

**ಧರ್ಮಣಾ ಮಿತ್ರಾ ವರುಣಾ ವಿಪಶ್ಚಿತಾ ವ್ರತಾ ರಕ್ಷೇಥೇ ಅಸುರಸ್ಯ ಮಾಯಯಾ ।**
**ಋತೇನ ವಿಶ್ವಂ ಭುವನಂ ವಿರಾಜಯಃ ಸೂರ್ಯಮಾಧತ್ಥೋ ದಿವಿ ಚಿತ್ರ್ಯಂ ರಥಂ ॥ ೭ ॥**

೭. ಹೇ ಮಿತ್ರಾ ವರುಣರೇ, ವಿಧಿ (ಋತ)ಯಿಂದ, ಮಹಾಬಲನ ಜ್ಞಾನದಿಂದ, ಕರ್ಮಗಳನ್ನು[೭] ನೀವು ಕಾಯುವಿರಿ. ಪರಸತ್ಯದಿಂದ ನಮ್ಮೀ ಪರಿವರ್ತನಶೀಲ ಪ್ರಪಂಚವೆಲ್ಲವನ್ನೂ ನೀವು ವಿಸ್ತಾರವಾಗಿ ಆಳುವಿರಿ ; ಸ್ವರ್ಗದಲ್ಲಿ ನೀವು ಸೂರ್ಯನನ್ನು ಇಡುವಿರಿ - ವೈವಿಧ್ಯಪೂರ್ಣವಾದ ವೈಭವ ಸಂಪನ್ನ ತೇರನ್ನೂ ಸಿದ್ಧ ಮಾಡುವಿರಿ.



೬ ಮಳೆಮೋಡ ಹೊತ್ತ ಬಿರುಗಾಳಿಯ ಪ್ರತಿಮೆಯಲ್ಲಿ ವ್ಯಕ್ತಿನಿಷ್ಠ ಅರ್ಥವನ್ನು ನಾವಿಲ್ಲಿ ನೋಡುತ್ತೇವೆ . ಶಬ್ದರೂಪದ ಸತ್ಯಮಂತ್ರದ ಸ್ಫೋಟವಿದು - ತನ್ನರ್ಥದ ಸ್ಫೋಟವಾಗಿ ಮಿಂಚು ಪರಿಣಮಿಸಿದಂತೆ.

೭ ವ್ರತಾನಿ = ಆರ್ಯ ಯಾ ದಿವ್ಯ ಕರ್ಮಗಳು-ಅವು ಮಾನವನಲ್ಲಿ ಆವಿರ್ಭವಿಸಬೇಕಾದ ಸತ್ಯವಿಧಿಯು. ಅನಾರ್ಯದಸ್ಯುವು, ಮಾನವ್ಯನಾಗಿರಲಿ, ಅತಿಮಾನವ್ಯನಾಗಿರಲಿ.ಈ ದಿವ್ಯಕರ ಕರ್ಮಗಳವನಿಗಿಲ್ಲ ಕೃಷ್ಣೀಕೃತ ಪ್ರಜ್ಞೆಯಲ್ಲಿ ವಿರೋಧಿಸುವನು ಮತ್ತು ಅವನ್ನು ಜಗತ್ತಿನಲ್ಲಿ ನಾಶ ಮಾಡಲು ಯತ್ನಿಸುತ್ತಾನೆ. ಅಂಧಕಾರಾಧಿಪತಿಗಳೆಲ್ಲಾ ಅದರಿಂದಲೇ ದಸ್ಯುಗಳು- ವಿನಾಶಕರೆಂದು ಕರೆಯಲ್ಪಟ್ಟಿದ್ದಾರೆ.

# ಮಿತ್ರಾವರುಣರನ್ನು ಕುರಿತ ಮೂರನೆಯ ಸೂಕ್ತವು

## V. 64

## ಆನಂದಮಂದಿರಕ್ಕೆ ಒಯ್ಯುವ ನೇತಾರರು

[ಋಷಿಯು ಅನಂತವಿಸ್ತಾರ ಹಾಗೂ ಅನಂತ ಸಾಮರ್ಥ್ಯಗಳ ದೊರೆಗಳನ್ನು ಆಹ್ವಾನಿಸುತ್ತಾನೆ. ಈ ದೊರೆಗಳ ತೋಳುಗಳು ಆತ್ಮದ ಅತ್ಯುಚ್ಚ ಪ್ರಜ್ಞಾಸ್ತರವೆನ್ನಿಸಿದ ಪರಸತ್ಯ-ಪರಾನಂದಗಳನ್ನು ಆಲಿಂಗಿಸುತ್ತವೆ. ಏಕೆ? ಆ ಋಷಿಯು ಆತ್ಮಕ್ಕೆ ಆ ಎಚ್ಚತ್ತ ಪ್ರಜ್ಞೆ-ಜ್ಞಾನಗಳ ಸ್ವರೂಪದ ತಮ್ಮ ತೋಳುಗಳನ್ನು ಚಿತ್ತರಿಸಿದರೆ ಆ ಆತ್ಮಕ್ಕೆ ಅವರ ಸರ್ವಂಕಷ ಆನಂದ ದೊರಕುತ್ತದೆ. ಮಿತ್ರ ಮಾರ್ಗದಿಂದ ಆ ಋಷಿಯು ಮಿತ್ರನ ಸಾಮರ್ಥ್ಯಗಳ ಸಂತೋಷವನ್ನು ಬಯಸುತ್ತಾನೆ. ಆ ಆನಂದದಲ್ಲಿ ಗಾಯದ ನೋವಿಲ್ಲ, ಆಘಾತದ ಭಯವಿಲ್ಲ. ಬೆಳಗುವ ಮಂತ್ರ ಶಕ್ತಿಯಿಂದ ಅತ್ಯುನ್ನತ ಸತ್ಯವನ್ನು ಕಲ್ಪಿಸಿಕೊಂಡು ಧಾರಣೆ ಮಾಡಿ ಋಷಿಯು ಆ ಪ್ರಜ್ಞಾಸ್ತರದಲ್ಲಿ ಪುಷ್ಟನಾಗಬೇಕೆಂದು ಬಯಸುತ್ತಾನೆ - ಏಕೆಂದರೆ, ಅದೇ ದೇವತೆಗಳ ಮನೆ, ದೇವಸ್ಥಾನವು. ಅವನ ಜೀವನದಲ್ಲಿ ಉಕ್ತ ಇಬ್ಬರು ಮಹಾದೇವರುಗಳು ತಮ್ಮ ದಿವ್ಯ ಸಾಮರ್ಥ್ಯ-ವಿಸ್ತಾರಗಳ ಅಪಾರ ಜಗತ್ತನ್ನು ನಿರ್ಮಿಸಲಿ ; ಅವರು ಅದರ ಅಸೀಮ ಶ್ರೇಯಃ ಸಮೃದ್ಧಿಯನ್ನೂ ಸುಖ-ಸಂಪತ್ತುಗಳನ್ನೂ ದಿವ್ಯಜ್ಯೋತಿಯು ಮುಂಬೆಳಗುವಾಗ, ದಿವ್ಯ ಪ್ರಣೋದವು ಉದಯವಾಗುವಾಗ, ಅವನಿಗಾಗಿ ತರಲಿ.]

**ವರುಣಂ ವೋ ರಿಶಾದ ಸಮೃಚಾ ಮಿತ್ರಂ ಹವಾಮಹೇ ।**
**ಪರಿ ವ್ರಜೇವ ಬಾಹ್ವೋರ್ಜಗನ್ವಾಂಸಾ ಸ್ವರ್ಣರಂ ॥ ೧ ॥**

೧. ಶತ್ರುಘ್ನನಾದ ವರುಣನೇ, ಮಿತ್ರನೇ, ಸ್ಫೂರ್ತ ಮಂತ್ರದಿಂದ ನಾವು ನಿಮ್ಮನ್ನು ಕರೆಯುತ್ತೇವೆ. ಮಿತ್ರಾವರುಣರ ತೋಳುಗಳು, ಹೊಳೆವ ಗೋವ್ರಜಗಳ ಕೊಟ್ಟಿಗೆಗಳ ಸುತ್ತ ಚಾಚಿದ ಬಲೆಯಂತೆ, ಬೆಳಕಿನ[೧] ಶಕ್ತಿಯ ಜಗವನ್ನು ಆವರಿಸಿವೆ.

**ತಾ ಬಾಹವಾ ಸುಚೇತುನಾ ಪ್ರ ಯಂತ ಮಸ್ಮಾ ಅರ್ಚತೇ ।**
**ಶೇವಂ ಹಿ ಜಾರ್ಯಂ ವಾಂ ವಿಶ್ವಾಸು ಕ್ಷಾಸು ಜೋಗುವೇ ॥ ೨ ॥**

---

೧. ಸ್ವರ್ಣರ = ಸ್ವರ್ ಎಂಬುದು ಪರಸತ್ಯದ ಸೌರ ಪ್ರಪಂಚ ಮತ್ತು ವ್ರಜಗಳು ಅವನ ಸೌರ ಸ್ಫೂರ್ತಿ ಕಿರಣಗಳು ; ಆದುದರಿಂದ ಅವನ್ನು ಹೊಳೆವ ವೈದಿಕ ದನಕರುಗಳಿಗೆ ಹೋಲಿಸಲಾಗಿದೆ.

೨. ನಿಮ್ಮ ತೋಳುಗಳನ್ನು- ಎಚ್ಚತ್ತ ಜ್ಞಾನದ[1] ಕೈಗಳನ್ನು - ಮಾನವನು ಸ್ಫೂರ್ತ ಮಂತ್ರವನ್ನು ಹಾಡಿದಾಗ - ಮಾನವ ಜೀವಿಯತ್ತ ಚಾಚಿರಿ ; ನಮ್ಮೆಲ್ಲಾ ಭೂಮಿಗಳ[೩] ನ್ನು ನಿಮ್ಮ ಆರಾಧ್ಯ ಆನಂದ ಸಮಾಧಿಯು ತಲುಪಲಿ.

**ಯನ್ನೂನಮಶ್ಯಾಂ ಗತಿಂ ಮಿತ್ರಸ್ಯ ಯಾಯಾಂ ಪಥಾ ।**
**ಅಸ್ಯ ಪ್ರಿಯಸ್ಯ ಶರ್ಮಣ್ಯ ಹಿಂಸಾನಸ್ಯ ಸಶ್ಚಿರೇ ॥ ೩ ॥**

೩. ಮಿತ್ರಮಾರ್ಗದಲ್ಲಿ[೪] ನಾನು ಹೋಗುವಂತಾಗಲಿ ; ಅದರಿಂದ ಈಗಲೂ ಸಹಾ ನನ್ನ ಪ್ರಯಾಣದ ಗುರಿಯನ್ನು[೫] ತಲುಪುವಂತಾಗಲಿ. ಆದುದರಿಂದ ಮನುಜರು ಕ್ಷತಿಯಿಲ್ಲದ ಆ ಪ್ರಿಯತಮನ ಆನಂದರಾಶಿಗೆ ಅಂಟಿಕೊಳ್ಳುತ್ತಾರೆ.

**ಯುವಾಭ್ಯಾಂ ಮಿತ್ರಾವರುಣೋಪಮಂ ಧೇಯಾಮೃಚಾ ।**
**ಯದ್ಧ ಕ್ಷಯೇ ಮಘೋನಾಂ ಸ್ತೋತೃಣಾಂ ಚ ಸ್ಪೂರ್ಧಸೇ ॥ ೪ ॥**

೪. ಓ ಮಿತ್ರಾ, ಓ ವರುಣಾ, ಸ್ಫೂರ್ತಿದಾಯಕ ಮಂತ್ರದಿಂದ ನನ್ನ ಪರಮೋಚ್ಚ ವಿಚಾರವು ನಿನ್ನ ಆಸ್ತಿಯಾಗಿದೆ. ಆ ಆಸ್ತಿಯು ಅಪಾರ ಶ್ರೇಯಃ ಸಮೃದ್ಧಿಯ ಯಜಮಾನರ ಮನೆ. ಅದನ್ನದು ಅವರಿಗಾಗಿಯು ನಿನ್ನನ್ನು ಮನ್ನಿಸಿದ ಮಾನವರಿಗಾಗಿಯೂ ಬಯಸುವಂತಾಗಲಿ.[೬]

**ಆ ನೋಮಿತ್ರ ಸುದೀತಿಭಿರ್ ವರುಣಶ್ಚ ಸಧಸ್ಥ ಆ ।**
**ಸ್ವೇ ಕ್ಷಯೇ ಮಘೋನಾಂ ಸಖೀನಾಂ ಚ ವೃಧಸೇ ॥ ೫ ॥**

೫. ಓ ಮಿತ್ರ, ನಿನ್ನ ಪೂರ್ಣದಾನಗಳೊಡನೆ ನಮ್ಮೆಡೆಗೆ ಬಾ. ಓ ವರುಣ, ನಮ್ಮ ಅಧಿವೇಶನ ಪ್ರಪಂಚಕ್ಕೆ ಬಾ ಅದರಿಂದ ಅಪಾರ ಶ್ರೇಯೋಧಾಮವನ್ನು[೭] ತಮ್ಮ ಮನೆಯೆಂದು ಮಾಡಿಕೊಂಡಿರುವ ಪ್ರಭುಗಳ ಹಾಗೂ ನಿನ್ನ ಸಹಚರರ ಸಂವರ್ಧನೆಯಾಗುತ್ತದೆ.

---

೨. ಈ ವಿಶೇಷಣವು ದೇವತೆಗಳ ಶರೀರಗಳೂ ಅವಯವಗಳೂ ಅವರ ಇತರ ಭೌತಿಕ ಆಸ್ತಿಗಳೂ ಆಯುಧಗಳೂ, ರಥಗಳೂ, ಕುದುರೆಗಳೂ ಹೇಗೆ ಸಾಂಕೇತಿಕವಾದವುಗಳೆಂಬುದನ್ನು ತೋರಿಸುತ್ತದೆ.

೩. ನಮ್ಮ ಜೀವನದ (ಅಸ್ತಿತ್ವದ, ಸತ್ತೆಯ) ಎಲ್ಲಾ ಪ್ರಜ್ಞಾಸ್ತರಗಳು.

೪. ಮಿತ್ರನು ನಮ್ಮ ಉನ್ನತತರ ದಿವ್ಯಜೀವನದ ಪೂರ್ಣವೂ, ಅನಾಹುತವೂ ಆದ ಸಾಮಞ್ಜಸ್ಯಗಳನ್ನು ಸೃಜಿಸುವಾತನು.

೫. ಗತಿ ಎಂಬ ಪದವು ಈಗಲೂ ಮನುಷ್ಯನು ಇಹಲೋಕದಲ್ಲಿ ಮಾಡಿದ ಪ್ರಯತ್ನಗಳನ್ನೋ ಅವನ ನಡತೆಯನ್ನೋ ಆಧರಿಸಿ ಅವನಿಗೆ ದೊರಕುವ ಆಧ್ಯಾತ್ಮಿಕ ಯಾ ಅತಿಪಾರ್ಥಿವ ಸ್ಥಾನ ಎಂಬರ್ಥದಲ್ಲಿ ಬಳಸಲಾಗುತ್ತದೆ. ಆದರೆ ಅದು ಚಲನೆ ಯಾ ಮಾರ್ಗದ ಗುರಿ ಎಂದೂ ಆದೀತು: "ಈಗ ಕೂಡಾ ನಾನು ಮಿತ್ರನ ದಾರಿಯನ್ನು ಪಡೆದು ಆ ಮೂಲಕ ಹೋಗುವಂತಾಗಲಿ."

೬. ಅಂದರೆ-ಮಾನವರಲ್ಲಿ ವ್ಯಕ್ತವಾಗಿ ತನ್ನದೇ ಆದ ಸ್ಥಾನವಾದ ಪರಸತ್ಯಸ್ಥಳ (ಸ್ತರ)ಕ್ಕೆ ಅದು ಮನುಷ್ಯರನ್ನು ಏರಿಸಲು ಯತ್ನಿಸುತ್ತದೆ.

**ಯುವಂ ನೋ ಯೇಷು ವರುಣಕ್ಷತ್ರ ಬೃಹಚ್ಚ ಬಿಭೃತಃ ।**
**ಉರುಣೋ ವಾಜಸಾತಯೇ ಕೃತಂ ರಾಯೇ ಸ್ವಸ್ತಯೇ ॥ ೬ ॥**

೬. ಏಕೆಂದರೆ ಅವರಲ್ಲಿ ನೀವಿಬ್ಬರೂ-ಎಲೈ ವರುಣನೇ-ಸಾಮರ್ಥ್ಯವನ್ನೂ[೮] ವಿಸ್ತಾರವನ್ನೂ ನಮಗೆ ತನ್ನಿರಿ ; ನಮ್ಮ ಶ್ರೇಯೋಧಾಮಗಳನ್ನು, ಆನಂದವನ್ನು, ನಮ್ಮ ಸುಖವನ್ನು ಗೆದ್ದುಕೊಳ್ಳುವುದಕ್ಕಾಗಿ ವಿಶಾಲ ಜಗತ್ತನ್ನು ನಮ್ಮಲ್ಲಿ ರೂಪಿಸಿರಿ.

**ಉಚ್ಛಂತ್ಯಾಂ ಮೇಯಜತಾ ದೇವಕ್ಷತ್ರೇ ರುಶದ್ ಗವಿ ।**
**ಸುತ ಸೋಮಂ ನ ಹಸ್ತಿಭಿರಾ ಪಡ್ಭಿರ್ಧಾವತಂ ನರಾ ಬಿಭ್ರತಾ ವರ್ಚನಾನಸಂ ॥ ೭ ॥**

೭. ಹೇ ಯಜ್ಞ ಪ್ರಭುಗಳೇ, ಮುಂಬೆಳಗು ಹರಿವಾಗ, ಕಿರಣವು ಹೊಳೆಯುವಾಗ, ದೇವತೆಗಳ ಪ್ರಣೋದದಲ್ಲಿ ಕೈಇದ್ದ ಮನುಜರು ಹಿಂಡಿದಂತೆ[೯] ಹಿಂಡಿದ ನನ್ನ ಮದ್ಯಕ್ಕೆ, ಅದರ ಸ್ವೀಕಾರಕ್ಕಾಗಿ, ನನ್ನಡೆಗೆ-ಬೆಳಕಿನ[೧೦] ಯಾತ್ರಿಕನೆಡೆಗೆ-ಕಾಲ್ಗೊರಸುಗಳಿಂದ ನೆಲಮೆಟ್ಟುವ ನಿಮ್ಮ ಕುದುರೆಗಳನ್ನೋಡಿಸಿಕೊಂಡು ನೀವು ಬನ್ನಿರಿ.



೭. ದೇವತೆಗಳು ಸ್ವರ್ ಎಂಬುದು ಅವರ ಸ್ವಂತದ ಆಲಯವು.

೮. ಪರಸತ್ಯ ಪ್ರಜ್ಞೆಯುಳ್ಳ ಜೀವಿಯ ದಿವ್ಯ ಪ್ರಣೋದವನ್ನು ಮುಂದಿನ ಪದ್ಯದಲ್ಲಿ "ದೇವತೆಗಳ ಪ್ರಣೋದ" ಎಂದು ಹೇಳಲಾಗಿದೆ. ವಿಸ್ತಾರ=ಬೃಹತ್ ಎಂಬುದು ಪರಮಸತ್ಯ ಪರಮಋತ ಪರಮವಿಸ್ತಾರ ಎನ್ನಿಸಿದ "ವಿಶಾಲ ಪ್ರಪಂಚದ" ಯಾ ಪ್ರಜ್ಞಾಸ್ತರದ ಸತತ ವರ್ಣನೆಯಾಗಿರುತ್ತದೆ.

೯. "ಎಂಬಂತೆ" ಎಂಬುದು ಯಾವಾಗಲೂ ಮದ್ಯವೂ ಅದನ್ನು ಹಿಂಡುವುದೂ ಅಲಂಕಾರಗಳು ಮತ್ತು ಸಂಕೇತಗಳು, ಎನ್ನುವುದನ್ನು ತೋರಿಸುತ್ತದೆ.

೧೦. ಅರ್ಚನಾನಸ್=ಮಂತ್ರಸ್ಪೃಷ್ಟವಾದ ಸ್ವಾರ್ತ ಕಿರಣಲೋಕಕ್ಕೆ ಪ್ರಯಾಣಿಸುವನು ಎಂಬುದು ಅತ್ರಿಗೋತ್ರಕ್ಕೆ ಸೇರಿದ ಈ ಸೂಕ್ತಕಾರ ಋಷಿಯ ಅರ್ಥವತ್ತಾದ ಹೆಸರು.

# ಮಿತ್ರಾವರುಣರನ್ನು ಕುರಿತ ನಾಲ್ಕನೆಯ ಸೂಕ್ತವು

## V. 65

## ಪ್ರಯಾಣದ ಒಡೆಯರು

[ಸಂಕುಚಿತ ಇತಿಮಿತಿಗಳನ್ನುಳ್ಳ ನಮ್ಮ ಈಗಿನ ಅಜ್ಞಾನಮಯ ಮತ್ತು ಅಪೂರ್ಣ ಮನೋಧರ್ಮದಿಂದ ನಮ್ಮನ್ನು ಹೊರದೆಗೆದು ನಮ್ಮ ಸತ್ಯ ಪ್ರಕರ್ಷಕಾರಕರಾದ ಮಿತ್ರಾವರುಣರು ಆ ನಮ್ಮ ಅಂತರ್ಗತ ಸತ್ಯ ಸ್ವರೂಪದ ಅಪಾರ ಶ್ರೇಯೋಭಿವೃದ್ಧಿ ಸ್ತರಕ್ಕೆ-ಅರ್ಥಾತ್ - ನಮಗಾಗಿ ಅವರು ಗೆದ್ದುಕೊಂಡಿರುವ ನಮ್ಮ ನಿಜ ಅಸ್ತಿತ್ವದ ವಿಸ್ತಾರಕ್ಕೆ-ನಮ್ಮ ಪ್ರಯಾಣದಲ್ಲಿ ಮುಂಗರೆದುಕೊಂಡೊಯ್ಯಲಿ ಎಂದು ಋಷಿಯು ನಿತ್ಯ ಸಹಚರ ದೇವಾಧಿದೇವರನ್ನು ಆಹ್ವಾನಿಸುತ್ತಾನೆ.]

**ಯಶ್ಚಿಕೇತ ಸಸುಕ್ರತುರ್ ದೇವತ್ರಾ ಸ ಬ್ರವೀತು ನಃ ।**
**ವರುಣೋ ಯಸ್ಯ ದರ್ಶತೋ ಮಿತ್ರೋ ವಾ ವನತೇ ಗಿರಃ ॥ ೧ ॥**

೧. ಜ್ಞಾನೋನ್ಮುಖವಾಗಿ ಎಚ್ಚತ್ತವನು ಸಂಕಲ್ಪದಲ್ಲಿ ಪೂರ್ಣನಾಗುವನು ; ಅವನು ದೇವತೆಗಳ ನಡುವೆ ನಮ್ಮ ಪರವಾಗಿ ಮಾತಾಡಲಿ ; ಅವನ ಮಾತಿನಲ್ಲಿ ಸದರ್ಶನ ವರುಣನೂ ಮಿತ್ರನೂ ಸಂತೋಷ ಪಡಲಿ.

**ತಾ ಹಿ ಶ್ರೇಷ್ಠ ವರ್ಚಸಾ ರಾಜಾನಾ ದೀರ್ಘ ಶ್ರುತ್ತಮಾ ।**
**ತಾ ಸತ್ಪತೀ ಋತಾ ವೃಧ ಋತಾವಾನಾ ಜನೇ ಜನೇ ॥ ೨ ॥**

೨. ಆ ಅರಸರು ಬೆಳಕಿನಲ್ಲಿ ಅತ್ಯಂತ ವೈಭವಶಾಲಿಗಳು ಮತ್ತು ಕೇಳ್ಮೆಯಲ್ಲಿ[೧] ಅತ್ಯಂತ ದೂರ ಶ್ರವಣ ಶಕ್ತರು. ಅವರು ಎಲ್ಲ ಪ್ರಾಣಿಗಳಲ್ಲೂ ಅಸ್ತಿತ್ವದ ಒಡೆಯರು ಮತ್ತು ಪರಮಸತ್ಯವು ಅವರದೇ ಆದುದರಿಂದ ಅವರು ನಮ್ಮಲ್ಲಿರುವ ಪರಮಸತ್ಯದ ಪೋಷಕರಾಗಿದ್ದಾರೆ.

**ತಾ ವಾಮಿಯಾನೋಽವಸೇ ಪೂರ್ವಾ ಉಪ ಬ್ರುವೇಸಚಾ**
**ಸ್ವಶ್ವಾಸಃ ಸು ಚೇತುನಾ ವಾಜಾಂ ಅಭಿ ಪ್ರ ದಾವನೇ ॥ ೩ ॥**

---

೧. ಅವರಿಗೆ ದಿವ್ಯದೃಷ್ಟಿ ದಿವ್ಯ ಶ್ರವಣಶಕ್ತಿಗಳಿವೆ - ಅವುಗಳಿಂದ ಅವರು ದಿವ್ಯಜ್ಯೋತಿಯನ್ನು ನೋಡುತ್ತಾರೆ ಮತ್ತು ದಿವ್ಯ ಮಂತ್ರವನ್ನು ಕೇಳುತ್ತಾರೆ.

೩. ದಾರಿಯಲ್ಲಿ ಹೋಗುತ್ತಾ ನಾನು ಆದ್ಯಪುರಾಣ ಪುರುಷರಾದ ಉಕ್ತ ದೇವತಾದ್ವಯರನ್ನು ಆಮಂತ್ರಿಸುತ್ತೇನೆ. ಅನ್ಯೂನಗುಣವುಳ್ಳ ಕುದುರೆಗಳೊಡನೆ[೧] ನಾವು ಪಯಣಿಸುತ್ತಿರುವಾಗ ಜ್ಞಾನದಿಂದ ಪೂರ್ಣರಾದ ಅವರನ್ನು ಶ್ರೇಯೋದಾನಕ್ಕಾಗಿ ಕರೆವೆವು.

**ಮಿತ್ರೋ ಅಂಹೋಶ್ಚಿದಾದುರು ಕ್ಷಯಾಯಗಾತುಂ ವನತೇ ।**
**ಮಿತ್ರಸ್ಯ ಹಿ ಪ್ರತೂರ್ವತಃ ಸುಮತಿರಸ್ತಿ ವಿಧತಃ ॥ ೪ ॥**

೪. ನಮ್ಮ ಸಂಕುಚಿತ ಸತ್ತೆಯಿಂದ ಕೂಡಾ ಮಿತ್ರನು ನಮಗಾಗಿ ವಿಸ್ತಾರವನ್ನು ಗೆಲ್ಲುತ್ತಾನೆ. ನಮ್ಮ ಮನೆಯತ್ತಣ ದಾರಿಯನ್ನವನು ಗೆದ್ದುಕೊಡುತ್ತಾನೆ. ಏಕೆಂದರೆ ಪೂರ್ಣಮನವು[೨] ಮಿತ್ರನದು-ಎಲ್ಲವನ್ನೂ ಅವನು ಸಮಶ್ರುತಿಗೊಳಿಸಿದ್ದರಿಂದ ಮತ್ತು ಧ್ಯೇಯದತ್ತ ವೇಗವಾಗಿ ಧಾವಿಸುತ್ತಿರುವುದರಿಂದ.

**ವಯಂ ಮಿತ್ರಸ್ಯಾವಸಿ ಸ್ಯಾಮ ಸಪ್ರಥಸ್ತಮೇ ।**
**ಅನೇಹ ಸಸ್ತ್ಯೋದಯಃ ಸತ್ರಾ ವರುಣ ಶೇಷಸಃ ॥ ೫ ॥**

೫. ನಮಗೆ ಪೂರ್ಣಾಯಾಮವನ್ನೀವ ಮಿತ್ರೋತ್ಕರ್ಷದಲ್ಲಿ ನಾವು ನೆಲೆ ನಿಲ್ಲೋಣ. ನಿನ್ನಿಂತ ಪೋಷಿತರಾದ ಮತ್ತು ವೈಶಾಲ್ಯಾಧೀಶ ಸುತರಾದ ನಾವು ಆಗ ಅನಾಹತರೂ ನಿಷ್ಪಾಪರೂ ಆಗುವೆವು.

**ಯುವಂ ಮಿತ್ರೇಮಂ ಜನಂ ಯತತಯಃ ಸಂಚನಯಥಃ ।**
**ಮಾ ಮಘೋನಃ ಪರಿಖ್ಯತಂ ಮೋ ಅಸ್ಮಾಕಮೃಷೀಣಾಂ ಗೋಪೀಥೇನ ಉರುಷ್ಯತಂ ॥ ೬ ॥**

೬. ಓ ವರುಣಾ, ನೀವಿಬ್ಬರೂ ನಿಮ್ಮ ದಾರಿಯಲ್ಲಿ ಮನುಷ್ಯ ಜಂತು ಹೋಗುವಂತೆ ಮಾಡುತ್ತೀರಿ - ನೀವು ಅವರನ್ನು ಸಂಪೂರ್ಣವಾಗಿ ಒಯ್ಯುತ್ತೀರಿ. ನಮ್ಮ ಶ್ರೇಯಃ ಪತಿಗಳ ಹಾಗೂ ನಮ್ಮ ಸತ್ಯ ದ್ರಷ್ಟಾರರ ಸುತ್ತಲೂ ನಿಮ್ಮ ಬೇಲಿಯನ್ನು ಹಾಕದಿರಿ. ನಮ್ಮ ಜ್ಯೋತಿಷ್ಠಾನದಲ್ಲಿ[೪] ನಮ್ಮನ್ನು ಕಾಯಿರಿ.



---

೧. ರೂಢ್ಯನುಸಾರ, ಉತ್ತಿಯ ಕ್ರಿಯಾಶಕ್ತಿಗಳ, ಜೀವಶಕ್ತಿಗಳ ಮತ್ತು ಇತರ ಶಕ್ತಿಗಳ ಸಂಕೇತ ಅವುಗಳಿಂದ ನಮ್ಮ ಸಂಕಲ್ಪ, ಕರ್ಮಗಳು ಮತ್ತು ಆಕಾಂಕ್ಷೆಗಳು ಮುಂಬರಿಯುತ್ತವೆ.

೨. ಅಂಹೋಃ ನರಳಿಕೆ-ದುಃಖಗಳಿಂದ ತುಂಬಿದ ನಮ್ಮ ಪ್ರಮಿತಮನೋಧರ್ಮದ ಸಂಕುಚಿತ ಅಪ್ರಬುದ್ಧ ಸ್ಥಿತಿಯು. ಸುಮತಿ = ವಿಸ್ತಾರಕ್ಕೆ ನಮ್ಮನ್ನೊಯ್ಯುವ ಮಿತ್ರಾನುಗ್ರಹವು.

೪. ಗೋ=ಬೆಳಕು ಯಾ ದನ=ಬೆಳಕಿನ ತಾಯಿಯ ಬೆಳೆ ಯಾ ಹಾಲು.

# ಮಿತ್ರಾವರುಣರನ್ನು ಕುರಿತ ಐದನೆಯ ಸೂಕ್ತವು

## V. 66

## ಸ್ವರಾಜ್ಯದಾತಾರರು

[ವರುಣನು ಪರಮಸತ್ಯದ ಅತ್ಯಂತ ವಿಸ್ತಾರ ಸ್ವರೂಪನು ಮತ್ತು ಮಿತ್ರನು ಪ್ರಿಯತಮನೂ ಅದರ ಸಮಶ್ರುತಿಗಳನ್ನೂ ಆನಂದವನ್ನೂ ಅಧಿಕರಿಸುವ ಮಹಾದೇವನು. ನಮಗಾಗಿ ಈ ಇಬ್ಬರೂ ನಮ್ಮ ಅಪೂರ್ಣ ಮಾನುಷ ಪ್ರಕೃತಿಯನ್ನು ತಮ್ಮ ದಿವ್ಯ ಕಾರ್ಯರೂಪಗಳಿಗನುಗುಣವಾಗಿ ಬದಲಾಯಿಸಿ ನಮ್ಮ ನಿಜವೂ ಅನಂತವೂ ಆದ ಅಸ್ತಿತ್ವಕ್ಕೆ ತರಲು ಬೇಕಾದ ಅದರ ಪೂರ್ಣ ಪ್ರಣೋದವನ್ನು ಗೆದ್ದುಕೊಡುವವರು. ಆದುದರಿಂದ ಋಷಿಯು ಆ ಮಿತ್ರಾವರುಣರನ್ನು ಆಮಂತ್ರಿಸುತ್ತಾನೆ. ಆಗ ಪರಮಸತ್ಯದ ಸೌರ ಸ್ವರ್ಗವು ನಮ್ಮಲ್ಲಿ ಪ್ರಕಟವಾಗುತ್ತದೆ ; ಆ ಸ್ವರ್ಗದಲ್ಲಿ ಅಗಲವಾದ ಪ್ರಕಾಶಮಯ ಹುಲ್ಲುಗಾವಲು-ಗಳಿರುತ್ತವೆ. ಆ ಪ್ರಕಾಶ ಕಿರಣಗಳು ಗುಂಪುಗುಂಪಾಗಿರುತ್ತವೆ. ಆ ಹುಲ್ಲುಗಾವಲು ನಮ್ಮ ರಥಪ್ರಯಾಣ ಕ್ಷೇತ್ರವಾಗುತ್ತದೆ. ಋಷಿಗಳ ಉದಾತ್ತ ವಿಚಾರಗಳೂ ಅವರ ಶುದ್ಧೀಕೃತ ಸೂಕ್ಷ್ಮಾವಲೋಕನವೂ ಅವರ ಋುಟಿತಿಚರ ಸ್ಫೂರ್ತಿಗಳೂ ನಮ್ಮವುಗಳಾಗುತ್ತವೆ : ನಮ್ಮ ಭೂಮಿಯೇ ಆ ಪರಮವಿಶಾಲ ಸತ್ಯದ ಪ್ರಪಂಚವಾಗುತ್ತದೆ. ಆಗ ಪೂರ್ಣತೆವೆತ್ತ ಚಲನೆ ಆರಂಭಿಸುತ್ತದೆ-ಈ ಪಾಪ-ಸಂತಾಪಗಳ ಕತ್ತಲನ್ನು ನಾವು ದಾಟಿ ಹೋಗುತ್ತೇವೆ ; ನಾವು ಸ್ವ ಸಾಮ್ರಾಜ್ಯಕ್ಕೆ ತಲುಪುತ್ತೇವೆ - ಅದು ನಮ್ಮ ಶ್ರೀಮಂತ ಹಾಗೂ ಪರಿಪೂರ್ಣ ಅನಂತ ಸತ್ತೆಯ ಅಪಾರ ಆಸ್ತಿಯು.]

**ಆ ಚಿಕಿತಾನ ಸುಕ್ರತೂ ದೇವೌ ಮರ್ತ ರಿಶಾದಸಾ ।**
**ವರುಣಾಯ ಋತಪೇಶಸೇ ದಧೀತ ಪ್ರಯಸೇ ಮಹೇ ॥ ೧ ॥**

೧. ಜ್ಞಾನೋನ್ಮುಖವಾಗಿ ಎಚ್ಚತ್ತ ಓ ಮರ್ತ್ಯನೇ, ಆ ಇಬ್ಬರು ಮಹಾದೇವರನ್ನು ನಿನ್ನೆಡೆಗೆ ಬರುವಂತೆ ಕರೆ ; ಅವರು ಸಂಕಲ್ಪದಲ್ಲಿ ಪೂರ್ಣರು ಮತ್ತು ನಿನ್ನ ಹಗೆಗಳನ್ನು ನಾಶ ಮಾಡುವವರು. ನೀನು ಪರಮಸತ್ಯರೂಪನಾದ ವರುಣನತ್ತ ಹಾಗೂ ಮಹಾನಂದನತ್ತ[೧] ನಿನ್ನ ಆಲೋಚನೆಯನ್ನು ತಿರುಗಿಸು.

---

೧. ಸತ್ಯಸ್ವರದ ಮಹಾನಂದದ ಸ್ಥಾಪನೆಯಿಂದ ಮಿತ್ರನೀವ ತೃಪ್ತಿಯು. ಅನಂತಗಳ (ಆನಂದತ್ಯಗಳ) ವರುಣನು ವಿಶಾಲ ಆಕೃತಿಯನ್ನು ಕೊಡುತ್ತಾನೆ ; ಸಮಶ್ರುತಿಗಳ ಮಿತ್ರನು ಪರಮಸತ್ಯದ ಸಂಪೂರ್ಣ ಸಾಮರ್ಥ್ಯ ಸ್ವರೂಪದ ಕ್ರಿಯಾಶಕ್ತಿಗಳ ಪೂರ್ಣಾನಂದವನ್ನು ಕೊಡುತ್ತಾನೆ.

**ತಾ ಹಿ ಕ್ಷತ್ರಮ ವಿಹ್ರ ತಂ ಸಮ್ಯಗ ಸುರ್ಯಮಾಶಾತೇ ।**
**ಅಧ ವ್ರತೇಗವ ಮಾನುಷಂ ಸ್ವರ್ಣ ಧಾಯಿ ದರ್ಶತಂ ॥ ೨ ॥**

೨. ಏಕೆಂದರೆ ಅವಿರೂಪಿತ ಪ್ರಣೋದವನ್ನೂ ಇಡೀ ಸಾಮರ್ಥ್ಯವನ್ನೂ ಹೊಂದುವವರವರು. ಆಗ ನಿನ್ನ ಮಾನವ ಕುಲವು ಈ ದೇವತೆಗಳ ಸೃಷ್ಟಿಗಳಂತೆ ಆಗುತ್ತದೆ ; ಅದು ಬೆಳಕಿನ[೧] ದೃಶ್ಯ ಸ್ವರ್ಗವು ನಿನ್ನಲ್ಲಿ ಪ್ರತಿಷ್ಠಾಪಿತವಾದಂತಾಗುತ್ತದೆ.

**ತಾ ವಾ ಮೇಷೇ ರಥಾನಾ ಮುರ್ವೀಂ ಗವ್ಯೂತಿ ಮೇಷಾಂ ।**
**ರಾತಹವ್ಯಸ್ಯ ಸುಷ್ಟುತಿಂ ದಧೃಕ್ ಸ್ತೋಮೈರ್ಮನಾ ಮಹೇ ॥ ೩ ॥**

೩. ಆದುದರಿಂದ, ಓ ದೇವರುಗಳೇ, ಈ ರಥಗಳನ್ನೋಡಿಸಲು ನಿಮ್ಮ ಗೋವ್ರಜಗಳ ವಿಶಾಲ ಹುಲ್ಲುಗಾವಲನ್ನು ನಾನು ಬಯಸುತ್ತೇನೆ. ನಮ್ಮ ಉದಾರ ಆಹುತಿಗಳನ್ನು ಸ್ವೀಕರಿಸಿದಾಗ ಮಹಾದೇವನು ಪೂರ್ಣ ದೃಢೀಕರಣವನ್ನು ನಮ್ಮ ಮನಗಳು ಬಲಾತ್ಕಾರದಿಂದ ನಮ್ಮ ಸೂಕ್ತಗಳ ಮೂಲಕ ಹಿಡಿದುಕೊಳ್ಳುತ್ತವೆ.

**ಅಧಾ ಹಿ ಕಾವ್ಯಾ ಯುವಂ ದಕ್ಷಸ್ಯ ಪೂರ್ಭಿರದ್ಭುತಾಃ ।**
**ನಿ ಕೇತುನಾ ಜನಾನಾಂ ಚಿಕೇಥೇ ಪೂತದಕ್ಷಸಾ ॥ ೪ ॥**

೪. ನಿಜವಾಗಿ, ಓ ಲೋಕೋತ್ತರ ದೇವತೆಗಳೇ, ಆಗ ಸ್ಫೂರ್ತ ಸೂಕ್ಷ್ಮಾವಲೋಕನದ ಪೂರ್ಣ ಮಹಾಪೂರಗಳಿಂದ ದ್ರಷ್ಟ ವಿವೇಕವನ್ನು ನೀವು ಗೆದ್ದುಕೊಳ್ಳುವಿರಿ. ಯಾವುದರಲ್ಲಿ ತೀರ್ಪು ಶುದ್ಧೀಕೃತವಾಗುವುದೋ ಆ ಪ್ರತ್ಯಕ್ಷದಲ್ಲಿ ಈ ಮನುಷ್ಯ ಜೀವಿಗಳಿಗಾಗಿ ನೀವು ಜ್ಞಾನವನ್ನು ಪ್ರತ್ಯಕ್ಷೀಕರಿಸಿಕೊಳ್ಳುತ್ತೀರಿ.

**ತದೃತಂ ಪೃಥಿವಿ ಬೃಹಚ್ಛ್ರವ ಏಷ ಋಷೀ ಣಾಂ ।**
**ಜ್ರಯ ಸಾನಾ ವರಂ ಪೃಥ್ವತಿ ಕ್ಷರಂತಿ ಯಾಮಭಿಃ ॥ ೫ ॥**

೫. ಹೇ ವಿಶಾಲ ಪೃಥ್ವಿಯೇ, ಹೇ ವೈಶಾಲ್ಯನೇ, ಋಷಿಗಳ ಸ್ಫೂರ್ತಜ್ಞಾನದ ·ಚಲನೆಯ ಪರಸತ್ಯನೇ ! ನೀವಿಬ್ಬರೂ ಪೂರ್ಣ ಶಕ್ತಿಯನ್ನು ಬಳಸಿ ಧಾವಿಸುವಂತೆ ಮಾಡಿರಿ - ನಮ್ಮ ರಥಗಳು ತಮ್ಮ ಪ್ರಯಾಣಗಳಲ್ಲಿ ಇಹದಾಚೆಗೆ[೨] ಧಾರಾಕಾರವಾಗಿ ದಾಟಿಹೋಗಲಿ.

**ಆ ಯದ್ವಾಮೀಯ ಚಕ್ಷಸಾ ಮಿತ್ರವಯಂ ಚ ಸೂರಯಃ ।**
**ವ್ಯಚಿಷ್ಠೇ ಬಹುಪಾಯ್ಯೇ ಯತೇಮಹಿ ಸ್ವರಾಜ್ಯೇ ॥ ೬ ॥**

---

೧. ಅಥವಾ "ದರ್ಶನದ ಸ್ವರ್" = ಪರಮಸತ್ಯದ ಪೂರ್ಣದರ್ಶನ ದೊರೆವ ಪ್ರಕಾಶ ಪ್ರಪಂಚ.

೨. ಕತ್ತಲು - ಹಗೆಗಳಾಚೆಗೆ, ಕೆಳಬಾಳಿನ ದುಃಖ-ದೌರ್ಜನ್ಯಗಳಿಂದಾಚೆಗೆ.

೬. ಓ ಮಿತ್ರ, ನಿನಗೆ ದೂರ ಜಲಯಾನದ ದರ್ಶನವಾದಾಗ ಮತ್ತು ನಾವು ಸ್ಫೂರ್ತಪ್ರಬುದ್ಧ ಋಷಿಗಳಾದಾಗ, ನಮ್ಮ ಪ್ರಯಾಣ ಪ್ರಯತ್ನದಲ್ಲಿ ವಿಶಾಲವಾಗಿ ಹರಹಿರುವ (ಹಬ್ಬಿರುವ), ತೆರೆದಿರುವ ಮತ್ತು ಅದರ ಅಸಂಖ್ಯಾತ ಪದಾರ್ಥಗಳನ್ನು ನಿಯಂತ್ರಿಸುತ್ತಿರುವ ಒಂದು ಸ್ವ-ರಾಜ್ಯಕ್ಕೆ[೪] ಹೋಗಿ ನಾವು ಇಳಿಯುವಂತಾಗಲಿ.



೪. ಸ್ವರಾಜ್ಯ=ಸ್ವಾರಾಜ್ಯ ಮತ್ತು ಸಾಮ್ರಾಜ್ಯ ಅಂತರಬಹಿಶ್ಚ ಪೂರ್ಣವಾದ ಸಾಮ್ರಾಜ್ಯ- ನಮ್ಮ ಒಳ ಇರವಿನ ಮೇಲಿನ ಪ್ರಭುತ್ವವು ಮತ್ತು ನಮ್ಮ ಆವರಣ ಹಾಗೂ ಪರಿಸ್ಥಿತಿಗಳ ಮೇಲಿನ ಒಡೆಯತನ. ಇದೇ ವೈದಿಕ ಋಷಿಗಳ ಪುರುಷಾರ್ಥ, ಧ್ಯೇಯ - ಇದು ನಮ್ಮ ಆಧ್ಯಾತ್ಮಿಕ ಪ್ರಜ್ಞಾಸ್ತರದ ಇರವಿನ ಮೇಲಿರುವ ಅತಿಮಾನಸ ಅನಂತ ಧಾಮಗಳು - ನಮ್ಮ ಸತ್ತೆಯ ತೇಜೋಮಯ ಸತ್ಯವು - ನಮ್ಮ ಮರ್ತ್ಯ ಮನೋಧರ್ಮವನ್ನು ದಾಟಿಹೋದ ಮೇಲೆ ಮಾತ್ರ ಇದು ಲಭ್ಯವು.

# ಮಿತ್ರಾವರುಣರನ್ನು ಕುರಿತ ಅರನೆಯ ಸೂಕ್ತವು

## V. 67

## ಯಮಳ ಬೆಂಬಲಿಗರು ಮತ್ತು ಪಾಲಕರು

[ಅತಿಮಾನಸ ಸತ್ತೆಯ ವೈಶಾಲ್ಯವನ್ನು ಮಿತ್ರಾವರುಣರು ಪೂರ್ಣಗೊಳಿಸುತ್ತಾರೆ. ಆ ಸತ್ತೆಯ ವಿಶಾಲೀಕರಣವೇ ಯಜ್ಞದ ಉದ್ದೇಶವಾಗಿದೆ ; ಅವರದರ ಪ್ರಣೋದದ ಪೂರ್ಣ ಸಮೃದ್ಧಿಯನ್ನುಳ್ಳವರಾಗಿದ್ದಾರೆ. ಆ ತೇಜೋಮಯ ಮೂಲಗೃಹವನ್ನು ಅವರು ತಲುಪಿದ ಕೂಡಲೇ ತನ್ನ ಪ್ರಶಾಂತಿಯನ್ನೂ ಪರಮಸುಖವನ್ನೂ ಯಜ್ಞಕರ್ಮ ಮಗ್ನರಾದ ಕಾಯಕ ಮಾನವರಿಗೆ ಕೊಡುವರು. ಅದನ್ನು ತಲುಪುವ ಮಾರ್ಗದಲ್ಲಿ ಮರ್ತ್ಯನ ಅಮರ್ತ್ಯತಾಸಿದ್ಧಿಗೆ ಅಡ್ಡವಾಗಿ ನಿಲ್ಲುವ ಆಧ್ಯಾತ್ಮಿಕ ಶತ್ರುಗಳನ್ನು ನಿಗ್ರಹಿಸಿ ಮರ್ತ್ಯನನ್ನು ರಕ್ಷಿಸುವರು. ಏಕೆಂದರೆ, ಅವರು ತಮ್ಮ ಉನ್ನತತರ ಕರ್ಮಗಳಿಗೆ, ದೃಢವಾಗಿ ಬದ್ಧರಾಗಿರುತ್ತಾರೆ. ಆ ಕರ್ಮಗಳು ಅವರು ದೃಢವಾಗಿ ಕುಳಿತಿರುವ ಉಚ್ಚತರ ಪ್ರಜ್ಞಾಸ್ತರಪೀಠಗಳಿಗೆ ಸೇರಿದ್ದಾಗಿರುತ್ತವೆ ಮತ್ತು ಆ ಪೀಠಗಳಿಗೇ ಮಾನವನು ತನ್ನ ಊರ್ಧ್ವಗಮನದಲ್ಲಿ ಏರುತ್ತಾನೆ. ವೈಶ್ವ ದೇವರೂ ಸರ್ವಜ್ಞರೂ ಆದ ಮಿತ್ರಾವರುಣರು ಅಹಂಕಾರ ಮತ್ತು ಪರಿಸೀಮನಕಾರಿ ಅಜ್ಞಾನಗಳ ಪ್ರಣೋದಗಳನ್ನು (ಸೇನೆಗಳನ್ನು) ನಾಶ ಮಾಡುತ್ತಾರೆ. ತಮ್ಮಿರವಿನಲ್ಲಿ ನಿಜ ಸ್ವರೂಪರಾದ ಅವರು ಪ್ರತಿಯೊಬ್ಬ ವೈಯಕ್ತಿಕ ಜೀವಿಯಲ್ಲೂ ಇರುವ ಪರಸತ್ಯವನ್ನು ಮುಟ್ಟುವ ಮತ್ತು ಅದರ ಮೇಲೆ ಪ್ರಭುತ್ವ ಪಡೆದಿರುವ ಶಕ್ತಿಗಳು. ಅವರು ಪ್ರಯಾಣದ ನೇತಾರರೂ ಯುದ್ಧದ ನಾಯಕರೂ ಆಗಿರುವುದರಿಂದ ಸಂಕುಚಿತವೂ ದುಃಖತಪ್ತವೂ ಆದ ಮರ್ತ್ಯತೆಯಿಂದ ಕೂಡ ತಮ್ಮ ಉನ್ನತತರ ಪ್ರಜ್ಞೆಯ ವಿಸ್ತಾರವನ್ನು ಸೃಜಿಸುತ್ತಾರೆ. ಅತ್ರಿಋಷಿಗಳಲ್ಲಿಯ ವಿಚಾರವು ಬಯಸುವುದು ಆ ವಿಸ್ತಾರವನ್ನೇ ; ಮತ್ತು ಅದು ಮಿತ್ರನನ್ನು ಅಭಿಜ್ಞಾನಿಸುವುದರ ಮೂಲಕ ಹಾಗೂ ವರುಣ-ಅರ್ಯಮರನ್ನು ದೃಢವಾಗಿ ಗುರುತಿಸುವುದರ ಮೂಲಕ ಮಾನವಾತ್ಮವು ವಾಸಿಸಿರುವ "ಕಾಯಗಳಲ್ಲಿ" ಆ ವಿಸ್ತಾರವು ಅನ್ವರ್ಥವಾಗುವುದು.]

**ಬಳಿತ್ಥಾ ದೇವ ನಿಷ್ಕೃತ ಮಾದಿತ್ಯಾ ಯಜತಂ ಬೃಹತ್ ।**
**ವರುಣ ಮಿತ್ರಾರ್ಯಮನ್ವರ್ಷಿಷ್ಠ ಕ್ಷತ್ರ ಮಾಶಾಥೇ ॥ ೧ ॥**

೧. ಹೇ ದೇವತಾ ಪ್ರಮುಖರೇ, ಸತ್ಯವಾಗಿ ನೀವಿಬ್ಬರೂ ಅನಂತಮಾತೆಯ ಪುತ್ರರು. ಸರಿಯಾಗಿ (ನ್ಯಾಯವಾಗಿ, ಋತಾನುಸಾರವಾಗಿ) ನಿಮ್ಮಿಂದ ನಾವು ಮಾಡುವ ಯಜ್ಞದ ಉದ್ದೇಶವನ್ನು ಪೂರೈಸಲು ದಿವ್ಯವಿಸ್ತಾರವು ಪೂರ್ಣೀಕರಿಸಲ್ಪಟ್ಟಿದೆ. ಹೇ ವರುಣ-ಮಿತ್ರ-ಅರ್ಯಮರೇ, ನಿಮ್ಮ ಹತ್ತಿರ ಅದರ ಅಮೇಯ ಪ್ರಣೋದವಿದೆ.

**ಆ ಯದ್ಯೋನಿಂ ಹಿರಣ್ಯಯಂ ವರುಣ ಮಿತ್ರ ಸದಥಃ ।**
**ಧರ್ತಾರಾ ಚರ್ಷಣೀನಾಂ ಯಂತಂ ಸುಮ್ನಂ ರಿಶಾದಸಾ ॥ ೨ ॥**

೨. ಓ ಮಿತ್ರಾ, ಓ ವರುಣಾ, ನೀವು ಬಂಗಾರದಂತೆ ಬೆಳಗುವ ನಿಮ್ಮ ಮೂಲಮನೆಯನ್ನು ಹೊಕ್ಕಾಗ ಮನುಜರನ್ನು ಅವರ ಕಾಯಕದಲ್ಲಿ ಬೆಂಬಲಿಸುವರೇ, ಶತ್ರುಘ್ನರೇ, ಅವರಿಗಾಗಿ ಆನಂದವನ್ನು ಮುಟ್ಟುವಿರಿ (ಸೇರುವಿರಿ).

**ವಿಶ್ವೇ ಹಿ ವಿಶ್ವವೇದಸೋ ವರುಣೋ ಮಿತ್ರೋ ಅರ್ಯಮಾ ।**
**ವ್ರತಾ ಪದೇವ ಸಶ್ಚಿರೇ ಪಾಂತಿ ಮರ್ತ್ಯಂ ರಿಷಃ ॥ ೩ ॥**

೩. ವರುಣ-ಮಿತ್ರ-ಅರ್ಯಮರು ವಿಶ್ವಜನೀನರೂ ಸರ್ವಜ್ಞರೂ ಆಗಿದ್ದಾರೆ ; ಅವರು ತಮ್ಮ ಕರ್ಮವಿಧಿಗಳಿಗೆ ಗಟ್ಟಿಯಾಗಿ ಅಂಟಿಕೊಂಡಿರುತ್ತಾರೆ. ಅವರು ಬಂದು ಕೂತುಕೊಳ್ಳುವ ಆಸನಗಳಲ್ಲಿ ಹಾಗೇ ಅವರು ಅಲ್ಲಾಡದೆ ಕುಳಿತಿರುತ್ತಾರೆ ಮತ್ತು ಮರ್ತ್ಯನಾದ ಮಾನವನನ್ನು ಅವನ ಶತ್ರುಗಳಿಂದ ರಕ್ಷಿಸುತ್ತಾರೆ.

**ತೇ ಹಿ ಸತ್ಯಾ ಋತಸ್ಪೃಶ ಋತಾವಾನೋ ಜನೇ ಜನೇ ।**
**ಸುನೀಥಾಸಃ ಸುದಾನವೋಽಂಹೋಶ್ಚಿದುರು ಚಕ್ರಯಃ ॥ ೪ ॥**

೪. ಅವರು ತಮ್ಮ ಸತ್ತೆಯಲ್ಲಿ ಸತ್ಯವಾದವರಾಗಿರುವುದರಿಂದ ಅವರು ಪರಸತ್ಯವನ್ನು ಮುಟ್ಟುತ್ತಾರೆ (ಸ್ಪರ್ಶಿಸುತ್ತಾರೆ) ಮತ್ತು ಆ ಪರಸತ್ಯವನ್ನು ಪ್ರತಿಪ್ರಾಣಿಯಲ್ಲೂ ಹಿಡಿದಿರುತ್ತಾರೆ. ಪ್ರಯಾಣದ ಪರಿಪೂರ್ಣ ನಾಯಕರಾದ ಅವರು, ಯುದ್ಧಕ್ಕೆ ತಕ್ಕ ಪರಿಪೂರ್ಣ ಪ್ರಣೋದದಿಂದ, ಈ ಸಂಕುಚಿತ ಅಸ್ತಿತ್ವದಿಂದಲೂ ವೈಶಾಲ್ಯವನ್ನು ನಿರ್ಮಿಸುತ್ತಾರೆ.

**ಕೋನುವಾಂ ಮಿತ್ರಾಸ್ತುತೋ ವರುಣೋ ವಾ ತನೂನಾಂ ।**
**ತತ್ಸುವಾ ಮೇಷತೇ ಮತಿರತ್ರಿಭ್ಯ ಏಷತೇ ಮತಿಃ ॥ ೫ ॥**

೫. ಹೇ ಮಿತ್ರ, ನಿಮ್ಮಲ್ಲಿ ಯಾರು ದೃಢೀಕೃತರಾಗಿಲ್ಲ ನಮ್ಮ ಶರೀರಗಳಲ್ಲಿ[1]? ನಮ್ಮ ವಿಚಾರವು ಸಂಪೂರ್ಣವಾಗಿ ನಿನ್ನಿಂದ ಬಯಸುತ್ತದೆ ; ನಮ್ಮ ವಿಚಾರವು ಅದನ್ನು ಬಯಸುವುದು ಭೋಕ್ತೃಗಳಿಗಾಗಿ.[2]



೧. ಭೌತಿಕ ಶರೀರ ಮಾತ್ರವಲ್ಲ - ಅದರಲ್ಲಿ ಜೀವಾತ್ಮನು ಪಂಚಕೋಶಗಳಲ್ಲಿ ಅಥವಾ ಪಂಚಶರೀರಗಳಲ್ಲಿ ವಾಸಿಸುತ್ತಾನೆ.

೨. ಅತ್ರಿಗಳು-ಅಕ್ಷರಶಃ "ಅತ್ತೃ" ಎಂದರೆ ತಿನ್ನುವವನೆಂದರ್ಥ - ಈ ಪದಕ್ಕೆ ಪ್ರಯಾಣಿಕರೆಂದೂ ಅರ್ಥವಾಗಬಹುದು ; ಅತ್ತಾ, ಅತ್ತಾದೌ, ಅತ್ತಾದಃ. 'ಅತ್ರ' ಎಂದರೆ ಆಹಾರ (X.9.2.R.V.) ಆಹಾರಾರ್ಥಕಧಾತು "ಅದ್" ; ಪ್ರಯಾಣಾರ್ಥಕಧಾತು "ಅತ್".

# ಮಿತ್ರಾವರುಣರನ್ನು ಕುರಿತ ಏಳನೆಯ ಸೂಕ್ತವು

## V. 68

## ಮಹಾಪ್ರಣೋದದ ಒಡೆಯರು

[ಪರಸತ್ಯದ ಯುದ್ಧ ಪ್ರಣೋದವನ್ನು ತಾಳಿದವರು ಅವರಾದುದರಿಂದ ಮಿತ್ರಾವರುಣರು ಆ ಸತ್ಯದ ವೈಶಾಲ್ಯದತ್ತ ನಮ್ಮನ್ನು ಕರೆದೊಯ್ಯುತ್ತಾರೆ. ಆ ಪ್ರಣೋದದಿಂದ ಅವರು ಎಲ್ಲರನ್ನೂ ಆಳುತ್ತಾರೆ, ಸಮ್ರಾಜರಾಗಿ ಆಳುತ್ತಾರೆ, ಆ ಸತ್ಯದ ಸ್ಪಷ್ಟತೆಗಳನ್ನು ಒಳಗೊಳ್ಳುತ್ತಾರೆ. ಎಲ್ಲ ದೇವತೆಗಳಲ್ಲೂ ಅವರ ಶಕ್ತಿಗಳು ಪ್ರಕಟವಾಗುತ್ತವೆ. ಆದುದರಿಂದ ಅವರು ಭೂಮಿ-ಸ್ವರ್ಗಗಳಲ್ಲಿ ಪರಸತ್ಯದ ಮಹಾ ಸುಖ-ಸಂಪತ್ತುಗಳನ್ನು ಮಾನವ ಪ್ರಭುತ್ವಕ್ಕೆ ಒಳಪಡಿಸುವು-ದಕ್ಕೋಸ್ಕರ ಈ ದೇವತೆಗಳಲ್ಲಿ ನೆಲೆಗೊಳಿಸಬೇಕು. ಅವರು ಪರಸತ್ಯದಿಂದ ಪರಸತ್ಯವನ್ನು ತಲುಪುತ್ತಾರೆ-ಏಕೆಂದರೆ ನೇರವಾಗಿ ಜ್ಞಾನವನ್ನು ತಲುಪುವ ಪ್ರೇರಣೆಯು ಅವರ ಅದರ ಸೂಕ್ಷ್ಮಾವಲೋಕನದಲ್ಲಿರುತ್ತದೆ. ಆದುದರಿಂದ ಅವರು ಅಜ್ಞಾನದ ಅಪಾಯದಲ್ಲಿ ಜಾರದೆ ಬೆಳೆಯುತ್ತಾರೆ. ಆ ಬಲಿಷ್ಠ ಪ್ರೇರಣೆಯ ಒಡೆಯರಾದ ಅವರು ಮರ್ತ್ಯನ ಮೇಲೆ ಪ್ರಕಾಶ ಧಾರೆಯ ಮೂಲಕ ಸ್ವರ್ಗವನ್ನು ತಂದಿಳಿಸುತ್ತಾರೆ ಮತ್ತು ಸೀಮಾತೀತ ಆಕಾಶ(ವಿಸ್ತಾರ)ವನ್ನು ತಮ್ಮ ಮನೆಯನ್ನಾಗಿ ಮಾಡಿಕೊಂಡು ಅಧಿಕಾರ ನಡೆಸುತ್ತಾರೆ.]

**ಪ್ರವೋ ಮಿತ್ರಾಯಗಾಯತ ವರುಣಾಯ ವಿಪಾ ಗಿರಾ ।**
**ಮಹಿ ಕ್ಷತ್ರಾವೃತಂ ಬೃಹತ್ ॥ ೧ ॥**

೧. ಪ್ರಬೋಧಕ ಮಂತ್ರದಿಂದ ನೀವು ಮಿತ್ರಾವರುಣರನ್ನು ಕುರಿತು ಹಾಡಿರಿ ; ಏಕೆಂದರೆ, ಅವರಿಗಾ ದೊಡ್ಡ ಪ್ರಣೋದವಿದೆ, ಪರಮಸತ್ಯವು ಅವರದು - ಆ ಸತ್ಯವು ಅಸೀಮ ವೈಶಾಲ್ಯವು.

**ಸಮ್ರಾಜಾ ಯಾ ಘೃತಯೋನೀ ಮಿತ್ರಶ್ಚೋಭಾ ವರುಣ ಶ್ಚ ।**
**ದೇವಾ ದೇವೇಷು ಪ್ರಶಸ್ತಾ ॥ ೨ ॥**

೨. ಹೌದು ; ಮಿತ್ರಾವರುಣರಿಬ್ಬರೂ (ಸರ್ವಾಧೀಶ್ವರರು) ಸರ್ವಪ್ರಶಾಸಕರು, ಸ್ಪಷ್ಟತೆಯ ಮನೆಗಳು, ದೇವತೆಗಳ ಗೃಹಗಳು; ದೇವತಾಂತರ್ಗತ ಮಂತ್ರದಿಂದ ವ್ಯಕ್ತವಾದವರು.

**ತಾ ನಃ ಶಕ್ತಂ ಪಾರ್ಥಿವಸ್ಯ ಮಹೋರಾಯೋ ದಿವ್ಯಸ್ಯ ।**
**ಮಹಿ ವಾಂ ಕ್ಷತ್ರಂ ದೇವೇಷು ॥ ೩ ॥**

೩. ಆದುದರಿಂದ ಸ್ವರ್ಗಮರ್ತ್ಯಗಳ ಮಹಾಸುಖವನ್ನು[೧] ಪಡೆದುಕೊಡಲು ನಿಮ್ಮ ಸಾಮರ್ಥ್ಯವನ್ನು ಬಳಸಿರಿ. ಏಕೆಂದರೆ, ದೇವತೆಗಳಲ್ಲಿ ನಿಮ್ಮ ಪ್ರಣೋದವು ಮಹತ್ತಾದುದು.

**ಋತಮೃತೇನ ಸಪಂತೇಷಿರಂ ದಕ್ಷಮಾಶಾತೇ ।**
**ಅದ್ರುಹಾ ದೇವೌ ವರ್ಧೇತೇ ॥ ೪ ॥**

೪. ಪರಮಸತ್ಯದಿಂದ ನೀವು ಪರಮಸತ್ಯದ ಜ್ಞಾನವನ್ನು ಪಡೆಯುತ್ತೀರಿ ; ನಿಮ್ಮ ಹತ್ತಿರ ಪ್ರೇರಕ ಪ್ರಣೋದದ ನಿರ್ಣಯವಿದೆ.[೨] ಎಲೈ ದೇವರುಗಳೇ, ನೀವು ಬೆಳೆಯಿರಿ ಹಿಂಸಿಸಲು ಬರಬೇಡಿರಿ.



---

೧. ಈ ಮಹಾ ಸೌಲಭ್ಯ ಯಾ ಸುಖವು ಸತ್ಯ ಪ್ರಜ್ಞೆಯದು - ಅದು ನಮ್ಮ ಪ್ರಜ್ಞೆಯ ಉನ್ನತತರ ಸ್ತರಗಳಲ್ಲಲ್ಲದೆ, ನಮ್ಮ ಭೌತಿ ಜೀವನದಲ್ಲೂ ಅಭಿವ್ಯಕ್ತವಾದುದು.

೨. ದೇವತೆಗಳು ಹೊಂದಿರುವ ನೇರವಾದ ಪ್ರೇರಣೆ ; ಮಾನವನು ಅಜ್ಞಾನದಿಂದ ಹೊರಟು ಅಜ್ಞಾನ ಬಲದಿಂದ ಪರಮಸತ್ಯದತ್ತ ಚಲಿಸುವಾಗ ಅವನು ಅನುಸರಿಸುವುದು. ಅಸ್ಥಿರವಾದದ್ದೂ ವಕ್ರವೂ ಆದ ಚಲನೆಯನ್ನು-ಅವನಲ್ಲಿಯ ನಿರ್ಣಯವು ಅನೃತದಿಂದ ದುಃಖತಪ್ತವಾದ ತನ್ನ ಬೆಳವಣಿಗೆಯಲ್ಲಿ ಪದೇ ಪದೇ ಪಾಪನರಳಾಟಗಳಲ್ಲಿ ಮುಗ್ಗರಿಸುತ್ತದೆ. ಅವನಲ್ಲಿಯ ದೇವತೆಗಳ ಬೆಳವಣಿಗೆಯ ದೆಸೆಯಿಂದ ಅವನು ಮುಗ್ಗರಿಸದೆ ಮತ್ತು ನರಳದೆ ಪರಸತ್ಯದಿಂದ ಪರತರಸತ್ಯಕ್ಕೆ ನೇರವಾಗಿ ಹಾಗೂ ಸುಲಭವಾಗಿ ಹೋಗಲು ಶಕ್ತನಾಗುತ್ತಾನೆ.

# ಮಿತ್ರಾವರುಣರನ್ನು ಕುರಿತ ಎಂಟನೆಯ ಸೂಕ್ತವು

## V. 69

## ಜ್ಯೋತಿರ್ಮಯ ಜಗತ್ತುಗಳ ಧಾರಕರು

[ಜಗದ್ಧಾರಕರನ್ನಾಗಿ ಭಾವಿಸಿ ಋಷಿಯು ಮಿತ್ರಾವರುಣರನ್ನು ಆಹ್ವಾನಿಸುತ್ತಾನೆ. ಈ ಜ್ಯೋತಿರ್ಮಯ ಜಗತ್ತುಗಳು ವಿಶೇಷತಃ ತ್ರಿಪುಟಮಾನಸ, ತ್ರಿಪುಟಜೈವಿಕ, ತ್ರಿಪುಟಭೌತಿಕ, ಎನ್ನಿಸಿದಂಥವುಗಳಾಗಿ ತಮ್ಮ ಸತ್ಯದ ಬೆಳಕನ್ನು ಕಂಡುಕೊಳ್ಳತಕ್ಕ ಸ್ಥಳಗಳು ಮತ್ತು ಅವುಗಳ ದಿವ್ಯಧರ್ಮ(ವಿಧಿ) ಎಂಬುದನ್ನು ಅರಿತುಕೊಳ್ಳುವ ತಾಣಗಳು. ಆ ಜ್ಯೋತಿರ್ಮಯ ಜಗತ್ತುಗಳಲ್ಲಿ ಆರ್ಯ ಯೋಧನ ಬಲವು ಅಧಿಕವಾಗಿ, ಆ ಅವಿನಾಶಿ ವಿಧಿಯಲ್ಲಿ (ಕಾಯದೆಯಲ್ಲಿ) ರಕ್ಷಿತವೂ ಆಗುತ್ತದೆ. ಉಕ್ತ ಜ್ಯೋತಿರ್ಮಯ ಜಗತ್ತುಗಳಿಂದ ಸತ್ಯ ನದಿಗಳು ತಮ್ಮ ಆನಂದಫಲಿತಾಂಶದೊಡನೆ ಕೆಳಗಿಳಿದು ಬರುತ್ತವೆ. ಆ ಪ್ರತಿಯೊಂದರಲ್ಲೂ ಒಬ್ಬ ಜ್ಯೋತಿರ್ಮಯ ಪುರುಷನು ಪರತರ ಸತ್ಯದ ತ್ರಿಪುಟ ವಿಚಾರ ಪ್ರಜ್ಞೆಯ ಒಂದು ರೂಪವನ್ನು ಗರ್ಜಿಸುತ್ತಾನೆ. ಜೀವಾತ್ಮನ ಜ್ಯೋತಿರ್ಮಯ ದಿನಂಗಳನ್ನು ಹುಟ್ಟಿಸುವ ಈ ವಿಚಾರಾಭಿಜ್ಞಾತ ಪ್ರಜ್ಞೆಗಳು ಮಾನವನಲ್ಲಿ ದಿವ್ಯವಾದ ಅನಂತ ಪ್ರಜ್ಞೆಯನ್ನು ಕಂಡುಹಿಡಿದವು. ಆ ದಿವ್ಯ ಶಾಂತಿಯಲ್ಲಿ ಮತ್ತು ಆ ದಿವ್ಯ ಚಟುವಟಿಕೆಯಲ್ಲಿ ಮತ್ತು ನಮ್ಮ ಸತ್ತೆಯ ವಿಸ್ತೃತ ವೈಶ್ವತ್ರಿಕತೆಯಲ್ಲಿ ಸಮೃದ್ಧ ಸುಖವಿದೆ ಮತ್ತು ದೇವತೆಗಳ ಸರ್ಜನವಿದೆ. ಮಾನವನ ಸಾಮಾನ್ಯವಾದ ಜೈವಿಕ-ಭೌತಿಕ ಬಾಳಿನಲ್ಲಿ ದಿವ್ಯ ಕಾರ್ಯಗಳು ಕೆಟ್ಟು ಹೋಗುತ್ತವೆ ಮತ್ತು ದೇವತೆಗಳಿಂದ ಉಪಾಹಿತವಾಗುತ್ತವೆ-ಪರಿಸೀಮನ ನಿಬಂಧನೆಗಳಿಗೊಳಪಡುತ್ತವೆ. ಆದರೆ ಮಿತ್ರಾವರುಣರು ಎತ್ತಿ ಹಿಡಿದಾಗ ಯಾವ ಜಗತ್ತುಗಳಲ್ಲಿ ಈ ಎಲ್ಲವುಗಳಲ್ಲಿ ಪ್ರತಿಯೊಂದೂ ತನ್ನ ಸತ್ಯವನ್ನೂ ಶಕ್ತಿಯನ್ನು ಪಡೆಯುವುವೋ ಅಂಥ ಈ ಅಸ್ಮದಂತರ್ಗತ ಜ್ಯೋತಿರ್ಮಯ ಜಗತ್ತುಗಳು ಪೂರ್ಣತ್ವವನ್ನು ಪಡೆದು ಯಾವಾಗಲೂ ದೃಢವಾಗಿ ನೆಲೆಗೊಳ್ಳುತ್ತವೆ.]

**ತ್ರೀ ರೋಚನಾ ವರುಣ ತ್ರೀಂ ಋತ ದ್ಯೂನ್ ತ್ರೀಣಿ ಮಿತ್ರಧಾರಯತೋ ರಜಾಂಸಿ ।**
**ವಾ ವೃಧಾನಾ ವಮತಿಂ ಕ್ಷತ್ರಿಯ ಸ್ಯಾನು ವ್ರತಂ ರಕ್ಷಮಾಣಾ ವಜೂರ್ಯಂ ॥ ೧ ॥**

೧. ನೀವಿಬ್ಬರೂ ಮೂರು ಜ್ಯೋತಿರ್ಮಯ ಪ್ರಪಂಚಕ್ಕೆ ಆಧಾರವಾಗಿದ್ದೀರಿ. ಹೇ ವರುಣ, ಸ್ವರ್ಗತ್ರಯ, ಅಂತರಿಕ್ಷತ್ರಯ ಎಂಬಿವೇ ಆ ಪ್ರಪಂಚಗಳು ; ಓ ಮಿತ್ರ, ನೀನು ಯೋಧನ ಸಾಮರ್ಥ್ಯವನ್ನು ಹೆಚ್ಚಿಸುತ್ತೀಯೆ ಮತ್ತು ನಿನ್ನ ಕಾರ್ಯದ ಅವಿನಾಶಿಯಾದ ವಿಧಿ (ನಿಯಮ, ಕಾಯಿದೆ) ಎಂಬುದರಲ್ಲಿ ಅವನನ್ನು ರಕ್ಷಿಸುತ್ತೀಯೆ.

**ಇರಾವತೀರ್ವರುಣ ಧೇನವೋ ವಾಂ ಮಧು ಮದ್ವಾಂ ಸಿಂಧವೋ ಮಿತ್ರ ದುಹ್ರೇ ।**
**ತ್ರಯಸ್ತ ಸ್ಥುರ್ವೃಷಭಾಸಸ್ತಿಸೃಣಾಂ ಧಿಷಣಾನಾಂ ರೇತೋಧಾ ವಿದ್ಯುಮಂತಃ ॥ ೨ ॥**

೨. ನಿಮ್ಮನ್ನು ಸಾಕುವ ಧೇನುಗಳಿಗೆ[೧] ತಮ್ಮ ಪ್ರವಾಹಗಳಿವೆ. ಎಲ್ಲೈ ವರುಣ, ಎಲ್ಲೈ ಮಿತ್ರ, ಹೊಳೆಗಳು ತಮ್ಮ ಮಧುಮಯ ಹಾಲನ್ನು ಕರೆಯುತ್ತವೆ ; ಮೂರು ಹೊಳೆವ ಎತ್ತುಗಳು[೨] ಅಲ್ಲಿ ನಿಂತಿವೆ ಮತ್ತು ತಮ್ಮ ವೀರ್ಯವನ್ನು (ಬೀಜವನ್ನು) ಮೂರು ಮಹಾ ವಿಚಾರಗಳಲ್ಲಿ ತುಂಬುತ್ತವೆ.

**ಪ್ರಾತರ್ದೇವೀಮದಿತಿಂ ಜೋಹವೀಮಿ ಮಧ್ಯಂದಿನ ಉದಿತಾ ಸೂರ್ಯಸ್ಯ ।**
**ರಾಯೇ ಮಿತ್ರಾ ವರುಣಾ ಸರ್ವತಾತೇಳೇ ತೋಕಾಯ ತನಯಾಯ ಶಂ ಯೋಃ ॥ ೩ ॥**

೩. ಉಷಃ ಕಾಲದಲ್ಲಿ ನಾನು ದಿವ್ಯ, ಅನಂತ ಮಾತೆಯನ್ನು ಕರೆಯುತ್ತೇನೆ ; ಮಧ್ಯಾಹ್ನದಲ್ಲಿ ಮತ್ತು ಸೂರ್ಯೋದಯ ಕಾಲದಲ್ಲೂ ಆಮಂತ್ರಿಸುತ್ತೇನೆ. ಮಿತ್ರಾವರುಣರಿಂದ ನಾನು ಶಾಂತಿಯನ್ನು ಬಯಸುತ್ತೇನೆ ; ಎಲ್ಲವುದರ[೩] ನಿರ್ಮಾಣದಲ್ಲಿ ಸೌಲಭ್ಯವನ್ನೂ ಸೃಷ್ಟಿಗಾಗಿ ಹಾಗೂ ಸಂತಾನೋತ್ಪತ್ತಿಗಾಗಿ[೪] ಹಾಗೇ ಅವರ (ನೆರವನ್ನು) ಬಯಸುತ್ತೇನೆ.

**ಯಾ ಧರ್ತಾರಾ ರಜಸೋ ರೋಚನಸ್ಯೋತಾದಿತ್ಯಾ ದಿವ್ಯಾ ಪಾರ್ಥಿವಸ್ಯ ।**
**ನ ವಾಂ ದೇವಾ ಅಮೃತಾ ಆ ಮಿನಂತಿ ವ್ರತಾನಿ ಮಿತ್ರಾ ವರುಣಾ ಧ್ರುವಾಣಿ ॥ ೪ ॥**

೪. ಓ ದಿವ್ಯಾನಂತ ಪುತ್ರರಾದ ಮತ್ತು ಅಮರ್ತ್ಯ ದೇವತೆಗಳಾದ ಮಿತ್ರಾವರುಣರೇ, ಹೊಳೆವ ಅಂತರಿಕ್ಷ ಗೋಲವನ್ನೂ ಹೊಳೆವ ಭೂಗೋಲವನ್ನೂ ನೀವು ಆಧಾರವಾಗಿ ಎತ್ತಿ ಹಿಡಿದಿರುವುದರಿಂದ ಯಾವಾಗಲೂ[೫] ದೃಢವಾಗಿರುವ ನಿಮ್ಮ ಕಾರ್ಯಗಳನ್ನು ಹಾಳು ಮಾಡಬೇಡಿರಿ.



---

೧. ಧೇನವಃ = ಗಾವಃ= ಪರಸತ್ಯದ ನದಿಗಳು = ಹೊಳೆವ ದನಗಳು= ಪರಸತ್ಯದ ಬೆಳಕಿನ ಕಿರಣಗಳು.

೨. ಎತ್ತೆಂದರೆ ಪುರುಷ, ಆತ್ಮ ಯಾ ಪ್ರಜ್ಞಾಯುಕ್ತ ಜೀವಿಯು. ಧೇನುವೆಂದರೆ ಪ್ರಕೃತಿ ಯಾ ಪ್ರಜ್ಞೆಯ ಶಕ್ತಿಯು. ಮನುಷ್ಯನಲ್ಲಿಯ ಉನ್ನತತರ ಪ್ರಜ್ಞೆಯು ಸಕ್ರಿಯ, ಸರ್ಜಕ ಮತ್ತು ಸಫಲ ಎಂದಾಗುವುದಕ್ಕೋಸ್ಕರ, ಪರಮಸತ್ತೆಯ ತ್ರಿಪುಟ ಜ್ಯೋತಿರ್‌ಮಯ ಆತ್ಮದಿಂದ ತ್ರಿಪುಟ ಪ್ರಭಾಮಯ ಪ್ರಜ್ಞೆಯು ವೀರ್ಯಾದಾನ ಪಡೆಯುವುದು - ಅದರಿಂದ ಪುತ್ರ ಸ್ವರೂಪನಾದ ದೇವತೆಯ ಸೃಷ್ಟಿಯಾಗುವುದು.

೩. ಯಜ್ಞ ಕರ್ಮದಿಂದ "ವಿಸ್ತರಣೆ" ಉಂಟಾಗಿ ಯಾ ವಿಶ್ವಾತ್ಮನ ನಿರ್ಮಾಣವಾಗಿ (ಸರ್ವತಾತಿ=ವಿಶ್ವಾತ್ಮ). ಹಾಗೇ ದಿವ್ಯಾತ್ಮನ (ದೇವತಾತಿ=ದಿವ್ಯಾತ್ಮ) ಸೃಷ್ಟಿಯಾಗುತ್ತದೆ.

೪. ಪುತ್ರನ=ಮಾನವರಲ್ಲಿ ಸೃಷ್ಟವಾದ ದೇವತಾತ್ಮ, ದೇವತಾತತ್ವ - ಅವನ ಉತ್ಪತ್ತಿ.

೫. ಜೈವಿಕ ಪ್ರಜ್ಞಾಸ್ತರವೂ ಭೌತಿಕ ಪ್ರಜ್ಞಾಸ್ತರವೂ ಅಪ್ರಬುದ್ಧವಾಗಿರುವುದರಿಂದ ಅವುಗಳ ಪ್ರಜ್ಞೆಯ ಸಾಮಾನ್ಯ ಕರ್ಮಗಳು ಅಜ್ಞಾನಪೂರ್ಣವೂ ನ್ಯೂನತಾಭೂಯಿಷ್ಠವೂ ಆಗಿದ್ದು ಅವುಗಳಿಂದ ನಮ್ಮ ದಿವ್ಯಾನಂತ ಸತ್ತೆಯ ವಿಧಿಯು ಮುರಿದು ಹೋಗುತ್ತದೆ ಯಾ ಹಾಳಾಗುತ್ತದೆ. ಆ ಪ್ರಜ್ಞೆಯು ಇತಿಮಿತಿಗಳೊಡನೆ ಮತ್ತು ವಿಕಟ ವಿಕಾರಗಳೊಡನೆ ಕೆಲಸ ಮಾಡುತ್ತದೆ. ಆದರ್ಶ ಯಾ ಅತಿಮಾನಸ ಸತ್ಯಸ್ತರ ಎಂಬುದನ್ನು ಎತ್ತಿ ಹಿಡಿದ ಮೇಲೆ ಮಾತ್ರ-ನಮ್ಮಲ್ಲಿ ಮಿತ್ರಾವರುಣರು ತಮ್ಮ ಶುದ್ಧ, ವಿಸ್ತೃತ ಸಾಮರ್ಥ್ಯದಿಂದ ದೃಢಪಡಿಸಿ ನೆಲೆನಿಲ್ಲಿಸಿದಾಗ ಮಾತ್ರ - ಆ ಅತಿಮಾನಸ ಸತ್ಯ ಪ್ರಜ್ಞೆಯು ಪ್ರಾಣಾನ್ನಮಯ ಕೋಶಗಳನ್ನೂ (ಪ್ರಜ್ಞೆಯನ್ನು) ತನ್ನೊಳಗೆ, ತನ್ನ ಶಕ್ತಿ ಹಾಗೂ ಬೆಳಕುಗಳೊಳಗೆ ಎಳೆದುಕೊಂಡಾಗ ಮಾತ್ರ-ಅದು ಪೂರ್ಣವಾಗಿಯೂ ಸ್ಥಿರವಾಗಿಯೂ ಅಸ್ಖಲಿತವಾಗಿ ಯಾ ಅನ್ಯೂನವಾಗಿಯೂ ಪ್ರಕಟವಾಗುವುದು.

# ಮಿತ್ರಾವರುಣರನ್ನು ಕುರಿತ ಒಂಭತ್ತನೆಯ ಸೂಕ್ತವು

## V. 70

## ಸತ್ತಾವರ್ಧನರು ಮತ್ತು ಮೋಕ್ತಾರರು

[ಋಷಿಯು ನಮ್ಮ ಸತ್ತೆಯ ವಿಶಾಲವೂ ಅನೇಕ ಮುಖವೂ ಆದ ಸಾಕಣೆಯನ್ನು, ಅದರ ಶಕ್ತಿಗಳ ಸಂವರ್ಧನೆಯನ್ನು, ಮತ್ತು ತಮ್ಮ ಸಂಪೂರ್ಣ ಪ್ರೇರಣೆಯನ್ನು ನಮ್ಮ ಸಾಮರ್ಥ್ಯ ವರ್ಧನೆಗಾಗಿ ಮಿತ್ರಾವರುಣರು ಒದಗಿಸಬೇಕೆಂದು ಬಯಸುತ್ತಾನೆ. ಏಕೆ? ದಿವ್ಯಸ್ಥಿತಿಯ ಪೂರ್ಣ ತಳಪಾಯವು ನಮಗೆ ದೊರಕಲಿ ಎಂಬ ಉದ್ದೇಶದಿಂದ. ತನ್ನನ್ನು ರಕ್ಷಿಸಿ ವಿನಾಶಕರಿಂದ ತಪ್ಪಿಸಿ ಅವರು ಮೊದಲೇ ಬಂದು ವಿರುದ್ಧ ನಿಯಂತ್ರಣವನ್ನು ಹೇರಿ ದೇವತಾಶಕ್ತಿ ಸಂವರ್ಧನೆಯನ್ನು ಕೆಡಿಸಿ ಹಾಳುಮಾಡದಂತೆ ನಮ್ಮ (ಪಂಚಕೋಶಗಳೆಂದು ಪ್ರಸಿದ್ಧವಾದ) ವಿವಿಧ ಪ್ರಜ್ಞಾಸ್ತರಗಳನ್ನು ಉಳಿಯಗೊಡಬೇಕೆಂದು ಅಪೇಕ್ಷಿಸುತ್ತಾನೆ, ಋಷಿ.]

**ಪುರೂರುಣಾ ಚಿದ್ಧ್ಯಸ್ತ್ಯವೋ ನೂನಂ ವಾಂ ವರುಣ ।**
**ಮಿತ್ರ ವಂಸಿ ವಾಂ ಸುಮತಿಂ ॥ ೧ ॥**

೧. ನೀವು ಈಗ ನಮ್ಮ ಅಸ್ತಿತ್ವವನ್ನು ಸಾಕುತ್ತಿರುವುದು ವಿವಿಧವಾಗಿ, ಗುಣಿತಸಂಖ್ಯಾಕವಾಗಿ ಏತರಿಂದ? ಹೇ ಮಿತ್ರ, ಹೇ ವರುಣ, ಅದು ನಿಮ್ಮ (ಅನಂತಸತ್ಯಸ್ತರದ) ವಿಸ್ತಾರದಿಂದ.[೧] ನಾನು ನಿಮ್ಮ ಪೂರ್ಣತ್ವಮಯ ಮನೋಧರ್ಮದಿಂದ ಸುಖಿಯಾಗ ಬಯಸುತ್ತೇನೆ.

**ತಾ ವಾಂ ಸಮ್ಯಗದ್ರುಹ್ವಾಣೇಷಮಶ್ಯಾಮ ಧಾಯಸೇ ।**
**ವಯಂ ತೇ ರುದ್ರಾ ಸ್ಯಾಮ ॥ ೨ ॥**

೨. ಕೇಡು ಮಾಡಲೆಂದು[೨] ವಿಶ್ವಾಸಘಾತಕತನವನ್ನು ನೀವು ಮಾಡುವವರಲ್ಲ. ನಮ್ಮ (ಆಧ್ಯಾತ್ಮಿಕ) ತಳಪಾಯ ರಚನೆಗಾಗಿ ನಾವು ನಿಮ್ಮ ಪ್ರೇರಣೆಯ ಪೂರ್ಣ ಪ್ರಣೋದವನ್ನು ಪಡೆದು ಸುಖಿಗಳಾಗು-

---

೧. ಬಹುವಿಧದ ಸಂಪತ್ತಿನಿಂದ, ಆಧ್ಯಾತ್ಮಿಕ ಐಶ್ವರ್ಯದಿಂದ, ಕೂಡಿದ ಅನಂತ ಸತ್ಯಸ್ತರದ ವಿಸ್ತಾರವು. ಅದರ ಶರ್ತವೆಂದರೆ ದಿವ್ಯ ಸ್ವಭಾವಕ್ಕೆ ತಕ್ಕ "ಸುಮತಿ" ಯಾ ಮಾನವನಿಗೆ ದೇವತೆಗಳ ಅನುಗ್ರಹದಿಂದ ಬರುವ ಸದ್ಬುದ್ಧಿ=ವಿಚಾರಮನದ ಪರಿಪೂರ್ಣತೆ ಮತ್ತು ಅಂತರ್ಮಾನಸದ ಮನೋಧರ್ಮ.

೨. ದಸ್ಯುಗಳು ಮಾಡುವ ಹಾನಿಗಳು : ದಸ್ಯುಗಳು ನಮ್ಮ ಇರವನ್ನು ನಾಶಗೊಳಿಸುವವರು ಮತ್ತು ಅದರ ದಿವ್ಯ ಪ್ರಗತಿಯ ಶತ್ರುಗಳು ಅರ್ಥಾತ್ ಪ್ರಮಿತತೆ ಹಾಗೂ ಅಜ್ಞಾನಗಳ ಮಕ್ಕಳು.

ವಂತಾಗಲಿ ; ಓ ಹಿಂಸ್ರ ಯಾ ರೌದ್ರ ದೇವತೆಗಳೇ, ನಾವು ಅಂಥ ಸುಖಭೋಗಿಗಳಾಗಲಿ.

**ಪಾತಂ ನೋ ರುದ್ರಾ ಪಾಯುಭಿರುತ ತ್ರಾಯೇಥಾಂ ಸುತ್ರಾತ್ರಾ ।**
**ತುರ್ಯಾಮ ದಸ್ಯೂನ್ ತನೂಭಿಃ ॥ ೩ ॥**

೩. ಓ ರೌದ್ರರೇ[೩] ನಿಮ್ಮ ರಕ್ಷಣೆಗಳಿಂದ ರಕ್ಷಿಸಿರಿ ಮತ್ತು ಪೂರ್ಣಮುಕ್ತಿಯನ್ನಿತ್ತು ನಮ್ಮನ್ನು ವಿಮೋಚನ ಮಾಡಿರಿ. ನಮ್ಮ ಸಶರೀರತೆಯಲ್ಲಿಯೇ ವಿನಾಶಕರನ್ನೊಡೆದು ಮುನ್ನಡೆವಂತಾಗಲಿ.

**ಮಾ ಕಸ್ಯಾದ್ಭುತಕ್ರತೂ ಯಕ್ಷಂ ಭುಜೇಮಾ ತನೂಭಿಃ ।**
**ಮಾ ಶೇಷಸಾ ಮಾ ತನಸಾ ॥ ೪ ॥**

೪. ಸಂಕಲ್ಪ (ಇಚ್ಛಾ) ಶಕ್ತಿಯಲ್ಲಿ ಎಲ್ಲರನ್ನೂ ಮೀರಿದವರೇ, ನಮ್ಮ ಸಶರೀರತೆಯಲ್ಲಿ ನಾವು ಯಾವನ[೪] ಹಿಡಿತದಿಂದಲೂ ನರಳುವಂತಾಗದಿರಲಿ - ನಮ್ಮ ಸಂತಾನೋತ್ಪತ್ತಿಯಲ್ಲಾಗಲಿ, ನಮ್ಮ ಸೃಷ್ಟಿಕಾರ್ಯದಲ್ಲಾಗಲಿ ಹಾಗೆ ಪೀಡಿತರಾಗುವಂತಾಗದಿರಲಿ.



---

೩. ರುದ್ರರು = ರುದ್ರನು ರೌದ್ರ ಕರ್ಮದಿಂದಲೂ ಯುದ್ಧದಿಂದಲೂ ನಮ್ಮ ಆತ್ಮವಿಕಾಸದ ಒಡೆಯನಾದ ದೇವ ; ಅವನು ಅಂಧಕಾರ ಪುತ್ರರ ಮತ್ತು ಮಾನವನಲ್ಲಿ ಅವರು ನಿರ್ಮಿಸುವ ದೌರ್ಜನ್ಯವನ್ನು ಹೊಡೆದು ನಾಶ ಮಾಡುವವನು. ದಸ್ಯುಗಳ ವಿರುದ್ಧವಾಗಿ ನಾವು ಊರ್ಧ್ವಗತಿಯನ್ನು ಹಿಡಿದಾಗ ನಮ್ಮ ನೆರವಿಗಾಗಿ ಮಿತ್ರಾವರುಣರು ರುದ್ರತ್ವದ ಅವತಾರವನ್ನು ತಾಳುತ್ತಾರೆ.

೪. ಅಂದರೆ, ಯಾರಾದರೂ ವಿನಾಶಕರು = ಸರ್ವ ವಿನಾಶಕ ಶಕ್ತಿಗಳು.

# ಮಿತ್ರಾವರುಣರನ್ನು ಕುರಿತ ಹತ್ತನೆಯ ಸೂಕ್ತವು

## V. 71

## ಯಜ್ಞಕ್ಕೆ ಆಹ್ವಾನ

[ಶತ್ರುವಿನಾಶಕರೂ ನಮ್ಮ ಇರವಿನ ಮಹತ್ವವನ್ನು ಹೆಚ್ಚಿಸುವವರೂ ಹಾಗೇ ತಮ್ಮ ಪ್ರಭುತ್ವದಿಂದ ಹಾಗೂ ವಿವೇಕದಿಂದ ನಮ್ಮ ವಿಚಾರಕ್ಕೆ ನೆರವೀವವರೂ ಆದ ಮಿತ್ರಾವರುಣರನ್ನು ಋಷಿಯು ಸೋಮಯಾಗಕ್ಕೆ ಆಮಂತ್ರಿಸುತ್ತಾನೆ.]

**ಆ ನೋ ಗಂತಂ ರಿಶಾದಸಾ ವರುಣ ಮಿತ್ರ ಬರ್ಹಣಾ ।**
**ಉಪೇಮಂ ಚಾರುಮಧ್ವರಂ ॥ ೧ ॥**

೧. ಓ ಶತ್ರು ವಿನಾಶಕರೇ, ಮಿತ್ರಾವರುಣರೇ, ನಿಮ್ಮ ಮಾನವ ಮಹತ್ವ ಹೆಚ್ಚಿಸುವ[೧] ಶಕ್ತಿಗಳಿಂದ ಒಡಗೂಡಿ ನಮ್ಮೀ ಆಹ್ಲಾದಕರ ಯಜ್ಞಕ್ಕೆ ಬನ್ನಿರಿ.

**ವಿಶ್ವಸ್ಯಹಿ ಪ್ರಚೇತಸಾ ವರುಣ ಮಿತ್ರ ರಾಜಥಃ ।**
**ಈಶಾನಾ ಪಿಪ್ಯತಂ ಧಿಯಃ ॥ ೨ ॥**

೨. ಹೇ ವರುಣ, ಹೇ ಮಿತ್ರ, ನೀವು ಪ್ರತಿಯೊಬ್ಬ ಮಾನವನನ್ನೂ ನಿಯಂತ್ರಿಸುವಿರಿ, ಆಳುವಿರಿ ಮತ್ತು ವಿವೇಕಿಗಳಾದ ಚಿಂತಕರಾಗಿದ್ದೀರಿ ; ನೀವು ಆಳರಸರು - ನೀವು ನಮ್ಮ ವಿಚಾರಗಳನ್ನು ಪೋಷಿಸುತ್ತೀರಿ.

**ಉಪ ನಃ ಸುತಮಾ ಗತಃ ವರುಣ ಮಿತ್ರ ದಾಶುಷಃ ।**
**ಅಸ್ಯ ಸೋಮಸ್ಯ ಪೀತಯೇ ॥ ೩ ॥**

೩. ಬನ್ನಿರಿ - ಓ ವರುಣ, ಓ ಮಿತ್ರ - ನಮ್ಮ ಸೋಮ-ಯಾಗಕ್ಕೆ, ದಾನಿಯ ಯಜ್ಞಕ್ಕೆ! ಏಕೆ? ಈ ಮದ್ಯವನ್ನು ನೀವು ಕುಡಿಯಬಹುದು - ಅದಕ್ಕಾಗಿ.



---

೧. ಶತ್ರು ಸಂಹಾರದಿಂದ, ಹಾನಿಕಾರಕರ ವಿನಾಶನದಿಂದ, ಮಿತ್ರಾವರುಣರು. ವಿಶಾಲ ಸತ್ಯಕ್ಕೆ ನಮ್ಮಲ್ಲಿರುವ ವಿಸ್ತೃತ ಪ್ರಜ್ಞಾಸ್ತರಕ್ಕೆ ತಕ್ಕದ್ದಾದ ದೊಡ್ಡತನವನ್ನು ಹೆಚ್ಚಿಸುತ್ತಾರೆ ; ದಸ್ಯುಗಳು ಶತ್ರುಗಳು - ನಮ್ಮ ಇರವನ್ನು ವಿಕೃತಗೊಳಿಸಿ ಸಂಕುಚಿತತೆಗಿಳಿಸುವವರು.

# ಮಿತ್ರಾವರುಣರನ್ನು ಕುರಿತ ಹನ್ನೊಂದನೆಯ ಸೂಕ್ತವು

## V. 72

## ಯಜ್ಞಕ್ಕೆ ಆಮಂತ್ರಣ

[ಸತ್ಯದ ವಿಧಿಯಂತೆ ಆಧ್ಯಾತ್ಮಿಕ ಪಥದ ಮೇಲೆ ಕೊಂಡೊಯ್ಯುವ ಮಹಾದೇವತೆಗಳಾದ ಮಿತ್ರಾವರುಣರನ್ನು ಯಜ್ಞಕ್ಕೆ ಆಮಂತ್ರಿಸುತ್ತಾನೆ ಋಷಿಯು ; ತನ್ನ ಸಾಧನೆಗಳಿಂದ ಲಾಭ ಹೊಂದುವ ನಮ್ಮ ಆಧ್ಯಾತ್ಮಿಕ ಕರ್ಮವನ್ನು ದೃಢಪಡಿಸುವವರು ಉಕ್ತ ದೇವತಾತತ್ವಗಳೇ ಆಗಿರುವುದರಿಂದ.]

**ಆ ಮಿತ್ರೇ ವರುಣೇ ವಯಂ ಗೀರ್ಭಿರ್ಜುಹುಮೋ ಅತ್ರಿವತ್ ।**
**ನಿ ಬರ್ಹಿಷಿ ಸದತಂ ಸೋಮಪೀತಯೇ ॥ ೧ ॥**

೧. ಅತ್ರಿಯಂತೆ, ಮಿತ್ರಾವರುಣರಿಗೆ ನಾವು ಯಜ್ಞಾಹುತಿ-ಗಳನ್ನು ಹಾಕುತ್ತೇವೆ. ಸೋಮಪಾನಕ್ಕಾಗಿ (ಎಲೈ ಮಿತ್ರಾವರುಣರೇ), ದೊಡ್ಡತನದ ಆಸನಗಳಲ್ಲಿ ಕುಳಿತುಕೊಳ್ಳಿರಿ.

**ವ್ರತೇನಸ್ಥೋ ಧ್ರುವಕ್ಷೇಮಾ ಧರ್ಮಣಾ ಯಾತಯಜ್ಜ ನಾ ।**
**ನಿ ಬರ್ಹಿಷಿ ಸದತಂ ಸೋಮಪೀತಯೇ ॥ ೨ ॥**

೨. ನಿಮ್ಮ ಕಾರ್ಯಗಳಿಂದ ಒಳಿತಿನ ಲಾಭಗಳನ್ನು ನೀವು ದೃಢವಾಗಿ ನೆಲೆಗೊಳಿಸಿ ಇಡಿರಿ ; ಮತ್ತು ನೀವು ನಿಮ್ಮ ಧರ್ಮದಿಂದ (ವಿಧಿ ನಿಯಮಗಳಿಂದ) ಜನರು ದಾರಿನಡೆವಂತೆ ಮಾಡಿರಿ.

**ಮಿತ್ರಶ್ಚ ನೋ ವರುಣಶ್ಚ ಜುಷೇತಾಂ ಯಜ್ಞಮಿಷ್ಟಯೇ ।**
**ನಿ ಬರ್ಹಿಷಿ ಸದತಂ ಸೋಮಪೀತಯೇ ॥ ೧ ॥**

೩. ನಮ್ಮ ಇಷ್ಟವು ನಮಗೆ ಲಭಿಸುವುದಕ್ಕಾಗಿ ಮಿತ್ರಾವರುಣರು ನಮ್ಮ ಯಜ್ಞದಲ್ಲಿ ಆಹ್ಲಾದಪಡಲಿ. (ಹೇ ಮಿತ್ರಾ ಮರುಣರೇ) ಮಧ್ಯಪಾನಕ್ಕಾಗಿ (ಸೋಮಪಾನಕ್ಕಾಗಿ) ದೊಡ್ಡತನದ (ವಿಸ್ತಾರವಾದ) ಆಸನದ ಮೇಲೆ ಕುಳಿತುಕೊಳ್ಳಿರಿ.

❖ ❖

# ಇತರ ಸೂಕ್ತಗಳು

## ಇಂದ್ರ ಸ್ತುತಿಪರವಾದ ಸೂಕ್ತ I. 5

**ಆತ್ವೇತಾ ನಿಷೀದ ತೇಂದ್ರಮಭಿ ಪ್ರಗಾಯತ ।**
**ಸಖಾಯಃ ಸ್ತೋಮವಾಹಸಃ ॥ ೧ ॥**

ಸ್ತುತಿ ಸೂಕ್ತಗಳ ಪಲ್ಲವನ್ನು ಹಾಡುವ ಸ್ನೇಹಿತರೇ, ಹತ್ತಿರ ಬನ್ನಿರಿ - ಆದರೆ ಕುಳಿತುಕೊಳ್ಳಿರಿ ಮತ್ತು ಇಂದ್ರನ ಬಗೆಗೆ ಹಾಡಿರಿ.

ಸ್ತೋಮ = ಸ್ತು ಧಾತುಜನ್ಯ, ದೃಢವಾಗಿ ಪ್ರತಿಷ್ಠಿತವಾಗುವುದೆಂದರ್ಥ. ಸ್ತೋಮವೊಂದು ಸ್ತುತಿ ಸೂಕ್ತ, ಸ್ತೋತ್ರಗೀತ ; ಅದು ದಿವ್ಯಮಾನಸ ಪ್ರಣೋದಾಧಿಪತಿಯಲ್ಲಿರುವ ಗುಣಗಳನ್ನು ಹೇಳುವ ವಾಕ್ಕಿನ ಸುಪ್ತ ಶಕ್ತಿಯಲ್ಲಿ ಹೊರಟ ಅಭಿವ್ಯಕ್ತಿಯು - ಅಥವಾ ಸಾಧಕನು ತನ್ನ ನೆರವಿಗಾಗಿ ಕರೆಯುವ ಯಾ ತನ್ನ ಅಸ್ತಿತ್ವದಲ್ಲಿ ಮತ್ತು ಕಾರ್ಯದಲ್ಲಿ ತರಬೇಕೆಂದು ಬಯಸುವ ಸಿದ್ಧಿಗಾಗಿ ಇತರ ಯಾವನಾದರೂ ಗುರುಸ್ಥಾನೀಯ ದೇವನನ್ನು ಆಮಂತ್ರಿಸುವ ಮಂತ್ರೋದ್ಗಾರವು. ಸ್ಫೂರ್ತ ಹಾಗೂ ಲಯಬದ್ಧ ಮಾತಿನಲ್ಲಿ ಮಾಡುವ ಅಭಿವ್ಯಂಜನೆಯು, ಮಂತ್ರದ ಸಾರಸ್ವರೂಪದ ದೆಸೆಯಿಂದ, ದೈನಂದಿನ ಕರ್ಮದಲ್ಲಿ ಮೊದಲು ಸುಪ್ತವಾಗಿದ್ದ ಯಾ ಪ್ರಕೃತಿಯಲ್ಲಿ ಅಸ್ಪಷ್ಟವಾಗಿದ್ದ ಅಂಶವನ್ನು ಮುಂದಕ್ಕೆ ತಂದು ಸುಪ್ರತಿಷ್ಠಿತಗೊಳಿಸುವ ಪ್ರವೃತ್ತಿ ಇರುತ್ತದೆ. ಈ ಕಾರಣಕ್ಕಾಗಿ, ಗೀತವೊಂದು "ಸ್ತೋಮವು" ಅರ್ಥಾತ್ - ಪ್ರತಿಷ್ಠಾಪಕನು ಯಾ ದೃಢೀಕರಣ ಕರ್ತನು - ಏಕೆಂದರೆ ಈ ಪ್ರಾರ್ಥನೆಯು ಒಂದು ಉಕ್ಥವು - ಅರ್ಥಾತ್ - ಬಯಸುವಂಥದು, ಸಂಕಲ್ಪಿಸುವಂಥದು ಮತ್ತು ಸರಳವಾದ ಸೂಕ್ತವು "ಗಾಯತ್ರ" ಅಂದರೆ ಪೋಷಿಸಿ ಕಾರ್ಯಪರವನ್ನಾಗಿ ಮಾಡುವಂಥದು; ಅಥವಾ "ಶಂಸ" ಅಭಿವ್ಯಕ್ತಿ ಕ್ಷೇತ್ರಕ್ಕೆ ತಂದಿಡುವಂಥದು.

**ಪುರೂತಮಂ ಪುರೂಣಾಮೀಶಾನಂ ವಾರ್ಯಾಣಾಂ ।**
**ಇಂದ್ರಂ ಸೋಮೇ ಸಚಾ ಸುತೇ ॥ ೨ ॥**

"ಅಮೃತವನ್ನು ಕಾಯಿಸಿ ಸೋಸಿದ ಮೇಲೆ, ನಾನು ಎಲ್ಲ ಸಮರ್ಥರಲ್ಲೂ ಸಮರ್ಥನಾದ ಮತ್ತು ಅಪೇಕ್ಷಣೀಯವಾದ ಎಲ್ಲ ಅತ್ಯುತ್ತಮ ವಸ್ತುಗಳ ಒಡೆಯನಾದ ಇಂದ್ರನನ್ನೇ ನಾನು ಸ್ನೇಹಿತನನ್ನಾಗಿ ಸ್ವೀಕರಿಸುವೆನು."

"ಪುರೂ ತಮಂ ಪುರೂಣಾಂ" ಎಂಬುದಕ್ಕೆ "ಅನೇಕ ಶತ್ರುಗಳ (ಯತ್ನವನ್ನು) ವ್ಯರ್ಥಗೊಳಿಸಿದ, ಅನೇಕ ಆಸ್ತಿಗಳ ಒಡೆಯನಾದ" ಎಂಬ ದೂರಾನ್ವಯದ ಮತ್ತು ಅರ್ಥಹಾಸಿಕರವಾದ ವ್ಯಾಖ್ಯೆಯು ಸಂಪೂರ್ಣವಾಗಿ ಪದಗಳ ಸರಳಾರ್ಥಘಾತವನ್ನು ಮಾಡಿದ್ದು ಎನ್ನಿಸಿದೆ. "ಪುರೂ ತಮಂ ಪುರೂಣಾಂ" ಎಂಬುದರ ಅರ್ಥವು ಒಂದೇ ಆಗಿರಬಲ್ಲುದು ಒಂದೇ

ವ್ಯಾಕರಣ ಸಂಬಂಧವುಳ್ಳದ್ದಾಗಿರಬಹುದು. "ಪುರುಗಳಲ್ಲೆಲ್ಲಾ ಪುರುತಮ- "ಈಶಾನಂ ವಾರ್ಯಾಣಾಂ" ಎಂದ ಹಾಗೆಯೇ - "ಅತ್ಯುನ್ನತವಾದವುಗಳೆಲ್ಲವುಗಳ ಒಡೆಯ" ಎಂಬುದೇ ಅದರ ಸರಳಾರ್ಥವು. "ವಾರ್ಯ" ಎಂದರೆ "ಅಪೇಕ್ಷಣೀಯ" ಎಂದಾಗಬಹುದು - "ವರ" ಎಂದ ಹಾಗೆಯೇ - ಅಂದರೆ ವರ ; ಆದರೆ "ಅತ್ಯುನ್ನತ" ಎಂಬುದು "ಅಪೇಕ್ಷಣೀಯ" ಎಂಬುದಕ್ಕಿಂತ ಉತ್ತಮ-ಈಶಾನ ಪದದೊಡನೆ ಅದು ಲಯಬದ್ಧವಾಗಿ ಹೊಂದುತ್ತದೆ ಮತ್ತು ಪದಸಂಹತಿಗಳ ಸಮತೋಲಕ್ಕೆ ತಕ್ಕದ್ದಾಗುತ್ತದೆ.

"ಸಚಾ" ಎಂಬುದೊಂದು ಕ್ರಿಯಾವಿಶೇಷಣವೆಂದು ಸಹಾರ್ಥಕತ್ವದಲ್ಲಿ ತಪ್ಪದೆ ಸಾಮಾನ್ಯವಾಗಿ ವ್ಯಾಕರಣಕಾರರು ಸ್ವೀಕರಿಸಿದ್ದಾರೆ. ಅದರ ಧಾತುವು "ಸಚ್"= ಅಂಟಿಕೋ, ಜೊತೆಗೇ ಹೋಗು. ಆದರೆ ವೇದದಲ್ಲಿ ಅದಕ್ಕೆ ಬೇರೆಯ ಅರ್ಥವಿಲ್ಲ ಎಂಬುದು ಖಾತ್ರಿಯಾಗಿದೆಯೇ? ಈ ಪಂಕ್ತಿಯ ಪದಗಳ ಸಂಬಂಧವಲ್ಲದಿದ್ದರೂ ವ್ಯವಸ್ಥೆಯು ಇಂದ್ರನನ್ನು "ಸೋಮೇಸುತೇ" ಎಂಬುದರೊಡನೆ ಸಂಬಂಧಿಸುವ ಒಂದು ಕ್ರಿಯಾಪದವನ್ನು ಅವಶ್ಯಕವೆಂದು ತೋರಿಸಿಕೊಡುತ್ತದೆ. ಆಗ ಏಕವಚನದಲ್ಲಿರುವ ಕ್ರಿಯಾಪದವು ಸಂಘಾತದಲ್ಲೊಂದನ್ನು ಸಂಬೋಧಿಸುತ್ತದೆ. ಮತ್ತು "ಪ್ರಗಾಯತ ಅಭಿ" ಎಂಬುದನ್ನು ಮೊದಲನೆಯ ಋಕ್ಕಿನಲ್ಲಿ ಓದುವುದು ಅಸಹ್ಯ ಹೊಲಸು. "ಸಚಾ" ಎಂಬುದು ಸಚ್ ಧಾತುವಿನ ಕರ್ತರಿ ಪ್ರಯೋಗದ ಏಕವಚನವಾಗಿದ್ದು ದೇವವೃಂದದಲ್ಲೊಬ್ಬನನ್ನು ಕುರಿತದ್ದಾಗಿ ಆದೇಶವಾಗಿ ನಿಂತು ಮೊದಲನೆಯ ಹಾಗೂ ನಾಲ್ಕನೆಯ ಋಕ್ಕುಗಳ ಸಂಯುಕ್ತ ಬಹುವಚನದ ಬದಲಿಯಾಗಿ ಬರುತ್ತದೆ; "ಸಚಸ್ವ" ಎಂಬುದು ಆಜ್ಞಾರ್ಥಕ, ಮಧ್ಯಮ ಪುರುಷ ಏಕವಚನಗಳಲ್ಲಿರುವ ಕ್ರಿಯಾಪದವಾಗುತ್ತದೆ. ಅಥವಾ ನಾಲ್ಕನೆಯ ಸೂಕ್ತದಲ್ಲಿಯ "ಪೃಚ್ಛಾ" ಎಂಬ ಪದಕ್ಕೆ ನಾನು ಸೂಚಿಸಿದ ಅರ್ಥವನ್ನು ಗ್ರಹಿಸಿದರೆ, ಅದರ ಅರ್ಥವು ಹೆಚ್ಚು ಸ್ವಾಭಾವಿಕವಾಗಿ, ಉತ್ತಮ ಪುರುಷ (ಪ್ರಥಮ ಪುರುಷ=ನಾನೆಂಬ ಪುರುಷ), ವಸ್ತ್ವರ್ಥಸೂಚಕ ವರ್ತಮಾನ ಕಾಲಗಳಲ್ಲಿ ಮತ್ತು ಕರ್ತ್ರರ್ಥಕದಲ್ಲಿ ಸಕರ್ಮಕ ಕ್ರಿಯಾಪದವಾಗುತ್ತದೆ. "ಸಚಸ್ವ" ಎಂಬುದಕ್ಕೆ "ಜೊತೆಗೂಡು, ಯಾವಾಗಲೂ ಜೊತೆಯ ಸ್ನೇಹಿತನಾಗಿರು" (ಏಳನೆಯ ಸೂಕ್ತವನ್ನು ನೋಡಿರಿ) ಎಂಬರ್ಥವಾಗಬಹುದಾದರೆ ಕರ್ತ್ರರ್ಥಕದಲ್ಲಿರುವ "ಸಚಾ" ಎಂಬುದು "ಸ್ನೇಹಿತನನ್ನಾಗಿ ಯಾ ಜೊತೆಗಾರನನ್ನಾಗಿ ನಾನಿಟ್ಟುಕೊಳ್ಳುತ್ತೇನೆ" ಎಂದು ಸುಲಭವಾಗಿ ವ್ಯಾಖ್ಯಾನಿಸಲ್ಪಡಬಹುದು. ಆಗ ವಾಕ್ಯವು ಸ್ವಾಭಾವಿಕವೂ ನೇರವೂ ಸರಳವೂ, ಪೂರ್ಣವೂ, ಉಚಿತವೂ ಆಗಿ ಉಕ್ತ ಋಕ್ಕಿಗೆ ಹೊಂದುವುದಲ್ಲದೆ, ಅದರ ಹಿಂದಿನ ಋಕ್ಕಿಗೂ ಮುಂದಿನ ಋಕ್ಕಿಗೂ ಹೊಂದಿಕೊಳ್ಳುತ್ತದೆ. ಹೀಗೆ ಮಾಡುವುದರಿಂದ ಸತತವಾಗಿ ಒಂದೇ ರೀತಿಯಲ್ಲಿರುವ ವೈದಿಕ ಶೈಲಿಯ ಲಕ್ಷಣಕ್ಕೆ ಹೊಂದುವ ಪರಿಪೂರ್ಣ ತಾರ್ಕಿಕ ಸಂಬಂಧ ಮತ್ತು ಪರಿವರ್ತಮಾನ ರೂಪಗಳನ್ನು ತಾಳುತ್ತದೆ. ಮೊದಲನೆಯ ಋಕ್ಕಿನಲ್ಲಿ ಋಷಿಯು ಇಂದ್ರಸ್ತೋತ್ರವನ್ನು (ಮಾಡಲು) ಹಾಡಲು ತನ್ನ "ಸ್ನೇಹಿತರನ್ನು" ಯಾ "ಜೀವನ ಸಹಚರರನ್ನು" ಕರೆಯುತ್ತಾನೆ ; ಎರಡನೆಯದು ಈ ಬಲಿಷ್ಠನೂ ಸಮುನ್ನತನೂ ಆದ ಸರ್ವೇಶ್ವರನನ್ನು ಗೆಳೆಯನನ್ನಾಗಿ ಮಾಡಿಕೊಳ್ಳಲು ತಮಗಿರುವ ಉದ್ದೇಶವನ್ನು, ಗುರಿಯನ್ನು, ಧ್ಯೇಯವನ್ನು ಹಾಡಿ ಹೇಳುತ್ತಾನೆ - ಇದು ಮಧುಚ್ಛಂದಸ್ ಎಂಬ ಋಷಿಯ ವಿಶಿಷ್ಟ ಉದ್ದೇಶವಾಗಿದೆ - ಅವನು ಈ ಸಾಧಕರ ಗುಂಪಿನ ಅಧಿಕೃತ ಮುಖ್ಯಸ್ಥನಾಗಿದ್ದಾನೆ. "ಯಸ್ತೇ ಸಖಿಭ್ಯ ಆ ವರಂ" ; ಮೂರನೆಯದು ಇಂದ್ರನ ಪ್ರಾಮಾಣಿಕ ಸ್ನೇಹವನ್ನೂ ಪರಿಪೂರ್ಣ ಸಹಾಯಕತೆಯನ್ನೂ ದೃಢಪಡಿಸುವುದರ ಮೂಲಕ ಈ ಬಲಿಷ್ಠ ದೇವನನ್ನು ಆಯ್ದುಕೊಂಡದ್ದನ್ನು ಸಮರ್ಥಿಸುತ್ತದೆ.

**ಸ ಘಾ ನೋ ಯೋಗ ಆ ಭುವತ್ ಸರಾಯೇ ಸ ಪುರಂಧ್ಯಾಂ ।**
**ಗಮದ್ವಾಜೇಭಿರಾ ಸನಃ ॥ ೩ ॥**

"(ನಮ್ಮ ಬಯಕೆಯೊಡನೆ) ಏಕೀಕೃತತೆಯಲ್ಲಿ ಅವನು ಯಾವಾಗಲೂ ಇರುವುದು; ಅವನು ನಮ್ಮ ಸೌಲಭ್ಯ-ಸುಖಗಳಿಗಾಗಿಯೇ ಇರುವಾತನು ; ಪುರಂಧರತ್ವದಲ್ಲಿರುವವನು ಅವನೇ. ಅವನೇ ಯಾವಾಗಲೂ (ತನ್ನ ಕೈಗಳಲ್ಲಿ) ದೇಯವಸ್ತುಗಳನ್ನು ತೆಗೆದುಕೊಂಡು ನಮ್ಮತ್ತ ಬರುವವನು."

"ಸಃ=ಅವನು" ಎಂಬುದರ ಮೇಲೇ ಒತ್ತು ಇದೆ ; ಆದುದರಿಂದ ಪ್ರತಿಯೊಂದು ಅನ್ವಯದಲ್ಲೂ "ಸ ಯೋಗೇ, ಸ ರಾಯೇ, ಸ ಪುರಂಧ್ಯಾಂ" ಎಂದು ಹೇಳಲಾಗಿದೆ; ಮತ್ತು "ಘಾ" ಎಂಬ ಪದವು ಉಕ್ತ ಪದವನ್ನು ಒತ್ತಿ ಹೇಳಬೇಕೆಂಬ ಋಷಿಯ ಆಶಯವನ್ನು ವ್ಯಕ್ತಪಡಿಸಲು ಉಪಯುಕ್ತವಾಗುತ್ತದೆ. ಸ್ತೋಮವು ಏಕೆ ಇಂದ್ರನನ್ನು ಕುರಿತು ("ಇಂದ್ರಮಭಿ") ಎತ್ತಿ ಹಿಡಿಯಬೇಕು ಎಂಬುದನ್ನು ಋಷಿಯು ವಿವರಿಸುತ್ತಿದ್ದಾನೆ. ಏಕೆಂದರೆ ನಮ್ಮ ಇಚ್ಛಾಪೂರ್ತಿಗೊಳಿಸಲಿರುವವನು ಇಂದ್ರನೇ, ನಮ್ಮ ಸಕ್ರಿಯ ಪ್ರಜ್ಞೆಯು ಸುಖವಾಗಿ ಫಲಿಸಿದಲ್ಲೆಲ್ಲಾ ಇರುವುದು ಇಂದ್ರನೇ ; ನಮ್ಮ ಸಾಧನೆಯನ್ನು ಮತ್ತು ಸುಖವನ್ನು ಹಾಗೂ ಪುರವನ್ನು ದಸ್ಯುಗಳಾದ ಕಳ್ಳರು ಹಾಗೂ ಶತ್ರುಗಳು ತಡೆಯಬಂದಾಗಲೆಲ್ಲಾ ಅವರ ವಿರುದ್ಧವಾಗಿ ಹೋರಾಡುವವನು ಇಂದ್ರನೇ. ನಮ್ಮ ಮಾನಸಿಕ ಸುಪ್ತ ಶಕ್ತಿಗಳಿಗೆ ಯಾವಾಗಲೂ ಅವನೇ ಹೊಸ ಬದಲಿಗಳನ್ನು (ಪರ್ಯಾಯ ವಸ್ತುಗಳನ್ನು) ತರುವನು ; ನಮ್ಮ ಸಕ್ರಿಯ ಪ್ರಜ್ಞೆಗೆ ಮಾನಸಿಕ ಪ್ರಣೋದದ ಸಮೃದ್ಧ ಸಾಧನಗಳನ್ನು ಒದಗಿಸುವವನು ಇಂದ್ರನೇ "ಭುವತ್, ಗಮತ್"=ಭೂ, ಗಮ್ ಎಂಬ ಧಾತುಗಳಿಂದ ನೇರವಾಗಿ ಜನ್ಯವಾದ ಪರಿಪಾಲೀಯ ಭೂತಕಾಲವಾಚಗಳು. "ರಾಯೇ" ಎಂಬುದನ್ನು ನಾನು ಚತುರ್ಥಿಯಲ್ಲಿರುವ ಶಬ್ದವೆಂದು ಸ್ವೀಕರಿಸುತ್ತೇನೆ. "ರಾಯಃ" ಎಂಬ ಪದರೂಪವೂ ಇದೆ- "ರಾಯೇ, ಯೋಗೇ, ಪುರಂಧ್ಯಾಂ" ಎಂಬಿವು ಸಪ್ತಮಿಯಲ್ಲಿರುವ ರೂಪಗಳೆಂದೂ ಗ್ರಹಿಸಲವಕಾಶವಿದೆ.

ವೇದದಲ್ಲಿ ಯೋಗವೆಂದರೆ ನಮ್ಮಲ್ಲಿರುವ ಪ್ರತ್ಯೇಕ ವ್ಯಕ್ತಿತ್ವದ ಪ್ರಜ್ಞೆಯು ಪ್ರಯತ್ನದಿಂದಲೋ ಪ್ರಜ್ಞಾಸಂಯೋಗದಿಂದಲೋ ಇಷ್ಟಾರ್ಥಸಿದ್ಧಿಯಿಂದಲೋ ಇತರ ಪುರುಷರಲ್ಲಿ, ವಸ್ತುಗಳಲ್ಲಿ ಯಾ ಪ್ರಣೋದಗಳಲ್ಲಿ ವಿವೃತವಾದ ಏಕೈಕ ಮಹಾಸತ್ತೆಯೊಡನೆ ಒಂದಾಗುವುದೆಂದರ್ಥ. ಯೋಗ=ಒಂದಾಗುವುದು-ಯಾವುದರೊಡನೆಯೇ ಆಗಲಿ, ಪ್ರತ್ಯೇಕತಾ ಪ್ರಜ್ಞೆಯನ್ನು ಕಳೆದುಕೊಳ್ಳುವುದು-ಏಕಪದಾರ್ಥಾಂತರ್ಗತ ಪ್ರತ್ಯೇಕತಾ ಭಾವನೆಯು ತದಿತರ್ ಪದಾರ್ಥಾಂತರ್ಗತ ಭಾವನೆಯೊಡನೆ ಏಕೀಕೃತವಾಗುವುದು.

"ಪುರಂಧ್ಯಾಂ" ಎಂಬುದಕ್ಕೆ ಹೆಂಗಸಿನಲ್ಲಿ ಯಾ ಬಹು ವಿಧ ಬುದ್ಧಿಯಲ್ಲಿ ಎಂಬ ಸಾಯಣಾಚಾರ್ಯ ವ್ಯಾಖ್ಯೆಗಳನ್ನು ನಾನು ಒಪ್ಪಲಾರೆನು ; ಅವು ವಿಕಟ. ಪುರಂ=ಬಹು, ಧಿ=ಬುದ್ಧಿ ಎಂದು ಆಚಾರ್ಯ ಹೇಳಿರುವುದು ಸರ್ವವ್ಯಾಕರಣ ವಿಧಿಗಳ ಭಂಗ. ಪುರ್=ಪೂರ್ಣ, ಏನನ್ನೋ ತುಂಬಿಕೊಂಡಿರುವ ಮತ್ತು ಹಾಗೆ ತುಂಬಿಕೊಂಡು ರಕ್ಷಿಸುತ್ತಿರುವ-ಅರ್ಥಾತ್-ಆಧಾರ=ನವದ್ವಾರಯುಕ್ತವಾದ ನಮ್ಮ ಪುರಸದೃಶವಾದ ಶರೀರವು-ಇದರಲ್ಲಿ ನಾವು ಲಬ್ಧಗಳನ್ನು ಕಾಯ್ದುಕೊಂಡು ಸುಖವನ್ನು ಅನುಭವಿಸುತ್ತೇವೆ. ಧಿಃ=ಹಿಡಿದಿಟ್ಟುಕೊಂಡಿರುವುದು, ಧಲಿಸಿರುವುದು, ಹೊತ್ತಿರುವುದು, ಸಮರ್ಥಿಸುತ್ತಿರುವುದು, ಎತ್ತಿ ಹಿಡಿಯುತ್ತಿರುವುದು. ಇದು ಯಾವಾಗಲೂ ಆಧ್ಯಾತ್ಮಿಕ ಶತ್ರುಗಳಾದ ದಸ್ಯುಗಳಿಂದ, ರಾಕ್ಷಸರಿಂದ, ದೈತ್ಯರಿಂದ, ವೃತ್ರರಿಂದ, ಪಣಿಗಳಿಂದ ಹೊಡೆತಕ್ಕೆ ಈಡಾಗುತ್ತದೆ. ಆದುದರಿಂದ ಇದನ್ನು ಯಾವಾಗಲೂ ಮೊದಲು, ಯಾವಾಗಲೂ ಮತ್ತು

ಪ್ರಮುಖನಾಗಿ ನಿಲ್ಲುವ ಇತರ ದೇವತಾ ಸಹಾಯನಾದ ಇಂದ್ರನ ಸಾಮರ್ಥ್ಯದಿಂದ ಕಾಯ್ದುಕೊಂಡಿರಬೇಕು ಮತ್ತು ಸಮರ್ಥಿಸಲ್ಪಡುತ್ತಿರಬೇಕು. ಆದುದರಿಂದ "ಪುರಂಧಿ" ಎಂದರೆ ಶರೀರದ ಆಧ್ಯಾತ್ಮಿಕ ರಕ್ಷಕ ಯಾ ರಕ್ಷಿಕೆ.

**ಯಸ್ಯ ಸಂಸ್ಥೇ ನ ವೃಣ್ವತೇ ಹರೀ ಸಮತ್ಸು ಶತ್ರವಃ ।**
**ತಸ್ಮಾ ಇಂದ್ರಾಯ ಗಾಯತ ॥ ೪ ॥**

"ನಮ್ಮ ಯುದ್ಧಗಳಲ್ಲಿ ಯಾರ ಕುದುರೆಗಳ ಮೇಲ್ವಾಯುವಿಕೆಯ ಅನಿರೀಕ್ಷಿತ ಭಯದಿಂದ ಯಾವ ಶತ್ರುವೂ ಸ್ವಸ್ಥನಾಗಿ ಇರಲಾರನೋ ಅಂಥ ಇಂದ್ರನನ್ನು ಕುರಿತು ಹಾಡು."

ಸಂಸ್ಥೇ="ಯಸ್ಯ ರಥೇ (ಯುಕ್ತೌ) ಹರೀ" ಎಂಬ ಸಾಯಣ ವ್ಯಾಖ್ಯೆಯು ಅತ್ಯಂತ ಬಲಾತ್ಕಾರದಿಂದ ಹೇರಿದ ಅಸಾಧ್ಯವಾದ (ಅನುಚಿತವಾದ) ಅರ್ಥವಾಗಿದೆ. ಸಂಸ್ಥವು ರಥವೆಂದಾದರೆ, ವೃಣ್ವತೇ ಎಂದರೆ ಸಂಭಜಂತೇ ಎಂದಾದರೆ - ಇಂದ್ರರಥದಲ್ಲಿರುವ ಇಂದ್ರಶತ್ರುಗಳು ಇಂದ್ರನ ಕುದುರೆಗಳನ್ನು ಒಪ್ಪರು!" ಎಂಬ ಅರ್ಥ ಮಾತ್ರ ಸಾಧ್ಯವಾದೀತು. ನಾವಿಲ್ಲಿ ಹೆಚ್ಚು ಸಂಭವನೀಯ ಅರ್ಥವನ್ನು ಹುಡುಕಬೇಕು. "ಸಂಸ್ಥ"=ಯುದ್ಧಾವಸರದಲ್ಲಿ ಶತ್ರುಗಳನ್ನಿದಿರಿಸುವುದು ಮತ್ತು ಅವನ ಶತ್ರುಗಳ ಹಾಣಾ ಹಾಣಿ ಹೋರಾಟ ; ಹಾಗೂ "ವೃಣ್ವತೇ=ತಡೆಹಿಡಿಯುವುದು, ಅಡ್ಡಗಟ್ಟುವುದು, ಯಾ ಜಯಪ್ರದವಾಗಿ ವಿರೋಧಿಸುವುದು ಎಂಬ ಸರ್ವತ್ರ ಲಭ್ಯವಾದ ಅರ್ಥವು - ಈ ವ್ಯಾಖ್ಯೆಯು ಹೆಚ್ಚು ಸಂಭವನೀಯವೂ ಚೆನ್ನಾದುದೂ ಆಗಿ ತೋರುತ್ತದೆ. ಯುದ್ಧದಲ್ಲಿ ಅನಿರೀಕ್ಷಿತ ಹೊಡೆತಗಳಿಂದ ಹೌಹಾರಿದ ಇಂದ್ರನೂ ಇಂದ್ರಶತ್ರುಗಳೂ ನಿಂತಿರುವಾಗಲೂ ಇಂದ್ರನ ರಥದ ಮುಂದೋಟವನ್ನು ಅವನ ಶತ್ರುಗಳು ತಡೆಯಲಾರರು. ಆ ರಥವು ಯಾವಾಗಲೂ ವಿಘ್ನವನ್ನು ನೂಕಿ ಒಗೆದೇ ತನ್ನ ಗುರಿಯನ್ನು ಮುಟ್ಟುತ್ತದೆ. ಆನುಕ್ರಮಿಕ (ಆನುವರ್ತಿಕ) "ಅಭುವತ್ ಪುರಂಧ್ಯಾಂ" ಎಂಬ ಪದ್ಯಪಂಕ್ತಿಯು ಕೊನೆಯ ಮುಕ್ಕಿನಲ್ಲಿ ಮೊದಲನೆಯ ಭಾವವನ್ನು ಗರ್ಭೀಕರಿಸಿಕೊಂಡೇ ಮುಗಿಯುತ್ತದೆ. "ಗಾಯತ" ಎಂಬ ಉಚಿತ ಪದ ಪ್ರಯೋಗದ ಮೂಲಕ ವೈದಿಕ ಶೈಲಿಯ ಸೂಕ್ಷ್ಮಜ್ಞತೆಯನ್ನು ಪೂರ್ಣಗೊಳಿಸಿಕೊಂಡೇ "ಇಂದ್ರಂ ಸಚಾ" ಎಂಬ ಪದಸಂಹತಿಯಿಂದ ಅರ್ಥಾಭಿವ್ಯಕ್ತಿಯನ್ನು ಮಾಡುತ್ತದೆ.

**ಸುತಪಾವ್ನೇ ಸುತಾಇಮೇ ಶುಚಯೋಯಂತಿ ವೀತಯೇ ।**
**ಸೋಮಾಸೋ ದಧ್ಯಾಶಿರಃ ॥ ೫ ॥**

"ಈ ಸೋಮರಸವನ್ನು ಶುದ್ಧೀಕರಿಸಲೆಂದು ಕಾಯಿಸಿ ಸೋಸಲಾಗಿದೆ. ಅದು ಶುದ್ಧ, ನಿನ್ನ ಅವತಾರಕ್ಕೆಂದೇ ಅದನ್ನು ವ್ಯಯಿಸಲಾಗುತ್ತಿದೆ. ಅದರಿಂದ ಅದು ತನ್ನ ಸಾಂದ್ರತೆಯನ್ನು ತಾಳಿಕೊಳ್ಳಲು ಶಕ್ತವಾಗಿದೆ."

"ಸುತಪಾವ್ನೇ" "ಸೋಮಸ್ಯಪಾನಕರ್ತ್ರೇ" ಎನ್ನುತ್ತಾನೆ ಸಾಯಣ-ಹಾಗೆನ್ನುವುದು ಅವನ ಹಕ್ಕಿನ ಕಕ್ಷೆಯಲ್ಲಿ ಬರುತ್ತದೆ. ಮುಂದಿನ ಕಾಲದಲ್ಲಿ ಸಂಸ್ಕೃತ ಭಾಷೆಯು ಕರ್ತ್ರರ್ಥಕ ನಾಮಪದವೆಂದೇ "ಪಾವನ್" ಪದವನ್ನು ಪರಿಗಣಿಸಿದೆ. ನಿಃಸಂದೇಹವಾಗಿ ಈ ಉದ್ಧೃತ ವಾಕ್ಯದಲ್ಲೂ ಇದೇ ಅರ್ಥವು ಸಮರ್ಪಕ ಅರ್ಥವನ್ನು ಕೊಡುತ್ತದೆ. "ಸೋಮಪಾಯಿಗಾಗಿ ಇಲ್ಲಿ ಭಟ್ಟಿ ಇಳಿಸಿದ ಸೋಮವಿದೆ." ಆದರೆ ಯುರೋಪೀಯ ವಿದ್ವಾಂಸರು ಕಂಡಂತೆ ಹಳೆಯ ಆರ್ಯಭಾಷೆಯಲ್ಲಿ ಚತುರ್ಥ್ಯರ್ಥಕ "ಅನೇ" ಎಂಬ ಪ್ರತ್ಯಯವನ್ನು ಕರ್ತೃವಿನ ಕಾರ್ಯವಾಚಕ ಕ್ರಿಯಾಪದವನ್ನಾಗಿ ಬಳಸಲಾಗುತ್ತಿತ್ತು.

ಇದು ಗ್ರೀಕ್ ಭಾಷೆಯಲ್ಲಿ ಛದ್ಮವೇಷದಲ್ಲಿದೆ. ಗ್ರೀಕ್ ಅನಿರ್ದೇಶಾರ್ಥಕವಾಗಿ ನಿಂತ "ಅನ್" (ಚತುರ್ಥ್ಯರ್ಥಕ ಯಾ ಪ್ರಥಮಕಾರಕಾರ್ಥಕ) ಪ್ರತ್ಯಯವು ಕ್ರಿಯಾತ್ಮಕವಾಗಿ, ಶಾಬ್ದಿಕವಾಗಿ, ಕಾರ್ಯವಾಚಕವಾಗಿ ಬಳಸಲಾಗಿದೆ. ಇದು ಗ್ರೀಕಿನಲ್ಲಿ ಸಾಮಾನ್ಯ ಚತುರ್ಥ್ಯರ್ಥಕವಾದ ein (ಐಇನ್) ಆಗಿದೆ. ಹಳೆಯ ಆರ್ಯ ಭಾಷೆಯ "ಅಸನ್"=ಇರುವುದು ಎಂಬರ್ಥದ ಪದವು ಗ್ರೀಕಿನಲ್ಲಿ nai ನೈ ಯಾ einai ಐಇನ್‌ಐ ಎಂಬ ತುಮರ್ಥಕ ರೂಪದಲ್ಲಿದೆ. "ದಾವನ್"=ದೌನೈ (ಕೊಡು) ; ಭುವನ್=ಫ್ಯ ಎ ಇನ್ (ಆಗು) ; ಶ್ರುವನ್=ಕ್ಲು ಐಇನ್ (ಕೇಳು) ; ವೇದದಲ್ಲಿ ಈ ಪ್ರಾಚೀನಾರ್ಯ ರೂಪವು ಸತತವಾಯಿತೆನ್ನಲಾದೀತೇ. ಉದಾ: ಪಾವನೇ, ದಾವನೇ ಇತ್ಯಾದಿ. ಈ ತಾತ್ತ್ವಿಕ ಅಸಿದ್ಧ ಊಹೆಯು ಸಮರ್ಥನೀಯವಾಗಿದೆ. ಇದು ನಿಜವಾದರೆ ನಮ್ಮ ಈ ಉದ್ಧೃತ ವಾಕ್ಯದಲ್ಲಿ ನಾವು ಒಂದು ತರಹದ ವಿಕಟ ಕರುಣಾಭಾಸದ ಹಾಸ್ಯಾಸ್ಪದ ಪರಿಸ್ಥಿತಿಯಲ್ಲಿ ಬೀಳುತ್ತೇವೆ- "ಈ ಸೋಮರಸಗಳು ಕಾಯಿಸಿ ಸೋಸಲ್ಪಟ್ಟದ್ದು ಸೋಮಪಾನಕ್ಕಾಗಿ" ! "ಪಾವನ್" ಎಂಬುದಕ್ಕೆ ಕುಡಿಯುವ ಅರ್ಥವನ್ನು ಮಾಡಿದರೆ ಸಾಯಣನ ಅರ್ಥವನ್ನು ಅತ್ಯಂತ ಹೆಚ್ಚಾಗಿ ಸ್ವೀಕಾರಾರ್ಹವೆನ್ನಬೇಕಾಗುತ್ತದೆ. ಆದರೆ "ಪಾವನ್" ಎಂಬುದು "ದಾವನ್ನಿನಂತೆಯೇ", ಅದೇ ರೂಪದಲ್ಲಿ ನಮಗೆ ದೊರಕಿದರೂ ಪಾ ಧಾತುವಿಗೆ ಅನ್ನನ್ನು ಸೇರಿಸುವುದರಿಂದ ಮತ್ತು ತಮಿಳಿನಲ್ಲಿ ನಡುವೆ ತಲೆಹಾಕುವ ಸಂಧಿಯ ವಕಾರವನ್ನೂ (ಆ ವಕಾರವು ತಮಿಳಿನಲ್ಲಿ ಸುಪ್ರತಿಷ್ಠಿತವಾಗಿದೆ) ಜೊತೆಗೆ ತೆಗೆದುಕೊಳ್ಳುವುದರಿಂದ ಹಾಗೂ "ಬ್ರುವನ್, ಸ್ತುವೇ" ಮುಂತಾದ ಸಂಸ್ಕೃತ ಪ್ರಯೋಗಗಳಲ್ಲೂ ಉಳಿದಿರುವುದರಿಂದ - ಎಂದು ಹೇಳಿ ನಿದರ್ಶನಗಳನ್ನು ತೋರಿಸಬಹುದಾದರೂ ಅವುಗಳ ಆಧಾರದ ಮೇಲೆ ವಾದಿಸಬಹುದಾದರೂ ಪಾ=ಕುಡಿ ಎಂಬ ಧಾತುವನ್ನುಳಿದು ಅಷ್ಟೇ ಸಮರ್ಥವಾಗಿ "ಪೂ= ಶುದ್ಧೀಕರಿಸು" ಎಂಬ ಧಾತುವಿನಿಂದಲು ಧಾತುಗತ ಸ್ವರದ ತಿದ್ದುಪಡಿಯಿಂದ (ಉದಾ: "ಪಾವಕ" ಮತ್ತು "ಪಾವನ") ಅನ್ನಂತದ ಹಿಂದೆ ಅಷ್ಟೇ ತೂಕದಿಂದ ಪೂಧಾತು ಜನ್ಯವಾದ ಪದವಿದು ಎಂದು ನಿಷ್ಪನ್ನ ಮಾಡಬಹುದು. ಈ ವಿವರಣೆಯನ್ನು "ಸುತಪಾವ್ನೇ" ಎಂಬುದಕ್ಕೆ ಹೊಂದುತ್ತದೆ ಎಂದು ಒಪ್ಪಿದರೆ, ಮಧುಚ್ಛಂದಸ್ ಋಷಿಯ ಸೂಕ್ತಗಳ ಶೈಲಿಯ ಸೂಕ್ಷ್ಮತೆ, ಧ್ವನ್ಯರ್ಥವತ್ತೆ ಮತ್ತು ಅರ್ಥಗರ್ಭಿತತೆಗಳಿಗನುಗುಣವಾಗಿ ಸಂಪೂರ್ಣ ಸಾಮಶ್ರುತ್ಯದಿಂದ ಆಳವೂ ಸಫಲವೂ ಆದ ಅರ್ಥವನ್ನು ನಾವು ಪಡೆಯುತ್ತೇವೆ. ಅಮೃತ (ಮಧು, ಸೋಮ) ರಸಗಳು ಆಗಲೇ ಪ್ರಾಥಮಿಕವಾಗಿ ಭಟ್ಟಿ ಇಳಿಸಿ ತೆಗೆದ ರಸಗಳನ್ನು ಮತ್ತೆ ಶುದ್ಧೀಕರಿಸಲು (ಸುತಪಾವ್ನೇ) ಕಾಯಿಸಿ ಸೋಸುವ ಅರ್ಥವು ಹೊರಡುತ್ತದೆ. ಅವು ಶುದ್ಧೀಕೃತವಾದ ಮೇಲೆ ("ಶುಚಯಃ") ಅವು ಅನಂತರ ಯಂತಿವೀತಯೇ=ಉಪಯೋಗಕ್ಕೆ ಬರುತ್ತವೆ. ಏಕೆಂದರೆ, ಅವು ಆಗ "ದಧ್ಯಾಶಿರಃ" ಆಗಿರುತ್ತವೆ. "ಶುಚಯಃ" ಎಂಬ ವಿಶೇಷಣ ಬಂದಿರುವುದರ ಅರ್ಥವು ಕೂಡಲೇ ಅರ್ಥವಾಗುತ್ತದೆ. ಹಾಗಲ್ಲವಾದರೆ ಒಂದು ಅಭಿಜಾತ, ಅಲಂಕೃತ, ವಿಶೇಷಣವು-ಅರ್ಥವಿಲ್ಲದೆ ಇಲ್ಲ ಎನ್ನಿಸುವಾಗ- ಆದರೆ ನಿಜವಾಗಿ ಬೇಡವಾದುದಾಗಿರುವಾಗ-ಈ ಭಾಷಾಂತರದಲ್ಲಿ ಅತಿ ಪ್ರಾಮುಖ್ಯವುಳ್ಳ ಪದವೆನ್ನಿಸುತ್ತದೆ ; ಹಾಗೂ ತಾರ್ಕಿಕವಾಗಿ ಒಪ್ಪುವಂಥದಾಗಿ ಮತ್ತು ಸಂದರ್ಭಕ್ಕೆ ಅನಿವಾರ್ಯವೆನ್ನಿಸಿ, "ದಧ್ಯಾಶಿರಃ" ಎಂಬುದು ಸ್ವಾಭಾವಿಕವಾಗಿ "ಶುಚಯಃ" ಎಂಬುದರತ್ತ ಕರೆದೊಯ್ಯುತ್ತದೆ ; ಮತ್ತು ಅಷ್ಟೇ ಸಮಾನವಾದ ಅಪರಿಹಾರ್ಯತೆಯಿಂದ (ಅನಿವಾರ್ಯತೆಯಿಂದ) ವಾಕ್ಯದ ಹಾಗೂ ಅದರ ವಿಚಾರದ ತುತ್ತತುದಿ ಎನ್ನಿಸುತ್ತದೆ.

"ವೀತಯೇ" - "ಭಕ್ಷಣಾರ್ಥೇ" ಎನ್ನುತ್ತಾನೆ ಸಾಯಣಾಚಾರ್ಯನು. ಆದರವನು ಇತರ ಅರ್ಥಗಳನ್ನೂ ಕೊಡುತ್ತಾನೆ- "ವೀ" - ಗತಿವ್ಯಾಪ್ತಿ ಪ್ರಜನನಕಾಂತ್ಯಸನ ಖಾದನೇಷ್ವಿತಿ.

ಗಮನಾರ್ಥದಲ್ಲಿ (ಸುಪರಿಚಿತ "ವೀತ" ಎಂಬ ಉದಾಹರಣೆ ತೋರಿಸುವಂತೆ) "ವೀ" ಕೆಲವು ವೇಳೆ "ವಿ+ಇ" ಎಂಬುದರ ಸಂಯುಕ್ತವಾದ ಗಮನಾರ್ಥಕ ಪದವೂ ಆಗುತ್ತದೆ. ಆದರೆ ವೀತಯೇ ಎಂಬುದರಲ್ಲಿ ಇರುವ ದೀರ್ಘ ರೂಪದ "ವೀ" ಎಂಬುದು ಪ್ರಾಥಮಿಕ ಧಾತುವಾದ "ವಿ" ಎಂಬುದರ ಅರ್ಥಾತ್ ಆವಿರ್ಭವಿಸು, ತೆರೆ, ಹೊಳೆ, ಹುಟ್ಟು, ಕಾಣಿಸಿಕೋ, ಉತ್ಪಾದಿಸು, ಬೆಳೆ, ಹರಡು, ವಿಸ್ತಾರವಾಗು, ಚಲಿಸು ಎಂಬ ಅರ್ಥಗಳನ್ನು "ವಿ" ಧಾತುವಿನ ದೀರ್ಘರೂಪದ್ದೇ ಆಗಿದೆ ಇಲ್ಲಿ- ಅಂದರೆ- "ವೀ". ವಯಸ್, ವಿಯತ್, ವಯುನಮ್ ಎಂಬ ಪದಗಳಲ್ಲಿ ಇನ್ನೂ ಈ ದೀರ್ಘಧಾತು "ವೀ" ಉಳಿದುಕೊಂಡಿದೆ. ವೀತಿಯನ್ನು ಖಾದನವೆಂದರ್ಥ ಮಾಡಿದ್ದು ಈ ನಿಕಷಪ್ರಾಯವಾದ ವೈದಿಕ ಪದದ ಮೇಲೆ ಕರ್ಮವಾದಿಗಳು (ಯಜುರಾಚಾರವಾದಿಗಳು, ಮೀಮಾಂಸಕರು) ತಮ್ಮ ಕಲ್ಪನೆಯೊಳಗೆ ಬರಬೇಕೆಂದು ಹೇರಿದ ಅರ್ಥವೇ ಈ ಸಾಯಣ ವ್ಯಾಖ್ಯೆ ಎನ್ನಿಸುತ್ತದೆ. ವೇದದಲ್ಲಿ ಇದರ ಸ್ವಾಭಾವಿಕ ಅರ್ಥಗಳಾದ ಆವಿರ್ಭವಿಸು, ಅವತರಿಸು, ತೋರಿಸಿಕೋ ವಿಸ್ತಾರದಿಂದ ಹೊರದೆಗೆ-ಎಂಬರ್ಥಗಳಲ್ಲೋ ನಾನಿದನ್ನು ತೆಗೆದುಕೊಳ್ಳುತ್ತೇನೆ. "ವೀತಿ" ಎಂಬ ಪದವು ವೇದದಲ್ಲಿರುವ ಪ್ರಮುಖ ಯೋಗ ಪ್ರಕ್ರಿಯೆಯನ್ನು ವರ್ಣಿಸುತ್ತದೆ ಎಂದು ನಾನು ಅರ್ಥಮಾಡುತ್ತೇನೆ. ಆ ಪ್ರಕ್ರಿಯೆಯೆಂದರೆ ಅವ್ಯಕ್ತ, ಅಸ್ಪಷ್ಟ ಅಥವಾ ನಿಷ್ಕ್ರಿಯ ಎನ್ನಿಸಿ ನಮ್ಮಲ್ಲಡಗಿರುವ ಯಾವುದೋ ಒಂದರ ರೂಪಾವಿಷ್ಕಾರಾರ್ಥವಾದ ಅವತಾರ ಹಾಗೂ ಕಾರ್ಯಾಚರಣೆಗಳನ್ನು ವರ್ಣಿಸುತ್ತದೆ. ಅದು "ವೀತಯೇ" ಯಾ "ದೇವವೀತಯೇ"=ದೇವತೆಗಳ ಅವತಾರ ಅಥವಾ ಅವರು ಪ್ರತಿನಿಧಿಸುವ ಶಕ್ತಿಗಳು ಮತ್ತು ಕಾರ್ಯಗಳು-ವೈದಿಕ ಯಾಜಕನು ಉಪದಿಷ್ಟನಾಗಿ ಅಂತರಂಗದಲ್ಲಿ ಸ್ವಯಂ ಮಾಡಿದ ಧ್ಯಾನ ಮತ್ತು ಸಮರ್ಪಣ ಬಹಿರಂಗದಲ್ಲಿ ವಸ್ತುನಿಷ್ಠ (ಪ್ರವೃತ್ತಿ ವಿಜ್ಞಾನ) ದೃಷ್ಟಿಯಿಂದ ಮಾಡಿದ ಪೂಜೆ ಮತ್ತು ಹವಿರ್ದಾನ ಇವುಗಳಿಗಾಗಿ ಸೋಮರಸಗಳು "ಯಂತಿ ವೀತಯೇ" ಅಭಿವ್ಯಕ್ತವಾಗಲು ಅವು ಹೋಗುತ್ತವೆ ಯಾ ಅಭಿವ್ಯಕ್ತಿಗಾಗಿ ವೆಚ್ಚ ಮಾಡಲ್ಪಡುತ್ತವೆ - ಈ ಪ್ರಕರಣದಲ್ಲಿ ಮುಂದಿನ ಪದ್ಯದಲ್ಲಿ ನಾವು ನೋಡುವಂತೆ "ವೃದ್ಧೋ ಅಜಾಯಥಾ:" - ಇಂದ್ರನಿಗೆ ಸಂಬಂಧಿಸಿದಂತೆ- ಅವನೇ ಸೂಕ್ತ ವಿಷಯವು - ಮಾನಸಿಕ ಪ್ರಣೋದದ ಪ್ರಭುವು."

"ದಧಿ-ಆಶಿರ:" ಎಂಬ ಮಾತು ಎರಡು ಪ್ರತ್ಯೇಕ ಪದಗಳಿಂದ ಕೂಡಿರಬೇಕು ಅಥವಾ ಪದಪಾಠದಲ್ಲಿ ತಪ್ಪಾಗಿ ಕೂಡಿಸಿರಬೇಕು - ಅಥವಾ ಅದು ಸಾಯಣ ಹೇಳುವಂತೆ ಸಮಾಸಕ್ಕೆ ಒಳಪಟ್ಟಿರಬೇಕು ; "ಸೋಮಾಸ:" ಎಂಬುದಕ್ಕೆ ವಿಶೇಷಣವಾಗಬೇಕು. ಮೊದಲ ಪ್ರಕರಣದಲ್ಲಿ "ದಧಿಯು" ದಧ್ಯರ್ಥಕ ಮತ್ತು "ಆಶಿರ:" ದುಗ್ಧಾರ್ಥಕ ಆಗಿರಬೇಕು. ವಿವಿಧ ದುಗ್ಧ ಸ್ವರೂಪಗಳನ್ನು ಸೂಚಿಸಲು ಬಹುವಚನವನ್ನು ಪ್ರಯೋಗಿಸಲಾಗಿದೆ. ಆಗ ನಾವು ಯಾಜ್ಞಿಕವಾಗಿ ಭಾಷಾಂತರಿಸಿ "ಕಾಸಿ ಸೋಸಿದ ಸೋಮರಸಗಳು ಸೋಮಪಾಯಿಗಾಗಿ ಇವೆ ಇಲ್ಲಿ ; ಸೋಮಗಳನ್ನು ಶುದ್ಧೀಕರಿಸಲಾಗಿದೆ - ಮೊಸರು ಹಾಲುಗಳನ್ನು ಊಟಕ್ಕಾಗಿ ಇಡಲಾಗಿದೆ - ಊಟಕ್ಕಾಗಿ ಶುದ್ಧ ಮಾಡಿಡಲಾಗಿದೆ." ಬೇಕಾದವರು ಈ ಅರ್ಥವನ್ನು ಗ್ರಹಿಸಲಿ -ಅದರ ಹಿಂದಿನ ಔದಾತ್ತ್ಯದೊಡನೆ ಈ ವ್ಯರ್ಥಾಲಾಪವನ್ನು ಹೊಂದಿಸಲಿ ; ಹಾಗೇ ಮುಂದಿನ ಪದ್ಯದಲ್ಲಿಯ ಸೂಕ್ಷ್ಮತೆಯೊಡನೆ ಯುಕ್ತವಾಗಿ ಅರ್ಥಸಾಮಂಜಸ್ಯವನ್ನು ಸಾಧಿಸಲಿ. ಆದರೆ ಪದಗಳ ರಚನೆಯ ಹಾಗೂ ವ್ಯವಸ್ಥಾಪನೆಯ ದೃಷ್ಟಿಯಿಂದ "ದಧಿ ಆಶಿರ:" ಎಂಬುದು "ಸೋಮಾಸ:" ಎಂಬುದಕ್ಕೆ ವಿಶೇಷಣವಾಗಿದೆ - ಎಂಬುದು ಸ್ಪಷ್ಟ. ಸಾಯಣನ ವಿವರಣೆಯು ಆಶ್ಚರ್ಯಕರವಾಗಿ ಜಟಿಲವಾಗಿರುವುದರಿಂದ ಅದನ್ನು ಸ್ವೀಕರಿಸಲು ಸಾಧ್ಯವಿಲ್ಲ. "ದಧಿ ಆಶಿರ:" ಎಂಬುದಕ್ಕೆ "ದಧಿ ಆಶಿರಯುಕ್ತ:" ಎಂದು ಅರ್ಥಮಾಡಲು ಸಹಾ ಸಾಧ್ಯವಿಲ್ಲ. ಉಕ್ತ ಸಮಾಸಪದದಲ್ಲಿಯ ಎರಡರಲ್ಲಿ

ಒಂದು ಪದಕ್ಕೆ ಕ್ರಿಯಾಪದದ ಪ್ರಣೋದವಿರಬಹುದು, ಇನ್ನೊಂದಕ್ಕೆ ನಿಗೃಹೀತ ನಾಮಪದದ ಪ್ರಣೋದವಿರಬಹುದು. ನಾಮವಿಲ್ಲಿ ನಾಮಾರ್ಥಕ+ಗುಣವಚನಾರ್ಥಕ. ಹಾಗೆ ವೇದದಲ್ಲಿ ಸಮಸ್ತ ಪದದಲ್ಲಿಯ ಕ್ರಿಯಾಪದವು ತಾನು ಅರ್ಥನಿಯಂತ್ರಣ ಮಾಡುವ ಪದಕ್ಕೆ ಹಿಂದಕ್ಕಿರುವುದು ಸಹಜ-ಹಾಗಿರಲು ಅಲ್ಲಿ ಯಾವ ಅಭೇದ್ಯ ಕಾಲಿನ್ಯವೂ ಇಲ್ಲ. ಆಗ ದಧಿಯು ಕ್ರಿಯಾತ್ಮಕ ವಿಶೇಷಣವಾಗುವುದು - 'ಧಿ' ಎಂಬುದರ ದ್ವಿತ್ವದಿಂದ ಅದು ರೂಪಿತವು. ಹೋಲಿಸಿರಿ. ದಧಿಷ್ವ, ಗುಣವಾಚಕವಾದ ದಧ್ಹಿ = ಎತ್ತಿ ಹಿಡಿಯುವುದು, ಹಾಗೆ ಮಾಡಲು ಸಮರ್ಥವಾಗಿರುವುದು. "ಆಶಿರ" ಎಂಬುದೊಂದು ನಾಮಪದ ; ಅದರ ಅರ್ಥವು ಗಬಗಬನೆ ತಿನ್ನುವ ಉಷ್ಣತೆ ಯಾ ಪ್ರಣೋದ ಯಾ ಸಾಂದ್ರತೆ-ಆಶುವೆಂಬ ಮತ್ತೊಂದು ವೈದಿಕ ಪದಕ್ಕೆ ಅರ್ಥನಿಕಟತೆ ಉಳ್ಳದ್ದು - ಒಂದಕ್ಕಿಂತ ಹೆಚ್ಚು ಸಲ ಈ ಅರ್ಥದಲ್ಲಿದನ್ನು ಮಧುಚ್ಛಂದನು ಬಳಸಿದ್ದಾನೆ. ಆದುದರಿಂದ ನಮಗೆ "ದಕ್ಷ ಪವಿತ್ರೀಕ್ರಿಯಮಾಣ, - ತಮ್ಮದೇ ಆದ ಕಾರ್ಯಸಾಂದ್ರತೆಯನ್ನು ಬೆಂಬಲಿಸಲಿಕ್ಕೋಸ್ಕರವಾಗಿ." ಆದುದರಿಂದ ಶೀಘ್ರವಾಗಿ ವ್ಯರ್ಥಗೊಳಿಸಿದ್ದಲ್ಲ - ಹಾಗೆ ವ್ಯರ್ಥಗೊಳಿಸಿದ್ದೆಂದು ಅರ್ಥ ಮಾಡಿದರೆ ಐಂದ್ರ ಕರ್ಮಕ್ಕೆ ಅಗತ್ಯವಾದ ಪ್ರಮೋದ-ಪ್ರಣೋದಗಳನ್ನು ಒದಗಿಸಿಕೊಡಲು ಸಾಧ್ಯವಾಗದು ಎಂಬ ಅನಭಿಪ್ರೇತ ಅರ್ಥ ಬರುತ್ತದೆ.

> **ತ್ವಂ ಸುತಸ್ಯ ಪೀತಯೇ ಸದ್ಯೋ ವೃದ್ಧೋ ಅಜಾಯಥಾಃ ।**
> **ಇಂದ್ರ ಜ್ಯೈಷ್ಠ್ಯಾಯ ಸುಕ್ರತೋ ॥ ೬ ॥**

"ಸೋಮರಸಪಾನಕ್ಕಾಗಿ ನೇರವಾಗಿ ನೀನು ಮೇಲು ಮೇಲೇರಿ ತೋರಿಸಿಕೊಂಡೆ, ಬೃಹದಾಕಾರನಾಗಿ ತೋರಿಸಿಕೊಂಡೆ, ಎಲೈ ಇಂದ್ರನೇ, ಮಹಾ ಬಲನೇ, ನೀನು ಹಾಗೆ ಮಾಡಿದ್ದು ಸರ್ವೋಚ್ಚ ಆಧಿಪತ್ಯಕ್ಕಾಗಿ."

ಅಜಾಯಥಾಃ= "ತೋರಿಸಿಕೊಂಡೆ"- ಮತ್ತೆ ಅದು ಪೌನಃಪುನ್ಯ ಭೂತಕಾಲವಾಚಕವು. ಪದ್ಯದ (ಋಕ್ಕಿನ) ಕಲ್ಪನೆಯು ಹಿಂದಿನ ಪದ್ಯದ ಅರ್ಥವನ್ನು ತರ್ಕಶುದ್ಧವಾಗಿ ಅನುಸರಿಸುತ್ತದೆ. ಇಂದ್ರನನ್ನೇ ಏಕೆ ತಾನು ಆರಿಸಿಕೊಂಡೆನೆಂಬುದಕ್ಕೆ ಋಷಿಯು ಇಂದ್ರಸೂಕ್ತದ ಮೂಲಕವೇ ತನ್ನ ನಾಲ್ಕು ಋಕ್ಕುಗಳ ಮೂಲಕ ಕಾರಣಗಳನ್ನು ಕೊಡುತ್ತಾನೆ ; ಇಂದ್ರನ ಸೂಕ್ತಾರ್ಹತ್ವವನ್ನು ಸಮರ್ಥಿಸುತ್ತಾನೆ. ಆಗ ಅವನು ಆಹ್ಲಾದ ನಿರ್ಭರ ಜೈವಿಕ ಶಕ್ತಿಯಲ್ಲಿ ವಾಸ್ತವೀಕೃತ ಆನಂದವನ್ನು, ಅಮರತ್ವದ ಮದ್ಯವನ್ನು ಅರ್ಥಾತ್ ಸೋಮವನ್ನು ಆಹುತಿಕೊಡಲು ಹೊರಡುತ್ತಾನೆ. ಅದು ಮೊದಲು ಸಂತೋಷದ ಮತ್ತು ಜೈವಿಕತೆಯ ವಾಚಕಗಳ ಮೂಲಕ ಅಭಿವ್ಯಕ್ತವಾಗುತ್ತದೆ. ಅನಂತರ ಅದು ಶುದ್ಧೀಕೃತವಾಗುತ್ತದೆ. ಆಮೇಲೆ ದಿವ್ಯಮಾನಸ ಸ್ವರೂಪದ ಇಂದ್ರನ ಆವಿಷ್ಕಾರಕ್ಕಾಗಿ ಮಾನಸಿಕ ಪ್ರಣೋದವನ್ನು ಹೊರ ಹರಿಸುವುದರಲ್ಲಿ ಅದು ವ್ಯಯವಾಗುತ್ತದೆ. ಕೂಡಲೇ ಇಂದ್ರನು ಆವಿರ್ಭೂತನಾಗುತ್ತಾನೆ - "ಸದ್ಯಃ..... ಅಜಾಯಥಾಃ", ಆದರೆ ಅವನು ದೊಡ್ಡದಾಗಿ ಬೆಳೆದು ಆವಿಷ್ಕರಿಸುತ್ತಾನೆ. ಮೊದಲು ಬಾಳಿನ ಯೋಗ ಸೋಪಾನ ಪಂಕ್ತಿಯಲ್ಲಿ ಕಾಣಿಸಿಕೊಂಡದ್ದಕ್ಕಿಂತ ಮಾನಸ ಪ್ರಣೋದ ಸ್ವರೂಪದ ಇಂದ್ರನು ಈಗ ಇನ್ನಷ್ಟು ಬೃಹದಾಕಾರವಾಗಿ ಕಾಣಿಸಿಕೊಳ್ಳುತ್ತಾನೆ. "ಸುತಸ್ಯ ಪೀತಯೇ" ಸುತಸೋಮಪಾನಕ್ಕಾಗಿ ಇಂದ್ರನು ಈ ಪ್ರಕಾರ, ಬೃಹತ್ತರನಾಗಿ ಕಾಣಿಸಿಕೊಂಡದ್ದು ಒಂದನೆಯದಾಗಿ, ಭಟ್ಟಿ ಇಳಿಸಿದ ಹ್ಲಾದ ಹಾಗೂ ಜೀವರಸಗಳನ್ನು ಕುಡಿಯಲೆಂದು ; ಎರಡನೆಯದಾಗಿ, ಪರಿಣಾಮತಃ ಮತ್ತು ತನ್ಮೂಲಕ "ಜ್ಯೇಷ್ಠ್ಯಾಯ" ಯಾವಾಗಲೂ ತಾನು ಪೂರ್ಣಾವತಾರಿ ಎಂದೂ ದೇವತೆಗಳ ಯುದ್ಧದಲ್ಲಿ, ಯಾವಾಗಲೂ ದೇವಯೋಧರಲ್ಲಿ ತಾನು ಅಗ್ರೇಸರ ನಾಯಕ ಎಂದೂ ರಾಜಾಧಿರಾಜ ಎಂದೂ ತೋರಿಸಿಕೊಡುವುದಕ್ಕಾಗಿ ; ಏಕೆಂದರೆ

ಅವನು ತನ್ನ ಆ ಪೂರ್ಣತೆಯಲ್ಲಿ ಪೂರ್ಣ ಪ್ರಣೋದವನ್ನು ತೋರುವವನು ; ಆದುದರಿಂದ "ಸುಕ್ರತೋ" ಎಂಬುದನ್ನು "ಜ್ಯೈಷ್ಠ್ಯಾಯ" ಎಂಬುದನ್ನು ವಿವರಿಸುವುದಕ್ಕಾಗಿ ಋಕ್ಕಿನ ಕೊನೆಗೆ ಕೊಡಲಾಗಿದೆ. ಮನಃಶಕ್ತಿಯ ಒಡೆಯನು, ಮನೋಬಲದ ಆಧಾರಸ್ವರೂಪನು, ಮನಃಪ್ರಣೋದದ ಅಧಿಷ್ಠಾತಾರನು ಒಬ್ಬ ಬಲಿಷ್ಠ ದೇವನು. ಆದುದರಿಂದ ಅವನು ತನ್ನ ಪೂರ್ಣಸ್ವರೂಪದಲ್ಲಿ ಅವತರಿಸಿದಾಗ ಯಾವಾಗಲೂ ನಮ್ಮ ಕರ್ಮಗಳಲ್ಲಿ ಅವನ ನಾಯಕತ್ವವೇ ಮುಖ್ಯವಾಗುತ್ತದೆ. ಈಯೆರಡು ಋಕ್ಕುಗಳಲ್ಲಿ ಉತ್ತರೋತ್ತರಸ್ಥ ಆನುಕ್ರಮಿಕ ಸಾಂಕೇತಿಕ ಕಲ್ಪನೆಗಳನ್ನು ಸಂಪೂರ್ಣ ತಾರ್ಕಿಕ ವ್ಯವಸ್ಥೆಯಲ್ಲಿ ಹಂತಹಂತವಾಗಿ ದಿವ್ಯಾವತಾರ ಸ್ವರೂಪದಲ್ಲಿ ಇಡೀ ಪ್ರಕ್ರಿಯಾಪೂರ್ವಕವಾಗಿ ಈ ಕೆಳಮಟ್ಟದ ಭೌತಿಕ ಚಟುವಟಿಕೆಯಲ್ಲಿ "ದೇವವೀತಿ" ಎಂಬ ಅಧ್ವರ (ಅಹಿಂಸ) ಯಜ್ಞಪ್ರಕರಣದಲ್ಲಿ ಪ್ರಕಟಿಸಲಾಗಿದೆ.

**ಆತ್ವಾ ವಿಶಂ ತ್ವಾ ಶವಃ ಸೋಮಾಸ ಇಂದ್ರಗಿರ್ವಣಃ ।**
**ಶಂತೇ ಸಂತು ಪ್ರಚೇತಸೇ ॥ ೭ ॥**

"ಉರಿದೇಳುವ ಸೋಮರಸಗಳು ನಿನ್ನೊಳ ಹೊಗಲಿ _ ಓ ಇಂದ್ರಾ-ಹೇ ಮಂತ್ರಪ್ರೀತಾ, ಪ್ರಗತ್ಯುನ್ಮುಖವಾದ ನಿನ್ನ ಸಕ್ರಿಯ ಜಾಗರದಲ್ಲಿ ಶಾಂತಿ ಇರಲಿ"

ಆಶವಃ=ವ್ಯಾಪ್ತಿಮಂತಃ ಎಂಬುದು ಸಾಯಣ ವ್ಯಾಖ್ಯೆಯು. ಆದರೆ ವಿಶೇಷಣವಾಗ ಅನುಕೂಲಮುಖವಾಗದು. ಆಶಿರದಂತೆಯೇ ಆಶು ಎಂದರೂ ಗಬಗಬನೆ ತಿನ್ನುವ, ಉರಿಯುವ, ಸಾಂದ್ರ, ಅದಮ್ಯಾತಿವರ್ತಿ, ಸವೇಗ ಎಂಬ ಅರ್ಥಗಳನ್ನೇ ಆಶಿರ ಪದಕ್ಕೆ ಹೇಳುತ್ತದೆ. ಆಶಿರದ ಅರ್ಥದೊಡನೆ ಹೋಲಿಸಿರಿ : ಆಶಿರಃ=ಬೆಂಕಿ, ಸೂರ್ಯ, ದೆವ್ವ ಯಾ ರಾಕ್ಷಸನು. ಹ್ಲಾದವೂ ಜೀವರಸವೂ ಮನಃಪ್ರಣೋದವನ್ನು ವ್ಯಾಪಿಸಬೇಕು ಮತ್ತು ಇದು ಮಂತ್ರಪ್ರಣೊದದಿಂದಾಗ-ಬೇಕಾಗಿರುವುದರಿಂದ ("ಗಿರಃ"), ಆ ಕಾರಣದಿಂದ, ಇಂದ್ರನನ್ನು ಗಿರ್ವಣಃ=ಮಂತ್ರ ಎಂದು ಕರೆದದ್ದು ಅಲ್ಲದೆ, ವೈದಿಕ ಅಂತಃ ಸಂಬಂಧ ಸೂತ್ರಾನುಸಾರ, ಮುಂದಿನ ಋಕ್ಕಿನ ವಿಷಯಕ್ಕೆ ಹೋಗುವ ಹಾದಿಯ ಅಂತರ್ ವ್ಯವಸ್ಥೆಯೂ ಆಗಿದೆ.

"ಪ್ರಚೇತಸೇ"=ಈ ವಿಶೇಷಣವು ಬರಿ ಅಲಂಕಾರಿಕವೂ ಅಲ್ಲ ಯಾ ಸಾಮಾನ್ಯವರ್ಣನಾತ್ಮಕವೂ ಅಲ್ಲ ; ಹಾಗಿದ್ದಲ್ಲಿ ಸಂಬೋಧನ ರೂಪವನ್ನು ಬಳಸಲಾಗುತ್ತಿತ್ತು. ತದ್ವಿರುದ್ಧವಾಗಿ ಚತುರ್ಥಿಯನ್ನು ಬಳಸುವುದರಿಂದ "ಪ್ರಚೇತಸ್" ಎಂಬುದು ಆಶಿಸಲಾದ ಶಾಂತಿಯು ಯಾವ ಔಪಾದಿಕ ಸ್ಥಿತಿಯಲ್ಲಿ ಆಶಿಸಲ್ಪಟಿದೆ ಎಂಬುದನ್ನು ವ್ಯಕ್ತಪಡಿಸಲೆಂದೇ ಆಗಿದೆ. ಸಾಧಕನಿಗಿಲ್ಲಿ ಎದುರಾಗುವ ಬಹುದೊಡ್ಡ ತೊಂದರೆಯೆಂದರೆ ಶಾಂತ್ಯಾಧಾರದ ಮೇಲೆ, ಅದರೊಟ್ಟಿಗೆ, ಕಾರ್ಯವನ್ನು ಆರಂಭಿಸುವುದು. ಯೋಜನೆಯಲ್ಲಿ ಯಾವಾಗ ಅತಿಘನ ಪ್ರಣೋದವು ಪ್ರವಿಷ್ಟವಾಯಿತೋ ಯಾವಾಗ ಕ್ರಿಯಾಮಗ್ನವಾಗಿ ಮಾಡಲ್ಪಟ್ಟಿತೋ ಆಗ ಅದು ಕುತೂಹಲವನ್ನೂ, ಗೊಂದಲವನ್ನೂ, ವಿಘ್ನವನ್ನೂ ಕಾರ್ಯೋತ್ಸಾಹದ ಉದ್ರೇಕವನ್ನೂ ಪುನರಾವೃತ್ತಿಯ ಸುಸ್ತನ್ನೂ ಉಂಟುಮಾಡಿಬಿಡುತ್ತದೆ ; ಶಂಭಾವದ ಅಭಾವವು ಯಾ ಅಶಾಂತಿಯು ಅಲ್ಲಿ ಉದಯಿಸುತ್ತದೆ. ಈ ಕಷ್ಟವನ್ನು ಸುಲಭವಾಗಿ ಪರಿಹರಿಸಬೇಕಾದರೆ ಶಾಂತಸ್ಥಿತಿಯಲ್ಲಿರುವ ಸಾಧಕನು (ಮುಮುಕ್ಷುವು) ಆನಂದವನ್ನು ಬರಿದೆ ಅನುಭವಿಸಬೇಕು - ಅದನ್ನು ಬಳಸಬಾರದು. ಆದರೆ ಮನಃ ಪ್ರಣೋದನಾದ ಇಂದ್ರನು ಪ್ರಚೇತಸ್=ಜಾಗರಿತನಾಗಿ ಸಕ್ರಿಯ ಸ್ಥಿತಿಯಲ್ಲಿ ಇರಲೇಬೇಕು - ಆಗ ಅವನು ತನ್ನ ಎಚ್ಚರವನ್ನು ಮುಂದಿಟ್ಟುಕೊಂಡು ವಿಚಾರವನ್ನೂ, ಕರ್ಮವನ್ನೂ ಸಾಗಿಸಿಕೊಂಡು ಹೋಗಬೇಕು - ಅವನು ಸೋಮರಸವನ್ನು

ಹೀರಿಕೊಳ್ಳಬೇಕು ಮತ್ತು ಅದರ ಚಿಕ್ಕತೇಜೋಂಶವನ್ನು ಸಹಾ ಬಿಡಕೂಡದು-ಹೀಗೆಯೇ ಇದ್ದೂ ಅವನು ಮುಕ್ತಾತ್ಮನ ಶಾಂತಿಯನ್ನು ಕಾಪಾಡಬೇಕು. ಸೋಮರಸಗಳು ಇನ್ನಷ್ಟು ಶಾಂತಿಯನ್ನು ತರಬೇಕು - ಸಕ್ರಿಯ ಮಾನಸಕ್ಕೆ ಅವು ಮತ್ತಷ್ಟು ಪ್ರಣೋದವನ್ನು ಸೇರಿಸಬೇಕು.

**ತ್ವಾಂ ಸ್ತೋಮಾ ಅವೀವೃಧನ್ ತ್ವಾ ಮುಕ್ಥಾ ।**
**ಶತ ಕ್ರತೋ ತ್ವಾಂ ವರ್ಧಂತು ನೋಗಿರಃ ॥ ೮ ॥**

"ನಿನ್ನ ಕುರಿತ ಸೂಕ್ತಗಳು ನಿನ್ನನ್ನು ಸಂವರ್ಧಿಸಿದವು ; ಶತಕ್ರತುವಾದ ಓ ಇಂದ್ರನೇ, ಪ್ರಾರ್ಥನಾ ಸೂಕ್ತಗಳು ನಿನ್ನನ್ನು ಹೆಚ್ಚಿಸಿದವು - ನಮ್ಮ ಮಂತ್ರಗಳೂ ನಿನ್ನನ್ನು ಬಲವತ್ತರನನ್ನಾಗಿ ಮಾಡಲಿ."

"ಅವೀವೃಧನ್" ಎಂಬುದು ಪೌನಃಪುನ್ಯ ಭೂತಕಾಲದಲ್ಲಿದೆ. ಈ ಹಿಂದೆ ಒಂದು ನಿಯಮವೇ ಎಂಬಂತೆ, ಇಂದ್ರಸ್ತುತಿ - ಇಂದ್ರ ಪ್ರಾರ್ಥನೆಗಳು ಅಧಿಕವಾಗಿವೆ ಹಾಗೂ ಮಾನಸಿಕ ಪ್ರಣೋದವನ್ನು ಬೆಳೆಸಿವೆ. ಈ ಮಂತ್ರದ ಪದಗಳೂ ಈಗ ನಿನ್ನನ್ನು ಬಲಾಢ್ಯತರನನ್ನಾಗಿ ವೃದ್ಧಿಗೊಳಿಸಲಿ.

"ಗಿರಃ"-ಕೊನೆಯ ಸಾಲಿನ "ಗಿರ್ವಣಃ" ಎಂಬ ಪದವನ್ನು ತೆಗೆದುಕೊಳ್ಳುತ್ತದೆ. ಇಂದ್ರನನ್ನು ಬಲಪಡಿಸುವುದರಲ್ಲಿ ಸೋಮನನ್ನು ಈ ಮಂತ್ರವು ಫಲಕಾರಿಯನ್ನಾಗಿ ಮಾಡಬೇಕಾಗಿದೆ. ಆದುದರಿಂದ ವಿಚಾರವು ಮೊದಲನೆಯ ಋಕ್ಕಿನ "ಪ್ರಗಾಯತ" ಎಂಬುದನ್ನು ತೆಗೆದುಕೊಂಡು ಪ್ರಾರ್ಥಿತ ಇಂದ್ರನು ನಿರ್ವಹಿಸಬೇಕಾದ ಕರ್ತವ್ಯಕ್ಕೆ ಅನ್ವಯಿಸುತ್ತದೆ. ಅದಕ್ಕಾಗಿಯೇ ಅವನಿಗೆ ಸೋಮಮದ್ಯವನ್ನು ಕೊಡಲಾಗಿದೆ. ಇದೇ ಆ ಆಮಂತ್ರಕ ಗೀತದ ಸಾಮಾನ್ಯ ಉದ್ದೇಶ ಮತ್ತು ಸೋಮಾಹುತಿಯ ತೇಜೋಮಯ ಸಾಮರ್ಥ್ಯದಲ್ಲಿ ಈ ದಿವ್ಯ ಸಂವರ್ಧನೆಗಿರುವ ಉಪಯೋಗವು.

**ಅಕ್ಷಿತೋ ತಿಃ ಸನೇದಿಮಂ ವಾಜಮಿಂದ್ರಃ ಸಹಸ್ರಿಣಂ ।**
**ಯಸ್ಮಿನ್ ವಿಶ್ವಾನಿ ಪಾ ಸ್ಯಾ ॥ ೯ ॥**

"ಯಾವುದರ ಮೇಲೆ ನಮ್ಮೆಲ್ಲಾ ಸಾಮರ್ಥ್ಯಗಳೂ ಪ್ರತಿಷ್ಠಿತವಾಗಿವೆಯೋ ಆ ಅಸಂಖ್ಯಾತ ಸಂಪತ್ ಸಮೃದ್ಧ ಮನಸ್ಸನ್ನು (ಮನಸ್ಸೆಂಬ ಸಮೃದ್ಧ ಸಂಪತ್ತನ್ನು) ಅದನ್ನು ತನ್ನ ವಿಸ್ತರಣೆಯಲ್ಲಿ ಅನಾವಿದ್ಧನಾಗಿ ಇಂದ್ರನು ರಕ್ಷಿಸಲಿ." ಅಕ್ಷಿತೋತಿಃ-ಅದರ ಶುದ್ಧ ಹೊಲಸುತನ ಮತ್ತು ಅಸಮಾಧಾನಕರ ನಿರರ್ಥಕತೆಯ ದೆಸೆಯಿಂದ, ಒಂಬತ್ತನೆಯ ಋಕ್ಕಿನ ಯಾಜ್ಞಿಕ ಅರ್ಥವ್ಯಾಖ್ಯೆ ಸಂಪೂರ್ಣ ಅರ್ಥಹೀನವೆಂದು ಹೇಳಲು ಸಾಧ್ಯವಿಲ್ಲ. ಸಾಯಣನು ವಾಜವನ್ನು ಆಹಾರವೆನ್ನುತ್ತಾನೆ ಮತ್ತು ಅದು ಸೋಮನಿಗೆ ಸಂಬಂಧಿಸಿದ್ದೆಂದು ಗ್ರಹಿಸುತ್ತಾನೆ. "ಇಂದ್ರನು ತನ್ನ ಅನಪಾಯಪಾತ್ರವಾದ ರಕ್ಷಕತ್ವದಿಂದ ಸಹಸ್ರ ಸಂಖ್ಯಾತವಾದ 'ಈ ಅನ್ನವನ್ನು ಉಂಡು ಸಂತೋಷಿಸಲಿ - ಇದರಲ್ಲಿ ಆಹಾರವೇ ಸರ್ವಶಕ್ತಿಗಳು." ಎಂಬುದು ಅವನ ವಿವರಣೆಯು. ಇಲ್ಲಿ ಪರ್ಯದ ಅರ್ಥ ತಿಳಿಯದ ಮನದ ಕ್ರಿಯೆ ಹಾಗೂ ಬಡಿದು ಬಡಿದು ಪಾರಂಪರಿಕ ಯಾಜ್ಞಿಕ ಪೂರ್ವಗೃಹೀತ ಅರ್ಥದೊಡನೆ ಹೊಂದಿಕೊಳ್ಳುವಂತೆ ಮಾಡುವ ಯತ್ನವನ್ನು ಬಿಟ್ಟರೆ ಇನ್ನಾವ ಅಂಶವೂ ಸ್ಪಷ್ಟವಾಗುವುದಿಲ್ಲ. ಸಾಂಕೇತಿಕ ವ್ಯಾಖ್ಯಾನದ ದೃಷ್ಟಿಯಿಂದ, ಬೆಳಕಿನಿಂದ ಪ್ರತಿಯೊಂದು ಇತರ ಋಕ್ಕಿನಂತೆಯೇ ಅರ್ಥದಲ್ಲೂ ಅರ್ಥಸಂಬಂಧದಲ್ಲೂ ಇದು ಸರಳವೂ, ನೇರವೂ, ತರ್ಕಶುದ್ಧವೂ ಸುವ್ಯವಸ್ಥಿತವೂ ಸೂಕ್ಷ್ಮ ಉದ್ದೇಶದಿಂದ ಕೂಡಿದ್ದೂ ಪರಿಪೂರ್ಣ ಕೌಶಲ ಸಂಪನ್ನವೂ ಆಗಿ ತೋರುತ್ತದೆ. ಊತಿಃ - ಊತಿಯೆಂದರೆ ವಿಸ್ತರಣವು. ತನ್ನ ಅನುಭವಕ್ಕೆ ಅನುಗುಣವಾಗಿ ಇಂದ್ರನು ಮನಃ ಪ್ರಣೋದವನ್ನು

ಹೆಚ್ಚಿಸಿದ್ದಾನೆ ಎನ್ನಲಾಗಿದೆ- "ವೃದ್ಧೋ ಅಜಾಯಥಾಃ, ಅವೀವೃಧನ್" - ಮತ್ತು ಪ್ರಾರ್ಥನಾನುಸಾರವಾಗಿ "ತ್ವಾಂ ವರ್ಧಂತು ನೋಗಿರಃ" - ಅವನು ವೃದ್ಧನು, ಬೆಳೆದವನು ; ಹೆಚ್ಚಿಸಲಾದ ಮಾನಸ ಪ್ರಣೋದವು ಅನಾವಿದ್ಧವಾಗಿರಲಿ ಎಂದು ಋಷಿಯು ಪ್ರಾರ್ಥಿಸುತ್ತಾನೆ. ಹೆಚ್ಚಿದ ಮಾನಸ ಪ್ರಣೋದವು "ಅಕ್ಷಿತ"ವಾಗಿರಲಿ ಮತ್ತು ಪ್ರಣೋದಾಧೀಶನ ಪ್ರಣೋದವು ಕಡಿಮೆಯಾಗದಿರಲಿ ಎಂಬುದೂ ಆ ಋಷಿಯ ಪ್ರಾರ್ಥನೆ. ತನ್ನ ಶಕ್ತಿಯ ವಿಕಾಸದಲ್ಲಿ ವಿಸ್ತಾರದ ಶಕ್ತಿಯಲ್ಲಿ ಹೀಗೆ ರಕ್ಷಿತವಾದ ಪ್ರಣೋದವು "ಸನೇದ್" ರಕ್ಷಿಸಲಿ ಯಾ ಉಳಿಸಲಿ ಯಾ ಸುರಕ್ಷಿತವಾಗಿ ಇಡಲಿ ; ಮನಸ್ಸಿನ ಈ ಸಾರವೇ ಸಮೃದ್ಧ ಬಗೆದಿರುಳು ; ಇಂದ್ರ ಪ್ರಣೋದ ಪೂರ್ಣವಾಗಿದೆ ಇದು ("ಸಹಸ್ರಿಣಂ"). ಇದರಲ್ಲಿ ಎಲ್ಲ ಮಾನವ್ಯ ಸಾಮರ್ಥ್ಯಗಳೂ ಪರಿಣಾಮಕತೆಯ ಸಿದ್ಧಿಗಾಗಿ ಮತ್ತು ಸ್ಥಾಯಿತ್ವಕ್ಕಾಗಿ ವಿಶ್ರಾಂತಿ ಪಡೆಯುತ್ತವೆ, ವಿರಮಿಸುತ್ತವೆ.

ಸನೇದ್ - ಸಾಃ, ಸಾತಿಃ ಸನ್, ಸನಯಃ, ಸನಃ ಸನಿಃ, ಸಾನಸಿಃ ಎಂಬ ಪದಪುಂಜವು ವೇದದಲ್ಲಿ ಬಹಳ ಮಹತ್ವವುಳ್ಳದ್ದಾಗಿದೆ. ಇದರ ಅರ್ಥವಿವರಣೆಯಲ್ಲಿ ಸಾಯಣಾಚಾರ್ಯನು ಹೊಂದಿಕೆ ಇಲ್ಲದಂತೆ ಮಾಡಿದ್ದಾನೆ. ಅವನದಕ್ಕೆ ತನಗೆ ಪ್ರಿಯವಾದ ಯಾಜ್ಞಿಕ ವಿವರಣೆಯನ್ನು ಕೊಡುತ್ತಾ ದಾನ, ಅನುಗ್ರಹ, ಸಂತಾನ, ಭೋಜನ ಮುಂತಾದ ಅರ್ಥಗಳನ್ನು ಹೇಳುತ್ತಾನೆ. ನಾನದಕ್ಕೆ ಕೊಡುವ ಅರ್ಥವು ಸಾರ, ಸ್ಥಾಯಿತ್ವ, ಸುರಕ್ಷಿತತೆ. ಸುರಕ್ಷಿತತೆಯಲ್ಲಿಡುವುದು, ಅನಪಾಯ ಸ್ಥಿತಿಯಲ್ಲಿಟ್ಟಿರುವುದು ಎಂದು. ಸಕಾರ ಕುಟುಂಬದ ಧಾತುಗಳ ಮೂಲಭೂತ ಅರ್ಥವು ಸಾರ (ವಸ್ತುತ್ವದ ಹುರುಳು), ಗಟ್ಟಿಯಾಗಿ ಹಿಡಿದುಕೊಂಡಿರುವುದು (ನಿರ್ಧಾರನಿಷ್ಠೆ), ಸ್ಥಿರತೆ, ಘನತೆ ಯಾ ಸಾರವತ್ತೆ, ಸಾಂದ್ರತೆ. ಸಾಃ=ಗ್ರೀಕಿನ ಸ್ವ್ (sws)=ಸುರಕ್ಷಿತ ; ಗ್ರೀಕ್ ಸೋಸಿಸ್=ಸುರಕ್ಷೆ ಮೋಕ್ಷ ಯಾ ಉಳಿಸಿ ಇಟ್ಟುಕೊಂಡಿರುವುದು ಎಂಬರ್ಥ ವೇದದ "ಸಾತಿ"ಗಿದೆ. ಸನ್ ಎಂಬುದು ಲ್ಯಾಟಿನ್ನಿನ ಸನುಸ್ ಎಂಬುದರ ಮೂಲವು ; ಸನಸ್=ಧ್ವನಿ, ಶಬ್ದ, ಸದ್ದು; ಸೇನ್=ಸಾರೋಗ್ಯ- ಇದು ಮೂಲಭೂತ ಅರ್ಥವಾದ "ಸುರಕ್ಷಿತ, ಅಪಾಯದೂರ" ಎಂಬುದನ್ನವಲಂಬಿಸಿದೆ ಮತ್ತು ಸಂಸ್ಕೃತದ "ಸನತ್, ಸನಾ, ಸನಾತ್, ಸನಾತನಃ" = ಸತತ, ನಿತ್ಯ ಮತ್ತು ಸನಯಃ, ಸನಿಃ, ಸನಃ, ಸಾನಸಿಃ ಎಂಬಿವು ತನ್ನಿಷ್ಪನ್ನವಾಗಿವೆ-ಈ ಮೂಲಭೂತಾರ್ಥದಲ್ಲಿ. ಈ ಶಬ್ದಗಳು ಬರುವ ಪ್ರತಿಯೊಂದು ಉಪಚ್ಛೇದದಲ್ಲೂ ಈ ಅರ್ಥವಿವರಣೆಯು ಅದರ ಮೇಲೆ ಬೆಳಕು ಬೀರುತ್ತದೆ ಎಂಬುದು ನಮಗೆ ಗೊತ್ತಾಗುತ್ತದೆ ; ಇದರಿಂದ ಅರ್ಥವ್ಯತ್ಯಾಸ ಮಾಡಬೇಕಾಗುವುದಿಲ್ಲ, ಎಂದೂ ನೇಯಾರ್ಥಕ್ಕಿಳಿಯಬೇಕಾಗಿಲ್ಲ ಅಥವಾ ವಾಕ್ಯರಚನೆಯ ವಿಕಟತೆಯನ್ನು ಎದುರಿಸಬೇಕಾಗಿ ಬರುವುದಿಲ್ಲ.

ಸಹಸ್ರಂ - ಇದರ ಅರ್ಥವು ಸಾವಿರವೆಂದು. ಅದೊಂದೇ ಅದರ ಅರ್ಥವಾಗಿದ್ದರೆ, ಸಹಸ್ರಿಣಂ" ಎಂಬುದಕ್ಕೆ, ಸಹಸ್ರ-ಸಹಸ್ರ, ಸಹಸ್ರಪಟ್ಟು, ಸಾವಿರಪಟ್ಟು, ಅನಂತವಾಗಿ ಅಸಂಖ್ಯಾತ ಯಾ ವಿವಿಧ ಎಂದು ಅರ್ಥ ಹೇಳಬೇಕಾಗುತ್ತದೆ. ಮೂಲತಃ "ಸಹಸ್ರ" ಎಂದರೆ ಬಹುವಸ್ತುಯುಕ್ತ, ಪ್ರಣೋದ ನಿರ್ಭರ ಎಂಬರ್ಥದ ಗುಣವಾಚಕವಾಗಿರಬೇಕು ಯಾ ಯಥೇಷ್ಟ ಅಥವಾ ಪ್ರಣೋದ ಎಂಬರ್ಥದ ನಾಮಪದವಾಗಿರಬೇಕು - ಎಂದು ನನಗೆ ಖಚಿತವಾಗಿದೆ. ಆಗ "ಸಹಸ್ರಿಣಂ" ಎಂಬುದಕ್ಕೆ "ಯಥೇಷ್ಟ ಸಮೃದ್ಧಿ ಸಂಪನ್ನ ಅಥವಾ ಪ್ರಣೋದದಲ್ಲಿ ಶ್ರೀಮಂತ - ಎಂದರ್ಥವಾಗುತ್ತದೆ. ಯಾವ ಅರ್ಥದಲ್ಲಿಯೇ ಆಗಲಿ, "ಯಸ್ಮಿನ್ ವಿಶ್ವಾನಿ ಪೌಂಸ್ಯಾ" ನಮ್ಮ ಎಲ್ಲ ವ್ಯಾವಹಾರಿಕ ತಜ್ಞತೆಗೆ ಅಥವಾ ಪುರುಷಕಾರಗಳಿಗೆ ಬುನಾದಿಯಾದ ಮನಃಸಾರ-ಮನಃಪ್ರಣೋದ ಸ್ವರೂಪದ ಐಶ್ವರ್ಯವನ್ನು ಬಹುವಿಧದ

ಸಿರಿವಂತಿಕೆಯನ್ನು, ಅದು ಚೆನ್ನಾಗಿ ವರ್ಣಿಸುತ್ತದೆ. ನಮಗೆ ಬೇಕಾದರೆ ನಾವು ಉಕ್ತ ಪದ ಸಂಹತಿಯನ್ನು "ಸಹಸ್ರದಿಂದ ಎಣಿಸಲಾದ ಸಂಪತ್ತು" ಸಾವಿರಾರು ಸುವರ್ಣನಾಣ್ಯಗಳನ್ನು ಯಾ ಮಾನವನ ಸರ್ವವಿಧದ ಸಾಮರ್ಥ್ಯ-ಮಹತ್ವಗಳನ್ನು ಗರ್ಭೀಕರಿಸಿಕೊಂಡಿರುವಂಥ ಗೋವ್ರಜವನ್ನು ಸೂಚಿಸುವ ಪದ ಸಂಘಾತ ಎಂದು ವೈದಿಕ ಋಷಿಯಂತೆ ಹೇಳಬಹುದು. ಆದರೆ ಇಂದಿನ ಶ್ರೀಮಂತರಾಳಿಕೆಯಲ್ಲಿ ಧನವಂತಿಕೆಯೊಂದೇ ರಕ್ಷಣಾಕರ ಎಂದು ಅವಾಸ್ತವವಾಗಿ ನಂಬಿರುವ ಕಾಲವದಾಗಿರಲಿಲ್ಲ ; ತದ್ವಿರುದ್ಧವಾಗಿ ವೇದಕಾಲೀನ ಋಷಿಗಳು (ತದನುಯಾಯಿ ಜನತೆ) ಆ ಪ್ರಾಚೀನ ಕಾಲದಲ್ಲಿ ಧನಲಕ್ಷ್ಮೀ ಪುತ್ರತ್ವವಲ್ಲ - ಸಾಮರ್ಥ್ಯ, ಕೌಶಲ ಮತ್ತು ಮನೋದಾರ್ಢ್ಯಗಳೇ ತಮ್ಮನ್ನು ಆತ್ಯಂತಿಕವಾಗಿ ಕಾಯುವುದು ಎಂದು ನಂಬಿ ನಡೆದುಕೊಳ್ಳುತ್ತಿದ್ದರೆಂದು ನಾನು ಭಾವಿಸುತ್ತೇನೆ ; ಧನಪೂಜೆಯಲ್ಲ - ಮನೋಧಿಪತಿಯಾದ ಇಂದ್ರನ ಪೂಜೆ ಅವರದಾಗಿತ್ತು. ವೈದಿಕ ಋಷಿಗಳು ನಾಗರಿಕ ದಶೆಯ ಪ್ರಥಮಾವಸ್ಥೆಯಲ್ಲಿದ್ದಿರಬಹುದು. ಆದರೆ ಅಂಥ ಪ್ರಾಥಮಿಕ ದಶೆಯವರು ಇಂಥ ಭಾವನೆಗಳನ್ನು ಹೊಂದಿರಲಿಲ್ಲ. ಅವರಿಗೆ ಸಾಮರ್ಥ್ಯ ಮತ್ತು ಕೌಶಲಗಳೇ ಮುಖ್ಯವಾಗಿದ್ದವು - ಅವುಗಳ ಫಲವು ಅವರಿಗೆ ದೊರಕುತ್ತಿದ್ದ ಬಹುಮಾನವು.

**ಮಾನೋ ಮರ್ತಾ ಅಭಿದ್ರುಹನ್‌ತನೂನಾಮಿಂದ್ರ ಗಿರ್ವಣಃ ।**
**ಈಶಾನೋ ಯವಯಾ ವಧಂ ॥ ೧೦ ॥**

"ಮರ್ತ್ಯ ಮಾನವರು (ಅಥವಾ ಕೊಲೆಗಡುಕರು) ನಮಗೆ ಹಾನಿಯನ್ನುಂಟು ಮಾಡದಿರಲಿ. ಇಂದ್ರನೇ ನೀನು ಮಂತ್ರ ಸಂತುಷ್ಟನು. ನೀನು ನಮ್ಮ ಶರೀರಗಳ ಒಡೆಯನಾಗು ; ನಮಗೆ ಬೀಳಲಿರುವ ಹೊಡೆತವನ್ನು ತಪ್ಪಿಸಿಕೊಳ್ಳುವ ಶಕ್ತಿಯನ್ನು ಕೊಡು.

ಮರ್ತಾಃ = ಗ್ರೀಕ್ "ಬ್ರೋತೋಸ್", ಮರ್ತ್ಯ ; ಆಧ್ಯಾತ್ಮಿಕ ಶತ್ರುಗಳನ್ನು ಗೆದ್ದು ಪಡೆದ ಆಧ್ಯಾತ್ಮಿಕ ಪುಣ್ಯವನ್ನು ರಕ್ಷಿಸೆಂದು ಆಗಲೇ ಋಷಿಯು ಪ್ರಾರ್ಥಿಸಿದ್ದಾನೆ. ಈಗ ಅವನು ಮನುಷ್ಯರ ಹೊಡೆತದಿಂದ ತನ್ನ ಭೌತಿಕ ಶರೀರವನ್ನೇ ಕಾಯೆಂದು ಪ್ರಾರ್ಥಿಸುತ್ತಾನೆ. ಆದರೆ "ಮರ್ತಾಃ" ಎಂಬುದಕ್ಕಿಲ್ಲಿ ಕರ್ತ್ರರ್ಥವಿದೆಯಲ್ಲದೆ ಕರ್ಮಾರ್ಥವಿಲ್ಲವೆಂದು ನಾನು ಭಾವಿಸುತ್ತೇನೆ. ಏಕೆಂದರೆ, ತ ಪ್ರತ್ಯಯಕ್ಕೆ ಎರಡೂ ಅರ್ಥಗಳ ಶಕ್ತಿ ಇದ್ದಿರಬಹುದು. ವೇದದಲ್ಲಿ ನಿಃಸಂದಿಗ್ಧವಾಗಿ ಮರ್ತ ಪದಕ್ಕೆ ಸಾವಿಗೀಡಾಗುವವನು ಎಂಬ ಅರ್ಥವಿದೆ. ಆದರೆ ಅದು ಹಂತಕ, ತಾಡಕ ಎಂಬ ಅರ್ಥವನ್ನೂ ಹೇಳಬಹುದು. ಲ್ಯಾಟಿನ್ನಿನಲ್ಲಿ ಸಾಯಿಸುವವ, ಮರ್ತವು "ಮೋರ್ಸ್" ಎಂದಾಗುತ್ತದೆ-ಮರ್ತ್ಯದ ಸಕರ್ಮಕಾರ್ಥವಾದ ಮರಣಾರ್ಹ ಯಾ ಮಾರಕ ಎನ್ನುತ್ತದೆ ಲ್ಯಾಟಿನ್. "ತನೂನಾಂ" ಎಂಬುದಕ್ಕೆ ಏನು ಮಾಡಿದರೂ ನಾನು ಸಾಯಣನ ಅರ್ಥವನ್ನು ಸ್ವೀಕರಿಸಲಾರೆ - ಅವನದನ್ನು ಅಭಿಗೆ ಕರ್ತೃವೆನ್ನುತ್ತಾನೆ. ನಾನು "ಈಶಾನಃ" ಎಂಬುದಕ್ಕೇ ಅದರ ಸಂಬಂಧವನ್ನು ಗ್ರಹಿಸುತ್ತೇನೆ. ಹಾಗೆ ಮಾಡದಿದ್ದರೆ ನಾನು ಅತಿ ವಿರಳವಾದ ಜಡಾರ್ಥವನ್ನು ಹೇಳಿದಂತಾಗುತ್ತದೆ ; ಅದಕ್ಕೆ ಅರ್ಥವೇ ಇಲ್ಲವಾಗುತ್ತದೆ. "ಗಿರ್ವಣಃ" ಎಂಬುದರ ಸಾರ್ಥಕ ಪ್ರಯೋಗವು ವೈದಿಕ ಮಂತ್ರದ ಮೂಲಕ ಮರ್ತ್ಯ ಪ್ರಹಾರದಿಂದ ರಕ್ಷಿಸಲ್ಪಡಬೇಕೆಂಬುದೂ ಸೂಚಿತವಾಗುವುದನ್ನೂ ತೋರಿಸುತ್ತದೆ. "ನಮಗಿದಿರಾಗಿ (ಅಭಿ) ಕೊಲೆಗಡುಕರು ಹಾನಿಯುಂಟು ಮಾಡದಿರಲಿ, ಹೇ ಇಂದ್ರ, ಹೇ ಮನಃಪ್ರಣೋದೇಶ್ವರ, ಮಂತ್ರ ಸಾಮರ್ಥ್ಯದಲ್ಲಿ ನಮ್ಮ ಶರೀರಗಳನ್ನು ಕಾಯು ಮತ್ತು ನಮ್ಮೆಡೆಗೆ ಹೊಡೆತ ಬಂದಾಗ ನೀನು ಅದನ್ನು ತಪ್ಪಿಸು ಯಾ ಅದನ್ನು ತಪ್ಪಿಸಲು ನಮಗೆ ಶಕ್ತಿಯನ್ನು ಕೊಡು (ಯವಯ=ಪ್ರೇರಣಾರ್ಥಕ)". ಸಂದರ್ಭವು ಹೀಗಿರಬೇಕೆನ್ನಿಸುತ್ತದೆ. ಭಾರತೀಯ ಯೋಗಿ

ಯಾವಾಗಲೂ ನಂಬಿದ ಮಾನಸ ಪ್ರಣೋದದ ಒಂದು ಶಕ್ತಿಯಿದೆ ಅದು ಒಂದು ದಿವ್ಯ ಮಾನಸ ಕಾರ್ಯವಾಗಿದೆ. ಅದು ನಮ್ಮ ದೇಹದ ನಿಷ್ಕ್ರಿಯ, ನಿಃಸಹಾಯ, ದುರ್ಬಲ ಕಾರ್ಯಕ್ಕೆ ಬದಲಾಗಿ ನಿಲ್ಲುತ್ತದೆ ಹಾಗೂ ವ್ಯಕ್ತಿಯನ್ನು ರಕ್ಷಿಸಿ ಅವನಿಗೆ ತೊಂದರೆ ಕೊಡಲು ಮಾಡುವ ಭೌತಿಕಾಭೌತಿಕ ಪ್ರಯತ್ನಗಳೆಲ್ಲವನ್ನೂ ಬಡಿದು ಹಿಂದಿರುಗಿಸುತ್ತದೆ, ಕಾಲಿಗೆ ಬುದ್ಧಿ ಹೇಳಿಸುತ್ತದೆ. ನನ್ನ ವಿವರಣೆ ಸರಿಯಾದುದಾದರೆ ತಾಂತ್ರಿಕ ಕಲ್ಪನೆಯಾದ ಸ್ತೋತ್ರದ ಯಾ ಸ್ತೋಮದ ಕಾರ್ಯವು ಕವಚವಾಗಿ ಕೆಲಸ ಮಾಡುವುದನ್ನಿಲ್ಲಿ ಕಾಣುತ್ತೇವೆ. ಕವಚವೆಂದರೆ ಮಾನಸಿಕವಾದ ಹೊದಿಕೆ. ಅದು ನಮ್ಮ ಸರ್ವಾವಯವಗಳನ್ನೂ ನರಳಿಕೆ, ದುಃಖ, ಕಾಯಿಲೆ, ಗಾಯ ಅಥವಾ ಸಾವು ಅಡರಿಕೊಳ್ಳುವುದನ್ನು ತಪ್ಪಿಸುವುದೆಂಬುದು ತಾಂತ್ರಿಕ ನಂಬಿಗೆ. "ಮರ್ತಾಃ" ಎಂದರೆ ಕೊಲೆಗಡಿಕರು ಎಂದು ಅರ್ಥಮಾಡಿದರೆ "ತನೂನಾಂ" ಎಂಬುದು ಅದರ ಅರ್ಥ ನಿಯಾಮಕವಾಗಬಹುದು.- "ದೇಹವನ್ನು ಕೊಲ್ಲುವವರು ನಮಗೆ ಹಾನಿಯನ್ನುಂಟು ಮಾಡದಿರಲಿ-ಓ ಇಂದ್ರನೇ ನೀನು ಮಂತ್ರದಿಂದ ಸಂತುಷ್ಟನಾಗುವವನು ; ಆ ಕೊಲೆಗಾರರನ್ನು ನಿಯಂತ್ರಿಸು (ನಮ್ಮ ದೇಹಗಳನ್ನು ನಿನ್ನ ಮಾನಸಪ್ರಣೋದದಿಂದ ರಕ್ಷಿಸು) ಮತ್ತು ಅವರ ಹೊಡೆತವನ್ನು ತಪ್ಪಿಸಿಕೊಳ್ಳಲು ಆ ಪ್ರಣೋದವನ್ನು ಕೊಡು." ಆದರೆ ಯಾವ ಸಂದರ್ಭದಲ್ಲೇ ಆಗಲಿ, ಪ್ರಕರಣದಲ್ಲೇ ಆಗಲಿ, ನಾವು "ತನೂನಾಂ" ಎಂಬುದನ್ನು ಅಭಿಯೊಡನೆ ಸಂಬಂಧಿಸಲಿ ಯಾ ಮರ್ತಾಃ ಯಾ ಈಶಾನ ಎಂಬುದರೊಡನೆ ಸಂಬಂಧಿಸಲಿ - ಏನು ಮಾಡಿದರೂ "ಈಶಾನಃ" ಎಂಬುದು "ತನೂನಾಂ" ಎಂಬುದರತ್ತ ಹೊರಳಲೇಬೇಕು. ಸಾಯಣ ಹೇಳಿರುವುದು "ಹೇ ಇಂದ್ರ ನಿನಗೆ ಶಕ್ತಿ ಇರುವುದರಿಂದ ನೀನು ಹೊಡೆತದಿಂದ ನಮ್ಮನ್ನು ತಪ್ಪಿಸು" ಎಂದು ; ಇದು ಅರ್ಥವಿಲ್ಲದ ಅನವಶ್ಯಕ ಅರ್ಥವು - ಪಂಡಿತನಿಗೆ ಬಹಳ ಜಾಣತನದ ಮತ್ತು ಸರಿಯಾದ ಅರ್ಥವೆಂದು ತೋರುವಂಥದು. ಆದರೆ ಇದು ಕವಿಗೆ ಸೂಚಿತವಾಗುವ ಅರ್ಥವೇ ಅಲ್ಲ. ಅದರಲ್ಲೂ ಮಧುಚ್ಛಂದನಂಥ ಶೈಲಿ ಕೋವಿದನಿಗಂತೂ ಹೊಳೆಯಲೇ ಆರದು.



# ಇಂದ್ರನನ್ನು ಕುರಿತ ಸೂಕ್ತ

## I. 7

**ಇಂದ್ರಮಿದ್ ಗಾಥಿನೋ ಬೃಹದಿಂದ್ರಮರ್ಕೇಭಿರರ್ಕಿಣಃ ।**
**ಇಂದ್ರಂ ವಾಣೀರನೂಷತ ॥ ೧ ॥**

೧. ಋಕ್ ಪ್ರಭುಗಳು ವಸ್ತುಸಾರಯುಕ್ತವಾದ ತಮ್ಮ ವಿಚಾರದೊಡನೆ, ಉದ್ಗಾಥಿಗಳಾಗಿ ತಮ್ಮ ಸ್ವರಗಳಿಂದ ಇಂದ್ರನನ್ನು ಬಯಸಿದರು.

**ಇಂದ್ರ ಇದ್ಧರ್ಯೋಃ ಸಚಾ ಸಂಮಿಶ್ಲ ಆ ವಚೋಯುಜಾ ।**
**ಇಂದ್ರೋ ವಜ್ರೀ ಹಿರಣ್ಯಯಃ ॥ ೨ ॥**

೨. ಇಬ್ಬರು ಪ್ರಕಾಶಮಾನ ದೇವತೆಗಳ ಪ್ರೇಮದೊಂದಿಗೆ ವಾಕ್ಕಿಗೆ ನೊಗ ಕಟ್ಟಿಕೊಂಡವರಾಗಿ (ಋಷಿಗಳು) ತೇಜೋಮಯನಾದ, ವಜ್ರಧರನಾದ, ಇಂದ್ರನನ್ನು ನಮ್ಮ ಸತ್ತೆಯೊಡನೆ ಐಕ್ಯಗೊಳಿಸಿದರು.

**ಇಂದ್ರೋ ದೀರ್ಘಾಯ ಚಕ್ಷಸ ಆ ಸೂರ್ಯಂ ರೋಹಯದ್ ದಿವಿ ।**
**ವಿ ಗೋಭಿರದ್ರಿ ಮೈರಯತ್ ॥ ೩ ॥**

೩. ದೂರದೃಷ್ಟಿಯುಳ್ಳವನಾದುದರಿಂದ ಇಂದ್ರನು ಸೂರ್ಯನವರೆಗೆ ಸ್ವರ್ಗದಲ್ಲಿ ಏರುತ್ತಾ ಹೋಗುತ್ತಾನೆ. ಆ ಬೆಳಕಿನ ಕಿರಣಗಳಿಂದ ಅವನು ಎಲ್ಲ ದಿಕ್ಕುಗಳಿಗೂ ಪರ್ವತವು ಕಾಣುವಂತೆ ಮಾಡುತ್ತಾನೆ.

**ಇಂದ್ರ ವಾಜೇಷು ನೋಽವ ಸಹಸ್ರ ಪ್ರಧನೇಷು ಚ ।**
**ಉಗ್ರ ಉಗ್ರಾಭಿರೂತಿಭಿಃ ॥ ೪ ॥**

೪. ನಮ್ಮ ಸಾಮರ್ಥ್ಯ ಕೋಶದಲ್ಲಿಯೂ ನಮ್ಮ ಬಲಿಷ್ಠ ಆಸ್ತಿಗಳಲ್ಲಿಯೂ ಉಗ್ರ ಪ್ರಮೋದೋನ್ಮಾದದಿಂದ[೧] ನಮ್ಮನ್ನು ರಕ್ಷಿಸಲಿ.

**ಇಂದ್ರಂ ವಯಂ ಮಹಾಧನ ಇಂದ್ರಮರ್ಭೇ ಹವಾಮಹೇ ।**
**ಯುಜಂ ವೃತ್ರೇಷು ವಜ್ರಿಣಂ ॥ ೫ ॥**

---

೧. ಇರವಿನ ನಾಡೀಸ್ಪಂದನ.

೫. ಹೆಚ್ಚಿನ ಯಾ ಕಡಿಮೆಯ ಐಶ್ವರ್ಯದಲ್ಲಿ ವೃತ್ರರನ್ನು ಹೊಡೆದೋಡಿಸುವ ಗುಡುಗುಗಾರನಾದ (ವಜ್ರಿಯಾದ) ಇಂದ್ರನನ್ನು ನಾವು ಆಮಂತ್ರಿಸುತ್ತೇವೆ.

**ಸ ನೋ ವೃಷನ್ನಮುಂ ಚರುಂ ಸತ್ರಾದಾವನ್ನಪಾವೃಧಿ ।**
**ಅಸ್ಮಭ್ಯ ಮ ಪ್ರತಿಷ್ಕುತಃ ॥ ೬ ॥**

೬. ಎಲೈ ಮಹೋನ್ನತನೇ, ಆದುದರಿಂದ ನೀನು ನಮ್ಮ ಕಣ್ಣಿನ ಪೊರೆಯನ್ನು ಹರಿದು ತೆಗೆ ಮತ್ತು ನಮಗೆ ನೀನು ಅನದೃಶ್ಯನಾಗಿರು.

**ತುಂಜೇ ತುಂಜೇ ಯ ಉತ್ತರೇ ಸ್ತೋಮಾ ಇಂದ್ರಸ್ಯ ವಜ್ರಿಣಃ ।**
**ನವಿಂಧೇ ಅಸ್ಯ ಸುಷ್ಟುತಿಂ ॥ ೭ ॥**

೭. ಉತ್ತರೋತ್ತರ ಸ್ತರ[೧]ಗಳಿಗೇರುತ್ತಿರುವುದಾದರೂ[೨] ಗುಡುಗು-ಗಾರನಾದ ಇಂದ್ರನ ಈ ಸ್ತೋತ್ರಗಳಲ್ಲಿ ಅವನ ಸ್ತುತಿಯ ಪೂರ್ಣತೆಯನ್ನು (ಅವನ ಪೂರ್ಣಸ್ತುತಿಯನ್ನು) ನಾನು ಕಾಣದಾದೆನು.

**ವೃಷಾ ಯೂಥೇವ ವಂಸಗಃ ಕೃಷ್ಟೀರಿಯರ್ತ್ಯೋಜಸಾ ।**
**ಈಶಾನೋ ಅಪ್ರತಿಷ್ಕುತಃ ॥ ೮ ॥**

೭. ತನ್ನ ಸಹಚರನೊಡನೆ ನೊಗಕ್ಕೆ ಕಟ್ಟಿದ ಎತ್ತಿನಂತೆ (ಬಸವನಂತೆ) ತನ್ನ ಸಾಮರ್ಥ್ಯದೊಂದಿಗೆ ಅವನು ನಮ್ಮ ಮೇಲೆ ಪ್ರತಿಕ್ರಿಯೆಯನ್ನುಂಟು ಮಾಡುವ ಮತ್ತು ನಮ್ಮನ್ನು ಅನದೃಶ್ಯನಾಗಿ ಆಳುತ್ತಿರುವ ದೇವನಾಗಿದ್ದಾನೆ.

**ಯ ಏಕಶ್ಚರ್ಷಣೀನಾಂ ವಸೂನಾ ಮಿರಜ್ಯತಿ ।**
**ಇಂದ್ರಃ ಪಂಚ ಕ್ಷಿತೀನಾಂ ॥ ೯ ॥**

೯. ಪಂಚಸ್ತರಗಳ ಎಲ್ಲ ಕಾರ್ಯಗಳನ್ನೂ ಎಲ್ಲ ಆಸ್ತಿ ಪಾಸ್ತಿಗಳನ್ನೂ ಇಂದ್ರನೊಬ್ಬನೇ ನಿರ್ವಹಿಸುತ್ತಾನೆ.

**ಇಂದ್ರಂ ವೋ ವಿಶ್ವತಸ್ಪರಿ ಹವಾಮಹೇ ಜನೇಭ್ಯಃ ।**
**ಅಸ್ಮಾಕಮಸ್ತು ಕೇವಲಃ ॥ ೧೦ ॥**

೧೦. ಜನತೆಗಾಗಿರುವ ಇಂದ್ರನನ್ನು ನಿನಗೆ ಸಂಬಂಧಿಸಿದ ಎಲ್ಲವುದರಲ್ಲೂ ನಾವು ಆಮಂತ್ರಿಸುತ್ತೇವೆ. ಅವನು ನಮಗೆ ಸರ್ವತಂತ್ರ ಸ್ವತಂತ್ರನೂ (ಸರ್ವನಿರಪೇಕ್ಷನೂ) ಮುಕ್ತನೂ ಆಗಲಿ.



---

೧. ಎತ್ತರ
೨. ಎತ್ತರ

# ಇಂದ್ರಸೂಕ್ತ

## I. 8

**ಐಂದ್ರ ಸಾನಸಿಂ ರಯಿಂ ಸಜಿತ್ವಾನಂ ಸದಾ ಸಹಂ ।**
**ವರ್ಷಿಷ್ಠ ಮೂತಯೇ ಭರ ॥ ೧ ॥**

೧. ಓ ಇಂದ್ರಾ, ನಮ್ಮಲ್ಲಿ ಸಮರ್ಪಕತೆಯನ್ನು ಚಲನೆಯನ್ನೂ[1] ತುಂಬು-ನೀನು ಉಕ್ತ ಸಮರ್ಪಕತೆಯನ್ನು ಸ್ಥಿರಪ್ರಣೋದವನ್ನಾಗಿಯೂ ನಮ್ಮ ಬಯಕೆಗೆ[2] ಯಥೇಷ್ಟವಾಗುವಷ್ಟನ್ನಾಗಿಯೂ ಜಯಪ್ರದವನ್ನಾಗಿಯೂ ಮಾಡು.

**ನಿಯೇನ ಮುಷ್ಟಿಹತ್ಯಯಾ ನಿವೃತ್ರಾ ರುಣಧಾ ಮಹೈ ।**
**ತ್ವೋತಾಸೋ ನ್ಯರ್ವತಾ ॥ ೨ ॥**

೨. ಎಲೈ ಶತ್ರುಗಳನ್ನು ಜಜ್ಜುವವನೇ, ಅಡಚಣೆ ಉಂಟು-ಮಾಡುವ ದೇವತೆಗಳನ್ನು ಜಯಪ್ರದವಾಗಿ[3] ಎದುರಿಸಿ, ಅವರ ಮೊಟಕುಗೊಳಿಸುವ ಹಿಡಿತದಿಂದ ಸಂಭವಿಸುವ ವಿನಾಶವನ್ನು ನಿನ್ನ ಬಲಿಷ್ಠ ಕಾರ್ಯದಿಂದ ನಾವು ತಡೆಗಟ್ಟುವೆವು.

**ಇಂದ್ರ ತ್ವೋತಾಸ[4] ಆ ವಯಂ ವಜ್ರಂ ಘನಾ ದದೀಮಹಿ ।**
**ಜಯೇಮ ಸಂ ಯುಧಿ ಸ್ಪೃಧಃ ॥ ೩ ॥**

೩. ಓ ಇಂದ್ರಾ, ಓ ಕೊಡತಿಗೆ ಹಿಡಿದವನೇ (ಸುತ್ತಿಗೆ ಹಿಡಿದವನೇ) ನಾವು ವಜ್ರವನ್ನು ಎತ್ತಿ ಹೊಡೆಯುತ್ತಾ ಅದನ್ನು ಸುತ್ತಲೂ ಬೀಸುವೆವು. ನಮ್ಮ ಹೊಟ್ಟೆಕಿಚ್ಚಿನ ಹಗೆಗಳನ್ನು ಸಂಪೂರ್ಣವಾಗಿ ನಾವು ಗೆಲ್ಲುವಂತಾಗಲಿ.

---

೧. ಅಥವಾ ಸಂತೋಷವನ್ನು.
೨. ಅಥವಾ ನಮ್ಮ ವಿಸ್ತರಣೆಗಾಗಿ.
೩. ಅಥವಾ ಕಾರ್ಯವನ್ನು ತಡೆಗಟ್ಟುವುದರ ಮೂಲಕ.
೪. ತ್ವೋತಾಸಃ = ತಾತ್ಕಾಲಿಕ

**ವಯಂ ಶೂರೇಭಿ ರಸ್ತೃಭಿರಿಂದ್ರ ತ್ವಯಾಯುಜಾ ವಯಂ ।**
**ಸಾ ಸಹ್ಯಾಮ ಪೃತನ್ಯತಃ ॥ ೪ ॥**

೪. ಓ ಇಂದ್ರಾ, ಸಶಸ್ತ್ರ ದೇವತೆಗಳಿಂದಲೂ ನಿನ್ನಿಂದಲೂ ಯೋಗದಲ್ಲಿ ಸಂಯುಕ್ತರಾದ ನಾವು ಯುದ್ಧದಲ್ಲಿ ಪದೇ ಪದೇ ನಮ್ಮ ಸಾಮರ್ಥ್ಯವನ್ನು ತೋರಿಸುವೆವು.

**ಮಹಾ ಇಂದ್ರಃ ಪರಶ್ಚನು ಮಹಿತ್ವ ಮಸ್ತು ವಜ್ರಿಣೇ ।**
**ದ್ಯೌರ್ನ ಪ್ರಥಿನಾ ಶವಃ ॥ ೫ ॥**

೫. ಇಂದ್ರನು ನಿಜವಾಗಿಯೂ ಬಲಿಷ್ಠನು ಮತ್ತು ಸರ್ವೋಚ್ಚನು; ಮಹತ್ತಿನ ಸಾಮರ್ಥ್ಯವು, ತನ್ನನ್ನು ತುಂಬಿಕೊಂಡ ವಿಸ್ತಾರದಿಂದ[೫] ಆಕಾಶವು ವಿವಿಧವಾಗಿ ಹೊಳೆಯುವಂತೆ, ವಿದ್ಯುದಾಯುಧ ಪ್ರಯೋಕ್ತೃವಿನ ಹತ್ತಿರ ಇರಲಿ.

**ಸಮೋಹೇವಾ ಯ ಆಶತ ನರಸ್ತೋಕಸ್ಯ ಸನಿತೌ ।**
**ವಿಪ್ರಾಸೋ ವಾ ಧಿಯಾಯವಃ ॥ ೬ ॥**

೬. ಮನುಷ್ಯರಲ್ಲಿಯ ಒಬ್ಬ ಚಿಕ್ಕವನಲ್ಲಿರಲಿ, ಅಥವಾ ವಿಚಾರವಂತ ವಿವೇಕಿಗಳಲ್ಲಿರಲಿ[೬] ಆ ಸುರಕ್ಷಿತತೆಯಲ್ಲಿರುವುದನ್ನು ಅವನು ಸಂತೋಷ-ದಿಂದ ಅನುಭವಿಸುತ್ತಾನೆ.

**ಯಃ ಕುಕ್ಷಿಃ ಸೋಮಪಾತಮಃ ಸಮುದ್ರ ಇವಪಿನ್ವತೇ ।**
**ಉರ್ವೀರಾಪೋ ನ ಕಾಕುದಃ ॥ ೭ ॥**

೭. ಆತನು ಒಬ್ಬ ಗಬಗಬನೆ ನುಂಗುವ ಕೊಲ್ಲಿ (gulf); ಅವನು ಸ್ವತಂತ್ರವಾಗಿ ಅಮೃತರಸವನ್ನು ಕುಡಿಯುತ್ತಾನೆ ಮತ್ತು ಸಮುದ್ರದಂತೆ ವಿಸ್ತಾರವಾದ ಈ ಜಲವನ್ನು ಅವನು ಚಿಕ್ಕ ಕೆರೆಗಳ ನೀರನ್ನು[೭] ಕುಡಿದಂತೆ ಕುಡಿಯುತ್ತಾನೆ.

**ಏವಾಹ್ಯಸ್ಯ ಸೂನೃತಾ ವಿರಪ್ಶೀ ಗೋಮತೀ ಮಹೀ ।**
**ಪಕ್ವಾ ಶಾಖಾ ನ ದಾಶು ಷೇ ॥ ೮ ॥**

೮. ಆದುದರಿಂದ ದಾನಿಗೇ ಕೊಡುವ ಪಕ್ವಫಲಭರಿತ ಶಾಖೆಯೊಂದರಂತೆ ಜೀವಾತ್ಮನ ಹೊಳೆವ ಸಮರ್ಥ ಕಾರ್ಯ ಸಂಪನ್ನ ಸತ್ಯ ಪ್ರಶಂಸೆಯಿರುತ್ತದೆ.

---

೫ ಅಥವಾ ವಿಸ್ತಾರವಾದವನಿಂದ, ವಿಸ್ತಾರವಾದ ಪದಾರ್ಥದಿಂದ.

೬ ಅಥವಾ ವಿಚಾರದಲ್ಲಿ ಗಟ್ಟಿಗರಾದವರ.

೭ "ಕಾಕುದಃ" =ಅನಿಶ್ಚಿತ.

**ಏವಾಹಿತೇ ವಿಭೂತಯ ಊತಯ ಇಂದ್ರ ಮಾವತೇ ।**
**ಸದ್ಯಶ್ಚಿತ್ ಸಂತಿ ದಾಶು ಷೇ ॥ ೯ ॥**

೯. ಆದುದರಿಂದ, ಓ ಇಂದ್ರನೇ, ನಿನ್ನ ಪ್ರಭಾವಗಳು ಮತ್ತು ವಿಸ್ತಾರಗಳು ಅವುಗಳನ್ನು ತಡೆದು ಹಿಡಿದುಕೊಳ್ಳಬಲ್ಲ[೧] ದಾನಿಯ ಎಚ್ಚರದಲ್ಲಿ ಒಮ್ಮೆಲೇ ಸಕ್ರಿಯವಾಗುತ್ತವೆ.

**ಏವಾಹ್ಯಸ್ಯ ಕಾಮ್ಯಾ ಸ್ತೋಮ ಉಕ್ಥಂ ಚ ಶಂಸ್ಯಾ ।**
**ಇಂದ್ರಾಯ ಸೋಮಪೀತಯೇ ॥ ೧೦ ॥**

೧೦. ಆದುದರಿಂದ, ಜೀವಾತ್ಮನ ಅಪೇಕ್ಷಣೀಯ ಉದಾತ್ತ ವಿಚಾರಗಳು ಮತ್ತು ಅದರ (ಸಾರಿ ಹೇಳಬೇಕಾದ) ಪ್ರಶಂಸೆಯು ಹಾಗೂ ಆರಾಧನೆಯು ಇಂದ್ರನು ಅಮೃತತಸವನ್ನು ಕುಡಿಯಲೆಂದೇ ನಡೆಯುತ್ತಿದೆ.



೧. ಮಾವತೇ - ತಾತ್ಕಾಲಿಕ (ಪ್ರೊವಿಶನಲ್)

# ಇಂದ್ರಸೂಕ್ತ

## I. 9

**ಇಂದ್ರೇಹಿ ಮತ್ ಸ್ಯಂಧಸೋ ವಿಶ್ವೇಭಿಃ ಸೋಮಪರ್ವಭಿಃ ।**
**ಮಹಾ ಅಭಿಷ್ಟಿರೋ ಜಸಾ ॥ ೧ ॥**

೧. ಹೇ ಇಂದ್ರಾ, ಬಾ ; ಈ ಭೌತದ ಎಲ್ಲ ದೈಹಿಕ ಭಾಗಗಳಿಂದಲೂ ನೀನು ಆನಂದೋನ್ಮಾದವನ್ನು ಪಡೆಯುತ್ತೀಯೆ; ನೀನು ಮಹಾವಿಚಾರ ನಿರ್ಭರನಾಗಿರುವೆ ; ನಿನ್ನ ಪ್ರಣೋದದಿಂದ ಅದರತ್ತ ಹರಿಯುತ್ತೀಯೆ.

**ಏಮೇನಂ ಸೃಜನಾ ಸುತೇ ಮಂದಿಮಿಂದ್ರಾಯ ಮಂದಿನೇ ।**
**ಚಕ್ರಿಂ ವಿಶ್ವಾನಿ ಚಕ್ರಯೇ ॥ ೨ ॥**

೨. ಹೇ ಯಾಜ್ಞಿಕನೇ ! ನಿನ್ನ ಬಲವನ್ನು ಹೆಚ್ಚಿಸಿಕೋ ಮತ್ತು ಅಮೃತಸ್ಯಂದವಾದಾಗ ಇಂದ್ರನಿಗಾಗಿ ಆನಂದೋನ್ಮಾದವನ್ನು ಸೃಷ್ಟಿಸು - ಇಂದ್ರನು ಸಂತೋಷ ಗ್ರಾಹಕನು - ಆ ಸಂತೋಷವೆಂಬುದು ನಮ್ಮ ಕಾರ್ಯಗಳನ್ನು ಮಾಡುವವನ ಕ್ರಿಯಾತ್ಮಕತೆಯು.

**ಮತ್ಸ್ವಾ ಸುಶಿಪ್ರ ಮಂದಭಿಃ ಸ್ತೋಮೇಭಿರ್ ವಿಶ್ವಚರ್ಷಣೇ ।**
**ಸ ಚೈಷು ಸವನೇ ಷ್ವಾ ॥ ೩ ॥**

೩. ಮನೋವೃತ್ತಿಯಲ್ಲಿ ಚುರುಕಾಗಿರುವವನೇ ಸಂತೋಷವನ್ನೆಚ್ಚರಿಸುವ ಪ್ರಾರ್ಥನೆಗಳಿಂದ (ಹೊಗಳಿಕೆಗಳಿಂದ) ಸಂತುಷ್ಟನಾಗು ; ಓ ಸರ್ವ ಕರ್ತಾರನೇ, ಈ ಕೋಡಿವರಿತಗಳಿಗೆ ನೀನು ಅಂಟಿಕೋ.

**ಅಸೃಗ್ರಮಿಂದ್ರ ತೇ ಗಿರಃ ಪ್ರತಿ ತ್ವಾಮುದಹಾಸತ ।**
**ಅಜೋಷಾ ವೃಷಭಂ ಪತಿಂ ॥ ೪ ॥**

೪. ಓ ಇಂದ್ರಾ, ನೀನು ಆ ಅಮೃತೋತ್ಸಗಳೆಡೆಗೆ ಬಾರದಿದ್ದಾಗ ನಿನ್ನ ಸ್ವರಗಳು ಅವರ ಪ್ರಿಯತಮನಾದ ಮತ್ತು ದೊರೆಯಾದ ನಿನ್ನ ಅಪೂರಿತ ತೃಪ್ತಿಯ ಅನ್ವೇಷಣವನ್ನು ಕುರಿತು ನಗುತ್ತವೆ.

**ಸಂಚೋದಯ ಚಿತ್ರಮರ್ವಾಗ್‌ರಾಧ ಇಂದ್ರ ವರೇಣ್ಯಂ ।**
**ಅಸದಿತ್ ತೇ ವಿಭು ಪ್ರಭು ॥ ೫ ॥**

೫. ಹೇ. ಇಂದ್ರ, ಆ ಬಹುಮುಖವಾದ ಅತ್ಯುನ್ನತ ಆನಂದೋನ್ಮಾದವನ್ನು ಸಂಪೂರ್ಣವಾಗಿ ಕಲಕಿ ಕೆಳಗಿಳಿಸು - ಆ ಆನಂದೋನ್ಮಾದವಾದರೋ ವೈಶ್ವತ್ರಿಕವೂ ಉತ್ತುಂಗವೂ ಆದ ಅಸ್ತಿತ್ವವು - ಅದೇ ನೀನು.

**ಅಸ್ಮಾನ್‌ತ್ಸು ತತ್ರ ಚೋದಯೇಂದ್ರ ರಾಯೇ ರಭಸ್ವತಃ ।**
**ತುವಿದ್ಯುಮ್ನ ಯಶಸ್ವತಃ ॥ ೬ ॥**

೬. ಎಲೈ ಇಂದ್ರನೇ, ಅದರಲ್ಲಿ ನಮ್ಮನ್ನೂ ದಿವ್ಯಾನಂದದತ್ತ ಕಲಕು ; ನಮ್ಮನ್ನು ಬಲವಾದ ಆನಂದೋದ್ರೇಕ ಸಂಪನ್ನರಾಗಿಯೂ ಜಯಪ್ರದ ಸಾಮರ್ಥ್ಯದಿಂದ ಕೂಡಿದವರನ್ನಾಗಿಯೂ ಮಾಡು - ನೀನು ಸುಸ್ಥಿರ ಪ್ರಣೋದದಿಂದ ಜ್ಯೋತಿರ್ಮಯನಾದುದರಿಂದ.

**ಸಂ ಗೋಮದಿಂದ್ರ ವಾಜವದಸ್ಮೇ ಪೃಥುಶ್ರವೋ ಬೃಹತ್ ।**
**ವಿಶ್ವಾಯುರ್ಧೇಹ್ಯಕ್ಷಿತಂ ॥ ೭ ॥**

೭. ಓ ಇಂದ್ರನೇ, ನಮಗೆ ಬೆಳಕುದುಂಬಿದ ಹರಹಿನರಿವನ್ನು ಕೊಡು ; ಆ ಜ್ಞಾನವು ಸಾರವತ್ತಾದುದು ಹಾಗೂ ಅದರ ಮಹತ್ವಕ್ಕನುಗುಣವಾಗಿ ಸ್ವಭಾವತಃ ಅಕ್ಷುಣ್ಣವಾಗಿ ನಮ್ಮ ಬಾಳ ತುಂಬಾ ಸತತವಾಗಿ ಬಾಳಲಿ.

**ಅಸ್ಮೇಧೇಹಿಶ್ರವೋ ಬೃಹದ್‌ದ್ಯುಮ್ನಂ ಸಹಸ್ರ ಸಾತಮಂ ।**
**ಇಂದ್ರ ತಾ ರಥಿನೀರಿಷಃ ॥ ೮ ॥**

೮. ಆ ಮಹಾವಿಸ್ತಾರದ ಜ್ಞಾನವನ್ನು ನೀಡು ನಮಗೆ-ಅದು ಸಂಪೂರ್ಣ ಪ್ರಣೋದ ನಿರ್ಭರ ಧೃತಿಯ ಪ್ರಕಾಶವು ; ಮತ್ತು ಇಂದ್ರನೇ, ಆ ಆನಂದೋದ್ರೇಕಯುಕ್ತವಾದ ಸ್ಥಿತಿಯ ಯಜಮಾನತ್ವವನ್ನು ಕೊಡು.

**ವಸೋರಿಂದ್ರಂ ವಸುಪತಿಂ ಗೋರ್ಭಿರ್ ಗೃಣಂತ ಋಗ್ಮಿಯಂ ।**
**ಹೋಮ ಗಂತಾರಮೂತಯೇ ॥ ೯ ॥**

೯. ಸಾರಸಂಭೃತ ಇಂದ್ರನೇ, ಸ್ವತಃ ಸಾರಸ್ವರೂಪನೇ, ನಮ್ಮ ಮಾತುಗಳಿಂದಲೇ ಸಾರಿ ಹೇಳುವೆವು. ನೀನು ಋಜ್ಮಯ. ನೀನು ಹೋದ ಹಾಗೆ ನಮ್ಮ ಸತ್ತೆಯ ವಿಶಾಲೀಕರಣಕ್ಕಾಗಿ ಯಾಜ್ಞಿಕರಾದ ನಾವು ನಿನ್ನನ್ನು ಭೇಟಿಯಾಗುವೆವು (ಹಿಂದೆ ಹಿಂದೆಯೇ ಅನುಸರಿಸುವೆವು.)

**ಸುತೇ ಸುತೇ ನ್ಯೋಕಸೇ ಬೃಹದ್ ಬೃಹತ ಏದರಿಃ ।**
**ಇಂದ್ರಾಯ ಶೂಷಮರ್ಚತಿ ॥ ೧೦ ॥**

೧೦. ಮುನ್ನುಗ್ಗುವ ಇಂದ್ರನಿಗಾಗಿ ಅವನ ಬಲವು ಪ್ರತಿಯೊಂದು ಅಮೃತ ಧಾರಾಪಾತದಲ್ಲಿಯೂ ಹೊಳೆಯುತ್ತದೆ; ಆ ಧಾರಾಪಾತವು ವಿಸ್ತೃತವೂ ವಿಸ್ತಾರಕರವೂ ಆಗಿದೆ.

❖ ❖

# ಇಂದ್ರ ಸೂಕ್ತ

## I. 10

**ಗಾಯಂತಿತ್ವಾ ಗಾಯತ್ರಿಣೋಽರ್ಚಂತ್ಯರ್ಕಮರ್ಕಿಣಃ ।**
**ಬ್ರಹ್ಮಾಣಸ್ತ್ವಾ ಶತಕ್ರತ ಉದ್ ವಂಶಮಿವಯೇ ಮಿರೇ ॥ ೧ ॥**

೧. ಗಾಯತ್ರಿಗಳು[೧] ನಿನ್ನನ್ನು ಕುರಿತು ಗಾಯನ ಮಾಡುತ್ತಾರೆ ; ಅರ್ಕಿಗಳು[೨] ತಮ್ಮ ಕರ್ಮವನ್ನು ಆರಂಭಿಸುತ್ತಾರೆ; ಹೇ ಶತಕ್ರತುವೇ ಮಾನಸ ಚಲನೆಗಳು ನಿನ್ನ ದೆಸೆಯಿಂದ ಮರ ಹತ್ತುವವರ ಹಾಗೆ ನಿನ್ನೆಡೆಗೆ ಹತ್ತಿ ಹೋಗಲು ಯತ್ನಿಸುತ್ತಿವೆ.

**ಯತ್ ಸಾನೋಃ ಸಾನುಮಾರುಹದ್ ಭೂರ್ಯಸ್ಪಷ್ಟ ಕರ್ತ್ವಂ ।**
**ತದಿಂದ್ರೋ ಅರ್ಥಂ ಚೇತತಿ ಯೂಥೇನ ವೃಷ್ಣಿರೇ ಜತಿ ॥ ೨ ॥**

೨. ಒಬ್ಬನು ಅಧಿತ್ಯಕೆಯಿಂದ (Plateau) ಅಧಿತ್ಯಕೆಗೇರುವಾಗ ಒಂದು ಸಮೃದ್ಧ ಕಾರ್ಯವು ಮೈದಾಳುತ್ತದೆ. ಆಗ ಇಂದ್ರನು ವಿಚಾರ ಸಾರವನ್ನು ಪ್ರಜ್ಞಾ ಮಂಡಲದೊಳಗೆ ತರುವನು. ಅವನು ಪ್ರೇಮಿಯೊಬ್ಬನನ್ನು[೩] ತನ್ನ ಸಂಗಾತಿ[೪]ಯೊಡನೆ ಪ್ರಚೋದಿಸುವನು.

**ಯುಕ್ಷ್ವಾ ಹಿಕೇಶಿನಾ ಹರೀ ವೃಷಣಾ ಕಕ್ಷ್ಯಪ್ರಾ ।**
**ಅಥಾ ನ ಇಂದ್ರ ಸೋಮಪಾ ಗಿರಾಮುಪಶ್ರುತಿಂಚರ ॥ ೩ ॥**

೩. ನಿನ್ನ ಜೂಲುಗುದುರೆಗಳನ್ನು ತೇರಿನ ನೊಗಕ್ಕೆ ಕಟ್ಟು; ಪ್ರಭುತ್ವದಿಂದ ಅವುಗಳನ್ನು ಆಬ್ಬಾದಿಸಿ ಜೀವಕಾಯವನ್ನು ತುಂಬು. ಅನಂತರ ಓ ಇಂದ್ರಾ, ಅಮೃತಪಾಯಿಯೇ, ಶ್ರುತಿಯೊಂದಿಗೆ ನಮ್ಮ ಮಂತ್ರಗಳಿಗೆ ಓಗೊಡು.

---

೧. ಅಥವಾ ಮನೋದೇವತೆಗಳು.

೨. ಮನೋದೇವತೆಗಳು ಕೂಡಾ.

೩. ಅಥವಾ ಒಡೆಯನೊಡನೆ.

೪. ತನ್ನ ಕಾರ್ಯದ ಪ್ರಭುತ್ವದಿಂದ ಹಾಗೂ ಪ್ರಣೋದದಿಂದ ಸ್ಪಂದಿಸುತ್ತಾನೆ. ಯೂಥ=ಕೂಡುವುದು, ಸೇರುವುದು, ಯಾವ ನೊಗಕ್ಕೆ ಕಟ್ಟುತ್ತೇವೆಯೋ ಆ ನೊಗ- ಮತ್ತು ಪ್ರಣೋದ ಹಾಗೂ ಸಾಮರ್ಥ್ಯ.

**ಏಹಿಸ್ತೋಮಾ ಅಭಿಸ್ವರಾಽಭಿ ಗೃಣೀಹ್ಯಾರುವ ।**
**ಬ್ರಹ್ಮ ಚನೋವಸೋ ಸಚೇಂದ್ರ ಯಜ್ಞಂ ಚ ವರ್ಧಯ ॥ ೪ ॥**

೪. ಬಾ-ನಮ್ಮ ಸ್ತುತಿಗೀತಗಳಿಗೆ ಸ್ಪಂದಿಸು[೫] ಅವು ಏಳುತ್ತಿರುವಂತೆಯೇ ಅವುಗಳನ್ನು ಉಚ್ಚರಿಸು. ನಮ್ಮ ಮನಕ್ಕೆ ಅಂಟಿಕೋ. ಓ ದೊರೆಯೇ, ಓ ಇಂದ್ರನೇ, - ಮತ್ತು ನಮ್ಮಲ್ಲಿ ಯಜ್ಞವನ್ನು ಹೆಚ್ಚಿಸು.

**ಉಕ್ಥಮಿಂದ್ರಾಯ ಶಂಸ್ಯಂ ವರ್ಧನಂ ಪುರುನಿಷ್ಷಿಧೇ ।**
**ಶಕ್ರೋಯಥಾ ಸುತೇಷುಣೋ ರಾರಣತ್ ಸಖ್ಯೇಷು ಚ ॥ ೫ ॥**

೫. ಬಲವರ್ಧಕವಾದ ಪ್ರಾರ್ಥನೆಯನ್ನು ಸಂಪೂರ್ಣವಾಗಿ ನಾನು ರಚಿಸಿ ಇಂದ್ರನನ್ನು ಕುರಿತು ಘೋಷಿಸುತ್ತೇನೆ. ಆ ಸಮರ್ಥ ಇಂದ್ರನು ನಮ್ಮ ಅಮೃತರಸದಲ್ಲಿ ಆನಂದೋದ್ರೇಕವನ್ನು ಪಡೆಯಲಿ ಮತ್ತು ನಮ್ಮ ಸ್ನೇಹ ಪರತೆಯಲ್ಲೂ[೬] ಆ ಆನಂದೋದ್ರೇಕವನ್ನು ಪಡೆಯಲಿ.

**ತಮಿತ್ ಸಖಿತ್ವ ಈಮಹೇ ತಂ ರಾಯೇ ತಂ ಸುವೀರ್ಯೇ ।**
**ಸ ಶಕ್ರ ಉತ ನಃ ಶಕದಿಂದ್ರೋ ವಸು ದಯಮಾನಃ ॥ ೬ ॥**

೬. ನಾವು ಸಹಚರನಾಗೆಂದು ಅವನನ್ನು ಬೇಡುತ್ತೇವೆ, ಬೆಳಕಾಗೆಂದು ಅವನನ್ನೇ ಬೇಡುತ್ತೇವೆ, ಸಮರ್ಥ ಕ್ರಿಯಾಶಕ್ತಿಯಾಗಿ ಬಾ ಎಂದು ಅವನನ್ನು ಬಯಸುತ್ತೇವೆ ; ಆದುದರಿಂದ ಈ ಪ್ರಭಾವಿ ಇಂದ್ರನು ತನ್ನ ದಯಾಮಯತೆಯ ದೆಸೆಯಿಂದ ತನ್ನ (ಸಾರ) ಸತ್ವವನ್ನು[೭] ನಮಗೆ ಕೊಡಬಲ್ಲನು.

**ಸುವಿವೃತಂ ಸುನಿರಜಮಿಂದ್ರ ತ್ವಾದಾತಮಿದ್ಯಶಃ ।**
**ಗವಾಮಪ ವ್ರಜಂ ವೃಧಿ ಕೃಣುಷ್ವ ರಾಧೋ ಅದ್ರಿವಃ ॥ ೭ ॥**

೭. ಹೇ ಇಂದ್ರ, ನೀನು ವಿಸ್ತಾರನೂ (ವ್ಯಾಪಕನೂ) ಅವಿಚ್ಛಿನ್ನನೂ (ಈತಿಬಾಧಾರಹಿತನೂ)[೮] ಆಗಿರುತ್ತೀಯೆ ; ಜಯವನ್ನು ಗೆಲ್ಲಲಾಗಿದೆ ; ಈ ಕಿರಣಗಳನ್ನು ಮುಚ್ಚಿದ ಮುಸುಕನ್ನು[೯] ತೆಗೆ, ಆಹ್ಲಾದವನ್ನುಂಟುಮಾಡು - ಎಲೈ ಗಿರಿವಾಸನೇ!

**ನಹಿತ್ವಾರೋದಸೀ ಉಭೇ ಋಘಾಯಮಾಣ ಮಿನ್ವತಃ ।**
**ಜೇಷಃ ಸ್ವರ್ವತೀರಪಃ ಸಂ ಗಾ ಅಸ್ಮಭ್ಯಂ ಧೂನುಹಿ ॥ ೮ ॥**

---

೫ ಅಥವಾ ಉತ್ತರಕೊಡು.
೬ ಅಥವಾ ಗೆಳೆತನದ ಕಾರ್ಯಗಳು.
೭ ಅಥವಾ ತನ್ನ ಸತ್ವ ಸಮೃದ್ಧಿಯನ್ನು ಹಂಚುವ ಶಕ್ತಿಯಿದೆ.
೮. ಅಥವಾ ಅಕೃಷ್ಣೀಕೃತನು, ಅಂಧಕಾರಮುಕ್ತನು.
೯. ವ್ರಜ-ಅನಿಶ್ಚಿತ-ಬಹುಶಃ ಅದರ ಅರ್ಥವು "ಆ ಕಿರಣಗಳ ಗುಂಪನ್ನು ಅನಾವರಣ ಮಾಡು" ಎಂದಾಗಿರಬಹುದು.

೮. ನೀನು ಜಗಿಯಾಗಿ ಮೇಲ್ಮುಖವಾಗಿ[೧೦] ಹೊರಟಾಗ ಅಡ್ಡಬರುವ ಎರಡು ಅಂತರಿಕ್ಷಗಳು ಅಶಕ್ತ. ಜಯಶಾಲಿಯಾಗಿ ನೀನು ಸ್ವರ್ಗೀಯ ಜಲವನ್ನು ನಮ್ಮ ಬುವಿಯ ಮೇಲೆ ನಮಗಾಗಿ ಕೆಳ ಸುರಿ.

**ಆ ಶ್ರುತ್ಕರ್ಣ ಶ್ರುಧೀ ಹವಂ ನೂ ಚಿದ್ದಧಿಷ್ವ ಮೇ ಗಿರಃ ।**
**ಇಂದ್ರ ಸ್ತೋಮಮಿಮಂ ಮಮ ಕೃಷ್ವಾ ಯುಜಶ್ಚಿದಂತರಂ ॥ ೯ ॥**

೯. ಜಾಗರಿತನಾಗಿ ಕಿವಿಗೊಡು ಮತ್ತು ನನ್ನ ಕರೆಯನ್ನು ಕೇಳು, ಈಗ ನನ್ನ ಮಂತ್ರಗಳನ್ನು ಎತ್ತಿ ಹಿಡಿ[೧೧] ; ಹೇ ಇಂದ್ರ ನನ್ನ ಈ ಸ್ತುತಿಗೀತವನ್ನು ಯೋಗಸ್ಥಿತಿಯ ಅತ್ಯಂತ ಒಳಗೆ ಎಳೆದುಕೋ.

**ವಿದ್ಮಾಹಿ ತ್ವಾ ವೃಷಂತಮಂ ವಾಜೇಷು ಹವನಶ್ರುತಂ ।**
**ವೃಷಂತಮಸ್ಯ ಹೂಮಹ ಊತಿಂ ಸಹಸ್ರಸಾತಮಾಂ ॥ ೧೦ ॥**

೧೦. ಎಲೈ ನಮ್ಮ ಕರೆಗೋಗೊಡುವಾತನೇ, ಸತ್ತೆಯ ಸಾರಭೂತ ಸಾಮರ್ಥ್ಯದಲ್ಲಿ ನೀನು ಅತ್ಯುನ್ನತನೆಂದು ನಾವು ಬಲ್ಲೆವು. ಏಕೆಂದರೆ, ಹೀಗೆ ನೀನು ಅತ್ಯುನ್ನತನಾಗಿರುವುದರಿಂದ ನಾವು ವಿಸ್ತೃತ ಸತ್ತಾ ಸ್ಥೈರ್ಯದಲ್ಲಿ (ಸ್ತಿಮಿತತೆಯಲ್ಲಿ) ಬಲಿಷ್ಠನಾಗಿರು ಎಂದು ನಿನಗೆ ಕರೆಗೊಡುತ್ತೇವೆ.

**ಆ ತೂ ನ ಇಂದ್ರ ಕೌಶಿಕ ಮಂದಸಾನಃ ಸುತಂ ಪಿಬ ।**
**ನವ್ಯಮಾಯುಃ ಪ್ರ ಸೂ ತಿರ ಕೃಧೀ ಸಹಸ್ರಸಾಮೃಷಿಂ ॥ ೧೧ ॥**

೧೧. ಓ ಇಂದ್ರಾ, ಪಂಚಕೋಶದವನೇ ಹಾಗಾದರೆ ಸೋಮವನ್ನು ಕುಡಿ ; ಸಂತಸದಲ್ಲಿ ಸ್ಥಿರನಾಗಿರು ; ನಮಗೆ ಸಂಪೂರ್ಣ ಹೊಸದಾದ ಬಾಳೊಂದನ್ನು ಕೊಡು. ಮತ್ತು ನಮ್ಮ ಪ್ರಣೋದವನ್ನು ಸಂಪೂರ್ಣವಾಗಿ ಕಾಯ್ದಿಡುವ ಜ್ಞಾನವನ್ನು ನಮಗಾಗಿ ಸೃಷ್ಟಿಸು.

**ಪರಿತ್ವಾಗಿರ್ವಣೋ ಗಿರ ಇಮಾ ಭವಂತು ವಿಶ್ವತಃ ।**
**ವೃದ್ಧಾಯುಮನು ವೃದ್ಧಯೋ ಜುಷ್ಟಾ ಭವಂತು ಜುಷ್ಟಯಃ ॥ ೧೨ ॥**

೧೨. ಓ ಮಂತ್ರತುಷ್ಟನೇ ನಮ್ಮ ಈಯೆಲ್ಲ ಮಂತ್ರಗಳೂ ನಿನ್ನ ಸುತ್ತಲೂ ಇರಲಿ. ಎಲ್ಲ ವೃದ್ಧಿಯು ನಮ್ಮ ಸತ್ತೆಯ ವೃದ್ಧಿಯನ್ನು ಅನುಸರಿಸಲಿ ಮತ್ತು ಎಲ್ಲ ಪ್ರೀತಿಯೂ ಅದಕ್ಕೆ ಅಂಟಿಕೊಳ್ಳಲಿ.



---

೧೦. ಅಥವಾ ನೀನು ನೇರವಾಗಿ ಹೋಗುವಾಗ.

೧೧. ಅಥವಾ ಲಕ್ಷ್ಯ ಕೊಡು.

# ಇಂದ್ರಸೂಕ್ತ

## I. 11

**ಇಂದ್ರಂ ವಿಶ್ವಾ ಅವೀ ವೃಧನತ್ ಸಮುದ್ರವ್ಯ ಚಸಂಗಿರಃ ।**
**ರಥೀತಮಂ ರಥೀನಾಂ ವಾಜಾನಾಂ ಸತ್‌ಪತಿಂ ಪತಿಂ ॥ ೧ ॥**

೧. ಸಾಗರ ಸಂಪೃಕ್ತನಾದ, ಸರ್ವಮಂತ್ರ ಪ್ರವೃದ್ಧನಾದ ಅತಿ ಆನಂದೋನ್ಮತ್ತನಾದ ಅಸ್ತಿತ್ವದ ಆನಂದ ನಿರ್ಭರ ಪ್ರಭುವಾದ ಮತ್ತು ಸ್ಥಿರಬಲಗಳ ಒಡೆಯನಾದ ದೇವನೆಂದರೆ ಇಂದ್ರನು.

**ಸ ಖ್ಯೇ ತ ಇಂದ್ರ ವಾಜಿನೋ ಮಾ ಭೇಮ ಶವಸಸ್‌ಪತೇ ।**
**ತ್ವಾಮಭಿ ಪ್ರಣೋನುಮೋ ಜೇತಾರಮಪರಾಜಿತಂ ॥ ೨ ॥**

೨. ನೀನು ಸ್ಥಿರನು, ಬಲಿಷ್ಠನು ; ನಿನ್ನ ಸ್ನೇಹದಲ್ಲಿ ನಮಗೆ ಭಯವಿಲ್ಲ ; ಓ ಇಂದ್ರ, ನೀನು ವಿವಿಧ ಜ್ಯೋತಿಗಳ ದೊರೆ, ನೀನು ಜೇತಾರನಲ್ಲದೆ ಜಿತನಲ್ಲ - ನಾವು ಅಂಥ ನಿನ್ನೆಡೆಗೆ ಬರುವೆವು - ಮುಂದೆ ಮುಂದೆ ಸಾಗುತ್ತಾ ಬರುವೆವು.

**ಪೂರ್ವೀರಿಂದ್ರಸ್ಯ ರಾತಯೋ ನ ವಿ ದಸ್ಯನ್ ತ್ಯೂತಯಃ ।**
**ಯದೀ ವಾಜಸ್ಯ ಗೋಮತಃ ಸ್ತೋತೃಭ್ಯೋ ಮಂಹತೇ ಮಘಂ ॥ ೩ ॥**

೩. ಇಂದ್ರನ ಹಿಂದಿನ ಆಯಾಮಗಳು, ಅವನ ಮೊದಲ ಪ್ರಹ್ಲಾದಗಳು-ಅವು ನಷ್ಟವಾಗಿಲ್ಲ. ಏಕೆಂದರೆ ತನ್ನನ್ನು ಹೊಗಳುವವರಿಗಾಗಿ ಅವನು ಹೊಳೆವ ಸಾಮರ್ಥ್ಯಪೂರ್ಣತೆಯನ್ನು ಸಂಗ್ರಹಿಸುತ್ತಾನೆ.

**ಪುರಾಂ ಭಿಂದುರ್ಯುವಾ ಕವಿರಮಿತೌಜಾ ಅಜಾಯತ ।**
**ಇಂದ್ರೋ ವಿಶ್ವಸ್ಯ ಕರ್ಮಣೋ ಧರ್ತಾ ವಜ್ರೀ ಪುರುಷ್ಟುತಃ ॥ ೪ ॥**

೪. ಗೋಪುರದ್ವಾರಭೇದಕನೂ ತರುಣನೂ ದ್ರಷ್ಟಾರನೂ ಪ್ರಸೋದದಲ್ಲಿ ಅಪ್ರಮೇಯನಾಗಿ ತೋರಿಸಿಕೊಂಡವನೂ ಅಗಲವಾಗಿ ಹಬ್ಬಿದ ಗುಡುಗುಗಾರನೂ (ವಜ್ರಿಯೂ) ಆದ ಇಂದ್ರನು ಎಲ್ಲ ಕರ್ಮಗಳನ್ನೂ ತಡೆಹಿಡಿಯುತ್ತಾನೆ.

**ತ್ವಂ ವಲಸ್ಯ ಗೋಮತೋಽಪಾವರಿದ್ರವೋ ಬಿಲಂ ।**
**ತ್ವಾ ದೇವಾ ಅಬಿಭ್ಯುಷಸ್ತುಜ್ಯ ಮಾನಾಸ ಆವಿಷುಃ ॥ ೫ ॥**

೫. ಹೊಳೆವ ವಲನ ಕೊಟ್ಟಿಗೆಯನ್ನು ಮುಸುಕಿನಿಂದ ಹೊರದೆಗೆದವನು ನೀನು-ಎಲೈ ಗಿರಿವಾಸನೇ, ಪ್ರಣೋದಭರ ರಕ್ಷಣೆಯಲ್ಲಿ[1] ದೇವತೆಗಳು ಆ ನಿನ್ನನ್ನು ಹೆದರದೆ ಹೊಕ್ಕರು.

**ತವಾಹಂ ಶೂರ ರಾತಿಭಿಃ ಪ್ರತ್ಯಾಯಂ ಸಿಂಧುಮಾವದನ್ ।**
**ಉಪಾತಿಷ್ಠಂತ ನಿರ್ವಣೋ ವಿದುಷ್ಟೇ ತಸ್ಯ ಕಾರವಃ ॥ ೬ ॥**

೬. ನಿನ್ನ ಆನಂದೋದ್ರೇಕಗಳಿಂದ ಗರ್ಜಿಸುವ ಬಲವಂತನೇ, ನಾನು ಕಡಲೆಡೆಗೆ ಹೋದೆನು ; ನನ್ನ ಮಾತಿನಲ್ಲಿದ್ದ ಆ ಆನಂದದಾಯಕನ ಅರಿವಿನಲ್ಲಿ ಕರ್ಮಿಗಳು ಸನ್ನಿಹಿತರಾದರು.[2]

**ಮಾಯಾಭಿರಿಂದ್ರ ಮಾಯಿನಂ ತ್ವಂ ಶುಷ್ಣಮವಾತಿರಃ ।**
**ವಿದುಷ್ಟೇ ತಸ್ಯ ಮೇಧಿರಾಸ್ತೇಷಾಂ ಶ್ರವಾಂಸ್ಯುತ್ತಿರ ॥ ೭ ॥**

೭. ತಡೆಹಿಡಿಯುವ ನಿನ್ನ ಬಲಗಳಿಂದ ನೀನು ಬಲವಂತನ ಬಾಗಿಲಿಗಿಳಿದು ಬಂದೆ ; ಮತ್ತು ಅವನ ಬಲವನ್ನು ತಡೆಹಿಡಿದೆ (ಬಲ=ಶುಷ್ಣ) ; ಅವನ ಆವಿರ್ಭಾವದಲ್ಲಿ ಪೂರ್ಣತೆಯಿಂದ ಪೂರ್ಣನಾಗಿ ನೀನು ಅವರ ಸ್ಫೂರ್ತಿಗಳನ್ನು ಮೇಲಕ್ಕೆ ಎತ್ತು.

**ಇಂದ್ರ ಮೀಶಾನ ಮೋಜಸಾಭಿ ಸ್ತೋಮಾ ಅನೂಷತ ।**
**ಸಹಸ್ರಂ ಯಸ್ಯ ರಾತಯ ಉತ ವಾ ಸಂತಿ ಭೂಯಸೀಃ ॥ ೮ ॥**

೮. ಸ್ವಪ್ರಣೋದದಿಂದ ಇಂದ್ರನು ರಾಜ್ಯಭಾರ ಮಾಡುತ್ತಾನೆ; ಆದುದರಿಂದ ನಮ್ಮ ಸ್ತೋತ್ರಗಳು ಅವನನ್ನೇ ತೀಕ್ಷ್ಣವಾಗಿ ಬಯಸಿದವು ; ಅವನಿಗೆ ಸಾವಿರ ಆಹ್ಲಾದಗಳಿವೆ - ಅಷ್ಟೇ ಅಲ್ಲವಯ್ಯಾ - ಇನ್ನೂ ಹೆಚ್ಚು ಇವೆ.



---

೧. ಅಥವಾ "ಪ್ರೇರಿತ ಸ್ಥಿತಿಯಲ್ಲಿ"
೨. ಅಥವಾ "ನನಗೆ ಹಿಂದಿರುಗಿ ಕೊಡಿಸಿದರು."

# ಇಂದ್ರಸೂಕ್ತ

## VIII. 54

**ಏತತ್ ತ ಇಂದ್ರವೀರ್ಯಂ ಗೀರ್ಭಿರ್ ಗೃಣಂತಿ ಕಾರವಃ ।**
**ತೇ ಸ್ತೋಭಂತ ಊರ್ಜಮಾವನ್ ಘೃತಶ್ಚುತಂ ಪೌರಾಸೋ ನಕ್ಷನ್ ಧೀತಿಭಿಃ ॥ ೧ ॥**

೧. ಹೇ ಇಂದ್ರ, ಕರ್ಮಿಗಳು ತಮ್ಮ ಮಂತ್ರಗಳಲ್ಲಿ ಹೇಳುವ ನಿನ್ನ ಬಲ ಇದು. ಬೆಳಕಿನಿಂದ ಒಸರುತ್ತಿರುವ ನಿನ್ನ ಕ್ರಿಯಾಶಕ್ತಿಯನ್ನವರು ಹೊಗಳಿ ಕಾಯ್ದಿಡುತ್ತಾರೆ ; ನಗರವಾಸಿಗಳು ತಮ್ಮ ಚಿಂತನಗಳಿಂದ ನಿನ್ನೆಡೆಗೆ ಬರುತ್ತಾರೆ, ನಿನ್ನನ್ನು ಸೇರುತ್ತಾರೆ.

**ನಕ್ಷಂತ ಇಂದ್ರಮವ ಸೇ ಸುಕೃತ್ಯಯಾ ಯೇಷಾಂ ಸುತೇಷು ಮಂದಸೇ ।**
**ಯಥಾ ಸಂವರ್ತೇ ಅಮದೋ ಯಥಾ ಕೃಶ ಏವಾಸ್ಮೇ ಇಂದ್ರಮತ್ಸ್ವ ॥ ೨ ॥**

೨. ಅವರು ತಮ್ಮ ಸತ್ಕೃತಿಗಳಿಂದ ಇಂದ್ರನ ಹತ್ತಿರ ಬರುತ್ತಾರೆ, ಅವನನ್ನು ಸೇರುತ್ತಾರೆ ಮತ್ತು ಅವನ ರಕ್ಷಣೆಯನ್ನು ಪಡೆಯುತ್ತಾರೆ;ಅವರ ಮಧ್ಯ ಪ್ರದಾನಗಳಲ್ಲಿ ನಿನಗೆ ಸಂತೋಷವಿದೆ. ನಾನು ನಿಃಸಂತೋಷದಿಂದ ನಿನ್ನತ್ತ ಬರುತ್ತಿರುವಾಗಲೇ, ನಾನು ನಿನ್ನ ಹತ್ತಿರಕ್ಕೆ ಬಡವನಾಗಿ ಬರುತ್ತಿರುವಾಗಲೇ ಹೇ ಇಂದ್ರ, ನೀನು ನಿನ್ನ ಹರ್ಷವನ್ನು ತಾಳು, ಹೊಂದು.

**ಯದಿಂದ್ರ ರಾಧೋ ಅಸ್ತಿ ತೇಮಾ ಘೋನಂ ಮಘವತ್ತಮ ।**
**ತೇನ ನೋ ಬೋಧಿ ಸಧಮಾದ್ಯೋ ವೃಧೇ ಭಗೋ ದಾನಾಯ ವೃತ್ರಹನ್ ॥ ೫ ॥**

೫. ನಿನ್ನದಾದ, ಆ ಶ್ರೀಮಂತ ಸಂತೋಷದೊಡನೆ ಎಲೈ ಇಂದ್ರನೇ, ಅಪಾರ ಶ್ರೇಯಃ ಸಮೃದ್ಧಿಯಿಂದ, ಆಚ್ಛಾದಕನಾದ ವೃತ್ರನ ಸಂಹಾರಕನೇ, ಸುಖಾನುಭೂತಿದಾನಕ್ಕಾಗಿ, ನೀನು ನಮ್ಮಲ್ಲಿ ನಮ್ಮ ಪ್ರವರ್ಧಮಾನತೆಯ ಸಹಚರನಾಗಿ ಜಾಗರಿತನಾಗು, ಏಳು.

**ಆಜಿಪತೇ ನೃಪತೇ ತ್ವಮಿದ್ಧಿ ನೋ ವಾಜ ಆ ವಕ್ಷಿ ಸುಕ್ರತೋ ।**
**ವೀತೀ ಹೋತ್ರಾಭಿರುತ ದೇವವೀತಿಭಿಃ ಸ ವಾಂಸೋ ವಿಶೃಣ್ವಿರೇ ॥ ೬ ॥**

೬. ರಣಪತಿಯೇ, ದೇವರಾಜನೇ, ನಮ್ಮಲ್ಲಿ ಏಳಿಗೆ ಹೊಂದು. ನಮಗೆ ಅಪಾರಶ್ರೇಯಃ ಸಮೃದ್ಧಿಯನ್ನು ತಂದುಕೊಡು. ಎಲೈ ಶತಸಂಕಲ್ಪನೇ, ದಾರಿಯಿಂದ ಆಹುತಿಗಳಿಂದ, ದೇವತೆಗಳನ್ನು

ಕರೆತಂದುದರಿಂದ - ಅವರನ್ನು ಅಸ್ತಿತ್ವಕ್ಕೆ ತಂದುದರಿಂದ-ನಾವೀಗ ತುಂಬಾ ಶಾಂತಿಯುಕ್ತರಾಗಿದ್ದೇವೆ ಮತ್ತು ಸ್ಫೂರ್ತ ಜ್ಞಾನವನ್ನು ಗೆದ್ದುಕೊಂಡಿದ್ದೇವೆ.

**ಸಂತಿ ಹ್ಯರ್ಯ ಆಶಿಷ ಇಂದ್ರ ಆಯುರ್ಜನಾನಾಂ ।**
**ಅಸ್ಮಾನ್ ನಕ್ಷಸ್ವ ಮಘವನ್ನುಪಾದಸೇ ಧುಕ್ಷಸ್ವ ಪಿಪ್ಯುಷೀಮಿಷಂ ॥ ೭ ॥**

೭. ಏಕೆಂದರೆ ಇವೇ ಆ ಯೋಧನ ಆಶೀರ್ವಾದಗಳು ; ಇಂದ್ರನು ಜನರ ಜೀವನವಾಗಿದ್ದಾನೆ. ನಮ್ಮತ್ತ ಬಾ- ಓ ಅಪಾರ ಶ್ರೇಯಃ ಸಮೃದ್ಧಿಯ ಒಡೆಯನೇ ಬಂದು ರಕ್ಷಿಸು ನಮ್ಮನ್ನು ; ಪೋಷಕ ಪ್ರಣೋದವನ್ನು ನಮಗಾಗಿ ಕರೆ (ಹಿಂಡು).



# ಇಂದ್ರಸೂಕ್ತ

## X. 54

[ಇಂದ್ರನನ್ನು ಕುರಿತ ಬೃಹದುಕ್ಥನ ಸೂಕ್ತವಿದು ; ಬೃಹದುಕ್ಥನು ವಾಮದೇವ್ಯನು. ಇಂದ್ರನು ಮಾನಸ ಪ್ರಣೋದದ ಒಡೆಯನು. ಅವನು ಮನವನ್ನು ಮೀರಿ ಮಹಸ್ಸನ್ನು ಹೊಕ್ಕಾಗಲೂ ತನ್ನ ಕೆಳ ಅಂತರಿಕ್ಷಗಳನ್ನು ಇಟ್ಟುಕೊಂಡಿರುವವನು. 'ಸಹ್' ಎಂಬ ಉತ್ತಮ ಪುರುಷನೊಡನೆ ತನ್ನ ಐಕ್ಯವನ್ನು ಸಾಕ್ಷಾತ್ಕರಿಸಿಕೊಂಡವನಾಗಿದ್ದಾನೆ.]

**ತಾಂ ಸುತೇ ಕೀರ್ತಿಂ ಮಘವನ್ ಮಹಿತ್ವಾಯತ್ ತ್ವಾ ಭೀತೇ ರೋದಸೀ ಅಹ್ವಯೇತಾಂ ।**
**ಪ್ರಾವೋ ದೇವಾ ಆತಿರೋ ದಾಸಮೋಜಃ ಪ್ರಜಾಯ್ಯೈ ತ್ವಸ್ಯೆಯದಶಿಕ್ಷ ಇಂದ್ರ ॥ ೧ ॥**

೧. ನಿನ್ನ ಕೀರ್ತಿಗೆಂದು ನೀನು ಆದರ್ಶದ ಪೂರ್ಣತೆಯನ್ನು ಇಡಿಯಾಗಿ ಕೊಟ್ಟ ಬಳಿಕ, ಓ ಪೂರ್ಣತೆಯ ಮಘವಂತನೇ, ತಮ್ಮ ಹೆದರಿಕೆಯಲ್ಲಿ ಎರಡು ಅಂತರಿಕ್ಷಗಳೂ ನಿನ್ನನ್ನು ಕೂಗಿ ಕರೆದಾಗ ನೀನು ದೇವತೆಗಳನ್ನು ರಕ್ಷಿಸಿದೆ, ಶತ್ರುವನ್ನು ನೀನು ಸ್ತಂಭೀಭೂತನನ್ನಾಗಿ ಮಾಡಿದೆ- ಈ ಸೃಷ್ಟಿಗೆ ಕೂಡಾ ನೀನು, ಎಲೈ ಇಂದ್ರನೇ, ಆತ್ಮದ ಸಾಮರ್ಥ್ಯವನ್ನು ಕಲಿಸಿದೆ.

**ಯದಚರಸ್ತನ್ವಾ ವಾವೃಧಾನೋ ಬಲಾನೀಂದ್ರ ಪ್ರಬ್ರುವಾಣೋ ಜನೇಷು ।**
**ಮಾಯೇತ್ ಸಾತೇಯಾನಿ ಯುದ್ಧಾನ್ಯಾಹುರ್ನಾದ್ಯ ಶತ್ರುಂ ನನುಪುರಾ ವಿವಿತ್ಸೇ ॥ ೨ ॥**

೨. ನಿನ್ನ ಸಾರದ ಪ್ರಣೋದದಲ್ಲಿ ಆಧಿಕ್ಯವನ್ನುಂಟುಮಾಡಿ ನೀನು ಹೊರಗೆ ವಿಸ್ತಾರವಾಗಿ ವ್ಯಾಪಿಸಿದಾಗ ಮತ್ತು ಜನತೆಗೆ ಹೆಚ್ಚಿನ ಪ್ರತಿಬಲವನ್ನು ಕೊಟ್ಟಾಗ-ಆ ಪ್ರಣೋದವು ಅವರು ಹೇಳುವ ನಿನ್ನ ಯುದ್ಧಗಳಿಗೆ ಅದು ಸಾಕಾಯಿತು ; ಆದರೆ ನಿನಗೆ ಈಗ ಗೊತ್ತಾದ ಮೇಲೆ ಅಥವಾ ಗೊತ್ತಾಗದಿರುವಾಗಲೂ ಶತ್ರುವೇ ಇಲ್ಲ.

**ಕ ಊ ನು ತೇ ಮಹಿಮನಃ ಸಮಸ್ಯಾಽ ಸ್ಮತ್ ಪೂರ್ವ ಋಷಯೋಽಂತಮಾಪುಃ ।**
**ಯನ್ಮಾತರಂ ಚಪಿತರಂ ಚ ಸಾಕಮಜನಯಥಾಸ್ತನ್ವಃ ಸ್ವಾಯಾಃ ॥ ೩ ॥**

೩. ನಿನಗೆ ಸಮಾನಾತ್ಮಬಲವುಳ್ಳವರಾಗಿ ನಿನ್ನ ಮಹತ್ವದ ತುತ್ತ ತುದಿಗೆ ನಮಗಿಂತ ಹಿಂದಿನ ಯಾವ ಋಷಿಗಳು ಏರಿದ್ದರು? ನಿನ್ನ ಶರೀರದಿಂದಲೇ ನಿನ್ನ ತಾಯ್ತಂದೆಗಳಿಗೆ ಅಸ್ತಿತ್ವವನ್ನು ನೀನು ಕೊಟ್ಟಿಲ್ಲವೇ?

**ಚತ್ವಾರಿ ತೇ ಅಸುರ್ಯಾಣಿ ನಾಮಾಽದಾಭ್ಯಾನಿ ಮಹಿಷಸ್ಯ ಸಂತಿ ।**
**ತ್ವಮಂಗ ತಾನಿ ವಿಶ್ವಾನಿ ವಿತ್ಸೇ ಯೇಭಿಃ ಕರ್ಮಾಣಿ ಮಘವಂಚಕರ್ಥ ॥ ೪ ॥**

೪. ನೀನು ನಿನ್ನ ವಿಸ್ತಾರವಾದ ಲೋಕದಲ್ಲಿರುವಾಗ ನಿನ್ನ ಹತ್ತಿರ ಇದ್ದ ಅದಮ್ಯ ಬಲಗಳು ನಾಲ್ಕು. ಹೇ ಮಘವನ್, ಆ ನಾಲ್ಕನ್ನೂ ನೀನು ತಿಳಿದಿರುವೆ ಮತ್ತು ಅವುಗಳಿಂದಲೇ, ನೀನು ನಿನ್ನ ಕೆಲಸಗಳನ್ನು ಮಾಡಿದ್ದೀಯೆ.

**ತ್ವಂ ವಿಶ್ವಾದಧಿಷೇ ಕೇವಲಾನಿ ಯಾ ನ್ಯಾವಿರ್ಯಾಚ ಗುಹಾ ವಸೂನೀ ।**
**ಕಾಮಮಿನ್ಮೇ ಮಘವನ್ ಮಾವಿ ತಾರೀಸ್ತ್ವಮಜ್ಞಾತಾ ತ್ವಮಿಂದ್ರಾಸಿದಾತಾ ॥ ೫ ॥**

೫. ನೀನು ಈಯೆಲ್ಲ ಪರನಿರಪೇಕ್ಷ ಸತ್ತೆಗಳನ್ನು ಹಿಡಿದಿಟ್ಟಿರುವೆ. ಅಸ್ತಿತ್ವದ ಗುಪ್ತ ಸ್ಥಳಗಳಲ್ಲಿ ಇರುವ ವಸ್ತುಗಳನ್ನು ನೀನು ನಮಗೆ ತಿಳಿಯುವಂತೆ ಮಾಡುತ್ತೀಯೆ. ನನ್ನ ಬಯಕೆಯನ್ನು ಬಡಿದು ಹಾಕದಿರು. ಓ ಮಘವಂತನೇ, ಅದರ ನಿಯಂತ್ರಕನೂ ಅದರ ದಾತೃವೂ ನೀನು.

**ಯೋ ಅದಧಾ ಜ್ಯೋತಿಷಿ ಜ್ಯೋತಿರಂತರ್ಯೋ ಅಸೃಜನ್ಮಧುನಾ ಸಂ ಮಧೂನಿ ।**
**ಅಧಪ್ರಿಯಂ ಶೂಷಮಿಂದ್ರಾಯ ಮನ್ಮ ಬ್ರಹ್ಮ ಕೃತೋ ಬೃಹದುಕ್ಥಾದವಾಚಿ ॥ ೬ ॥**

೬. ಯಾವನು ಇನ್ನೊಂದು ಬೆಳಕಿನ ಎದೆಯಲ್ಲಿ ಬೆಳಕನ್ನಿಟ್ಟನೋ ಯಾವನು ಮಾಧುರ್ಯಕ್ಕೆ ಮಾಧುರ್ಯವನ್ನು ಸೇರಿಸಿದನೋ ಆ ಇಂದ್ರನಿಗೆ ಈ ಪ್ರೇಮವು, ಈ ಪ್ರಣೋದವು, ಈ ವಿಚಾರವು-ಎಂಬುದನ್ನು ಬೃಹದುಕ್ಥನು ತನ್ನಲ್ಲಿ ಬ್ರಹ್ಮನನ್ನು ತುಂಬಿಕೊಂಡಾಗ ಹೇಳಿದನು.



# ಒಂದು ವೈದಿಕ ಸೂಕ್ತ

## I. 3

**ಅಶ್ವಿನಾ ಯಜ್ವರೀರಿಷೋ ದ್ರವತ್ಪಾಣೀ ಶುಭಸ್ಪತೀ ।**
**ಪುರುಭುಜಾ ಚನಸ್ಯತಂ ॥ ೧ ॥**

೧. ಹೇ ಅಶ್ವಿಗಳೇ, ಓ ಮಹಾಭೋಗಿಗಳೇ, ಹೇ ಚುರುಕು ನಡೆಯ ಆನಂದಪ್ರಭುಗಳೇ,[೧] ನೀವು ಆನಂದ ಸ್ವರೂಪರಾಗಿರಿ.[೨] ಯಾರಿಗೆ? ಯಾರು ಯಜ್ಞಕ್ಕಾಗಿ[೩] ಹೋರಾಡುತ್ತಾನೋ ಅವನಿಗೆ.[೪]

**ಅಶ್ವಿನಾ ಪುರುದಂಸಸಾ ನರಾ ಶವೀರಯಾ ಧಿಯಾ ।**
**ಧಿಷ್ಣ್ಯಾ ವನತಂ ಗಿರಃ ॥ ೨ ॥**

೨. ಹೇ ಬಲಿಷ್ಠರೂ, ಬಹುಧ್ವಂಸಕರೂ[೫] ಆದ ಅಶ್ವಿಗಳೇ, ದೃಢವೂ ಉಜ್ವಲವೂ[೬] ಆದ ತಿಳುವಳಿಕೆಯಿಂದ ನನ್ನ ಮಂತ್ರದಲ್ಲಿ ಸಂತೋಷಪಡಿರಿ.[೭]

**ದಸ್ರಾ ಯುವಾಕವಃ ಸುತಾ ನಾಸತ್ಯಾ ವೃಕ್ತ ಬರ್ಹಿಷಃ ।**
**ಆ ಯಾತಂ ರುದ್ರವರ್ತನೀ ॥ ೩ ॥**

೩. ಹೇ ಹಾಳುಧುಳೆಬ್ಬಿಸುವವರೇ[೮](ಅಪವ್ಯಯಿಗಳೇ), ನಸತನ ಪುತ್ರರೇ, ಕಾರ್ಯದಲ್ಲಿ ನೀವು ಭಯಂಕರರೇ ಆಗಿದ್ದೀರಿ ; ಏಕೆಂದರೆ ನಾನು ಯೋಗಸ್ಥನಾಗಿದ್ದೇನೆ,[೯] ನಾನು ಜ್ವಾಲೆಯನ್ನು[೧೦] ಪ್ರಕಟಗೊಳಿಸಿದ್ದೇನೆ.

---

೧. ಆನಂದದ=ಒಳಿತನ.

೨. ಅಥವಾ ಆನಂದಸ್ವರೂಪವನ್ನು ತೆಗೆದುಕೊಳ್ಳಿರಿ.

೩. ಯಜ್ಞವೆಂದರೆ-ಯಜಮಾನ, ಯೋಗ, ಕಾರ್ಯ, ಯಜ್ಞ ಎಂಬ ನಾಲ್ಕು ಅರ್ಥಗಳನ್ನುಳ್ಳದ್ದು.

೪. ಹೋರಾಡು=ಭುಷ್ ; ಇದಕ್ಕೆ ಅಪಾಯಮಾಡು, ವೇಗವಾಗಿ ಹೋಗು, ರೋಮಾಂಚನಗೊಳಿಸು ಯಾ ಆನಂದೋದ್ರೇಕದಿಂದ ನಡುಗು, ಮುರುಟಿ ಹೋಗು-ಎಂಬ ಇತರ ನಾಲ್ಕರ್ಥಗಳಿವೆ.

೫. ಪುರು=ಬಹು ; ಪೋಲಸ್(ಗ್ರೀಕ್)=ಬಹು ಅಥವಾ ಪುಕ್ಕಟೆಯಾಗಿ ಕೊಡುವ ಎಂದರ್ಥ.

೬. ಶವೀರಯಾ=ಹೈಲೋಸ್ (ಗ್ರೀಕ್).

೭. ಸಂತೋಷ ತೆಗೆದುಕೊಳ್ಳಿರಿ ಅಥವಾ ಸಂತೋಷವನ್ನು ಸ್ವೀಕರಿಸಿರಿ.

೮. ಹಾಳು ಮಾಡುವವರೇ ಅಥವಾ ದಾನಿಗಳೇ.

೯. ಯೋಗಸ್ಥ = ಯುವಾಕು-ಯು+ಅಕು-ಸದೃಶೋದಾಹರಣೆಯಾಗಿ ಯುವನ್-ಯು+ಅನ್ ಎಂಬುದನ್ನು ಸ್ವೀಕರಿಸಬಹುದು.

೧೦. ಜ್ವಾಲೆಯನ್ನು - ವೃಕ್ತಬರ್ಹಿಷಃ, ವೃಕ್ತ=ಹರಹಿದ ಯಾ ತೆರೆದ ಮತ್ತು ಬರ್ಹಿಸ್= ಬೆಳಕು, ಪ್ರಣೋದ, ಬೆಂಕಿ.

**ಇಂದ್ರಾ ಯಾಹಿ ಚಿತ್ರಭಾನೋ ಸುತಾ ಇಮೇ ತ್ವಾಯವಃ ।**
**ಅಣ್ವೀಭಿಸ್ತನಾ ಪೂತಾಸಃ ॥ ೪ ॥**

೪. ಶುದ್ಧೀಕೃತ ಬಲವುಳ್ಳ[೧೧] "ಇಂದ್ರನೇ ಬಾ, ನಿನ್ನ ಹೊಳಪು ಅನೇಕಾನೇಕ ರೀತಿಗಳದ್ದು. ಇಲ್ಲಿವೆ, ಈ ಜೈವಿಕ ರಸಗಳನ್ನುತೆಗೆದಿರಿಸಲಾಗಿದೆ[೧೨]; ಅವನ್ನು ನಿನ್ನ ಸತ್ತ್ವಾಶಕ್ತಿಗಳಿಂದ ಚಿತ್ತರಿಸು.

**ಇಂದ್ರಾಯಾಹಿ ಧೀಯೇಷಿತೋ ವಿಪ್ರಜೂತಃ ಸುತಾವತಃ ।**
**ಉಪ ಬ್ರಹ್ಮಾಣಿ ವಾಘತಃ ॥ ೫ ॥**

೫. ಸಾರವತ್ತಾದ ಸಾಮರ್ಥ್ಯವುಳ್ಳ[೧೩] ಜೀವಾತ್ಮ-ಚಲನವಲನಗಳಿಗೆ ಬಲಾತ್ಕಾರದಿಂದ ಪ್ರೇರಿತನಾಗಿಯೂ ತಿಳುವಳಿಕೆಯಿಂದ ಆಜ್ಞಪ್ತನಾಗಿಯೂ ಹಾಗೇ ಜೀವಾತ್ಮನಲ್ಲಿ[೧೪] ಸಂತೋಷದಿಂದ ವಿಕಸ್ವರನಾಗಿಯೂ ಹೇ ಇಂದ್ರನೇ ಬಾ.

**ಇಂದ್ರಾಯಾಹಿ ತೂತುಜಾನ ಉಪಬ್ರಹ್ಮಾಣಿ ಹರಿವಃ ।**
**ಸುತೇ ದಧಿಷ್ವ ನಶ್ಚನಃ ॥ ೬ ॥**

೬. ಪ್ರೇರಣಾಪ್ರಣೋದ ಯುಕ್ತನಾಗಿ[೧೫] ಎಲೈ ಇಂದ್ರನೇ, ಜೀವಾತ್ಮ ಚಲನೆಗಳತ್ತ ಬಾ. ಪ್ರಕಾಶವಾಸಿಯೇ[೧೬], ಸೋಮರಸ ಧಾರಾ ಪ್ರವಾಹದಲ್ಲಿ ನಮ್ಮ ಆಹ್ಲಾದವನ್ನು ಎತ್ತಿ ಹಿಡಿ.

**ಓ ಮಾಸಶ್ಚರ್ಷಣೀಧೃತೋ ವಿಶ್ವೇ ದೇವಾಸ ಆಗತ ।**
**ದಾಶ್ವಾಂ ಸೋ ದಾಶುಷಃ ಸುತಂ ॥ ೭ ॥**

೭. ಹೇ ಪ್ರೇಮಮಯರೇ[೧೭], ಹೇ ಅಸ್ಮತ್ಕರ್ಮಧುರಂಧರರೇ,[೧೮] ಹೇ ವಿಶ್ವದೇವರೇ, ಹತ್ತಿರಕ್ಕೆ ಬನ್ನಿರಿ, ದಾನಿಯು ಕೊಟ್ಟ ಹೊರ ಹರಿದ ಸೋಮರಸವನ್ನು ಹಂಚಿಕೊಳ್ಳಿರಿ.

---

೧೧. ಶುದ್ಧೀಕೃತ=ಅಥವಾ ಸತ್ತ್ವಾಶಕ್ತಿಗಳೊಡನೆ ಮತ್ತು ಭೌತ ಪ್ರಣೋದದೊಡನೆ ಬಾ.

೧೨. ಆಯವಃ = ವೇದೋಕ್ತವಾದ ಸೋಮವೆಂದರೆ ಕೇವಲ ಸೋಮರಸವಲ್ಲ-ಅದು ಅಮೃತ ಎಂದು ಅರ್ಥೈಸಲು ಇದು ಸ್ಪಷ್ಟ ಪ್ರಮಾಣವಾಗಿದೆ.

೧೩. ಸುತಾವತಃ-ಸುತ್+ವನ್ ಯಾ ಸು+ತವನ್ (ರೇವಾನ್ ಎಂಬುದಕ್ಕೆ ಹೋಲಿಸಿರಿ). ನಾನು ಎರಡನೆಯ ಅರ್ಥವನ್ನು ಸ್ವೀಕರಿಸುತ್ತೇನೆ.=(ಸಾರವತ್ತಾದ) ಸಾಮರ್ಥ್ಯವುಳ್ಳ.

೧೪. ವಾಘತಃ ಸಂದಿಗ್ಧಾರ್ಥಕ ಪದವು. ಇದಕ್ಕಿಲ್ಲಿ ಕೊಟ್ಟ ಅರ್ಥವು ತಾತ್ಕಾಲಿಕವಾ ಎಂಬುದರ ಮೂಲಾರ್ಥದ ಪ್ರಣೋದದಿಂದ ನಿಗಮನಿಸಿದುದು.

೧೫. ಅಥವಾ ಭಾವೋದ್ರೇಕದ ಪ್ರಣೋದ ಯಾ ದೃಢೀಕರಣದ ರಕ್ಷಕ ಪ್ರಣೋದವು. ಅದ್ರಿವರು)

೧೬. ಅದ್ರಿವಃದಂತೆ ಹರಿವಃ

೧೭. ಓಮಾಸಃ - ಉಂ ಧಾತು ಜನ್ಯವಾದುದು ಊಮಾಃ, ಉಮ್=ಪ್ರೀತಿಸು, ಸಾಕು, ಪೋಷಿಸು (ಉಮಾಪದವನ್ನು ಹೋಲಿಸಿರಿ). ಉ=ಇರು, ಉಳ-ಅಪೂರ್ಣತೆ+ಪೂರಕ ಸಫಲಗೊಳಿಸುವ ಅರ್ಥದ ಮಕಾರದ ನಡುವೆ ಅಥವಾ ದಯಾಮಯವಾಗಿ.

೧೮. ಚರ್ಷಣೀ = ದರ್ಶನ, ಚಲನೆ ಯಾ ಕಾರ್ಯವು.

**ವಿಶ್ವೇ ದೇವಾಸೋ ಅಪ್ತುರಃ ಸುತಮಾ ಗಂತ ತೂರ್ಣಯಃ ।**
**ಉಸ್ರಾ ಇವ ಸ್ವಸರಾಣಿ ॥ ೮ ॥**

೮. ಓ ವಿಶ್ವ ದೇವತೆಗಳೇ, ಓ ಸಕ್ರಿಯರೇ[೧೯], ಓ ಸಾರವಂತರೇ[೨೦], ಪ್ರೇಮಿಗಳು ತಮ್ಮ ಕುಟೀರಗಳಿಗೆ ಬರುವಂತೆ ವೇಗವಾಗಿ ಬನ್ನಿರಿ.

**ವಿಶ್ವೇ ದೇವಾಸೋ ಅಸ್ರಿಧ ಏಹಿಮಾಯಾಸೋ ಅದ್ರುಹಃ ।**
**ಮೇಧಂ ಜುಷಂತ ವಹ್ನಯಃ ॥ ೯ ॥**

೯. ಪ್ರಣೋದ ಬಲಿಗಳಾದ[೨೧] ಎಡಹದ[೨೨] ಓ ವಿಶ್ವೇ ದೇವತೆಗಳೇ- ಹಿಂಸಿಸಲಿಲ್ಲ-ಓ ನನ್ನ ಬೆಂಬಲಿಗರೇ, ನನ್ನ ಶಕ್ತಿಯು[೨೩] ಪೂರ್ಣತೆಗಂಟಿಕೊಂಡು ಬನ್ನಿರಿ.

**ಪಾವಕಾ ನಃ ಸರಸ್ವತೀ ವಾಜೇಭಿರ್ವಾಜಿನೀವತೀ ।**
**ಯಜ್ಞಂ ವಷ್ಟು ಧಿಯಾವಸುಃ ॥ ೧೦ ॥**

೧೦. ಬೇಕಾದಷ್ಟು ಸತ್ತ್ವಾ ವಿಕಸ್ವರತೆಯಿಂದ, ತಿಳುವಳಿಕೆಯ ಐಶ್ವರ್ಯವುಳ್ಳವಳಾಗಿ, ಪವಿತ್ರೀಕಾರಿಕೆಯಾದ ಸರಸ್ವತಿಯು ಯಜ್ಞದಲ್ಲಿ[೨೪] ನೆಲೆಸಲಿ.

**ಚೋದಯಿತ್ರೀ ಸೂನೃತಾನಾಂ ಚೇತಂತೀ ಸುಮತೀನಾಂ ।**
**ಯಜ್ಞಂ ದಧೇ ಸರಸ್ವತೀ ॥ ೧೧ ॥**

೧೧. ನಿಜ ಪ್ರತಿಭಾಸ್ಫುರಣಗಳನ್ನು ಪ್ರಚೋದಿಸುವ, ಸರಿಯಾದ ವಿಚಾರಗಳನ್ನು ಜಾಗರಿತಗೊಳಿಸುವ ಸರಸ್ವತಿಯು ಯಜ್ಞವನ್ನು ಎತ್ತಿ ಹಿಡಿಯುತ್ತಾಳೆ.

**ಮಹೋ ಅರ್ಣಃ ಸರಸ್ವತೀ ಪ್ರ ಚೇತಯತಿ ಕೇತುನಾ ।**
**ಧಿಯೋ ವಿಶ್ವಾ ವಿರಾಜತಿ ॥ ೧೨ ॥**

೧೨. ಸಂಕಲ್ಪ ಪ್ರಣೋದದಿಂದ[೨೫] ಮಹಃ ಸಾಗರವನ್ನು-ನಮ್ಮ ನಜರಿಗೆ ಸರಸ್ವತಿಯು ತರುತ್ತಾಳೆ ; ಮತ್ತು ತಿಳಿವಳಿಕೆಯ ಎಲ್ಲ ಚಲನೆಗಳಲ್ಲೂ ಅವನು ಅತ್ತ ಇತ್ತ ಕಣ್ಣು ಕೋರೈಸುವಂತೆ ಹೊಳೆಯುತ್ತಾನೆ.



---

೧೯. ಅಪ್=ಕರ್ಮಮಾಡು ಮತ್ತು ತುರ್=ಕರ್ತೃವಾಚಕ ಅಥವಾ ವೇಗಯುತ.
೨೦. ಅಥವಾ ಅತ್ಯಾನಂದಮಯ ಯಾ ಅತಿ ಶುಭಕರ. ಸುತಮಾ-ತಮಿಸ್ರಾ (ದಟ್ಟವಾದ) ಎಂಬಂತೆ ; ತನೂ ತನ್ವ ಇತ್ಯಾದಿ.
೨೧. ಮಾಯಾಸಃ=ಲ್ಯಾಟಿನ್ನಿನಲ್ಲಿ ಮಜೋರೆಸ್ ಆದರೆ ಹೋಲಿಸಬಹುದಾದ ಅರ್ಥದಲ್ಲಿಲ್ಲ.
೨೨. ಎಡಹು-ಏಕೆಂದರೆ ಶ್ರಿಧ್ ಎಂಬುದು ತಾತ್ಕಾಲಿಕಾರ್ಥವು.
೨೩. ಮೇಧಂ-ಸ್ಸ್ಯಸಾರ ಅಥವಾ ಮಿದುಳು ಇಲ್ಲವೆ ಕಾರ್ಯಶಕ್ತಿ (ಮೇಧಾಪದದೊಡನೆ ಹೋಲಿಸಿರಿ.)
೨೪. ಯಜ್ಞ: ಒಡೆಯ ಅಥವಾ ಕರ್ಮ ಎಂದರ್ಥವು.
೨೫. ಅಥವಾ ವಿಚಾರದಿಂದ "ಕೇತು"-ಕೇತ=ಸಂಕಲ್ಪ, ಪ್ರತಿಭೆ ಯಾ ಬುದ್ಧಿಶಕ್ತಿಯು.

# ಒಂದು ವೈದಿಕ ಸೂಕ್ತದಿಂದ

## I. 15

**ಇಂದ್ರ ಸೋಮಂಪಿಬ ಋತುನಾऽऽ ತ್ವಾ ವಿಶಂತ್ವಿಂದವಃ ।**
**ಮತ್ಸರಾಸಸ್ತದೋಕಸಃ ॥ ೧ ॥**

೧. ಓ ಇಂದ್ರಾ, ಸೋಮಮದ್ಯವನ್ನು ಸತ್ಯದ ವಿಧಿಗೆ ವಿಹಿತವಾಗಿ (ಕಾಯದೆಯಂತೆ) ಕುಡಿ ; ಅಮೃತದ ಮಾಧುರ್ಯಗಳು ನಿನ್ನೊಳ ಹೊಗಲಿ - ಆನಂದೋದ್ರೇಕದ ಅವುಗಳ ಮನೆ ಅದು.

**ಮರುತಃ ಪಿಬತ ಋತುನಾ ಪೋತ್ರಾದ್ ಯಜ್ಞಂ ಪುನೀತನ ।**
**ಯೂಂ ಯಂ ಹಿಷ್ಠಾ ಸುದಾನವಃ ॥ ೨ ॥**

೨. ಓ ಮರುತ್ತುಗಳೇ, ಸತ್ಯದ ವಿಧಿಗೆ ಸರಿಯಾಗಿ ಕುಡಿಯಿರಿ, ಯಜ್ಞವನ್ನು ಪವಿತ್ರೀಕರಣ ಪ್ರಕ್ರಿಯೆಯಂತೆ ಶುದ್ಧೀಕರಿಸಿರಿ ; ಏಕೆಂದರೆ ನೀವು ಹಿಡಿದ ಪಟ್ಟನ್ನು ಬಿಡದವರೂ ಬಹಳ ಧೈರ್ಯಶಾಲಿಗಳೂ ಆಗಿದ್ದೀರಿ.

**ಅಭಿಯಜ್ಞಂ ಗೃಣೀಹಿ ನೋ ಗ್ನಾವೋ ನೇಷ್ಟಃ ಪಿಬ ಋತುನಾ ।**
**ತ್ವಂ ಹಿ ರತ್ನಧಾ ಅಸಿ ॥ ೩ ॥**

೩. ನಮ್ಮ ಯಜ್ಞದ ವಿಷಯವಾಗಿ ನಮಗಾಗಿ ನಿನ್ನ ಕರೆಯನ್ನು ಕೊಡು. ಕ್ರಿಯಾಶೀಲನಾಗಿ, ಉತ್ಸಾಹಪೂರ್ಣನಾಗಿ, ಸತ್ಯಾನುಗುಣವಾಗಿ ಕುಡಿ-ಏಕೆಂದರೆ, ನೀನು ಆಹ್ಲಾದದ ನಿರ್ವಹಣೆ ಮಾಡುವವನು.

**ಅಗ್ನೇ ದೇವಾ ಇಹಾ ವಹ ಸಾದಯಾ ಯೋನಿಷು ತ್ರಿಷು ।**
**ಪರಿಭೂಷ ಪಿಬ ಋತುನಾ ॥ ೪ ॥**

೪. ಹೇ ಅಗ್ನೇ ದೇವತೆಗಳನ್ನಿಲ್ಲಿಗೆ ಕರೆದುಕೊಂಡು ಬಾ, ಅವರನ್ನಿಲ್ಲಿ ಕುಳ್ಳಿರಿಸು - ಮೂರು ಗರ್ಭಗಳಲ್ಲಿ. ಸರ್ವವೂ ಸುತ್ತುವರಿದಿರುವಾಗ (ಸರ್ವವನ್ನೂ ಸುತ್ತುವರಿದು) ಸತ್ಯದ ದೆಸೆಯಿಂದ ಕುಡಿ.

**ಬ್ರಾಹ್ಮಣಾದಿಂದ್ರ ರಾಧಸಃ ಪಿಬಾ ಸೋಮ ಮೃತೂರನು ।**
**ತವೇದ್ಧಿ ಸಖ್ಯಮಸ್ತೃತಂ ॥ ೫ ॥**

೫. ಹೇ ಇಂದ್ರ, ವಸ್ತುಗಳ ಸತ್ಯಗಳಿಗನುಗುಣವಾಗಿ ನೀನು ಜೀವಾತ್ಮದ ಆನಂದವನ್ನು ಕುಡಿ ; ಏಕೆಂದರೆ, ನಿನ್ನ ಗೆಳೆತನವು ಎಂದೂ ಮುಳುಗದು.

**ಯುವಂ ದಕ್ಷಂ ಧೃತವ್ರತ ಮಿತ್ರಾವರುಣ ದೂಳಭಂ ।**
**ಋತುನಾ ಯಜ್ಞ ಮಾಶಾಥೇ ॥ ೬ ॥**

೬. ಹೇ ಮಿತ್ರಾ-ವರುಣರೇ, ದಕ್ಷನನ್ನು ಬೆಂಬಲಿಸುವ ಕರ್ತವ್ಯವುಳ್ಳ ನೀವು ಸತ್ಯದ ದೆಸೆಯಿಂದ ಯಜ್ಞವನ್ನು ಅನುಭವಿಸಿರಿ.

**ದ್ರವಿಣೋದಾ ದ್ರವಿಣಸೋ ಗ್ರಾವಹಸ್ತಾಸೋ ಅಧ್ವರೇ ।**
**ಯಜ್ಞೇಷು ದೇವಮೀಳತೇ ॥ ೭ ॥**

೭. ಸತ್ವದ (ಸಾರದ) ಒಡೆಯನು ಯಜ್ಞದಲ್ಲಿ ತುಂಬಿದ ಕೈಯಿಂದ ದೇವನನ್ನು ಯಜ್ಞಗಳಿಂದ ಸಂತೋಷಿಸುತ್ತಾನೆ.

**ದ್ರವಿಣೋ ದಾ ದದಾತು ನೋ ವಸೂನಿ ಯಾನಿ ಶೃಣ್ವಿರೇ ।**
**ದೇವೇಷು ತಾ ವನಾಮಹೇ ॥ ೮ ॥**

೮. ಸತ್ವಾಧಿಪತಿಯು ನಮಗೆ ಹೇಳಿಕೆಯಿಂದ ಪ್ರಸಿದ್ಧವಾದ ಸಿರಿಗಳನ್ನು ಕೊಡಲಿ ; ಇವುಗಳಿಗಾಗಿ ನಾವು ದೇವತೆಗಳನ್ನು[೧] ಪ್ರಾರ್ಥಿಸುತ್ತೇವೆ.

**ದ್ರವಿಣೋದಾಃ ಪಿಪೀಷತಿ ಜುಹೋತ ಪ್ರಚ ತಿಷ್ಠತ ।**
**ನೇಷ್ಟ್ರಾದೃತು ಭಿರಿಷ್ಯತ ॥ ೯ ॥**

೯. ಸತ್ವಾಧೀಶನು ಕುಡಿಯುವನು, ಆಹುತಿ ಹಾಕುವನು ಮತ್ತು ಸತ್ಯದ ಋತಾನುಗುಣವಾಗಿ ಮುಂದಕ್ಕೆ ನಿಲ್ಲುವನು.



೧. ಅಥವಾ ದೇವರಲ್ಲಿರುವ ಬಯಕೆ.

# ಬ್ರಹ್ಮಣಸ್ಪತಿಯನ್ನು ಕುರಿತ ಸೂಕ್ತ

## I. 18

### ಜೀವಾತ್ಮಾಧೀಶನು

**ಸೋಮಾನಂ ಸ್ವರಣಂ ಕೃಣುಹಿ ಬ್ರಹ್ಮಣಸ್ಪತೇ ।**
**ಕಕ್ಷೀವಂತಂ ಯ ಔಶಿಜಃ ॥ ೧ ॥**

೧. ಹೇ ಜೀವಾತ್ಮಾಧೀಶನೇ, ಉಷಿಜ್ ಎಂಬವನ ಮಗನಾದ ಕಕ್ಷೀವನ್ ಎಂಬುವನನ್ನು ಮಧುರಾತ್ಮನನ್ನಾಗಿಯೂ ಒಳ್ಳೆಯ ಯೋಧನನ್ನಾಗಿಯೂ ಮಾಡು.

**ಯೋ ರೇವಾನ್ಯೋ ಅಮೀವಹಾ ವಸುವಿತ್ ಪುಷ್ಟಿವರ್ಧನಃ ।**
**ಸನಃ ಸಿಷಕ್ತು ಯಸ್ತುರಃ ॥ ೨ ॥**

೨. ಧೀರನೂ ಉತ್ಸಾಹದಿಂದ ತುಂಬಿ ತುಳುಕುತ್ತಿರುವವನೂ ಅಮಿತ್ರಘ್ನನೂ ಸತ್ತಾಸಾರಜ್ಞನೂ ಪೂರ್ಣತಾ ವರ್ಧನನೂ ಬಲಿಷ್ಠನೂ ಶೀಘ್ರಚರನೂ ಆದವನು ನಮ್ಮನ್ನು ಅಂಟಿಕೊಳ್ಳಲಿ (ಅಪ್ಪಿಕೊಳ್ಳಲಿ)

**ಮಾನಃ ಶಂಸೋ ಅರರುಷೋ ಧೂರ್ತಿಃ ಪ್ರಣಕ್ ಮರ್ತ್ಯಸ್ಯ ।**
**ರಕ್ಷಾಣೋ ಬ್ರಹ್ಮಣಸ್ಪತೇ ॥ ೩ ॥**

೩. ತನ್ನ ಹೋರಾಟದಲ್ಲಿ ಮಾನವನ (ಮರ್ತ್ಯನ) ಮಹತ್ವಾಕಾಂಕ್ಷೆಯೂ ಉತ್ಸುಕತೆಯೂ ನಮ್ಮಲ್ಲಿ ನಾಶ ಹೊಂದದಿರಲಿ. ಹೇ ಜೀವಾತ್ಮಾಧಿಪತೇ, ನಮ್ಮನ್ನು ರಕ್ಷಿಸು.

**ಸ ಘಾ ವೀರೋ ನ ರಿಷ್ಯತಿಯಮಿಂದ್ರೋ ಬ್ರಹ್ಮಣಸ್ಪತಿಃ ।**
**ಸೋಮೋ ಹಿನೋತಿ ಮರ್ತ್ಯಮ್ ॥ ೪ ॥**

೪. ಆ ವೀರನು ಹೊಡೆಯುತ್ತಾನೆ ಮತ್ತು ಅವನಿಗೆ ಹಿಂಸೆಯಾಗುವುದಿಲ್ಲ. ಅವನು ಮರ್ತ್ಯ ಮಾನವನು ; ಅವನನ್ನು ಇಂದ್ರನೂ ಬ್ರಹ್ಮಣಸ್ಪತಿಯೂ ಸ್ನೇಹಿತನನ್ನಾಗಿ ಒಲಿಸಿಕೊಳ್ಳುತ್ತಾರೆ.

**ತ್ವಂ ತಂ ಬ್ರಹ್ಮಣಸ್ಪತೇ ಸೋಮ ಇಂದ್ರಶ್ಚ ಮರ್ತ್ಯಂ ।**
**ದಕ್ಷಿಣಾ ಪಾತ್ವಂಹಸಃ ॥ ೫ ॥**

೫. ಓ ಬ್ರಹ್ಮಣಸ್ಪತಿಯೇ ಶುಭಕರರೂ ಪ್ರಬುದ್ಧರೂ ಆದ ಇಂದ್ರನೂ ಸೋಮನೂ ಹಿಂಸೆಯಿಂದ ಆ ಮರ್ತ್ಯನನ್ನು ರಕ್ಷಿಸುತ್ತಾರೆ.

**ಸದಸಸ್ಪತಿ ಮದ್‌ಭುತಂ ಪ್ರಿಯಮಿಂದ್ರಸ್ಯ ಕಾಮ್ಯಂ ।**
**ಸನಿಂ ಮೇಧಾಮಯಾಸಿಷಂ ॥ ೬ ॥**

೬. ಅದ್ಭುತ ಗೃಹಪತಿಯೂ ಪ್ರಿಯತಮನೂ ಇಂದ್ರಪ್ರಿಯನೂ ಆದವನಿಗಾಗಿ[೧] ನಾನು ಕಷ್ಟದ ಕಾಯಕ ಮಾಡಿದೆನು, ಸುದೈವ ಸ್ಥಿತಿಯಲ್ಲಿ ಸುಸ್ಥಿರತೆಗಾಗಿ ನಾನು ನನ್ನ ಆತ್ಮದ ಶಕ್ತಿಗಾಗಿ (ಶಕ್ಯತೆಗಾಗಿ) ದುಡಿದೆನು.

**ಯಸ್ಮಾದೃತೇ ನಸಿಧ್ಯತಿ ಯಜ್ಞೋ ವಿಪಶ್ಚಿತಶ್ಚನ ।**
**ಸಧೀನಾಂ ಯೋಗಮಿನ್ವತಿ ॥ ೭ ॥**

೭. ಯಾವನಿಲ್ಲದಿದ್ದರೆ ಯಜ್ಞವು ಪೂರ್ತಿಯಾಗುವುದಿಲ್ಲವೋ ಸೂಕ್ಷ್ಮದರ್ಶನ ಶಕ್ತಿಯುಳ್ಳವನ ಯಜ್ಞ ಕೂಡಾ ಪೂರ್ಣವಾಗುವುದಿಲ್ಲವೋ ಅವನಿಗೆ ತಿಳುವಳಿಕೆಯ ಚಲನೆಯ ಯೋಗದ ಮೇಲೆ ಪ್ರಭುತ್ವವಿದೆ.

**ಆ ದೃಧ್ನೋತಿ ಹವಿಷ್ಕೃತಂ ಪ್ರಾಂಚಂ ಕೃಣೋತ್ಯಧ್ವರಂ ।**
**ಹೋತ್ರಾ ದೇವೇಷು ಗಚ್ಛತಿ ॥ ೮ ॥**

೮. ಆತನು ಹವಿರಾಹುತಿಗಳನ್ನು ದೃಢಪಡಿಸುತ್ತಾನೆ, ಅವನು ಯಜ್ಞಕರ್ಮವನ್ನು ಮುಂದುವರಿಸಿಕೊಂಡು ಹೋಗುತ್ತಾನೆ ; ಅವನು ಯಜ್ಞ ಪುರೋಹಿತನ ಮೂಲಕ (ಅಧ್ವರ್ಯುವಿನ ಮೂಲಕ) ದೇವರೊಡನೆ ಹೋಗುತ್ತಾನೆ.

**ನರಾಶಂಸಂ ಸುಧೃಷ್ಟಮಮಪಶ್ಯಂ ಸಪ್ರಥಸ್ತಮಂ ।**
**ದಿವೋ ನ ಸದ್ಮಮಖ ಸಂ ॥ ೯ ॥**

೯. ನಾನೊಬ್ಬನನ್ನು ಕಂಡೆನು. ಅವನು ಮಹತ್ತಾದ ಆಕಾಂಕ್ಷೆಯುಳ್ಳವನು. ಸಂಪೂರ್ಣವಾಗಿ ಧಾರ್ಷ್ಟ್ಯವುಳ್ಳವನು, ವಿಸ್ತಾರನೂ, ವಿಸ್ತರಣಶೀಲನೂ ಆಗಿ ಸ್ವರ್ಗದ ಆಸನಗಳನ್ನು ಮುತ್ತಿಗೆ ಹಾಕುವವನಂತೆ ಕಂಡನು.



೧. ಅಥವಾ ಅತ್ತ (ಅವನತ್ತ ಅದರತ್ತ ಎಂಬಂತೆ).

# ಉಷಃಸೂಕ್ತ

## V. 79

[ಕರುಣಾಳುಗಳಾದ ಜ್ಞಾನಸೂರ್ಯನ ಸುಡುವ ಕಿರಣಗಳಿಂದೊಡಗೂಡಿ - ಆ ಮೂಲಕ- ಉಷೆಯು ಪರಮಸತ್ಯದ ಪೂರ್ಣಾವತಾರವಾಗಿ, ತನ್ನೆಲ್ಲಾ ವೈಭವವನ್ನು ಹರಹುತ್ತಾ, ತನ್ನ ಸಂಗಾತಿಗಳಾದ ಮಹೋದಾರ ದೇವತೆಗಳಿಂದ ಮತ್ತು ಋಷಿಗಳಿಂದ ಕೂಡಿ ತನ್ನ ವಿಚಾರದ ಹೊಳೆವ ವ್ರಜಗಳನ್ನು ಕೂಡಿಕೊಂಡು, ಅದರ ಒತ್ತೊತ್ತಿ ಬರುವ ಮಹಾವೇಗದ ಕುದುರೆಗಳ ಪ್ರಣೋದದೊಡನೆ, ಅದು ಬರುವ ಪ್ರಕಾಶಮಯ ಪ್ರೇರಣೆಗಳನ್ನೊಡಗೂಡಿ ಇಳೆಗಿಳಿದು ಬರಲೆಂದು ಋಷಿಯು ಪ್ರಾರ್ಥಿಸುತ್ತಾನೆ. ಉಷೆಯು ಬರಲಿ ; ಮತ್ತು ಕರ್ಮವಿನ್ನು ಎಂದೂ ದೀರ್ಘಕಾಲಿಕವೂ ವಿಳಂಬಗತಿಯದೂ ಆಗಲಾರದು.]

**ಮಹೇ ನೋ ಅದ್ಯ ಬೋಧಯೋಷೋ ರಾಯೇ ದಿವಿತ್ಮತೀ ।**
**ಯಥಾ ಚಿನ್ನೋ ಅಬೋಧಯಃ ಸತ್ಯಶ್ರವಸಿ ವಾಯ್ಯೇ ಸುಜಾತೇ ಅಶ್ವ ಸೂನೃತೇ ॥ ೧ ॥**

೧. ಹೇ ಉಷೇ, ಸ್ವರ್ಗದಲ್ಲಿಯ ನಿನ್ನ ಎಲ್ಲಾ ವೈಭವಗಳೊಡನೆ ಬಾ ; ಒಮ್ಮೆ ನೀನು ನಮ್ಮನ್ನು ಎಚ್ಚರಿಸಿದ್ದಂತೆ ಈ ದಿನವೂ ನಮ್ಮನ್ನು ಮಹತ್ಸುಖದ ಬಗೆಗೆ ಎಚ್ಚರಿಸಲಿ - ಅದೂ ಜ್ಞಾನಜನ್ಮದ ಪುತ್ರತ್ವದಲ್ಲಿ, ಪರಸತ್ಯದ[೧] ಸ್ಫೂರ್ತ ಕೇಳ್ಮೆಯಲ್ಲಿ. ಓ ನಿನ್ನ ಹುಟ್ಟು ಪೂರ್ಣವಾಗಿದೆ ! ಓ, ಸತ್ಯವೇ ನಿನ್ನ ಕುದುರೆಗಳ ನಡೆಯ ಸದ್ದಿನಲ್ಲಡಗಿದೆ !

**ಯಾ ಸುನೀಥೇ ಶೌಚದ್ರಥೇ ವ್ಯೌಚ್ಛೋ ದುಹಿತರ್ದಿವಃ ।**
**ಸಾವ್ಯುಚ್ಛ ಸಹೀಯಸಿ ಸತ್ಯಶ್ರವಸಿವಾಯ್ಯೇ ಸುಜಾತೇ ಅಶ್ವಸೂನೃತೇ ॥ ೨ ॥**

೨. ಮುಂಬೆಳಗಾಗಿ ಜಿಗಿದೇಳುವ ನೀನು, ಓ ಸ್ವರ್ಗಸುತೆಯೇ, ಬೆಳಕಿನ ಜ್ವಾಲಾಮಯ ರಥದ[೨] ಪೂರ್ಣ ನೇತೃತ್ವವುಳ್ಳವನಲ್ಲಿ ನೀನು ಒಡೆದೇಳು. ಓ ನಿನ್ನ ಪ್ರಣೋದದಲ್ಲಿ ಇನ್ನೂ ಹೆಚ್ಚಿನವಳಾಗಿರುವೆ-ಜ್ಞಾನದ ಹುಟ್ಟಿನ ಪುತ್ರತ್ವದಲ್ಲಿ ಮತ್ತು ಪರಸತ್ಯದ ಸ್ಫೂರ್ತಶ್ರವಣದಲ್ಲಿ. ಓ ನಿನ್ನ ಹುಟ್ಟು ಸಂಪೂರ್ಣವಾಗಿದೆ! ಓ, ಸತ್ಯವು ನಿನ್ನ ಕುದುರೆಗಳ ಸದ್ದಿನಲ್ಲಡಗಿದೆ.

---

೧. ಋಷಿಯ ಹೆಸರಿಲ್ಲಿ ಮನುಷ್ಯನಲ್ಲಿಯ ಸೂರ್ಯ ಜನನದ ಲಕ್ಷಣಗಳ ಅಜ್ಞೇಯ ಅಲಂಕಾರೋಕ್ತಿಯಲ್ಲಿ ಅಡಗಿದೆ.

೨. ಅದೇ ಅಲಂಕಾರೋಕ್ತಿಯು ಇನ್ನೊಂದು ಹೆಸರಿನಲ್ಲಿ ಇಲ್ಲಿ ಬಂದಿದೆ. ಇದು ಸೂರ್ಯಪುತ್ರನ ಜನನದ ಫಲಿತಾಂಶವನ್ನು ಹೇಳುತ್ತದೆ.

**ಸಾ ನೋ ಅದ್ಯಾಭರದ್ವಸುರ್ವ್ಯುಚ್ಛಾ ದುಹಿತರ್ದಿವಃ ।**
**ಯೋ ವ್ಯೌಚ್ಛಃ ಸಹೀಯಸಿ ಸತ್ಯಶ್ರವಸಿ ವಾಯ್ಯೇ ಸುಜಾತೇ ಅಶ್ವಸೂನೃತೇ ॥ ೩ ॥**

೩. ಅಮೂಲ್ಯ ದ್ರವ್ಯ ಕೋಶದ ಬೆಳಕಿನೊಳಗೆ ಒಡೆದು ಹೋಗು. ಓ ಸ್ವರ್ಗಸುತೇ ಹಿಂದೊಮ್ಮೆ ಹೇಗೆ ಒಡಮೂಡಿದೆಯೋ ಹಾಗೇ. ಓ, ಜ್ಞಾನ ಜನನದ ಪುತ್ರತ್ವದಲ್ಲಿ ಮತ್ತು ಪರಸತ್ಯದ ಸ್ಫೂರ್ತಶ್ರವಣದಲ್ಲಿ ಹಾಗೂ ನಿನ್ನ ಪ್ರಣೋದದಲ್ಲಿ ನೀನು ಅಧಿಕವಾಗಿರುವೆ. ಓ, ನಿನ್ನ ಜನನವು ಪರಿಪೂರ್ಣವಾಗಿದೆ! ಓ, ನಿನ್ನ ಕುದುರೆಗಳ ನಡೆಯ ಸದ್ದಿನಲ್ಲಿ ಸತ್ಯವಡಗಿದೆ!

**ಅಭಿ ಯೇ ತ್ವಾ ವಿಭಾವರಿ ಸ್ತೋಮೈರ್ಗೃಣಂತಿ ವಹ್ನಯಃ ।**
**ಮಘೈರ್ಮಘೋನಿ ಸುಶ್ರಿಯೋ ದಾಮನ್ವಂತಃ ಸುರಾತಯಃ ಸುಜಾತೇ ॥ ೪ ॥**

೪. ಹೇ ವಿಶಾಲೇ, ಹೇ ಕಾಂತಿಮತೆಯೇ, ಉಷೆಯೇ ಯಜ್ಞನಿರ್ವಾಹಕರಾದ[೩] ಅವರು ತಮ್ಮ ಮಾತಿನಲ್ಲಿ ನಿನ್ನನ್ನು ತರುವವರಿದ್ದಾರೆ. ತಮ್ಮ ಸೂಕ್ತಗಳಲ್ಲಿ ನಿನ್ನನ್ನವರು ಅಭಿವ್ಯಂಜಿಸುತ್ತಾರೆ ; ನಿನ್ನ ಧಾರಾಳ ಐಶ್ವರ್ಯದಲ್ಲವರು ಯಶೋಭಾಗಿಗಳಾಗಿದ್ದಾರೆ, ವೈಭವಶಾಲಿಗಳಾಗಿದ್ದಾರೆ. ಓ ರಾಣಿಯೇ, ಅವರ ದಾನಗಳು ಯಥೇಷ್ಟವಾಗಿದೆ - ಅವರ ವರಗಳು ಸಮಗ್ರವಾಗಿವೆ. ಓ ನಿನ್ನ ಜನನವು ಪರಿಪೂರ್ಣವಾಗಿದೆ! ಓ, ಸತ್ಯವು ನಿನ್ನ ರಣಾಶ್ವಗಳ ಓಟದ ಸದ್ದಿನಲ್ಲಡವಿತಿದೆ.

**ಯಚ್ಚಿದ್ಧಿ ತೇ ಗಣಾ ಇಮೇ ಛದಯಂತಿ ಮಘತ್ತಯೇ ।**
**ಪರಿ ಚಿದ್ವಷ್ಟಯೋ ದಧುರ್ದದತೋ ರಾಧೋ ಅಹ್ರಯಂ ಸುಜಾತೇ ಅಶ್ವಸೂನೃತೇ ॥ ೫ ॥**

೫. ನಿನ್ನ ಈ ಅನುಯಾಯಿದೇವತೆಗಳು ನಿನ್ನ ಶ್ರೇಯಃ ಸಮೃದ್ಧಿಯನ್ನು ಪಡೆವ ಆಶೆಯಿಂದ ನಿನ್ನನ್ನು ಸಂತೋಷಿಸಲು ಬಯಸಿದಾಗ ಇವರೆಲ್ಲಾ ತಮ್ಮ ಬಯಕೆಗಳನ್ನು ನಿನ್ನ ಸುತ್ತಮುತ್ತಲೂ ಮಂಡಿಸುವರು ; ಇವರು ನಿನ್ನ ಅನೃಜು ಮಾರ್ಗವಿಮುಖವಾದ ಸುಖ ಸೌಕರ್ಯವನ್ನು ಯಥೇಷ್ಟವಾಗಿ ವ್ಯಯಿಸುವರು. ಓ, ನಿನ್ನ ಹುಟ್ಟುಪೂರ್ಣ! ಓ, ಸತ್ಯವು ನಿನ್ನಯುದ್ಧಾಶ್ವಗಳ ಕಾಲಡಿಯಲ್ಲಡಗಿದೆ!

**ಐಷು ಧಾ ವೀರವದ್ಯಶ ಉಷೋ ಮಘೋನಿ ಸೂರಿಷು ।**
**ಯೇ ನೋ ರಾಧಾಂಸ್ಯಹ್ರಯಾ ಮಘವಾನೋ ಅರಾಸತ ಸುಜಾತೇ ಅಶ್ವಸೂನೃತೇ ॥ ೬ ॥**

೬. ಇವರೇ ನಿನ್ನ ದ್ರಷ್ಟಾರರು ; ಓ ಉಷೆಯೇ, ಅಪಾರ ಐಶ್ವರ್ಯದ ರಾಣಿಯೇ, ಅವರಲ್ಲಿ ನಿನ್ನ ವೀರಶಕ್ತಿಗಳ ವೈಭವವನ್ನು ಖಚಿತಗೊಳಿಸು ; ನಿನ್ನ ಅಮಿತೈಶ್ವರ್ಯದ ಒಡೆಯರಾದ ಅವರು ನಿನ್ನ ಅಡ್ಡದಾರಿ ಹಿಡಿಯದ

---

೩. ಅವರು ಮಾನವ್ಯ ಪುರೋಹಿತರಲ್ಲ-ಅವರು ದಿವ್ಯಶಕ್ತಿಗಳು, ಉಷೆಯ ಆತಿಥೇಯರು ಅಥವಾ ಸಂಘಗಳು, "ಗಣಾಃ" - ಅವರು ಏಕಕಾಲದಲ್ಲಿ ಪುರೋಹಿತರು, ದ್ರಷ್ಟಾರರು ಮತ್ತು ಅಂತರ್ಯಜ್ಞದ ಪೋಷಕರು, ಸ್ವರ್ಗೀಯ ಸಂಪತ್ತನ್ನು ಗೆದ್ದವರು ಮತ್ತು ದಾನ ಮಾಡುವವರು.

ಐಶ್ವರ್ಯಗಳನ್ನು ನಮ್ಮ ಮೇಲೆ ಸುರಿದು ಚೆಲ್ಲುತ್ತಾರೆ. ಓ, ನಿನ್ನ ಉದ್‌ಭವವು ಪೂರ್ಣವಾಗಿದೆ, ಓ ಸತ್ಯವು ನಿನ್ನ ಯುದ್ಧಾಶ್ವಗಳ ಕಾಲಿನಡಿ (ಹೆಜ್ಜೆಯಡಿ) ಜಿಣ್ಣಿದೆ!

**ತೇಭ್ಯೋದ್ಯುಮ್ನಂ ಬೃಹದ್ಯಶ ಉಷೋ ಮಘೋನ್ಯಾ ವಹ ।**
**ಯೇನೋ ರಾಧಾಂಸ್ಯಶ್ವ್ಯಾಗವ್ಯಾಭಜಂತ ಸೂರಯಃ ಸುಜಾತೇ ಅಶ್ವ ಸೂನೃತೇ ॥ ೭ ॥**

೭. ಎಲೈ ಉಷೆಯೇ, ನೀನು ನಮ್ಮ ಧಾರಾಳಶಾಹಿ, ಹೇರಳ ಐಶ್ವರ್ಯರಾಶಿ-ನೀನು ಅವರಿಗೆ ನಿನ್ನ ವಿಶಾಲ ವೈಭವದ ಪ್ರಬೋಧಾಂಶುವನ್ನು ತಂದುಕೊಡು. ಅವರು ನಮಗೆ ನಿನ್ನ ರಣಾಶ್ವಗಳ ಹಾಗೂ ಗೋವ್ರಜಗಳ ಸುಖ-ಸೌಕರ್ಯವನ್ನು ಒದಗಿಸಿಕೊಡುತ್ತಾರೆ.. ಓ, ನಿನ್ನ ಜನನವು ಸಂಪೂರ್ಣ! ಓ, ಸತ್ಯವು ನಿನ್ನ ರಣಹಯಗಳ (ಖುರ ಪುಟಗಳ) ಸದ್ದಿನಲ್ಲಡಗಿದೆ!

**ಉತನೋ ಗೋಮ ತೀರಿಷ ಆ ವಹಾ ದುಹಿತರ್ದಿವಃ ।**
**ಸಾಕಂ ಸೂರ್ಯಸ್ಯ ರಶ್ಮಿಭಿಃ ಶುಕ್ರೈಃ ಶೋಚದ್ಭಿರರ್ಚಿಭಿಃ ಸುಜಾತೇ ಅಶ್ವಸೂನೃತೇ ॥ ೮ ॥**

೮. ಹೇ ಸ್ವರ್ಗಸುತೇ ನಿನ್ನ ಬೆಳಕಿನ ಸೇನಾವ್ಯೂಹಗಳಿಂದ ಕೂಡಿದ ಪ್ರೇರಣಾಶಕ್ತಿಗಳನ್ನು ನಮಗೂ ಒದಗಿಸಿಕೊಡು. ನಿನ್ನ ಮಹಾಸೂರ್ಯನ ಕಿರಣಗಳೊಡನೆ ಅವು ಬರಲಿ - ಆ ಸೂರ್ಯನ ಪ್ರಕಾಶಮಾನವಾದ ಹಾಗೂ ಉರಿವ ಜ್ಯೋತಿರ್ದಾನಗಳ ಪಾವಿತ್ರ್ಯದಿಂದ ಕೂಡಿದ ಜ್ಯೋತಿರ್ವ್ಯೂಹಗಳ ಸ್ವರೂಪದ ಕಿರಣಗಳವು, ಶಕ್ತಿಗಳವು. ಓ, ನಿನ್ನ ಜನನವು ಪರಿಪೂರ್ಣವಾಗಿದೆ! ಓ ಸತ್ಯವು ನಿನ್ನ ಯುದ್ಧಾಶ್ವಗಳ ಕಾಲಡಿಯಲ್ಲಡಗಿದೆ !

**ವ್ಯುಚ್ಛಾ ದುಹಿತರ್ದಿವೋ ಮಾ ಚಿರಂ ತನುಥಾ ಅಪಃ ।**
**ನೇತ್ ತ್ವಾಸ್ತೇನಂ ಯಥಾ ರಿಪುಂ ತಪಾತಿ ಸೂರೋ ಅರ್ಚಿಷಾ ಸುಜಾತೇ ಅಶ್ವಸೂನೃತೇ ॥೯॥**

೯. ಹೇ ಸ್ವರ್ಗಸುತೇ, ಬೆಳಕಾಗಿ ಒಡಮೂಡು! ಮತ್ತು ಆ ಕಾರ್ಯವನ್ನು ಸುದೀರ್ಘಕಾಲದವರೆಗೆ ಎಳೆಯುತ್ತಾ ಹೋಗಬೇಡ. ಏಕೆಂದರೆ ನಿನ್ನ ಸೂರ್ಯನು ತನ್ನ ಉರಿಗದಿರುಗಳಿಂದ ಹಗೆಯನ್ನೂ ಕಳ್ಳನನ್ನೂ[೪] ಯಾತನೆಗೀಡು ಮಾಡುವನಲ್ಲದೆ ನಿನ್ನನ್ನೆಂದೂ ಅವನು ಯಾತನೆಗೀಡು ಮಾಡನು. ಓ ನಿನ್ನ ಜನನವು ಪೂರ್ಣವಾಗಿದೆ! ಓ, ಸತ್ಯವು ನಿನ್ನ ರಣರಾಕಣಗಳ ನಡೆಯ ಸದ್ದಿನಲ್ಲಡಗಿದೆ !

---

೪. ಸತ್ಯದ ಸತ್ತೆಯನ್ನು ಮುಟ್ಟಲು ಮಾಡಬೇಕಾದ ಕಷ್ಟದ ಕೆಲಸವು ಉದ್ದುದ್ದ ಮತ್ತು ಆಯಾಸಕರ. ಏಕೆಂದರೆ, ಅಂಧಕಾರದ ಮತ್ತು ಭೇದದ ಶಕ್ತಿಗಳು ನಮ್ಮ ಬಾಳಿನ ಕೀಳ್ಮಟ್ಟದಲ್ಲಿದ್ದು ಯೋಗ್ಯಾಂಶವನ್ನು ಕಸಿದುಕೊಂಡು ನಮ್ಮ ಜ್ಞಾನದಿಂದಾದ ಲಾಭಗಳನ್ನು ಅಲಸವಾಗಿಡುತ್ತವೆ. ಯಾ ದುರುಪಯೋಗ ಮಾಡುತ್ತವೆ. ಅವು ಯಜ್ಞಧಾರಕಗಳಲ್ಲ, ಯಜ್ಞ ಮಾರಕಗಳು. ಅವನ್ನು ಸೂರ್ಯನ ಪೂರ್ಣ ಕಿರಣಗಳು ನಾಶ ಮಾಡುತ್ತವೆ. ಆದರೆ ಈ ಉಷೆಯು ಜ್ಞಾನ ಸ್ವರೂಪಿಣಿ. ಇವಳು ಸೂರ್ಯನ ಪೂರ್ಣ ಕಿರಣಗಳನ್ನು ಧರಿಸಬಲ್ಲಳು ಮತ್ತು ಮಹಾಕರ್ಮವನ್ನು ಶೀಘ್ರವಾಗಿ ಪೂರೈಸಿಕೊಡಬಲ್ಲಳು.

**ಏತಾವದ್ವೇದುಷಸ್ತ್ವಂ ಭೂಯೋ ವಾ ದಾತುಮರ್ಹಸಿ ।**
**ಯಾ ಸ್ತೋತೃಭ್ಯೋ ವಿಭಾವಯುರ್ ಚ್ಛಂತೀ ನ ಪ್ರಮೀಯತೇ ಸುಜಾತೇ ಅಶ್ವಸೂನೃತೇ ॥೧೦॥**

೧೦. ಇಷ್ಟು ನೀನು ಕೊಡಬೇಕು ಅಥವಾ ಇದಕ್ಕೂ ಹೆಚ್ಚು ಕೊಡಬೇಕು. ಏಕೆಂದರೆ, ನಿನ್ನ ಆರಾಧಕರಿಗೆ ನಿನ್ನ ವೈಭವದ ಚಿತ್ತರವನ್ನು ಪೂರ್ಣವಾಗಿ ಒಡೆದು ಚೆಲ್ಲಿಕೊಡುವೆ ; ಮತ್ತು ನೀನು ನಿನ್ನ ಮೂಡುವಿಕೆಯಲ್ಲಿ ಪರಿಸೀಮಿತೆಯಲ್ಲ ಓ ನಿನ್ನ ಹುಟ್ಟು ಪರಿಪೂರ್ಣವಾಗಿದೆ ! ಓ, ಸತ್ಯವು ನಿನ್ನ ಕುದುರೆಗಳ ಓಟದ ಸದ್ದಿನಡಿಯಲ್ಲಿದೆ.



# ಉಷಃ ಸೂಕ್ತ

## V. 80

[ಋಷಿಯು ದಿವ್ಯೋಷೆಯನ್ನು ಸೂಕ್ತಿಸುತ್ತಾನೆ. ಅವಳು ಸ್ವರ್ಗಸುತೆ ; ಪರಮಸತ್ಯವನ್ನೂ ಪರಮಾನಂದವನ್ನೂ ಬೆಳಕಿನ ಸ್ವರ್ಗಗಳನ್ನೂ ತರುವವಳು ; ಅವಳು ಬೆಳಕನ್ನು ಸೃಜಿಸುವವಳು, ದರ್ಶನವನ್ನು ನೀಡುವವಳು - ಕರ್ಮಕರ್ತ್ರಿ, ಅನುಯಾಂಯಿನಿ, ಪರಮಸತ್ಯಪಥದ ನೇತ್ರಿ, ಅಂಧಕಾರ ವಿನಾಶಿಕೆ ಮತ್ತು ನಿತ್ಯೆಯೂ ತಾರುಣ್ಯ ನಿರ್ಭರಳೂ ಆಗಿದ್ದು ನಮ್ಮ ದೇವೋನ್ಮುಖ ಪ್ರಯಾಣದ ಅಧಿದೇವತೆಯಾಗಿದ್ದಾಳೆ.]

**ದ್ಯುತ ದ್ಯಾಮಾನಂ ಬೃಹತೀಮೃತೇನ ಋತಾವರೀಮರುಣಪ್ಸು ವಿಭಾತೀಂ ।**
**ದೇವೀ ಮುಷಸಂ ಸ್ವರಾವಹಂತೀಂ ಪ್ರತಿ ವಿಪ್ರಾಸೋ ಮತಿಭಿರ್ಜರಂತೇ ॥ ೧ ॥**

೧. ಪ್ರಕಾಶಮಯ (ಪಥದ) ಪ್ರಯಾಣದ ಅಧಿದೇವತೆಯು ಉಷೆ ; ಸತ್ಯರಾಜ್ಞಿ ಉಷೆ ; ಪರಸತ್ಯಂಭರೆಯಾದ ಉಷೆ. ಬೃಹದಾಕಾರದವಳು ; ಇವಳ ನೆಲದಾವರೆ ಬಣ್ಣದ ಕೈಕಾಲುಗಳ ಹೊಳಪು ಎಷ್ಟು ವಿಶಾಲವಾಗಿ ಹಬ್ಬಿದೆ! -ದಿವ್ಯೆಯಾದ ಉಷೆಯು ಬೆಳಕಿನ ಸ್ವರ್ಗವನ್ನು ತನ್ನೊಡನೆ ತರುವವಳು! ದ್ರಷ್ಟಾರರು ತಮ್ಮ ವಿಚಾರಗಳಿಂದ ಇವಳನ್ನು ಪೂಜಿಸುತ್ತಾರೆ.

**ಏಷಾ ಜನಂ ದರ್ಶತಾ ಬೋಧಯಂತೀ ಸುಗಾನ್ ಪಥಃ ಕೃಣ್ವತೀ ಯಾತ್ಯಗ್ರೇ ।**
**ಬೃಹದ್ರಥಾ ಬೃಹತೀ ವಿಶ್ವವಿನೋಷಾ ಜ್ಯೋತಿರ್ಯಚ್ಛ ತ್ಯ ಗ್ರೇ ಅಹ್ನಾಂ ॥ ೨ ॥**

೨. ಇವಳೇ ದರ್ಶನ ಸಂಪನ್ನೆ ಮತ್ತು ಇವಳು ಮನುಜನನ್ನು ಎಚ್ಚರಿಸಿ ಅವನ ದಾರಿಯು ಸುಲಭಗಮ್ಯವಾಗುವಂತೆ ಮಾಡಿ ಅವನ ಮುಂದೆ ನಡೆಯುತ್ತಾಳೆ. ಇವಳ ತೇರು ಎಷ್ಟು ದೊಡ್ಡದು ! ಈ ದೇವಿಯು ಎಷ್ಟು ವಿಸ್ತಾರ ಸಂಪನ್ನೆ ಮತ್ತು ಎಷ್ಟು ವ್ಯಾಪಕತೆಯುಳ್ಳಾಕೆ! ಹಗಲುಗಳೆದುರು ಇವಳು ಹೇಗೆ ಬೆಳಕನ್ನು ತರುತ್ತಾಳೆ !

**ಏಷಾ ಗೋಭಿ ರರುಣೇಭಿರ್ಯುಜಾನಾಽ ಸ್ರೇಧಂತೀ ರಯಿ ಮಪ್ರಾಯು ಚಕ್ರೇ ।**
**ಪಥೋ ರದಂತೀ ಸುವಿತಾಯ ದೇವೀ ಪುರುಷ್ಟುತಾ ವಿಶ್ವ ವಾರಾ ವಿ ಭಾತಿ ॥ ೩ ॥**

೩. ನೆಲದಾವರೆ (ಬೆಟ್ಟದಾವರೆ) ಬಣ್ಣದ ಬೆಳಕಿನ ತನ್ನ ಎತ್ತುಗಳನ್ನು[೧] ನೊಗಕ್ಕೆ ಹೂಡುವವಳೀಕೆಯು ; ಇವಳ ಪ್ರಯಾಣವು ನಿಷ್ಫಲವಾಗದು

೧. ಅಕ್ಷರಶಃ ದನಗಳನ್ನು ಎಂದು ಇಂಗ್ಲಿಷನಲ್ಲಿದೆ - ಅನುವಾದಕ.

(ಸೋಲದು) ; ಮತ್ತು ಇವಳ ಬೆಲೆಬಾಳುವ ದ್ರವ್ಯವು ನಶಿಸದು. ಇವಳು ತನ್ನ ಮಾರ್ಗವನ್ನು ಸುಖಕ್ಕಾಗಿ ಕಡಿದು ತಯಾರು ಮಾಡುವಳು. ಇವಳು ದಿವ್ಯೆ ; ಇವಳ ವೈಭವವು ಅತಿದೂರದವರೆಗೆ ಝಗಝಗಿಸುವಂಥದು. ಇವಳಿಗಾಗಿ ರಚಿತವಾದ ಸೂಕ್ತಗಳು ಬಹಳ ; ಇವಳು ತನ್ನೊಡನೆ ಅನೇಕ ವರಗಳನ್ನು (ಪ್ರತಿಯೊಂದು ವರವನ್ನೂ) ತರುತ್ತಾಳೆ.

**ಏಷಾವ್ಯೇನೀ ಭವತಿ ದ್ವಿಬರ್ಹಾ ಆವಿಷ್ಕೃಣ್ವಾನಾ ತನ್ವಂ ಪುರಸ್ತಾತ್ ।**
**ಋತಸ್ಯ ಪಂಥಾ ಮನ್ವೇತಿ ಸಾಧು ಪ್ರಜಾನತೀವ ನದಿಶೋ ಮಿನಾತಿ ॥ ೪ ॥**

೪. ಇವಳ ದ್ವಿಮುಖ ಕ್ರಿಯಾಶಕ್ತಿಯಲ್ಲಿ ಇವಳನ್ನು ನೋಡು - ಆ ಶಕ್ತಿಗಳೆಂದರೆ ಭೌಮ ಮತ್ತು ಸ್ವರ್ಗೀಯ. ಇವಳು ಹೇಗೆ ಅಸ್ತಿತ್ವಕ್ಕೆ ಬಂದು ತನ್ನ ಶುಕ್ಲತೆಯಲ್ಲಿ ನಮ್ಮ ಮುಂದೆ ತನ್ನ ಶರೀರವನ್ನು ಬಹಿರಂಗಗೊಳಿಸುತ್ತಾಳೆ ! ಇವಳು ಪರಸತ್ಯದ ಮಾರ್ಗವನ್ನು ಪೂರ್ಣವಾಗಿ ಅನುಸರಿಸಿ ಹೋಗುತ್ತಾಳೆ ; ವಿವೇಕವುಳ್ಳವಳಾಗಿ ಮತ್ತು ತಿಳುವಳಿಕೆಯುಳ್ಳವಳಾಗಿ ಇವಳು ನಮ್ಮ ಪ್ರದೇಶಗಳಲ್ಲಿ ಬೇಲಿ ಹಾಕುವುದಿಲ್ಲ.

**ಏಷಾ ಶುಭ್ರಾ ನ ತನ್ವೋ ವಿದಾನೋರ್ಧ್ವೇವ ಸ್ನಾತೀ ದೃಶಯೇ ನೋ ಅಸ್ಥಾತ್ ।**
**ಅಪ ದ್ವೇಷೋ ಬಾಧಮಾನಾ ತಮಾಂಸ್ಯುಷಾ ದಿವೋ ದುಹಿತಾ ಜ್ಯೋತಿಷಾ ಗಾತ್ ॥ ೫ ॥**

೫. ಇವಳನ್ನು ಕಂಡು ತಿಳಿದ ಮೇಲೆ ಇವಳ ದೇಹವು ಎಷ್ಟು ಉಜ್ವಲ ! ನಮಗೆ ತನ್ನ ದರ್ಶನವಾಗಲೆಂದು ಇವಳು ಹೇಗೆ ಬೆಳಕಿನಲ್ಲಿ ಮೀಯುವವಳಂತೆ ಎತ್ತರದಲ್ಲಿ ನಿಂತಿದ್ದಾಳೆ ! ಶತ್ರುಗಳನ್ನೆಲ್ಲಾ ಓಡಿಸಿ ಮತ್ತು ಕತ್ತಲನ್ನೆಲ್ಲಾ ಝಾಡಿಸಿ, ಸ್ವರ್ಗ ಸುತೆಯಾದ ಉಷೆ ಬೆಳಕಿನೊಡನೆ ಬಂದಿದ್ದಾಳೆ.

**ಏಷಾ ಪ್ರತೀಚೀ ದುಹಿತಾ ದಿವೋ ನೄನ್ಯೋಷೇವ ಭದ್ರಾ ನಿ ರಿಣೀತೇ ಅಪ್ಸಃ ।**
**ವ್ಯೂರ್ಣ್ವತೀ ದಾಶುಷೇ ವಾರ್ಯಾಣಿ ಪುನರ್ಜ್ಯೋತಿರ್ಯುವತಿಃ ಪೂರ್ವಥಾಕಃ ॥ ೬ ॥**

೬. ಎಲವೋ, ಸ್ವರ್ಗಸುತೆಯು ಸುಜನಿಯಾದ ಹೆಂಗಸಿನಂತೆ ದೇವತೆಗಳನ್ನು ಸಂದರ್ಶಿಸಲು ಹೋಗುತ್ತಾಳೆ ಮತ್ತು ಇವಳ ರೂಪವು ಉದ್ದಕ್ಕೂ ಅವರ ಹತ್ತಿರ ಹತ್ತಿರಕ್ಕೇರಿ ಚಲಿಸುತ್ತಾಳೆ. ಯಜ್ಞ ಮಾಡುವವನಿಗೆ ಎಲ್ಲಾ ಆಶೀರ್ವಾದಗಳನ್ನು ತೆರೆದಿಟ್ಟು ನಿತ್ಯ ತರುಣಿಯಾದ ಈ ದೇವತೆ ಮೊದಲು ಹೇಗೋ ಹಾಗೇ ಮತ್ತೊಮ್ಮೆ ಬೆಳಕನ್ನು ಸೃಜಿಸಿದ್ದಾಳೆ.



# ಸವಿತೃ ಸೂಕ್ತ

## V. 81

[ದಿವ್ಯಜ್ಞಾನದ ಆಕರವೆಂದೂ ಅಂತಃ ಪ್ರಪಂಚದ ಸೃಷ್ಟಿಕರ್ತನೆಂದೂ ಋಷಿಯು ಸೂರ್ಯದೇವನನ್ನು ಸೂಕ್ತಿಸುತ್ತಾನೆ. ತಮ್ಮ ಮನಸ್ಸನ್ನೂ ವಿಚಾರಗಳನ್ನೂ ಬೆಳಕನ್ನು ಹುಡುಕುವವರಾದ ಸಾಧಕರು ದ್ರಷ್ಟಾರನಾದ ಅವನ (ರಥದ ನೊಗಕ್ಕೆ) ಹೂಡುತ್ತಾರೆ ; ಆತನು ಜ್ಞಾನದ ಸರ್ವರೂಪಗಳನ್ನೂ ತಿಳಿದ ಒಬ್ಬನೇ ಒಬ್ಬನಾದವನು; ಅವನೊಬ್ಬನೇ ಯಜ್ಞಮಾಡಲು ಅಪ್ಪಣೆ ಕೊಟ್ಟವನು. ತನ್ನ ಸತ್ತೆಯ ಉಡುಗೆ-ತೊಡುಗೆಗಳಂತೆ ಅವನು ಎಲ್ಲ ರೂಪಗಳನ್ನು ಧರಿಸುತ್ತಾನೆ ಮತ್ತು ಅವನು ಸೃಷ್ಟಿ ದೃಷ್ಟಿಯನ್ನು ತಾಳಿ ಜಗತ್ತಿನಲ್ಲಿಯ ದ್ವಿವಿಧ ಜೀವನಕ್ಕಾಗಿ ಅತಿಶ್ರೇಷ್ಠ ಒಳಿತನ್ನೂ ಸೌಖ್ಯವನ್ನೂ ಸೃಷ್ಟಿಸುತ್ತಾನೆ. ದಿವ್ಯ ಜ್ಞಾನದ ಉಷಾಪಥದಲ್ಲಿ ಹೊಳೆಯುತ್ತಾ ಅವನು ಸ್ವರ್ಗೀಯ ಪ್ರಪಂಚವನ್ನು ಆವಿರ್‌ಭವಿಸುವಂತೆ ಮಾಡುತ್ತಾನೆ ; ಆ ಪಥದಲ್ಲಿ ಇತರ ದೇವತೆಗಳು ಅವನನ್ನನುಸರಿಸುತ್ತಾರೆ ಮತ್ತು ಅವರೆಲ್ಲಾ ಕ್ರಿಯಾಶಕ್ತಿಗಳಿಗೆ ಗುರಿಯೆಂದು ಇಟ್ಟುಕೊಂಡಿರುವುದು ಅವನ ಬೆಳಕಿನ ಮಹತ್ವವನ್ನೇ. ತನ್ನ ಶಕ್ತಿಯಿಂದಲೂ ಮಹತ್ವದಿಂದಲೂ ಅವನು ನಮಗೆ ನಮ್ಮ ಪಾರ್ಥಿವ ಜಗತ್ತನ್ನು ಅಳೆದುಕೊಟ್ಟಿದ್ದಾನೆ: ಆದರೆ ಬೆಳಕಿನ ಮೂರು ಪ್ರಪಂಚಗಳಲ್ಲಿ ಅವನು ದಿವ್ಯ ಸೂರ್ಯನ ಕಿರಣಗಳ ನಡುವೆ ತನ್ನ ನಿಜವಾದ ಆವಿಷ್ಕಾರದ ಮಹತ್ವವನ್ನು ಪಡೆಯುತ್ತಾನೆ. ಆಗ ಅವನು ತನ್ನ ಸತ್ತೆಯಿಂದಲೂ ಬೆಳಕಿನಿಂದಲೂ ನಮ್ಮ ಕತ್ತಲ ಇರುಳನ್ನು ಮುಸುಕುವನು ಮತ್ತು ಮಿತ್ರನ ಸ್ವರೂಪವನ್ನು ತಾಳಿ ತನ್ನ ವಿಧಿಗಳಂತೆ ನಮ್ಮ ಮೇಲು-ಕೆಳ ಲೋಕಗಳ ನಡುವೆ ಸ್ಫುರತ್ ಪ್ರಕಾಶದ ಸಾಮಶ್ರುತ್ಯವನ್ನು ಉಂಟುಮಾಡುವನು. ನಮ್ಮೆಲ್ಲಾ ಸೃಷ್ಟಿಯಲ್ಲಿ ಅವನೊಬ್ಬನೇ ಕರ್ತನು ಮತ್ತು ತನ್ನ ಮುನ್ನಡೆಯಿಂದ ನಮ್ಮ ಇಡೀ ಪರಿವರ್ತನಶೀಲ ಪ್ರಪಂಚವು ಆತನ ಪ್ರಕಾಶದಿಂದ ಬೆಳೆದು ಪೂರ್ಣವಾಗುವವರೆಗೆ ಅವನೇ ಅದರ ಆಧಿಕ್ಯಕ್ಕೆ ಕಾರಣನು.]

**ಯುಂಜತೇ ಮನ ಉತ ಯುಂಜತೇ ಧಿಯೋ ವಿಪ್ರಾ ವಿಪ್ರಸ್ಯ ಬೃಹತೋ ವಿಪಶ್ಚಿತಃ ।**
**ವಿ ಹೋತ್ರಾ ದಧೇ ವಯುನಾ ವಿದೇಕ ಇನ್ಮಹೀ ದೇವಸ್ಯ ಸವಿತುಃ ಪರಿಷ್ಟುತಿಃ ॥ ೧ ॥**

೧. ಸ್ಫೂರ್ತರು ತಮ್ಮ ಮನವನ್ನು ನೊಗಕ್ಕೆ ಕಟ್ಟುತ್ತಾರೆ, ತಮ್ಮ ವಿಚಾರಗಳನ್ನು ನೊಗಕ್ಕೆ ಕಟ್ಟುತ್ತಾರೆ - ಯಾರ ನೊಗಕ್ಕೆ?-ಸ್ಫೂರ್ತ ದೇವತಾ ತತ್ವಕ್ಕೆ, ನಿರವಧಿಕ ವಿಸ್ತಾರಕ್ಕೆ ಪ್ರಜ್ಞೆಯಲ್ಲಿರುವ ಸ್ಫೂರ್ತ ಪ್ರಕಾಶಕ್ಕೆ. ಜ್ಞಾನದ ಸರ್ವ ಆವಿರ್ಭಾವಗಳನ್ನೂ ಬಲ್ಲವನಾವನೋ ಅವನೇ ಯಜ್ಞದ ಸಾಮಗ್ರಿಗಳನ್ನು ಸುವ್ಯವಸ್ಥಿತಗೊಳಿಸುತ್ತಾನೆ. ಸ್ರಷ್ಟಾರನಾದ ಸವಿತೃದೇವನ ಸ್ತುತಿಯು ದೊಡ್ಡದು.

**ವಿಶ್ವಾ ರೂಪಾಣಿ ಪ್ರತಿಮುಂಚತೇ ಕವಿಃ ಪ್ರಾಸಾವೀದ್ ಭದ್ರಂ ದ್ವಿಪದೇ ಚತುಷ್ಪದೇ ।**
**ವಿನಾಕ ಮಖ್ಯತ್ ಸವಿತಾ ವರೇಣ್ಯೋऽನು ಪ್ರಯಾಣ ಮುಷಸೋ ವಿರಾಜತಿ ॥ ೨ ॥**

೨. ದ್ವಿಗುಣ-ಚತುರ್ಗುಣ[1] ಪ್ರಾಣಿಗಾಗಿ ಸತ್ತನ್ನೂ ಆನಂದವನ್ನೂ ಸೃಜಿಸಲು ಮಹಾದ್ರಷ್ಟಾರನು ಎಲ್ಲ ತರದ ರೂಪಾತ್ಮಕ ಉಡುಪುಗಳನ್ನೂ ಧರಿಸುತ್ತಾನೆ. ನಮ್ಮ ಸ್ವರ್ಗೀಯ ಪ್ರಪಂಚವನ್ನು ಸವಿತಾರನು ಬಣ್ಣಿಸಿಡುತ್ತಾನೆ. ಆತನು ಸರ್ವೋತ್ತಮನು, ಸರ್ವೋಚ್ಚನು ; ಉಷಾಪ್ರಯಾಣದಲ್ಲಿ ಅವನ ಹೊಳಪಿನ ಬೆಳಕು ವಿಶಾಲವಾದದ್ದು.

**ಯಸ್ಯ ಪ್ರಯಾಣಮನ್ವನ್ಯ ಇದ್ ಯಯುರ್ದೇವಾ ದೇವಸ್ಯ ಮಹಿಮಾನಮೋಜಸಾ ।**
**ಯಃ ಪಾರ್ಥಿವಾನಿ ವಿಮಮೇ ಸ ಏತಶೋ ರಜಾಂಸಿ ದೇವಃ ಸವಿತಾ ಮಹಿತ್ವನಾ ॥ ೩ ॥**

೩. ಮತ್ತು ಆ ಪ್ರಯಾಣದಲ್ಲಿ ಸ್ವ ಸಾಮರ್ಥ್ಯದೊಡನೆ ಮಿಕ್ಕ ಎಲ್ಲ ದೇವತೆಗಳೂ ಈ ಮಹಾದೇವತತ್ತ್ವದ ಮಹತ್ವವನ್ನು ಅನುಸರಿಸುತ್ತಾರೆ. ಇವನೇ ಆ ಪ್ರೋಜ್ವಲ ದೇವನು, ಇವನೇ ನಮ್ಮ ಪಾರ್ಥಿವ ಪ್ರಭಾಪ್ರಪಂಚಗಳನ್ನು ಅಳೆದಿಟ್ಟವನು.

**ಉತ ಯಾಸಿ ಸವಿತ ಸ್ತ್ರೀಣಿ ರೋಚನೋತ ಸೂರ್ಯಸ್ಯ ರಶ್ಮಿಭಿಃ ಸಮುಚ್ಯಸಿ ।**
**ಉತ ರಾತ್ರೀ ಮುಭಯತಃ ಪರೀಯಸ ಉತಮಿತ್ರೋ ಭವಸಿದೇವ ಧರ್ಮಭಿಃ ॥ ೪ ॥**

೪. ಹೇ ಸವಿತಾರನೇ, ಸ್ವರ್ಗೀಯ ಉಜ್ವಲ ಲೋಕತ್ರಯಕ್ಕೆ ನೀನೂ ಹೋಗುತ್ತೀಯೆ. ಮತ್ತು ಸೂರ್ಯ ಕಿರಣಗಳಿಂದ ನಿನ್ನ ಆವಿರ್ಭಾವವು ಸಂಭವಿಸಿದೆ ; ಮತ್ತು ನೀನು ರಾತ್ರಿಯ ಇಬ್ಬದಿಗಳನ್ನೂ ಸುತ್ತುವರಿದಿರುವೆ ; ಮತ್ತು ನೀನು ಮಿತ್ರನಾಗುವೆ, ಓ ದೇವ, ಅವನ ಪರಮಸತ್ಯದ ಸುಪ್ರತಿಷ್ಠಿತ ವಿಧಿಗಳಿಂದ.

**ಉತೇಶಿಷೇ ಪ್ರಸವಸ್ಯ ತ್ವಮೇಕ ಇದುತ ಪೂಷಾ ಭವಸಿ ದೇವ ಯಾಮಭಿಃ ।**
**ಉತೇದಂ ವಿಶ್ವಂ ಭುವನಂ ವಿ ರಾಜಸಿ ಶ್ಯಾವಾಶ್ವಸ್ತೇ ಸವಿತಃ ಸ್ತೋಮಮಾನಶೇ ॥ ೫ ॥**

೫. ಮತ್ತು ನಿನಗೆ ಮಾತ್ರ ಸೃಷ್ಟಿಮಾಡುವ ಶಕ್ತಿಯಿದೆ ಹಾಗೂ ನೀನೇ ಸಂವರ್ಧನನಾಗುವೆ. ಓ ದೇವರೇ, ನಿನ್ನ ಪಥದಲ್ಲಿಯ ಸಂಚಾರಗಳಿಂದ ಮತ್ತು ನೀನು ಈ ಪರಿವರ್ತನಶೀಲ ಪ್ರಪಂಚವೆಲ್ಲವನ್ನೂ ಪ್ರಕಾಶಪಡಿಸುವೆ. ಶ್ಯಾವಾಶ್ವನು ಹೇ ಸವಿತಾರ, ನಿನ್ನ ದೇವತಾತತ್ತ್ವದ ದೃಢೀಕರಣವನ್ನು ಕಂಡು ಹಿಡಿದಿದ್ದಾನೆ.



೧. ಅಕ್ಷರಶಃ ದ್ವಿಪಾದ-ಚತುಷ್ಪಾದ ಜಂತುಗಳು ; ಆದರೆ "ಪದ್" ಎಂದರೆ ಹೆಜ್ಜೆ ಯಾ ಮೆಟ್ಟಿಲು ಎಂದೂ ಅರ್ಥವಾಗುತ್ತದೆ-ಅದರ ತತ್ತ್ವದ ಮೇಲೆ ಆತ್ಮವು ಪ್ರತಿಷ್ಠಿತವಾಗುತ್ತದೆ. ರಹಸ್ಯವಾದದಂತೆ ಅದರ ಅರ್ಥವು ಚತುಸ್ತತ್ವಾತ್ಮಕ ಎಂದಾಗುತ್ತದೆ ; ಕೆಳ ಪ್ರಪಂಚದ ಚತುರ್ಮುಖ ತತ್ವಾನುಗುಣವಾಗಿ ಬದುಕುವಂಥವು ಮತ್ತು ದ್ವಿಮುಖ ಸತ್ವಾನುಗುಣವಾಗಿ ಜೀವಿಸುವಂಥವು = ದಿವ್ಯ ಮತ್ತು ಮಾನುಷವೆಂಬ ದ್ವಿಮುಖ ತತ್ತ್ವವನ್ನಾಧರಿಸಿದೆ.

# ವರುಣ ಸೂಕ್ತ

## V. 85

[ಈ ಸೂಕ್ತದಲ್ಲಿ ಉದ್ದಕ್ಕೂ ಸತತವಾಗಿ ದ್ವಂದ್ವಾರ್ಥವಿದೆ. ಬಹಿರ್‌ಯೋಗವಾದಾ (ಅರಹಸ್ಯ)ನುಸಾರವಾಗಿ ವರುಣನು ಅಸುರನೆಂದು[1] ಸೂಕ್ತಿಸಲಾಗಿದೆ ; ಸರ್ವಜ್ಞನೂ ಸರ್ವಶಕ್ತನೂ ಆದ ಪ್ರಭುವೂ ಸ್ರಷ್ಟಾರನೂ ಸರ್ಜನಾತ್ಮಕ ವಿವೇಕ ಸಂಪನ್ನ ದೇವೋತ್ತಮನೂ ಸಮರ್ಥನೂ ಭೂಮ್ಯಾಂತರಿಕ್ಷ ಸ್ವರ್ಗಗಳಲ್ಲಿ ಜಗನ್ನಿರ್ಮಾಪಕನೂ ಜಗದ್ಧಾರಣ ಕರ್ತನೂ ಎಂದು ಬಣ್ಣಿಸಲಾಗಿದೆ. ರಹಸ್ಯವಾದಾನುಸಾರವಾಗಿ ಹೋದರೆ ಭೌತಿಕ ರಹಸ್ಯೇತರವಾದದ ಘಟನೆಗಳು ಸಂಕೇತಗಳಾಗುವುವು : ಅನಂತ ದೇವತಾತತ್ತ್ವವು ಅದರ ಸರ್ವವ್ಯಾಪಕ ವಿವೇಕದಲ್ಲಿ, ಸರ್ವಂಕಷ ಪಾವಿತ್ರ್ಯದಲ್ಲಿ ನಮ್ಮ ಸತ್ತೆಯ ಲೋಕತ್ರಯವನ್ನು ಜ್ಞಾನಸೂರ್ಯೋನ್ಮುಖಗೊಳಿಸುವ ಅರ್ಥವು ಇಲ್ಲಿ ಧ್ವನಿತವಾಗುತ್ತದೆ. - ಪರಮ ಸತ್ಯದ ಧಾರೆಗಳನ್ನು ಸುರಿಸುತ್ತಾನೆ ಅವನು ; ಆ ಮೂಲಕ ಕೆಳಮಟ್ಟದ ಜೀವನವನ್ನೂ ಅದರ ಪಾಪವನ್ನೂ ಅದರ ಅನೃತವನ್ನೂ ತೆಗೆದೊಗೆದು ಜೀವಾತ್ಮವನ್ನು ಶುದ್ಧೀಕರಿಸುತ್ತಾನೆ ಅವನು. ಈ ಸೂಕ್ತವನ್ನಿಲ್ಲಿ ರಹಸ್ಯಾರಹಸ್ಯವಾದಗಳೆರಡರಂತೆಯೂ ಉತ್ತರೋತ್ತರವಾಗಿ ಅರ್ಥೈಸಲಾಗಿದೆ.]

(೧)

### ಸರ್ವಜ್ಞನಾದ ಸೃಷ್ಟಿಕರ್ತನಿಗೆ

**ಪ್ರಸಮ್ರಾಜೇ ಬೃಹದರ್ಚಾ ಗಭೀರಂ ಬ್ರಹ್ಮ ಪ್ರಿಯಂ ವರುಣಾಯ ಶ್ರುತಾಯ ।**
**ವಿಯೋ ಜಘಾನ ಶಮಿತೇವ ಚರ್ಮೋಪಸ್ತಿರೇ ಪೃಥಿವೀಂ ಸೂರ್ಯಾಯ ॥ ೧ ॥**

೧. ಸೂರ್ಯನ ಕೆಳಗೆ ಭೂಮಿಯನ್ನು ಹಬ್ಬಿಸಲೆಂದು ಪ್ರಾಣಿಗಳ ಚರ್ಮವನ್ನು ಸುಲಿಯುವವನಂತೆ ಸುಲಿದೆಸೆದ, ಸರ್ವನಿಯಾಮಕನಾದ, ಸುಪ್ರಖ್ಯಾತನಾದ, ವರುಣನನ್ನು ಕುರಿತು ವಿಶಾಲವೂ ಆಳವೂ ಆದ ಮಂತ್ರವನ್ನು ನೀನು ಹಾಡು.

**ವನೇಷು ವ್ಯಂತರಿಕ್ಷಂ ತತಾನ ವಾಜಮರ್ವತ್ಸು ಪಯ ಉಸ್ರಿಯಾಸು ।**
**ಹೃತ್ಸು ಕ್ರತುಂ ವರುಣೋ ಅಪ್ಸ್ವಗ್ನಿಂ ದಿವಿ ಸೂರ್ಯನು ದಧಾತ್ ಸೋಮಮದ್ರೌ ॥ ೨ ॥**

---

೧. ಅಸುರ=ಅಸೂನ್ (ಪ್ರಾಣಾನ್) ರಾತಿ ದದಾತಿ ಇತ್ಯಸುರಃ - ಅನುವಾದಕ.

೨. ಮರಗಳ ತುದಿಗಳ ಮೇಲೆ ಮಧ್ಯವಾಯುವನ್ನು ಅವನು ಹರಹಿದನು. ಅವನು ರಣವಾಜಿಗಳಲ್ಲಿ ಸಾಮರ್ಥ್ಯವನ್ನು ತುಂಬಿದನು-ದನಗಳಲ್ಲಿ ಹಾಲನ್ನು ತುಂಬಿಸಿದನು: ಹೃದಯಗಳಲ್ಲವನು ಸಂಕಲ್ಪವನ್ನೂ ಜಲಗಳಲ್ಲಿ[೨] ಅಗ್ನಿಯನ್ನೂ ಸ್ವರ್ಗದಲ್ಲಿ ಸೂರ್ಯನನ್ನೂ ಪರ್ವತದ ಮೇಲೆ ಸೋಮಲತೆಯನ್ನೂ ನೆಲೆ ನಿಲ್ಲಿಸಿದನು.

**ನೀಚೀನ ಬಾರಂ ವರುಣಃ ಕವಂಧಂ ಪ್ರಸಸರ್ಜ ರೋದಸೀ ಅಂತರಿಕ್ಷಂ ।**
**ತೇನ ವಿಶ್ವಸ್ಯ ಭುವನಸ್ಯ ರಾಜಾಯವಂ ನ ವೃಷ್ಟಿರ್ವ್ಯುನತ್ತಿ ಭೂಮ॥ ೩ ॥**

೩. ಯಾರ ಕಿಟಕಿಗಳು ಅಧೋಮುಖವಾಗಿ ತೆರೆದಿವೆಯೋ ಆ ಜಲಧರನು ಎನ್ನಿಸಿದ ವರುಣನು ಭೂಮಿ-ಸ್ವರ್ಗ-ಅಂತರಿಕ್ಷಗಳ ಮೇಲೆ ಸುರಿದೇ ಸುರಿದನು. ಜವೆಗೋದಿಯ ಗದ್ದೆಯ ತುಂಬಾ ಮಳೆಯು ನೆರೆಯನ್ನು ಹಬ್ಬಿಸಿದಂತೆ ಎಲ್ಲಾ ಜಗನ್ಮಹಾಪೂರಗಳ ದೊರೆಯು ಲೋಕತ್ರಯದ ಮೇಲೆ ಮಳೆಗರೆದು ನೆರೆ ಬರಿಸಿದನು.

**ಉನತ್ತಿ ಭೂಮಿಂ ಪೃಥಿವೀಮುತ ದ್ಯಾಂ ಯದಾ ದುಗ್ಧಂ ವರುಣೋ ವಷ್ಟ್ಯಾದಿತ್ ।**
**ಸಮಭ್ರೇಣ ವಸತ ಪರ್ವತಾಸಸ್ತವಿಷೀತಯಂತಃ ಶ್ರಥಯಂತ ವೀರಾಃ ॥ ೪ ॥**

೪. ವರುಣನು ವಿಶಾಲವಾದ ಭೂಮಿಯನ್ನೂ ಸ್ವರ್ಗವನ್ನೂ ನೆರೆಯಿಂದ ತುಂಬಿಸುವನು ಎಂಬುದು ನಿಜ ; ಸ್ವರ್ಗಕ್ಷೀರವು ಅವನಿಗೆ ಬೇಕಾದಾಗ ಅವನು ಅದನ್ನು ಸುರಿಯುವನು. ಪರ್ವತಗಳು ಸಂಪೂರ್ಣವಾಗಿ ಮೋಡದುಡಿಗೆಯನ್ನುಡುವಂತೆ ಮಾಡಲಾಗುವುದು ; ಮಳೆ ಮೋಡಗಳನ್ನು ಹೊತ್ತ ಬಿರುಗಾಳಿಯ[೩] ವೀರರು ತಮ್ಮ ಸಾಮರ್ಥ್ಯವನ್ನು ಪ್ರಯೋಗಿಸುವರು ಮತ್ತು ಅವರೆದುರು ಎಲ್ಲವೂ ಬಿಸಾಡಲ್ಪಡುವುದು.

**ಇಮಾಮೂ ಷ್ವಾಸುರಸ್ಯ ಶ್ರುತಸ್ಯ ಮಹೀಂ ಮಾಯಾಂ ವರುಣಸ್ಯ ಪ್ರವೋಚಂ ।**
**ಮಾನೇನೇವ ತಸ್ಥಿವಾ ಅಂತರಿಕ್ಷೇ ವಿಯೋ ಮಮೇ ಪೃಥಿವೀಂ ಸೂರ್ಯೇಣ ॥ ೫ ॥**

೫. ಪ್ರಸಿದ್ಧನೂ ಬಲಿಷ್ಠನೂ ಆದ ಮಹಾತ್ಮನೊಬ್ಬನ ಸರ್ಜನಶೀಲ ವಿವೇಕವನ್ನು[೪] ನಾನು ಸಾರಿ ಹೇಳಿದ್ದೇನೆ ; ಅಳೆಗೋಲಿನಿಂದಲೋ ಎಂಬಂತೆ ಮಧ್ಯವಾಯು ಪ್ರದೇಶದಲ್ಲಿ ನಿಂತ ವರುಣನು ಸೂರ್ಯನೊಟ್ಟಿಗೆ ಭೂಮಿಯನ್ನೂ ವಿಸ್ತಾರವಾಗಿ ಅಳೆದೊಗೆದನು.

---

೨. ಸಾಯಣನ ವಿವರಣೆಯಂತೆ ಅವನು ಇಟ್ಟದ್ದು ಮೇಘ ಜಲದಲ್ಲಿ ವಿದ್ಯುದಗ್ನಿಯನ್ನು ಅಥವಾ ಸಾಗರದಲ್ಲಿ ವಡವಾಗ್ನಿಯನ್ನೂ ಇಟ್ಟದ್ದು.

೩. ವೀರಾಃ=ಧೀರರು, ನಾಯಕರು-ಇಲ್ಲಿ ಮಳೆಮೋಡಗಾಳಿ ದೇವತೆಗಳಾದ ಮರುತ್ತುಗಳು.

೪. ಮಾಯಾ=ತನ್ನ ದಾತ್ವರ್ಥ ಬಲದಿಂದ ಅಳೆ, ರೂಪಿಸು, ಕಟ್ಟು ಯಾ ಯೋಜಿಸು ಎಂದು ಅರ್ಥವಾಗುತ್ತದೆ.

**ಇಮಾಮೂನು ಕವಿತಮಸ್ಯ, ಮಾಯಾಂ ಮಹೀಂ ದೇವಸ್ಯ ನಕಿರಾ ದಧರ್ಷ ।**
**ಏಕಂ ಯದುದ್ನಾ ನ ಪೃಣಂ ತ್ಯೇನೀರಾ ಸಿಂಚಂತೀರವನಯಃ ಸಮುದ್ರಂ ॥ ೬ ॥**

೬. ದಿವ್ಯಾತ್ಮನ ವಿವೇಕವು ವಿಶಾಲವಾದುದು ಮತ್ತು ದ್ರಷ್ಟ್ರಶ್ರೇಷ್ಠನ ವಿವೇಕವು ವಿಸ್ತಾರವಾದುದು ಮತ್ತು ಯಾರೂ ಅದನ್ನು ಭಂಗಗೊಳಿಸಲಾರರು ; ಆದುದರಿಂದ ಸಮುದ್ರವು ಒಂದು ಆದರೂ ಈಯೆಲ್ಲಾ ಶೀಘ್ರಪ್ರವಾಹಿನಿಗಳಾದ ನದಿಗಳು ಅದರೊಳಗೆ ಹರಿದು ಸುರಿದರೂ ಅದನ್ನು ತುಂಬಲಾರವು.

**ಅರ್ಯಮ್ಯಂ ವರುಣ ಮಿತ್ರ್ಯಂ ವಾ ಸಖಾಯಂ ವಾ ಸದಮಿದ್ ಭ್ರಾತರಂ ವಾ ।**
**ವೇಶಂ ವಾ ನಿತ್ಯಂ ವರುಣಾರಣಂ ವಾ ಯತ್ಸೀಮಾಗಶ್ಚಕೃಮಾ ಶಿಶ್ರಥಸ್ತತ್ ॥ ೭ ॥**

೭. ಹೇ ವರುಣ, ಅರ್ಯಮನ ವಿಧಿಗೆ ವಿರುದ್ಧವಾಗಿ ಅಥವಾ ಮಿತ್ರನ ವಿಧಿಗೆ ವಿರುದ್ಧವಾಗಿ ಸೋದರನ ಯಾ ಗೆಳೆಯನ, ಸತತವಾಗಿರುವ ನೆರೆಯವನ ಇಲ್ಲವೆ ಶತ್ರುವಿನ* ವಿರುದ್ಧವಾಗಿ ನಾವೇನು ಪಾಪ ಮಾಡಿದ್ದರೂ ಅದನ್ನು ನಮ್ಮಿಂದ ದೂರೀಕರಿಸು.

**ಕಿತವಾಸೋ ಯದ್ರಿರಿಪುರ್ನ ದೀವಿ ಯದ್ವಾ ಘಾ ಸತ್ಯಮುತ ಯನ್ನವಿದ್ಮ ।**
**ಸರ್ವಾ ತಾ ವಿ ಷ್ಯ ಶಿಥಿರೇವ ದೇವಾಽಧಾ ತೇ ಸ್ಯಾಮ ವರುಣ ಪ್ರಿಯಾಸಃ ॥ ೮ ॥**

೮. ಓ ವರುಣ ದೇವನೇ, ಸಡಿಲಾಗಿ ನೇತಾಡುತ್ತಿರುವ ಹಣ್ಣುಗಳಂತೋ ಅಂತೆ-ಕುಯುಕ್ತಿಯ ಆಟಗಾರರು ಆಟದ ನಿಯಮವನ್ನು ಮುರಿದು ಪಾಪ ಮಾಡುವಂತೆ ಅಥವಾ ನಾವು ಸತ್ಯದ ವಿರುದ್ಧವಾಗಿ ಮಾಡಿದ ಇಲ್ಲವೆ ಅಜ್ಞಾನದಿಂದ ಮಾಡಿದಂತೆ ಮಾಡಿದ ಪಾಪಗಳೆಲ್ಲವೂ ನಮ್ಮಿಂದ ದೂರ ಹೋಗಲಿ. ದೂರಕ್ಕೆ ಸಿಡಿದು ಹೋಗಲಿ : ಆಗ ನಾವು ನಿನಗೆ ಪ್ರಿಯತಮರಾಗುತ್ತೇವೆ.



* ಅಥವಾ ಅಪರಿಚಿತನು ಎಂದರ್ಥ ಹೇಳಬಹುದು.

# (೨)

# ಅನಂತ ವಿವೇಕದ ಬಲಾಢ್ಯ ಪ್ರಭು

[ಅನಂತ ಪಾವಿತ್ರ್ಯದ ಮತ್ತು ವಿವೇಕದ ಪ್ರಭುವೆಂದೂ ನಿರ್ಮೇಘ ಜ್ಞಾನಸೂರ್ಯನ ಬೆಳಕಿಗೆ ನಮ್ಮ ಪಾರ್ಥಿವ ಸತ್ತೆಯನ್ನು ಒಡ್ಡುವವನೂ ಮಾನಸಿಕ, ಜೈವಿಕ ಮತ್ತು ಭೌತಿಕ ಎಂಬ ನಮ್ಮ ತ್ರಿಪುಟೀ ಸತ್ತೆಯ ಮೇಲೆಲ್ಲಾ ಪರಸತ್ಯದ ಜಲಗಳನ್ನು ಸುರಿಸುವವನು ಎಂದೂ ಸ್ವಶಕ್ತಿಯಿಂದ ನಮ್ಮ ಬಾಳಿನಿಂದ ಎಲ್ಲ ಪಾಪ-ಕೇಡು-ಅನೃತಗಳನ್ನು ಕಳೆದೊಗೆವವನೆಂದೂ ಭಾವಿಸಿ ಋಷಿಯು ವರುಣನನ್ನು ಸೂಕ್ತಿಸುತ್ತಾನೆ. ಆ ವರುಣನು ನಮ್ಮ ಬಯಕೆಯ ಆಹ್ಲಾದಕ ವಸ್ತುಗಳ ಬಗೆಗಿನ ನಮ್ಮ ಹರಕು ಮುರುಕು ಹುಡುಕಾಟವನ್ನು ಮೀರಿ ನಮ್ಮ ಜೈವಿಕ ಸತ್ತೆಯ ಮುಕ್ತ ವಿಸ್ತಾರವನ್ನು ನಿರ್ಮಿಸುತ್ತಾನೆ. ಅಲ್ಲದೆ, ನಮ್ಮ ಯುದ್ಧ ಮಗ್ನ ಜೈವಿಕ ಪ್ರಚೋದಗಳಲ್ಲಿ ವಿಚಾರದ ಹೊಳೆವ ಗೋವ್ರಜಗಳ ಸ್ವರೂಪದಲ್ಲಿ ಇರುವ ಸ್ವರ್ಗೀಯ ಬೆಳೆಯಂತೆ ಅವನು ಅಪಾರ ಶ್ರೇಯಃ ಸಮೃದ್ಧಿಯನ್ನು ತಂದಿಡುತ್ತಾನೆ. ಅವನು ನಮ್ಮ ಹೃದಯಗಳಲ್ಲಿ ಸಂಕಲ್ಪವನ್ನಿಟ್ಟಿದ್ದಾನೆ ; ಅಸ್ತಿತ್ವದ ಜಲಗಳಲ್ಲಿ ದಿವ್ಯ ಪ್ರಚೋದವಾದ ಅಗ್ನಿಯನ್ನಿಟ್ಟಿದ್ದಾನೆ; ಮನದ ಅತ್ಯುನ್ನತ ಸ್ವರ್ಗದಲ್ಲಿ ದಿವ್ಯಜ್ಞಾನ ಸೂರ್ಯನನ್ನು ಇಟ್ಟಿದ್ದಾನೆ ; ಮತ್ತು ನಮ್ಮ ಅಧಿತ್ಯಕಾಬಹುಲವಾದ ಬಾಳಿನ ಪರ್ವತದ ಮೇಲೆ ಆಹ್ಲಾದ ಮಧ್ಯವನ್ನು ಸ್ರವಿಸುವ ಸಸ್ಯವನ್ನು ಇಟ್ಟಿದ್ದಾನೆ. ಇವೆಲ್ಲವೂ ಅಮೃತತ್ವವನ್ನು ಪಡೆಯಲು ನಮಗಿರುವ ಸಾಧನಗಳು. ನಮ್ಮೆಲ್ಲಾ ಭೌತಿಕ ಜೀವನವನ್ನೂ ಆತನು ಯೋಜಿಸುತ್ತಾನೆ ; ಏತರಿಂದ? ತನ್ನ ವಿವೇಕದಿಂದ-ಜ್ಞಾನಸೂರ್ಯನ ಬೆಳಕಿಗನುಗುಣ ವಾಗುವಂತೆ - ಮತ್ತು ನಮ್ಮೆಲ್ಲಾತನು ತನ್ನ ಅನಂತಾಸ್ತಿತ್ವದ ಐಕ್ಯವನ್ನೂ ಎಚ್ಚರವನ್ನೂ (ಪ್ರಜ್ಞೆಯನ್ನೂ) ಪರಸತ್ಯದ ಸ್ತರದ ಏಳೂ ನದಿಗಳೊಡನೆ ಅವು ಜ್ಞಾನವಾಹಿನಿಗಳಾಗಿ ಅದರೊಳಗೆ ಹರಿಯುತ್ತಿರುವಂತೆ ಹಾಗೂ ಅದರ ಅನಂತತೆಯನ್ನು ತುಂಬದಿರುವ ಹಾಗೆ-ನಿರ್ಮಿಸುತ್ತಾನೆ.]

೧. ದೂರಶ್ರುತ ಸ್ಫೂರ್ತಿಗಳನ್ನುಳ್ಳ, ಸರ್ವ ನಿಯಾಮಕನಾದ[1] ವರುಣನನ್ನು ಕುರಿತು ಅದರ ಆಹ್ಲಾದ ವೈಪುಲ್ಯ-ಗಾಂಭೀರ್ಯಗಳಲ್ಲಿ ನೀನು ನಿನ್ನ ಸ್ಫೂರ್ತ ಮಂತ್ರವನ್ನು ಪ್ರಕಾಶವಾಗಿ

---

೧. ಈಯೆರಡು ವಿಶೇಷಣಗಳು ದಿವ್ಯ ಸತ್ತೆಯ ಇಮ್ಮಗ್ಗುಲನ್ನು ಸೂಚಿಸುತ್ತವೆ-ಸರ್ವಜ್ಞಾನ ಮತ್ತು ಸರ್ವಶಕ್ತಿ ; ಮಾಯಾಮಸುರಸ್ಯ ಶ್ರುತಸ್ಯ. ಮಾನವನು ತನ್ನನ್ನು ದಿವ್ಯೀಕರಿಸಿಕೊಳ್ಳುವಾಗ ತಾನು ದೇವತಾದರ್ಶ, ದ್ರಷ್ಟಾದರ್ಶ ಮತ್ತು ರಾಜಾದರ್ಶಗಳ ಪ್ರತಿಮೆಯನ್ನು ಸಾತ್ಮ್ಯಗೊಳಿಸಿಕೊಳ್ಳಬೇಕಾಗುತ್ತದೆ.

೨. ಭೌತಿಕ ಮನೋಧರ್ಮದ ಇತಿಮಿತಿಗಳನ್ನೆಲ್ಲಾ ಸುರುಳಿಸುತ್ತಿ ಆಚೆಗೆ ಎಸೆದಾಗಿದೆ ; ಮತ್ತು ಆ ಮನೋಧರ್ಮವು ದಿವ್ಯ ಜ್ಞಾನದ ಬೆಳಕಿನ ಸ್ಫೂರ್ತಿಗಳನ್ನೂ ಆವಿರ್ಭೂತಿಗಳನ್ನೂ ಸ್ವೀಕರಿಸುವುದಕ್ಕೋಸ್ಕರವಾಗಿ ಮಹಾವಿಸ್ತಾರದಲ್ಲಿ ಹರಡಲ್ಪಟ್ಟಿದೆ.

ಹಾಡು. ಏಕೆಂದರೆ, ಅವನು ಚರ್ಮವನ್ನು ಸುಲಿವವನಂತೆ, ತನ್ನ ಬೆಳಗುವ ಸೂರ್ಯನ್[೨] ಕೆಳಗೆ ನಮ್ಮ ಭೂಮಿಯನ್ನು ಹಬ್ಬಿಸಲೆಂದು ತಮಸ್ಸನ್ನು ಇಬ್ಭಾಗ ಮಾಡಿ ಒಡೆದು ದೂರಕ್ಕೆ ಎಸೆದು ಬಿಟ್ಟಿದ್ದಾನೆ.

೨. ವರುಣನು ಪಾರ್ಥಿವಾಹ್ಲಾದದ[೩] ಕಾಡುಗಳ ಮೇಲಿನ ಅಂತರಿಕ್ಷವನ್ನು ವಿಸ್ತಾರವಾಗಿ ಹರಹಿದನು ; ಅವನು ತನ್ನ ಅಪಾರ ಶ್ರೇಯಃ ಸಮೃದ್ಧಿಯನ್ನು (ಪೂರ್ಣ ಶ್ರೀಮಂತಿಕೆಯನ್ನು) ನಮ್ಮ ಜೀವನದ[೪] ರಣಾಶ್ವಗಳಲ್ಲಿ ತುಂಬಿ, ಅವುಗಳ ಸ್ವರ್ಗೀಯ ಕ್ಷೀರವನ್ನು ನಮ್ಮ ಜ್ಞಾನದ[೫] ಹೊಳೆ ಹೊಳೆವ ಗೋವ್ರಜಗಳಲ್ಲಿಟ್ಟು, ನಮ್ಮ ಹೃದಯಗಳಲ್ಲಿ ಸಂಕಲ್ಪವನ್ನು[೬] ಇರಿಸಿ, ದಿವ್ಯಾಗ್ನಿಯನ್ನು[೭] ಜಲಗಳಲ್ಲಿಟ್ಟು[೮] ನಮ್ಮ ಬಾಳಿನ[೯] ಪರ್ವತದ ಮೇಲೆ ಆನಂದರಸದ ಲತೆಯನ್ನು ನೆಟ್ಟಿದ್ದಾನೆ.

೩. ವಿವೇಕಧರನಾದ ಮತ್ತು ನಮ್ಮ ಸರ್ವಾಸ್ತಿತ್ವರಾಜನಾದ ವರುಣನು ಭೂಮ್ಯಂತರಿಕ್ಷ ಸ್ವರ್ಗಗಳ ಮೇಲೆ ತನ್ನ ಬಾಗಿಲುಗಳನ್ನು ಅಧೋಮುಖ ಮಾಡಿ[೧೦] ತೆರೆದು, ಮಳೆಯು ಜವೆಗೋದಿಯನ್ನು (ಬೆಳೆಸಿ) ಹರಹುವಂತೆ, ನಮ್ಮ ಭೂಲೋಕವನ್ನು ನೆರೆಯಿಂದ ತುಂಬಿಸುತ್ತಾನೆ.

೪. ಆ ಹಾಲನ್ನವನು[೧೧] ಬಯಸಿದಾಗ ಅದನ್ನು ಸುರಿದು ನಮ್ಮ ಪೃಥಿವಿಯ ಹಾಗೂ ಸ್ವರ್ಗದ ವಿಸ್ತಾರದಲ್ಲಿ ವರುಣನು ನಿಜವಾಗಿಯೂ ನೆರೆದುಂಬಿಸುತ್ತಾನೆ ; ಪರ್ವತಗಳು ಮೋಡದಿಂದ ಮುಚ್ಚಿ ಹೋಗಿವೆ - ಅವನ ವೀರರು[೧೨] ತಮ್ಮ ಸಾಮರ್ಥ್ಯವನ್ನು ಬಳಸಿ ಅದನ್ನು ದೂರಕ್ಕೆ ಎಸೆಯುತ್ತಾರೆ.

---

೩. ಕಾಡುಗಳು ಆಹ್ಲಾದಕರವಾದ ಪಾರ್ಥಿವ ಉದ್‌ರುಹಗಳು ಬೆಳೆಗಳು (ವನ ಎಂದರೆ ಆಹ್ಲಾದವೆಂದೂ ಅರ್ಥವಾಗುತ್ತದೆ) ; ಅವು ಅಂತರಿಕ್ಷದ ಆಧಾರಗಳು -ಅಂತರಿಕ್ಷ= ನಮ್ಮಲ್ಲಿರುವ ವಾಯುರಾಜ್ಯಕ್ಕೆ ಸೇರಿದ (ವಾಯು=ಜೀವನ ದೇವತೆ) ಪ್ರಾಣಮಯ ಪ್ರಪಂಚವು. ಅದು ಇಚ್ಛಾಪೂರ್ತಿಯ ಪ್ರಪಂಚವು ಮತ್ತು ತನ್ನ ಪೂರ್ಣ ವಿಸ್ತಾರದಲ್ಲಿ ಹಬ್ಬಿದೆ- ಅದಕ್ಕೆ ಗಡಿಮಿತಿಗಳಿಲ್ಲ-ಅದಿರುವುದು ಪರಸತ್ಯದ ವಿಧಿಯ ಮತ್ತು ಜ್ಞಾನದ ಮೂಲಕ ಆನಂದವನ್ನು ಹೀರಿಕೊಳ್ಳಲೋಸ್ಕರ.

೪. ಅರ್ವತ್ಸು=ಯೋಧರು, ಹೋರಾಟಗಾರರು ಮತ್ತು ಕುದುರೆಗಳು.

೫ ಉಸ್ರಿಯಾಸು=ಪ್ರಕಾಶಮಯ ಪದಾರ್ಥಗಳು ಮತ್ತು ಗೋವುಗಳು

೬ ಕ್ರತು=ದಿವ್ಯಕಾರ್ಯವನ್ನು ಮಾಡುವ ಸಂಕಲ್ಪ - ಯಾಜ್ಞಿಕ ಸಂಕಲ್ಪ.

೭ ಅಗ್ನಿ=ದಿವ್ಯ ಸಂಕಲ್ಪ ಸ್ವರೂಪದ ಅಗ್ನಿ - ಅದು ಯಜ್ಞವನ್ನು ಸ್ವೀಕರಿಸಿ ಅದರ ಪುರೋಹಿತನಾಗುತ್ತದೆ.

೮. ಸತ್ತಾ ಸಮುದ್ರ ಯಾ ಮೇಲಿನಿಂದ ಕೆಳಗೆ ಬೀಳುವ ಪರಸತ್ಯದ ಜಲಧಾರೆಗಳು.

೯. ನಮ್ಮ ಅಸ್ತಿತ್ವವನ್ನು ಯಾವಾಗಲೂ ಅನೇಕ ಅಧಿತ್ಯಕೆಗಳನ್ನುಳ್ಳ (ಪ್ರತಿಯೊಂದು ಅಧಿತ್ಯಕೆಯೂ ಯಾ ಪ್ರಸ್ಥಭೂಮಿಯೂ ಒಂದೊಂದು ಪ್ರಜ್ಞಾಸ್ತರ - ಅವುಗಳನ್ನುಳ್ಳ) ಪರ್ವತಕ್ಕೆ ಹೋಲಿಸಲಾಗಿದೆ.

೧೦. ದಿವ್ಯಜ್ಞಾನವು ತನ್ನ ಸಂಕಲ್ಪದಲ್ಲಿ ಮತ್ತು ಜ್ಞಾನದಲ್ಲಿ ಅನಂತವನ್ನು ಸ್ವೀಕರಿಸಲು ಮೇಲ್ಮುಖವಾಗಿ ತೆರೆದುಕೊಳ್ಳುತ್ತದೆ.

೧೧. ಅದಿತಿ ಎಂಬ ಧೇನುವಿನ ಹಾಲು=ಅನಂತಪ್ರಜ್ಞೆಯು.

೧೨. ಮರುತ್ತುಗಳು ಪೂರ್ಣವಿಚಾರ-ಜ್ಞಾನವನ್ನು ಸಾಧಿಸಿಕೊಳ್ಳುವ ಜೀವನಶಕ್ತಿಗಳು ; ಅವರು ಮೋಡವನ್ನು ಯಾ ಬುರುಕಿ ತೊಡಿಸುವವನನ್ನು ಮುರಿದೊಗೆಯುವುದರಲ್ಲಿ ಇಂದ್ರನಿಗೆ ನೆರವನ್ನೀಯುತ್ತಾರೆ. ಬುರುಕಿ ಹಾಕಿ ಮುಚ್ಚುವವನು ವೃತ್ರನು. ಆ ದೇವತೆಗಳು ತನ್ಮೂಲಕ ಪರಸತ್ಯದ ನೀರನ್ನು ಹೊರಸುರಿಯುತ್ತಾರೆ ಹಾಗೂ ವಲಗುಪ್ತ ಪ್ರಕಾಶವನ್ನು ಹೊರ ತರುತ್ತಾರೆ-ಇಂದ್ರನ ಮೂಲಕ. ಆ ಪ್ರಕಾಶವು ಅಡಗಿದ್ದ ಸೂರ್ಯನದ್ದು. ಇಲ್ಲಿ ಎರಡು ಕಲ್ಪನೆಗಳೂ ಮೂರನೆಯ ಪ್ರತಿಮೆಯಲ್ಲಿ ಸಂಯುಕ್ತವಾಗಿದೆ.

೫. ದೂರಶ್ರುತನೂ ಬಲಾಢ್ಯಪ್ರಭುವೂ ಆದ ವರುಣನ ವಿವೇಕವು ವಿಶಾಲವೆಂದು ನಾನು ಘೋಷಿಸುತ್ತೇನೆ. ಏಕೆಂದರೆ, ಮಾನದಂಡಧರನಾಗಿಯೋ ಎಂಬಂತೆ ಅವನು ಅಂತರಿಕ್ಷದಲ್ಲಿ ನಿಂತು ತನ್ನ ಪಳಚ್ಚನೆ ಹೊಳೆವ ಸೂರ್ಯನ[೧೩] ಮೂಲಕ ಭೂಮಿಯನ್ನು ಅಳೆದೊಗೆಯುತ್ತಾನೆ.

೬. ದ್ರಷ್ಟೃಜ್ಞಾನದಲ್ಲಿ ಆ ಮಹಾದೇವ ತತ್ತ್ವದ ವಿವೇಕವು ಬಹು ವಿಸ್ತಾರವಾದದ್ದಾಗಿದೆ ; ಮತ್ತು ಯಾರೂ ಅದನ್ನು ಭಂಗಗೊಳಿಸಲಾರರು. ಏಕೆಂದರೆ ಒಬ್ಬನೇ ಆದ ಆ ಸಮುದ್ರದೊಳಗೆ ಹೊಳೆವ ಪೋಷಕ ನದಿಗಳೆಲ್ಲಾ[೧೪] .ತಮ್ಮ ನೀರನ್ನು ಸುರಿಯುತ್ತವೆ ಆದರೂ ಅವು ಅವನನ್ನು ತುಂಬಲಾರದವುಗಳಾಗಿವೆ.

೭. ಅರ್ಯಮನ ಅಥವಾ ಮಿತ್ರನ ಶಕ್ತಿಯಲ್ಲಿ ನೀನು ನಿಂತಾಗ, ಯಾ ನೀನು ಭ್ರಾತೃವಾಗಿ, ಸ್ನೇಹಿತನಾಗಿ, ಸಾರ್ವಕಾಲಿಕ ಅಂತರ್ಯಾಮಿಯಾಗಿ ಇಲ್ಲವೆ ಯೋಧನಾಗಿ[೧೫] ನಿಂತಾಗ ಹೇ ವರುಣ, ನಾವು ಮಾಡಿದ ಪಾಪಗಳನ್ನು ನಮ್ಮಿಂದ ತೆಗೆದು ದೂರಕ್ಕೆ ಎಸೆ.

೮. ತಮ್ಮ ಆಟಗಳಲ್ಲಿ ಕುಯುಕ್ತಿ ಸಂಪನ್ನರಾದ ಆಟಗಾರರು ತಪ್ಪು ಮಾಡಿದ ಹಾಗೆ, ಹೇ ವರುಣ, ಸತ್ಯದ ವಿರುದ್ಧವಾಗಿ ನಾವು ಮಾಡಿದ ಪಾಪವನ್ನು ಮತ್ತು ಅಜ್ಞಾನದಿಂದ ನಾವು ಎಸಗಿದ ಅಪರಾಧವನ್ನು ಕಟ್ಟು ಸಡಿಲಾದ ವಸ್ತುಗಳಂತೆ ಕಳಚಿ ಬಿದ್ದು ಹೋಗುವಂತೆ ಮಾಡು ; ಆಗ ನಾವು ನಿನಗೆ ಪ್ರಿಯರಾದೇವು.



---

೧೩. ನರನು ತನ್ನ ಭೌತ ಸತ್ತೆಯಲ್ಲಿ ಬದುಕುತ್ತಾನೆ. ದಿವ್ಯಜ್ಞಾನದ ಬೆಳಕನ್ನು ವರುಣನು ಅದರೊಳಗೆ ತಂದು ಅದನ್ನಳೆದೊಗೆಯುತ್ತಾನೆ-ಅಂದರೆ ದಿವ್ಯಜ್ಞಾನ ಸೂರ್ಯನಿಂದ ಪ್ರಬುದ್ಧನಾಗಿ ಮನದ ಮೂಲಕ ಪರಸತ್ಯದ ಅಳತೆಗಳಲ್ಲಿ ನಮ್ಮ ಪಾರ್ಥಿವ ಜೀವನವನ್ನು ಯೋಜಿಸುತ್ತಾನೆ. ನಮ್ಮ ಜೈವಿಕ ಪ್ರಜ್ಞೆಯಲ್ಲಿ ಅವನು ಅಸುರನಾಗಿ ನಿಲ್ಲುತ್ತಾನೆ ; ಆ ಪ್ರಜ್ಞೆಯು ಮಾನಸ ಭೌತ ಪ್ರಜ್ಞೆಗಳ ನಡುವಣ ಸಂಕ. ಹಾಗೆ ನಿಂತ ವರುಣನು ಬೆಳಕನ್ನು ಹೀರಿಕೊಂಡು ಸರ್ಜನಾತ್ಮಕ ಮತ್ತು ನಿರ್ಧಾರಕ ಪ್ರಣೋದವನ್ನಾಗಿ ಅದನ್ನು ಮುಂಬರಿಯಗೊಡುತ್ತಾನೆ.

೧೪. ಪರಸತ್ಯ ಸ್ತರದಿಂದಿಳಿದು ಬರುವ ಸಪ್ತ ಸಿಂಧುಗಳು-ಇಲ್ಲಿ ಅವು "ಅವನಯಃ" - ಇದಕ್ಕೆ ಧೇನುಪದದ ಧಾತುಮೂಲದ ಪೋಷಕತ್ವದ ಅರ್ಥವೇ ಇದೆ.

೧೫. "ದಸ್ಯು"ಗಳೆದುರು

# ಒಂದು ವೈದಿಕ ಸೂಕ್ತ

## VII. 60

ಎಲೈ ಸೂರ್ಯನೇ, ಎಲೈ ಬೆಳಕೇ, ನಿನ್ನ ಉದಯದಿಂದು ನಿಷ್ಕಲಂಕವಾಗಿರುವುದರಿಂದ ನಾವು ನಿನಗೆ ಪ್ರಿಯವಾದ ದೇವತಾತತ್ವದಲ್ಲಿ ನೆಲೆಸಲೆಂದು ಪ್ರೇಮಪ್ರಭುವಿಗೆ ನೀನು ಪರಸತ್ಯವನ್ನು ಘೋಷಿಸಿದ್ದೀಯೆ. ಪಾವಿತ್ರ್ಯದೊಡೆಯನಿಗೂ ಸಾರಿದ್ದೀಯೆ. ಹೇ ಅನಂತ ಮಾತೆಯೇ, ಇದು ನಿನಗೆ ಪ್ರಿಯ ; ಸಾಮರ್ಥ್ಯ ಪ್ರಭುವೇ ನಮ್ಮೆಲ್ಲಾ ಮಾತಿನಲ್ಲಿ ನಿನಗೆ ಇದು ಪ್ರಿಯ. ಎಲೈ ಮಿತ್ರನೇ, ಎಲೈ ವರುಣನೇ, ಆತ್ಮನಿಗಾಗಿ ಇದು ಅವನು ನೋಡುವುದು-ಭೂಮಿಯ ಮೇಲೆ ಸೂರ್ಯನು ಮಾಡುವುದು - ಎಲ್ಲಿ? ವ್ಯಾಪಕವಾದ ವೈಶಾಲ್ಯದಲ್ಲಿ ; ಮತ್ತು ಅವನು ಚರಾಚರಗಳೆಲ್ಲವನ್ನೂ ರಕ್ಷಿಸುತ್ತಾನೆ. ಏಕೆಂದರೆ ಅವನು ಮರ್ತ್ಯರಲ್ಲಿಯ ಋಜ್ವನೃಜುವಾದವುಗಳನ್ನೆಲ್ಲಾ ನೋಡುತ್ತಾನೆ. ನಮ್ಮ ಸಾಧನಾ (ಸಿದ್ಧಿ) ಪ್ರಪಂಚದಲ್ಲೀ ದಿನ ಈ ಜ್ಯೋತಿರ್ಮಯನು ಏಳು ಹೊಳೆವ ಕ್ರಿಯಾಶಕ್ತಿಗಳನ್ನು ನೊಗಕ್ಕೆ ಹೂಡಿದ್ದಾನೆ ಮತ್ತು ತಮ್ಮ ಸ್ಪಷ್ಟತೆಯಲ್ಲಿ ಅವು ಅವನನ್ನು ದರಿಸಿವೆ ; ಮತ್ತು ದನಗಾಹಿಯಂತೆ ಅವನು ಜೀವಾತ್ಮನ ಜನ್ಮಸ್ಥಳಗಳನ್ನೂ ಮನೆಗಳನ್ನೂ ಕಾಯುತ್ತಾನೆ.

ನಿಮ್ಮ ಮಧುಮಯ ತೃಪ್ತಿಗಳನ್ನು ಮೇಲಕ್ಕೇರಿಸಿರಿ ; ಏಕೆಂದರೆ, ನಮ್ಮ ಸೂರ್ಯನು ಶುದ್ಧ ಬೆಳಕಿನ ಕಡಲನ್ನೇರಿದ್ದಾನೆ ಮತ್ತು ಅವನಿಗೆಂದು ಅನಂತದ ಮಕ್ಕಳು ದಾರಿಗಳನ್ನು ಕಡಿದು, ಮಾಡಿಕೊಟ್ಟಿದ್ದಾರೆ. ಪ್ರೇಮನಾಥನೂ ಬಲನಾಥನೂ ಪಾವಿತ್ರ್ಯನಾಥನೂ ಒಂದೇ ಸಾಮಶ್ರುತ್ಯದಲ್ಲಿದ್ದಾರೆ. ಇವರೇ ನಮ್ಮಲ್ಲಿರುವ ಹೆಚ್ಚಿನ ಅನೃತವನ್ನು ಸೂಕ್ಷ್ಮವಾಗಿ ನೋಡಿ ಪ್ರತ್ಯೇಕಿಸುವವರು. ಇವರು ಆ ಪ್ರೇಮ-ಬಲ-ಪಾವಿತ್ರ್ಯಗಳ ನಾಥರು. ಇವರು ಅನಂತದ ಅಜಿತರೂ ಪ್ರಭಾವಿಗಳೂ ಆದ ಮಕ್ಕಳು ; ಇವರು ಪರಸತ್ಯದ ಮನೆಯಲ್ಲಿ ಬೆಳೆಯುತ್ತಾರೆ. ಇವರೇ ಆ ಅದಮ್ಯ ಪ್ರೇಮ-ಬಲಗಳ ನಾಥರು- ಇವರು ತಮ್ಮ ಸೂಕ್ಷ್ಮ ನೋಟಗಳಿಂದ ಜ್ಞಾನವಿಲ್ಲದವನಿಗೆ ಜ್ಞಾನವನ್ನು ಕೊಡುತ್ತಾರೆ ; ಇವರು ಸರಿಯಾದ ದರ್ಶನ ಶಕ್ತಿಯುಳ್ಳ ಪ್ರೇರಣೆಗಳ ಸಂಕಲ್ಪವನ್ನು ಅವನಿಗೆ ತಂದು ಕೊಡುತ್ತಾರೆ ಮತ್ತು ಅವನನ್ನು ದುರ್ಮಾರ್ಗದಿಂದ ಸನ್ಮಾರ್ಗದಲ್ಲಿ ಕರೆದೊಯ್ಯುತ್ತಾರೆ. ಅನಿದ್ರ ನಯನಗಳಿಂದ ಇವರು ಅಜ್ಞ ಮಾನವನಿಗಾಗಿ ಅವನ ಭೂಮಿಯಲ್ಲಿ ನೋಡುತ್ತಾರೆ, ತಿಳಿಯುತ್ತಾರೆ ಮತ್ತು ಅವನನ್ನು ಮುಂದಕ್ಕೆ ಕರೆದೊಯ್ಯುತ್ತಾರೆ. ಅವನ ಮುನ್ನಡೆಯಲ್ಲವನು ನದಿಯಲ್ಲಿರುವ ತಳವಿಲ್ಲದ ಕುಳಿ (ಹೊಂಡ) ಒಂದನ್ನು ತಲುಪುತ್ತಾನೆ ; ಆದರೂ ಈ ವಿಸ್ತಾರದ ಇನ್ನೊಂದು ತೀರಕ್ಕೆ ಅವನನ್ನಿವರು ದಾಟಿಸಿಕೊಂಡು ಒಯ್ಯುತ್ತಾರೆ. ಅನಂತಮಾತೆಯೂ ಪ್ರೇಮ-ಪಾವಿತ್ರ್ಯಗಳನಾಥರೂ ಯಜ್ಞ ಸೇವಕನಿಗೆ ನೀಡುವ ಶಾಂತಿ, ರಕ್ಷಣೆ ಹಾಗೂ ಸುಖಗಳಲ್ಲಿ ನಮ್ಮ ಸೃಷ್ಟಿಯೆಲ್ಲವನ್ನೂ ಕಟ್ಟಡವೆಲ್ಲವನ್ನೂ ಪ್ರತಿಷ್ಠಾಪಿಸೋಣ ; ಉಕ್ತ ದೇವತಾತತ್ವಕ್ಕೆ ಯಾವ ಹಿಂಸೆಯನ್ನೂ ಕೊಡದಿರೋಣ-ಹೇ ಶೀಘ್ರ ಪ್ರಯಾಣಿಕರೇ!

ಯಾರನ್ನು ಪಾವಿತ್ರ್ಯನಾಥನು ಬೆಂಬಲಿಸುವನೋ ಯಾವನ ಯಜ್ಞ ವೇದಿಕೆಯಿಂದ ಪೀಡಕರನ್ನು ಯಜ್ಞ ಶಕ್ತಿಯಿಂದ ದೂರೀಕರಿಸುವನೋ ಆ ಯಜ್ಞ ಸೇವಕನಿಂದ ಹಿಂಸೆಯನ್ನೂ ವಿಭಜನೆಯನ್ನೂ ಬಲ(ಸಾಮರ್ಥ್ಯ)ನಾಥನೇ, ನೀನು ದೂರಮಾಡು-ಇನ್ನೊಂದು ವಿಶಾಲ ಜಗತ್ತನ್ನವನಲ್ಲಿ ರೂಪಿಸು. ಅಮೇಯ ಐಶ್ವರ್ಯದಾತೃಗಳೇ, ಈ ದೇವತಾಸಂಗಮವೆಂದರೆ ಉರಿವ ಬಲ ಹಾಗೂ ಬೆಳಗುವ ಜಗತ್ತು ; ಮತ್ತು ಇವರು ತಮ್ಮ ಹತ್ತಿರದ ಹಾಗೂ ನಿಕಟಗಾಮಿಯಾದ ಪ್ರಣೋದದಿಂದ ಎಲ್ಲವನ್ನೂ ಮೀರಿ ಹೋಗುತ್ತಾರೆ. ಎಲೈ ಸೂರ್ಯನೇ, ನಿನ್ನನ್ನು ಕಂಡು ನಾವು ಭಯದಿಂದ ನಡುಗುತ್ತೇವೆ. ನಿನ್ನ ಸೂಕ್ಷ್ಮದರ್ಶನದ ಮಹತ್ವದಿಂದ ನಮ್ಮನ್ನು ನಿರ್ಭೀತರನ್ನಾಗಿ ಮಾಡು. ಅಪಾರ ಶ್ರೇಯಃ ಸಮೃದ್ಧಿಯನ್ನು ಪಡೆಯುವುದರಲ್ಲಿ ಯಜ್ಞದ ಮೂಲಕ ಋತಮನಸ್ಕತೆಯನ್ನು ನರನು ಗೆದ್ದುಕೊಂಡಾಗ-ಸರ್ವೋಚ್ಚ ಸುಖ ಸೌಕರ್ಯವನ್ನು ಪಡೆಯಲು ಶಕ್ತನಾದಾಗ-ಸಮರ್ಥ ಯೋಧರಾದ ಅಮೂಲ್ಯ ಐಶ್ವರ್ಯದ ಒಡೆಯರು ಅವನ ಭಾವನಾಮಯ ಹೃದಯಕ್ಕೆ ಅಂಟಿಕೊಂಡಾಗ; ಅವರಲ್ಲಿ ಮಹಾವೈಶಾಲ್ಯವನ್ನು, ಪರಿಪೂರ್ಣ ಸಮಸ್ಥಿತಿಗೆ ತಂದು ಅವನ ನಿವಾಸವನ್ನಾಗಿ ಮಾಡುತ್ತಾರೆ. ನಿನಗಾಗಿ ನಮ್ಮ ಯಜ್ಞದಲ್ಲಿ ದಿವ್ಯದೂತನ ಈ ಕಾರ್ಯವನ್ನು ಮಾಡಿದ್ದೇವೆ. ಎಲ್ಲ ದುರ್ಗಮ ಸ್ಥಳಗಳ ಮೂಲಕವೂ ಸುರಕ್ಷಿತವಾಗಿ ನಮ್ಮನ್ನು ನಡೆಸು. ಯಾವಾಗಲೂ ಶ್ರೇಯಃ ಸಮೃದ್ಧಿಯು ನಮಗಿರುವಂತೆ ಮಾಡು.

ಯದದ್ಯ ಸೂರ್ಯ ಬ್ರವೋಽನಾಗಾ ಉದ್ಯನ್ಮಿತ್ರಾಯ ವರುಣಾಯ ಸತ್ಯಮ್ ।
ವಯಂ ದೇವತ್ರಾದಿತೇ ಸ್ಯಾಮ ತವ ಪ್ರಿಯಾಸೋ ಅರ್ಯಮನ್ ಗೃಣಂತಃ ॥ ೧ ॥

ಏಷ ಸ್ಯ ಮಿತ್ರಾವರುಣಾ ನೃಚಕ್ಷಾ ಉಭೇ ಉದೇತಿ ಸೂರ್ಯೋ ಅಭಿ ಜ್ಮನ್ ।
ವಿಶ್ವಸ್ಯ ಸ್ಥಾತುರ್ಜಗತಶ್ಚ ಗೋಪಾ ಋಜು ಮರ್ತೇಷು ವೃಜಿನಾ ಚ ಪಶ್ಯನ್ ॥ ೨ ॥

ಅಯುಕ್ತ ಸಪ್ತ ಹರಿತಃ ಸಧಸ್ಥಾದ್ಯಾ ಇಂ ವಹಂತಿ ಸೂರ್ಯ ಘೃತಾಚೀಃ
ಧಾಮಾನಿ ಮಿತ್ರಾವರುಣಾ ಯುವಾಕುಃ ಸಂ ಯೋ ಯೂಥೇವ ಜನಿಮಾನಿ ಚಷ್ಟೆ ॥ ೩ ॥

ಉದ್ವಾಂ ಪೃಕ್ಷಾಸೋ ಮಧುಮಂತೋ ಅಸ್ಥುರಾ ಸೂರ್ಯೋ ಅರುಹಚ್ಛುಕ್ರಮರ್ಣಃ ।
ಯಸ್ಮಾ ಆದಿತ್ಯಾ ಅಧ್ವನೋ ರದಂತಿ ಮಿತ್ರೋ ಅರ್ಯಮಾ ವರುಣಃ ಸಜೋಷರಃ ॥ ೪ ॥

ಇಮೇ ಚೇತಾರೋ ಅನೃತಸ್ಯ ಭೂರೇರ್ಮಿತ್ರೋ ಅರ್ಯಮಾ ವರುಣೋ ಹಿ ಸಂತಿ ।
ಇಮ ಋತಸ್ಯ ವಾವೃಧುರ್ದುರೋಣೇ ಶಗ್ಮಾಸಃ ಪುತ್ರಾ ಅದಿತೇರದಬ್ಧಾಃ ॥ ೫ ॥

ಇಮೇ ಮಿತ್ರೋ ವರುಣೋ ದೂಳಭಾಸೋಽ ಚೇತಸಂ ಚಿಚ್ಚಿತಯಂತಿ ದಕ್ಷೈಃ ।
ಅಪಿಕ್ರತುಂ ಸುಚೇತಸಂ ವತಂತಸ್ತಿರಶ್ಚಿದಂಹಃ ಸುಪಥಾ ನಯಂತಿ ॥ ೬ ॥

ಇಮೇ ದಿವೋ ಅನಿಮಿಷಾ ಪೃಥಿವ್ಯಾಶ್ಚಿಕಿತ್ವಾಂಸೋ ಅಚೇತಸಂ ನಯಂತಿ ।
ಪ್ರವ್ರಾಜೇ ಚಿನ್ನದ್ಯೋ ಗಾಧಮಸ್ತಿ ಪಾರಂ ನೋ ಅಸ್ಯ ವಿಷ್ಪಿತಸ್ಯ ಪರ್ಷನ್ ॥ ೭ ॥

ಯದ್ ಗೋಪಾವದದಿತಿಃ ಶರ್ಮ ಭದ್ರಂ ಮಿತ್ರೋ ಯಚ್ಛಂತಿ ವರುಣಃ ಸುದಾಸೇ ।
ತಸ್ಮಿನ್ನಾ ತೋಕಂ ತನಯಂ ದಧಾನಾ ಮಾ ಕರ್ಮ ದೇವಹೇಳನಂ ತುರಾಸಃ ॥ ೮ ॥

ಅವ ವೇದಿಂ ಹೋತ್ರಾಭಿರ್ಯಜೇತ ರಿಪಃ ಕಾಶ್ಚಿದ್ವರುಣಧ್ರುತಃ ಸಃ ।
ಪರಿ ದ್ವೇಷೋಭಿರರ್ಯಮಾ ವೃಣಕ್ತೂರುಂ ಸುದಾಸೇ ವೃಷಣಾ ಉ ಲೋಕಮ್ ॥ ೯ ॥

ಸಸ್ವಶ್ಚಿದ್ಧಿ ಸಮೃತಿಸ್ತ್ವೇಷ್ಯೇಷಾಮಪೀಚ್ಯೇನ ಸಹಸಾ ಸಹಂತೇ ।
ಯುಷ್ಮದ್‌ಭಿಯಾ ವೃಷಣೋ ರೇಜಮಾನಾ ದಕ್ಷಸ್ಯ ಚಿನ್ಮಹಿನಾ ಮೃಳತಾನಃ ॥ ೧೦ ॥

ಯೋ ಬ್ರಹ್ಮಣೇ ಸುಮತಿಮಾಯಜಾತೇ ವಾಜಸ್ಯ ಸಾತೌ ಪರಮಸ್ಯ ರಾಯಃ ।
ಸೀಕ್ಷಂತ ಮನ್ಯುಂ ಮಘವಾನೋ ಅರ್ಯ ಉರುಕ್ಷಯಾಯ ಚಕ್ರಿರೇ ಸುಧಾತು ॥ ೧೧ ॥

ಇಯಂ ದೇವ ಪುರೋಹಿತಿರ್ಯುವಭ್ಯಾಂ ಯಜ್ಞೇಷು ಮಿತ್ರಾವರುಣಾವಕಾರಿ ।
ವಿಶ್ವಾನಿ ದುರ್ಗಾ ಪಿಪೃತಂ ತಿರೋ ನೋ ಯೂಯಂ ಪಾತ ಸ್ವಸ್ತಿಭಿಃ ಸದಾನಃ ॥ ೧೨ ॥



# ಯೌಗಿಕ ಮದ್ಯದ ದೇವರು*

## I

## IX. 42

**ಜನಯನ್ ರೋಚನಾ ದಿವೋ ಜನಯನ್ನಪ್ಸು ಸೂರ್ಯಂ ।**
**ವಸಾನೋ ಗಾ ಅಪೋ ಹರಿಃ ॥ ೧ ॥**

೧. ಸ್ವರ್ಗದ[೧] ಹೊಳೆವ ಜಗತ್ತುಗಳಿಗೆ ಜನ್ಮವಿತ್ತು, ಜಲಗಳಲ್ಲಿ[೨] ಸೂರ್ಯನಿಗೆ ಜನ್ಮವನ್ನಿತ್ತು, ತೇಜಸ್ವಿಯಾದ ಒಬ್ಬನು ಜಲಗಳನ್ನೂ ಕಿರಣಗಳನ್ನೂ[೩] ಉಡುತ್ತಾನೆ.

**ಏಷ ಪ್ರತ್ನೇನ ಮನ್ಮನಾ ದೇವೋ ದೇವೇಭ್ಯಸ್ಪರಿ ।**
**ಧಾರಯಾ ಪವತೇ ಸುತಃ ॥ ೨ ॥**

೨. ದೇವರ ಸುತ್ತಲಿರುವ ದೇವರಾದ ಅವನು ಪ್ರಾಚೀನ ವಿಚಾರವನ್ನು ಹಿಂಡಿ ನದಿಯಂತೆ ರಸವನ್ನು ಹರಿಯಿಸುತ್ತಾನೆ.

**ವಾವೃಧಾನಾಯ ತೂರ್ವಯೇ ಪವಂತೇ ವಾಜಸಾತ ಯೇ ।**
**ಸೋಮಾಃ ಸಹಸ್ರಪಾಜಸಃ ॥ ೩ ॥**

೩. ವರ್ಧಮಾನನೂ ಶೀಘ್ರವಾಗಿ ಮುಂಬರಿವವನೂ[೪] ಆದ ಒಬ್ಬನಿಗಾಗಿ, ಅವನು ಐಶ್ವರ್ಯವನ್ನು ಪಡೆಯುವುದಕ್ಕಾಗಿ ಸೋಮರಸಗಳು ತಮ್ಮ ಸಹಸ್ರ ಸಾಮರ್ಥ್ಯಗಳಿಂದ ಹರಿಯುತ್ತವೆ.

**ದುಹಾನಃ ಪ್ರತ್ನಮಿತ್ಪಯಃ ಪವಿತ್ರೇ ಪರಿಷಿಚ್ಯತೇ ।**
**ಕ್ರಂದಂದೇವಾ ಅಜೀಜನತ್ ॥ ೪ ॥**

---

* ಈಯೆರಡು ಸೂಕ್ತಗಳನ್ನು ಆದಷ್ಟು ಅಕ್ಷರಶಃ ಭಾಷಾಂತರ ಮಾಡಲಾಗಿದೆ. ಮೂಲ ಸಾಂಕೇತಿಕತೆಯನ್ನು ವೇದದಲ್ಲಿದ್ದಂತೆಯೇ ಅದರ ಮಾನಸ ಶಾಸ್ತ್ರೀಯ ಸಮಾನಾರ್ಥಗಳನ್ನು ಕೊಡದೆಯೇ ಓದುಗರ ಮುಂದಿಡುವುದು ಇದರ ಉದ್ದೇಶವಾಗಿದೆ.

೧. "ಸ್ವರ್" ಎಂಬುದರ ಮೂರು ಲೋಕಗಳು.

೨. ಸಪ್ತಸಿಂಧುಗಳಲ್ಲಿ ಯಾ ಜಲಗಳಲ್ಲಿ ಅಗ್ನಿ-ಸೂರ್ಯ-ಸೋಮರಿರುವುದನ್ನಿದು ಹೇಳುತ್ತದೆ.

೩. "ಗಾಃ"=ದನಗಳು ಹಾಗೂ ಕಿರಣಗಳು.

೪. ದಾರಿಯಲ್ಲಿ ಎಲ್ಲ ಆತಂಕಗಳ ಮೂಲಕ ; ಯಜ್ಞವನ್ನು ಮಾನವನ ಬೆಳವಣಿಗೆ ಎಂದೂ ಒಂದು ಪ್ರಯಾಣವೆಂದೂ ಇಲ್ಲಿ ಪ್ರತಿಮಿಸಲಾಗಿದೆ (ಅಲಂಕಾರೋಕ್ತಿಯಿಂದ ಹೇಳಲಾಗಿದೆ.)

೪. ಹಾಲು ಕರೆದಂತೆ ಕರೆದ ಆ ಪ್ರಾಚೀನ ಆಹಾರ ಸ್ವರೂಪನು ಜರಡೀ (ಸಾರಣಿಗೆ)ಯಲ್ಲಿ ಸುರಿಯಲ್ಪಟ್ಟು ಕೂಗುತ್ತಾ ದೇವತೆಗಳನ್ನು ಹುಟ್ಟಿಸುತ್ತಾನೆ.

**ಅಭಿವಿಶ್ವಾನಿ ವಾರ್ಯಾಽಭಿ ದೇವಾ ಋತಾ ವೃಧಃ ।**
**ಸೋಮಃ ಪುನಾ ನೋ ಅರ್ಷತಿ ॥ ೫ ॥**

೫. ತನ್ನನ್ನೇ ತಾನು ಶುದ್ಧೀಕರಿಸಿಕೊಂಡು ಸೋಮನು ಪರಸತ್ಯವನ್ನು ವೃದ್ಧಿಗೊಳಿಸುವ ದೇವತೆಗಳತ್ತ ಹಾಗೂ ಎಲ್ಲ ಅಪೇಕ್ಷಣೀಯ ವರಗಳತ್ತ ಪಯಣಿಸುತ್ತಾನೆ.

**ಗೋಮನ್ನಃ ಸೋಮ ವೀರವ ದಶ್ವಾವದ್ವಾಜ ವತ್‌ಸುತಃ ।**
**ಪವಸ್ವ ಬೃಹತೀರಿಷಃ ॥ ೬ ॥**

೬. ಹೇ ಸೋಮ, ನಿನ್ನ ಪ್ರವಾಹಗಳು ವಿಸ್ತಾರವಾದವುಗಳು[೫]; ಅವುಗಳಲ್ಲಿ ದನಗಳು, ವೀರಯೋಧರು, ರಣಹಯಗಳು ಮತ್ತು ಮಹದೈಶ್ವರ್ಯ ಇವುಗಳಿವೆ ; ನಿನ್ನನ್ನು ಹಿಂಡಿದಾಗ ನಮ್ಮ ಮೇಲೆ ಹರಿದು ಬಾ.



---

೫ "ದೊಡ್ಡ ಆಹಾರಗಳು" - ಎಂಬುದು ಯಾಜ್ಞಿಕ ವ್ಯಾಖ್ಯಾನಕಾರನ ಪ್ರಕಾರವಾದ ಅರ್ಥವು. ಅವನ ಮಾಮೂಲು ಅನುವಾದದಂತೆ ಇಲ್ಲಿ ಆಹಾರಾರ್ಥಕವಾದ ಎರಡು ಪದಗಳಿರುವುದರಿಂದ (ಅವು "ಇಷ್" ಮತ್ತು "ವಾಜ") ಅವನು ವಾಜಕ್ಕೆ ಇನ್ನೊಂದರ್ಥ ಕೊಡ ಹೋಗಿ "ನಮಗೆ ಸಂಪತ್ತನ್ನು ದನ, ಮನುಷ್ಯ, ಕುದುರೆ ಮತ್ತು ಯುದ್ಧ ಹಾಗೂ ಬೇಕಾದಷ್ಟು ಆಹಾರಗಳನ್ನು ಕೊಡು" ಎಂದು ವಿವರಿಸಿದ್ದಾನೆ.

# II

# IX. 75

**ಅಭಿಪ್ರಿಯಾಣಿ ಪವತೇ ಚನೋಹಿತೋ ನಾಮಾ ನಿ ಯಹ್ವೋ ಅಧಿಯೇಷು ವರ್ಧತೇ ।**
**ಆ ಸೂರ್ಯಸ್ಯ ಬೃಹತೋ ಬೃಹನ್ನಧಿ ರಥಂ ವಿಷ್ವಂಚಮರುಹ ದ್ವಿಚಕ್ಷಣಃ ॥ ೧ ॥**

೧. ಆಹ್ಲಾದದಲ್ಲಿಟ್ಟ ಆತನು ತಾನು ಸಂವರ್ಧಿಸುವ ಆಹ್ಲಾದಕರ ನಾಮಗಳತ್ತ ಹರಿಯುತ್ತಾನೆ ; ವಿಶಾಲನೂ, ವಿವೇಕಿಯೂ ಆದ ಅವನು ವಿಶಾಲನಾದ ಸೂರ್ಯನ ವಿಶ್ವವ್ಯಾಪಕವಾಗಿ ಚಲಿಸುವ ರಥವನ್ನು ಹತ್ತುತ್ತಾನೆ.

**ಋತಸ್ಯ ಜಿಹ್ವಾ ಪವತೇ ಮಧುಪ್ರಿಯಂ ವಕ್ತಾಪತಿರ್ಧಿಯೋ ಅಸ್ಯಾ ಅದಾಭ್ಯಃ ।**
**ದಧಾತಿ ಪುತ್ರಃ ಪಿತ್ರೋ ರಪೀಚ್ಯಂ ನಾಮ ತೃತೀಯಮಧಿ ರೋಚನೇ ದಿವಃ ॥ ೨ ॥**

೨. ಪರಸತ್ಯದ ಜಿಹ್ವೆ ಅವನು, ಸುಖಕರ ಮಧು,[೧] ಈ ವಿಚಾರದ ವಕ್ತಾರನಾದ ಅವನು ಅಜಯ್ಯನು ; ಅವನು ಹರಿಯುತ್ತಾನೆ ; ಮಗನು ಸಗ್ಗದ ಹೊಳೆವ ಲೋಕದಲ್ಲಿ ಮಾತಾಪಿತೃಗಳ[೨] ಗುಪ್ತವಾದ ಮೂರನೆಯ ಹೆಸರನ್ನು ಇಡುತ್ತಾನೆ.

**ಅವದ್ಯುತಾನಃ ಕಲಶಾ ಅಚಿಕ್ರದನ್ನೃಭಿರ್ಯೇಮಾನಃ ಕೋಶ ಆ ಹಿರಣ್ಯಯೇ ।**
**ಅಭೀ ಮೃತಸ್ಯ ದೋಹನಾ ಅನೂಷತಾಽಧಿ ತ್ರಿಪೃಷ್ಠ ಉಷಸೋ ವಿ ರಾಜತಿ ॥ ೩ ॥**

೩. ಹಿರಣ್ಮಯಕೋಶದಲ್ಲಿ ಮಾನವರ ಸೂಚನೆಯಂತೆ ಅವನು ಬೆಳಕಿನೊಳಗೆ ಒಡೆದು ಹೋಗುವಾಗ ಭರಣಿಗಳೊಳ ಹೊಕ್ಕು ಕೂಗುತ್ತಾನೆ ; ಪರಸತ್ಯದ ಹಾಲುಗರೆಯುವಿಕೆಗಳು ಮುಂಬೆಳಗಿ ಹೊರಡುತ್ತವೆ[೩]; ಅವನು ಉಷೆಯ ತ್ರಿಪುಟ ಬೆನ್ನಿನ ಮೇಲೆ ವಿಶಾಲವಾಗಿ ಪ್ರಕಾಶಿಸುತ್ತಾನೆ.

**ಅದ್ರಿಭಿಃ ಸುತೋ ಮತಿಭಿಶ್ಚನೋ ಹಿತಃ ಪ್ರರೋಚಯನ್ ರೋದಸೀ ಮಾತರಾ ಶುಚಿಃ ।**
**ರೋಮಾಣ್ಯವ್ಯಾ ಸಮಯಾ ವಿ ಧಾವತಿ ಮಧೋರ್ಧಾರಾ ಪಿನ್ವಮಾನಾ ದಿವೇ ದಿವೇ ॥ ೪ ॥**

---

೧. ಸೋಮನ ಮಧುರವಾದ ಮದ್ಯವು.

೨. ದ್ಯಾವಾ ಪೃಥಿವಿಗಳು : ಅಲ್ಲಿ ಮೂರು ಸ್ವರ್ಗಗಳಿವೆ ಮತ್ತು ಮೂರು ಪೃಥಿವಿಗಳಿವೆ ; ಮತ್ತು ಅವುಗಳ ತುದಿಯಲ್ಲಿ ತ್ರಿಪುಟ ಸ್ವರ್ಗವಾದ ಸ್ವರ್ ಇದೆ - ಅದನ್ನು ಕೆಳಮಟ್ಟದಲ್ಲಿ ಉಷೆಯಲ್ಲಿಯ ಚುಮ್ಮಡಿಯ ಪಟ್ಟ ಯಾ ಮೂರು ಹಿನ್ನೆಲೆ ಎಂದು ವರ್ಣಿಸಲಾಗಿದೆ. ಅದು "ವಿಶಾಲ ಸೂರ್ಯಲೋಕ" ಅದೇ ಪರಸತ್ಯ ಪರಋತ, ಪರವಿಸ್ತಾರ ಎಂದು ವರ್ಣಿತವಾಗಿದೆ.

೩. ಅಥವಾ ಪರಸತ್ಯದ ಹಾಲ್ಗರೆವವರು ಅವನನ್ನು ಕುರಿತು ಮಂತ್ರಗಾನ ಮಾಡುತ್ತಾರೆ.

೪. ಅರಣಿಗಲ್ಲುಗಳಿಂದ ಹಿಂಡಲ್ಪಟ್ಟು, ವಿಚಾರಗಳಿಂದ ಸಂತಸದಲ್ಲಿಡಲ್ಪಟ್ಟು, ಶುದ್ಧನಾಗಿ ದ್ಯಾವಾ ಪೃಥಿವಿಯರೆಂಬ ತಂದೆ ತಾಯಂದಿರನ್ನು ಬೆಳಗುವಂತೆ ಮಾಡಿ ಕುರಿಯ[೪] ಎಲ್ಲ ಕೂದಲುಗಳ ಮೂಲಕವೂ ಸಮವಾಗಿ ಹರಿಯುತ್ತಾನವನು. ಪ್ರತಿದಿನವೂ ಅವನ ಮಧುಪ್ರವಾಹವು ಹೆಚ್ಚುತ್ತಾ ಹೋಗುತ್ತದೆ.

**ಪರಿ ಸೋಮ ಪ್ರಧನ್ವಾ ಸ್ವಸ್ತಯೇ ನೃಭಿಃ ಪುನಾನೋ ಅಭಿವಾಸಯಾಶಿರಂ ।**
**ಯೇ ತೇಮದಾ ಆ ಹನಸೋ ವಿಹಾಯಸಸ್ತೇಭಿ ರಿಂದ್ರಂ ಚೋದಯ ದಾತವೇ ಮಘಂ॥ ೩ ॥**

೫. ಓ ಸೋಮ, ನಮ್ಮ ಸುಖಕ್ಕಾಗಿ ಮನುಷ್ಯರಿಂದ ಶುದ್ಧೀಕೃತನಾಗಿ ಮಿಶ್ರಣದಿಂದ ಉಡುಗೆ ಉಟ್ಟು ಎಲ್ಲೆಡೆಗೂ ಓಡು. ನಿನ್ನ ಆನಂದೋದ್ರೇಕ-ಗಳಿಂದ ಸುವಿಸ್ತಾರವಾಗಿ ಅತ್ತಿಂದಿತ್ತ ಬಡಿಯುತ್ತ ತನ್ನ ಐಶ್ವರ್ಯವನ್ನೀಯಲು[೫] ಇಂದ್ರನನ್ನು ಪ್ರೇರಿಸು.



---

೪. ಸೋಮವನ್ನು ಸೋಸುವ ಸಾರಣಿಗೆಯು ಹೆಣ್ಣು ಕುರಿಯ ಚರ್ಮದಿಂದ ಮಾಡಲ್ಪಟ್ಟದ್ದು. ಇಂದ್ರನು ಟಗರು ; ಆ ಹೆಣ್ಣು ಕುರಿಯು ಖಂಡಿತವಾಗಿ ಇಂದ್ರನ ಒಂದು ಕ್ರಿಯಾಶಕ್ತಿ -ಯಾಗಿರಬೇಕು-ಬಹುಶಃ ದಿವ್ಯೀಕೃತವಾದ ಐಂದ್ರಿಯ ಮನ - ಇಂದ್ರಿಯಂ.

೫ ಸೋಮದೊಡನೆ ನೀರು, ಹಾಲು ಮತ್ತು ಇತರ ಪದಾರ್ಥಗಳನ್ನು ಸೇರಿಸಲಾಗುತ್ತಿತ್ತು. ಸೋಮನುಡುಪು ಜಲಗಳು ಮತ್ತು "ದನಗಳು"-ಅಂದರೆ ಸ್ಫೂರ್ತ ಪ್ರಭೆಗಳು ಯಾ ಉಷಾಫಲ. ಉಷೆ ಎಂದರೆ ಹೊಳೆವ ಹಸು, ಫಲವೆಂದರೆ ಹಾಲು.

# ವಿಚಾರಾಧಿಷ್ಠಾತೃದೇವತೆಗಳನ್ನು ಕುರಿತ ಒಂದು ಸೂಕ್ತ

## V. 52-58 ಸೂಕ್ತಗಳನ್ನಾಧರಿಸಿ

ನನ್ನ ಆತ್ಮದಲ್ಲಿ ಹೊಳೆವ ವಿಚಾರಾಧಿಷ್ಠಾತೃದೇವತೆಗಳ ರಾಶಿಯು ಉದಯಿಸಿದೆ ಮತ್ತು ಅವರು ಮೇಲೆ ಮೇಲೆ ಹೋಗುತ್ತಿರುವಾಗ ಹೃದಯ ಪ್ರಬೋಧದ (ಬೆಳಕು ಕಾಣಿಸಿದ) ಒಂದು ಸೂಕ್ತವನ್ನು ಹಾಡುತ್ತಾರೆ. ಎಲೈ ನನ್ನ (ಜೀವ) ಆತ್ಮವೇ ಅವರ ಗರ್ಜಿತ ತರ್ಜಿತಮಯವಾದ ಬಲಿಷ್ಠ ಸಂಗೀತಕ್ಕೆ ಅನುಗುಣವಾಗಿ ನೀನು ಭಾವಾವೇಶದಿಂದ ಮುಂದೆ ಮುಂದೆ ನಡೆ. ಏಕೆಂದರೆ, ಅನೃತಕ್ಕಂಜಿ ದ್ರೋಹ ಬಗೆಯದ ಸ್ಫೂರ್ತ ಸಂತೋಷ(ಮಧ್ಯ) ಮದ ಮತ್ತರಾಗಿದ್ದಾರೆ-ಆ ಸ್ಫೂರ್ತ ಸಂತೋಷದ ನಡೆಗೆ ಸಾರ್ವಕಾಲಿಕ ನಿಸರ್ಗದ ಸತ್ಯವು ಸಲಹೆಗಾರವಾಗಿದೆ. ಅವರು ಒಂದು ದೃಢವೂ ಉರಿದೇಳುವುದೂ ಆದ ಬೆಳಕಿನ ಸಹಕರ್ಮಚಾರಿಗಳು ; ಮತ್ತು ಆ ಬೆಳಕಿನ ಪ್ರಣೋದದಲ್ಲಿ ಆ ದೇವತೆಗಳು ತಮ್ಮ ಉದಾತ್ತ (ಉನ್ನತ) ಅತಿಕ್ರಮಣ ಕಾರ್ಯಗಳನ್ನು ಮಾಡುತ್ತ ಹೋಗುತ್ತಾರೆ. ಅವರು ಜೇತಾರರು - ಅವರು ಭರಾಟೆಯಿಂದ ತಮ್ಮ ದಾರಿಯಲ್ಲಿ ನಡೆಯುತ್ತಾರೆ ; ತಮ್ಮನ್ನು ತಾವೇ ರಕ್ಷಿಸಿಕೊಂಡ ಅವರು ತಾವಾಗಿಯೇ ಜೀವಾತ್ಮನನ್ನು ಅನೃತದಿಂದ ರಕ್ಷಿಸುತ್ತಾರೆ. ಏಕೆಂದರೆ ಅವರು ಸಂಖ್ಯಾಬಲಸಂಪನ್ನರು ಹಾಗೂ ತಮ್ಮ ಯೋಗ್ಯತೆಯ ಉಜ್ವಲ ಮಟ್ಟದಲ್ಲಿ ಎಡೆಬಿಡದೇ ಒಬ್ಬರ ಹಿಂದೆ ಒಬ್ಬರಂತೆ ಸಾಲಾಗಿ ಹೋಗುತ್ತಾರೆ. ಮುನ್ನುಗ್ಗುವ ಗೂಳಿಗಳ ಗುಂಪಿನಂತೆ ಅವರು ಆಘಾತ ಪ್ರಘಾತಗಳನ್ನು ಮಾಡುತ್ತಾ ನಡೆಯುತ್ತಾರೆ. ರಾತ್ರಿಗಳು ಅವರ ವಿರುದ್ಧವಾಗಿ ಬರುತ್ತವೆ ; ಆದರವರು ಅವುಗಳ ಮೈಮೇಲೆ ಹತ್ತಿ ದಾಟಿ ಹಾರುತ್ತಾರೆ; ನಮ್ಮ ವಿಚಾರಗಳಲ್ಲವರು ಭೂಮಿಯನ್ನು ವಶಪಡಿಸಿಕೊಂಡಿರುತ್ತಾರೆ ; ಮತ್ತು ಅದರೊಡನೆ ಅವರು ಮೇಲೆ ಹಾರುತ್ತಾರೆ. ಅವರು ಅರೆಬೆಳಗುಗಳಲ್ಲ, ನಪುಂಸಕರಲ್ಲ; ಆದರೆ ಅವರು ಆಕ್ರಮಣ ಮಾಡುವುದರಲ್ಲಿ ಬಲಿಷ್ಠರು, ಇಷ್ಟ ಸಾಧಿಸಿಕೊಳ್ಳುವುದರಲ್ಲಿ ಪ್ರಭಾವಿಗಳು. ಅವರು ಬೆಳಕಿನ ಭರ್ಜಿಗಳನ್ನು ಹಿಡಿದಿದ್ದಾರೆ; ಮತ್ತು ಅವರ ರಣಾಹ್ವಾನಕ್ಕನುಗುಣವಾಗಿ ತನ್ನಿಂದ ತಾನೆ ಸಗ್ಗದ ಬೆಳಕು ನಮ್ಮ ಆತ್ಮಗಳ ಮೇಲೆ ಜೀಳುತ್ತದೆ. ವಿಚಾರ-ದೇವತೆಗಳು ಮೊದಲೇ ರಾತ್ರಿಯನ್ನು ಹುಡುಕಿ ತೆಗೆದಿಟ್ಟಿರುತ್ತಾರೆ. ಯಾವುದರ ಮೂಲಕ? ತಮ್ಮ ಪಳಚ್ಚನೆ ಹೊಳೆದ ಜ್ಯೋತಿಸ್ಸಿನಿಂದ; ರಾತ್ರಿಯ ಮಕ್ಕಳ ಮೇಲೆ ಆ ಜ್ಯೋತಿಸ್ಸನ್ನವರು ಛೂ ಬಿಡುತ್ತಾರೆ. ಪರಸತ್ಯವೇ ಅವರ ಹೊಳೆ ಹೋಳೆವ ಸಾಮರ್ಥ್ಯವು. ವಿಚಾರ-ದೇವತೆಗಳ ರಾಶಿಗಳು ಜೀವಾತ್ಮವನ್ನು ರೂಪಿಸುವ ಕಮ್ಮಾರರು ; ಅದರ ಅಮರತ್ವವನ್ನೂ ಅವರೇ ಸಿದ್ಧ ಮಾಡುತ್ತಾರೆ. ಅವರೇ ತಮ್ಮ ದಾರಿಗಳನ್ನು ನಮ್ಮ ಜೀವನ ರಥದ (ತಮ್ಮ ಕುದುರೆಗಳನ್ನು) ನೊಗಗಳಿಗೆ

ಜಿಗಿಯುತ್ತಾರೆ. ಆ ಕುದುರೆಗಳು ನಾಗಾಲೋಟದಿಂದ - ಗಮ್ಯ ಸ್ಥಳ ಎನ್ನಿಸಿದ ಆನಂದ ಸೀಮೆಗೆ ಅವರಿಂದ ಓಡಿಸಲ್ಪಡುತ್ತವೆ.

ಅನೇಕ ಉಪನದಿಗಳಿರುವ ಪರುಷ್ಣಿ ಎಂಬ ನದಿಯ ನೀರಿನಲ್ಲಿ ಆ ದೇವತೆಗಳು ತಮ್ಮ ಅಂಗಾಂಗಗಳನ್ನು ಮೀಯಿಸುತ್ತಾರೆ. ಅವರು ತಮ್ಮ ದಿವ್ಯ ಉಡುಪುಗಳನ್ನು ಧರಿಸುತ್ತಾರೆ ಮತ್ತು ಈಗ ತಮ್ಮ ರಥಗಳ ಗಾಲಿಗಳಿಂದ ನಿಸರ್ಗದ ಎಲ್ಲ ರಹಸ್ಯ ಗವಿಗಳನ್ನೂ ಒಡೆದು ತೆರೆಯುತ್ತಾರೆ. ಕೆಲವೊಮ್ಮೆ ಅವರು ಸಾವಿರ ಕವಲುಗಳನ್ನುಳ್ಳ ದಾರಿಗಳಲ್ಲಿ ಪಯಣಿಸುತ್ತಾರೆ. ಕೆಲವೊಮ್ಮೆ ಅವರು ನೇರವಾಗಿ ತಮ್ಮ ಗಮ್ಯ ಸ್ಥಳಕ್ಕೆ ಧಾವಿಸುತ್ತಾರೆ. ಕೆಲ ಸಲ ಅವರ ದಾರಿಗಳು ಒಳಗಿರುತ್ತವೆ, ಕೆಲಸಲ ಹೊರ ನಿಸರ್ಗದ ಸಹಸ್ರ ಮಾರ್ಗಗಳನ್ನು ಅವರು ಅನುಸರಿಸುತ್ತಾರೆ. ಲೋಕಯಾಗವು ಆ ವಿಚಾರೇಶ್ವರರ ದೇವತಾತತ್ವದ ಬಹುನಾಮಗಳಿಂದ ಸಾಫಲ್ಯವನ್ನು ಪಡೆಯುತ್ತದೆ-ಅವರ ಲೋಕ ಯಜ್ಞವು ಸಫಲವಾಗುತ್ತದೆ. ಆ ಸಾಫಲ್ಯಕ್ಕೆ ಸತತ ವಿಸ್ತರಣಾಶೀಲವಾದ ಪ್ರಯಾಣವೂ ಕಾರಣವಾಗುತ್ತದೆ.

ಈಗ ಅವರು ತಮ್ಮನ್ನು ನಮ್ಮ ಬಾಳಿನ ನಾಗಾಲೋಟದ ಪ್ರಚೋದಾಶ್ವಗಳನ್ನಾಗಿ ಮಾಡಿಕೊಳ್ಳುತ್ತಾರೆ - ಈಗ ಅವರು ದೇವರುಗಳು ಹಾಗೂ ಆತ್ಮದ ಶಕ್ತಿಗಳು. ಕಟ್ಟಕಡೆಗೆ ಅವರು ಸರ್ವೋಚ್ಚ ಲೋಕ, ದರ್ಶನ ಸ್ವರೂಪಗಳು ಮತ್ತು ಪ್ರಕಾಶ ರೂಪಗಳು ಎನ್ನಿಸಿಕೊಳ್ಳುತ್ತಾರೆ. ಅವರು ತಮ್ಮ ಗುರಿಗಳನ್ನು ತಲುಪಿದ್ದಾರೆ - ಪ್ರಪಂಚದ ಲಯಗತಿಗಳನ್ನು ಎತ್ತಿ ಹಿಡಿಯುತ್ತಾರೆ - ಆಗ ಅವರು ವಸ್ತುಗಳ ಮೂಲ ಚಿಲುಮೆಯ ಸುತ್ತ ಮಂತ್ರಗಾನ ಮಾಡುತ್ತಾ ತಮ್ಮ ವೈಭವಶಾಲಿಯಾದ ಕುಣಿತವನ್ನು ಯೋಜಿಸುತ್ತಾರೆ. ಅವರು ಅತ್ಯುನ್ನತ ಆಕೃತಿಗಳ ನಿರ್ಮಾಪಕರು - ಅವರು ದರ್ಶನದಲ್ಲಿ ಜೀವಾತ್ಮವನ್ನು ವಿಸ್ತರಿಸುತ್ತಾರೆ ಮತ್ತು ಅದನ್ನೊಂದು ದಿವ್ಯಜ್ಯೋತಿಜ್ವಾಲೆಯನ್ನಾಗಿ ಮಾಡುತ್ತಾರೆ. ಏಕೆಂದರೆ ಅವರು ಪರಮಸತ್ಯವನ್ನು ಓಡಿ ಪಡೆಯಬಯಸುವವರು. ಪರಮಸತ್ಯಕ್ಕಾಗಿ ಅವರ ಮಿಂಚುಗಳು ಚೂರಿಯಂತೆ ಹೊಕ್ಕು ಶೋಧ ಮಾಡುತ್ತವೆ. ಅವರು ದ್ರಷ್ಟಾರರು, ಸೃಷ್ಟಿಕರ್ತರು ಹಾಗೂ ಆಜ್ಞಾಪಕರು. ಸ್ವರ್ಗದ ಸಾಮರ್ಥ್ಯ ಹಾಗೂ ಪ್ರಚೋದಗಳಿಂದ ಅವರ ಆಕ್ರಮಣಗಳು ಸ್ಫೂರ್ತವಾಗಿವೆ. ಆದುದರಿಂದ ಅವರು ನಮ್ಮ ವಿಚಾರಗಳಿಂದವು ದೃಢೀಕೃತವಾಗಿ ತಮ್ಮ ದಾರಿಯಲ್ಲಿ ನಮ್ಮನ್ನು ಆತ್ಮವಿಶ್ವಾಸದಿಂದ ಹೊತ್ತುಕೊಂಡು ವೇಗವಾಗಿ ಹೋಗುತ್ತಾರೆ. ಮನಸ್ಸು ಅವರಿಂದ ತುಂಬಿದೊಡನೆ ಅದನ್ನು ದೇವತ್ವದೆಡೆಗೆ ಒಯ್ಯಲಾಗುತ್ತದೆ. ಏಕೆಂದರೆ ಅವರ ಹತ್ತಿರ ಜಾಜ್ವಲ್ಯ ಮಾನವಾದ ಸ್ಫೂರ್ತಿಪಥವಿದೆ.

ಅವರ ಜನ್ಮಸ್ಥಳವನ್ನು ತಿಳಿದಿರುವವರಾರು? ಅಥವಾ ಅವರ ಉನ್ನತ ಧನ್ಯತಾ ಪಂಕ್ತಿಗಳಲ್ಲಿ ಕುಳಿತುಕೊಂಡಿರುವವರಾರು? ಯಾರು ಅಮುತ್ರ ತನ್ನ ಗೆಳೆಯನನ್ನು ಹುಡುಕಲು ಹೋದಾನು? ತನ್ನ ಆತ್ಮದಲ್ಲಿ ಒಬ್ಬಳು ತಾಯಿಯು ಬಣ್ಣಬಣ್ಣದವರನ್ನಾಗಿ ಹೊತ್ತು ಹೆತ್ತಳು. ಅವರಿಗೆ ಅವಳ ಬಗ್ಗೆ ಇತರರು ಹೇಳಿದರು. ಅವರ ತಂದೆಯು ಬಲಾತ್ಕಾರಶೀಲನು-ಅವನ ಪ್ರೇರಣೆಯು ಹುಟ್ಟಿದ್ದೆಲ್ಲವನ್ನೂ ನೂಕಿಕೊಂಡು ಹೋಗುತ್ತದೆ- ಅವು ಅವನನ್ನು ಆವಿಷ್ಕರಿಸಿ ತೋರಿಸುತ್ತವೆ. ಏಳೇಳರಂತೆ ವಿಚಾರದೇವತೆಗಳು ನನ್ನೆಡೆಗೆ ಬಂದರು ಮತ್ತು ಏಳು ಸಲ ಅವರು ನೂರುಪಟ್ಟು ಕೊಟ್ಟರು. ಅವರಿತ್ತ ನನ್ನ ಹೊಳೆವ ವಿಚಾರ ಗೋವ್ರಜಗಳನ್ನು ಮೀಯಿಸುವೆನು ; ನನ್ನ ಆತ್ಮನದಿಯಲ್ಲಿ ನನ್ನ ವೇಗವನ್ನು ಚೊಕ್ಕಗೊಳಿಸುವೆನು.

ನೋಡಿರೋ! ಆ ದೇವತೆಗಳು ತಮ್ಮ ಸಹಮತೀಯರೊಡನೆ ಮತ್ತು ಸಹಚರರೊಡನೆ ಮುಂದೆ ಮುಂದೆ ಹೋಗುತ್ತಲೇ ಇದ್ದಾರೆ. ನಾವು ನಮ್ಮ ವಿಚಾರ ಪದವಿನ್ಯಾಸದೊಡನೆ ಅವರನ್ನು ಅನುಸರಿಸಿ ಹೋಗೋಣ. ಏಕೆಂದರೆ ಅವರಲ್ಲಿ ಅವಿನಾಶಿಯಾದ ಸೃಷ್ಟಿಬೀಜಗಳಿವೆ ಮತ್ತು ಅಮರವಾದ ರೂಪಗಳ ಬಿತ್ತಿಗೆ ಕಾಳುಗಳಿವೆ; ಹಾಗೂ ಇವನ್ನವರು ಆತ್ಮದ ಗದ್ದೆಗಳಲ್ಲಿ ಬಿತ್ತಿದರೆ ವೈಶ್ವತ್ರಿಕ ಜೀವನ ಮತ್ತು ಅತಿಮಾನಸ ಆನಂದಗಳು ಫಲಿಸುವ ಸುಗ್ಗಿ ಬರುತ್ತದೆ. ಅವರು ನಮ್ಮನ್ನು ನಿಂದಿಸುವ ಎಲ್ಲವನ್ನೂ ನಮ್ಮ ಮಹಾತ್ವಾಕಾಂಕ್ಷೆಗಳನ್ನು ಹಾಸ್ಯ ಮಾಡುವ ಎಲ್ಲವುಗಳನ್ನೂ ದೂರ ಮಾಡುವರು; ಹಾಗೇ ನಮ್ಮನ್ನು ಪರಿಮಿತಿಗೊಳಪಡಿಸುವ ಎಲ್ಲವನ್ನೂ ದಾಟಿಸಿ ನಮ್ಮನ್ನು ಮುಂದಕ್ಕೆ ಒಯ್ಯುವರು. ಅವರು ಆತ್ಮದ ಎಲ್ಲ ತಪ್ಪುಗಳನ್ನೂ ಮೂಕತನವನ್ನೂ ಮತ್ತು ಅಂಥ ಇತರ ದಾರಿದ್ರ್ಯಗಳೆಲ್ಲವನ್ನೂ ನಾಶಗೊಳಿಸುವರು. ಏಕೆಂದರೆ, ಸ್ವರ್ಗದ ಹೇರಳ ಸಂಪತ್ತಿನ ಮಳೆ ಮತ್ತು ಜೀವನ ನದಿಗಳನ್ನು ಹರಿಯಿಸುವ ಘನಗರ್ಜಿತ ಪ್ರವಾತವು ಅವರದ್ದು. ಅವರ ಗುಡುಗುಗಳು ದೇವತೆಗಳ ಸೂಕ್ತಗಾನವು ಹಾಗೂ ಪರಸತ್ಯದ ಘೋಷಣೆಗಳು. ಉನ್ನತ ಸುಖಕರ ಪಥದಲ್ಲಿ ಹೋಗಲು ನಮಗಿರುವ ಕಣ್ಣೆಂದರೆ ಅವರೇ ಮತ್ತು ಅವರ ಅನುಯಾಯಿಯು ಎಡಹುವುದಿಲ್ಲ ಅವನಿಗೆ ನೋವು ನುರಿಗಳೂ ಹಾನಿಗಳೂ ಉಂಟಾಗುವುದಿಲ್ಲ - ಅವನಿಗೆ ಕ್ಷಯವಿಲ್ಲ, ಸಾವಿಲ್ಲ. ಅವರ ಅಪಾರ ಶ್ರೇಯಃಸಮೃದ್ಧಿಯು ಅವಿನಾಶಿ, ಅವರ ಸುಖಸೌಕರ್ಯಗಳು ಕಡಿಮೆಯಾಗುವುದಿಲ್ಲ. ಅವರು ಮಾನವನನ್ನು ದ್ರಷ್ಟಾರನನ್ನಾಗಿಯೂ ರಾಜನನ್ನಾಗಿಯೂ ಮಾಡುವರು. ಅವರ ಆಯಾಮವೆಂದರೆ ದಿವ್ಯಸೂರ್ಯನ ಜ್ವಲನೆ. ಅವರು ನಮ್ಮನ್ನು ಅಮೃತತ್ವದ ಆಸನಗಳಲ್ಲಿ ಕುಳ್ಳಿರಿಸುವರು. ಯಾವುದು ಹಳೆಯದೋ ಯಾವುದು ಹೊಸದೋ ಜೀವಾತ್ಮ ಸಂಭವವಾದುದಾವುದೋ ಅಭಿವ್ಯಕ್ತಿಯನ್ನು ಯಾವ ಯಾವುದು ಬಯಸಿ ಹುಡುಕಿಕೊಂಡು ಹೋಗುವುದೋ ಅವೆಲ್ಲವುಗಳಿಗೂ ಅವರು ಪ್ರೇರಕರಾಗಿದ್ದಾರೆ. ಅವರು ಸ್ವರ್ಗದ ಆದಿ ಮಧ್ಯ ಅಂತ ಪ್ರದೇಶಗಳಲ್ಲಿ ನಿಂತಿದ್ದಾರೆ. ಅವರು ಅತ್ಯುಚ್ಚ ಸತ್ಯ ಪದದಿಂದ ಕೆಳಗಿಳಿದು ಬಂದಿದ್ದಾರೆ. ಅವರು ಸತ್ಯ ಸಂಭೂತರು. ಅವರು ಮನಸ್ಸಿನ ಜ್ಯೋತಿರ್ಮಯ ನೇತಾರರು ; ಸಿಹಿಯಾದ ಆನಂದಮಧ್ಯವನ್ನು ಕುಡಿದು ನಮಗೆ ಅತ್ಯುದಾತ್ತ ಸ್ಫೂರ್ತಿಯನ್ನು ನೀಡುತ್ತಾರೆ. ದಿವ್ಯೆಯಾದ ಹೆಂಗಸು ಅವರೊಡನೆ ಇದ್ದು ಹಾನಿಯನ್ನು ತೃಷ್ಣೆಯನ್ನೂ ಆಸೆಯನ್ನೂ ನಮ್ಮಿಂದ ದೂರೀಕರಿಸಿ ದೇವತಾತತ್ವದಂತೆ ನಮ್ಮ ಮನಸ್ಸನ್ನು ರೂಪಿಸುತ್ತಾಳೆ. ನೋಡಿರಿ-ಅಲ್ಲಿ ಅವರು ಪರಸತ್ಯಜ್ಞರು, ದ್ರಷ್ಟಾರರು, ಅವರನ್ನು ಪರಸತ್ಯವು ಸ್ಫೂರ್ತಿವಂತರನ್ನಾಗಿ ಮಾಡುವುದು-ಅವರ ಅಭಿವ್ಯಕ್ತಿಯು ಅತಿದೊಡ್ಡದು, ಅತಿ ಆಭೋಗವುಳ್ಳದ್ದು, ಹರಡುವುದರಲ್ಲಿ ಅದು ಮಹಾಽಭೋಗ ಸಂಪನ್ನವಾಗಿದೆ ಮತ್ತು ಸದಾ ಯೌವನಯುಕ್ತ ಹಾಗೂ ಅಮರ !

❖❖

# ವೇದದ ಅರ್ಥವಿವರಣೆ

## ಹಿಂದಿನ ಒಂದು ಟೀಕೆಗೆ* ಪ್ರತ್ಯುತ್ತರ

ನಿಮ್ಮ ಸಮಿಕ್ಷಾ ಲೇಖನದಲ್ಲಿ "ಆರ್ಯ"ದ ಕುರಿತು ನೀವು ವ್ಯಕ್ತಪಡಿಸಿದ ಮೆಚ್ಚಿಕೆಯ ಮಾತುಗಳಿಗೆ ಕೃತಜ್ಞತೆ ವ್ಯಕ್ತಪಡಿಸುತ್ತ, ನನ್ನ "ವೇದರಹಸ್ಯ"ದ ಮೇಲಿನ ನಿಮ್ಮ ವಿಮರ್ಶೆಗೆ ಉತ್ತರವನ್ನು ನೀಡಲು, ಅಥವಾ ನನ್ನ ಅಭಿವ್ಯಕ್ತಿಯ ಕೊರತೆಯಿಂದಲೋ "ಆರ್ಯ"ದಲ್ಲಿಯ ನನ್ನ ಲೇಖನದ ಸಂಕ್ಷಿಪ್ತತೆಯ ಕಾರಣದಿಂದಲೊ ನಿಮಗಾದ ತಪ್ಪು ಕಲ್ಪನೆಯನ್ನು ನಿವಾರಿಸುವ ನಿಟ್ಟಿನಲ್ಲಿ ನನ್ನ ನಿಲುವನ್ನು ಸ್ಪಷ್ಟಪಡಿಸಲು ಅವಕಾಶ ನೀಡುವಿರಾ ಎಂದು ನಮ್ರತೆಯಿಂದ ಕೋರುತ್ತೇನೆ - ಅದೂ ಇಡೀ ಜಗತ್ತು ಬ್ರಹದ್ಗಾತ್ರದ ಜನಹತ್ಯಾ ಸಂಘರ್ಷದಲ್ಲಿ ತೊಡಗಿ ಯುರೋಪಿನ ತಲ್ಲಣಕ್ಕೆ ಕಾರಣವಾಗಿರುವ ಹೊತ್ತಿನಲ್ಲಿ ತಾವು ಅಷ್ಟೊಂದು ಸ್ಥಳಾವಕಾಶ ನೀಡಲು ಸಾಧ್ಯವಾದರೆ.

ನಿಜವಾಗಿಯೂ "ಯಾವ ಜ್ಞಾನಕ್ಕೆ ಮೂಲವನ್ನು ಹುಡುಕಲು ಸಾಧ್ಯವಿಲ್ಲವೋ ಯಾವುದರ ಮೂಲವನ್ನು ಹಿಂದಿನ ಆಕರಗಳಿಗೆ ಹೊಂದಿಸಲು ಅಸಾಧ್ಯವೋ ಅಂಥ ಜ್ಞಾನವು ಅವಶ್ಯವಾಗಿ ಉದಾಸೀನತೆಗೆ ಪಾತ್ರ ಅಥವಾ ತ್ಯಾಜ್ಯ" ಎಂದು ನಾನೆಲ್ಲೂ ಹೇಳಲಿಲ್ಲ. ಅದೊಂದು ರಾಕ್ಷಸೀ ಸೂಚನೆ. ನನ್ನ ತಾತ್ಪರ್ಯ ಬೇರೆಯೇ ಆಗಿತ್ತು-ಅದೆಂದರೆ ಅಂಥ ಜ್ಞಾನವು ಪ್ರಬುದ್ಧ ತತ್ತ್ವಶಾಸ್ತ್ರವನ್ನೂ ಮನಃಶಾಸ್ತ್ರವನ್ನೂ ಹೇಳಿದಲ್ಲೆಲ್ಲಾ ಐತಿಹಾಸಿಕ ವಿವರಣೆಯು ಅಗತ್ಯವೆಂಬುದಷ್ಟೇ ಆಗಿತ್ತು. ನಾವು ಯುರೋಪೀಯ ಕಲ್ಪನೆಯನ್ನು ಸ್ವೀಕರಿಸಿದರೆ - ಆ ಪ್ರಕಾರ ಮಾನವರಲ್ಲಿ ಜ್ಞಾನ ವಿಕಾಸವಾಗುತ್ತಾ ಬಂದಿದೆ ಎಂಬುದನ್ನು ಒಪ್ಪಿದರೆ-ನಾವು ಬ್ರಹ್ಮವಾದದ ಆಕರವನ್ನು ತದಿತರ ಮೂಲದಲ್ಲಿ ಹುಡುಕಬೇಕಾದೀತು ಅರ್ಥಾತ್ ಹಿಂದಿನ ದ್ರಾವಿಡ ಸಂಸ್ಕೃತಿಯಲ್ಲಿ ಕಾಣಬೇಕಾದೀತು ಅಥವಾ ಹಿಂದಿನ ದಾಖಲೆ ನಷ್ಟವಾಗಿರಬೇಕು ಇಲ್ಲವೇ ವೇದದಲ್ಲಿಯೇ ಇರಬೇಕು-ಎಂದು ಅಭಿಪ್ರಾಯ ಪಡಬೇಕಾದೀತು. ನಾನು ಹೊರಟಿದ್ದು ಜ್ಞಾನವಿಕಾಸ ಸೂತ್ರವನ್ನೂ ಆರ್ಯದ್ರಾವಿಡಭೇದ ಸಿದ್ಧಾಂತವನ್ನೂ ಖಂಡಿಸಲೆಂದೇ. ನನ್ನ ಪ್ರಕಾರ ಜ್ಞಾನವು ಕಾಲಾವಧಿಯ ಆದಿಯಿಂದ ಅಂತ್ಯದವರೆಗೆ ಒಂದೇ ಸಮನಾಗಿ ಸಾಗುತ್ತದೆ ; ಹಾಗೇ ಆರ್ಯದ್ರಾವಿಡ ಕುಲಗಳು ಭಿನ್ನ ಎಂಬುದಕ್ಕೆ ಸಮರ್ಥ ಆಧಾರಗಳಿಲ್ಲ. ಈ ನನ್ನ ತರ್ಕವು ಅನಂತ್ಯ ದೋಷಕ್ಕೆ ಹೇಗೆ ಗುರಿಯಾಗುವುದೆಂಬುದು ನನಗರಿಯದು. ವಿಕಾಸವಾದದ ಕಲ್ಪನೆ ಮತ್ತು ತತ್ಫಲವಾದ ಪ್ರಗತಿಶೀಲ ಕಾರ್ಯಕಾರಣ ಸಿದ್ಧಾಂತವು ಮಾತ್ರ ಉಕ್ತ ದೋಷಕ್ಕೆ ಗುರಿಯಾದೀತು - ಅಷ್ಟೆ. ವೈದಿಕ ಮತಧರ್ಮದ ಆದಿ ಯಾವುದೆಂಬ ಪ್ರಶ್ನೆಗೆ ಆಧಾರರಾಹಿತ್ಯದ ದೆಸೆಯಿಂದ ಈಗ ಉತ್ತರ ಸಿಕ್ಕದು. ಅದರ ಅರ್ಥವು ಅದಕ್ಕೆ ಮೂಲವೇ ಇರಲಿಲ್ಲ ಎಂದೋ ಶ್ರುತ್ಯಾವಿಷ್ಕಾರಕ್ಕೆ ಮಾನವ ಸಮಾಜವು ಸಿದ್ಧವಾಗಿತ್ತು ಎಂದೋ ಆಗುವುದಿಲ್ಲ.

---

* ಅಗಸ್ಟ್ ೨೨, ೧೯೧೪ ರಲ್ಲಿ "The Hindu" ಎಂಬ ಮದ್ರಾಸ್ ಪತ್ರಿಕೆಯಲ್ಲಿ ಪ್ರಕಟವಾದ ಒಂದು ಪತ್ರವು - ಸಂ.

ಪುನಃ, ನಾನು ವೇದಗಳ ಕಾರ್ಮಿಕ ಭೌತವಾದಕ್ಕೆ ವಿರುದ್ಧವಾಗಿ ಉಪನಿಷತ್ತುಗಳು ಬಂಡೆದ್ದವೆಂಬ ವರ್ಣನೆಯು ನನ್ನ ಕಲ್ಪನೆ ಎಂದು ಖಂಡಿತವಾಗಿ ಹೇಳಬಯಸಿರಲಿಲ್ಲ. ನನ್ನ ಅಭಿಪ್ರಾಯವು ಅದಾಗಿದ್ದರೆ ಹಿಂದಿನ ಶ್ರುತಿಯನ್ನು ಸ್ಫೂರ್ತ ಪವಿತ್ರ ಗ್ರಂಥವೆಂದು ಪರಿಗಣಿಸಲು ನನಗೆ ಸಾಧ್ಯವಾಗುತ್ತಿರಲಿಲ್ಲ. ಉಪನಿಷತ್ತುಗಳನ್ನು ವೇದಾಂತವೆಂದು ಲೆಕ್ಕಿಸಲೂ ಸಾಧ್ಯವಾಗುತ್ತಿರಲಿಲ್ಲ ಮತ್ತು ನಾನು ವೇದರಹಸ್ಯದ ಬಗೆಗೆ ತೊಂದರೆ ತೆಗೆದುಕೊಳ್ಳುತ್ತಲೂ ಇರಲಿಲ್ಲ. ಅದು ಯುರೋಪೀಯ ಸಂಶೋಧಕರು ತಾಳಿದ ನಿಲುಮೆ; ನಾನದನ್ನು ತಾರ್ಕಿಕ ಫಲವೆಂದಷ್ಟೇ ಸ್ವೀಕರಿಸಿದ್ದೆ - ಏಕೆ? ಯುರೋಪೀಯ ಯಾ ಭಾರತೀಯ ಸಾಮಾನ್ಯ ವೇದಾರ್ಥವಿವರಣೆಯು ಸಾಧ್ಯವಾಗಲೆಂದು. ಯುರೋಪೀಯ ವಿದ್ವತ್ತೆಯು ಸ್ಥಾಪಿಸಿದಂತೆ ವೈದಿಕ ಸೂಕ್ತಗಳು ಸಂತೋಷದಿಂದ ಕುಣಿವ ವಿಷಯ ಲಂಪಟ ಬರ್ಬರರ ರಚನೆಯಾಗಿದ್ದರೆ ಉಪನಿಷತ್ತುಗಳನ್ನು "ಬಂಡಾಯಗಳೆಂದು.... ಪರಿಗಣಿಸಬೇಕಾಗಿತ್ತು- ವೇದಗಳ ಕಾರ್ಮಿಕ (ಕರ್ಮಠ) ಭೌತವಾದದ ವಿರುದ್ಧವಾದ ದಂಗೆಯೆಂದು ಹೇಳಬೇಕಾಗುತ್ತಿತ್ತು." ಪ್ರತಿಜ್ಞಾವಾಕ್ಯ ಮತ್ತು ನಿಗಮನವಾಕ್ಯಗಳೆರಡರಿಂದಲೂ ನಾನು ಭಿನ್ನಾಭಿಪ್ರಾಯ ತಾಳಿದ್ದೇನೆ ಮತ್ತು ನಾನು ಕೊನೆಯದಾಗಿ ವರ್ಣಿಸಿದ್ದೆಂದರೆ ಕೇವಲ ಉಪನಿಷತ್ತುಗಳಲ್ಲದೆ ಆಮೇಲಿನ ಎಲ್ಲ ವಾಙ್ಮಯರೂಪಗಳೂ ವೇದ ಮತಧರ್ಮದ ವಿಕಾಸ, ವೃದ್ಧಿ ಎಂದು ; ಅದರ ತತ್ವಗಳಿಗೆ ವಿರುದ್ಧವಾಗಿ ಇವು ಹುಟ್ಟಿಕೊಂಡವೆಂದು ನಾನು ಹೇಳಿಲ್ಲ. ಭಾರತೀಯ ಸಿದ್ಧಾಂತವು ವೇದವನ್ನು ಯಾಜ್ಞಿಕ ಸೂಕ್ತಗಳೆಂದೂ ಹಾಗೇ ಗೌರವಾರ್ಹವಾದ ಜ್ಞಾನಕೋಶವೆಂದೂ ತಿಳಿದರೆ ಮೇಲೆ ಹೇಳಿದ ತೊಂದರೆಯನ್ನು ತಪ್ಪಿಸುತ್ತದೆ. ಅದು ಎರಡು ಪ್ರಾಚೀನ ಸತ್ಯಗಳನ್ನು ಪರಿಣಾಮಕಾರಿಯಾಗಿ ಹೊಂದಿಸದೆ ಒಟ್ಟಿಗೆ ಇಟ್ಟು ಬಿಡುತ್ತದೆ. ನನ್ನ ಪ್ರಕಾರ, ಯಾಜ್ಞಿಕ ಭೌತವಾದವನ್ನು ಹೊರನೋಟದಿಂದ ಕೂಡಾ ಕಿತ್ತೆಸೆದು ಸಾಂಕೇತಿಕ ಕರ್ಮಕಾಂಡವೆಂದರೆ ವೇದಕ್ಕೆ ಸರಿಯಾದ ಅರ್ಥವನ್ನು ಹೇಳಿದಂತಾಗುತ್ತದೆ. ಆತ್ಮಜ್ಞಾನಕ್ಕೆ ಕರ್ಮಕಾಂಡವು ಅನಿವಾರ್ಯವಾದ ಒಂದು ಸೋಪಾನ ಎಂದು ಹೊರ ಹೊರಗೆ ಪರಿಗಣಿತವಾಗಿದ್ದರೂ ಅದನ್ನು ಸಾಂಕೇತಿಕ ಕರ್ಮಾಚಾರವೆಂದೇ ತಿಳಿಯಲಾಗುತ್ತಿತ್ತು. ಅದೊಂದು ಮತಧಾರ್ಮಿಕ ಶ್ರದ್ಧಾಸ್ಥಾನ ಮಾತ್ರ. ಈ ಮಾತನ್ನು ನಾನು ಅಲ್ಲಗಳೆಯುವುದಿಲ್ಲ. ಆದರೆ ಅದು ಬುದ್ಧಿಗೆ ತರ್ಕಶುದ್ಧವಾಗಿ ಕಂಡದ್ದರಿಂದ ನಾನು ಬೌದ್ಧಿಕ ಶೋಧದ ಮಾರ್ಗವನ್ನೇ ಹಿಡಿದೆನು. ಕರ್ಮಕಾಂಡವನ್ನು ಹೀಗೆ ಅರ್ಥೈಸಿದರೆ ಮಾತ್ರ-ಅರ್ಥಾತ್-ಅದು ಹೇಗೆ ಉನ್ನತ ಜ್ಞಾನಕ್ಕೆ ಸಾಧನವಾದೀತು. ಅದಕ್ಕೆ ಸಹಾಯಕವಾದೀತು, ಮನುಷ್ಯನನ್ನು ಸಿದ್ಧನನ್ನಾಗಿ ಮಾಡೀತು ಯಾ ಅಂಥ ಜ್ಞಾನಕ್ಕೆ ತಂದು ಮುಟ್ಟಿಸೀತು ಎಂದು ಮಾಡುವ ಅರ್ಥವಿವರಣೆ. ಈ ಮಾರ್ಗ. ಇಲ್ಲವಾದರೆ ಸೈದ್ಧಾಂತಿಕವಾಗಿ ವೇದವನ್ನೆಷ್ಟು ಭಯಭಕ್ತಿಗಳಿಂದ ನೋಡಿದರೂ ವ್ಯವಹಾರದಲ್ಲಿ ಅದು ಅನಿವಾರ್ಯವೆಂದಾಗಲಿ ಸಹಾಯಕವೆಂದಾಗಲಿ ಸಿದ್ಧವಾಗದೆ ಕಟ್ಟಕಡೆಗೆ ಈಗ ಆಗಿರುವ ಹಾಗೆ ವಸ್ತುತಃ ಮೂಲೆಗೊತ್ತಲ್ಪಟ್ಟು ಕಡೆಗಣಿಸಲ್ಪಡುತ್ತದೆ. ಈಗ ಆಗಿರುವುದು ಹಾಗೇ.

ಋಗ್ವೇದದ ಕೆಲವು ಸೂಕ್ತಗಳಿಗೆ ಕರ್ಮಾರ್ಥ್ಯೇತರ ವಿವರಣೆಯನ್ನು ಕೊಟ್ಟದ್ದು ನನಗೆ ಗೊತ್ತಿದೆ. ಯುರೋಪೀಯ ವಿದ್ವಾಂಸರು ಕೂಡಾ "ಅನಂತರದ ಸೂಕ್ತಗಳಲ್ಲಿ" ಉನ್ನತತರ ಮತಧಾರ್ಮಿಕ ಹಾಗೂ ಆಧ್ಯಾತ್ಮಿಕ ಕಲ್ಪನೆಗಳಿವೆ ಎಂಬುದನ್ನು ಒಪ್ಪುತ್ತಾರೆ. ತತ್ವಶಾಸ್ತ್ರೀಯ ಸಿದ್ಧಾಂತಗಳ ಸಮರ್ಥನೆಗೆ ಪ್ರತ್ಯೇಕ ಪಾದಗಳನ್ನು ಉದ್ಧರಿಸಿ ಹೇಳುತ್ತಾರೆ - ಎಂಬುದನ್ನೂ ನಾನು ಬಲ್ಲೆನು. ನಾನು ಹೇಳುವುದಿಷ್ಟೆ: ಅಂಥ ಅಪವಾದಾತ್ಮಕ ಉಪಭೇದಗಳು ನಮ್ಮ ಕೈಯಲ್ಲೀಗ ಇರುವ ಅರ್ಥವಿವರಣೆಗಳಿಗೆ ಬೇರೆ ಅರ್ಥ ಕೊಟ್ಟು ಸೂಕ್ತಗಳ ಸಾಮಾನ್ಯ ಧಾಟಿ ಮತ್ತು

ಸಾರಾಂಶಗಳನ್ನು ಅರ್ಥಶಃ ಬದಲಾಯಿಸಲಾರವು ಎಂಬುದೇ ಆಗಿದೆ. ಆ ಅರ್ಥವಿವರಣೆಗಳೊಡನೆ ನಾವು ಇಡಿ ಋಗ್ವೇದವನ್ನು, ಉಪನಿಷತ್ತುಗಳನ್ನು ಇಡಿಯಾಗಿ ಬಳಸಿಕೊಂಡಂತೆ ಬಳಸಿಕೊಳ್ಳಲಾರೆವು. ನಾನೀಗ ಕೈಗೊಂಡದ್ದು ವೇದವನ್ನು ಉನ್ನತ ಆಧ್ಯಾತ್ಮಿಕ ತತ್ವಜ್ಞಾನದ ಆಧಾರವೆಂದು ತಿಳಿದು ಇಡಿಯಾಗಿ ಮತ್ತು ಅದರ ಸಾಮಾನ್ಯ ಲಕ್ಷಣಗಳಿಗನುಗುಣವಾಗಿ ಅರ್ಥೈಸುವ ಕೆಲಸವನ್ನು. ಇಡೀ ವೇದವನ್ನು ಆಧ್ಯಾತ್ಮಿಕಾರ್ಥಕವೆಂದು ವಿವರಿಸಲು ಬೇಕಾದ ಸಹಪ್ರವಾಹ ಪ್ರವೃತ್ತಿಯೊಂದು ಇದ್ದೇ ಇದೆ ಎಂಬುದನ್ನು ನಾನು ಅಭಿಜ್ಞಾಪಿಸುತ್ತೇನೆ. ಇಷ್ಟು ಆಧ್ಯಾತ್ಮಿಕ ಪ್ರವೃತ್ತಿಯುಳ್ಳ ಒಂದು ರಾಷ್ಟ್ರದಲ್ಲಿ ಅಂಥ ಪ್ರಯತ್ನವು ನಡೆಯಲೇ ಇಲ್ಲವೆಂಬುದು ಒಂದು ವಿಚಿತ್ರ ಸಂಗತಿಯಾಗಿದೆ. ಆದರೆ ಇನ್ನೂ ಅಂಥ ಸಹಪ್ರವಾಹಗಳಿದ್ದೇ ಇವೆ ಮತ್ತು ಅವುಗಳನ್ನು ಸಾರ್ವಜನಿಕವಾಗಿ ಅಭಿಜ್ಞಾಪಿಸಲಿಲ್ಲ. ಏಕೆಂದರೆ ಭಾರತೀಯ ಸಾಮಾನ್ಯ ಬುದ್ಧಿಯು ಮಾಡಿದ್ದು ದ್ವಿವಿಧ ವಿವರಣೆಯನ್ನಷ್ಟೇ. ಸಾಯಣನದೊಂದು ಹಾಗೂ ಯುರೋಪೀಯರದೊಂದು. ಆ ಸಾಮಾನ್ಯಾಭಿಪ್ರಾಯಕ್ಕೆ-ದೂರಾಗಿ ನಿಂತ ನನಗೆ ಸಂಬಂಧಿಸಿರುವುದು ಉಕ್ತ ವಿವರಣದ್ವಯವಷ್ಟೇ.

ಪ್ರಾಚೀನ ವೇದಾಂತಿಗಳು ಅನುಸರಿಸಿದ ಪದ್ಧತಿ ಹಾಗೂ ಫಲಿತಗಳು ಸಾಯಣ ಪದ್ಧತಿ - ಫಲಿತಗಳಿಂದ ಸಂಪೂರ್ಣವಾಗಿ ಭಿನ್ನ ಎಂಬುದನ್ನು ನಾನು "ಆರ್ಯ ಪತ್ರಿಕೆಯ" ಎರಡನೆಯ ಹಾಗೂ ಮೂರನೆಯ ಸಂಚಿಕೆಗಳಲ್ಲಿ ವಿವರಿಸುತ್ತೇನೆ-ಸಿದ್ಧಾಂತವನ್ನು ಬದಿಗಿಟ್ಟರೆ ವ್ಯಾವಹಾರಿಕವಾಗಿ ಸಾಯಣನ ವ್ಯಾಖ್ಯಾನದ ಪರಿಣಾಮವೇನು? ಮನದ ಮೇಲೆ ಅದು ಬೀರುವ ಸಾಮಾನ್ಯ ಅಭಿಪ್ರಾಯವೆಂತಹದು? ವೇದವೆಂದರೆ ಒಂದು ಮಹಾವಿರ್ಭಾವ, ಒಂದು ಪರಮೋಚ್ಚ ಜ್ಞಾನಗ್ರಂಥವು ಎಂಬ ಭಾವನೆಯನ್ನದು ಮೂಡಿಸುತ್ತದೆಯೇ? ತದ್ವಿರುದ್ಧವಾಗಿ ಯುರೋಪೀಯ ವಿದ್ವಾಂಸರು ಸ್ವೀಕರಿಸಿದ ಆ ವಿವರಣೆಯಂತೆ - ಅದನ್ನಾಧರಿಸಿ ಅವರು ಭಟ್ಟಿ ಇಳಿಸಿದ ಸಿದ್ಧಾಂತಗಳಂತೆ ಅಸಂಸ್ಕೃತ ಆರಾಧಕರಾಗಿ ಅಗ್ನಿದೇವತೆಗಳು, ವೃಷ್ಟಿ ದೇವತೆಗಳು, ವಾಯು ದೇವತೆಗಳು, ಉಷೋ ದೇವತೆಗಳು, ರಾತ್ರಿ ದೇವತೆಗಳು, ಭೂಮ್ಯಾಕಾಶ ದೇವತೆಗಳು ಮುಂತಾದ ಸಂದಿಗ್ಧ ಮನೋವೃತ್ತಿಯ ಸ್ನೇಹಪರದೇವತೆಗಳನ್ನು ಐಶ್ವರ್ಯ, ಆಹಾರ, ಎತ್ತುಗಳು, ಕುದುರೆಗಳು. ಬಂಗಾರ, ಶತ್ರು ಸಂಹಾರ-ತಮ್ಮ ನಿಂದಕರ ಸಂಹಾರವನ್ನು ಕೂಡಾ-ಯುದ್ಧದಲ್ಲಿ ಗೆಲುವು ಹಾಗೂ ಜಿತರ ಆಸ್ತಿಗಳ ಲೂಟಿ ಮುಂತಾದವುಗಳಿಗಾಗಿ ಪ್ರಾರ್ಥನೆ ಸಲ್ಲಿಸುತ್ತಿದ್ದ ಚಿತ್ರವು ನಮ್ಮೆದುರು ನಿಲ್ಲುವುದಿಲ್ಲವೇ? ಮತ್ತು ಅದೇ ನಿಜವೆಂದಾದರೆ ಅಂಥ ಸೂಕ್ತಗಳು ಬ್ರಹ್ಮವಿದ್ಯಾಭ್ಯಾಸಕ್ಕೆ ಅನಿವಾರ್ಯ ತರಬೇತೆಂದು ಹೇಗಾದೀತು? ಒಂದು ವೇಳೆ ಕರ್ಮಕಾಂಡವು ಜ್ಞಾನಕಾಂಡಕ್ಕೆ ಪೂರ್ವಸಿದ್ಧತೆಯಾಗಬೇಕೆಂದಾದರೆ, ಹಳೆಯ ಯಹೂದ್ಯರ ಹಳೆಯ ಒಡಂಬಡಿಕೆಯ ಪ್ರಥಮ ಪಂಚ ಸಂಪುಟಗಳಲ್ಲಿರುವಂತೆ-ಅರ್ಥಾತ್ ಲಘು ಇವಾಂಜಲ ಕ್ರೈಸ್ತತ್ವ ಸಾದನೆಗೆ ಬೇಕೆಂದು ಹೇಳಲಾಗಿರುವಂತೆ-ಅತ್ಯಂತ ಭೌತಿಕ ಹಾಗೂ ಅಹಂಭಾವಿಕ ಪ್ರವೃತ್ತಿಗಳನ್ನು ನಿವೇದಿಸಿಯೋ ಯಾ ವೆಚ್ಚ ಮಾಡಿ ಮುಗಿಸುವುದರ ಮೂಲಕ ಅವನ್ನು ಇಲ್ಲದಂತೆ ಮಾಡುವ ವ್ಯಾಹತಿಗಳಿಂದಲೋ ಉಕ್ತ ನಿರ್ಣಯದ ಸಮರ್ಥನೆಗಾಗಿ ಹೇಳಬೇಕಾದೀತು. ಕರ್ಮಕಾಂಡವು ಯಜ್ಞದಲ್ಲಿಯ ಯಾಂತ್ರಿಕ ಗುಣಗಳಿಂದ ಬ್ರಹ್ಮವಿದ್ಯೆಗೆ ಸಿದ್ಧತೆಯಾಗದು-ಯಾವ ಅನುಭವಗಳಿಗೆ ಅವು ಬೀಗದ ಕೈಯಾಗಿರುವುವೋ ಮತ್ತು ಯಾವ ಸಮಗ್ರ ಜ್ಞಾನಕ್ಕೆ ಅವು ಸಂಕೇತಗಳಾಗಿವೆಯೋ ಲೋಕೋತ್ತರ ಬ್ರಹ್ಮ ಸಾಕ್ಷಾತ್ಕಾರಕ್ಕೆ ಯಾವುವು ವಿಶ್ವದಲ್ಲಿ ಕಾರಣಗಳಾಗುವುವೋ ಆ ಕಾರಣಗಳಿಂದ ಅಂಥ ಕರ್ಮಕಾಂಡೀಯ ಯಜ್ಞ ಯಾಗಾದಿಗಳು ಬ್ರಹ್ಮವಿದ್ಯೆಗೆ ಪೂರ್ವಸಿದ್ಧತೆಗಳಾಗುತ್ತವೆ ಎಂಬುದು ನನ್ನ ಮತ. ಶಂಕರಾಚಾರ್ಯರು ಹೇಳಿದಂತೆ ಕರ್ಮಕಾಂಡೋಕ್ತ ಯಜ್ಞಗಳು ಸಾರತಃ ಸರ್ವಜ್ಞಾನದ ಗಣಿಗಳು, ಎಲ್ಲ

ಪ್ರಜ್ಞಾಸ್ತರಗಳಲ್ಲಿಯ ಜ್ಞಾನಗಳ ಆಗರಗಳು ಮತ್ತು ಅವು ಸತ್ತೆಯಲ್ಲಿರುವ ದಿವ್ಯ, ಮಾನವ್ಯ ಮತ್ತು ಪ್ರಾಣಿಕ ಮೂಲಭೂತಾಂಶಗಳಲ್ಲಿರುವ ಶರ್ತಗಳನ್ನೂ (ಉಪಾಧಿಗಳನ್ನೂ) ಸಂಬಂಧಗಳನ್ನೂ ಖಂಡಿತವಾಗಿ ನಿಶ್ಚಿತಗೊಳಿಸುತ್ತವೆ.

ವೇದಕ್ಕೆ ಆಧ್ಯಾತ್ಮಿಕ ವಿವರಣೆಯನ್ನು ಕೊಡುವುದರಲ್ಲಿ ನಾನೇ ಮೊದಲಿಗನೆಂದು ಹೇಳಿಕೊಳ್ಳುವುದಿಲ್ಲ. ಇದೊಂದು ಪ್ರಯತ್ನ-ಇದು ಮೊದಲನೆಯದಾಗಿರಲಿ, ನೂರನೆಯದಾಗಿರಲಿ-ಅದಿಲ್ಲಿ ಮುಖ್ಯವಲ್ಲ. ಇದು ರಹಸ್ಯವಾದೀಯ ಮತ್ತು ಮಾನಸ ಶಾಸ್ತ್ರೀಯ ಅರ್ಥವನ್ನು ಅತ್ಯಾಧುನಿಕ ವೈಮರ್ಶಿಕ ಪದ್ಧತಿಯನ್ನಾಧರಿಸಿ ಕೊಟ್ಟ ವಿವರಣೆಯಾಗಿದೆ. ಇದರ ವೈದಿಕ ಪದಗಳ ಅರ್ಥವಿವರಣೆಯನ್ನು ಮಾಡಿದ್ದು ತುಲನಾತ್ಮಕ ಭಾಷಾಶಾಸ್ತ್ರದ ಬಹುಭಾಗವನ್ನು ಆಧರಿಸಿಯೇ. ಇದರ ಅರ್ಥ ಪುನಾರಚನೆ ಮಾಡಿದ್ದು ಹೊಸ ಆಧಾರದಿಂದ-ಇದು ಭಾಷಾಶಾಸ್ತ್ರದ ನಿಜ ಸ್ವರೂಪವೇನೆಂಬುದನ್ನು ತಿಳಿಯಪಡಿಸೀತೆಂಬುದು ನನ್ನ ಪ್ರತ್ಯಾಶೆಯಾಗಿದೆ- ಯಾ ಅದರ ಹತ್ತಿರ ಹತ್ತಿರಕ್ಕಾದರೂ ನಾವು ಹೋದೇವು ಎಂಬುದು ನನ್ನ ಮನೀಷೆಯಾಗಿದೆ. ಇದನ್ನು ನಾನು ಇನ್ನೊಂದು ಗ್ರಂಥದಲ್ಲಿ ಮಾಡಬೇಕೆಂದಿದ್ದೇನೆ. : "ಆರ್ಯಭಾಷೆಯ ಮೂಲಗಳು" ಎಂಬುದೇ ಆ ಗ್ರಂಥವು. ಭಾರತವನ್ನೊಳಗೊಂಡ ಜಗತ್ತಿನ ಬಹುಭಾಗದಲ್ಲಿ-ಭಾರತವೇ ಕೇಂದ್ರವಾಗಿರುವಂತೆ-ಒಂದಾನೊಂದು ಕಾಲದಲ್ಲಿ ಹಳೆಯ ಸಂಕೇತ ಹಾಗೂ ಐತಿಹ್ಯಗಳಿಂದೊಡಗೂಡಿದ ಆಧ್ಯಾತ್ಮಿಕ ಆಲೋಚನೆಗಳನ್ನು ಅವು ಕೊಡುವ ಸೂಚನೆಗಳ ಮೂಲಕ ಸಂಶೋಧಿಸಬಹುದಾಗಿದೆ ಎಂದು ನಾನು ನಂಬುತ್ತೇನೆ-ಅದೊಂದು ಸರ್ವಸಾಧಾರಣ ಸಂಸ್ಕೃತಿ ಎಂದು ನನ್ನ ಭಾವನೆಯಾಗಿದೆ. "ವೇದರಹಸ್ಯ" ಎಂಬ ಈ ಗ್ರಂಥದ ಒಂದೇ ಒಂದು ಅನನ್ಯತೆಯೆಂದರೆ ಈ ಪದ್ಧತಿಯ ಪ್ರಯೋಗದ ಪ್ರಯತ್ನವೊಂದೇ ಆಗಿದೆ.



ಶ್ರೀ ಅರವಿಂದರ
# ವೇದ ರಹಸ್ಯ

ವೇದ ವ್ಯಾಖ್ಯಾನ ಪರಂಪರೆಯಲ್ಲೂ ಅರವಿಂದ ವಾಙ್ಮಯದ ವಿಸ್ತಾರದಲ್ಲೂ "ವೇದ ರಹಸ್ಯ"ಕ್ಕೆ ವಿಶಿಷ್ಟ ಸ್ಥಾನವಿದೆ. ವೈದುಷ್ಯದ ಅಪಾರ ಶ್ರಮ, ಖಚಿತವಾದ ಚಾರಿತ್ರಿಕ ನೋಟ ಹಾಗೂ ತಾರ್ಕಿಕ ಊಹಾವಿಲಾಸಗಳಿಂದ ರೂಪುಗೊಂಡ "ವೇದ ರಹಸ್ಯ"ವು ವೇದಾರ್ಥವನ್ನು ಪ್ರಕಾಶಗೊಳಿಸುವಷ್ಟೇ ವಸಾಹತುಶಾಹಿ ಕಾಲದ ಪ್ರಮುಖ ವಾಗ್ವಾದಗಳನ್ನೂ ಪರಿಶೀಲನೆಗೆ ಒಳಪಡಿಸುತ್ತದೆ. ಸಾಂಪ್ರದಾಯಿಕ ಸಾಯಣ ಭಾಷ್ಯವನ್ನೂ ಯುರೋಪಿಯನ್ ವೇದ ವಿದ್ವಾಂಸ ಪರಂಪರೆಯನ್ನೂ ತಿರಸ್ಕರಿಸಿ, ವೇದಗಳಲ್ಲಿ ಆಧ್ಯಾತ್ಮಿಕ ಹಾಗೂ ಮಾನಸಶಾಸ್ತ್ರೀಯ ಜ್ಞಾನಗಳನ್ನು ಸ್ಥೂಲವೂ ಭೌತಿಕವೂ ಆದ ರೂಪಕೋಕ್ತಿಗಳಲ್ಲಿ ಅವಿತಿಡಲಾಗಿದೆ ಎಂದು ಅರವಿಂದರು ವಾದಿಸುತ್ತಾರೆ. ವೇದದ ಗೂಢಾರ್ಥ ಹಾಗೂ ಲಕ್ಷಣಾರ್ಥ ಈ ಎರಡೂ ಮುಖಗಳನ್ನು ಅನುವಾದದಲ್ಲೂ ಸಾಧಿಸುವುದಕ್ಕಾಗಿ 'ವಿವರಣಾತ್ಮಕ ಭಾಷಾಂತರ' ಕ್ರಮವನ್ನು ಅವರು ಅನುಸರಿಸಿದ್ದಾರೆ.

ಕನ್ನಡದ ಪ್ರಮುಖ ಲೇಖಕರಾದ ಬಿ. ಎಚ್. ಶ್ರೀಧರರು ಬಹುಶ್ರುತ ವಿದ್ವಾಂಸರು. ಹಲವು ದಶಕಗಳ ಹಿಂದೆಯೇ 'ವೇದ ರಹಸ್ಯ'ವನ್ನು ಅದರ ಸುಸಂಸ್ಕೃತ ಶೈಲಿ, ಓಘ ಹಾಗೂ ತುರ್ತುಗಳೆಲ್ಲ ಪ್ರತಿಫಲಿಸುವಂತೆ ಅವರು ಕನ್ನಡಕ್ಕೆ ತಂದಿದ್ದರು. ಅಜ್ಞಾತವಾಗಿದ್ದ ಅದು ಈಗ ಬೆಳಕಿಗೆ ಬರುತ್ತಿರುವುದು ಸುದೈವ.

– ಎಂ. ಜಿ. ಹೆಗಡೆ



ಪ್ರೊ. ಬಿ. ಎಚ್. ಶ್ರೀಧರ

978-81-921866-5-8



₹ 500/-